೬೮. **ಜಗದಾತ್ಮಾ**—
ಜಗತ್ತಿಗೆ ಆತ್ಮನಾಗಿರುವ ಹಿರಣ್ಯಗರ್ಭ, ೨೪.

೬೯. **ಜ್ಞಾನಮ್**—
ಉಪಾಸನೆ, ೪೭, ೪೮, ೮೨, ೯೭; ಆತ್ಮನ ತಿಳಿವಳಿಕೆ, ೨೪, ೮೧, ೮೭, ೮೪, ೯೭, ೧೦೭, ೧೧೬.

೭೦. **ಜ್ಞಾನಶಕ್ತಿಃ**—
ಬ್ರಹ್ಮದಲ್ಲಿರುವ ಎಲ್ಲವನ್ನೂ ಅರಿಯುವ ಶಕ್ತಿ, ೨೪, ೫೮.

೭೧. **ತಪಃ**—
ಕೃಚ್ಛ್ರ, ಚಾಂದ್ರಾಯಣ-ಮುಂತಾದ ದೇಹಾಯಾಸರೂಪವಾದ ತಪಸ್ಸು, ೨೫, ೧೦೫; ಆಶ್ರಮಕರ್ಮ, ೮೨, ಇಂದ್ರಿಯಗಳನ್ನೂ ಮನಸ್ಸನ್ನೂ ಏಕಾಗ್ರವಾಗಿಸುವದು, ೯೯; ಜ್ಞಾನ, ೨೪, ೨೫, ೧೧೬.

೭೨. **ತ್ರೈಲೋಕ್ಯದೇಹೋಪಾಧಿಃ**-
ಮೂರು ಲೋಕಗಳನ್ನೂ ತನ್ನ ದೇಹವಾಗಿ ಮಾಡಿಕೊಂಡಿರುವ ವಿರಾಟ್ ಪುರುಷ, ೬೧.

೭೩. **ದಕ್ಷಿಣಾಯನೋತ್ತರಾಯಣಮಾರ್ಗೌ, ದಕ್ಷಿಣೋತ್ತರಮಾರ್ಗೌ**—
ಕರ್ಮಿಗಳು ಪಿತೃಲೋಕಕ್ಕೂ ಉಪಾಸಕರು ದೇವಲೋಕಕ್ಕೂ ಸತ್ತ ಬಳಿಕ ಹೋಗುವ ಮಾರ್ಗಗಳು, ೮೫, ೬೫.

೭೪. **ದೃಷ್ಟಾದೃಷ್ಟೇಷ್ಟವಿಷಯಾಃ**-
ಈ ಲೋಕದಲ್ಲಿಯೂ ಪರಲೋಕದಲ್ಲಿಯೂ ಬೇಕಾಗುವ ವಿಷಯಗಳು, ೧೧೨.

೭೫. **ದೇವಯಾನಃ**—
ದೇವಲೋಕಕ್ಕೆ ಹೋಗುವ ಮಾರ್ಗ, ಉತ್ತರಾಯಣ, ೧೦೧.

೭೬. **ದೇಹಾತ್ಮಭಾವಃ**—
ದೇಹವೇ ತಾನೆಂಬ ಅರಿವು, ೯೨.

೭೭. **ದೇಹಾದ್ಯುಪಾಧಿಭೇದಾಃ**—
ದೇಹ, ಪ್ರಾಣ, ಮನಸ್ಸು-ಮುಂತಾದ ಆತ್ಮನ ಉಪಾಧಿಗಳು, ೫೮.

೭೮. **ಧರ್ಮಜ್ಞಾನವೈರಾಗ್ಯೈಶ್ವರ್ಯಾಣಿ**—
ಹಿರಣ್ಯಗರ್ಭನಲ್ಲಿರುವ ಮಿಗಿಲಿಲ್ಲದ ಧರ್ಮಾದಿಗಳು, ೭.

೭೯. **ನಾಮರೂಪಬೀಜಭೂತಮ್**-
ನಾಮರೂಪಗಳ ಕಾರಣವಾದ ಸೂಕ್ಷ್ಮಸ್ಥಿತಿ, ಅವ್ಯಾಕೃತ, ೫೨, ೫೫

೮೦. **ನಾಮರೂಪಬೀಜೋಪಲಕ್ಷಿತ**-
ಅವ್ಯಾಕೃತದಿಂದ ಗುರುತಿಸಿ ತಿಳಿಯಬೇಕಾಗಿರುವ ಕಾರಣಬ್ರಹ್ಮ, ೫೨, ೫೭.

೮೧. **ನಾಮರೂಪಕೃತದೇಹೋಪಾಧಿಃ**—
ನಾಮರೂಪಗಳಿಂದಾಗಿರುವ ದೇಹವೆಂಬ ಉಪಾಧಿ, ೫೧.

೮೨. **ನಾಮರೂಪೇ**—
ಶ್ರೋತ್ರ, ಚಕ್ಷುಸ್ಸು-ಇವುಗಳಿಗೆ ಗೋಚರವಾಗುವ ಶಬ್ದ, ರೂಪ-ಇವು, ೧೯, ೨೫, ೧೨೧.

೮೩. **ನಿತ್ಯಸಾಕ್ಷಿತ್ವಮ್**—
ಯಾವಾಗಲೂ ಒಂದೇ ರೂಪದಲ್ಲಿದ್ದುಕೊಂಡು ಎಲ್ಲವನ್ನೂ ನೋಡುತ್ತಿರುವದು, ೯೧.

೮೪. **ನಿರುಪಾಧಿಕಃ**—
ಯಾವ ಉಪಾಧಿಯ ಹಂಗೂ ಇಲ್ಲದ ಶುದ್ಧಾತ್ಮ, ೫೫.

೮೫. **ನಿರ್ವಿಶೇಷಃ**—
ಯಾವ ವಿಶೇಷಗಳೂ ಇಲ್ಲದ ಆತ್ಮ, ೫೯.

**೮೬. ನಿಷ್ಕಲಮ್—**
ಅವಯವಗಳಿಲ್ಲದ ಬ್ರಹ್ಮ, ೮೫, ೧೦೫.

**೮೭. ಪಞ್ಚಾಗ್ನಯಃ—**
ದ್ಯುಲೋಕ, ಪರ್ಜನ್ಯ, ಪೃಥಿವಿ, ಪುರುಷ, ಸ್ತ್ರೀ—ಎಂದು ಛಾಂದೋಗ್ಯದಲ್ಲಿ ಉಪಾಸನೆಗೆ ಹೇಳಿರುವ ಐದು ಕಲ್ಪಿತಾಗ್ನಿಗಳು, ೬೨.

**೮೮. ಪಞ್ಚೇನ್ದ್ರಿಯಾಣಿ—**
ಚಕ್ಷುಸ್ಸು, ಶ್ರೋತ್ರ—ಮುಂತಾದ ಐದು ಜ್ಞಾನೇಂದ್ರಿಯಗಳು, ೧೯.

**೮೯. ಪರಃ ಪುರುಷಃ—**
ಹೆಚ್ಚಿನ ಪುರುಷ, ಪರಮಾತ್ಮ, ೧೨೧.

**೯೦. ಪರಃ ಪುರುಷಾರ್ಥಃ, ಪರಮಪುರುಷಾರ್ಥಃ—**
ಜನರು ಬಯಸುವ ಹೆಚ್ಚಿನ ಫಲ ಮೋಕ್ಷ, ೧, ೧೧೪.

**೯೧. ಪರಪ್ರಾಪ್ತಿಃ—**
ಹೆಚ್ಚಿನ ಬ್ರಹ್ಮವನ್ನು ಪಡೆಯುವದು, ಮೋಕ್ಷ, ೧, ೧೧೪.

**೯೨. ಪರಮಂ ಸಾಮ್ಯಮ್**
ಬ್ರಹ್ಮವೇ ತಾನಾಗುವ ಅದ್ವೈತಪ್ರಾಪ್ತಿ, ೯೪.

**೯೩. ಪರಮಾತ್ಮವಿದ್ಯಾ, ಪರಮಾತ್ಮಜ್ಞಾನಮ್—**
ಪರಮಾತ್ಮನನ್ನು ಇದ್ದಂತೆ ಅರಿತುಕೊಳ್ಳುವದು, ಬ್ರಹ್ಮವಿದ್ಯೆ, ೮, ೧೩, ೮೨.

**೯೪. ಪರಮಾರ್ಥತತ್ತ್ವಮ್—**
ನಿಜವಾಗಿರುವ ತತ್ತ್ವವು, ಬ್ರಹ್ಮಸ್ವರೂಪ, ೧೦೧, ೧೧೨.

**೯೫. ಪರಮಾತ್ಮಾ, ಪರ ಆತ್ಮಾ—**
ನಮ್ಮೆಲ್ಲರ ಆತ್ಮ, ಬ್ರಹ್ಮ, ೧೧೪, ೧೧೮.

**೯೬. ಪರಮಾರ್ಥದರ್ಶಿನಃ—**
ಪರಮಾರ್ಥವನ್ನೇ ಕಾಣುವವರು, ೧೩.

**೯೭. ಪರಮಾರ್ಥವಸ್ತು, ಪರಮಾರ್ಥಃ—**
ನಿಜವಾಗಿರುವ ವಸ್ತು, ಬ್ರಹ್ಮ, ೪೮, ೯೦.

**೯೮. ಪರಮಾರ್ಥಸತ್, ಪರಮಾರ್ಥಸತ್ಯಮ್—**
ನಿಜವಾಗಿಯೂ ಇರುವದು, ವ್ಯವಸಾರದಲ್ಲಿ ಸತ್ಯವೆಂದು ಹೇಳಿಸಿಕೊಳ್ಳುವದು ಮಾತ್ರವಲ್ಲ, ೫೦, ೮೯.

**೯೯. ಪರಮಂ ಬ್ರಹ್ಮ, ಪರಬ್ರಹ್ಮ—**
ಶುದ್ಧವಾದ, ಎಲ್ಲಕ್ಕೂ ಹೆಚ್ಚಿನ ಬ್ರಹ್ಮ, ೬, ೧೨೫, ೧೨೯.

**೧೦೦. ಪರಾವರ—**
ಒಬ್ಬರಿಂದೊಬ್ಬರಿಗೆ ಪರಂಪರೆಯಾಗಿ ಬಂದಿರುವ ವಿದ್ಯೆ, ಅಥವಾ ಪರಬ್ರಹ್ಮ, ಅಪರಬ್ರಹ್ಮ—ಎರಡೂ ಬ್ರಹ್ಮಗಳ ವಿಷಯದ ವಿದ್ಯೆ ೯; ಕಾರ್ಯಕಾರಣರೂಪವಾಗಿ ತೋರುವ ಬ್ರಹ್ಮ, ೮೩.

**೧೦೧. ಪರಾ ವಿದ್ಯಾ—**
ಎಲ್ಲಕ್ಕೂ ಹೆಚ್ಚಿನ ಬ್ರಹ್ಮವನ್ನು ಅರಿಯುವ ವಿದ್ಯೆ, ೧೩, ೧೬, ೧೭, ೧೮, ೧೯, ೨೬, ೨೭, ೫೦, ೫೯, ೯೦.

**೧೦೨. ಪರಾನ್ತಕಾಲಃ—**
ತೀರ ಕೊನೆಯ ಕಾಲ, ಜ್ಞಾನಿಗಳು ದೇಹವನ್ನು ಬಿಟ್ಟು ವಿದೇಹಮುಕ್ತರಾಗುವ ಕಾಲ, ೧೧೮.

**೧೦೩. ಪುರುಷಃ—**
ಪೂರ್ಣನಾದ, ಪುರದಲ್ಲಿ ಎಂದರೆ ಹೃದಯದಲ್ಲಿ ತಿಳಿಯಬರುವ ಪರಮಾತ್ಮ, ೪೭, ೪೮, ೫೩, ೬೦, ೬೨, ೬೩, ೬೫, ೬೬, ೬೭, ೧೨೧, ೧೨೬; ಜೀವ, ೯೨; ಮನುಷ್ಯ, ೨೧, ೧೧೦.

**೧೨೨. ಬ್ರಹ್ಮಲೋಕಃ—**
ಕರ್ಮಕ್ಕೆ ಸಿಕ್ಕುವ ಹೆಚ್ಚಿನ ಲೋಕ, ಸ್ವರ್ಗ, ೩೬ ; ಬ್ರಹ್ಮ, ೧೧೮.

**೧೨೩. ಬ್ರಹ್ಮವಿದಃ—**
ವೇದಾರ್ಥವನ್ನು ಬಲ್ಲವರು, ೧೩ ; ಬ್ರಹ್ಮವನ್ನು ಅರಿತಿರುವವರು, ೪೮, ೯೭; ೧೧೭, ೧೨೨, ೧೨೩.

**೧೨೪. ಬ್ರಹ್ಮವಿದ್ಯಾ—**
ಪರಮಾತ್ಮನನ್ನು ಅರಿತುಕೊಳ್ಳುವದು, ೨, ೪, ೫, ೬, ೮, ೯, ೧೭, ೪೫, ೪೮, ೪೯, ೭೮, ೯೭, ೧೨೪, ೧೨೫, ೧೨೬.

**೧೨೫. ಬ್ರಹ್ಮಾ—**
ಬ್ರಹ್ಮವಿದ್ಯಾಸಂಪ್ರದಾಯಕರ್ತೃವಾದ ಹಿರಣ್ಯಗರ್ಭನು, ೭, ೮.

**೧೨೬. ಬ್ರಹ್ಮಾತ್ಮೈಕತ್ವದರ್ಶನಮ್-**
ಬ್ರಹ್ಮವೂ ಆತ್ಮನೂ ಒಂದೇ ವಸ್ತುವೆಂದು ಕಂಡುಕೊಳ್ಳುವದು, ೫.

**೧೨೭. ಬ್ರಹ್ಮಾದಿಸ್ತಮ್ಬಪರ್ಯನ್ತಾನಿ ಭೂತಾನಿ, ಬ್ರಹ್ಮಾದಿಸ್ಥಾವರಾನ್ತಾಃ ಪ್ರಾಣಿನಃ—**
ಹಿರಣ್ಯಗರ್ಭನಿಂದ ಹಿಡಿದು ಸ್ಥಾವರ ಪ್ರಾಣಿಗಳವರೆಗಿನ ಜೀವರುಗಳು, ೧೯, ೯೫.

**೧೨೮. ಭಾವವಿಕಾರಾಃ—**
ಪದಾರ್ಥಗಳಿಗೆ ಆಗುವ ಹುಟ್ಟು, ಇರವು, ಮಾರ್ಪಾಡು ಮುಂತಾದ ಆರು ವಿಕಾರಗಳು, ೫೩.

**೧೨೯. ಭಾವಾಃ—**
ಜೀವರುಗಳು, ೫೧.

**೧೩೦. ಭೂತಯೋನಿಃ—**
ಭೂತಗಳಿಗೆಲ್ಲ ಕಾರಣವಾದ ಬ್ರಹ್ಮ, ೧೯, ೨೦, ೨೩.

**೧೩೧. ಮನಃ—**
ಸಮಷ್ಟಿಯ ಜ್ಞಾನಶಕ್ತಿ, ಅಂತಃಕರಣ, ೨೩, ೫೭.

**೧೩೨. ಮನೋಮಯಃ—**
ಮನೋವೃತ್ತಿಗಳಿಂದ ತಿಳಿಯಬರುವ ಆತ್ಮ, ೮೧.

**೧೩೩. ಮಾಯಾಮರೀಚ್ಯುದಕಗನ್ಧರ್ವನಗರಾಕಾರ (?) ಸ್ವಪ್ನಜಲಬುದ್ಬುದಫೇನಸಮಾಃ—**
ಮಾಯೆ, ಬಿಸಿಲುಕುದುರೆಯ ಸೀರು, ಗಂಧರ್ವನಗರ, ಕನಸು, ನೀರುಗುಳ್ಳೆ, ನೊರೆ-ಇವುಗಳಂತೆ ಅಸತ್ಯ, ಅನಿತ್ಯ, ಅಶುಚಿಯಾಗಿರುವ ಲೋಕಗಳು, ೪೫.

**೧೩೪. ಮಾಯಾತ್ಮಾ—**
ಹುಸಿಕೋರಿಕೆಯ ಆತ್ಮ, ಜೀವ, ೯೨.

**೧೩೫. ಮೋಕ್ಷಃ—**
ಸಂಸಾರದಿಂದ ಬಿಡುಗಡೆ, ೨೭, ೪೩, ೭೭, ೭೮.

**೧೩೬. ಯೋಗಃ—**
ಜ್ಞಾನಪ್ರಾಪ್ತಿಗೆ ಉಪಾಯ, ಧ್ಯಾನ, ಅಹಿಂಸೆ, ಸತ್ಯ-ಮುಂತಾದ ಸಾಧನ, ೯೨.

**೧೩೭. ಯೋಗಿನಃ—**
ಇಂದ್ರಿಯಪ್ರಧಾನರಲ್ಲದೆ ಅಂತರ್ಮುಖರಾದವರು, ೧೦೩.

**೧೩೮. ಲಿಙ್ಗಮ್—**
ವಚನವು ನೇರಾಗಿ ಹೇಳದೆ ಇದ್ದರೂ ಅರ್ಥವಶದಿಂದ ಅಭಿಪ್ರಾಯವನ್ನು ತಿಳಿಸುವ ಗುರುತು, ೫; ಸೂಕ್ಷ್ಮಶರೀರ, ೬೮; ಸಂನ್ಯಾಸ, ೧೧೬.

**೧೬೦. ಸದಸತ್**—
ಸ್ಥೂಲಸೂಕ್ಷ್ಮರೂಪದಲ್ಲಿರುವ ಮೂರ್ತಾಮೂರ್ತಗಳಾಗಿರುವ ಬ್ರಹ್ಮ, ೭೩.

**೧೬೧. ಸಂನ್ಯಾಸಯೋಗಃ**—
ಸರ್ವಕರ್ಮವನ್ನೂ ತ್ಯಾಗಮಾಡುವದೆಂಬ ಜ್ಞಾನಸಾಧನ, ೧೧೮.

**೧೬೨. ಸಮ್ಯಗ್ಜ್ಞಾನಮ್**—
ಸರಿಯಾದ ಆತ್ಮನ ತಿಳಿವಳಿಕೆ, ೯೮,೯೯.

**೧೬೩. ಸರ್ವಜ್ಞಃ**—
ಎಲ್ಲವನ್ನೂ ಜ್ಞಾನದಿಂದ ಬೆಳಗುವ ಪರಮಾತ್ಮ, ೨೩, ೨೫, ೮೦.

**೧೬೪. ಸರ್ವಭೂತಾನ್ತರಾತ್ಮಾ**—
ಸರ್ವಭೂತಗಳಿಗೂ ಒಳಗಿನ ಆತ್ಮನಾಗಿರುವ ವಿರಾಟ್ಪುರುಷ, ೬೧

**೧೬೫. ಸರ್ವವಿತ್**—
ಎಲ್ಲದರ ತಿರುಳನ್ನೂ ಬಲ್ಲವ, ೧೧, ೧೨ ; ಎಲ್ಲವನ್ನೂ ಬೇರೆಬೇರೆಯಾಗಿ ಅರಿಯುವ ಪರಮಾತ್ಮ, ೨೫, ೮೦.

**೧೬೬. ಸರ್ವಸತ್ತ್ವೋಪಾಧಿಃ**—
ಒಟ್ಟು ಅಂತಃಕರಣದ ಸತ್ತ್ವಗುಣವೇ ಉಪಾಧಿಯಾಗಿರುವ ಈಶ್ವರ, ೯೧.

**೧೬೭. ಸರ್ವಾತ್ಮಾ**—
ಎಲ್ಲದರ ರೂಪದಿಂದಲೂ ತೋರುವವನು, ೯೫, ೧೦೭.

**೧೬೮. ಸರ್ವಾನ್ತರಮ್**—
ಎಲ್ಲಕ್ಕೂ ಒಳಗಿರುವ ನಮ್ಮ ಆತ್ಮನಾದ ಬ್ರಹ್ಮ, ೧೦೩.

**೧೬೯. ಸಹಕಾರಿಸಾಧನಾನಿ**—
ಜ್ಞಾನವುಂಟಾಗುವದಕ್ಕೆ ಸಹಾಯವಾಗುವ ಸತ್ಯಾದಿಸಾಧನಗಳು, ೯೯.

**೧೭೦. ಸಾಧ್ಯಸಾಧನಾನಿ, ಸಾಧನಸಾಧ್ಯಾನಿ**—
ಪ್ರಜೆ, ಕರ್ಮ, ಉಪಾಸನೆ–ಎಂಬ ಸಾಧನಗಳು, ಅವುಗಳಿಂದಾಗುವ ಮನುಷ್ಯಪಿತೃದೇವಲೋಕಗಳು, ೨, ೪೩, ೪೪.

**೧೭೧. ಸಿದ್ಧಾನ್ತಃ**—
ವಿಚಾರಮಾಡಿದ ಬಳಿಕ ಏರ್ಪಡುವ ನಿರ್ಣಯ, ೧೪.

**೧೭೨. ಸೂಕ್ಷ್ಮಶರೀರಮ್**—
ಕರಣಗಳ ಗುಂಪು, ಲಿಂಗಶರೀರ, ೬೮.

**೧೭೩. ಸೂತ್ರಭಾಷ್ಯೋಕ್ತಿವತ್**—
ಸಂಗ್ರಹವಾಗಿರುವ ಸೂತ್ರದ ವಿಷಯವನ್ನೇ ಭಾಷ್ಯದ ವಿಸ್ತಾರವಾದ ಮಾತಿನಿಂದ ತಿಳಿಸುವಂತೆ (ಸಂಗ್ರಹವಾಗಿ ಒಂದು ಸಲ ಹೇಳಿ ಮತ್ತೊಮ್ಮೆ ವಿಸ್ತಾರವಾಗಿ ಹೇಳುವದು), ೫೯.

**೧೭೪. ಸೃಷ್ಟಿಸ್ಥಿತಿಸಂಹಾರಶಕ್ತಿವಿಜ್ಞಾನವತ್**—
ಜಗತ್ತನ್ನು ಹುಟ್ಟಿಸುವದು, ಕಾಪಾಡುವದು, ಲಯಗೊಳಿಸುವದು– ಇವುಗಳಿಗೆ ಬೇಕಾದ ಶಕ್ತಿಯೂ ತಿಳಿವಳಿಕೆಯೂ ಇರುವ ಬ್ರಹ್ಮ, ೨೩.

**೧೭೫. ಸ್ಮಾರ್ತಂ ಕರ್ಮ**—
ಸ್ಮೃತಿಯಲ್ಲಿ ಹೇಳಿರುವ ಕರ್ಮ, ೪೧.

**೧೭೬. ಸ್ವರ್ಗಃ**—
ಕರ್ಮಕ್ಕೆ ಫಲವಾಗಿ ಸಿಕ್ಕುವ ಲೋಕ, ೩೪, ೩೮, ೪೦, ೪೧.

**೧೭೭. ಸ್ವಾತ್ಮಪ್ರತಿಷ್ಠಾ**—
ತಮ್ಮ ಆತ್ಮನಲ್ಲಿ ನಿಲುಗಡೆಯನ್ನು ಹೊಂದುವ ಮುಕ್ತಿ, ೨೭.

**೧೭೮. ಸ್ವಾಭಾವಿಕ**—
ವಿಚಾರದಿಂದಾಗುವ ತಿಳಿವಳಿಕೆಯಿಲ್ಲದವರಿಗೆ ಸ್ವಭಾವದಿಂದಿರುವ, ೪೫.

**೧೭೯. ಹಿರಣ್ಯಗರ್ಭಃ**—
ವ್ಯಾಕೃತಪ್ರಪಂಚದಲ್ಲಿ ಎಲ್ಲರಿಗೂ ಕಾರಣನಾಗಿರುವ ಬ್ರಹ್ಮನು, ಕಾರ್ಯಬ್ರಹ್ಮ, ಪ್ರಾಣ, ಅಪರಬ್ರಹ್ಮ, ೨೩, ೨೪.

**೧೮೦. ಹೃದಯಗ್ರನ್ಥಿಃ**—
ಹೃದಯಕ್ಕೆ ಗಂಟುಬಿದ್ದಿರುವಂತೆ ಇರುವ ಅವಿದ್ಯಾವಾಸನೆಯ ಫಲವಾದ ಕಾಮವು, ೮೩.

# ಮಂತ್ರಗಳ ಅನುಕ್ರಮಣಿಕೆ

---

| ಮಂತ್ರಗಳ ಪ್ರತೀಕ | ಮುಂ. | ಖಂ. | ಮಂ | ಪುಟ |
|---|---|---|---|---|
| ನಾಯಮಾತ್ಮಾ ಪ್ರವಚನೇನ | ೩ | ೨ | ೩ | ೧೩೨ |
| ನಾಯಮಾತ್ಮಾ ಬಲಹೀನೇನ | ೩ | ೨ | ೪ | ೧೩೪ |
| ಪರೀಕ್ಷ್ಯಲೋಕಾನ್ ಕರ್ಮಚಿತಾನ್ | ೧ | ೨ | ೧೨ | ೪೭ |
| ಪುರುಷ ಏವೇದಂ ವಿಶ್ವಮ್ | ೨ | ೧ | ೧೦ | ೭೬ |
| ಪ್ಲವಾ ಹ್ಯೇತೇ ಅದೃಢಾಃ | ೧ | ೨ | ೭ | ೪೦ |
| ಪ್ರಣವೋ ಧನುಃ ಶರೋ ಹ್ಯಾತ್ಮಾ | ೨ | ೨ | ೪ | ೮೫ |
| ಪ್ರಾಣೋ ಹ್ಯೇಷ ಯಃ ಸರ್ವಭೂತೈಃ | ೩ | ೧ | ೪ | ೧೧೧ |
| ಬೃಹಚ್ಚ ತದ್ದಿವ್ಯಮ್ | ೩ | ೧ | ೭ | ೧೨೧ |
| ಬ್ರಹ್ಮಾ ದೇವಾನಾಂ ಪ್ರಥಮಃ | ೧ | ೧ | ೧ | ೭ |
| ಬ್ರಹ್ಮೈವೇದಮಮೃತಮ್ | ೨ | ೨ | ೧೨ | ೧೦೧ |
| ಭಿದ್ಯತೇ ಹೃದಯಗ್ರನ್ಥಿಃ | ೨ | ೨ | ೯ | ೯೫ |
| ಮನೋಮಯಃ ಪ್ರಾಣಶರೀರನೇತಾ | ೨ | ೨ | ೮ | ೯೩ |
| ಯತ್ತದದ್ರೇಶ್ಯಮಗ್ರಾಹ್ಯಮ್ | ೧ | ೧ | ೬ | ೧೬ |
| ಯಥಾ ನದ್ಯಃ ಸ್ಯನ್ದಮಾನಾಃ | ೩ | ೨ | ೮ | ೧೪೪ |
| ಯಥೋರ್ಣನಾಭಿಃ ಸೃಜತೇ | ೧ | ೧ | ೭ | ೨೨ |
| ಯದರ್ಚಿಮದ್ಯದಣುಭ್ಯಃ | ೨ | ೨ | ೨ | ೮೧ |
| ಯದಾ ಪಶ್ಯಃ ಪಶ್ಯತೇ | ೩ | ೧ | ೩ | ೧೦೯ |
| ಯದಾ ಲೇಲಾಯತೇ ಹ್ಯರ್ಚಿಃ | ೧ | ೨ | ೨ | ೩೨ |
| ಯಂ ಯಂ ಲೋಕಂ ಮನಸಾ | ೩ | ೧ | ೧೦ | ೧೨೭ |
| ಯಃ ಸರ್ವಜ್ಞಃ ಸರ್ವವಿತ್ | ೧ | ೧ | ೯ | ೨೬ |
| ಯಃ ಸರ್ವಜ್ಞಃ ಸರ್ವವಿತ್ | ೨ | ೨ | ೭ | ೯೧ |
| ಯಸ್ಮಿನ್ ದ್ಯೌಃ ಪೃಥಿವೀ | ೨ | ೨ | ೫ | ೮೭ |
| ಯಸ್ಯಾಗ್ನಿಹೋತ್ರಮದರ್ಶಮ್ | ೧ | ೨ | ೩ | ೩೩ |
| ವೇದಾನ್ತವಿಜ್ಞಾನಸುನಿಶ್ಚಿತಾರ್ಥಾಃ | ೩ | ೨ | ೬ | ೧೩೮ |
| ಶೌನಕೋ ಹ ವೈ ಮಹಾಶಾಲಃ | ೧ | ೧ | ೩ | ೧೧ |
| ಸತ್ಯಮೇವ ಜಯತೇ | ೩ | ೧ | ೬ | ೧೧೯ |
| ಸತ್ಯೇನ ಲಭ್ಯಸ್ತಪಸಾ | ೩ | ೧ | ೫ | ೧೧೬ |
| ಸಪ್ತ ಪ್ರಾಣಾಃ ಪ್ರಭವನ್ತಿ | ೨ | ೧ | ೮ | ೭೨ |
| ಸಮಾನೇ ವೃಕ್ಷೇ ಪುರುಷಃ | ೩ | ೧ | ೨ | ೧೦೬ |
| ಸಂಪ್ರಾಪ್ಯೈನಮೃಷಯಃ | ೩ | ೨ | ೫ | ೧೩೬ |
| ಸ ಯೋ ಹ ವೈ ತತ್ ಪರಮಂ | ೩ | ೨ | ೯ | ೧೪೫ |
| ಸ ವೇದೈತತ್ ಪರಮಂ | ೩ | ೨ | ೧ | ೧೨೮ |
| ಹಿರಣ್ಮಯೇ ಪರೇ ಕೋಶೇ | ೨ | ೨ | ೧೦ | ೯೭ |

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

**ಸಂಖ್ಯೆ ೩೩**

ಶ್ರೀ ಶಾಂಕರಭಾಷ್ಯಸಮೇತ

# ಪ್ರಶ್ನೋಪನಿಷತ್ತು

(ಉಪನಿಷತ್ತಿನ ಮತ್ತು ಭಾಷ್ಯದ ಸಂಸ್ಕೃತಮೂಲ, ಅನುವಾದ
ಟಿಪ್ಪಣಿ, ಸಾರ ಮುಂತಾದವುಗಳೊಡನೆ)

ಬರೆದವರು :

ಅಧ್ಯಾತ್ಮಗ್ರಂಥಾವಳಿಯ ಸಂಪಾದಕ

**ಯಲ್ಲಂಬಳಸೆ ಸುಬ್ರಹ್ಮಣ್ಯಶರ್ಮ**

ಎರಡನೆಯ ಸಂಸ್ಕರಣ

ಅಧ್ಯಾತ್ಮಗ್ರಂಥಾವಳಿಯ ಕ್ರಮಾಂಕ ೫



ಅಧ್ಯಾತ್ಮಪ್ರಕಾಶಕಾರ್ಯಾಲಯ

ಹೊಳೆನರಸೀಪುರ

೧೯೪೭

# ಹೊಸ ಸಂಸ್ಕರಣದ ಮೊದಲ ಮಾತು.

---

ಪ್ರಶ್ನೋಪನಿಷತ್ತು ಅಚ್ಚಾಗಿ ನಾಲ್ಕು ವರ್ಷಗಳಾದವು. ಅಧ್ಯಾತ್ಮಪ್ರಕಾಶ ಪತ್ರಿಕೆಯಲ್ಲಿ ಆಗಿಂದಾಗ್ಗೆ ಅಚ್ಚಾಗಿದ್ದ ಈ ಉಪನಿಷತ್ತನ್ನು ಈಗ ಶ್ರೀ ಜಯಚಾಮ ರಾಜೇಂದ್ರಗ್ರಂಥರತ್ನಮಾಲೆಗೆ ತಕ್ಕಂತೆ ಮೂಲಭಾಷ್ಯಾದಿಗಳನ್ನು **ಜೋಡಿಸಿ ಬೆಳಕಿಗೆ** ತರಲಾಗಿದೆ.

ಮುಂಡಕೋಪನಿಷತ್ತಿಗೆ ಈ ಸಲ ಹೊಸದಾಗಿ ಪೀಠಿಕೆಯನ್ನು ಬರೆದಿರುವದರಿಂದ ಅದಕ್ಕೆ ತಕ್ಕಂತೆ ಪ್ರಶ್ನೋಪನಿಷತ್ತಿನ ಪೀಠಿಕೆಯನ್ನೂ ಮಾರ್ಪಡಿಸಬೇಕಾಯಿತು. ಈ ಸಂದರ್ಭವನ್ನು ಉಪಯೋಗಿಸಿಕೊಂಡು ಪೀಠಿಕೆಗೆ ಕೆಲವು ಹೊಸ ವಿಚಾರಗಳನ್ನೂ ಸೇರಿಸಿರುತ್ತೇನೆ.

ಈ ಸಂಸ್ಕರಣದ ಕೈಬರಹದ ಪುಸ್ತಕವನ್ನು ಓದಿ ಬರಹದ ಸ್ಖಾಲಿತ್ಯಗಳನ್ನು ತೋರಿಸಿ ಉಪಯುಕ್ತವಾದ ಸೂಚನೆಗಳನ್ನು ಕೊಟ್ಟಿರುವ **ಶ್ರೀಯುತ ಹೊಳೆ ನರಸೀಪುರದ ಪ್ಲೀಡರ್ ಪಿ. ಎಸ್. ನರಸಿಂಹಯ್ಯನವರಿಗೂ** ಪಾಠಾಂತರಗಳನ್ನು ಶೋಧಿಸುವ ಕಾರ್ಯದಲ್ಲಿ ನೆರವಾಗಿರುವ ಸಾಹಿತ್ಯವೇದಾಂತವಿದ್ವಾನ್ ಬ್ರ|| ಶ್ರೀ|| **ಕೊಡಗೂರು ಕೃಷ್ಣಜೋಯಿಸರವರಿಗೂ** ನಾನು ಕೃತಜ್ಞನಾಗಿರುತ್ತೇನೆ.

ಉಪನಿಷತ್ತಿನ ಆಶಯವನ್ನು ತಿಳಿಯಬೇಕೆನ್ನುವವರಿಗೆ ಈ ಸಂಸ್ಕರಣದಿಂದ ಮೊದಲಿಗಿಂತಲೂ ಹೆಚ್ಚಿನ ಸಹಾಯವು ದೊರೆತೀತೆಂದು ನನ್ನ ನಂಬಿಕೆ. ಭಾಷ್ಯದ ಪಾಠಶೋಧನೆಯಲ್ಲಾಗಲಿ ಅನುವಾದದಲ್ಲಾಗಲಿ ಕಂಡುಬರುವ ಲೋಪದೋಷ ಗಳನ್ನು ತಿಳಿಸಿಕೊಟ್ಟು ಉಪಕಾರಮಾಡಬೇಕೆಂದು ವಿದ್ವಜ್ಜನರನ್ನು ಪ್ರಾರ್ಥಿಸುತ್ತೇನೆ.

ಅಧ್ಯಾತ್ಮಕುಟೀರ,<br>ವ್ಯಯ, ಆಷಾಢ ಶುದ್ಧ ಹುಣ್ಣಿಮೆ

**ಯ. ಸುಬ್ರಹ್ಮಣ್ಯಶರ್ಮ.**

# ಪೀಠಿಕೆ

## ಮುಂಡಕಪ್ರಶ್ನಗಳ ಸಂಬಂಧ

ಅಥರ್ವವೇದದ ವಿಷಯವಾಗಿ ಮುಂಡಕೋಪನಿಷತ್ತಿನ ಪೀಠಿಕೆಯಲ್ಲಿ ಬರೆದಿರುವದನ್ನು ಓದುಗರು ಇಲ್ಲಿಯೂ ಮನದಂದುಕೊಳ್ಳಬೇಕು. ಮುಂಡಕದಂತೆ ಪ್ರಶ್ನವೂ ಆ ವೇದಕ್ಕೆ ಸೇರಿದ ಉಪನಿಷತ್ತೆಂದು ಆಚಾರ್ಯರು ಅಭಿಪ್ರಾಯಪಟ್ಟಿರುವದಲ್ಲದೆ, ಮುಂಡಕವು ಮಂತ್ರವೆಂದೂ ಪ್ರಶ್ನವು ಬ್ರಾಹ್ಮಣವೆಂದೂ ಅವರು ಬರೆದಿರುತ್ತಾರೆ (ಭಾ. ಭಾ. ೧). ಅಥರ್ವವೇದದ ಅಧ್ಯಯನವು ನಮ್ಮ ದೇಶದಲ್ಲಿ ಕಂಡುಬರುತ್ತಿಲ್ಲವಾದ್ದರಿಂದಲೂ ಈ ವೇದದ ಬ್ರಾಹ್ಮಣವೂ ಪೂರ್ತಿಯಾಗಿ ದೊರೆಯುತ್ತಿಲ್ಲವಾದ್ದರಿಂದಲೂ ಈ ಎರಡು ಉಪನಿಷತ್ತುಗಳೂ ಈ ವೇದದ ಮಂತ್ರಬ್ರಾಹ್ಮಣಗಳ ಭಾಗದಲ್ಲಿರುವವೋ ಇಲ್ಲವೋ ತಿಳಿಯದಾಗಿದೆ. ಇದು ಹೇಗಾದರೂ ಇರಲಿ. ಮುಂಡಕದಲ್ಲಿ ವಿವರಿಸಿರುವ ಪರಾಪರವಿದ್ಯೆಯನ್ನು ಅದೇ ಕ್ರಮದಲ್ಲಿ ಇಲ್ಲಿ ವಿಸ್ತರಿಸಿರುವದರಿಂದ ಆ ಉಪನಿಷತ್ತಿಗೆ ಇದು ಬ್ರಾಹ್ಮಣಸ್ಥಾನದಲ್ಲಿರುವದೆಂಬುದು ನಿರ್ವಿವಾದವಾಗಿದೆ.

ಈ ಎರಡು ಉಪನಿಷತ್ತುಗಳಲ್ಲಿಯೂ ಮೊದಲು ಕರ್ಮೋಪಾಸನೆಗಳ ಫಲವನ್ನು ಹೇಳಿರುತ್ತದೆ. ಕರ್ಮಕ್ಕೆ ಅನಿತ್ಯವಾದ ಸ್ವರ್ಗವು ಫಲ; ಆ ಫಲವು ಮುಗಿದ ಬಳಿಕ ಅವರವರ ಕರ್ಮಶೇಷಕ್ಕೆ ತಕ್ಕಂತೆ ಜನ್ಮವಾಗುವದು. (ಮುಂ. ೧-೨-೧ ರಿಂದ ೧೦; ಪ್ರ. ೧-೯, ೧-೧೪), ಕರ್ಮವನ್ನೂ ಉಪಾಸನೆಯನ್ನೂ ಸೇರಿಸಿಕೊಂಡು ಮಾಡಿದರೆ ಮತ್ತೆ ಹಿಂದಿರುಗದ ಬ್ರಹ್ಮಲೋಕವೂ ಕ್ರಮಮುಕ್ತಿಯೂ ಫಲ (ಮುಂ. ೧-೨-೧೧; ಪ್ರ. ೧-೧೬). ಹೀಗೆ ಕರ್ಮವನ್ನೂ ಕರ್ಮೋಪಾಸನೆಗಳನ್ನೂ ಹೇಳಿದ ಬಳಿಕ ಈ ಎರಡು ಉಪನಿಷತ್ತುಗಳಲ್ಲಿಯೂ ಕೇವಲ ಜ್ಞಾನವನ್ನು ಹೇಳಿರುತ್ತದೆ. ಕರ್ಮಜ್ಞಾನಗಳ ಸ್ವಭಾವತಾರತಮ್ಯವನ್ನು ನೋಡಿದರೆ ಕರ್ಮವನ್ನೂ ಜ್ಞಾನವನ್ನೂ ಸೇರಿಸಿಕೊಂಡರೆ ಮುಕ್ತಿ ಎಂಬ **ಸಮುಚ್ಚಯವಾದಿಗಳ ಮತವು ಯುಕ್ತಿವಿರುದ್ಧವಾಗುವದೆಂದು** ಆಚಾರ್ಯರು ತೋರಿಸಿಕೊಟ್ಟಿರುತ್ತಾರೆಂಬುದನ್ನು ಮುಂಡಕದ ಪೀಠಿಕೆಯಲ್ಲಿ ನಾವು ಆಗಲೆ ತಿಳಿಸಿರುತ್ತೇವೆ. ಈ ಎರಡು ಉಪನಿಷತ್ತುಗಳಲ್ಲಿಯೂ ಜ್ಞಾನದಿಂದಾಗುವ ಫಲವು ಕೂಡಲೆ ಆಗಿಬಿಡುವದೆಂದು ಹೇಳಿರುತ್ತದೆ. ಆತ್ಮಜ್ಞಾನವಾದಕೂಡಲೆ ಸಂಸಾರಬಂಧದಿಂದ ಬಿಡುಗಡೆಯಾಗುವದೆಂದು ಈ ಉಪನಿಷತ್ತುಗಳಲ್ಲಿ ಸದ್ಯೋಮುಕ್ತಿಯನ್ನೇ ಪ್ರತಿಪಾದಿಸಿರುತ್ತದೆ (ಮುಂ. ೩-೨-೨, ೩-೨-೬, ೭-೮-೯; ಪ್ರ. ೪-೧೧, ೬-೫). ಈ ಮುಕ್ತಿಯ ಸ್ವರೂಪವನ್ನೂ ಜೀವನ್ಮುಕ್ತನಿಗೆ ಅವಿದ್ಯಾ

ಲೇಶವು ಇರುವದೆಂಬ ಅರ್ವಾಚೀನವೇದಾಂತಿಗಳ ಮತದ ಅಸಾರತೆಯನ್ನೂ ಭಾಷ್ಯಾನುಸಾರವಾಗಿ ನಾವು ಮುಂಡಕದ ಪೀಠಿಕೆಯಲ್ಲಿ ಆಗಲೆ ತೋರಿಸಿಕೊಟ್ಟಿರುತ್ತೇವಾದ್ದರಿಂದ ಇಲ್ಲಿ ಆ ವಿಷಯಕ್ಕೆ ಹೇಳತಕ್ಕದ್ದು ಏನೂ ಉಳಿದಿರುವದಿಲ್ಲ.

## ಪ್ರಶ್ನೋಪನಿಷತ್ತಿನ ವಿಷಯಗಳ ವಿಂಗಡ

ಪರವಿದ್ಯೆಗೆ ವಿಷಯವಾಗಿರುವ **ಅಕ್ಷರವೆಂಬ** ಪರಬ್ರಹ್ಮವೇ ನಮ್ಮೆಗಳೆಲ್ಲರ ಆತ್ಮನು. ಆ ಅಕ್ಷರದಿಂದಲೇ ಜಗತ್ತು ಹುಟ್ಟಿ, ಅದರಲ್ಲಿಯೇ ಇದ್ದು, ಅದರಲ್ಲಿಯೇ ಲಯವಾಗುವಂತೆ ಅವಿದ್ಯೆಯಿಂದ ತೋರುತ್ತಿರುವದು ; ಇದನ್ನು ಸರಿಯಾಗಿ ಅರಿತುಕೊಂಡರೆ ನಮ್ಮೆಗಳ ಆತ್ಮನು ಅದ್ವಿತೀಯನೂ ನಿತ್ಯಶುದ್ಧಮುಕ್ತಸ್ವಭಾವನೂ ಆಗಿರುವನೆಂದು ನಿಶ್ಚಯವಾಗುತ್ತದೆ. ಇಂಥ ಅಕ್ಷರವನ್ನು ತಿಳಿದುಕೊಂಡರೆ ಎಲ್ಲವನ್ನೂ ತಿಳಿದುಕೊಂಡಂತೆ ಎಂಬುದು ಈ ಎರಡು ಉಪನಿಷತ್ತುಗಳಿಗೂ ಸಮಾನವಾದ ವಿಷಯವಾಗಿರುತ್ತದೆ. ಇದನ್ನು ಪ್ರಶ್ನೋಪನಿಷತ್ತಿನಲ್ಲಿ ತಿಳಿಸಿಕೊಟ್ಟಿರುವ ಕ್ರಮವು ಯಾವದೆಂದರೆ : ಸ್ಥೂಲಪ್ರಪಂಚ, ಸೂಕ್ಷ್ಮಪ್ರಪಂಚ-ಇವುಗಳೊಡನೆ ಆತ್ಮನನ್ನು ಬೆರೆಯಿಸಿ ತಿಳಿದುಕೊಳ್ಳುವಾಗ ಸ್ಥೂಲೋಪಾಧಿಯಿಂದ ಆತ್ಮನು **ಪ್ರಜಾಪತಿ** ಎನಿಸಿಕೊಳ್ಳುತ್ತಾನೆ; ಸೂಕ್ಷ್ಮೋಪಾಧಿಯಿಂದ **ಪ್ರಾಣ** ಎನಿಸಿಕೊಳ್ಳುತ್ತಾನೆ. ವಿಚಾರಮಾಡಿದರೆ ಸ್ಥೂಲವು ಭೋಗ್ಯವಾಗಿಯೂ ಸೂಕ್ಷ್ಮವು ಭೋಕ್ತೃವಾಗಿಯೂ ಇರುತ್ತದೆ, ಅಂದರೆ ಸ್ಥೂಲವು ಸೂಕ್ಷ್ಮದ ಅಧೀನವಾಗಿರುತ್ತದೆ. ಆದರೆ ಈ ಸೂಕ್ಷ್ಮವೂ ಆತ್ಮನ ಅಧೀನವಾಗಿರುತ್ತದೆ. ಇದಿಷ್ಟೂ ಮೊದಲನೆಯ ಮೂರು ಪ್ರಶ್ನೆಗಳ ಸಾರ. ನಾಲ್ಕನೆಯ ಪ್ರಶ್ನೆಯಲ್ಲಿ ಅವಸ್ಥಾತ್ರಯವಿಚಾರದಿಂದ ಈ ಅರ್ಥವನ್ನು ಮನಗಾಣಿಸಿಕೊಟ್ಟಿರುತ್ತದೆ. ಐದನೆಯ ಪ್ರಶ್ನೆಯಲ್ಲಿ ಓಂಕಾರಧ್ಯಾನದಿಂದ ಈ ಅರ್ಥವನ್ನು ಉಪಾಸಕನು ಕ್ರಮಕ್ರಮವಾಗಿ ಮನಗಾಣುವ ಬಗೆಯನ್ನು ಹೇಳಿಕೊಟ್ಟಿರುತ್ತದೆ; ಆರನೆಯ ಪ್ರಶ್ನೆಯಲ್ಲಿ ಜಗದುತ್ಪತ್ತಿಸ್ಥಿತಿಲಯವೆಂಬುದು ಅವಿದ್ಯಾನಿಮಿತ್ತವಾಗಿರುವದರಿಂದ ನಿಜವಾಗಿ ಆತ್ಮನು ನಿತ್ಯಶುದ್ಧನೂ ಅದ್ವಿತೀಯನೂ ಆಗಿರುತ್ತಾನೆಂಬುದನ್ನು ಸ್ಪಷ್ಟಗೊಳಿಸಿರುತ್ತದೆ.

## ಪ್ರಶ್ನಭಾಷ್ಯದ ವಿಶೇಷಗಳು

ಮುಂಡಕಪ್ರಶ್ನಗಳ ಸಂಬಂಧವನ್ನು ವಿಶದೀಕರಿಸಿ ಅಕ್ಷರಾಖ್ಯಪರಮಾತ್ಮನ ಜ್ಞಾನದಿಂದ ಸದ್ಯೋಮುಕ್ತಿಯನ್ನೂ ಉಪಾಸನೆಯಿಂದ ಕ್ರಮಮುಕ್ತಿಯನ್ನೂ ನಿರೂಪಣಮಾಡುವ ಪ್ರಸಂಗದಿಂದ ಈ ಉಪನಿಷತ್ತಿನ ಭಾಷ್ಯದಲ್ಲಿ ಆಚಾರ್ಯರವರು ಅವಸ್ಥಾತ್ರಯವಿಚಾರ, ಜ್ಞಾನಸ್ವರೂಪವಿಚಾರ, ಕರ್ತೃತ್ವಭೋಕ್ತೃತ್ವವಿಚಾರ-ಎಂಬ ಮೂರು ವಿಚಾರಗಳನ್ನು ಮಾಡಿರುತ್ತಾರೆ. ವೇದಾಂತದ ಅಸಾಧಾರಣಪ್ರಕ್ರಿಯೆಯನ್ನು ಭಾಷ್ಯಕಾರರು ಈ ವಿಚಾರಗಳಲ್ಲಿ ಹೇಗೆ ಸ್ಫುಟಗೊಳಿಸಿರುವರೆಂಬುದನ್ನು

ತಿಳಿಯಲಿಚ್ಛಿಸುವವರ ಉಪಯೋಗಕ್ಕಾಗಿ ಈ ಮೂರು ವಿಚಾರಗಳ ಸಾರಸಂಗ್ರಹವಾಗಿ ಇಲ್ಲಿ ಕೆಲವು ವಾಕ್ಯಗಳನ್ನು ಬರೆದಿಡುವೆವು. ಆಚಾರ್ಯರಿಗೆ ಸಮ್ಮತವಾಗಿರುವ ಅದ್ವೈತಸಿದ್ಧಾಂತವು ಸಾರ್ವತ್ರಿಕಾನುಭವವನ್ನೂ ತದನುಸಾರಿಯಾದ ಯುಕ್ತಿಯನ್ನೂ ಆಧಾರವಾಗಿಟ್ಟುಕೊಂಡೇ ಏರ್ಪಟ್ಟಿರುವದೆಂಬುದು ಓದುಗರಿಗೆ ಇದರಿಂದ ಮನವರಿಕೆಯಾಗುವದೆಂದು ನಮ್ಮ ನಂಬಿಕೆ.

## ಅವಸ್ಥಾತ್ರಯವಿಚಾರ

ಅವಸ್ಥಾತ್ರಯವೆಂಬುದು ಎಲ್ಲಾ ಜೀವರಿಗೂ ಸಮಾನವಾಗಿರುತ್ತದೆ (೫೯) ಯಾದರೂ ಇದನ್ನು ಅನುಭವಿಸುವ ಆತ್ಮನ ಸ್ವರೂಪವನ್ನು ಕುರಿತು ಉಪಾಸನೆ ಮಾಡುವವರಿಗೂ ವಿಚಾರಮಾಡುವವರಿಗೂ ಅನಿತರಸಾಧಾರಣವಾದ ಮೋಕ್ಷಫಲವುಂಟು (೫೯, ೭೬, ೮೫)-ಎಂಬುದೊಂದು ವಿಶೇಷೋಪದೇಶವು ಈ ಭಾಷ್ಯದಲ್ಲಿರುತ್ತದೆ. ಎಚ್ಚರದಲ್ಲಿರುವ ಜೀವರುಗಳ ಸ್ಥೂಲಶರೀರವು ಪ್ರಜಾಪತಿ ಎಂಬ ವಿರಾಟ್ ಪುರುಷನ ಅಂಶವೆಂದು ಉಪನಿಷತ್ತಿನ ಒಂದನೆಯ ಪ್ರಶ್ನೆಯಲ್ಲಿಯೂ ಕರಣಸಮೂಹವು ಪ್ರಾಣನೆಂಬ ಹಿರಣ್ಯಗರ್ಭನ ಅಂಶವೆಂದು ಎರಡನೆಯ ಪ್ರಶ್ನೆಯಲ್ಲಿಯೂ ಈ ಪ್ರಾಣನು ಆತ್ಮನಿಂದಲೇ ಹುಟ್ಟಿ (೩೯) ಹೊರಗಿನ ಆದಿತ್ಯಾದಿಗಳ ರೂಪದಿಂದಲೂ (೪೫) ಒಳಗೆ ಪ್ರಾಣಾದಿವೃತ್ತಿಗಳ ರೂಪದಿಂದಲೂ (೪೨ ರಿಂದ ೫೦) ಇದ್ದುಕೊಂಡು ಆತ್ಮನಿಗೆ ಉಪಾಧಿಯಾಗಿರುವನೆಂದು ಮೂರನೆಯ ಪ್ರಶ್ನೆಯಲ್ಲಿಯೂ ಸಿದ್ಧವಾಗಿರುತ್ತದೆ. ಇದನ್ನು ನೆನಪಿಟ್ಟರೆ ಎಚ್ಚರವೆಂಬ ಅವಸ್ಥೆಯಲ್ಲಿ ಇಡಿಯ ಪ್ರಪಂಚವೇ ಆತ್ಮನಿಗೆ ಉಪಾಧಿಯಾಗಿರುವದೆಂದೂ ಆದ್ದರಿಂದ ಅವಸ್ಥಾತ್ರಯವಿಚಾರವೆಂದರೆ ಅದ್ವಿತೀಯಾತ್ಮನ ವಿಚಾರವೇ ಎಂದೂ ಏರ್ಪಡುತ್ತದೆ. ಈ ಅಭಿಪ್ರಾಯವನ್ನು ಮಾಂಡೂಕ್ಯಭಾಷ್ಯದಲ್ಲಿ ಆಚಾರ್ಯರು ಕಂಠೋಕ್ತವಾಗಿ ಹೇಳಿರುತ್ತಾರೆ; ಈ ಉಪನಿಷತ್ತಿನ ಭಾಷ್ಯದಲ್ಲಿಯೂ ಸಂಗ್ರಹವಾಗಿ ಸೂಚಿಸಿರುತ್ತಾರೆ (೫೧-೭೮). ಈ ಅಭಿಪ್ರಾಯವನ್ನು ಲಕ್ಷ್ಯವಿಟ್ಟು ನಾವು ಸ್ವಪ್ನವನ್ನು ನಿರೂಪಣಮಾಡಿದರೆ ಕನಸಿನಲ್ಲಿ ಆತ್ಮನು ಸ್ವಯಂಜ್ಯೋತಿಯಾಗಿರುವನೆಂದೂ ಸುಷುಪ್ತಿಯಲ್ಲಿ ಸರ್ವವೂ ಅಕ್ಷರಸ್ವರೂಪನಾದ ಆತ್ಮನಲ್ಲಿಯೇ ಲಯವಾಗುವದೆಂದೂ ಭಾಷ್ಯಕಾರರು ಪ್ರತಿಪಾದಿಸಿರುವದರ ಪ್ರಯೋಜನವು ಎದ್ದುಕಾಣುತ್ತದೆ. ಮೊದಲನೆಯದಾಗಿ ಜೀವನಿಗೆ ಸ್ವತಃ ಅವಸ್ಥೆಗಳ ಅನುಭವವೆಂಬುದು ಇಲ್ಲವೇಇಲ್ಲವೆಂದೂ ಉಪಾಧಿನಿಮಿತ್ತವಾಗಿಯೇ ಅವನಿಗೆ ಜಾಗ್ರತ್ಸ್ವಪ್ನಗಳು ಉಂಟಾಗುತ್ತಿರುವವೆಂದೂ (೭೨) ಆಚಾರ್ಯರು ಹೇಳಿರುವದನ್ನು ಮನಸ್ಸಿಗೆ ತಂದುಕೊಳ್ಳಬೇಕು. ಸ್ಥೂಲೋಪಾಧಿಯಿಂದ ಎಚ್ಚರವೆಂಬ ಅವಸ್ಥೆಯೂ ಸೂಕ್ಷ್ಮೋಪಾಧಿಯಿಂದ ಕನಸೆಂಬ ಅವಸ್ಥೆಯೂ ಜೀವನಿಗೆ ಆಗುತ್ತಿರುವದರಿಂದ ಜೀವನು ಸ್ವತಃ ಅವಸ್ಥಾರಹಿತನಾದ ಅಕ್ಷರವೇ ಆಗಿರುತ್ತಾನೆಂದು ಇದರಿಂದಲೇ ನಿರ್ಣಯಿಸಬಹುದಾಗಿರುತ್ತದೆ. ಕನಸಿನಲ್ಲಿ ವಾಸನಾರೂಪವಾದ ಉಪಾಧಿಯೇ ಸರ್ವಕರಣವಿಷಯಗಳೂ

ಆಗಿರುವದರಿಂದ ಅದನ್ನು ಬೆಳಗುತ್ತಿರುವ ಆತ್ಮಚೈತನ್ಯವು **ಸ್ವಯಂಜ್ಯೋತಿಯು,** ಮತ್ತೊಂದರ ನೆರವನ್ನು ಕೋರದೆ ವಾಸನೆಗಳನ್ನು ಬೆಳಗುತ್ತಿರುವದು ಎಂತಲೂ ನಿದ್ರೆಯಲ್ಲಿ ಯಾವ ಉಪಾಧಿಗಳ ಸಂಬಂಧವೂ ಇಲ್ಲದಿರುವದರಿಂದ ಅಲ್ಲಿಯೂ ಸ್ವಯಂಜ್ಯೋತಿಯೆಂತಲೂ ಭಾಷ್ಯಕಾರರು ಹೇಳಿರುತ್ತಾರೆ (೬೪ ರಿಂದ ೬೭).

ಎರಡನೆಯದಾಗಿ ಆತ್ಮನು **ಸ್ವಯಂಜ್ಯೋತಿ ಎಂದು ಮುಂತಾಗಿ ವ್ಯವಹರಿಸುವದೂ ಅವಿದ್ಯಕ** (೬೩) ವೆಂದು ಆಚಾರ್ಯರು ಹೇಳಿರುವದನ್ನು ನಾವು ಮನಸ್ಸಿಗೆ ಹತ್ತಿಸಿಕೊಳ್ಳಬೇಕು. ಕನಸಿನಲ್ಲಿ ವಾಸನೆಗಳನ್ನು ಕಾಣುವದೆಂಬುದೂ ಅವಿದ್ಯೆಯಿಂದ, ತನಿನಿದ್ರೆಯಲ್ಲಿ ಆ ಉಪಾಧಿಗಳ ಸಂಬಂಧವಿಲ್ಲವೆಂಬುದೂ ಅವಿದ್ಯೆಯಿಂದ (೬೬). ನಿಜವಾಗಿ ನೋಡಿದರೆ ಸುಸುಪ್ತಿಯಲ್ಲಿ ಅವಿದ್ಯಾಕೃತವಾದ ಪೃಥಿವ್ಯಾದಿಭೂತಗಳೂ ಅವುಗಳ ಕಾರಣವಾದ ತನ್ಮಾತ್ರೆಗಳೂ ಭೌತಿಕವಾದ ಸರ್ವಕರಣಗಳೂ ಸಂಪೂರ್ಣವಾಗಿ ಇಲ್ಲವಾಗುವದರಿಂದ ಆತ್ಮಸ್ವರೂಪವು ಅದ್ವಿತೀಯವಾದ ತನ್ನ ಸ್ವಭಾವದಿಂದಲೇ ಇರುತ್ತಿರುವದು (೬೯, ೭೦, ೭೧). ಆ ಅವಸ್ಥೆಯಲ್ಲಿ ಈಗ ತೋರುತ್ತಿರುವ ಸೋಪಾಧಿಕವಾದ ಜೀವರೂಪವೂ ಶುದ್ಧವಾದ ಅಕ್ಷರವೆಂಬ ಪರಮಾತ್ಮರೂಪದಲ್ಲಿಯೇ ಒಂದಾಗಿರುತ್ತದೆ (೭೩). ಯಾವ ಸ್ವರೂಪದಲ್ಲಿ ಹೀಗೆ ಎಲ್ಲವೂ ಒಂದಾಗಿರುವದೋ ಆ ಅಕ್ಷರವೆಂಬ ಪರಮಾತ್ಮಸ್ವರೂಪವನ್ನು ಅರಿತವನು ಸರ್ವವೂ ಸರ್ವಜ್ಞನೂ ಆಗಿರುತ್ತಾನೆ (೩-೧೦, ೧೧) ಎಂಬರ್ಥವನ್ನು ತಿಳಿಸುವ ಮಂತ್ರಗಳು ಅವಸ್ಥಾತ್ರಯದಿಂದಾಗುವ **ಸದ್ಯೋಮುಕ್ತಿಯನ್ನು** ತಿಳಿಸುತ್ತವೆ ಎಂದು (೭೬, ೭೭) ಆಚಾರ್ಯರವರು ತಿಳಿಸಿಕೊಟ್ಟಿರುತ್ತಾರೆ.

ಅವಸ್ಥಾತ್ರಯದಲ್ಲಿರುವ ಆತ್ಮಸ್ವರೂಪವನ್ನು ಹೀಗೆ ನೇರಾಗಿ ವಿಚಾರದಿಂದ ಅರಿತು ತನ್ನಿಷ್ಠೆಯನ್ನು ಹೊಂದಲಾರದೆ ಇರುವವರು **ಓಂಕಾರದಮೂಲಕವಾಗಿ ಉಪಾಸನೆಮಾಡಿ** ಕಾಲಾಂತರದಲ್ಲಾದರೂ ಜ್ಞಾನವನ್ನು ಹೊಂದಿ **ಕ್ರಮಮುಕ್ತಿಯನ್ನು** ಪಡೆಯಬಹುದು ಎಂಬ ಅಭಿಪ್ರಾಯವನ್ನು ಐದನೆಯ ಪ್ರಶ್ನೆಯಲ್ಲಿ ಭಾಷ್ಯಕಾರರು ತೋರಿಸಿಕೊಟ್ಟಿರುತ್ತಾರೆ. ಪರವಿದ್ಯೆಯಿಂದ ಮುಕ್ತಿಯನ್ನು ಪಡೆಯಬಹುದೆಂದು ತಿಳಿಸುವದಕ್ಕಾಗಿಯೇ ಹೊರಟಿರುವ ಸಂದರ್ಭದಲ್ಲಿ ಈ ಕ್ರಮಮುಕ್ತಿಯನ್ನು ಹೇಳಿರುವದು ಯಾವಾಗ ಎಲ್ಲಿ ಮುಕ್ತಿಯಾದರೂ ಅಕ್ಷರಾಖ್ಯಪುರುಷನ ಸ್ವರೂಪದ ಜ್ಞಾನದಿಂದಲೇ ಆಗಬೇಕಾಗಿರುವದೆಂದು ತಿಳಿಸುವದಕ್ಕೆಂದು ನಿಶ್ಚಯಿಸಬೇಕು ಓಂಕಾರವನ್ನು ಕೇವಲ ಉಪಾಸನೆಗೇ ಅಲ್ಲದೆ ಜ್ಞಾನಕ್ಕೆ ಸಾಧನವಾಗಿ ಮಾಡಿಕೊಂಡಿರುವದು ಮುಂಡಕಭಾಷ್ಯ (೨-೨-೪) ಮಾಂಡೂಕ್ಯಭಾಷ್ಯ (೭)-ಇವುಗಳಲ್ಲಿ ಸ್ಪಷ್ಟವಾಗಿ ಕಂಡುಬರುತ್ತದೆ. ಇದರಂತೆ **ಪ್ರಾಣವಿಚಾರಪ್ರಕರಣದಲ್ಲಿ** ಪ್ರಾಣಗಳನ್ನು ಅಗ್ನಿಗಳೆಂದು ಉಪಾಸನೆಮಾಡುವವನನ್ನು ಉದಾನವಾಯುವು ಪ್ರತಿದಿನವೂ ಸುಷುಪ್ತಿಯಲ್ಲಿ ಅಗ್ನಿಹೋತ್ರಿಸ್ವರ್ಗಸ್ಥಾನೀಯವಾದ ಬ್ರಹ್ಮವನ್ನು ಸೇರಿಸು

ತ್ತಿರುವದೆಂದು ಹೇಳಿರುವದು ಸುಷುಪ್ತಿಯಲ್ಲಿ ನಿಜವಾಗಿ ಅಕ್ಷರಬ್ರಹ್ಮವೊಂದೇ ಇರುವದೆಂಬ ತತ್ತ್ವವನ್ನು ಅವಲಂಬಿಸಿಯೇ ಮಾಡಿರುವ ಉಪಾಸಕನ ಸ್ತುತಿಯೆಂದು ತಿಳಿಯಬೇಕು. ಏಕೆಂದರೆ ಸುಷುಪ್ತಿಯೆಂಬುದು ಕಾರ್ಯಕರಣವ್ಯವಹಾರವಿಲ್ಲದ ಅವಸ್ಥೆಯೆಂದು ತಿಳಿಸುವದೇ ಈ ಮಹಾಪ್ರಕರಣದ ಉದ್ದೇಶವಾಗಿರುತ್ತದೆ(೫೮, ೬೯).

## ಜ್ಞಾನಸ್ವರೂಪವಿಚಾರ

ಅಕ್ಷರನೆಂಬ ಪರಮಾತ್ಮನಿಂದಲೇ ಪ್ರಾಣಾದಿಕಲೆಗಳು ಹುಟ್ಟಿ, ಅವನಲ್ಲಿಯೇ ತೋರಿಕೊಳ್ಳುತ್ತಿದ್ದು, ಅವನಲ್ಲಿಯೇ ಅಡಗುತ್ತಿರುವದರಿಂದ ಆ ಆತ್ಮನು ಅದ್ವಿತೀಯನು ಎಂದು ತಿಳಿಸುವದಕ್ಕೋಸ್ಕರ ಹದಿನಾರು ಕಲೆಗಳೂ ಅಕ್ಷರನೆಂಬ ಪುರುಷನಿಂದ ಹುಟ್ಟುತ್ತವೆ ಎಂದು ಆರನೆಯ ಪ್ರಶ್ನೆಯಲ್ಲಿ (೬-೨) ಹೇಳಿರುತ್ತದೆ. ಭಾಷ್ಯಕಾರರು ಶ್ರುತಿಯಲ್ಲಿ ಹೇಳಿರುವ ಈ ವಿಷಯವನ್ನು ಅನುಭವಾರೂಢವಾಗಿ ಮಾಡಿಕೊಡುವದಕ್ಕಾಗಿ ಚಾರ್ವಾಕರು, ವೈಶೇಷಿಕರು, ವಿಜ್ಞಾನವಾದಿಗಳೂ ಶೂನ್ಯವಾದಿಗಳೂ ಆದ ಬೌದ್ಧರು-ಎಂಬ ಮತಾಂತರದವರ ಪ್ರಕ್ರಿಯೆಗಿಂತ ಅತ್ಯಂತ ವಿಲಕ್ಷಣವಾಗಿರುವ **ಅದ್ವಿತೀಯಕೂಟಸ್ಥಚೈತನ್ಯ**ವಾದವೆಂಬ ತಮ್ಮ ಸಿದ್ಧಾಂತವನ್ನು ಪ್ರತಿಪಾದಿಸಿರುತ್ತಾರೆ. ಈ ಸಂದರ್ಭದಲ್ಲಿ ಮಾಡಿರುವ ಚರ್ಚೆಯನ್ನು ಸುಲಭವಾಗಿ ತಿಳಿದುಕೊಳ್ಳುವದಕ್ಕೆ ಅನುಕೂಲಿಸುವಂತೆ ಇಲ್ಲಿ ಸಂಗ್ರಹಿಸಿಕೊಡುವೆವು.

(ಅ) ಜ್ಞಾನವು (ಅರಿವು) ಎಂಬುದು ಭೂತಧರ್ಮಗಳೆಂದು ಲೋಕಾಯತಿಕರಾದ **ಚಾರ್ವಾಕರ** ಮತ. ಚೈತನ್ಯವು ವಿಷಯಿಯಾಗಿರುವದರಿಂದ ತನಗೆ ವಿಷಯವಾಗಿರುವ ಭೂತಗಳಿಗೆ ಅದು ಧರ್ಮವಾಗಲಾರದೆಂಬುದು ಸ್ಪಷ್ಟವಾಗಿರುವದರಿಂದ ಆಚಾರ್ಯರು ಆ ಮತವನ್ನು ಖಂಡಿಸುವದಕ್ಕೆ ಹೋಗಿಲ್ಲ.

(ಆ) ಜ್ಞಾನವು ಆತ್ಮನ ಧರ್ಮವಾಗಿ ಹುಟ್ಟಿಸಾಯುತ್ತಿರುವದು, ಆತ್ಮನು ಚೈತನ್ಯಸ್ವರೂಪನಲ್ಲ-ಎಂಬ **ವೈಶೇಷಿಕಾದಿಗಳಿಗೆ** ಜ್ಞೇಯವಿಲ್ಲದಮಾತ್ರದಿಂದ ಜ್ಞಾನವು ಇಲ್ಲವೆಂದು ಹೇಳುವ ಬೌದ್ಧಸಿದ್ಧಾಂತವೂ ಬಂದೊದಗುತ್ತದೆ (೯೨). ಆದ್ದರಿಂದ ಒಂದೇ ರೂಪವಾಗಿರುವ ಆತ್ಮಸ್ವರೂಪಚೈತನ್ಯವನ್ನು ಅವರೂ ಒಪ್ಪಬೇಕು ಎಂದು ಭಾಷ್ಯಕಾರರು ಹೇಳಿರುತ್ತಾರೆ.

(ಇ) ಜ್ಞಾನವು ಜ್ಞೇಯವಿಲ್ಲದೆ ಇರಲಾರದು; ಜ್ಞಾನವು ಕ್ಷಣಿಕವಾಗಿರುತ್ತದೆ_ ಎಂಬ **ವಿಜ್ಞಾನವಾದಿಗಳ ಮತದ ಖಂಡನೆಯ** ಸಾರವೇನೆಂದರೆ:

ಜ್ಞಾನದ ಅಭಾವವನ್ನು ಕಲ್ಪಿಸುವದಕ್ಕೂ ಜ್ಞಾನವು ಬೇಕೇ ಬೇಕಾಗುತ್ತದೆ; ಏಕೆಂದರೆ ಜ್ಞಾನದಂತೆ ಜ್ಞಾನಾಭಾವವೂ ಜ್ಞೇಯವೇ ಆಗಿರುತ್ತದೆ (೯೨). ಜ್ಞಾನವು ಜ್ಞೇಯವಿರುವವರೆಗೆ ಇದ್ದೇ ಇರಬೇಕೆಂದು ಈ ವಾದಿಗಳು ಹೇಳುತ್ತಿರುವದರಿಂದ ಜ್ಞಾನವು ನಿತ್ಯವೆಂದೇ ಅವರು ಒಪ್ಪಬೇಕಾಗುತ್ತದೆ. ಜ್ಞೇಯವು ಜ್ಞಾನವಿಲ್ಲದೆಯೂ

ಇರಬಹುದೆಂದು ಅವರು ಹೇಳುವದಾದರೆ ಜ್ಞೇಯವಿಲ್ಲದಿದ್ದರೆ ಜ್ಞಾನವಿರಬಾರದು ಎಂಬ ಅವರ ವಾದಕ್ಕೆ ಆಧಾರವೇ ಇಲ್ಲದೆ ಹೋಗುತ್ತದೆ. ಜ್ಞಾನವು ತನ್ನನ್ನು ತಾನೇ ಅರಿಯುತ್ತದೆ ಎಂಬುದು ಈ ವಾದಿಗಳ ಅಂಗೀಕಾರವಾಗಿರುವದರಿಂದ ಜ್ಞಾನಜ್ಞೇಯ ಸ್ವಭಾವಗಳಲ್ಲಿ ಯಾವ ಹೆಚ್ಚುಕಡಿಮೆಯನ್ನೂ ಇವರು ತೋರಿಸುವದಕ್ಕೆ ಬರುವದಿಲ್ಲ; ಆದ್ದರಿಂದ ಜ್ಞೇಯವು ಜ್ಞಾನಕ್ಕಿಂತ ಬೇರೆಯಾಗಿರಬಹುದಾದರೂ ಜ್ಞಾನವು ಮಾತ್ರ ಜ್ಞೇಯವನ್ನು ಬಿಟ್ಟಿರಲಾರದು-ಎಂದು ಕಲ್ಪಿಸುವದಕ್ಕೆ ಆಗುವದಿಲ್ಲ (೯೩). ಸುಷುಪ್ತಿಯಲ್ಲಿ ಹೊರಗಿನ ಜ್ಞೇಯಗಳನ್ನು ಒಪ್ಪದಿದ್ದರೂ ತನ್ನನ್ನು ತಾನು ಅರಿಯುವ ಜ್ಞಾನವು ಅಲ್ಲಿದೆ ಎಂದು ಅವರು ಒಪ್ಪುತ್ತಿರುವದರಿಂದ ಹೊರಗಿನ ಜ್ಞೇಯಗಳ ಅಭಾವಕ್ಕಿಂತ ಆ ಜ್ಞಾನವು ಬೇರೆಯೆಂದೂ ಆ ಜ್ಞಾನವೇ ಅಭಾವರೂಪವಾದ ಜ್ಞೇಯವನ್ನೂ ಅರಿಯುವದೆಂದೂ ಅವಶ್ಯವಾಗಿ ಒಪ್ಪಬೇಕಾಯಿತು (೯೪). ಇದೂ ಅಲ್ಲದೆ ಜ್ಞಾನವು ತನ್ನನ್ನು ತಾನು ಅರಿಯುವದೆಂದರೂ ಹೀಗೆ ತನ್ನನ್ನು ತಾನು ಅರಿಯುವದೆಂಬುದನ್ನು ಅರಿಯುವದಕ್ಕೆ ಮತ್ತೊಂದು ಜ್ಞಾನ, ಅದನ್ನು ಅರಿಯುವದಕ್ಕೆ ಇನ್ನೊಂದು ಜ್ಞಾನ,-ಹೀಗೆ ಅನವಸ್ಥಾದೋಷವು ಗಂಟುಬೀಳುತ್ತದೆ. ಜ್ಞಾನವು ತನ್ನನ್ನು ತಾನು ಅರಿತುಕೊಂಡರೂ ತಾನು ಹಾಗೆ ಅರಿಯುವೆನೆಂಬುದನ್ನು ಅರಿತುಕೊಳ್ಳಲಾರದೆ ಇರುವದರಿಂದ ಅಸರ್ವಜ್ಞನೆಂದೂ ಆಗುತ್ತದೆ.

ಆದರೆ **ಕೂಟಸ್ಥಚೈತನ್ಯವಾದಿಗಳ ಮತದಲ್ಲಿ** ಈ ಯಾವ ದೋಷವೂ ಬರುವಂತಿಲ್ಲ. ಈ ಸಿದ್ಧಾಂತದಲ್ಲಿ ಚೈತನ್ಯವು ಜ್ಞೇಯವಲ್ಲ, ಬರಿಯಜ್ಞಾನವೇ; ಆದ್ದರಿಂದ ಅದನ್ನು ಅರಿಯುವದಕ್ಕೆ ತಾನಾಗಲಿ ಮತ್ತೊಂದು ಜ್ಞಾನವಾಗಲಿ ಬೇಕಿಲ್ಲವಾದ್ದರಿಂದ ಜ್ಞಾನವು ಸರ್ವಜ್ಞವಲ್ಲವೆಂಬ ದೋಷವಾಗಲಿ ಅನವಸ್ಥಾದೋಷವಾಗಲಿ ಬರುವದಿಲ್ಲ (೯೫). ಈ ಚೈತನ್ಯಕ್ಕೆ ಹುಟ್ಟಿಲ್ಲ, ಸಾವಿಲ್ಲ; ಜ್ಞೇಯವಾದ ಕಲೆಗಳಿಗೆ ಹುಟ್ಟುಸಾವುಗಳುಂಟೆಂಬುದನ್ನು ಈ ಚೈತನ್ಯವೇ ಅರಿಯುತ್ತಿರುವದು. ಯಾವ ಜ್ಞೇಯವಸ್ತುವಾದರೂ ಜ್ಞಾತವಾಗಿಯೇ ಇರಬೇಕಾದ್ದರಿಂದ ಜ್ಞಾನವನ್ನು ಬಿಟ್ಟು ಜ್ಞೇಯವು ಇರಲಾರದು (೯೧), ಜ್ಞಾನವು ಒಂದು ಜ್ಞೇಯವಿಲ್ಲದಿದ್ದರೆ ಮತ್ತೊಂದು ಜ್ಞೇಯವನ್ನು ಬೆಳಗುತ್ತಿರುವದರಿಂದಲೂ (೯೧) ಯಾವ ಜ್ಞೇಯವೂ ಇಲ್ಲದ ಸುಷುಪ್ತಿಯಲ್ಲಿಯೂ ಇರುತ್ತಿರುವದರಿಂದಲೂ (೯೨) ಅದು ಇದ್ದಂತೆಯೇ ಇರುವದೆಂದೂ ನಾಮರೂಪಾದ್ಯುಪಾಧಿಗಳಿಂದ ಅದ್ವಿತೀಯಚೈತನ್ಯವೇ ನಾನಾವಿಧವಾಗಿ ತೋರುತ್ತಿರುವದೆಂದೂ (೯೫) ಸಿದ್ಧವಾಗುತ್ತದೆ-ಎಂದು ಭಾಷ್ಯಕಾರರು ತಮ್ಮ ಸಿದ್ಧಾಂತದ ಹೆಚ್ಚುಗಾರಿಕೆಯನ್ನು ತಿಳಿಸಿಕೊಟ್ಟಿರುತ್ತಾರೆ.

## ಕರ್ತೃತ್ವಭೋಕ್ತೃತ್ವವಿಚಾರ

ಅಕ್ಷರನೆಂಬ ಹೆಸರಿನ ಪರಮಾತ್ಮನಿಂದಲೇ ಪ್ರಾಣಾದಿಕಲೆಗಳು ಅವಿದ್ಯಾನಿಮಿತ್ತವಾಗಿ ಹುಟ್ಟಿ, ಅವನಲ್ಲಿಯೇ ಇದ್ದು, ಕೊನೆಗೆ ಅವನಲ್ಲಿಯೇ ಲಯವಾಗುತ್ತವೆ. ಕಲೆಗಳು

ಹೀಗೆ ಅವಿದ್ಯಾಕೃತವಾಗಿ ಹುಟ್ಟುತ್ತಿರುವದರಿಂದ ವಿದ್ಯೆಯಿಂದ ಅವುಗಳು ಇಲ್ಲವೆಂದು ಮನಗಂಡು ಮೃತ್ಯುರೂಪವಾದ ಸಂಸಾರದಿಂದ ಬಿಡುಗಡೆಯನ್ನು ಹೊಂದಬಹುದು (೧೧೫) ಎಂಬುದು **ಉಪನಿಷತ್ತಿನ ಸಿದ್ಧಾಂತವು.** ಆದ್ದರಿಂದಲೇ ಈ ಉಪನಿಷತ್ತಿನ ಕೊನೆಯಲ್ಲಿ "ಅವಿದ್ಯಾಸಾಗರದಿಂದ ಕಡೆಹಾಯಿಸಿರುವ ನೀನೇ ನಮಗೆ ತಂದೆ" (೬-೮) ಎಂದು ಶಿಷ್ಯರು ಗುರುವಿಗೆ ತಮ್ಮ ಕೃತಜ್ಞತೆಯನ್ನು ತೋರಿಸಿರುತ್ತಾರೆ.

ಕರ್ತೃತ್ವಭೋಕ್ತೃತ್ವರೂಪವಾದ ಸಂಸಾರವು ಅವಿದ್ಯಾಕೃತವಾದ ಉಪಾಧಿಗಳಿಂದ ಆಗಿರುತ್ತದೆ ಎಂಬ ಈ ಸಿದ್ಧಾಂತಕ್ಕೆ ಅದು ಪರಮಾರ್ಥವಾಗಿಯೇ ಇದೆ ಎಂಬ ವಾದಗಳು ವಿರುದ್ಧವಾಗಿವೆ. ಈಶ್ವರನ ಸಂಕಲ್ಪದಿಂದ ಪರಮಾಣುಗಳು ಒಂದರೊಡನೊಂದು ಬೆರೆತು ಸತ್ಯವಾದ ಪ್ರಪಂಚವು ಸೃಷ್ಟಿಯಾಗುತ್ತದೆ. ಜೀವರು ಕರ್ತೃಭೋಕ್ತೃಸ್ವರೂಪರೇ ಆಗಿರುತ್ತಾರೆ. ಅವರಿಗೆ ದೇಹಾದಿಗಳಿಗಿಂತ ವ್ಯತಿರಿಕ್ತವಾಗಿರುವ ತಮ್ಮ ಸ್ವರೂಪದ ವಿಷಯದಲ್ಲಿರುವ ತಪ್ಪುತಿಳಿವಳಿಕೆಯಿಂದ ಸತ್ಯವಾದ ಬಂಧವುಂಟಾಗಿರುತ್ತದೆ-ಎಂಬುದು **ವೈಶೇಷಿಕರ ಪ್ರಕ್ರಿಯೆ.** ತ್ರಿಗುಣಾತ್ಮಕಪ್ರಧಾನವೆಂಬ ಪ್ರಕೃತಿಯು ಮಹತ್ತು, ಅಹಂಕಾರ-ಮುಂತಾದ ರೂಪದ ಜಗತ್ತಾಗಿ ಸತ್ಯವಾಗಿಯೇ ಪರಿಣಮಿಸಿರುತ್ತದೆ. ಅಸಂಗರಾದ ಪುರುಷರಿಗೆ ತಮ್ಮ ಸ್ವರೂಪವನ್ನೂ ಪ್ರಕೃತಿಯ ಪರಿಣಾಮಗಳಾದ ಅಂತಃಕರಣಾದಿಗಳನ್ನೂ ಬಿಡಿಸಿಕೊಂಡು ಅರಿಯದೆ ಇರುವ ಅವಿವೇಕದಿಂದ ಪರಮಾರ್ಥವಾಗಿಯೇ ಭೋಕ್ತೃತ್ವವೆಂಬ ಬಂಧವಾಗಿದೆ ಎಂಬುದು **ಸಾಂಖ್ಯರ ಪ್ರಕ್ರಿಯೆ.** ಈ ಎರಡು ಪ್ರಕ್ರಿಯೆಗಳೂ ಅತ್ಯಂತ ಭಿನ್ನವಾಗಿಯೂ ಪರಸ್ಪರವಿರುದ್ಧವಾಗಿಯೂ ಇದ್ದರೂ ಅನಾತ್ಮಪ್ರಪಂಚವೆಲ್ಲವೂ ಅವಿದ್ಯಕವೆಂಬ ಸಿದ್ಧಾಂತಕ್ಕೆ ಎರಡೂ ಪ್ರತಿಪಕ್ಷಗಳೇ ಆಗಿರುತ್ತವೆ. ಸಾಂಖ್ಯರ ಸಿದ್ಧಾಂತವೂ ದ್ವೈತವೇ ಆದರೂ ಆತ್ಮನು ಕೂಟಸ್ಥನೆಂದೂ ಅಸಂಗನೆಂದೂ ಹೇಳುವ ಅದ್ವೈತಕ್ಕೆ ಹತ್ತಿರವಾಗಿರುವದರಿಂದಲೂ ಸಾಂಖ್ಯಮತದಲ್ಲಿ ಯಾವ ಭಾಗವು ತಮಗೆ ಅಸಮ್ಮತವೆಂಬುದನ್ನು ತಿಳಿಸುವದಕ್ಕೇ ಆಚಾರ್ಯರು ಹೆಚ್ಚಾಗಿ ಪ್ರಯತ್ನಿಸಿರುತ್ತಾರೆ.

"ಆತ್ಮನು ಕರ್ತೃವಲ್ಲ, ಪ್ರಧಾನವೇ ಸಂಸಾರಮೋಕ್ಷಗಳಿಗೆ ಕರ್ತೃ; ಆದರೆ ಆತ್ಮನು ನಿಜವಾಗಿಯೂ ಸಂಸಾರಮೋಕ್ಷಗಳನ್ನು ಅನುಭವಿಸುವ ಭೋಕ್ತೃವಾಗಿರುತ್ತಾನೆ" ಎಂಬ ಸಾಂಖ್ಯರ ವಾದವನ್ನೇ ಮುಖ್ಯವಾಗಿ ಇಲ್ಲಿ ಖಂಡಿಸಿರುತ್ತದೆ, (೧೦೧). ಸಾಂಖ್ಯನ ಪ್ರಕ್ರಿಯೆ ಏನೆಂದರೆ: ಪ್ರಧಾನವು ಜಡವಾದ್ದರಿಂದ ಮಹತ್ತು, ಅಹಂಕಾರ-ಮುಂತಾದ ತತ್ತ್ವಾಂತರಗಳಾಗಿ ಪರಿಣಮಿಸಬಹುದು. ಅದು ಸಾವಯವವಾಗಿರುವದರಿಂದ ಬೇರೆಬೇರೆಯ ರೂಪಗಳನ್ನು ಪಡೆಯುವ ಅಶುದ್ಧವಸ್ತುವಾಗಿರುತ್ತದೆ. ಆತ್ಮನೇ ಸೃಷ್ಟಿಕರ್ತನಾಗಿ ಜಗದ್ರೂಪದಿಂದ ಪರಿಣಮಿಸುವನೆಂದರೆ ಅವನು ಜಡಸ್ವರೂಪನೂ ಸಾವಯವನೂ ಅನಿತ್ಯನೂ ಅಶುದ್ಧರೂಪನೂ ಆಗಬೇಕಾಗುವದು (೧೦೩). ಆದರೆ ಆತ್ಮನು ಭೋಕ್ತೃಸ್ವರೂಪನಾಗುವಾಗಲೂ ಪರಿಣಮಿಸುವದಿಲ್ಲವಾದ್ದ

ರಿಂದ ಅಷ್ಟುಮಾತ್ರದಿಂದ ಆವನಲ್ಲಿ ಯಾವ ದೋಷವೂ ಉಂಟಾಗುವದಿಲ್ಲ (೧೦೩, ೧೦೫). ಆದ್ದರಿಂದ ತರ್ಕಶುದ್ಧವಾಗಿರುವ ಸಾಂಖ್ಯಸಿದ್ಧಾಂತಕ್ಕನುಗುಣವಾಗಿ ಸೃಷ್ಟಿ ವಾಕ್ಯಗಳಿಗೆ ಅರ್ಥವನ್ನು ಮಾಡಬೇಕು. ಅರಸನಿಗೆ ಬೇಕಾದ ಕಾರ್ಯವನ್ನು ಮಾಡಿ ಕೊಡುವ ಅಧಿಕಾರಿಯನ್ನೂ "ಅರಸ" ನೆಂದು ಉಪಚಾರಕ್ಕೆ ಕರೆಯುವಂತೆ ಪುರುಷನಿಗೆ ಭೋಗಮೋಕ್ಷಗಳನ್ನುಂಟುಮಾಡುವದಕ್ಕಾಗಿ ಮಹದಾದಿರೂಪದಿಂದ ಪರಿಣಮಿಸುವ ಪ್ರಧಾನರೂಪವನ್ನೂ ಚೇತನವೆಂದು ಉಪಚಾರಕ್ಕಾಗಿ ಭಾವಿಸಿ ಶ್ರುತಿಯಲ್ಲಿ ಆಲೋಚನಾಪೂರ್ವಕವಾದ ಸೃಷ್ಟಿಯನ್ನು ಹೇಳಿದೆ ಎಂದು ಕಲ್ಪಿಸುವದು ಯುಕ್ತ. ಹಾಗಿಲ್ಲದಿದ್ದರೆ ಆತ್ಮನು ತಾನೇ ತನಗೆ ಬಂಧವನ್ನು ಸೃಷ್ಟಿಸಿಕೊಂಡನೆಂಬ ಅನಿಷ್ಟವೂ ಬಂದೊದಗುತ್ತದೆ.

ಕರ್ತೃತ್ವಭೋಕ್ತೃತ್ವಗಳೆರಡೂ ಆವಿದ್ಯಕವೆಂಬ ವೇದಾಂತಿಯ ಅಭಿಮತ. ವೇನೆಂದರೆ: ಕರ್ತೃತ್ವಭೋಕ್ತೃತ್ವಗಳೆರಡೂ ವಿಕಾರಗಳೇ ಆಗಿರುವಲ್ಲಿ ಕರ್ತೃತ್ವವು ಆವಿದ್ಯಕವೆಂದು ಒಪ್ಪಿಕೊಂಡು ಭೋಕ್ತೃತ್ವವು ಮಾತ್ರ ಪಾರಮಾರ್ಥಿಕವೆಂದು ಹೇಳುವದಕ್ಕೆ ಯಾವ ಕಾರಣವೂ ಇರುವದಿಲ್ಲ (೧೦೪). "ಭೋಕ್ತೃತ್ವವು ಬಂದಾಗಲೂ, ಪುರುಷನು, ದಾಸಿವಾಳದಹೂವಿನಿಂದ ಕೆಂಪಿನ ಸಂಪರ್ಕವನ್ನು ಪಡೆಯುವ ಸ್ಫಟಿಕದಂತೆ ತನ್ನ ಸ್ವರೂಪದಿಂದಲೇ ಇರುತ್ತಾನಾದ್ದರಿಂದ ಚಿನ್ಮಾತ್ರತ್ವವೇ ಅವನ ತತ್ತ್ವವೆಂದಾಗುತ್ತದೆ; ಆದ್ದರಿಂದ ಭೋಕ್ತೃತ್ವವು ಪರಮಾರ್ಥವಾಗಿಯೇ ಆಗುವದೆಂದರೂ ದೋಷವುಂಟಾಗುವದಿಲ್ಲ" ಎಂಬ ಸಾಂಖ್ಯನ ಮತವು ಯುಕ್ತವಲ್ಲ. ಏಕೆಂದರೆ ಪ್ರಧಾನವು ಮಹದಾದಿಗಳಾಗಿ ಮಾರ್ಪಟ್ಟು ಮತ್ತೆ ಪ್ರಧಾನವೇ ಆಗು ವಂತೆಯೇ ಪುರುಷನು ಭೋಗಕಾಲಕ್ಕೆ ಭೋಕ್ತೃವಾಗಿ ಮಾರ್ಪಟ್ಟು ಬಳಿಕ ಚಿನ್ಮಾತ್ರನೇ ಆಗುತ್ತಾನೆಂದು ಅವನು ಒಪ್ಪಿರುವದರಿಂದ ಈ ಎರಡು ವಿಕಾರಗಳಲ್ಲಿ ಯಾವ ಹೆಚ್ಚುಕಡಿಮೆಯನ್ನೂ ತರ್ಕದಿಂದ ಸಿದ್ಧಪಡಿಸುವದಕ್ಕೆ ಆಗುವಹಾಗಿಲ್ಲ (೧೦೫). ಪುರುಷನು ಭೋಗಕಾಲದಲ್ಲಿಯೂ ಚಿನ್ಮಾತ್ರನೇ ಎಂದರಂತೂ ಪುರುಷನ ಭೋಕ್ತೃತ್ವವೂ ಕರ್ತೃತ್ವದಂತೆ ಆವಿದ್ಯಕವೇ ಆಗಿಬಿಡುತ್ತದೆ (೧೦೬). ಅಥವಾ ಅದು ಪರಮಾರ್ಥವೇ ಎನ್ನುವದಾದರೆ ಪ್ರಧಾನಕ್ಕೂ ಪರಮಾರ್ಥವಾದ ಭೋಕ್ತೃತ್ವವನ್ನೇ ಒಪ್ಪಬೇಕಾಗುತ್ತದೆ (೧೦೬). ಭೋಗಕ್ಕೆ ಪ್ರಧಾನಪುರುಷರಿಬ್ಬರೂ ಬೇಕಾಗಿರುವ ದರಿಂದ ಇಬ್ಬರೂ ಭೋಕ್ತೃಗಳೆಂದು ಒಪ್ಪಿದರೆ ಪುರುಷನಿಗೆ ಪ್ರಧಾನವು ಭೋಗ ವನ್ನೂ ಮೋಕ್ಷವನ್ನೂ ಉಂಟುಮಾಡಿಕೊಡುತ್ತದೆ-ಎಂದು ಪುರುಷನಿಗೆ ಮುಖ್ಯತ್ವ ವನ್ನೂ ಪ್ರಧಾನಕ್ಕೆ ಆವನ ಅಧೀನತ್ವವನ್ನೂ ಹೇಳುವದು ತಪ್ಪಾಗುವದು (೧೦೭). ಆದ್ದರಿಂದ ಕರ್ತೃತ್ವಭೋಕ್ತೃತ್ವಗಳೆರಡೂ ಪುರುಷನಿಗೇ ಅವಿದ್ಯೆಯಿಂದ ಕಲ್ಪಿತವಾಗಿ ರುವವೆಂದು ಸಾಂಖ್ಯರೂ ಒಪ್ಪಬೇಕು (೧೦೮). ಇದರ ಜೊತೆಗೆ ಪ್ರಧಾನವೆಂಬುದು ಪುರುಷನಿಗಿಂತ ನಿಜವಾಗಿಯೇ ಇರುವ ವಸ್ತು ಎಂಬ ಹಟವನ್ನು ತೊರೆದು ಆತ್ಮೈಕ

ತ್ವವನ್ನೇ ಒಪ್ಪಬೇಕು. ಹಾಗಿಲ್ಲದಿದ್ದರೆ ಆತ್ಮನಿಗಿಂತ ಬೇರೆಯಾಗಿರುವ ಪರಮಾಣುಗಳೇ ಮುಂತಾದವನ್ನು ತಿರಸ್ಕರಿಸುವದಕ್ಕೆ ಯಾವ ಸಾಧಕಯುಕ್ತಿಯೂ ಇಲ್ಲದೆ ಶ್ರುತಿವಿರೋಧದ ಜೊತೆಗೆ ಯುಕ್ತಿವಿರೋಧವೂ ಗಂಟುಬೀಳುತ್ತದೆ (೧೦೪). ಆದ್ದರಿಂದ ಒಬ್ಬನೇ ಆಗಿರುವ ಆತ್ಮನಲ್ಲಿ ಅವಿದ್ಯೆಯಿಂದ ಸವಿಶೇಷತ್ವವು ಕಲ್ಪಿತವಾಗಿರುವದೆಂದೂ (೧೦೩) ಅದನ್ನು ಅಲ್ಲಗಳೆಯುವದಕ್ಕಾಗಿಯೇ ಶಾಸ್ತ್ರವು ಹೊರಟಿದೆಯೆಂದೂ (೧೦೯) ಏರ್ಪಡುತ್ತದೆ. ಈ ರೀತಿಯಲ್ಲಿ ನೋಡಿದರೆ ಅವಿದ್ಯಾಕಲ್ಪಿತವಾದ ನಾಮರೂಪಕರ್ಮಗಳೆಂಬ ಉಪಾಧಿಯಿಂದ ಆಗಿರುವ ಅನೇಕ ಶಕ್ತಿಗಳೂ ಸಾಧನಗಳೂ ಪರಮಾತ್ಮನಿಗೆ ಇರುವದರಿಂದ ಅವನೇ ಸೃಷ್ಟಿಕರ್ತನೆಂಬ ವೇದಾಂತಸಿದ್ಧಾಂತವೇ ನಿರ್ದುಷ್ಟವಾಗಿರುತ್ತದೆ (೧೦೯)

## ಭಾಷ್ಯದ ವ್ಯಾಖ್ಯಾನಕಾರರು

ಭಾಷ್ಯಕ್ಕೆ ವ್ಯಾಖ್ಯಾನವನ್ನು ಬರೆದಿರುವವರು "ಶ್ರೀಮದಾನಂದಜ್ಞಾನ"ರೆಂದು ಆನಂದಾಶ್ರಮಮುದ್ರಣಾಲಯದಲ್ಲಿ ಪ್ರಕಟವಾಗಿರುವ ಪುಸ್ತಕದಲ್ಲಿ ಅಚ್ಚಾಗಿದೆಯಾದರೂ ಅದೇ ಪುಸ್ತಕದ ಕೊನೆಯಲ್ಲಿ (ಪು. ೭೬[1]) "ಶ್ರೀಮತ್ಕೈವಲ್ಯೇನ್ದ್ರಶಿಷ ಜ್ಞಾನೇನ್ದ್ರಗುರುಚರಣಸೇವಿನಾರಾಯಣೇನ್ದ್ರಸರಸ್ವತೀವಿರಚಿತಂ ಪ್ರಶ್ನೋಪನಿಷದ್ಭಾಷ್ಯವಿವರಣಂ ಸಮಾಪ್ತಮ್" ಎಂಬ ವಾಕ್ಯವು ಐದು ಹಸ್ತಪ್ರತಿಗಳಲ್ಲಿರುವದಾಗಿ ಒಂದು ಟಿಪ್ಪಣಿಯನ್ನೂ ಕೊಟ್ಟಿರುತ್ತದೆ. ಆದ್ದರಿಂದ ವ್ಯಾಖ್ಯಾನಕಾರರು "**ನಾರಾಯಣೇಂದ್ರಸರಸ್ವತಿ**" ಗಳೆಂಬವರೆಂದೂ ಕೆಲವರ ಮತವಿತ್ತೆಂದು ತಿಳಿಯಬೇಕಾಗಿದೆ. ಈ ವ್ಯಾಖ್ಯಾನದಲ್ಲಿ ವಾಚಸ್ಪತಿಮಿಶ್ರರ ಸೂತ್ರಭಾಷ್ಯವ್ಯಾಖ್ಯಾನವಾದ ಭಾಮತಿಯನ್ನೂ (ಪುಟ ೪೯) **ಶಂಕರಾನಂದರವರ** ಉಪನಿಷದ್ವ್ಯಾಖ್ಯಾನವನ್ನೂ (ಪು. ೪೯-೫೦) ಪರಾಮರ್ಶಿಸಿರುವದರಿಂದ ಈ ನಾರಾಯಣೇಂದ್ರಸರಸ್ವತಿಗಳು ಆಚಾರ್ಯರಿಗಿಂತ ಬಹಳ ಈಚಿನವರೆಂದು ತಾನೇ ಸ್ಪಷ್ಟವಾಗಿರುತ್ತದೆ. ಆದ್ದರಿಂದ್ಯ ಈ ವ್ಯಾಖ್ಯಾನದಲ್ಲಿ ಸುಷುಪ್ತಿಯಲ್ಲಿ "ಆನಂದಮಯಕೋಶವೆಂಬ ಹೆಸರಿನ ಅಜ್ಞಾನವಿರುವದೆಂದೂ" " (ಪು. ೩೨. ೪೨), ಓಂಕಾರೋಪಾಸನಾಪ್ರಕರಣದಲ್ಲಿ 'ಏಕಮಾತ್ರಾವಿಶಿಷ್ಟೋಂಕಾರಾಭಿಧ್ಯಾನ'ವೆಂಬ ಭಾಷ್ಯಕ್ಕೆ "ಏಕಮಾತ್ರಾತ್ಮಕವಾದ ಓಂಕಾರವು, ಎಂದರೆ ಅಕಾರವು" ಎಂದೂ (ಪು ೪೯) ಬರೆದಿರುವ ಭಾಷ್ಯವಿರುದ್ಧಾಭಿಪ್ರಾಯವನ್ನು ನಾವು ಕೈಬಿಟ್ಟಿರುತ್ತೇವೆ.

ಮುಂಡಕಭಾಷ್ಯವ್ಯಾಖ್ಯಾನದಲ್ಲಿಯೂ ಪ್ರಶ್ನಭಾಷ್ಯವ್ಯಾಖ್ಯಾನದಲ್ಲಿಯೂ ಕಾಣಬರುವ ಸೃಷ್ಟಿವಿಚಾರದ ಅಭಿಪ್ರಾಯವನ್ನು ಪ್ರಸಂಗವಶದಿಂದ ಇಲ್ಲಿ ವಿಮರ್ಶಿಸುವದು

---

1 ಇಲ್ಲಿ ತೋರಿಸಿರುವ ಪುಟಸಂಖ್ಯೆಗಳು ಆನಂದಾಶ್ರಮದಲ್ಲಿ ಅಚ್ಚಾಗಿರುವ ಆನಂದಗಿರಿ ಕೃತ ವ್ಯಾಖ್ಯಾ ಸಮೇತವಾದ ಶಾಂಕರಭಾಷ್ಯದವುಗಳಾಗಿವೆ.

ಯುಕ್ತವೆಂದು ನಮಗೆ ತೋರುತ್ತದೆ. **ಮುಂಡಕಭಾಷ್ಯ**ದಲ್ಲಿ ಅಕ್ಷರವೆಂಬ ಹೆಸರಿನ ಪರಮಪುರುಷನಿಂದ ಪಂಚಭೂತೋತ್ಪತ್ತಿಯನ್ನು ವಿವರಿಸುವಾಗ "ಶಬ್ದ, ಸ್ಪರ್ಶ, ರೂಪ, ರಸ, ಗಂಧ—ಎಂಬ ಮುಂದುಮುಂದಿನ ಗುಣಗಳು ಆಯಾ ಭೂತಗಳಲ್ಲಿ ಹಿಂದಿನ ಭೂತಗಳ ಗುಣಗಳೊಡನೆ ಕೂಡಿ ಇರುವವೆಂದು" ಭಾಷ್ಯಕಾರರು (ಮುಂ. ೨-೧-೩, ಭಾ ಭಾ. ೫೮) ಬರೆದಿರುತ್ತಾರೆ. ಆಗ ವ್ಯಾಖ್ಯಾನಕಾರರು "ಮೊದಲು ಸೂಕ್ಷ್ಮಭೂತಗಳು ಉಂಟಾಗಿ ಪಂಚೀಕರಣದಿಂದ ಸ್ಥೂಲಭೂತಗಳಾದ ಬಳಿಕ ಒಂದೊಂದು ಭೂತದಲ್ಲಿಯೂ ಐದೈದು ಗುಣಗಳು ಏರ್ಪಡುವವೆಂದು ಛಾಂದೋಗ್ಯಾದಿಗಳಲ್ಲಿ ಹೇಳಿರುವಲ್ಲಿ ಈ ಭಾಷ್ಯದಲ್ಲಿ ಮಾತ್ರ ಮೊದಲಿನ ಸೃಷ್ಟಿಯಲ್ಲಿಯೇ ಆಕಾಶಕ್ಕೆ ಒಂದು ಗುಣ, ವಾಯುವಿಗೆ ಎರಡು ಗುಣ, ತೇಜಸ್ಸಿಗೆ ಮೂರು ಗುಣ–ಎಂದು ಮುಂತಾಗಿ ಹೇಳಿರುವದು ಪಂಚೀಕರಣಪ್ರಕ್ರಿಯೆಗೆ ವಿರುದ್ಧವಾಗಿದೆಯಾದರೂ ಭೂತಸೃಷ್ಟಿಯಲ್ಲಿ ಶ್ರುತಿಗೆ ತಾತ್ಪರ್ಯವಿಲ್ಲವೆಂಬುದನ್ನು ತಿಳಿಸುವದಕ್ಕೆಂದು ಇಲ್ಲಿ ಬೇರೊಂದು ಪ್ರಕ್ರಿಯೆಯನ್ನು ಹೇಳಿರುವದರಿಂದ ದೋಷವಿಲ್ಲ (ಮುಂ. ವ್ಯಾ. ಪು. ೨೨) ಎಂದು ಭಾಷ್ಯವಾಕ್ಯಗಳಿಗೆ ಅವಿರೋಧವನ್ನು ಕಲ್ಪಿಸಿರುತ್ತಾರೆ. **ಪ್ರಶ್ನಭಾಷ್ಯದಲ್ಲಿ** (ಭಾ. ಭಾ. ೧೧೨) "ಹಿರಣ್ಯಗರ್ಭನೆಂಬ ಪ್ರಾಣನಿಂದ ಶ್ರದ್ಧೆಯನ್ನೂ ಆಮೇಲೆ ಕರ್ಮಫಲವನ್ನೂ ಅನು(ಭವಿಸುವದಕ್ಕೂ), ಸಾಧಿಸುವದಕ್ಕೂ ಆಶ್ರಯವಾಗಿರುವ ಕಾರಣರೂಪವಾದ ಮಹಾಭೂತಗಳನ್ನೂ ಪರಮಾತ್ಮನು ಸೃಷ್ಟಿಸಿದನು. ಪಂಚಭೂತಗಳಲ್ಲಿ ಉತ್ತರೋತ್ತರವಾಗಿ ಒಂದೊಂದು ಗುಣವು ಹೆಚ್ಚುತ್ತಾ ಹೋಗಿರುತ್ತದೆ. ಇವುಗಳಿಂದಲೇ ಕರ್ಮೇಂದ್ರಿಯಗಳೂ ಬುದ್ಧೀಂದ್ರಿಯಗಳೂ ಮನಸ್ಸೂ ಆಗಿರುತ್ತದೆ"–ಎಂದು ಬರೆದಿರುತ್ತದೆ. ಇಲ್ಲಿ ವ್ಯಾಖ್ಯಾನಕಾರರು (ಪ್ರ. ವ್ಯಾ. ಪು. ೭೧, ೭೯) "ಇಲ್ಲಿ ಹಿರಣ್ಯಗರ್ಭಸೃಷ್ಟಿ ಎಂದರೆ ಹಿರಣ್ಯಗರ್ಭನಿಗೆ ಉಪಾಧಿಯಾದ ಸಮಷ್ಟಿಪ್ರಾಣವು. ಸೂಕ್ಷ್ಮಭೂತಗಳಾದಮೇಲೆ ಪ್ರಾಣವನ್ನೂ ಆ ಬಳಿಕ ಪಂಚೀಕೃತವಾದ ಭೂತಗಳನ್ನೂ ಸೃಷ್ಟಿ ಮಾಡಿದನು ಎಂದು ಭಾಷ್ಯಕ್ಕೆ ಅರ್ಥವನ್ನು ಕಲ್ಪಿಸಬೇಕು ಹಾಗಿಲ್ಲದಿದ್ದರೆ ಭೂತಗಳ ಕಾರ್ಯವಾದ ಪ್ರಾಣವು ಭೂತಗಳಿಗಿಂತ ಮೊದಲೇ ಸೃಷ್ಟವಾಯಿತೆಂದು ಭಾಷ್ಯಕಾರರು ವಿರುದ್ಧೋಕ್ತಿಯನ್ನು ಆಡಿದವರಾಗುವರು. ಹಾಗಾದರೆ ಸ್ಥೂಲಭೂತಗಳಾದ ಮೇಲೆ ಇಂದ್ರಿಯಮನಸ್ಸುಗಳ ಸೃಷ್ಟಿಯನ್ನು ಹೇಳಿದಂತಾಗಿ ವಿರುದ್ಧವಚನವಾಗುವದಿಲ್ಲವೆ? ಎಂದರೆ ಪಂಚಭೂತಗಳಿಂದಾಗುವ ಶರೀರವನ್ನು ಆಶ್ರಯಿಸಿಕೊಂಡೇ ಇಂದ್ರಿಯಮನಸ್ಸುಗಳು ಕೆಲಸಮಾಡಬೇಕಾಗಿರುವದರಿಂದ ಹೀಗೆ ಕ್ರಮವನ್ನು ಹೇಳಿದೆ ಎಂದು ತಿಳಿಯಬೇಕು" ಎಂಬರ್ಥದ ವಾಕ್ಯಗಳನ್ನು ಬರೆದಿರುತ್ತಾರೆ.

ಈ ಎರಡು ವ್ಯಾಖ್ಯಾನಗಳೂ ಒಂದಕ್ಕೊಂದು ವಿರುದ್ಧವಾಗಿರುವವೆಂಬುದನ್ನು ವಾಚಕರು ಮೊದಲು ಮನದಂದುಕೊಳ್ಳಬೇಕು. ಮುಂಡಕವ್ಯಾಖ್ಯಾನದಲ್ಲಿ ಭಾಷ್ಯವು ಪಂಚೀಕರಣಪ್ರಕ್ರಿಯೆಗೆ ವಿರುದ್ಧವಾಗಿದೆ ಎಂದು ಕಂಠೋಕ್ತವಾಗಿ ಹೇಳಿರುತ್ತದೆ;

ಪ್ರಶ್ನವ್ಯಾಖ್ಯಾನದಲ್ಲಿ ಪಂಚೀಕರಣಕ್ಕೆ ಅನುಗುಣವಾಗಿಯೇ ಭಾಷ್ಯಕ್ಕೆ ಅರ್ಥವನ್ನು ಮಾಡಿರುತ್ತದೆ. ಉಪನಿಷತ್ತಿನ ಶಾಂಕರಭಾಷ್ಯವನ್ನು ಗ್ರಂಥಾಂತರದ ಶಾಂಕರ ಭಾಷ್ಯಕ್ಕೆ ಹೋಲಿಸಿ ಏಕವಾಕ್ಯತೆಯನ್ನು ಕಲ್ಪಿಸುವ ಪ್ರಯತ್ನವು ಈ ಎರಡು ವ್ಯಾಖ್ಯಾನಗಳಲ್ಲಿಯೂ ಕಂಡುಬರುವದಿಲ್ಲ.

ಸೃಷ್ಟಿಯನ್ನು ಪ್ರತಿಪಾದಿಸಿರುವದರಲ್ಲಿ ಶ್ರುತಿಗೆ ಪರಮತಾತ್ಪರ್ಯವಿಲ್ಲವೆಂದು ಭಾಷ್ಯಕಾರರೂ ಬರೆದಿರುತ್ತಾರಾದರೂ ಆಕಾಶಾದಿಸೃಷ್ಟಿವಚನಗಳೂ ಪರಸ್ಪರವಿರುದ್ಧ ವಲ್ಲವೆಂದು ಬಾದರಾಯಣರು ತೋರಿಸಿಕೊಟ್ಟಿರುತ್ತಾರೆಂದೂ (ಸೂ. ಭಾ. ೧-೪-೧೪) ಶ್ರುತಿಗಳು ಪರಸ್ಪರವಿರುದ್ಧವಾಗಿರುವದರಿಂದ ಅವೈದಿಕರ ಪಕ್ಷಗಳಂತೆ ವೇದಾಂತಿಗಳ ಪಕ್ಷವೂ ಅಪ್ರಮಾಣವೆಂಬ ಶಂಕೆಯನ್ನು ಪರಿಹರಿಸುವದಕ್ಕಾಗಿ (ಸೂ. ಭಾ. ೨-೩-೧) ಅವರು ಸೃಷ್ಟಿಕ್ರಮವನ್ನು ಅಂಗೀಕರಿಸಿರುತ್ತಾರೆಂದೂ ಸೂತ್ರಭಾಷ್ಯದಲ್ಲಿ ಅವರು ವಿವರಿಸಿರುತ್ತಾರಾದ್ದರಿಂದಲೂ ಭಾಷ್ಯಗತಸೃಷ್ಟಿವಾಕ್ಯಗಳನ್ನೂ ಸಮರಸವಾಗಿ ಮಾಡಿ ಕೊಳ್ಳುವದು ಅವಶ್ಯವಾಗಿರುತ್ತದೆ.

ಈ ದೃಷ್ಟಿಯಿಂದ ನೋಡುವಾಗ ತೋರುವದೇನೆಂದರೆ, ಮುಂಡಕಭಾಷ್ಯದಲ್ಲಿ (೧-೧-೮ ಭಾ. ಭಾ. ೨೨) ಜಗತ್ಸೃಷ್ಟಿಯ ಕ್ರಮವನ್ನು ಹೇಳುವದಕ್ಕೇ ಶ್ರುತಿಯು ಬಂದಿರುವದೆಂಬ ಸ್ಪಷ್ಟೋಕ್ತಿಯಿದೆ. ಅಲ್ಲಿ ಅವ್ಯಾಕೃತದಿಂದ ಪ್ರಾಣ ಅಥವಾ ಹಿರಣ್ಯ ಗರ್ಭ, ಹಿರಣ್ಯಗರ್ಭನಿಂದ ಮನಸ್ಸು, ಮನಸ್ಸಿನಿಂದ ಆಕಾಶಾದಿಭೂತಪಂಚಕ, ಆಬಳಿಕ ಅಂಡಕ್ರಮದಿಂದ ಭೂರಾದಿಲೋಕಗಳು–ಹೀಗೆ ಒಂದರಿಂದ ಒಂದು ಆದವು ಎಂದು ಹೇಳಿರುತ್ತದೆ. ಇದರಂತೆಯೇ ಪ್ರಶ್ನಭಾಷ್ಯದಲ್ಲಿಯೂ (ಪ್ರ. ೬-೩, ಭಾ. ಭಾ. ೯೯) ಪ್ರಾಣಾದಿಕಲೆಗಳ ಸೃಷ್ಟಿಕ್ರಮವನ್ನು ಶ್ರುತಿಯಲ್ಲಿ ಹೇಳಿದೆಯೆಂದೇ ಬರೆದಿರುತ್ತದೆ. ಅಲ್ಲಿ ಹಿರಣ್ಯಗರ್ಭ, ಶ್ರದ್ಧೆ, ಪಂಚಭೂತಗಳು, ಇಂದ್ರಿಯಗಳು, ಮನಸ್ಸು— ಹೀಗೆ ಸೃಷ್ಟಿಯಾಯಿತೆಂದು ವರ್ಣಿಸಿರುತ್ತದೆ. ಇವೆರಡು ಶ್ರುತಿಗಳಿಗೂ ಏಕವಾಕ್ಯತೆ ಯಾಗುವದು ಕಷ್ಟ; ಏಕೆಂದರೆ ಮುಂಡಕದಲ್ಲಿ ಮನಸ್ಸಿನಿಂದ ಭೂತಪಂಚಕವಾಯಿ ತೆಂದಿದೆ, ಪ್ರಶ್ನದಲ್ಲಿ ಭೂತಗಳಿಂದ ಇಂದ್ರಿಯವೂ ಮನಸ್ಸೂ ಆಯಿತೆಂದಿದೆ. ಈ ವಿರೋಧಕ್ಕೆ ನಮಗೆ ತೋರುವ ಪರಿಹಾರವೇನೆಂದರೆ, ಮುಂಡಕದಲ್ಲಿ ಹೇಳಿರುವ ಮನಸ್ಸು ಸಮಷ್ಟ್ಯುಪಾಧಿಯು; ಇದನ್ನು ಶ್ರದ್ಧೆಯೆಂಬ ಮಾತಿನಿಂದಲೇ ಉಪಲಕ್ಷಣ ವಾಗಿ ಪ್ರಶ್ನದಲ್ಲಿ ಹೇಳಿರುತ್ತದೆ. ಪ್ರಶ್ನದಲ್ಲಿ ಹೇಳಿರುವ ಮನಸ್ಸೂ ಇಂದ್ರಿಯಗಳೂ ಭೂತಗಳಿಂದ ಉಂಟಾಗುವ ವ್ಯಷ್ಟಿಗಳು. ಹೀಗೆ ಅರ್ಥವನ್ನು ಮಾಡಿದರೆ ಸೂತ್ರ ಭಾಷ್ಯದಲ್ಲಿ ಹೇಳಿರುವ (ಸೂ. ಭಾ. ೨-೩-೧೫) ಭೌತಿಕಕರಣಗಳು, ಅಭೌತಿಕಕರಣ ಗಳು-ಎಂಬ ವಿಕಲ್ಪಕ್ಕೂ ಬೃಹದಾರಣ್ಯಕಭಾಷ್ಯದಲ್ಲಿ (೧-೨-೧, ೨೨) ಹೇಳಿರುವ ಮನಸ್ಸು ಮತ್ತು ಭೂತಸೃಷ್ಟಿ, ಅಂಡೋತ್ಪತ್ತಿ-ಈ ಕ್ರಮಕ್ಕೂ ಹೊಂದುಗಡೆಯಾಗುವ ದೆಂದು ಹೇಳಬಹುದು. ಮುಂಡಕ (೨-೧-೩), ಪ್ರಶ್ನ (೬-೪), ತೈತ್ತಿರೀಯ (೨-೧)-

ಈ ಭಾಷ್ಯಗಳಲ್ಲಿಯೂ ಆಕಾಶಾದಿಯಾಗಿ ಭೂತಗಳಲ್ಲಿ ಒಂದೊಂದು ಗುಣವು ಹೆಚ್ಚುತ್ತಾಹೋಗಿ ಪೃಥ್ವಿಯಲ್ಲಿ ಐದು ಗುಣಗಳಿರುವವೆಂದು ಹೇಳಿರುವದು ಸೂಕ್ಷ್ಮ ಭೂತಗಳ ವಿಷಯವೇ ಎಂದೂ ಅವುಗಳಿಂದ ಪಂಚೀಕೃತವಾದ ಭೂತಗಳುಂಟಾಗುವಾಗ ಒಂದೊಂದು ಸ್ಥೂಲಭೂತದಲ್ಲಿಯೂ ಐದು ಗುಣಗಳೂ ಇರುವವೆಂದೂ ಕಲ್ಪಿಸಿದರೆ ಛಾಂದೋಗ್ಯದಲ್ಲಿ ಭಾಷ್ಯಕಾರರು (೬-೩-೩, ೪) ಹೇಳಿರುವ ಪಂಚೀಕರಣಕ್ಕೂ ವಿರೋಧವಾಗುವದಿಲ್ಲವೆಂದು ತೋರುತ್ತದೆ. ಇಲ್ಲಿ ನಾವು ಕಲ್ಪಿಸಿರುವ ಏಕವಾಕ್ಯತಾ ಪ್ರಕ್ರಿಯೆಯಲ್ಲಿರುವ ಗುಣದೋಷಗಳನ್ನು ನಿರ್ಣಯಿಸುವ ಭಾರವನ್ನು ತತ್ತ್ವವಿಮರ್ಶಕರಾದ ವಿದ್ವಾಂಸರಿಗೆ ಬಿಟ್ಟುಬಿಟ್ಟು ಈ ಪೀಠಿಕೆಯನ್ನು ಇಲ್ಲಿಗೆ ಮುಗಿಸುತ್ತೇವೆ.

ಯ. ಸುಬ್ರಹ್ಮಣ್ಯಶರ್ಮ.

# ಸಂಕೇತಾಕ್ಷರಗಳ ವಿವರಣೆ

| | | |
|---|---|---|
| ಅ ವೇ. | .... | ಅಥರ್ವವೇದ |
| ಋ. ವೇ. | .... | ಋಗ್ವೇದ |
| ಕೌ. | ... | ಕೌಷೀತಕೀ ಬ್ರಾಹ್ಮಣೋಪನಿಷತ್ತು |
| ತೈ. ಆ. | .... | ತೈತ್ತಿರೀಯಾರಣ್ಯಕ |
| ಮಾಂ. ಕಾ. | .... | ಮಾಂಡೂಕ್ಯಕಾರಿಕಾ |
| ಯಾ. ಸ್ಮೃ. | .... | ಯಾಜ್ಞವಲ್ಕ್ಯಸ್ಮೃತಿ |

**ವಿಶೇಷ :**—ಉಪನಿಷತ್ತುಗಳು, ಗೀತೆ, ಸೂತ್ರ-ಇವನ್ನೂ ಇವುಗಳ ಭಾಷ್ಯಗಳನ್ನೂ ಆಯಾ ಆದ್ಯಾಕ್ಷರಗಳಿಂದ ತಿಳಿಸಿದೆ. ಉದಾ : ತೈ = ತೈತ್ತಿರೀಯಭಾಷ್ಯ. ಇಲ್ಲಿ ಕೊಡದೆ ಇರುವ ಮಿಕ್ಕ ಸಂಕೇತಗಳನ್ನು ಮುಂಡಕೋಪನಿಷತ್ತಿನಲ್ಲಿ ಕೊಟ್ಟಿರುವ ವಿವರಣೆಯಂತೆ ಅರಿಯಬೇಕು.

# ವಿಷಯಾನುಕ್ರಮಣಿಕೆ

## ಭಾಷ್ಯಕಾರರ ಅವತರಣಿಕೆ

## ಒಂದನೆಯ ಪ್ರಶ್ನೆ



## ಎರಡನೆಯ ಪ್ರಶ್ನೆ



## ಮೂರನೆಯ ಪ್ರಶ್ನೆ



## ನಾಲ್ಕನೆಯ ಪ್ರಶ್ನೆ



## ಐದನೆಯ ಪ್ರಶ್ನೆ

## ಆರನೆಯ ಪ್ರಶ್ನೆ

ಓಂ

**ಶ್ರೀ ಶಾಂಕರಭಾಷ್ಯಸಮೇತ**

# ಪ್ರಶ್ನೋಪನಿಷತ್ತು

---

## ಭಾಷ್ಯಕಾರರ ಅವತರಣಿಕೆ

---

**(ಭಾಷ್ಯ)**

೧. ಮನ್ತ್ರೋಕ್ತಸ್ಯಾರ್ಥಸ್ಯ ವಿಸ್ತರಾನುವಾದಿ ಇದಂ ಬ್ರಾಹ್ಮಣಮ್ ಆರಭ್ಯತೇ । ಋಷಿಪ್ರಶ್ನಪ್ರತಿವಚನಾಖ್ಯಾಯಿಕಾ ತು ವಿದ್ಯಾಸ್ತುತಯೇ । ಏವಂ ಸಂವತ್ಸರ ಬ್ರಹ್ಮಚರ್ಯಸಂವಾಸಾದಿಯುಕ್ತೈಃ ತಪೋಯುಕ್ತೈರ್ಗ್ರಾಹ್ಯಾ[1] ಪಿಪ್ಪಲಾದವತ್[2] ಸರ್ವಜ್ಞಕಲ್ಪೈರಾಚಾರ್ಯೈರ್ವಕ್ತವ್ಯಾ ಚ ನ[3] ಯೇನ ಕೇನಚಿದಿತಿ ವಿದ್ಯಾಂ ಸ್ತೌತಿ। ಬ್ರಹ್ಮಚರ್ಯಾದಿಸಾಧನಸೂಚನಾಚ್ಚ ತತ್ಕರ್ತವ್ಯತಾ ಸ್ಯಾತ್ ॥

**(ಭಾಷ್ಯಾರ್ಥ)**

**ಮಂತ್ರ**ದಲ್ಲಿ ಹೇಳಿದ ವಿಷಯವನ್ನು ವಿಸ್ತಾರವಾಗಿ ತಿರುಗಿ ಹೇಳುವ **ಈ ಬ್ರಾಹ್ಮಣವನ್ನು**[4] ಪ್ರಾರಂಭಿಸಿರುತ್ತದೆ. ಋಷಿಗಳು ಕೇಳಿದಂತೆಯೂ (ಪಿಪ್ಪಲಾದನು ಅದಕ್ಕೆ) ಉತ್ತರಕೊಟ್ಟಂತೆಯೂ ಕಥೆಯನ್ನು ಬರೆದಿರುವದು ವಿದ್ಯೆಯನ್ನು ಹೊಗಳುವದಕ್ಕೆ. ಹೀಗೆ[5] (ಒಂದು) ವರ್ಷ ಬ್ರಹ್ಮಚರ್ಯ (ಗುರುಕುಲ) ವಾಸದಿಂದ ಕೂಡಿ ತಪಸ್ಸಿನಿಂದ ಕೂಡಿರುವವರು ಮಾತ್ರ[6] ಇದನ್ನು ತಿಳಿಯುವದಕ್ಕಾಗು

---

1. " ಸಂವತ್ಸರಬ್ರಹ್ಮಚರ್ಯಸಂವಾಸಾದಿತಪೋಯುಕ್ತೈಃ " ಎಂದು ವಾ॥ ಪಾಠ.

2. " ಪಿಪ್ಪಲಾದಾದಿವತ್ '' ಎಂಬ ಆ॥ ಪಾಠದಲ್ಲಿ ' ಆದಿ ' ಹೆಚ್ಚು.

3. " ನ ಸಾ '' ಎಂಬ ಆ॥ ಪಾಠದಲ್ಲಿ ' ಸಾ ' ಹೆಚ್ಚು.

4. ಮುಂಡಕವನ್ನು ಮಂತ್ರವೆಂದೂ ಪ್ರಶ್ನೋಪನಿಷತ್ತನ್ನು ಬ್ರಾಹ್ಮಣವೆಂದೂ, ಇಟ್ಟುಕೊಂಡಿದೆ.

5. ಸುಕೇಶಾದಿಗಳಂತೆ.

6. ಒಂದನೆಯ ಪ್ರಶ್ನದ ಎರಡನೆಯ ಮಂತ್ರದಲ್ಲಿ ತಪಸ್ಸು, ಬ್ರಹ್ಮಚರ್ಯ, ಶ್ರದ್ಧೆ-ಇವುಗಳಿಂದಕೂಡಿ ಗುರುಕುಲದಲ್ಲಿರಬೇಕೆಂದು ಹೇಳಿದೆ.

ತ್ತದೆ; **ಪಿಪ್ಪಲಾದನಂತೆ** ಸರ್ವಜ್ಞರಂತಿರುವ ಆಚಾರ್ಯರಿಂದ **ಮಾತ್ರ** ಇದನ್ನು ಹೇಳುವದಕ್ಕಾಗುತ್ತದೆಯೇ ಹೊರತು ಯಾರೆಂದರೆ ಅವರು[1] (ಹೇಳುವದಕ್ಕೂ ಅರಿತುಕೊಳ್ಳುವದಕ್ಕೂ ಆಗಲಾರದು) ಎಂದು ವಿದ್ಯೆಯನ್ನು ಇಲ್ಲಿ ಹೊಗಳಿದೆ.[2] ಬ್ರಹ್ಮಚರ್ಯವೇ ಮುಂತಾದ ಸಾಧನಗಳನ್ನು ಸೂಚಿಸಿರುವದರಿಂದ **ಅವನ್ನು ಮಾಡಬೇಕೆಂದು**[3] (ವಿಧಿಸಿದಂತೆಯೂ) ಆಗುವದು.



# ಒಂದನೆಯ ಪ್ರಶ್ನೆ

## ಸುಕೇಶಾದಿಗಳ ಗುರೂಪಸತ್ತಿ

**ಸುಕೇಶಾ ಚ ಭಾರದ್ವಾಜಃ ಶೈಬ್ಯಶ್ಚ ಸತ್ಯಕಾಮಃ ಸೌರ್ಯಾಯಣೀ ಚ ಗಾರ್ಗ್ಯಃ ಕೌಸಲ್ಯಶ್ಚಾಶ್ವಲಾಯನೋ ಭಾರ್ಗವೋ ವೈದರ್ಭಿಃ ಕಬನ್ಧೀ ಕಾತ್ಯಾಯನಸ್ತೇ ಹೈತೇ ಬ್ರಹ್ಮಪರಾ ಬ್ರಹ್ಮನಿಷ್ಠಾಃ ಪರಂ ಬ್ರಹ್ಮಾನ್ವೇಷಮಾಣಾ ಏಷ ಹ ವೈ ತತ್ ಸರ್ವಂ ವಕ್ಷ್ಯತೀತಿ ತೇ ಹ ಸಮಿತ್ಪಾಣಯೋ ಭಗವನ್ತಂ ಪಿಪ್ಪಲಾದಮುಪಸನ್ನಾಃ ॥ ೧ ॥**

೧. ಸುಕೇಶಭಾರದ್ವಾಜನೂ ಶೈಬ್ಯಸತ್ಯಕಾಮನೂ ಸೌರ್ಯಾಯಣಿ ಗಾರ್ಗ್ಯನೂ ಕೌಸಲ್ಯ ಆಶ್ವಲಾಯನನೂ ಭಾರ್ಗವವೈದರ್ಭಿಯೂ ಕಬಂಧಿಕಾತ್ಯಾಯನನೂ—ಆ ಇವರು ಬ್ರಹ್ಮಪರರಾಗಿ ಬ್ರಹ್ಮನಿಷ್ಠರಾಗಿದ್ದರು. ಪರಬ್ರಹ್ಮವನ್ನು ಹುಡುಕಿಕೊಂಡು “ಈತನೇ ಅದೆಲ್ಲವನ್ನೂ ಹೇಳುವನು” ಎಂದು ಅವರು ಸಮಿತ್ಪಾಣಿಗಳಾಗಿ ಭಗವಂತನಾದ ಪಿಪ್ಪಲಾದನ ಬಳಿಗೆ ಬಂದರು.

---

1. ಸಾಧನರಹಿತರು ಇದನ್ನು ಅರಿತುಕೊಳ್ಳಲಾರರು. ಸತ್ಯ, ತಪಸ್ಸು, ಬ್ರಹ್ಮಚರ್ಯ—ಇವುಗಳನ್ನು ಮುಂ. ೩-೧-೫ ರಲ್ಲಿ ವಿಧಿಸಿರುವದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು.

2. ಗುರುಶಿಷ್ಯರನ್ನು ಹೇಳಿರುವದು ವಿದ್ಯೆಯನ್ನು ಹೊಗಳುವದಕ್ಕೆ. ಮುಂ. ಭಾ. ಸಂಬಂಧ ಭಾ. ಭಾ. ೧ ನ್ನು ನೋಡಿ.

3. ವಿದ್ಯೆಯನ್ನು ಹೊಗಳುವದಕ್ಕಾಗಿ ಬ್ರಹ್ಮಚರ್ಯಾದಿಗಳನ್ನು ಹೇಳಿದ್ದರೂ ಅವನ್ನು ಅವಶ್ಯವಾಗಿ ಮಾಡಬೇಕೆಂದು ಶ್ರುತಿಯ ಅಭಿಪ್ರಾಯ.

(ಭಾಷ್ಯ)

೨. ಸುಕೇಶಾ ಚ ನಾಮತಃ, ಭರದ್ವಾಜಸ್ಯ ಅಪತ್ಯಂ ಭಾರದ್ವಾಜಃ । ಶೈಬ್ಯಶ್ಚ ಶಿಬೇರಪತ್ಯಂ ಶೈಬ್ಯಃ, ಸತ್ಯಕಾಮೋ ನಾಮತಃ । ಸೌರ್ಯಾಯಣೀ । ಸೂರ್ಯಸ್ಯ ಅಪತ್ಯಂ ಸೌರ್ಯಃ । ತಸ್ಯ ಅಪತ್ಯಂ ಸೌರ್ಯಾಯಣಿಃ। ಛಾನ್ದಸಃ[1] ಸೌರ್ಯಾಯಣೀ ಇತಿ। ಗಾರ್ಗ್ಯಃ ಗರ್ಗಗೋತ್ರೋತ್ಪನ್ನಃ। ಕೌಸಲ್ಯಶ್ಚ ನಾಮತಃ, ಅಶ್ವಲಸ್ಯ ಅಪತ್ಯಮ್ ಆಶ್ವಲಾಯನಃ । ಭಾರ್ಗವಃ ಭೃಗೋರ್ಗೋತ್ರಾಪತ್ಯಂ ಭಾರ್ಗವಃ ವೈದರ್ಭಿಃ ವಿದರ್ಭೇ (ಷು) ಭವಃ । ಕಬನ್ಧೀ ನಾಮತಃ, ಕಾತ್ಯಸ್ಯ ಅಪತ್ಯಂ ಕಾತ್ಯಾಯನಃ ವಿದ್ಯಮಾನಃ ಪ್ರಪಿತಾಮಹಃ ಯಸ್ಯ ಸಃ । ಯುವಪ್ರತ್ಯಯಃ । ತೇ ಹ ಏತೇ ಬ್ರಹ್ಮಪರಾಃ ಅಪರಂ ಬ್ರಹ್ಮ ಪರತ್ವೇನ ಗತಾಃ ! ತದನುಷ್ಠಾನನಿಷ್ಠಾಶ್ಚ ಬ್ರಹ್ಮನಿಷ್ಠಾಃ। ಪರಂ ಬ್ರಹ್ಮ ಅನ್ವೇಷಮಾಣಾಃ ಕಿಂ ತತ್ ಯನ್ನಿತ್ಯಂ ವಿಜ್ಞೇಯಮ್ ಇತಿ ತತ್ಪ್ರಾಪ್ತ್ಯರ್ಥಂ ಯಥಾಕಾಮಂ ಯತಿಷ್ಯಾಮಃ ಇತ್ಯೇವಂ ತದನ್ವೇಷಣಂ ಕುರ್ವನ್ತಃ । ತದಧಿಗಮಾಯ ಏಷ ಹ ವೈ ತತ್ ಸರ್ವಂ ವಕ್ಷ್ಯತಿ ಇತಿ ಆಚಾರ್ಯಮ್ ಉಪಜಗ್ಮುಃ । ಕಥಮ್ ? ತೇ ಹ ಸಮಿತ್ಪಾಣಯಃ ಸಮಿದ್ಭಾರಗೃಹೀತಹಸ್ತಾಃ ಸನ್ತಃ ಭಗವನ್ತಂ ಪೂಜಾವನ್ತಂ ಪಿಪ್ಪಲಾದಮ್ ಆಚಾರ್ಯಮ್ ಉಪಸನ್ನಾಃ ಉಪಜಗ್ಮುಃ ॥

(ಭಾಷ್ಯಾರ್ಥ)

(“ ಸುಕೇಶಭಾರದ್ವಾಜನು ” ಎಂಬಲ್ಲಿ) ಸುಕೇಶನೆಂಬುದು ಹೆಸರು, ಭರದ್ವಾಜನ ಮಗನಾದ್ದರಿಂದ ಭಾರದ್ವಾಜನು (ಎಂದು ಕರೆದಿದೆ)[2]. (ಹೀಗೆಯೇ) ಶೈಬ್ಯ (ಸತ್ಯಕಾಮ) ನೂ ಎಂಬಲ್ಲಿ ಶಿಬಿಯ ಮಗನಾದ್ದರಿಂದ ಶೈಬ್ಯನು ; ಸತ್ಯಕಾಮನೆಂಬುದು ಹೆಸರು. (ಸೌರ್ಯಾಯಣಿ ಗಾರ್ಗ್ಯನೂ ಎಂಬಲ್ಲಿ) ಸೂರ್ಯನ ಮಗನು ಸೌರ್ಯನು ; ಅವನ ಮಗನು ಸೌರ್ಯಾಯಣಿಯು ; (“ ಸೌರ್ಯಾಯಣಿ” ಎಂಬುದಕ್ಕೆ ಬದಲು) ಸೌರ್ಯಾಯಣೀ ಎಂದು (ಉಪನಿಷತ್ತಿನಲ್ಲಿ ಪ್ರಯೋಗಿಸಿರುವದು) ವೈದಿಕರೂಪವು. ಗಾರ್ಗ್ಯನು ಎಂದರೆ ಗರ್ಗಗೋತ್ರದಲ್ಲಿ ಹುಟ್ಟಿದವನು. (ಕೌಸಲ್ಯ ಆಶ್ವಲಾಯನನೂ ಎಂಬಲ್ಲಿ) ಕೌಸಲ್ಯನೆಂಬುದು ಹೆಸರು ; (ಇವನು) ಆಶ್ವಲಾಯನನು, ಎಂದರೆ ಅಶ್ವಲನ ಮಗನು. (“ ಭಾರ್ಗವ ವೈದರ್ಭಿಯು ” ಎಂಬಲ್ಲಿ) ಭಾರ್ಗವನು ಎಂದರೆ ಭೃಗುವಿನ ಗೋತ್ರದಲ್ಲಿ ಹುಟ್ಟಿದವನು ; (ಇವನು) ವೈದರ್ಭಿಯು ಎಂದರೆ ವಿದರ್ಭದೇಶದಲ್ಲಿರುವವನು. (“ ಕಬಂಧಿಕಾತ್ಯಾಯನನೂ ” ಎಂಬಲ್ಲಿ,) ಕಬಂಧಿ ಎಂಬುದು ಹೆಸರು ;

---

1. “ ಛಾನ್ದಸಮ್ ” ವಾ॥ ಪಾಠ.

2. ‘ ಭಾರದ್ವಾಜ ’ ಮುಂತಾದ ಶಬ್ದಗಳಲ್ಲಿ ಸೇರಿಕೊಂಡಿರುವ ಅಪತ್ಯ (ಮಗ ಎಂಬರ್ಥದ) ತದ್ಧಿತಪ್ರತ್ಯಯಗಳನ್ನು ಇಲ್ಲಿ ವ್ಯಾಕರಣರೀತಿಯಿಂದ ವಿವರಿಸಿದೆ.

(ಇವನು) ಕಾತ್ಯನ ಮಗನಾದ್ದರಿಂದ ಕಾತ್ಯಾಯನನು. (ಇವನ) ಮುತ್ತಜ್ಜನು ಬದುಕಿ (ದ್ದಾನೆಂಬುದನ್ನು ಸೂಚಿಸುವದಕ್ಕೆ) ಯುವ ಪ್ರತ್ಯಯವು[1] ಬಂದಿರುತ್ತದೆ.

ಆ ಇವರು (ಆರು ಜನವೂ) ಬ್ರಹ್ಮಪರರಾಗಿ ಎಂದರೆ ಅಪರಬ್ರಹ್ಮವನ್ನು (ಎಲ್ಲಕ್ಕೂ) ಹೆಚ್ಚಿನದೆಂಬ (ಬುದ್ಧಿಯುಳ್ಳ) ವರಾಗಿ, ಬ್ರಹ್ಮನಿಷ್ಠರಾಗಿದ್ದರು ಎಂದರೆ ಅದರ ಅನುಷ್ಠಾನದಲ್ಲಿಯೇ[2] ತಾತ್ಪರ್ಯವುಳ್ಳವರಾಗಿದ್ದರು. ಪರಬ್ರಹ್ಮವನ್ನು ಹುಡುಕಿ ಕೊಂಡು ಯಾವದು ನಿತ್ಯವೂ ವಿಜ್ಞೇಯವಾಗಿರುವದೋ[3] ಅದು ಯಾವದು ? ಎಂದು ಅದನ್ನು ಪಡೆದುಕೊಳ್ಳುವದಕ್ಕೋಸ್ಕರ ತಮ್ಮತಮ್ಮ ಕೈಯ್ಯಲ್ಲಾದವುಟ್ಟಿಗೆ ಪ್ರಯತ್ನ ಮಾಡೋಣ ಎಂದೀ ಪರಿಯಲ್ಲಿ ಅದನ್ನು ಅರಿಸಿಕೊಂಡು ಅದನ್ನು ತಿಳಿಯುವದ ಕ್ಕೋಸ್ಕರ "ಈತನೇ ಅದೆಲ್ಲವನ್ನೂ ಹೇಳುವನು" ಎಂದು ಆಚಾರ್ಯನಬಳಿಗೆ ಬಂದರು.[4] ಹೇಗೆ (ಬಂದರು)? ಎಂದರೆ ಅವರು ಸಮಿತ್ಪಾಣಿಗಳಾಗಿ ಕೈಯ್ಯಲ್ಲಿ ಸಮಿತ್ತಿನ ಕಟ್ಟನ್ನು ಹಿಡಿದುಕೊಂಡು ಭಗವಂತನಾದ ಗೌರವಕ್ಕೆ ಯೋಗ್ಯನಾದ **ಪಿಪ್ಪಲಾದ**ನೆಂಬ ಆಚಾರ್ಯನ ಬಳಿಗೆ ಬಂದರು. (ಆತನ ಶಿಷ್ಯರಾಗಿ) ಬಳಿ ಸಾರಿದರು.

**ತಾನ್ ಹ ಸ ಋಷಿರುವಾಚ ಭೂಯ ಏವ ತಪಸಾ ಬ್ರಹ್ಮ ಚರ್ಯೇಣ ಶ್ರದ್ಧಯಾ ಸಂವತ್ಸರಂ ಸಂವತ್ಸ್ಯಥ ಯಥಾಕಾಮಂ ಪ್ರಶ್ನಾನ್ ಪೃಚ್ಛತ ಯದಿ ವಿಜ್ಞಾಸ್ಯಾಮಃ ಸರ್ವಂ ಹ ವೋ ವಕ್ಷ್ಯಾಮ ಇತಿ ॥ ೨ ॥**

೨. ಆ ಋಷಿಯು ಅವರನ್ನು ಕುರಿತು "ಮತ್ತೂ ಒಂದು ವರ್ಷ ತಪಸ್ಸಿನಿಂದ, ಬ್ರಹ್ಮಚರ್ಯೆಯಿಂದ, ಶ್ರದ್ಧೆಯಿಂದ ಕೂಡಿ ಸಂವಾಸಮಾಡಿ ಕೊಂಡಿರಿ. (ಆಮೇಲೆ ನಿಮಗೆ) ಇಚ್ಛೆಯಿರುವಂತೆ ಪ್ರಶ್ನೆಗಳನ್ನು ಕೇಳಿರಿ. (ನಮಗೆ) ತಿಳಿಯುವದಾದರೆ ಎಲ್ಲವನ್ನೂ ನಿಮಗೆ ಹೇಳುವೆವು" ಎಂದು ನುಡಿದನು.

---

1. ಕತನಗೋತ್ರದಲ್ಲಿ ಹುಟ್ಟಿದವನು ಕಾತ್ಯನು, ಅವನ ಮಗನು ಕಾತ್ಯಾಯನನು. ತಂದೆ ಮುಂತಾದವರು ಬದುಕಿರುವ 'ಮರಿಮಗ' ಮೊದಲಾದ ಅರ್ಥವನ್ನು ಸೂಚಿಸುವ ಪ್ರತ್ಯಯಕ್ಕೆ ಯುವಪ್ರತ್ಯಯವೆಂದು ಹೆಸರು. 'ಕತ್ಯ' ಎಂಬುದು 'ಕಾತ್ಯ' ಎಂಬುದರ ಬದಲು ಲೇಖಕರ ಕೈತಪ್ಪಿನಿಂದ ಬಿದ್ದಿರಬಹುದೆಂದು ತೋರುತ್ತದೆ

2. ಉಪಾಸನೆಯಲ್ಲಿಯೇ ನಿರತರಾಗಿದ್ದರು.

3. ಪರಮಾತ್ಮತತ್ತ್ವವು ಯಾವಾಗಲೂ ಜ್ಞೇಯವು; ಏಕೆಂದರೆ ಅದನ್ನು ಅರಿತು ಕೊಂಡರೆ ಎಲ್ಲವನ್ನೂ ಅರಿತುಕೊಂಡಂತೆ ಆಗುವದು. ಮುಂ. ಭಾ. ೧-೧-೩ (ಛಾ. ಭಾ. ೧೩), ಶ್ವೇ. ೧-೧೨.

4. ಗುರುವಿನ ಬಳಿಗೇ ಶಿಷ್ಯನಾಗಿ ಬಂದು ತತ್ತ್ವವನ್ನು ತಿಳಿದುಕೊಳ್ಳಬೇಕೆಂಬ ಮುಂಡಕದ ಸೂಚನೆ. ಮುಂ. ಭಾ. ೧-೧-೩, ೧-೨-೧೨ ನೋಡಿ.

(ಭಾಷ್ಯ)

೨. ತಾನ್ ಏವಮುಪಗತಾನ್ ಹ ಸ ಕಿಲ ಋಷಿಃ ಉವಾಚ । ಭೂಯಃ ಪುನರೇವ ಯದ್ಯಪಿ ಯೂಯಂ ಪೂರ್ವಂ ತಪಸ್ವಿನ ಏವ ತಥಾಪಿ ಇಹ ತಪಸಾ ಇನ್ದ್ರಿಯಸಂಯಮೇನ[1] ವಿಶೇಷತಃ ಬ್ರಹ್ಮಚರ್ಯೇಣ ಶ್ರದ್ಧಯಾ ಚ ಆಸ್ತಿಕ್ಯ ಬುದ್ಧ್ಯಾ ಆದರವನ್ತಃ ಸಂವತ್ಸರಂ ಕಾಲಂ ಸಂವತ್ಸ್ಯಥ ಸಮ್ಯಗ್ ಗುರುಶುಶ್ರೂಷಾ ಪರಾಃ ಸನ್ತಃ ವತ್ಸ್ಯಥ । ತತಃ ಯಥಾಕಾಮಂ ಯೋ ಯಸ್ಯ ಕಾಮಃ ತಮ್ ಅನತಿ ಕ್ರಮ್ಯ ಯದ್ವಿಷಯೇ ಯಸ್ಯ ಜಿಜ್ಞಾಸಾ ತದ್ವಿಷಯಾನ್ ಪ್ರಶ್ನಾನ್ ಪೃಚ್ಛತ । ಯದಿ ತದ್ ಯುಷ್ಮತ್ಪೃಷ್ಟಂ ವಿಜ್ಞಾಸ್ಯಾಮಃ । ಅನುದ್ಧತತ್ವಪ್ರದರ್ಶನಾರ್ಥೋ ಯದಿ ಶಬ್ದಃ ನಾಜ್ಞಾನಸಂಶಯಾರ್ಥಃ (ಇತಿ) ಪ್ರಶ್ನನಿರ್ಣಯಾತ್ ಅವಸೀಯತೇ । ಸರ್ವಂ ಹ ವಃ, ವಃ ಪೃಷ್ಟಂ ವಕ್ಷ್ಯಾಮಃ ॥

(ಭಾಷ್ಯಾರ್ಥ)

ಈರೀತಿಯಲ್ಲಿ (ತನ್ನ) ಬಳಿಗೆ ಬಂದ ಅವರನ್ನು ಕುರಿತು ಆ ಋಷಿಯು ನುಡಿದದ್ದೇನೆಂದರೆ: ನೀವು ಮೊದಲೇ ತಪಸ್ವಿಗಳೇ ಆಗಿದ್ದವರು; ಆದರೂ ಮತ್ತೊಮ್ಮೆ[2] ಇನ್ನೂ ಒಂದುಸಲ ಇದಕ್ಕಾಗಿ ಇಂದ್ರಿಯಗಳನ್ನು ತಡೆದುಕೊಳ್ಳುವದೆಂಬ **ತಪಸ್ಸಿನಿಂದಲೂ** ವಿಶೇಷವಾಗಿ[3] ಬ್ರಹ್ಮಚರ್ಯದಿಂದಲೂ ಶ್ರದ್ಧೆಯಿಂದಲೂ ಎಂದರೆ ಆಸ್ತಿಕ್ಯ ಬುದ್ಧಿಯಿಂದಲೂ ಕೂಡಿ ಆದರವುಳ್ಳವರಾಗಿ, (ಒಂದು) ವರ್ಷಕಾಲದವರೆಗೆ ಸಂವಾಸ ಮಾಡಿಕೊಂಡಿರಿ, ("ಸಂ") ಚೆನ್ನಾಗಿ ಗುರುಶುಶ್ರೂಷೆಯಲ್ಲಿಯೇ ತತ್ಪರರಾಗಿ ಇದ್ದುಕೊಂಡಿರಿ. ಆಮೇಲೆ ಇಚ್ಛೆಯಿರುವಂತೆ, ಯಾವನಿಗೆ ಯಾವ ಇಚ್ಛೆಯಿದೆಯೋ ಅದಕ್ಕೆ ತಕ್ಕಂತೆ, ಯಾವನಿಗೆ ಯಾವ ವಿಷಯದಲ್ಲಿ ತಿಳಿಯಬೇಕೆಂಬ ಇಚ್ಛೆಯುಂಟಾಗುವದೋ ಆಯಾ ವಿಷಯದ ಪ್ರಶ್ನೆಗಳನ್ನು ಕೇಳಿರಿ[4]. ಆ ನೀವು ಕೇಳಿದ್ದು ನಮಗೆ ತಿಳಿಯುವದಾದರೆ ; (ಇಲ್ಲಿ ತಿಳಿಯುವದಾದರೆ) ಎಂದು ಯದಿ (ರೆ) ಎಂಬ ಶಬ್ದವನ್ನು

1. "ತಪಸಾ ಇನ್ದ್ರಿಯಸಂಯಮೇನ" ಎಂಬ ಮಾತುಗಳನ್ನು 'ತಥಾಪಿ' ಎಂಬ ಮಾತಿನ ಹಿಂದೆ ಇಟ್ಟಿರುವ ಆ॥ ಪಾಠಕ್ಕಿಂತ ಈಗ ನಾವು ಒಪ್ಪಿರುವ ವಾ॥ ಪಾಠವೇ ಉತ್ತಮ.

2. ಮತ್ತೊಮ್ಮೆ ತಪಸ್ಸುಮಾಡಬೇಕೆಂದಿರುವದರಿಂದ ಹಿಂದೆ ಮಾಡಿರುವ ನಿರಾಹಾರವೇ ಮುಂತಾದ ತಪಸ್ಸಲ್ಲದೆ ಇಂದ್ರಿಯಗಳ ಮತ್ತು ಮನಸ್ಸಿನ ಐಕಾಗ್ರ್ಯವೆಂಬ ತಪಸ್ಸೂ ಈ ಜ್ಞಾನಕ್ಕೆ ಅವಶ್ಯವೆಂದು ಸೂಚಿಸಿದಂತೆ ಆಯಿತೆಂದು ಭಾವ.

3. ಇಂದ್ರಿಯಜಯವು ಸಾಮಾನ್ಯರೂಪವಾಗಿ ಹೇಳಿದ್ದು, ಬ್ರಹ್ಮಚರ್ಯವು ವಿಶೇಷ ರೂಪವಾಗಿ ಹೇಳಿದ್ದು.

4. ಮುಂ. ಭಾ. ೧-೨-೧೨, ಗೀ. ಭಾ. ೪-೩೪, ೪-೩೯. ಗುರುವಿನ ಬಳಿಯಲ್ಲಿ ಬ್ರಹ್ಮಚರ್ಯೆಯಿಂದ ದೀರ್ಘಕಾಲ ಆದರದಿಂದ ಸೇವೆಮಾಡುತ್ತಿದ್ದು ಬಳಿಕ ಕೇಳುವ ಪ್ರಶ್ನೆಗಳಿಗೆ ಬೆಲೆ ಹೆಚ್ಚು.

(ಪಯೋಗಿಸಿರುವದು) ತನಗೆ ಗರ್ವವಿಲ್ಲವೆಂಬುದನ್ನು ತೋರಿಸುವದಕ್ಕೇ ಹೊರತು (ತನಗೆ ವಿಷಯವು) ತಿಳಿಯದೆಂದಾಗಲಿ (ಆ ವಿಷಯದಲ್ಲಿ ತನಗೆ) ಸಂಶಯವುಂಟೆಂದಾಗಲಿ ತಿಳಿಸುವದಕ್ಕಲ್ಲ[1] ಎಂಬುದು ಪ್ರಶ್ನೆಗಳಿಗೆ ಉತ್ತರವನ್ನು ಗೊತ್ತಾಗಿ ಹೇಳಿರುವದರಿಂದ[2] ನಿಶ್ಚಯವಾಗುತ್ತದೆ. (ತಿಳಿಯುವದಾದರೆ) ನೀವು ಕೇಳುವದೆಲ್ಲವನ್ನೂ ನಿಮಗೆ ಹೇಳುವೆವು.

## ಕಬಂಧಿಯ ಪ್ರಶ್ನೆ: ಪ್ರಜೆಗಳು ಏತರಿಂದ ಹುಟ್ಟುತ್ತಾರೆ?

**ಅಥ ಕಬನ್ಧೀ ಕಾತ್ಯಾಯನ ಉಪೇತ್ಯ ಪಪ್ರಚ್ಛ ।**
**ಭಗವನ್ ಕುತೋ ಹ ವಾ ಇಮಾಃ ಪ್ರಜಾಃ ಪ್ರಜಾಯನ್ತ ಇತಿ ॥೩॥**

೩. ಆಮೇಲೆ ಕಬಂಧಿಕಾತ್ಯಾಯನನು ಸಮೀಪಕ್ಕೆ ಬಂದು ಕೇಳಿದನೇನೆಂದರೆ: ಭಗವಂತನೆ, ಈ ಪ್ರಜೆಗಳು ಎಲ್ಲಿಂದ ಹುಟ್ಟುತ್ತಾರೆ?

(ಭಾಷ್ಯ)

೪. ಅಥ ಸಂವತ್ಸರಾದೂರ್ಧ್ವಂ ಕಬನ್ಧೀ ಕಾತ್ಯಾಯನಃ ಉಪೇತ್ಯ ಉಪಗಮ್ಯ ಪಪ್ರಚ್ಛ ಪೃಷ್ಟವಾನ್ । ಹೇ ಭಗವನ್ ಕುತಃ ಕಸ್ಮಾತ್ ಹ ವೈ ಇಮಾಃ ಬ್ರಾಹ್ಮಣಾದ್ಯಾಃ ಪ್ರಜಾಃ ಪ್ರಜಾಯನ್ತೇ ಉತ್ಪದ್ಯನ್ತೇ ಇತಿ[3]। ಅಪರವಿದ್ಯಾಕರ್ಮಣೋಃ ಸಮುಚ್ಚಿತಯೋಃ ಯತ್ಕಾರ್ಯಂ ಯಾ ಗತಿಃ ತದ್ ವಕ್ತವ್ಯಮಿತಿ ತದರ್ಥೋಽಯಂ ಪ್ರಶ್ನಃ ॥

(ಭಾಷ್ಯಾರ್ಥ)

ಆಮೇಲೆ (ಒಂದು) ವರ್ಷವಾದ ಬಳಿಕ ಕಬಂಧಿಕಾತ್ಯಾಯನನು ಸಮೀಪಕ್ಕೆ ಬಂದು (ಗುರುವಿನ) ಬಳಿಗೆ ಬಂದು ಕೇಳಿದನು, (ಹೀಗೆ) ಪ್ರಶ್ನೆಮಾಡಿದನು. ಎಲೈ ಭಗವಂತನೆ, ಎಲ್ಲಿಂದ, ಯಾವಲ್ಲಿಂದ ಈ ಬ್ರಾಹ್ಮಣರೇ ಮುಂತಾದ ಪ್ರಜೆಗಳು[1] ಹುಟ್ಟುತ್ತಾರೆ, ಉಂಟಾಗುತ್ತಾರೆ?

---

1. ತಾನೇ ತಿಳಿಯದವನು ಅಥವಾ ಸಂಶಯವಿರುವವನು ಮತ್ತೊಬ್ಬರಿಗೆ ವಿಷಯವನ್ನು ತಿಳಿಸಲಾರನು.

2. ಪಿಪ್ಪಲಾದನು ಶಿಷ್ಯರ ಪ್ರಶ್ನೆಗಳಿಗೆಲ್ಲ ಉತ್ತರವನ್ನು ಹೇಳಿ, "ಇದಕ್ಕಿಂತ ಹೆಚ್ಚಿನದು ಯಾವದೂ ಇಲ್ಲ" (೬-೭) ಎಂದು ಸ್ಪಷ್ಟವಾಗಿ ಹೇಳಿದಾನೆ. ಆದ್ದರಿಂದ "ತಿಳಿಯುವದಾದರೆ" ಎಂಬುದು ಅನಹಂಕಾರವನ್ನು ಸೂಚಿಸುತ್ತದೆಯೇ ಹೊರತು ಅಜ್ಞಾನವನ್ನಲ್ಲ.

3. ಇತಿ ಎಂಬ ಮಾತು ಆ॥ ಪಾಠದಲ್ಲಿಲ್ಲ, ವಾ॥ ಪಾಠದಲ್ಲಿದೆ.

4. ಕರ್ಮದ ಫಲವನ್ನು ವಿಚಾರಮಾಡುವದಕ್ಕೆ ಹೊರಟಿರುವದರಿಂದ "ಈ ಪ್ರಜೆಗಳು" ಎಂಬ ಸಾಮಾನ್ಯವಾಚಕಶಬ್ದಕ್ಕೆ ಈ ಬ್ರಾಹ್ಮಣಾದಿಗಳು ಎಂದು ವಿಶೇಷಾರ್ಥವನ್ನು ಮಾಡಿರುತ್ತದೆ.

ಅಪರವಿದ್ಯೆ ಮತ್ತು ಕರ್ಮ-ಇವೆರಡರ ಸಮುಚ್ಚಯದಿಂದ[1] ಆಗುವ ಕಾರ್ಯವು ಯಾವದು, ಗತಿಯು ಯಾವದು-ಎಂಬುದನ್ನು ಹೇಳಬೇಕು ಎಂದು ಈ **ಪ್ರಶ್ನೆಯು**[2] (ಪ್ರಾರಂಭವಾಗಿರುತ್ತದೆ).

## ಪ್ರಜಾಪತಿಯಿಂದ ರಯಿಪ್ರಾಣರ ಸೃಷ್ಟಿ

**ತಸ್ಮೈ ಸ ಹೋವಾಚ ಪ್ರಜಾಕಾಮೋ ವೈ ಪ್ರಜಾಪತಿಃ ಸ ತಪೋಽತಪ್ಯತ ಸ ತಪಸ್ತಪ್ತ್ವಾ ಸ ಮಿಥುನಮುತ್ಪಾದಯತೇ। ರಯಿಂ ಚ ಪ್ರಾಣಂ ಚೇತ್ಯೇತೌ ಮೇ ಬಹುಧಾ ಪ್ರಜಾಃ ಕರಿಷ್ಯತ ಇತಿ ॥ ೪ ॥**

೪. ಅವನಿಗೆ ಆತನು ಹೇಳಿಪನೇನೆಂದರೆ: ಪ್ರಜಾಕಾಮನಾದ ಪ್ರಜಾಪತಿಯು ತಪಸ್ಸು ಮಾಡಿದನು. ಅವನು ತಪಸ್ಸು ಮಾಡಿ(ದ ಬಳಿಕ) ರಯಿ, ಪ್ರಾಣ–ಎಂಬ (ಒಂದು) ಮಿಥುನವನ್ನು "ಇವು ನನಗೆ ಬಹುವಾಗಿ ಪ್ರಜೆಗಳನ್ನು ಮಾಡುವವು" ಎಂದು ಉಂಟುಮಾಡಿದನು.

(**ಭಾಷ್ಯ**)

೫. ತಸ್ಮೈ ಏವಂ ಪೃಷ್ಟವತೇ ಸ ಹ ಉವಾಚ ತದಪಾಕರಣಾಯ ಆಹ । ಪ್ರಜಾಕಾಮಃ ಪ್ರಜಾಃ ಆತ್ಮನಃ ಸಿಸೃಕ್ಷುಃ ವೈ ಪ್ರಜಾಪತಿಃ ಸರ್ವಾತ್ಮಾ ಸನ್ ಜಗತ್ ಸ್ರಕ್ಷ್ಯಾಮಿ ಇತಿ ಏವಂ ವಿಜ್ಞಾನವಾನ್ ಯಥೋಕ್ತಕಾರೀ ತದ್ಭಾವಭಾವಿತಃ ಕಲ್ಪಾದೌ ನಿರ್ವೃತ್ತೋ ಹಿರಣ್ಯಗರ್ಭಃ ಸೃಜ್ಯಮಾನಾನಾಂ ಪ್ರಜಾನಾಂ ಸ್ಥಾವರ ಜಙ್ಗಮಾನಾಂ ಪತಿಃ ಸನ್ ಜನ್ಮಾನ್ತರಭಾವಿತಂ ಜ್ಞಾನಂ ಶ್ರುತಿಪ್ರಕಾಶಿತಾರ್ಥ ವಿಷಯಂ ತಪಃ ಅನ್ವಾಲೋಚಯತ್ ಅತಪ್ಯತ । ಅಥ ತು ಸಃ ಏವಂ ತಪಃ ತಪ್ತ್ವಾ ಶ್ರೌತಂ ಜ್ಞಾನಮ್ ಅನ್ವಾಲೋಚ್ಯ ಸೃಷ್ಟಿಸಾಧನಭೂತಂ ಮಿಥುನಮ್ ಉತ್ಪಾದ ಯತೇ ಮಿಥುನಂ ದ್ವನ್ದ್ವಮ್ ಉತ್ಪಾದಿತವಾನ್ ರಯಿಂ ಚ ಸೋಮಮ್ ಅನ್ನಮ್,

---

1. ಕರ್ಮವನ್ನೂ ಉಪಾಸನೆಯನ್ನೂ ಸೇರಿಸಿ ಅನುಷ್ಠಾನಮಾಡುವದರಿಂದ. ಇದು ಬ್ರಹ್ಮನಿಷ್ಠನಾದ ಕಬಂಧಿಗೆ ತಿಳಿದೇ ಇರುವ ವಿಷಯವಾದರೂ ತನಗೆ ತಿಳಿದಿರುವದಕ್ಕಿಂತ ಹೆಚ್ಚಿನ ಫಲವೇನಾದರೂ ಇದೆಯೋ ಎಂದು ತಿಳಿದುಕೊಳ್ಳುವದಕ್ಕಾಗಿ ಕೇಳಿರುತ್ತಾನೆ. ಮುಂಡಕದಲ್ಲಿ ಪರವಿದ್ಯೆಯ ಪ್ರಶ್ನೆಗೆ ಉತ್ತರವನ್ನು ಹೇಳುವ ಪ್ರಸಂಗದಲ್ಲಿ ಅಪರವಿದ್ಯೆ ಯನ್ನು ಹೇಳಿರುವಂತೆ ಇಲ್ಲಿಯೂ ಹೇಳಿದೆ. ಅಪರವಿದ್ಯೆಯ ಫಲದಲ್ಲಿ ವಿರಕ್ತನಾದವನಿಗೇ ಪರವಿದ್ಯೆಯಲ್ಲಿ ಅಧಿಕಾರವೆಂಬುದನ್ನು ತಿಳಿಸುವದಕ್ಕೆ ಹೀಗೆ ಮಾಡಿದೆ.

2. ಪ್ರಶ್ನೋತ್ತರಗಳಿಂದ ಕೂಡಿದ ಅಧ್ಯಾಯವನ್ನು ಇಲ್ಲಿ "ಪ್ರಶ್ನೆ" ಎಂದು ಕರೆದಿದೆ.

**ಪ್ರಾಣಂ ಚ ಅಗ್ನಿಮ್ ಅತ್ತಾರಮ್ ಇತಿ[1] । ಏತೌ ಅಗ್ನೀಷೋಮೌ ಅತ್ತ್ರನ್ನಭೂತೌ ಮೇ ಮಮ ಬಹುಧಾ ಅನೇಕಧಾ ಪ್ರಜಾಃ ಕರಿಷ್ಯತ ಇತಿ ಏವಂ ಸಂಚಿನ್ತ್ಯ ಅಣ್ಡೋತ್ಪತ್ತಿಕ್ರಮೇಣ ಸೂರ್ಯಾಚನ್ದ್ರಮಸೌ ಅಕಲ್ಪಯತ್ ॥**

**(ಭಾಷ್ಯಾರ್ಥ)**

ಹೀಗೆ ಕೇಳಿದ ಅವನಿಗೆ ಆ (ಪಿಪ್ಪಲಾದನು) ಆ (ಪ್ರಶ್ನೆಗೆ) ಉತ್ತರವನ್ನು ಹೇಳುವದಕ್ಕೆಂದು ಹೇಳಿದನೇನೆಂದರೆ: ಪ್ರಜಾಕಾಮನಾದ, ತನ್ನಿಂದ ಪ್ರಜೆಗಳನ್ನು ಸೃಷ್ಟಿಮಾಡಬೇಕೆಂಬ ಇಚ್ಛೆಯುಳ್ಳ **ಪ್ರಜಾಪತಿಯು** ಎಂದರೆ **"ಸರ್ವಾತ್ಮನಾಗಿ ಜಗತ್ತನ್ನು ಸೃಷ್ಟಿಮಾಡುವೆನು" ಎಂಬ ಭಾವನೆಯಿಂದ (ಶಾಸ್ತ್ರದಲ್ಲಿ) ಹೇಳಿದಂತೆ (ಕರ್ಮವನ್ನು ಮಾಡಿ) ಅದೇ ಭಾವನೆಯಿಂದ ಕೂಡಿದವನಾಗಿ ಕಲ್ಪಾದಿಯಲ್ಲಿ ಆಗಿರುವ ಹಿರಣ್ಯಗರ್ಭನು[2]** (ಅವನು) ಮುಂದೆ ಸೃಷ್ಟಿಯಾಗಬೇಕಾಗಿರುವ ಪ್ರಜೆಗಳ, ಎಂದರೆ ಸ್ಥಾವರಜಂಗಮಗಳ ಪತಿಯಾಗಿ ಶ್ರುತಿಯಲ್ಲಿ ತಿಳಿಸಿದ ವಿಷಯವಾಗಿ (ತಾನು) ಜನ್ಮಾಂತರದಲ್ಲಿ ಭಾವಿಸಿಕೊಂಡ ಜ್ಞಾನವೆಂಬ **ತಪಸ್ಸನ್ನು ಮಾಡಿದನು,** ಎಂದರೆ **(ಅದನ್ನು)** ಆಲೋಚನೆಗೆ ತಂದುಕೊಂಡನು.[3]

ಬಳಿಕ **ಅವನು** ಹೀಗೆ ತಪಸ್ಸನ್ನು ಮಾಡಿ ಎಂದರೆ ಶ್ರೌತವಿಜ್ಞಾನವನ್ನು ಆಲೋಚನೆಗೆ ತಂದುಕೊಂಡು[4] ಸೃಷ್ಟಿಗೆ ಸಾಧನವಾದ ಒಂದು **ಮಿಥುನವನ್ನು** ಎಂದರೆ **ಜೋಡಿಯನ್ನು ಉಂಟುಮಾಡಿದನು. ರಯಿಯನ್ನು** ಎಂದರೆ ಅನ್ನರೂಪವಾಗಿರುವ **ಸೋಮವನ್ನೂ** ಮತ್ತು **ಪ್ರಾಣವನ್ನೂ** ಎಂದರೆ (ಆ ಅನ್ನವನ್ನು) ಉಣ್ಣುವ ಅಗ್ನಿಯನ್ನೂ ಎಂದು (ಹೀಗೆ ಒಂದು ಜೋಡಿಯನ್ನು ಸೃಷ್ಟಿಸಿದನು). ಅನ್ನದ, ಅನ್ನ ಎಂಬ ರೂಪದಲ್ಲಿರುವ ಈ ಅಗ್ನಿಯೂ ಸೋಮವೂ ನನಗೆ ಬಹುವಿಧವಾಗಿ ಅನೇಕವಿಧ

---

1. ಈ ಮಾತು ಆ॥ ಪಾಠದಲ್ಲಿಲ್ಲ.

2. ಹಿಂದಿನ ಕಲ್ಪದಲ್ಲಿ ಯಾವನಿಗೆ ನಾನು ಪ್ರಜಾಪತಿಯಾಗಬೇಕು ಎಂಬ ಉತ್ಕಟೇಚ್ಛೆಯಿದ್ದಿತೋ ಅವನು ಮಾಡಿದ ಕರ್ಮೋಪಾಸನೆಗಳ ಫಲವಾಗಿ ಹಿರಣ್ಯಗರ್ಭಭಾವನೆಯಿಂದ ಶರೀರವನ್ನು ಬಿಟ್ಟು ಈ ಕಲ್ಪದಲ್ಲಿ ಹಿರಣ್ಯಗರ್ಭನಾಗಿರುವನು. (ಗೀ. ೮-೯). ಈ ಕಲ್ಪದಲ್ಲಿ ಸೃಷ್ಟಿಯಾಗುವ ಪ್ರಜೆಗಳ ಒಡೆಯನಾದ್ದರಿಂದ ಅವನಿಗೆ ಪ್ರಜಾಪತಿ ಎಂದು ಹೆಸರು.

3. ಈಗ ನಾನು ಸೃಷ್ಟಿಸಬೇಕು ಎಂದು ಸಂಕಲ್ಪಿಸಿದನು. ಹಿಂದಿನ ಜನ್ಮದ ಅನುಷ್ಠಾನದ ಫಲವೇ ಈ ಸಂಕಲ್ಪವು.

4. ಶ್ರುತಿಯಲ್ಲಿ ಹೇಳಿದಂತೆ ಸೃಷ್ಟಿಸಬೇಕೆಂದು ಸಂಕಲ್ಪಿಸಿ. "ಸ ತಪಸ್ತಪ್ತ್ವಾ" ಎಂಬ ಮಾತು ಉಪನಿಷತ್ತಿಗೆ ಸೇರಿದ್ದಲ್ಲವೆಂಬಂತೆ ಶಂಕರಾನಂದರೇ ಮುಂತಾದವರು ವ್ಯಾಖ್ಯಾನಮಾಡಿದಾರೆ. ಭಾಷ್ಯದಪ್ರಕಾರ ಇದೂ ಸೇರಿದೆ.

ವಾಗಿ ಪ್ರಜೆಗಳನ್ನು ಉಂಟುಮಾಡುವವು ಎಂದು ಆಲೋಚಿಸಿಕೊಂಡು **ಅಂಡೋತ್ಪತ್ತಿಕ್ರಮದಿಂದ**[1] ಸೂರ್ಯನನ್ನೂ ಚಂದ್ರನನ್ನೂ ಸೃಷ್ಟಿಸಿದನು.[2]

## ರಯಿ ಮತ್ತು ಪ್ರಾಣ ಎಂದರೆ ಯಾರು ?

**ಆದಿತ್ಯೋ ಹ ವೈ ಪ್ರಾಣೋ ರಯಿರೇವ ಚನ್ದ್ರಮಾ ರಯಿರ್ವಾ ಏತತ್ ಸರ್ವಂ ಯನ್ಮೂರ್ತಂ ಚಾಮೂರ್ತಂ ಚ ತಸ್ಮಾನ್ಮೂರ್ತಿರೇವ ರಯಿಃ　　॥ ೫ ॥**

೫. ಆದಿತ್ಯನೇ ಪ್ರಾಣವು, ಚಂದ್ರನೇ ರಯಿಯು. ಮೂರ್ತ, ಅಮೂರ್ತ–ಇವೆಲ್ಲವೂ ರಯಿಯೇ. ಅವಕ್ಕಿಂತ (ಬೇರೆಯಾಗಿರುವ) ಮೂರ್ತಿಯೇ ರಯಿ.

(ಭಾಷ್ಯ)

೬. ತತ್ರ ಆದಿತ್ಯೋ ಹ ವೈ ಪ್ರಾಣಃ ಅತ್ತಾ ಅಗ್ನಿಃ । ರಯಿರೇವ ಚನ್ದ್ರಮಾಃ । ರಯಿರೇವ ಅನ್ನಂ ಸೋಮ ಏವ । ತದೇತತ್ ಏಕಮ್ ಅತ್ತಾ ಚಾನ್ನಂ ಚ ಪ್ರಜಾಪತಿಃ ಏಕಂ ತು ಮಿಥುನಮ್ । ಗುಣಪ್ರಧಾನಕೃತೋ ಭೇದಃ । ಕಥಮ್? ರಯಿರ್ವಾ ಅನ್ನಂ ವಾ ಏತತ್ ಸರ್ವಮ್ । ಕಿಂ ತತ್? ಯತ್ ಮೂರ್ತಂ ಚ ಸ್ಥೂಲಂ ಚ ಅಮೂರ್ತಂ ಚ ಸೂಕ್ಷ್ಮಂ ಚ । ಮೂರ್ತಾಮೂರ್ತೇ ಅತ್ತ್ರನ್ನರೂಪೇ ಅಪಿ[3] ರಯಿರೇವ । ತಸ್ಮಾತ್ ಪ್ರವಿಭಕ್ತಾತ್ ಅಮೂರ್ತಾತ್ ಯದನ್ಯತ್ ಮೂರ್ತರೂಪಂ ಮೂರ್ತಿಃ ಸೈವ ರಯಿಃ ಅನ್ನಮ್[4] । ಅಮೂರ್ತೇನ ಅತ್ತ್ರಾ[5] ಅದ್ಯಮಾನತ್ವಾತ್ ।

---

1. ಬ್ರಹ್ಮಾಂಡವನ್ನು ಸೃಷ್ಟಿಸಿದ ಬಳಿಕ. ಮುಂ. ಭಾ. ೧–೧–೮, ಛಾ. ಭಾ. ೩–೧೯–೧

2. ಪ್ರಾಣ, ಅಗ್ನಿ, ಸೂರ್ಯ ; ರಯಿ, ಸೋಮ, ಚಂದ್ರ–ಹೀಗೆ ಮೂರುಮೂರೂ ಒಂದೊಂದಕ್ಕೇ ಹೆಸರು. ಅಗ್ನಿಯಾಗಿ ಪರಮಾತ್ಮನು ಎಲ್ಲವನ್ನೂ ಪ್ರಾಣಾಪಾನಗಳಿಂದ ತಿನ್ನುತ್ತಾನೆಂದು ಗೀತೆಯಲ್ಲಿ (೧೫–೧೪) ಹೇಳಿರುವದನ್ನು ನೋಡಿ. ಮುಂದೆ ಹೇಳುವಂತೆ ಸೂರ್ಯಚಂದ್ರರೇ ಸೃಷ್ಟಿಗೆ ಕಾರಣವಾಗುವರು. ರಯಿ ಎಂದರೆ ಧನವೆಂದು ಅರ್ಥವಾದರೂ ಈ ಪ್ರಕರಣದಲ್ಲಿ ಭೋಜ್ಯವೆಂಬರ್ಥದಲ್ಲಿ ಆ ಶಬ್ದವು ಪ್ರಯೋಗಿಸಲ್ಪಟ್ಟಿರುತ್ತದೆ.

3. " ಅಪಿ " ಎಂಬುದು ವಾ॥ ಪಾಠದಲ್ಲಿಲ್ಲ.

4 " ಅನ್ನಮ್ " ಎಂಬ ಮಾತು ವಾ॥ ಪಾಠದಲ್ಲಿ ಹೆಚ್ಚಾಗಿದೆ.

5. " ಅತ್ತ್ರಾ " ಎಂಬುದು ವಾ॥ ಪಾಠದಲ್ಲಿ ಮಾತ್ರ ಇದೆ.

(ಭಾಷ್ಯಾರ್ಥ)

ಇವುಗಳಲ್ಲಿ ಆದಿತ್ಯನೇ ಪ್ರಾಣನು, ಎಂದರೆ ಅನ್ನಾದನಾದ ಅಗ್ನಿಯು. ರಯಿಯೇ ಚಂದ್ರನು, ರಯಿಯೇ ಅನ್ನವು, ಸೋಮವೇ.[1] ಹೀಗೆ ಅತ್ತೃ, ಅನ್ನ-ಎಂಬೆರಡೂ ಒಂದೇ, ಪ್ರಜಾಪತಿಯೇ, ಒಂದೇ ಈ ಜೋಡಿಯಾಗಿರುವದು. (ಇವೆರಡಕ್ಕೂ ಇರುವ) ಭೇದವು ಗುಣಪ್ರಧಾನದೃಷ್ಟಿಯಿಂದ.[2]

ಹೇಗೆಂದರೆ, ಇದೆಲ್ಲವೂ ರಯಿಯೇ, ಅನ್ನವೇ. (ಇದೆಲ್ಲವೂ ಎಂದರೆ) ಯಾವದು? ಎಂದರೆ ಯಾವದು ಮೂರ್ತವಾಗಿರುವದೋ ಸ್ಥೂಲವಾಗಿರುವದೋ ಮತ್ತು (ಯಾವದು) ಅಮೂರ್ತವಾಗಿ, ಸೂಕ್ಷ್ಮವಾಗಿ,[3] ಇರುವದೋ (ಆ) ಅತ್ತೃ, ಅನ್ನ-ಈ ರೂಪವಾಗಿರುವ ಮೂರ್ತ, ಅಮೂರ್ತ-(ಇವು) ಎರಡೂ ರಯಿಯೇ.[4] ಅದಕ್ಕಿಂತ ಎಂದರೆ (ಆ) ಬೇರೆಯಾಗಿರುವ ಅಮೂರ್ತಕ್ಕಿಂತ ಬೇರೆಯಾದ ಮೂರ್ತರೂಪ ವಿದೆಯಲ್ಲ, ಆ ಮೂರ್ತಿಯೇ ರಯಿಯು, ಅನ್ನವು. ಏಕಂದರೆ ಅದು ಅಮೂರ್ತದಿಂದ ತಿನ್ನಲ್ಪಡುತ್ತದೆ.

(ಭಾಷ್ಯ)

೭. ತಥಾ ಅಮೂರ್ತೋಽಪಿ ಪ್ರಾಣೋಽತ್ತಾ ಸರ್ವಮೇವ । ಯಚ್ಚಾದ್ಯಮ್। ಕಥಮ್ ?

(ಭಾಷ್ಯಾರ್ಥ)

ಹೇಗೆಯೇ ಅಮೂರ್ತವಾದ ಅತ್ತೃವಾದ ಪ್ರಾಣನುಕೂಡ ಎಲ್ಲವೂ ಆಗಿರುತ್ತಾನೆ. ಯಾವದು ತಿನ್ನಲ್ಪಡತಕ್ಕದ್ದೋ (ಅದುಕೂಡ ಪ್ರಾಣವೇ). ಹೇಗೆಂದರೆ:—

**ಅಥಾದಿತ್ಯ ಉದಯನ್ ಯತ್ ಪ್ರಾಚೀಂ ದಿಶಂ ಪ್ರವಿಶತಿ ತೇನ ಪ್ರಾಚ್ಯಾನ್ ಪ್ರಾಣಾನ್ ರಶ್ಮಿಷು ಸಂನಿಧತ್ತೇ । ಯದ್ ದಕ್ಷಿಣಾಂ ಯತ್ ಪ್ರತೀಚೀಂ ಯದಧೋ ಯದೂರ್ಧ್ವಂ ಯದನ್ತರಾ ದಿಶೋ ಯತ್ ಸರ್ವಂ ಪ್ರಕಾಶಯತಿ ತೇನ ಸರ್ವಾನ್ ಪ್ರಾಣಾನ್ ರಶ್ಮಿಷು ಸಂನಿಧತ್ತೇ ॥ ೬ ॥**

---

1. "ರಯಿಯೇ ಚಂದ್ರನು" ಎಂಬ ವಾಕ್ಯವನ್ನು ಚಂದ್ರನೇ ರಯಿಯು ಎಂದು ತಿರುಗಿಸಿಕೊಳ್ಳಬೇಕು ಎಂದು ಭಾವ.

2. ಒಂದನ್ನು ಮುಖ್ಯವೆಂದು ಎಣಿಸಿ ಮತ್ತೊಂದನ್ನು ಅದರ ಅಧೀನವೆಂದು ಎಣಿಸುವದರಿಂದ ರಯಿಯು ಅಧೀನವಾದದ್ದು, ಪ್ರಾಣವು ಮುಖ್ಯವಾದದ್ದು-ಎಂಬ ಭೇದವಾಗುತ್ತದೆ. ಇವೆರಡರಲ್ಲಿ ಒಂದೊಂದೂ ಪ್ರಜಾಪತಿಯೇ.

3. ಪೃಥ್ವಿ, ಅಪ್ಪು, ತೇಜಸ್ಸು-ಇವು ಮೂರ್ತ, ಸ್ಥೂಲ; ವಾಯು, ಆಕಾಶ-ಇವು ಅಮೂರ್ತ, ಸೂಕ್ಷ್ಮ, ಬೃ. ೨-೩-೨.

4. ಬೇರೆಬೇರೆಯ ದೃಷ್ಟಿಯಿಂದ ಎರಡೂ ಭೋಜ್ಯವೇ ಆಗಬಹುದು; ಆದ್ದರಿಂದ ಎರಡೂ ರಯಿಯೇ.

೬. ಇನ್ನು ಆದಿತ್ಯನು ಉದಯಿಸುವಾಗ ಪೂರ್ವದಿಕ್ಕನ್ನು ಯಾವಾಗ ಪ್ರವೇಶಿಸುತ್ತಾನೋ (ಆಗ) ಅದರಿಂದ ಪೂರ್ವದ ಪ್ರಾಣಗಳನ್ನು ರಶ್ಮಿಗಳಲ್ಲಿ ಸೇರಿಸಿಕೊಳ್ಳುತ್ತಾನೆ ಯಾವಾಗ ದಕ್ಷಿಣವನ್ನು, ಯಾವಾಗ ಪಶ್ಚಿಮವನ್ನು, ಯಾವಾಗ ಉತ್ತರವನ್ನು ಯಾವಾಗ ಕೆಳಗಡೆಯನ್ನು, ಯಾವಾಗ ಮೇಲುಗಡೆಯನ್ನು, ಯಾವಾಗ ನಡುವೆಯ ದಿಕ್ಕುಗಳನ್ನು, ಯಾವಾಗ ಎಲ್ಲವನ್ನೂ ಪ್ರಕಾಶಿಸುತ್ತಾನೋ (ಆಗ) ಅದರಿಂದ ಸರ್ವಪ್ರಾಣಗಳನ್ನೂ ರಶ್ಮಿಗಳಲ್ಲಿ ಸೇರಿಸಿಕೊಳ್ಳುತ್ತಾನೆ.

(ಭಾಷ್ಯ)

೬. ಅಥ ಆದಿತ್ಯಃ ಉದಯನ್ ಉದ್ಗಚ್ಛನ್ ಪ್ರಾಣಿನಾಂ ಚಕ್ಷುರ್ಗೋಚರಮಾಗಚ್ಛನ್ ಯತ್ ಪ್ರಾಚೀಂ ದಿಶಂ ಸ್ವಪ್ರಕಾಶೇನ ಪ್ರವಿಶತಿ ವ್ಯಾಪ್ನೋತಿ ತೇನ ಸ್ವಾತ್ಮವ್ಯಾಪ್ತ್ಯಾ ಸರ್ವಾನ್ ತತ್ಸ್ಥಾನ್ ಪ್ರಾಣಾನ್ ಪ್ರಾಚ್ಯಾನ್ ಅನ್ತರ್ಭೂತಾನ್[1] ರಶ್ಮಿಷು ಸ್ವಾತ್ಮಾವಭಾಸರೂಪೇಷು ವ್ಯಾಪ್ತಿಮತ್ಸು ವ್ಯಾಪ್ತತ್ವಾತ್ ಪ್ರಾಣಿನಃ ಸಂನಿಧತ್ತೇ ಸಂನಿವೇಶಯತಿ । ಆತ್ಮಭೂತಾನ್ ಕರೋತಿ ಇತ್ಯರ್ಥಃ । ತಥೈವ ಯತ್ ಪ್ರವಿಶತಿ ದಕ್ಷಿಣಾಂ ಯತ್ ಪ್ರತೀಚೀಂ ಯತ್ ಉದೀಚೀಮ್ ಅಧಃ ಊರ್ಧ್ವಂ ಯತ್ ಪ್ರವಿಶತಿ ಯಚ್ಚ ಅನ್ತರಾದಿಶಃ ಕೋಣದಿಶಃ ಅವಾನ್ತರದಿಶಃ ಯಚ್ಚ ಅನ್ಯತ್ ಸರ್ವಂ ಪ್ರಕಾಶಯತಿ ತೇನ ಸ್ವಪ್ರಕಾಶವ್ಯಾಪ್ತ್ಯಾ ಸರ್ವಾನ್ ಸರ್ವದಿಕ್ಸ್ಥಾನ್ ಪ್ರಾಣಾನ್ ರಶ್ಮಿಷು ಸಂನಿಧತ್ತೇ ॥

(ಭಾಷ್ಯಾರ್ಥ)

ಇನ್ನು ಆದಿತ್ಯನು ಉದಯಿಸುವಾಗ ಮೇಲಕ್ಕೆ ಬರುವಾಗ, ಪ್ರಾಣಿಗಳ ಕಣ್ಣಿಗೆ ಗೋಚರನಾಗುವ, ಪೂರ್ವದಿಕ್ಕನ್ನು ಯಾವಾಗ ತನ್ನ ಬೆಳಕಿನಿಂದ ಪ್ರವೇಶಿಸುತ್ತಾನೋ ಎಂದರೆ ವ್ಯಾಪಿಸಿಕೊಳ್ಳುತ್ತಾನೋ, ಆಗ ಅದರಿಂದ, (ಅ) ತನ್ನ ವ್ಯಾಪ್ತಿಯಿಂದ, ಅಲ್ಲಿರುವ ಎಲ್ಲಾ ಪ್ರಾಣಗಳನ್ನೂ ಪೂರ್ವದಿಕ್ಕಿನಲ್ಲಿರುವ (ಎಲ್ಲಾ ಪ್ರಾಣಗಳನ್ನೂ) ತನ್ನ ಸ್ವರೂಪದ ಪ್ರಭೆಯ ರೂಪವಾಗಿರುವ ಹಬ್ಬಿಕೊಂಡಿರುವ ಕಿರಣಗಳಲ್ಲಿ ವ್ಯಾಪ್ತವಾಗಿರುವದರಿಂದ ಪ್ರಾಣಗಳನ್ನು ಸೇರಿಸಿಕೊಳ್ಳುತ್ತಾನೆ, ತನ್ನೊಳಗೆ ಹಾಕಿಕೊಳ್ಳುತ್ತಾನೆ ; ತನ್ನ (ಸ್ವರೂಪ) ವನ್ನಾಗಿಯೇ ಮಾಡಿಕೊಳ್ಳುತ್ತಾನೆ ಎಂದರ್ಥ. ಹಾಗೆಯೇ ಯಾವಾಗ ದಕ್ಷಿಣವನ್ನು, ಯಾವಾಗ ಪಶ್ಚಿಮವನ್ನು, ಯಾವಾಗ ಉತ್ತರವನ್ನು, ಯಾವಾಗ ಕೆಳಗಡೆಯನ್ನು, ಯಾವಾಗ ಮೇಲುಗಡೆಯನ್ನು, ಸೇರುತ್ತಾನೋ, ಯಾವಾಗ ನಡುವಣ ದಿಕ್ಕನ್ನು ಮೂಲೆಯ ದಿಕ್ಕುಗಳಾದ ಒಳ ದಿಕ್ಕು

1. "ಅನ್ನಭೂತಾನ್" ಎಂದು ವಾ॥ ಪಾಠ.

ಗಳನ್ನು[1] ಯಾವಾಗ ಸೇರುವನೋ ಮತ್ತು ಯಾವಾಗ ಮಿಕ್ಕದ್ದೆಲ್ಲವನ್ನೂ ಬೆಳಗುವನೋ (ಆಗ) ಅದರಿಂದ (ಆ) ತನ್ನ ಬೆಳಕಿನ ವ್ಯಾಪ್ತಿಯಿಂದ, 'ಎಲ್ಲಾ ದಿಕ್ಕುಗಳಲ್ಲಿರುವ ಎಲ್ಲಾ ಪ್ರಾಣಗಳನ್ನೂ (ತನ್ನ) ರಶ್ಮಿಗಳಲ್ಲಿ ಸೇರಿಸಿಕೊಳ್ಳುತ್ತಾನೆ.[2]

**ಸ ಏಷ ವೈಶ್ವಾನರೋ ವಿಶ್ವರೂಪಃ ಪ್ರಾಣೋಽಗ್ನಿರುದಯತೇ ।**
**ತದೇತದೃಚಾಭ್ಯುಕ್ತಮ್ ॥ ೭ ॥**

೭. ಆ ಈ ವೈಶ್ವಾನರನು ವಿಶ್ವರೂಪನಾಗಿರುವ ಪ್ರಾಣನು, ಅಗ್ನಿಯು, ಉದಯಿಸುತ್ತಾನೆ. ಆ ಇದು ಋಕ್ಕಿನಿಂದ ಹೇಳಲ್ಪಟ್ಟಿರುತ್ತದೆ.

(ಭಾಷ್ಯ)

೯. ಸ ಏಷೋಽತ್ತಾ ಪ್ರಾಣೋ ವೈಶ್ವಾನರಃ ಸರ್ವಾತ್ಮಾ ವಿಶ್ವರೂಪಃ ವಿಶ್ವಾತ್ಮತ್ವಾಚ್ಚ ಪ್ರಾಣಃ । ಅಗ್ನಿಶ್ಚ ಸ ಏವ ಅತ್ತಾ । ಉದಯತೇ ಉದ್ಗಚ್ಛತಿ ಪ್ರತ್ಯಹಂ ಸರ್ವಾ ದಿಶಃ ಆತ್ಮಸಾತ್ ಕುರ್ವನ್ ॥

(ಭಾಷ್ಯಾರ್ಥ)

ಆ ಈ ಅತ್ತೃವಾದ ಪ್ರಾಣನು, **ವೈಶ್ವಾನರನು** ಎಂದರೆ ಸರ್ವಾತ್ಮನು. **ವಿಶ್ವರೂಪನು** (ಎಲ್ಲಾ ರೂಪಗಳಿಂದ ಕೂಡಿರುವವನು) ಎಲ್ಲಕ್ಕೂ ಆತ್ಮನಾಗಿರುವದರಿಂದ **ಪ್ರಾಣನು.** ಅತ್ತೃವಾದ ಅಗ್ನಿಯಾಗಿರುವವನೂ ಅವನೇ. (ಇವನು) ಪ್ರತಿದಿನವೂ ದಿಕ್ಕುಗಳೆಲ್ಲವನ್ನೂ ತನ್ನ ವಶಗೊಳಿಸಿಕೊಳ್ಳುತ್ತಾ ಉದಯಿಸುತ್ತಿರುತ್ತಾನೆ, ಮೇಲಕ್ಕೆ ಬರುತ್ತಿರುತ್ತಾನೆ.

(ಭಾಷ್ಯ)

೧೦. ತದೇತತ್ ಉಕ್ತಂ ವಸ್ತು ಋಚಾ ಮನ್ತ್ರೇಣಾಪಿ ಅಭ್ಯುಕ್ತಮ್.

(ಭಾಷ್ಯಾರ್ಥ)

ಆ ಈ (ಮೇಲೆ) ಹೇಳಿರುವ ವಿಷಯವು ಋಕ್ಕಿನಿಂದ ಎಂದರೆ (ಮುಂದಿನ) ಮಂತ್ರದಿಂದಲೂ ಹೇಳಲ್ಪಟ್ಟಿರುತ್ತದೆ:—

**ವಿಶ್ವರೂಪಂ ಹರಿಣಂ ಜಾತವೇದಸಂ**
**ಪರಾಯಣಂ ಜ್ಯೋತಿರೇಕಂ ತಪನ್ತಮ್ ।**
**ಸಹಸ್ರರಶ್ಮಿಃ ಶತಧಾ ವರ್ತಮಾನಃ**
**ಪ್ರಾಣಃ ಪ್ರಜಾನಾಮುದಯತ್ಯೇಷ ಸೂರ್ಯಃ ॥ ೮ ॥**

1. ಅಗ್ನೇಯ ಮುಂತಾದವುಗಳನ್ನು.

2. ಸೂರ್ಯನ ರಶ್ಮಿಯ ಸನ್ನಿಧಿಯಿಂದಲೇ ಪ್ರಾಣಗಳು ಕಾಣಿಸಿಕೊಳ್ಳುವವು ಎಂದು ಭಾವ.

೮. ವಿಶ್ವರೂಪನಾದ ಹರಿಣನಾದ ಜಾತವೇದಸನಾದ ಪರಾಯಣನಾದ ತಪಿಸುತ್ತಿರುವ ಏಕಜ್ಯೋತಿಯನ್ನು (ಜ್ಞಾನಿಗಳು ಅರಿತಿರುವರು). ಸಹಸ್ರರಶ್ಮಿಯಾಗಿ ನೂರುಬಗೆಯಲ್ಲಿರುವ ಪ್ರಜೆಗಳ ಪ್ರಾಣನಾದ ಈ ಸೂರ್ಯನು ಉದಯಿಸುತ್ತಾನೆ.

(ಭಾಷ್ಯ)

೧೧. ವಿಶ್ವರೂಪಂ ಸರ್ವರೂಪಂ ಹರಿಣಂ ರಶ್ಮಿವನ್ತಂ ಜಾತವೇದಸಂ ಜಾತಪ್ರಜ್ಞಾನಂ ಪರಾಯಣಂ ಸರ್ವಪ್ರಾಣಾಶ್ರಯಂ. ಜ್ಯೋತಿರೇಕಂ ಸರ್ವಪ್ರಾಣಿನಾಂ ಚಕ್ಷುರ್ಭೂತಮ್ ಅದ್ವಿತೀಯಮ್[1] ತಪನ್ತಂ ತಾಪಕ್ರಿಯಾಂ ಕುರ್ವಾಣಂ ಸ್ವಾತ್ಮಾನಂ ಸೂರ್ಯಂ[2] ವಿಜ್ಞಾತವನ್ತೋ ಬ್ರಹ್ಮವಿದಃ । ಕೋಽಸೌಯಂ ವಿಜ್ಞಾತವನ್ತಃ?[3] ಸಹಸ್ರರಶ್ಮಿಃ ಅನೇಕರಶ್ಮಿಃ ಶತಧಾ ಅನೇಕಧಾ ಪ್ರಾಣಿಭೇದೇನ ವರ್ತಮಾನಃ ಪ್ರಾಣಃ ಪ್ರಜಾನಾಮ್ ಉದಯತಿ ಏಷಃ ಸೂರ್ಯಃ ॥

(ಭಾಷ್ಯಾರ್ಥ)

ವಿಶ್ವರೂಪನಾದ ಎಲ್ಲದರ ರೂಪವುಳ್ಳವನಾದ, ಹರಿಣನಾದ ಎಂದರೆ ರಶ್ಮಿಗಳುಳ್ಳ ಜಾತವೇದಸನಾದ ಎಂದರೆ ಏನೇನು ಆಗುವದೋ ಅದನ್ನೆಲ್ಲ ಅರಿಯುವವನಾದ, ಪರಾಯಣನಾದ ಎಂದರೆ ಎಲ್ಲಾ ಪ್ರಾಣಿಗಳಿಗೂ ಆಶ್ರಯನಾಗಿರುವ ಏಕಜ್ಯೋತಿಯನ್ನು ಎಲ್ಲಾ ಪ್ರಾಣಿಗಳಿಗೂ ಕಣ್ಣಾಗಿ ತನಗೆ ಎರಡನೆಯದಿಲ್ಲದೆ ತಪಿಸುತ್ತಿರುವ ತಾಪ (ಸುಡುವದು) ಎಂಬ ಕ್ರಿಯೆಯನ್ನು ಮಾಡುತ್ತಿರುವ ತಮ್ಮ ಆತ್ಮನಾದ ಸೂರ್ಯನನ್ನು ಬ್ರಹ್ಮವಿದರು ಅರಿತುಕೊಂಡಿರುವರು.[4] ಅವರು (ಹೀಗೆ) ಅರಿತುಕೊಂಡಿರುವ ಆತನು ಯಾರು? ಎಂದರೆ ಸಹಸ್ರರಶ್ಮಿಯಾಗಿ ಅನೇಕರಶ್ಮಿಗಳುಳ್ಳವನಾಗಿ ನೂರುಬಗೆಯಲ್ಲಿರುವ ಅನೇಕ ಬಗೆಯಲ್ಲಿರುವ ಪ್ರಾಣಿಗಳು ಬೇರೆಬೇರೆಯಾಗಿರುವದರಿಂದ (ಆಯಾ ಬಗೆಯ)ಲ್ಲಿರುವ ಪ್ರಜೆಗಳ ಪ್ರಾಣನಾದ ಈ ಸೂರ್ಯನು[5] ಉದಯಿಸುತ್ತಿರುವನು.

---

1. "ಜ್ಯೋತಿಃ ಸರ್ವಪ್ರಾಣಿನಾಂ ಚಕ್ಷುರ್ಭೂತಮ್ ಏಕಮ್ ಅದ್ವಿತೀಯಮ್" ಎಂದು ವಾ॥ ಪಾಠ.

2. "ಸೂರಯಃ" ಎಂದು ಅ॥ ಪಾಠದಲ್ಲಿ ಹೆಚ್ಚಾಗಿದೆ.

3. "ವಿಜ್ಞಾನವನ್ತಃ" ಎಂಬ ಅ॥ ಪಾಠವು ಅಚ್ಚಿನ ತಪ್ಪಿರಬಹುದೆಂದು ತೋರುತ್ತದೆ.

4. ಈ ಮಂತ್ರದ ಮೊದಲನೆಯ ಅರ್ಧದಲ್ಲಿರುವ ಪದಗಳು ದ್ವಿತೀಯಾವಿಭಕ್ತಿಯಲ್ಲಿವೆ. ಎರಡನೆಯ ಅರ್ಧದಲ್ಲಿರುವ ಪದಗಳು ಪ್ರಥಮಾವಿಭಕ್ತಿಯಲ್ಲಿವೆ. ಆದ್ದರಿಂದ ಬ್ರಹ್ಮಜ್ಞಾನಿಗಳು ತಿಳಿದಿರುವರು ಎಂದು ಅಧ್ಯಾಹಾರಮಾಡಿಕೊಂಡಿದೆ.

5. ಸೂರ್ಯನೇ ಬೇರೆಬೇರೆಯ ಪ್ರಾಣಿಗಳಿಗೆ ಪ್ರಾಣಗಳನ್ನು ಕೊಟ್ಟಿರುವವನು ೦ದು ಭಾವ. ಚಂದ್ರ ಅಥವಾ ರಯಿಯು ಎಲ್ಲವೂ ಆಗಿರುವಂತೆ ಸೂರ್ಯ ಅಥವಾ ಪ್ರಾಣನು ಎಲ್ಲವೂ ಆಗಿರುತ್ತಾನೆಂಬುದನ್ನು ಈವರೆಗೆ ತಿಳಿಸಿದಂತೆ ಆಯಿತು.

## ಸಂವತ್ಸರರೂಪಿಯಾದ ಪ್ರಜಾಪತಿ

(ಭಾಷ್ಯ)

೧೨. ಯಶ್ಚಾಸೌ ಚನ್ದ್ರಮಾಃ ಮೂರ್ತಿರನ್ನಮ್ ಅಮೂರ್ತಿಶ್ಚ ಪ್ರಾಣಃ ಅತ್ತಾ ಆದಿತ್ಯಃ, ತದೇಕಮೇತನ್ಮಿಥುನಂ ಸರ್ವಮ್ । ಕಥಂ ಪ್ರಜಾಃ ಕರಿಷ್ಯತಃ ಇತಿ? ಉಚ್ಯತೇ—

ಈ ಮೂರ್ತಿಯೂ ಅನ್ನವೂ ಆದ ಚಂದ್ರನು, ಮತ್ತು ಅಮೂರ್ತರೂಪನಾದ ಅತ್ತೃ, ಪ್ರಾಣನಾದ ಆದಿತ್ಯನು–ಇವೆರಡೂ ಒಂದೇ (ಆಗಿ), ಈ ಜೋಡಿಯು ಎಲ್ಲವೂ ಆಗಿರುತ್ತದೆ. (ಇವು) ಪ್ರಜೆಗಳನ್ನು ಮಾಡುವದೆಂಬುದು ಹೇಗೆ? ಎಂದರೆ (ಶ್ರುತಿ) ಹೇಳುತ್ತದೆ:—

**ಸಂವತ್ಸರೋ ವೈ ಪ್ರಜಾಪತಿಸ್ತಸ್ಯಾಯನೇ ದಕ್ಷಿಣಂ ಚೋ-ತ್ತರಂ ಚ । ತದ್ಯೇ ಹ ವೈ ತದಿಷ್ಟಾಪೂರ್ತೇ ಕೃತಮಿತ್ಯುಪಾಸತೇ ತೇ ಚಾನ್ದ್ರಮಸಮೇವ ಲೋಕಮಭಿಜಯನ್ತೇ । ತ ಏವ ಪುನರಾವರ್ತನ್ತೇ ತಸ್ಮಾದೇತ ಋಷಯಃ ಪ್ರಜಾಕಾಮಾ ದಕ್ಷಿಣಂ ಪ್ರತಿಪದ್ಯನ್ತೇ । ಏಷ ಹ ವೈ ರಯಿರ್ಯಃ ಪಿತೃಯಾಣಃ ॥ ೯ ॥**

೯. ಸಂವತ್ಸರವೇ ಪ್ರಜಾಪತಿಯು. ಅವಕ್ಕೆ ದಕ್ಷಿಣವೆಂದೂ ಉತ್ತರವೆಂದೂ ಎರಡು ಅಯನಗಳು. ಯಾರಾದರೆ ಹಾಗೆ ಇಷ್ಟಾಪೂರ್ತ-ಗಳೆಂಬ ಕೃತವನ್ನೇ ಉಪಾಸನೆಮಾಡುತ್ತಿರುವರೋ ಅವರು ಚಂದ್ರನ ಲೋಕವನ್ನೇ ಗೆದ್ದುಕೊಳ್ಳುವರು; ಅವರೇ ಮತ್ತೆ ಹಿಂತಿರುಗುವರು. ಆದ್ದರಿಂದಲೇ ಪ್ರಜಾಕಾಮರಾದ ಈ ಋಷಿಗಳು ದಕ್ಷಿಣವನ್ನು ಹೊಂದು-ವರು. ಈ ಪಿತೃಯಾಣವೇ ರಯಿಯು.

೧೩. ತದೇವ ಕಾಲಃ ಸಂವತ್ಸರಃ ವೈ ಪ್ರಜಾಪತಿಃ । ತನ್ನಿರ್ವರ್ತ್ಯತ್ವಾತ್ ಸಂವತ್ಸರಸ್ಯ । ಚನ್ದ್ರಾದಿತ್ಯನಿರ್ವರ್ತ್ಯತಿಥ್ಯಹೋರಾತ್ರಸಮುದಾಯೋ ಹಿ ಸಂವತ್ಸರಃ । ತದನನ್ಯತ್ವಾತ್ ರಯಿಪ್ರಾಣಮಿಥುನಾತ್ಮಕ[1] ಏವ ಇತ್ಯುಚ್ಯತೇ । ತತ್ ಕಥಂ? ತಸ್ಯ ಸಂವತ್ಸರಸ್ಯ ಪ್ರಜಾಪತೇಃ ಅಯನೇ ಮಾರ್ಗೌ ದ್ವೌ ದಕ್ಷಿಣಂ

1. "ರಯಿಪ್ರಾಣೈತನ್ಮಿಥುನಾತ್ಮಕ" ಎಂದು ಪಾ॥ ಪಾಠ.

**ಚೋತ್ತರಂ ಚ । ಪ್ರಸಿದ್ಧೇ[1] ಹ್ಯಯನೇ ಷಣ್ಮಾಸಲಕ್ಷಣೇ ಯಾಭ್ಯಾಂ ದಕ್ಷಿಣೇನೋತ್ತ** ರೇಣ ಚ ಯಾತಿ ಸವಿತಾ ಕೇವಲಕರ್ಮಿಣಾಂ ಜ್ಞಾನಸಂಯುಕ್ತಕರ್ಮವತಾಂ ಚ **ಲೋಕಾನ್** ವಿದಧತ್ । **ಕಥಮ್ ? ತತ್** ತತ್ರ ಚ ಬ್ರಾಹ್ಮಣಾದಿಷು **ಯೇ ಹ ವೈ ಋಷಯಃ**[2] **ತತ್ ಉಪಾಸತೇ** ಇತಿ ಕ್ರಿಯಾವಿಶೇಷಣೋ ದ್ವಿತೀಯಃ ತಚ್ಛಬ್ದಃ। **ಇಷ್ಟಂ ಚ ಪೂರ್ತಂ ಚ** ಇಷ್ಟಾಪೂರ್ತೇ ಇತ್ಯಾದಿ **ಕೃತಮೇವ ಉಪಾಸತೇ** ನಾಕೃತಂ ನಿತ್ಯಂ **ತೇ ಚಾನ್ದ್ರಮಸಮೇವ** ಚನ್ದ್ರಮಸಿ ಭವಂ ಪ್ರಜಾಪತೇರ್ಮಿಥುನಾತ್ಮಕಸ್ಯ ಅಂಶಂ ರಯಿಮ್ ಅನ್ನಭೂತಂ **ಲೋಕಮ್ ಅಭಿಜಯನ್ತೇ** । ಕೃತರೂಪತ್ವಾತ್ **ಚಾನ್ದ್ರಮಸಸ್ಯ** । **ತೇ**[3] ಏವ ಚ ಕೃತಕ್ಷಯಾತ್ **ಪುನರಾವರ್ತನ್ತೇ** "ಇಮಂ ಲೋಕಂ ಹೀನತರಂ ವಾ ವಿಶನ್ತಿ" (ಮುಂ. ೧-೨-೧೦) ಇತಿ ಹಿ ಉಕ್ತಮ್। ಯಸ್ಮಾ ದೇವಂ ಪ್ರಜಾಪತಿಮ್ ಅನ್ನಾತ್ಮಕಂ ಫಲತ್ವೇನ ಅಭಿನಿರ್ವರ್ತಯನ್ತಿ ಚನ್ದ್ರಮ್ ಇಷ್ಟಾಪೂರ್ತಕರ್ಮಣಾ ಏತೇ **ಋಷಯಃ** ಸ್ವರ್ಗದ್ರಷ್ಟಾರಃ **ಪ್ರಜಾಕಾಮಾಃ** ಪ್ರಜಾರ್ಥಿನಃ ಗೃಹಸ್ಥಾಃ, **ತಸ್ಮಾತ್** ಸ್ವಕೃತಮೇವ **ದಕ್ಷಿಣಾ**ಯನೋಪಲಕ್ಷಿತಂ ಚನ್ದ್ರಂ **ಪ್ರತಿಪದ್ಯನ್ತೇ** ಏಷ ಹ ವೈ ರಯಿಃ ಅನ್ನಂ **ಯಃ ಪಿತೃಯಾಣಃ** ಪಿತೃಯಾಣೋಪಲಕ್ಷಿತಶ್ಚನ್ದ್ರಃ ॥

(ಭಾಷ್ಯಾರ್ಥ)

ಆ (ಜೋಡಿಯೇ) ಕಾಲ (ರೂಪವಾದ) **ಸಂವತ್ಸರವು ; (ಅದೇ) ಪ್ರಜಾಪತಿಯು.** ಏಕೆಂದರೆ ಅದರಿಂದ[4] (ಈ) ಸಂವತ್ಸರವಾಗಿರುತ್ತದೆ. ಚಂದ್ರ, ಸೂರ್ಯ-ಇವರಿಂದಾಗಿರುವ ತಿಥಿ, ಹಗಲುರಾತ್ರೆಗಳು ಇವುಗಳ ಒಟ್ಟೇ ಅಲ್ಲವೆ, ಸಂವತ್ಸರವೆಂಬುದು ?[5] ಅದಕ್ಕಿಂತ ಬೇರೆಯಲ್ಲವಾದ್ದರಿಂದ[6] (ಇದು) ರಯಿಪ್ರಾಣ (ವೆಂಬೀ) ಮಿಥುನಸ್ವರೂಪವೇ ಎಂದು ಹೇಳಿರುತ್ತದೆ. ಅದು ಹೇಗೆ ಎಂದರೆ: ಈ ಸಂವತ್ಸರ ರೂಪನಾದ ಪ್ರಜಾಪತಿಗೆ **ಅಯನಗಳು** ಎಂದರೆ ಮಾರ್ಗಗಳು, ದಕ್ಷಿಣ, ಉತ್ತರ-ಎಂದು ಎರಡು. ಷಣ್ಮಾಸರೂಪವಾದ ಅಯನಗಳು (ಎರಡೂ) ಪ್ರಸಿದ್ಧವಾಗಿಯೇ ಇರುತ್ತವೆ ; ಇವುಗಳಿಂದ ಸೂರ್ಯನು ಕೇವಲ ಕರ್ಮಿಗಳಿಗೂ ಜ್ಞಾನದೊಡಗೂಡಿದ

1. "ದ್ವೇ ಪ್ರಸಿದ್ಧೇ" ಅ॥ ಪಾಠ.

2. ಈ ಮಾತು ಅ॥ ಮ್ಯ॥ ಪಾಠಗಳಲ್ಲಿಲ್ಲ. ಇಲ್ಲದಿದ್ದರೂ ಸಾಗುತ್ತದೆ.

3. "ತತ್ರ" ಎಂದು ಅ॥ ಪಾಠದಲ್ಲಿ ಹೆಚ್ಚು.

4. ಆ ಚಂದ್ರಸೂರ್ಯರೆಂಬ ಜೋಡಿಯಿಂದ ಆಗಿರುತ್ತದೆ.

5. ಚಂದ್ರನಿಂದ ತಿಥ್ಯಾತ್ಮಕಕಾಲವೂ ಸೂರ್ಯನಿಂದ ಹಗಲುರಾತ್ರೆಗಳೆಂಬ ಕಾಲವೂ ಆಗುತ್ತದೆ.

6. ಕಾರ್ಯವು ಕಾರಣಕ್ಕಿಂತ ಬೇರೆಯಲ್ಲವಾದ್ದರಿಂದ ಸಂವತ್ಸರವೂ ಸೂರ್ಯಚಂದ್ರಾತ್ಮಕವೇ ಆಗಿರುತ್ತದೆ ಎಂದು ಹೇಳಿದೆ ಎಂದರ್ಥ.

ಕರ್ಮ (ವನ್ನು ಮಾಡಿ) ದವರಿಗೂ[1] ಲೋಕಗಳನ್ನು ಗೊತ್ತುಮಾಡಿಕೊಡುತ್ತಾ ದಕ್ಷಿಣಕ್ಕೂ ಉತ್ತರಕ್ಕೂ ಹೋಗುತ್ತಿರುವವನು. ಹೇಗೆ? ಎಂದರೆ, ಅಲ್ಲಿ ಎಂದರೆ ಆ ಬ್ರಾಹ್ಮಣಾದಿಗಳಲ್ಲಿ[2] ಯಾರಾದರೆ (ಯಾವ) ಋಷಿಗಳು "ಹಾಗೆ ಉಪಾಸನೆಮಾಡುತ್ತಿರುವರೋ" ಎಂದು ಎರಡನೆಯ ತತ್ ಎಂಬ ಶಬ್ದವನ್ನು[3] ಕ್ರಿಯಾವಿಶೇಷಣ (ವಾಗಿ ತಿಳಿಯಬೇಕು). ಇಷ್ಟಾಪೂರ್ತಗಳೆಂಬ ಎಂದರೆ ಇಷ್ಟ, ಪೂರ್ತ[4] ಮುಂತಾದ **ಕೃತ**ವನ್ನೇ ಅನುಸರಿಸುತ್ತಿರುವರೋ ಅಕೃತವಾದ ನಿತ್ಯವನ್ನು[5] (ಉಪಾಸನೆ ಮಾಡುವದಿಲ್ಲವೋ) ಅವರು ಚಾಂದ್ರಮಸವನ್ನೇ ಜೋಡಿಯ ರೂಪದಲ್ಲಿರುವ ಪ್ರಜಾಪತಿಯ ಅಂಶವಾದ, ಚಂದ್ರನಲ್ಲಿರುವ ರಯಿಯನ್ನೇ ಅನ್ನವಾಗಿರುವ ಲೋಕವನ್ನೇ ಗೆದ್ದುಕೊಳ್ಳುವರು. ಏಕೆಂದರೆ ಚಂದ್ರಲೋಕವೂ ಕೃತವಾಗಿರುತ್ತದೆ.[6] (ಆ) ಕೃತವು ಸವೆಯಲು ಅವರೇ ಮತ್ತೆ ಹಿಂತಿರುಗುವರು. "ಈ ಲೋಕವನ್ನೋ ಇನ್ನೂ ಕೀಳು ತೆರದ (ಲೋಕ)ವನ್ನೋ ಹೊಗುವರು" (ಮುಂ. ೧-೨-೧೦) ಎಂದಲ್ಲವೆ, ಹಿಂದೆ ಹೇಳಿದೆ?

ಹೀಗೆ ಈ ಪ್ರಜಾಕಾಮರಾದ ಪ್ರಜೆಗಳನ್ನು ಬಯಸುವ ಗೃಹಸ್ಥರಾದ **ಋಷಿಗಳು** ಎಂದರೆ ಸ್ವರ್ಗವನ್ನು ಕಂಡುಕೊಂಡವರು[7] ಅನ್ನಾತ್ಮಕನಾದ ಪ್ರಜಾಪತಿಯನ್ನು, ಎಂದರೆ ಚಂದ್ರನನ್ನು ಇಷ್ಟಾಪೂರ್ತಗಳೆಂಬ ಕರ್ಮದಿಂದ ಫಲವಾಗಿ ಉಂಟುಮಾಡಿಕೊಳ್ಳುತ್ತಿರುವದರಿಂದ; ತಮ್ಮಿಂದ ಮಾಡಲ್ಪಟ್ಟಿರುವ ದಕ್ಷಿಣವನ್ನೇ,

---

1. ಕರ್ಮಿಗಳಿಗೆ ದಕ್ಷಿಣಮಾರ್ಗ, ಉಪಾಸನೆಯಿಂದ ಕೂಡಿದ ಕರ್ಮಿಗಳಿಗೆ ಉತ್ತರಮಾರ್ಗ. (ಗೀ. ೮-೨೪, ೨೫).

2. ಅಲ್ಲಿ ಎಂದರೆ ಸಾಧಕರೊಳಗೆ, ವೈದಿಕಧರ್ಮಕ್ಕೆ ಅಧಿಕಾರಿಗಳಾದ ಬ್ರಾಹ್ಮಣಾದಿ ದ್ವಿಜರೊಳಗೆ.

3. ಉಪನಿಷತ್ತಿನಲ್ಲಿ ತತ್ ಯೇ ತತ್ ಇಷ್ಟಾಪೂರ್ತೇ-ಎಂದು ಎರಡು ತತ್ ಶಬ್ದಗಳಿವೆ.

4. ವ್ಯಾಖ್ಯಾನದಲ್ಲಿ ಹೀಗೆಂದು ಬರೆದಿದೆ. ಇಷ್ಟವೆಂದರೆ ಅಗ್ನಿಹೋತ್ರ, ತಪಸ್ಸು, ಸತ್ಯ, ವೇದಾಧ್ಯಯನ, ಅಧ್ಯಾಪನ, ಆತಿಥ್ಯ, ವೈಶ್ವದೇವ-ಇವು; ಪೂರ್ತ-ವೆಂದರೆ ಬಾವಿ, ಕೆರೆಕಟ್ಟೆ, ದೇವಾಲಯ, ತೋಪು-ಮುಂತಾದವನ್ನು ಕಟ್ಟಿಸುವದು, ಅನ್ನದಾನಮಾಡುವದು ಮುಂತಾದದ್ದು, "ಕೃತಮಿತ್ಯುಪಾಸತೇ" ಎಂಬಲ್ಲಿರುವ ಶಬ್ದವನ್ನು "ಇಷ್ಟಾಪೂರ್ತೇ ಇತಿ" ಎಂದು ಸೇರಿಸಿಕೊಂಡು ಇತಿ ಇತ್ಯಾದಿ ಮುಂತಾಗಿ ಎಂದು ಅರ್ಥಮಾಡಿದೆ.

5. ಕೃತ, ಅಕೃತ-ಎಂಬ ಶಬ್ದಗಳನ್ನು ಮುಂ. ೨-೧-೧೨ ರಲ್ಲಿ ಉಪಯೋಗಿಸಿರುವ ಬಗೆಯನ್ನು ನೋಡಿರಿ.

6. ಕರ್ಮದ ಕಾರ್ಯವಾಗಿರುತ್ತದೆ.

7. ಋಷಿಗಳೆಂದರೆ ತತ್ತ್ವವನ್ನು ಬಲ್ಲವರು; ಇಲ್ಲಿ ಸ್ವರ್ಗತತ್ತ್ವವನ್ನು ಬಲ್ಲವರು ಎಂದರ್ಥ.

ಎಂದರೆ ದಕ್ಷಿಣಾಯನವೆಂಬ ಉಪಲಕ್ಷಣವುಳ್ಳ[1] ಚಂದ್ರನನ್ನೇ ಪಡೆದುಕೊಳ್ಳುತ್ತಾರೆ. ಈ ಪಿತೃಯಾಣವೇ[2] ಎಂದರೆ ಪಿತೃಯಾಣವೆಂಬ ಉಪಲಕ್ಷಣವುಳ್ಳ ಚಂದ್ರನೇ ರಯಿಯು, ಅನ್ನವು.

**ಅಥೋತ್ತರೇಣ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ವಿದ್ಯಯಾತ್ಮಾನಮನ್ವಿಷ್ಯಾದಿತ್ಯಮಭಿಜಯನ್ತೇ । ಏತದ್ವೈ ಪ್ರಾಣಾನಾಮಾಯತನಮೇತದಮೃತಮಭಯಮೇತತ್ ಪರಾಯಣಮೇತಸ್ಮಾನ್ನ ಪುನರಾವರ್ತನ್ತ ಇತ್ಯೇಷ ನಿರೋಧಸ್ತದೇಷ ಶ್ಲೋಕಃ ॥ ೧೦ ॥**

೧೦. ಇನ್ನು ಉತ್ತರ (ಮಾರ್ಗ)ದಿಂದ (ಹೋಗುವವರು) ತಪಸ್ಸಿನಿಂದಲೂ ಬ್ರಹ್ಮಚರ್ಯದಿಂದಲೂ ಶ್ರದ್ಧೆಯಿಂದಲೂ ವಿದ್ಯೆಯಿಂದಲೂ ಆತ್ಮನನ್ನು ಹುಡುಕುವವರಾಗಿ ಆದಿತ್ಯನನ್ನು ಗೆದ್ದುಕೊಳ್ಳುವರು. ಇದೇ ಪ್ರಾಣಗಳಿಗೆ ನೆಲೆ; ಇದು ಅಮೃತವು, ಅಭಯವು; ಇದು ಪರಾಯಣವು. ಇದರಿಂದ ಮತ್ತೆ ಹಿಂದಿರುಗುವದಿಲ್ಲ. ಇದು ತಡೆ. ಅಲ್ಲಿ ಈ ಶ್ಲೋಕ (ವಿರುತ್ತದೆ):

(ಭಾಷ್ಯ)

೧೪. ಅಥ ಉತ್ತರೇಣ ಅಯನೇನ ಪ್ರಜಾಪತೇರಂಶಂ ಪ್ರಾಣಮ್ ಅತ್ತಾರಮ್ ಆದಿತ್ಯಮ್ ಅಭಿಜಯನ್ತೇ । ಕೇನ? ತಪಸಾ ಇನ್ದ್ರಿಯಜಯೇನ । ವಿಶೇಷತೋ ಬ್ರಹ್ಮಚರ್ಯೇಣ, ಶ್ರದ್ಧಯಾ ವಿದ್ಯಯಾ ಚ ಪ್ರಜಾಪತ್ಯಾತ್ಮವಿಷಯಯಾ ಆತ್ಮಾನಂ ಪ್ರಾಣಂ ಸೂರ್ಯಂ ಜಗತಸ್ತಸ್ಥುಷಶ್ಚ ಅನ್ವಿಷ್ಯ "ಅಹಮಸ್ಮಿ" ಇತಿ ವಿದಿತ್ವಾ ಆದಿತ್ಯಮ್ ಅಭಿಜಯನ್ತೇ ಅಭಿಪ್ರಾಪ್ನುವನ್ತಿ । ಏತದ್ ವೈ ಆಯತನಂ ಸರ್ವಪ್ರಾಣಾನಾಂ ಸಾಮಾನ್ಯಮ್ ಆಯತನಂ ಆಶ್ರಯಃ । ಏತತ್ ಅಮೃತಮ್ ಅವಿನಾಶಿ ಅಭಯಮ್ ಅತ ಏವ ಭಯವರ್ಜಿತಮ್ ನ ಚನ್ದ್ರವತ್ ಕ್ಷಯವೃದ್ಧಿಭಯವತ್ । ಏತತ್ ಪರಾಯಣಮ್ ಪರಾ ಗತಿಃ ವಿದ್ಯಾವತಾಂ ಕರ್ಮಿಣಾಂ ಚ

---

1. ದಕ್ಷಿಣಾಯನಮಾರ್ಗವನ್ನು ಪಡೆದರೆ ಚಂದ್ರನನ್ನೇ ಮುಟ್ಟುತ್ತಾರೆ. ಚಂದ್ರನೇ ಫಲವಾಗಿರುವದರಿಂದ ಅದನ್ನು ತಿಳಿಸುವದಕ್ಕೆ "ದಕ್ಷಿಣಾಯನ" ಎಂಬ ಶಬ್ದವನ್ನು ಉಪಲಕ್ಷಣವಾಗಿ ಉಪಯೋಗಿಸಿದೆ ಎಂದು ತಿಳಿಯಬೇಕು.

2. ದಕ್ಷಿಣಮಾರ್ಗಕ್ಕೆ ಪಿತೃಗಳ ಮಹಿಮೆಯನ್ನು ಪಡೆದುಕೊಳ್ಳುವದೇ ಫಲವೆಂದು ತೈತ್ತಿರೀಯದ ನಾರಾಯಣಪ್ರಶ್ನದ ಕೊನೆಯಲ್ಲಿ ಹೇಳಿರುವದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು.

ಜ್ಞಾನವತಾಮ್ । ಏತಸ್ಮಾತ್ ನ ಪುನರಾವರ್ತನ್ತೇ ಯಥಾ ಇತರೇ ಕೇವಲಕರ್ಮಿಣ ಇತಿ । ಯಸ್ಮಾತ್ ಏಷಃ ಅವಿದುಷಾಂ ನಿರೋಧಃ । ಆದಿತ್ಯಾದ್ ಹಿ ನಿರುದ್ಧಾಃ ಅವಿದ್ವಾಂಸಃ। ನೈತೇ ಸಂವತ್ಸರಮ್ ಆದಿತ್ಯಮಾತ್ಮಾನಂ ಪ್ರಾಣಮ್ಅಭಿಪ್ರಾಪ್ನುವನ್ತಿ॥

(ಭಾಷ್ಯಾರ್ಥ)

ಇನ್ನು ಉತ್ತರಮಾರ್ಗದಿಂದ ಪ್ರಜಾಪತಿಯ ಅಂಶವಾದ ಅತ್ತೃವಾದ ಪ್ರಾಣನನ್ನು, ಆದಿತ್ಯನನ್ನು, ಗೆದ್ದುಕೊಳ್ಳುವರು. ಏತರಿಂದ? ತಪಸ್ಸಿನಿಂದಲೂ ಎಂದರೆ ಇಂದ್ರಿಯಜಯದಿಂದಲೂ ವಿಶೇಷವಾಗಿ ಬ್ರಹ್ಮಚರ್ಯದಿಂದಲೂ ; ಶ್ರದ್ಧೆಯಿಂದಲೂ ; **ವಿದ್ಯೆ**ಯಿಂದಲೂ ಎಂದರೆ ಪ್ರಜಾಪತ್ಯಾತ್ಮನ ವಿಷಯವಾದ (ಉಪಾಸನೆಯಿಂದಲೂ) **ಆತ್ಮ**ನನ್ನು ಎಂದರೆ ಪ್ರಾಣನನ್ನು ಸ್ಥಾವರಕ್ಕೂ ಜಂಗಮಕ್ಕೂ (ಆತ್ಮನಾಗಿರುವ) ಸೂರ್ಯನನ್ನು[1] ಹುಡುಕಿಕೊಂಡು ನಾನೇ ಆತನು ಎಂದು (ಸಾಕ್ಷಾತ್ತಾಗಿ) ಅರಿತುಕೊಂಡು[2] ಆದಿತ್ಯನನ್ನು ಗೆದ್ದುಕೊಳ್ಳುವರು, ಎಂದರೆ ಪಡೆದುಕೊಳ್ಳುವರು. ಇದೇ ಆಯತನವು ಎಲ್ಲಾ ಪ್ರಾಣಗಳಿಗೂ ಸಮಾನವಾಗಿರುವ ಆಯತನವು, ಆಶ್ರಯವು.[3] ಇದು ಅಮೃತವು, ನಾಶವಾಗುವ (ಸ್ವಭಾವ)ದ್ದಲ್ಲ; ಆದ್ದರಿಂದಲೇ (ಇದು) ಅಭಯವು, ಅಂಜಿಕೆಯಿಲ್ಲದ್ದು, ಚಂದ್ರನಂತೆ ಕ್ಷಯವೃದ್ಧಿಗಳೆಂಬ ಅಂಜಿಕೆಯಿರುವದಿಲ್ಲ.[4] ಇದು ಪರಾಯಣವು,ಉಪಾಸಕರಿಗೂ, ಉಪಾಸನೆಯೊಡನೆ ಕರ್ಮವನ್ನೂ ಮಾಡುವವರಿಗೂ[5] ಹೆಚ್ಚಿನ ಗತಿಯು. ಇದರಿಂದ ಮತ್ತೆ ಹಿಂತಿರುಗುವದಿಲ್ಲ, ಉಳಿದವರು ಎಂದರೆ ಬರಿಯ ಕರ್ಮವನ್ನು ಮಾಡಿದವರು ಹೇಗೆ (ಮತ್ತೆ ಹಿಂತಿರುಗವರೋ) ಹಾಗೆ (ಇದನ್ನು ಪಡೆ

---

1. ಋ. ವೇ. ೨೦-೯-೧೧೭ "ಸೂರ್ಯ ಆತ್ಮಾ ಜಗತಸ್ತಸ್ಥುಷಶ್ಚ" ಎಂಬ ವಾಕ್ಯದ ಆಧಾರದಿಂದ ಇಲ್ಲಿ ಸೂರ್ಯನನ್ನು ಆತ್ಮನೆಂದಿದೆ ಎಂದು ಭಾವ.

2. ಆತ್ಮಾನ್ವೇಷಣೆ ಎಂದರೆ ಗುರುಶಾಸ್ತ್ರೋಪದೇಶಗಳಿಂದ ತಿಳಿದುಕೊಳ್ಳುವದು ; ಇಲ್ಲಿ ಹಾಗೆ ತಿಳಿದುಕೊಂಡು ಉಪಾಸನೆಯಿಂದ ಸಾಕ್ಷಾತ್ಕಾರಮಾಡಿಕೊಳ್ಳುವದು ಎಂದರ್ಥ. ಛಾ. ಭಾ. ೮-೧-೧, ೮-೧-೫ ನೋಡಿ.

3. ಸೂರ್ಯನು ಎಲ್ಲಾ ಪ್ರಾಣಗಳನ್ನೂ ತನ್ನೊಳಗೆ ಸೇರಿಸಿಕೊಳ್ಳುತ್ತಾನೆಂದು ೬ನೆಯ ಮಂತ್ರದಲ್ಲಿ ಹೇಳಿರುವದನ್ನು ನೆನಪಿಗೆ ತಂದುಕೊಳ್ಳಬೇಕು.

4. ಅಮೃತ, ಅಭಯ, ಪರಾಯಣ-ಇವು ಸಗುಣಬ್ರಹ್ಮಕ್ಕೆಅಪೇಕ್ಷಿಕವಾಗಿ ಹೊಂದುವ ವಿಶೇಷಣಗಳು ; ಎಂದರೆ ಇತರಫಲಗಳಿಗೆ ಹೋಲಿಸಿದರೆ ಇದು ಅಮೃತಾದಿಗುಣಗಳುಳ್ಳದ್ದಾಗಿರುತ್ತದೆ. ಛಾ. ಭಾ. ೫-೧೦-೧ ಭಾಷ್ಯದಲ್ಲಿ "ಅಮೃತ" ಶಬ್ದದ ವಿವರಣೆಯನ್ನು ನೋಡಿ.

5. ಕರ್ಮೋಪಾಸನೆಗಳನ್ನು ಕೂಡಿಸಿ ಅನುಷ್ಠಾನಮಾಡುವವರಿಗೆ ಆಗುವ ಹೆಚ್ಚಿನ ಫಲ. ಮುಂ. ಭಾ. ೧-೨-೧೧.

ದವರು) ಹಿಂತಿರುಗುವದಿಲ್ಲ.[1] ಏಕೆಂದರೆ ಅಜ್ಞಾನಿಗಳಿಗೆ[2] ಇದು ತಡೆ. ಆದಿತ್ಯನಿಂದ ಅಜ್ಞಾನಿಗಳು ತಡೆಯಲ್ಪಟ್ಟಿರುತ್ತಾರಲ್ಲವೆ? ಅವರು ಸಂವತ್ಸರರೂಪಿಯಾದ ಆದಿತ್ಯನೆಂಬ ಆತ್ಮನನ್ನು, ಪ್ರಾಣನನ್ನು ಪಡೆಯುವದಿಲ್ಲ.

(ಭಾಷ್ಯ)

೧೫. ಸ ಹಿ ಸಂವತ್ಸರಃ ಕಾಲಾತ್ಮಾ ಅವಿದುಷಾಂ ನಿರೋಧಃ । ತತ್ ತಸ್ಮಿನ್ ಅರ್ಥೇ ಏಷಃ ಶ್ಲೋಕಃ ಮನ್ತ್ರಃ ॥

(ಭಾಷ್ಯಾರ್ಥ)

ಏಕೆಂದರೆ ಆ ಸಂವತ್ಸರರೂಪಿಯಾದ ಕಾಲಾತ್ಮನು ಅಜ್ಞಾನಿಗಳಿಗೆ ತಡೆಯಾಗಿರುತ್ತಾನೆ. ಅಲ್ಲಿ ಎಂದರೆ ಆ ವಿಷಯದಲ್ಲಿ ಈ (ಮುಂದಿನ) ಶ್ಲೋಕವು ಎಂದರೆ ಮಂತ್ರವು (ಇರುತ್ತದೆ) :—

**ಪಞ್ಚಪಾದಂ ಪಿತರಂ ದ್ವಾದಶಾಕೃತಿಂ**
**ದಿವ ಆಹುಃ ಪರೇ ಅರ್ಧೇ ಪುರೀಷಿಣಮ್ ।**
**ಅಥೇಮೇ ಅನ್ಯ ಉ ಪರೇ ವಿಚಕ್ಷಣಂ**
**ಸಪ್ತಚಕ್ರೇ ಷಡರ ಆಹುರರ್ಪಿತಮಿತಿ[3]** ॥ ೧೧ ॥

೧೧. ಐದು ಪಾದಗಳುಳ್ಳ (ಈ) ಪಿತೃವು ಹನ್ನೆರಡು ಆಕೃತಿಗಳುಳ್ಳವನಾಗಿ ದ್ಯುಲೋಕಕ್ಕಿಂತ ಮೇಲಿನ ಸ್ಥಾನದಲ್ಲಿ ಪುರೀಷಿಯಾಗಿರುವನೆಂದು ಹೇಳುವರು. ಇನ್ನು ಈ ಬೇರೆಯವರೋ ಎಂದರೆ (ಈ ಜಗತ್ತು) ವಿಚಕ್ಷಣನಾಗಿ ಏಳುಚಕ್ರವಾಗಿ ಆರು ಹಾರೆ ಕೋಲುಗಳುಳ್ಳ (ಈತನಲ್ಲಿ) ಅರ್ಪಿತವಾಗಿರುವದೆನ್ನುವರು.

(ಭಾಷ್ಯ)

೧೬. ಪಞ್ಚಪಾದಂ ಪಞ್ಚ ಋತವಃ ಪಾದಾ ಇವ ಅಸ್ಯ ಸಂವತ್ಸರಾತ್ಮನಃ ಆದಿತ್ಯಸ್ಯ ತೈಃ ಅಸೌ ಪಾದೈರಿವ ಋತುಭಿಃ ಆವರ್ತತೇ । ಹೇಮನ್ತಶಿಶಿರೌ ಏಕೀಕೃತ್ಯ ಏವಂ ಕಲ್ಪನಾ । ಪಿತರಂ ಸರ್ವಸ್ಯ ಜನಯಿತೃತ್ವಾತ್ ಪಿತೃತ್ವಂ ತಸ್ಯ । ದ್ವಾದಶಾಕೃತಿಂ ದ್ವಾದಶಮಾಸಾ ಆಕೃತಯಃ ಅವಯವಾಃ ಆಕರಣಂ ವಾ ಅವಯವಿಕರಣಮ್

1. ಈ ಕಲ್ಪವು ಕೊನೆಯಾಗುವವರೆಗೂ ಬ್ರಹ್ಮಲೋಕದಲ್ಲಿಯೇ ಇರುತ್ತಾರೆ. ಛಾ. ಭಾ. ೫-೧೦-೧, ೪-೧೪-೫; ಬೃ. ಭಾ. ೬-೨-೧೫ ನೋಡಿ; ಅಥವಾ ಅಲ್ಲಿ ಜ್ಞಾನವಾದರೆ ಹಿಂತಿರುಗುವದೇ ಇಲ್ಲ. ಸೂ. ಭಾ. ೪-೩-೧೦, ೪-೪-೨೨.

2. ಉಪಾಸಕರಲ್ಲದವರಿಗೆ.

3. ಇದು ಅ. ವೇ. ೫-೯-೪೫೨ ರಲ್ಲಿದೆ; ಅಲ್ಲಿ "ವಿಚಕ್ಷಣೇ" ಎಂದು ಪಾಠ. ಋ. ವೇ. ೨-೩-೧೭ ರಲ್ಲಿಯೂ ಇದೆ; ಅಲ್ಲಿ "ಷಳರ" ಎಂದು ಪಾಠ.

ಅಸ್ಯ ದ್ವಾದಶಮಾಸೈಃ ತಂ ದ್ವಾದಶಾಕೃತಿಮ್ । ದಿವಃ ದ್ಯುಲೋಕಾತ್ ಪರೇ ಊರ್ಧ್ವೇ ಅರ್ಧೇ ಸ್ಥಾನೇ ತೃತೀಯಸ್ಯಾಂ ದಿವಿ ಇತ್ಯರ್ಥಃ । ಪುರೀಷಿಣಂ ಪುರೀಷ ವನ್ತಮ್ ಉದಕವನ್ತಮ್ ಆಹುಃ ಕಾಲವಿದಃ । ಅಥ ತಮೇವ ಅನ್ಯೇ ಇಮೇ ಉ ಪರೇ ಕಾಲವಿದಃ ವಿಚಕ್ಷಣಂ ನಿಪುಣಂ ಸರ್ವಜ್ಞಂ ಸಪ್ತಚಕ್ರೇ ಸಪ್ತಹಯರೂಪೇಣ[1] ಚಕ್ರೇ ಸತತಂ ಗತಿಮತಿ ಕಾಲಾತ್ಮನಿ ಷಡರೇ ಷಡೃತುಮತಿ ಆಹುಃ ಸರ್ವಮಿದಂ ಜಗತ್ ಕಥಯನ್ತಿ ಅರ್ಪಿತಮ್ ಅರಾ ಇವ ರಥನಾಭೌ ನಿವಿಷ್ಟಮ್ ಇತಿ । ಯದಿ ಪಞ್ಚಪಾದೋ ದ್ವಾದಶಾಕೃತಿಃ, ಯದಿ ವಾ ಸಪ್ತಚಕ್ರಃ ಷಡರಃ, ಸರ್ವಥಾಪಿ ಸಂವ ತ್ಸರಃ ಕಾಲಾತ್ಮಾ ಪ್ರಜಾಪತಿಶ್ಚನ್ದ್ರಾದಿತ್ಯಲಕ್ಷಣೋ[2] ಜಗತಃ ಕಾರಣಮ್ ॥

(ಭಾಷ್ಯಾರ್ಥ)

**ಐದು ಪಾದಗಳುಳ್ಳವನು;** ಈ ಸಂವತ್ಸರರೂಪಿಯಾದ ಆದಿತ್ಯನಿಗೆ ಐದು ಋತುಗಳು ಪಾದಗಳಂತಿರುವವು, ಆ ಋತುಗಳಿಂದ ಇವನು ಐದು ಕಾಲುಗಳಿಂದಲೋ ಎಂಬಂತೆ ಸುತ್ತುತ್ತಿರುತ್ತಾನೆ. ಹೇಮಂತ, ಶಿಶಿರ-ಎಂಬ ಎರಡು (ಋತು)ಗಳನ್ನು ಒಂದಾಗಿ ಭಾವಿಸಿ ಹೀಗೆ ಕಲ್ಪನೆಮಾಡಿರುತ್ತದೆ. **ಪಿತೃವು:** ಈತನು ಎಲ್ಲವನ್ನೂ ಸೃಷ್ಟಿಮಾಡುತ್ತಿರುವದರಿಂದ ಇವನಿಗೆ ತಂದೆಯ ಸ್ಥಾನವಿರುತ್ತದೆ. **ಹನ್ನೆರಡು ಆಕೃತಿಗಳುಳ್ಳವನು:** ಹನ್ನೆರಡು ತಿಂಗಳು ಇವನಿಗೆ ಆಕೃತಿಗಳು ಎಂದರೆ ಅವಯುವ ಗಳು; ಅಥವಾ ಹನ್ನೆರಡು ತಿಂಗಳುಗಳಿಂದ (ಆಕೃತಿಯು) ಆಕರಣವು[3] ಎಂದರೆ ಇವನನ್ನು ಅವಯುವಿಯನ್ನಾಗಿ ಮಾಡುವಿಕೆಯು (ಏರ್ಪಟ್ಟಿರುತ್ತದೆ)ಯಾದ್ದರಿಂದ (ಇವನು) ಹನ್ನೆರಡು ಆಕೃತಿಗಳುಳ್ಳವನು. ದ್ಯುಲೋಕಕ್ಕಿಂತ[4] ಮೇಲಿರುವ ಅರ್ಧ ದಲ್ಲಿ ಎಂದರೆ ಸ್ಥಾನದಲ್ಲಿ, ಮೂರನೆಯ ದ್ಯುಲೋಕದಲ್ಲಿ[5] ಎಂದರ್ಥ; **ಪುರೀಷಿ** ಯಾಗಿರುವನು, ಪುರೀಷವುಳ್ಳವನು, ನೀರಿನಿಂದ ಕೂಡಿರುವವನು[6] ಎಂದು ಕಾಲ ಜ್ಞಾನಿಗಳು ಹೇಳುವರು. ಇನ್ನು ಈತನನ್ನೇ ಬೇರೆಯ ಕಾಲಜ್ಞರು ವಿಚಕ್ಷಣನಾಗಿ, ಎಂದರೆ ನಿಪುಣನಾಗಿ, ಸರ್ವಜ್ಞನಾಗಿ, ಏಳು ಚಕ್ರವಾಗಿ ಏಳು ಕುದುರೆಗಳ ರೂಪದಿಂದ

---

1. "ಸಪ್ತಹಯರೂಪೇ ಚಕ್ರೇ" ಎಂದು ವಾ॥ ಪಾಠ.

2. "ಚನ್ದ್ರಾದಿತ್ಯಲಕ್ಷಣೋಽಪಿ" ಎಂದು ಆ॥ ಪಾಠದಲ್ಲಿ "ಅಪಿ" ಹೆಚ್ಚು.

3. ಆಕೃತಿ ಎಂದರೆ ಆಕಾರವೆಂದು ಮೊದಲನೆಯ ವ್ಯಾಖ್ಯಾನ; ಆಕರಣ, ಮಾಡುವಿಕೆ ಎಂದು ಎರಡನೆಯ ವ್ಯಾಖ್ಯಾನ. ತಾತ್ಪರ್ಯವು ಎರಡು ಕಡೆಯಲ್ಲಿಯೂ ಒಂದೇ.

4. ಅಂತರಿಕ್ಷಲೋಕಕ್ಕಿಂತ.

5. ಸ್ವರ್ಗದಲ್ಲಿ.

6. ಸೂರ್ಯನಿಂದಲೇ ಮಳೆ. ಮನು, ೩-೭೬.

ಚಕ್ರರೂಪನಾಗಿ[1] ಎಂದರೆ ಎಡೆಬಿಡದೆ ನಡೆಯುತ್ತಿರುವ ಆರು ಹಾರೆಕೋಲುಗಳುಳ್ಳ ಎಂದರೆ ಆರು ಋತುಗಳಿಂದ ಕೂಡಿರುವ (ಈ) ಕಾಲಾತ್ಮನಲ್ಲಿ ಅರ್ಪಿತವಾಗಿರುವದು, ಬಂಡಿಯ ಚಕ್ರದ ಗುಂಪಿನಲ್ಲಿ ಹಾರೆಕೋಲುಗಳಂತೆ ಸೇರಿಕೊಂಡಿದೆ-ಎಂದು (ಹೇಳುವರು).

ಐದು ಪಾದಗಳುಳ್ಳವನು, ಹನ್ನೆರಡು ಆಕೃತಿಯುಳ್ಳವನು-ಎಂದೇ ಆಗಲಿ, ಏಳು ಚಕ್ರವಾಗಿರುವವನು ಆರು ಹಾರೆಕೋಲುಗಳುಳ್ಳವನು-ಎಂದೇ ಆಗಲಿ, ಹೇಗೇ ಆದರೂ ಚಂದ್ರ, ಆದಿತ್ಯ-ಎಂಬ ರೂಪದಲ್ಲಿರುವ ಸಂವತ್ಸರನೆಂಬ ಕಾಲಾತ್ಮನು ಜಗತ್ತಿಗೆ ಕಾರಣನಾಗಿರುತ್ತಾನೆ.

## ಮಾಸರೂಪಿಯಾದ ಪ್ರಜಾಪತಿ

**ಮಾಸೋ ವೈ ಪ್ರಜಾಪತಿಸ್ತಸ್ಯ ಕೃಷ್ಣಪಕ್ಷ ಏವ ರಯಿಃ ಶುಕ್ಲಃ ಪ್ರಾಣಸ್ತಸ್ಮಾದೇತೇ ಋಷಯಃ ಶುಕ್ಲ ಇಷ್ಟಂ ಕುರ್ವನ್ತೀತರ ಇತರಸ್ಮಿನ್ ॥ ೧೨ ॥**

೧೨. ತಿಂಗಳೇ ಪ್ರಜಾಪತಿಯು. ಅವನಿಗೆ ಕೃಷ್ಣಪಕ್ಷವೇ ರಯಿ, ಶುಕ್ಲ (ಪಕ್ಷ) ವು ಪ್ರಾಣವು. ಆದ್ದರಿಂದ ಈ ಋಷಿಗಳು ಶುಕ್ಲದಲ್ಲಿ ಇಷ್ಟವನ್ನು ಮಾಡುತ್ತಾರೆ, ಮಿಕ್ಕವರು ಇನ್ನೊಂದರಲ್ಲಿ (ಮಾಡುತ್ತಾರೆ).

(ಭಾಷ್ಯ)

೧೭. ಯಸ್ಮಿನ್ ಇದಂ ಶ್ರಿತಂ ವಿಶ್ವಂ ಸ ಏವ ಪ್ರಜಾಪತಿಃ ಸಂವತ್ಸರಾಖ್ಯಃ ಸ್ವಾವಯವೇ ಮಾಸೇ ಕೃತ್ಸ್ನಃ ಪರಿಸಮಾಪ್ಯತೇ । ಮಾಸೋ ವೈ ಪ್ರಜಾಪತಿಃ । ಯಥೋಕ್ತಲಕ್ಷಣ ಏವ ಮಿಥುನಾತ್ಮಕಃ । ತಸ್ಯ ಮಾಸಾತ್ಮನಃ ಪ್ರಜಾಪತೇಃ ಏಕೋ ಭಾಗಃ ಕೃಷ್ಣಪಕ್ಷ ಏವ[2] ರಯಿಃ ಅನ್ನಂ ಚನ್ದ್ರಮಾಃ । ಅಪರೋ ಭಾಗಃ ಶುಕ್ಲಃ ಶುಕ್ಲಪಕ್ಷಃ ಪ್ರಾಣಃ ಆದಿತ್ಯಃ ಅತ್ತಾ ಅಗ್ನಿಃ । ಯಸ್ಮಾತ್ ಶುಕ್ಲಪಕ್ಷಾತ್ಮಾನಂ ಪ್ರಾಣಂ ಸರ್ವಮೇವ ಪಶ್ಯನ್ತಿ ತಸ್ಮಾತ್ ಪ್ರಾಣದರ್ಶಿನಃ ಏತೇ ಋಷಯಃ ಕೃಷ್ಣಪಕ್ಷೇಽಪಿ ಇಷ್ಟಂ ಯಾಗಂ ಕುರ್ವನ್ತಃ ಶುಕ್ಲಪಕ್ಷೇ ಏವ ಕುರ್ವನ್ತಿ । ಪ್ರಾಣವ್ಯತಿರೇಕೇಣ

1. ಚಕ್ರದಂತೆ ಮತ್ತೆ ಮತ್ತೆ ಸುತ್ತುತ್ತಿರುವದರಿಂದ ಚಕ್ರರೂಪನಾಗಿ ಎಂದಿದೆ. ಏಳು ಕುದುರೆಗಳಿಂದ ಏಳು ಕಿರಣಗಳು; ಜಗತ್ತೆಲ್ಲಕ್ಕೂ ರಸವೀರ್ಯಾದಿಗಳನ್ನು ಕೊಟ್ಟು ಅನುಗ್ರಹಿಸುವ ರಶ್ಮಿಯೆಂದು, ಅದಕ್ಕೆ ಅಂಗವಾಗಿರುವ ಋತ್ವಾತ್ಮಕವಾದ ರಶ್ಮಿಗಳು ಆರು. ತೈ. ಆ. ಭಾ. ೧-೩-೧ ನೋಡಿ. ಅ. ವೇ. ೪-೪-೪೮೨, ಋ. ವೇ ೨-೩-೧೭ ರಲ್ಲಿ ಏಳು ಕುದುರೆಗಳನ್ನು ತಿಳಿಸುವ ಮಂತ್ರವಿದೆ.

2. "ಏವ" ಎಂಬ ಮಾತು ಅ॥ ಪಾಠದಲ್ಲಿಲ್ಲ.

ಕೃಷ್ಣಪಕ್ಷಸ್ತೈರ್ನ ದೃಶ್ಯತೇ ಯಸ್ಮಾತ್ । ಇತರೇ ತು ಪ್ರಾಣಂ ನ ಪಶ್ಯನ್ತಿ ಇತಿ ಅದರ್ಶನಲಕ್ಷಣಂ ಕೃಷ್ಣಾತ್ಮಾನಮೇವ ಪಶ್ಯನ್ತಿ ಇತರೇ ಇತರಸ್ಮಿನ್, ಕೃಷ್ಣಪಕ್ಷೇ ಏವ ಕುರ್ವನ್ತಿ ಶುಕ್ಲೇ ಕುರ್ವನ್ತೋಽಪಿ ॥

(ಭಾಷ್ಯಾರ್ಥ)

ಯಾವನಲ್ಲಿ ಈ (ಜಗತ್ತು) ಆಶ್ರಯಿಸಿಕೊಂಡಿರುವದೋ ಸಂವತ್ಸರನೆಂಬ ಹೆಸರಿನ ಆ ಪ್ರಜಾಪತಿಯೇ ತನ್ನ ಅವಯವನವಾದ ಮಾಸದಲ್ಲಿ ಪೂರ್ಣವಾಗಿ[1] ಪರಿಸಮಾಪ್ತನಾಗಿರುತ್ತಾನೆ. ಮಾಸನೇ ಪ್ರಜಾಪತಿಯು, ಹಿಂದೆ ಹೇಳಿದ ರೂಪದ ಜೋಡಿಯಾಗಿರುವವನು.[2] ಆ ತಿಂಗಳರೂಪವಾಗಿರುವ ಪ್ರಜಾಪತಿಯ ಒಂದು ಭಾಗವಾಗಿರುವ ಕೃಷ್ಣಪಕ್ಷವೇ ರಯಿಯು, ಅನ್ನವು, ಚಂದ್ರನು.[3] ಇನ್ನೊಂದು ಭಾಗವಾದ ಶುಕ್ಲವೇ ಶುಕ್ಲಪಕ್ಷವು ಪ್ರಾಣವು, ಆದಿತ್ಯನು, ಅತ್ತೃವು, ಅಗ್ನಿ. (ಹೀಗೆ) ಶುಕ್ಲಪಕ್ಷರೂಪನಾಗಿರುವ ಪ್ರಾಣನನ್ನು ಎಲ್ಲವೂ[4] ಆಗಿರುವನೆಂದು ನೋಡುತ್ತಾರಾದ್ದರಿಂದ[5] ಪ್ರಾಣ (ಸ್ವರೂಪವನ್ನು) ಬಲ್ಲ[6] ಈ ಋಷಿಗಳು ಕೃಷ್ಣಪಕ್ಷದಲ್ಲೂ ಯಾಗವನ್ನು ಮಾಡಿದ(ರೂ) ಶುಕ್ಲಪಕ್ಷದಲ್ಲಿಯೇ ಮಾಡಿದವರಾಗುತ್ತಾರೆ.[7] ಏಕೆಂದರೆ ಪ್ರಾಣನಿಗಿಂತ ಬೇರೆಯಾಗಿ ಕೃಷ್ಣಪಕ್ಷವು ಅವರಿಗೆ ಕಾಣಿಸುವದಿಲ್ಲ[8] ಉಳಿದವರಾದರೋ ಪ್ರಾಣನನ್ನು ಅರಿಯರಾದ್ದರಿಂದ (ಯಾವದನ್ನೂ) ಕಾಣದಿರುವ ರೂಪದ ಕೃಷ್ಣಸ್ವರೂಪವನ್ನೇ ಕಾಣುತ್ತಾರೆ. (ಆದ್ದರಿಂದ ಆ) ಉಳಿದವರು ಶುಕ್ಲ(ಪಕ್ಷದಲ್ಲಿ ಇಷ್ಟಿಯನ್ನು) ಮಾಡಿದರೂ ಇನ್ನೊಂದರಲ್ಲಿ ಎಂದರೆ ಕೃಷ್ಣಪಕ್ಷದಲ್ಲಿಯೇ ಮಾಡಿದವರಾಗುತ್ತಾರೆ.

---

1. ಪ್ರಜಾಪತಿಯು ಸೂರ್ಯ, ಚಂದ್ರ-ಈ ಒಂದೊಂದು ರೂಪದಲ್ಲಿಯೂ ಪೂರ್ಣನಾಗಿರುತ್ತಾನೆ. ಸೂರ್ಯಚಂದ್ರರಿಂದಾಗಿರುವ ಸಂವತ್ಸರದಲ್ಲಿಯೂ ಪೂರ್ಣವಾಗಿರುತ್ತಾನೆ. ಇದರಂತೆಯೇ ಸಂವತ್ಸರದ ಅವಯವವಾದ ಮಾಸದಲ್ಲಿಯೂ ಪೂರ್ಣನಾಗಿರುತ್ತಾನೆಂದು ಭಾವಿಸಬೇಕು.

2. ರಯಿಪ್ರಾಣಾತ್ಮಕನಾಗಿರುವ ಎಂದರ್ಥ. ಎಲ್ಲೆಲ್ಲಿ ಪ್ರಜಾಪತಿದೃಷ್ಟಿಯನ್ನು ಮಾಡಬೇಕೆಂದು ಹೇಳಿದೆಯೋ ಅಲ್ಲೆಲ್ಲ ರಯಿಪ್ರಾಣಗಳೆಂಬ ಅವಯವಗಳನ್ನು ಭಾವಿಸಬೇಕೆಂದು ಹೇಳಿದೆ.

3. ಏಕೆಂದರೆ ಶುಕ್ಲಪಕ್ಷಕ್ಕೇ ಮಾಸದಲ್ಲಿ ಪ್ರಾಧಾನ್ಯ; ಕೃಷ್ಣಪಕ್ಷಕ್ಕಲ್ಲ.

4. ಎಲ್ಲವೂ ಪ್ರಾಣನೇ, ದೃಷ್ಟಿಭೇದದಿಂದ ಎಲ್ಲವೂ ರಯಿಯೇ-ಎಂದು ಭಾ. ಭಾ. ೬ ರಲ್ಲಿ ಹೇಳಿರುವವನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು.

5. ಭಾವಿಸುತ್ತಾರಾದ್ದರಿಂದ.

6. ಸಾಕ್ಷಾತ್ಕಾರಮಾಡಿಕೊಂಡಿರುವ.

7. ಪ್ರಾಣಾತ್ಮೋಪಾಸಕರು ಯಾವ ಪಕ್ಷದಲ್ಲಿ ಮಾಡಿದರೂ ಶುಕ್ಲಪಕ್ಷದಲ್ಲಿಯೇ ಮಾಡಿದಂತೆ ಎಂದಿರುವದು ಆ ಉಪಾಸನೆಯನ್ನು ಹೊಗಳುವದಕ್ಕಾಗಿ.

8. ಅದೂ ಅವರ ದೃಷ್ಟಿಯಲ್ಲಿ ಶುಕ್ಲಪಕ್ಷವೇ ಆಗಿರುತ್ತದೆ. ಆದ್ದರಿಂದ ಎಲ್ಲವನ್ನೂ ಪ್ರಾಣವೆಂದು ತಿಳಿಯುವದು ಉತ್ತಮಭಾವನೆ.

# ಅಹೋರಾತ್ರರೂಪನಾದ ಪ್ರಜಾಪತಿ

**ಅಹೋರಾತ್ರೋ ವೈ ಪ್ರಜಾಪತಿಸ್ತಸ್ಯಾಹರೇವ ಪ್ರಾಣೋ ರಾತ್ರಿರೇವ ರಯಿಃ ಪ್ರಾಣಂ ವಾ ಏತೇ ಪ್ರಸ್ಕನ್ದನ್ತಿ ಯೇ ದಿವಾ ರತ್ಯಾ ಸಂಯುಜ್ಯನ್ತೇ ಬ್ರಹ್ಮಚರ್ಯಮೇವ ತದ್ ಯದ್ ರಾತ್ರೌ ರತ್ಯಾ ಸಂಯುಜ್ಯನ್ತೇ ॥ ೧೩ ॥**

೧೩. ಹಗಲುರಾತ್ರೆಯೇ ಪ್ರಜಾಪತಿಯು. ಅವನಿಗೆ ಹಗಲೇ ಪ್ರಾಣ, ರಾತ್ರೆಯೇ ರಯಿ. ಯಾರು ಹಗಲು ರತಿಯೊಡನೆ ಸಂಯೋಗ ಮಾಡುವರೋ ಅವರು ಪ್ರಾಣವನ್ನೇ ಚಲ್ಲುವರು. ರಾತ್ರೆಯಲ್ಲಿ ರತಿಯೊಡನೆ ಸಂಯೋಗವಾಗುವದುಂಟಲ್ಲ, ಅದು ಬ್ರಹ್ಮಚರ್ಯವೇ.

(ಭಾಷ್ಯ)

೧೮. ಸೋಽಪಿ ಮಾಸಾತ್ಮಾ ಪ್ರಜಾಪತಿಃ ಸ್ವಾವಯವೇ ಅಹೋರಾತ್ರೇ ಪರಿಸಮಾಪ್ಯತೇ "ಅಹೋರಾತ್ರೋ ವೈ ಪ್ರಜಾಪತಿಃ" ಪೂರ್ವವತ್[1] । ತಸ್ಯ[2] ಅಹರೇವ ಪ್ರಾಣಃ, ಅತ್ತಾ, ಅಗ್ನಿಃ । ರಾತ್ರಿರೇವ ರಯಿಃ ಪೂರ್ವವದೇವ[3] । ಪ್ರಾಣಮ್ ಅಹರಾತ್ಮಾನಂ ವಾ ಏತೇ ಪ್ರಸ್ಕನ್ದನ್ತಿ ನಿರ್ಗಮಯನ್ತಿ ಶೋಷಯನ್ತಿ ವಾ ಸ್ವಾತ್ಮನೋ ವಿಚ್ಛಿದ್ಯ ಅಪನಯನ್ತಿ । ಕೇ? ಯೇ ದಿವಾ ಅಹನಿ ರತ್ಯಾ ರತಿಕಾರಣಭೂತಯಾ ಸಹ ಸ್ತ್ರಿಯಾ ಸಂಯುಜ್ಯನ್ತೇ[4] ಮೈಥುನಮಾಚರನ್ತಿ ಮೂಢಾಃ । ಯತ ಏವಂ ತಸ್ಮಾತ್ ತನ್ನ ಕರ್ತವ್ಯಮ್ ಇತಿ ಪ್ರತಿಷೇಧಃ ಪ್ರಾಸಙ್ಗಿಕಃ । ಯತ್ ರಾತ್ರೌ ಸಂಯುಜ್ಯನ್ತೇ ರತ್ಯಾ ಋತೌ ಬ್ರಹ್ಮಚರ್ಯಮೇವ ತತ್ ಇತಿ ಪ್ರಶಸ್ತತ್ವಾತ್ ರಾತ್ರೌ[5] ಭಾರ್ಯಾಗಮನಂ ಕರ್ತವ್ಯಮ್ ಇತ್ಯಯಮಪಿ ಪ್ರಾಸಙ್ಗಿಕೋ ವಿಧಿಃ ॥

---

1. "ಪರಿಸಮಾಪ್ಯತೇ ಪೂರ್ವವತ್" ಎಂದು ಅ॥ ಪಾಠ; ಆ ಪಾಠದಲ್ಲಿ "ಅಹೋರಾತ್ರೋ ವೈ ಪ್ರಜಾಪತಿಃ" ಎಂಬ ವಾಕ್ಯವು ಕೈಬಿಟ್ಟುಹೋಗಿರುತ್ತದೆ.

2. "ತಸ್ಯಾಪಿ" ಎಂದು ಅ॥ ಪಾಠ.

3. "ಪೂರ್ವವತ್" ಎಂದಿಷ್ಟೇ ಅ॥ ಪಾಠ.

4. "ಸಂಯುಜ್ಯನ್ತೇ ಮಿಥುನಮ್" ಎಂದು ಅ॥ ಪಾಠ.

5. "ರಾತ್ರೌ" ಎಂಬುದಕ್ಕೆ "ಋತೌ" ಎಂದು ಅ॥ ಪಾಠ. "ರಾತ್ರೌ" ಎಂಬ ವಾ॥ ಪಾಠವು ಉತ್ತಮ.

(ಭಾಷ್ಯಾರ್ಥ)

ಆ ತಿಂಗಳರೂಪದಲ್ಲಿರುವ ಪ್ರಜಾಪತಿಯೂ ತನ್ನ ಅವಯುವವಾದ ಅಹೋರಾತ್ರ (ರೂಪವಾದ ದಿವಸದಲ್ಲಿ) ಪರಿಸಮಾಪ್ತನಾಗಿರುತ್ತಾನೆ.[1] "ಅಹೋರಾತ್ರವೇ ಪ್ರಜಾಪತಿಯು" ಎಂದಿರುವ (ವಾಕ್ಯಕ್ಕೆ) ಹಿಂದಿನಂತೆ (ಅರ್ಥವನ್ನು ಮಾಡಬೇಕು)[2]. ಅವನಿಗೆ ಹಗಲೇ ಪ್ರಾಣ ಎಂದರೆ ಅತ್ತೃ, ಅಗ್ನಿ; ರಾತ್ರಿಯೇ ರಯಿ ಎಂಬುದು ಹಿಂದಿನಂತೆಯೇ.[3] ಅವರು ಹಗಲಿನ ರೂಪದಲ್ಲಿರುವ ಪ್ರಾಣವನ್ನೇ ಚಲ್ಲಿದವರಾಗುತ್ತಾರೆ, ಹೊರಹೊರಡಿಸಿದವರಾಗುತ್ತಾರೆ; ಅಥವಾ ಒಣಗಿಸಿದವರಾಗುತ್ತಾರೆ,[4] ತಮ್ಮಿಂದ ಬೇರ್ಪಡಿಸಿ ಹೊರಕ್ಕೆ ಹಾಕಿದವರಾಗುತ್ತಾರೆ (ಎಂದೂ 'ಪ್ರಸ್ಕನ್ದನ್ತಿ' ಎಂಬ ಮಾತಿಗೆ ಅರ್ಥವನ್ನು ಮಾಡಬಹುದು. ಹೀಗೆ ಮಾಡುವವರು) ಯಾರು? ಎಂದರೆ ಯಾರು ಹಗಲು ಹಗಲುಹೊತ್ತಿನಲ್ಲಿ ರತಿಯೊಡನೆ ಎಂದರೆ ರತಿಗೆ ಕಾರಣಳಾಗಿರುವ ಹೆಂಡತಿಯೊಡನೆ ಕೂಡುವರೋ ಮೈಥುನಕರ್ಮವನ್ನಾಚರಿಸುವರೋ (ಅ) ಮೂಢರು. ಹೀಗಿರುವದರಿಂದ ಅದನ್ನು ಮಾಡಬಾರದು ಎಂದು ಪ್ರಸಂಗದಿಂದ[5] ನಿಷೇಧಮಾಡಿರುತ್ತದೆ. ರಾತ್ರಿಯಲ್ಲಿ ರತಿಯೊಡನೆ ಋತುಕಾಲದಲ್ಲಿ ಕೂಡುವದೆಂಬುದು ಬ್ರಹ್ಮಚರ್ಯವೇ. ಹೀಗೆಂದು (ಅದನ್ನು) ಹೊಗಳಿರುವದರಿಂದ ರಾತ್ರಿಯಲ್ಲಿ[6] ಭಾರ್ಯಾಗಮನವನ್ನು ಮಾಡಬೇಕು ಎಂಬಿದೂ ಪ್ರಾಸಂಗಿಕವಾದ ವಿಧಿಯು.

---

1. "ಪರಿಸಮಾಪ್ಯತೇ ಪೂರ್ವವತ್" ಎಂಬ ಆ|| ಪಾಠದಲ್ಲಿ ಪೂರ್ಣವಾಗಿ ಪರಿಸಮಾಪ್ತನಾಗಿರುತ್ತಾನೆ ಎಂಬರ್ಥವನ್ನು ಹೇಳಬಹುದು. ಒಂದೊಂದು ಅಹೋರಾತ್ರವನ್ನೂ ಪೂರ್ಣವಾಗಿ ಪ್ರಜಾಪತಿಯೇ ಎಂದು ಭಾವಿಸಬೇಕು; ಪ್ರಜಾಪತಿಯ ಒಂದಂಶವೆಂದು ಭಾವಿಸಬೇಕಾದದ್ದಿಲ್ಲ ಎಂದು ಅಭಿಪ್ರಾಯ.

2. ಹಿಂದೆ ಹೇಳಿದಂತೆ ರಯಿಪ್ರಾಣಗಳೆಂಬ ಮಿಥುನರೂಪವಾಗಿರುವ ಪ್ರಜಾಪತಿಯೆಂದು ತಿಳಿಯಬೇಕು ಎಂದು ಅಭಿಪ್ರಾಯ.

3. ರಯಿಯು ಎಂದರೆ ಅನ್ನವು, ಚಂದ್ರನು–ಎಂದರ್ಥ.

4. "ಸ್ಕನ್ದಿರ್ ಗತಿಶೋಷಣಯೋಃ" ಎಂದು ಸ್ಕನ್ದ್ ಧಾತುವಿಗೆ ಗಮನ, ಶೋಷಣ–ಎಂಬ ಎರಡು ಅರ್ಥಗಳನ್ನೂ ಇಲ್ಲಿ ತೆಗೆದುಕೊಳ್ಳಬಹುದು ಎಂದು ಭಾವ.

5. ಹಗಲು ಸ್ತ್ರೀಸಂಬಂಧವನ್ನು ಮಾಡಬಾರದೆಂಬುದಾಗಲಿ ಮಾಡಬೇಕೆಂಬುದಾಗಲಿ ಪ್ರಕೃತವಲ್ಲ; ಈ ವಿಧಿನಿಷೇಧಗಳು ಪ್ರಾಸಂಗಿಕವು. ಪ್ರಜಾಪತಿಯು ಅನ್ನರೇತಸ್ಸಿನಕ್ರಮದಿಂದ ಪ್ರಜೆಗಳನ್ನು ಉತ್ಪತ್ತಿಮಾಡುತ್ತಾನೆ ಎಂಬುದು ಪ್ರಕೃತವು.

6. ಋತುಕಾಲದಲ್ಲಿ ಎಂಬುದನ್ನು ಇಲ್ಲಿ ಸೇರಿಸಿಕೊಳ್ಳಬೇಕು.

# ಅನ್ನರೂಪನಾದ ಪ್ರಜಾಪತಿ

(ಭಾಷ್ಯ)

೧೯. ಪ್ರಕೃತಂ ತು ಉಚ್ಯತೇ ಸಃ ಅಹೋರಾತ್ರಾತ್ಮಕಃ ಪ್ರಜಾಪತಿಃ ವ್ರೀಹಿ ಯವಾದ್ಯನ್ನಾತ್ಮನಾ ವ್ಯವಸ್ಥಿತಃ । ಏವಂಕ್ರಮೇಣ ಪರಿಣಮ್ಯ—

(ಭಾಷ್ಯಾರ್ಥ)

ಆದರೆ ಪ್ರಕೃತವಾದದ್ದೇನೆಂದರೆ ಹೇಳುತ್ತೇವೆ. ಈ ಹಗಲುರಾತ್ರಿಯ ರೂಪದ ಪ್ರಜಾಪತಿಯು ಬತ್ತ, ಜವೆಗೋಧಿ-ಮುಂತಾದ ಅನ್ನದ ರೂಪದಿಂದ(ಪರಿಣಾಮವಾಗಿ) ನಿಲ್ಲುತ್ತಾನೆ. ಈ ಕ್ರಮದಲ್ಲಿ ಪರಿಣಾಮವಾಗಿರುವ

**ಅನ್ನಂ ವೈ ಪ್ರಜಾಪತಿಸ್ತತೋ ಹ ವೈ ತದ್ರೇತಸ್ತಸ್ಮಾದಿಮಾಃ ಪ್ರಜಾಃ ಪ್ರಜಾಯನ್ತ ಇತಿ ॥ ೧೪ ॥**

೧೪. ಅನ್ನವೇ ಪ್ರಜಾಪತಿಯು. ಅದರಿಂದಲೇ ಆ ರೇತಸ್ಸು. ಅದರಿಂದಲೇ ಈ ಪ್ರಜೆಗಳು ಉಂಟಾಗುವರು.

(ಭಾಷ್ಯ)

೨೦. ತತ್ ಅನ್ನಂ ವೈ ಪ್ರಜಾಪತಿಃ । ಕಥಮ್ ? ತತಃ ತಸ್ಮಾತ್ ಹ ವೈ ರೇತಃ ನೃಬೀಜಂ ತತ್ ಪ್ರಜಾಕಾರಣಮ್ । ತಸ್ಮಾತ್ ಯೋಷಿತಿ ಸಿಕ್ತಾತ್ ಇಮಾಃ ಮನುಷ್ಯಾದಿಲಕ್ಷಣಾಃ ಪ್ರಜಾಃ ಪ್ರಜಾಯನ್ತೇ । ಯತ್ ಪೃಷ್ಟಂ ಕುತೋ ಹ ವೈ ಪ್ರಜಾಃ ಪ್ರಜಾಯನ್ತೇ ಇತಿ ತದೇವಂ ಚನ್ದ್ರಾದಿತ್ಯಮಿಥುನಾದಿಕ್ರಮೇಣ ಅಹೋರಾತ್ರಾನ್ತೇನ ಅನ್ನರೇತೋದ್ವಾರೇಣ[1] ಪ್ರಜಾಃ ಪ್ರಜಾಯನ್ತೇ ಇತಿ ನಿರ್ಣೀತಮ್ ॥

(ಭಾಷ್ಯಾರ್ಥ)

ಆ ಅನ್ನವೇ ಪ್ರಜಾಪತಿಯು. ಹೇಗೆಂದರೆ ಅದರಿಂದಲೇ ಆ (ಅನ್ನದಿಂದ)ಲೇ ಅಲ್ಲವೆ, ಪ್ರಜಾಕಾರಣವಾದ ರೇತಸ್ಸು ಎಂದರೆ ಮನುಷ್ಯನಲ್ಲಿರುವ ಬೀಜವು? ಸ್ತ್ರೀಯಲ್ಲಿ ಚಿಮುಕಿಸಿದ ಆ (ರೇತಸ್ಸಿ)ನಿಂದ ಈ ಮನುಷ್ಯನೇ ಮುಂತಾದ ಪ್ರಜೆಗಳು ಹುಟ್ಟುತ್ತಾರೆ.

"ಪ್ರಜೆಗಳು ಎಲ್ಲಿಂದ ಹುಟ್ಟುತ್ತಾರೆ" ಎಂದು (ಕಬಂಧಿಯು) ಕೇಳಿದನಷ್ಟೆ, ಅದಕ್ಕೆ ಹೀಗೆ ಚಂದ್ರ, ಆದಿತ್ಯ-ಎಂಬ ಮಿಥುನವೇ ಮುಂತಾಗಿರುವ ಅಹೋರಾತ್ರದ ವರೆಗಿರುವ (ಮಿಥುನಗಳ) ಕ್ರಮದಿಂದ ಅನ್ನ, ರೇತಸ್ಸು-ಈ ಮೂಲಕವಾಗಿ ಪ್ರಜೆಗಳು ಹುಟ್ಟುತ್ತಾರೆ ಎಂದು ನಿರ್ಣಯಮಾಡಿ (ಉತ್ತರ) ಹೇಳಿದಂತೆ ಆಯಿತು.

---

1. "ಅನ್ನಾಸೃಗ್ರೇತೋದ್ವಾರೇಣ" ಎಂದು ಆ॥ ಪಾಠದಲ್ಲಿ "ಅಸೃಕ್" ಎಂಬ ಮಾತು ಹೆಚ್ಚಾಗಿದೆ.

## ಕರ್ಮಿಗಳಿಗೂ ಸಮುಚ್ಚಯಾನುಷ್ಠಾನವನ್ನು ಮಾಡುವವರಿಗೂ ದೊರಕುವ ಫಲಗಳು.

**ತದ್ ಯೇ ಹ ವೈ ತತ್ ಪ್ರಜಾಪತಿವ್ರತಂ ಚರನ್ತಿ ತೇ ಮಿಥುನಮುತ್ಪಾದಯನ್ತೇ। ತೇಷಾಮೇವೈಷ ಬ್ರಹ್ಮಲೋಕೋ ಯೇಷಾಂ ತಪೋ ಬ್ರಹ್ಮಚರ್ಯಂ ಯೇಷು ಸತ್ಯಂ ಪ್ರತಿಷ್ಠಿತಮ್ ॥ ೧೩ ॥**

೧೩. ಆದ್ದರಿಂದ ಯಾರಾದರೆ ಆ ಪ್ರಜಾಪತಿವ್ರತವನ್ನು ಮಾಡುವರೋ ಅವರು ಮಿಥುನವನ್ನು ಉಂಟುಮಾಡುತ್ತಾರೆ. ತಪಸ್ಸೂ, ಬ್ರಹ್ಮಚರ್ಯವೂ ಯಾರವೋ ಯಾರಲ್ಲಿ ಸತ್ಯವು ಪ್ರತಿಷ್ಠಿತವಾಗಿರುತ್ತದೆಯೋ ಅವರಿಗೇ ಈ ಬ್ರಹ್ಮಲೋಕವು.

(ಭಾಷ್ಯ)

೨೧. ತತ್ ತತ್ರ ಏವಂ ಸತಿ ಯೇ ಗೃಹಸ್ಥಾಃ । ಹ ವೈ ಇತಿ ಪ್ರಸಿದ್ಧ ಸ್ಮರಣಾರ್ಥೌ ನಿಪಾತೌ । ತತ್ ಪ್ರಜಾಪತೇಃ ವ್ರತಮ್ ಋತೌ ಭಾರ್ಯಾಗಮನಂ ಚರನ್ತಿ ಕುರ್ವನ್ತಿ ತೇಷಾಂ ದೃಷ್ಟಫಲಮ್ ಇದಮ್ । ಕಿಮ್? ತೇ ಮಿಥುನಮ್ ಪುತ್ರಂ ದುಹಿತರಂ ಚ ಉತ್ಪಾದಯನ್ತೇ । ಅದೃಷ್ಟಂ ಚ ಫಲಮ್ ಇಷ್ಟಾಪೂರ್ತದತ್ತ ಕಾರಿಣಾಂ ತೇಷಾಮೇವ ಏಷ ಯಶ್ಚಾನ್ದ್ರಮಸೋ ಬ್ರಹ್ಮಲೋಕಃ, ಪಿತೃಯಾಣ ಲಕ್ಷಣಃ । ಯೇಷಾಂ ತಪಃ ಸ್ನಾತಕವ್ರತಾದಿ[1] ಬ್ರಹ್ಮಚರ್ಯಮ್ ಋತೋರನ್ಯತ್ರ[2] ಮೈಥುನಾಸಮಾಚರಣಮ್[3] । ಯೇಷು ಚ ಸತ್ಯಮ್ ಅನೃತವರ್ಜನಮ್ । ಪ್ರತಿಷ್ಠಿತಮ್ ಅವ್ಯಭಿಚಾರಿತಯಾ ವರ್ತತೇ ನಿತ್ಯಮೇವ ॥

(ಭಾಷ್ಯಾರ್ಥ)

ಆದ್ದರಿಂದ ಇದು ಹೀಗಿರುವದರಿಂದ[4] ಯಾವ **ಗೃಹಸ್ಥರು**[5] 'ಹ' 'ವೈ' ಎಂಬ ನಿಪಾತಗಳೆರಡೂ (ಇದು) ಪ್ರಸಿದ್ಧವಾದದ್ದೆಂದು ನೆನಪುಕೊಡುವದಕ್ಕೆ (ಬಂದಿವೆ)

---

1. "ವ್ರತಾದೀನಿ" ಎಂದು ಆ॥ ಪಾಠ.

2. "ಋತಾವನ್ಯತ್ರ" ಎಂಬ ಆ॥ ಪಾಠಕ್ಕಿಂತ ಈ ವಾ॥ ಪಾಠವು ಉತ್ತಮ.

3. ಈ ಮಾತಿನ ಮುಂದೆ "ಬ್ರಹ್ಮಚರ್ಯಮ್" ಎಂದು ಆ॥ ಪಾಠದಲ್ಲಿ ಹೆಚ್ಚಾಗಿದೆ.

4. ಪ್ರಜಾಪತಿಯಿಂದಲೇ ಪ್ರಜೆಗಳು ಹುಟ್ಟುವರಾದ್ದರಿಂದ.

5. ಮುಂದೆ ಮಕ್ಕಳನ್ನು ಪಡೆಯುವರೆಂದು ಹೇಳಿರುವದರಿಂದ ಇದು ಮಿಕ್ಕ ಆಶ್ರಮಿಗಳಿಗೆ ಹೊಂದುವ ಹಾಗಿಲ್ಲ. ಕರ್ಮಕ್ಕೆ ಆಗುವ ಗತಿಯನ್ನು ಈ ಮಂತ್ರದಲ್ಲಿ ಹೇಳಿದೆಯೆಂಬುದಕ್ಕೆ ಇದೊಂದು ಗುರುತು.

**ಪ್ರಜಾಪತಿಯ** ವ್ರತವನ್ನು ಎಂದರೆ ಋತುಕಾಲದಲ್ಲಿ ಭಾರ್ಯಾಗಮನವನ್ನು[1] ಮಾಡುತ್ತಾರೋ ಅವರಿಗೆ ಇದು ದೃಷ್ಟಫಲವು[2]. ಯಾವದು? ಎಂದರೆ ಅವರು ಮಿಥುನವನ್ನು ಎಂದರೆ ಮಗ, ಮಗಳು-(ಹೀಗೆ ಅವಳಿ ಮಕ್ಕಳನ್ನು) ಉಂಟು ಮಾಡುತ್ತಾರೆ.[3] ಅದೃಷ್ಟವಾದ ಫಲವೂ (ಉಂಟು). ಇಷ್ಟ, ಪೂರ್ತ, ದತ್ತ[4]-ಇವುಗಳನ್ನು ಮಾಡುವ ಅವರಿಗೇ ಈ ಚಂದ್ರನ ಸಂಬಂಧವಾದ **ಪಿತೃಋಣ** ರೂಪ ವಾದ **ಬ್ರಹ್ಮಲೋಕವು.**[5] ಯಾರಿಗೆ ಸ್ನಾತಕವ್ರತವೇ[6] ಮುಂತಾದ **ತಪಸ್ಸು;** ಬ್ರಹ್ಮಚರ್ಯವು ಎಂದರೆ ಋತು(ಕಾಲದಲ್ಲಿ) ಹೊರತು ಮಿಕ್ಕ (ಕಾಲ)ದಲ್ಲಿ ಮೈಥುನ ವನ್ನು ಮಾಡದಿರುವದು[7]-(ಇವು ಇರುವವೋ) ಮತ್ತು ಯಾರಲ್ಲಿ **ಸತ್ಯವು** ಎಂದರೆ ಸುಳ್ಳನ್ನು ಹೇಳದೆ ಇರುವದು ಪ್ರತಿಷ್ಠಿತವಾಗಿರುವದೋ ತಪ್ಪದೆ ಯಾವಾಗಲೂ ನೆಲೆನಿಂತಿರುವದೋ[8] ಅವರಿಗೇ ಈ ಬ್ರಹ್ಮಲೋಕವು ಸಿಕ್ಕುವದು.

**ತೇಷಾಮಸೌ ವಿರಜೋ ಬ್ರಹ್ಮಲೋಕೋ**
**ನ ಯೇಷು ಜಿಹ್ಮಮನೃತಂ ನ ಮಾಯಾ ಚೇತಿ ॥ ೧೬ ॥**

೧೬. ಯಾರಲ್ಲಿ ಜಿಹ್ಮವಾಗಲಿ ಅನೃತವಾಗಲಿ ಮಾಯೆಯಾಗಲಿ-ಇಂಥವು ಇಲ್ಲವೋ ಆ ವಿರಜವಾದ ಬ್ರಹ್ಮಲೋಕವು.

---

1. ಋತುಕಾಲದಲ್ಲಿ ರಾತ್ರಿಯೇ ಭಾರ್ಯಾಗಮನವನ್ನು ಮಾಡುವರೋ ಎಂದರ್ಥ. ಋತುಕಾಲದಲ್ಲಿಯೇ ಮಾಡಬೇಕು, ರಾತ್ರಿಯಲ್ಲಿಯೇ ಮಾಡಬೇಕು, ಭಾರ್ಯಾಗಮನ ವನ್ನೇ ಮಾಡಬೇಕು ಎಂಬ ಅವಧಾರಣೆಗಳನ್ನು ಒಟ್ಟುಗೂಡಿಸಿ ಪ್ರಜಾಪತಿವ್ರತ ಎಂದು ಕರೆದಿದೆ.

2. ಈ ಲೋಕದಲ್ಲಿ ಕಾಣಬರುವ ಫಲವು,

3. ಇಂಥ ಅವಳಿಮಕ್ಕಳು ಅವಶ್ಯವಾಗಿ ಉಂಟಾಗುತ್ತಾರೆ ಎಂದರ್ಥ.

4. ಯಜ್ಞದಲ್ಲಲ್ಲದೆ ಮಿಕ್ಕಕಡೆಗಳಲ್ಲಿ ದೇಶಕಾಲಪಾತ್ರವನ್ನರಿತು ಮಾಡುವ ದಾನ.

5. ಬ್ರಹ್ಮಲೋಕವೆಂದರೆ ಹೆಚ್ಚಿನ ಲೋಕವು. ಈ ಬ್ರಹ್ಮಲೋಕವೆಂದರೆ ಇಲ್ಲಿ ಚಂದ್ರನ ಲೋಕವು ಸ್ವರ್ಗವು. ಮುಂ. ಭಾ. ೧-೨-೬ ನೋಡಿ.

6. ಬ್ರಹ್ಮಚರ್ಯವನ್ನು ಮುಗಿಸಿ ಗೃಹಸ್ಥನಾಗುವವನು ಅನುಸರಿಸಬೇಕಾದ ನಿಯಮ ಗಳು.

7. ಪೂರ್ಣಬ್ರಹ್ಮಚರ್ಯವು ಗೃಹಸ್ಥರಿಗೆ ಇಲ್ಲವಾದ್ದರಿಂದ ಹೀಗೆ ಅರ್ಥವನ್ನು ಮಾಡಿದೆ. ತಪಸ್ಸು, ಸತ್ಯ-ಇವುಗಳನ್ನೂ ಹೀಗೆಯೇ ತಿಳಿಯಬೇಕು. ಯಾ. ಸ್ಮೃ. ೧-೧೨ ರಿಂದ ೧೫೯ ನೋಡಿ.

8. ಅವರ್ಜನೀಯವಾದ ಸಂದರ್ಭದಲ್ಲಿ ಹೊರತು ಎಂದು ಭಾವ. ಮುಂದಿನ ಮಂತ್ರದ ಭಾಷ್ಯದಲ್ಲಿ ಇದು ಸ್ಪಷ್ಟವಾಗಿದೆ.

(ಭಾಷ್ಯ)

೨೨. ಯಸ್ತು ಪುನಃ ಆದಿತ್ಯೋಪಲಕ್ಷಿತಃ ಉತ್ತರಾಯಣಃ ಪ್ರಾಣಾತ್ಮಭಾವಃ ವಿರಜಃ ಶುದ್ಧಃ ನ ಚನ್ದ್ರಬ್ರಹ್ಮಲೋಕವತ್ ರಜಸ್ವಲಃ ವೃದ್ಧಿಕ್ಷಯಾದಿಯುಕ್ತಃ ಅಸೌ ತೇಷಾಮ್ । ಕೇಷಾಮಿತಿ ?[1] ಉಚ್ಯತೇ । ಯಥಾ ಗೃಹಸ್ಥಾನಾಮ್ ಅನೇಕ ವಿರುದ್ಧಸಂವ್ಯವಹಾರಪ್ರಯೋಜನತ್ವಾತ್ ಜಿಹ್ಮಂ ಕೌಟಿಲ್ಯಮ್ ವಕ್ರಭಾವಃ ಅವಶ್ಯಂಭಾವಿ ತಥಾ ನ ಯೇಷು ಜಿಹ್ಮಮ್ । ಯಥಾ ಚ ಗೃಹಸ್ಥಾನಾಂ ಕ್ರೀಡಾದಿನರ್ಮನಿಮಿತ್ತಮ್[2] ಅನೃತಮ್ ಅವರ್ಜನೀಯಮ್ ಅಥಾ ನ ಯೇಷು ತತ್ । ತಥಾ ಮಾಯಾ ಗೃಹಸ್ಥಾನಾಮಿವ ನ ಯೇಷು ವಿದ್ಯತೇ । ಮಾಯಾ ನಾಮ ಬಹಿರನ್ಯಥಾ ಆತ್ಮಾನಂ ಪ್ರಕಾಶ್ಯ ಅನ್ಯಥೈವ ಕಾರ್ಯಂ ಕರೋತಿ ಸಾ ಮಾಯಾ ಮಿಥ್ಯಾಚಾರರೂಪಾ । (ಮಾಯಾ) ಇತಿ ಏವಮಾದಯೋ ದೋಷಾಃ ಯೇಷು ಏಕಾಕಿಷು[3] ಬ್ರಹ್ಮಚಾರಿವಾನಪ್ರಸ್ಥಭಿಕ್ಷುಷು ನಿಮಿತ್ತಾಭಾವಾತ್ ನ ವಿದ್ಯನ್ತೇ ತತ್ಸಾಧನಾನುರೂಪ್ಯೇಣೈವ[4] ತೇಷಾಮ್ ಅಸೌ ವಿರಜೋ ಬ್ರಹ್ಮಲೋಕಃ । ಇತ್ಯೇಷಾ ಜ್ಞಾನಯುಕ್ತಕರ್ಮವತಾಂ ಗತಿಃ । ಪೂರ್ವೋಕ್ತಸ್ತು ಬ್ರಹ್ಮಲೋಕಃ ಕೇವಲ ಕರ್ಮಿಣಾಂ ಚನ್ದ್ರಲಕ್ಷಣಃ ಇತಿ ॥

(ಭಾಷ್ಯಾರ್ಥ)

ಇನ್ನು ಆದಿತ್ಯನೆಂಬ ಉಪಲಕ್ಷಣವುಳ್ಳ[5] ಉತ್ತರಾಯಣದ **ಪ್ರಾಣನೇ ತಾನಾಗುವ, ವಿರಜವಾದ** ಶುದ್ಧವಾದ ಚಂದ್ರಬ್ರಹ್ಮಲೋಕದಂತೆ ಕಶ್ಮಲದಿಂದ ಕೂಡಿ ವೃದ್ಧಿಕ್ಷಯಾದಿಗಳಿಂದೊಡಗೂಡದಿರುವ, (ಬ್ರಹ್ಮಲೋಕವಿದೆಯಲ್ಲ), ಅದು[6] ಅವರಿಗೆ. **ಯಾರಿಗೆ?** ಎಂದರೆ (ಶ್ರುತಿ) ಹೇಳುತ್ತದೆ: ಹೇಗೆ ಗೃಹಸ್ಥರಿಗೆ ಅನೇಕವಾದ (ಒಂದಕ್ಕೊಂದು) ವಿರುದ್ಧವಾದ ವ್ಯವಹಾರಗಳನ್ನು (ಆಯಾ) ಪ್ರಯೋಜನಕ್ಕಾಗಿ ಮಾಡಬೇಕಾಗಿರುವದರಿಂದ **ಜಿಹ್ಮವು,** ಎಂದರೆ ಕುಟಿಲಭಾವವು, ಕೊಂಕಿನ ನಡತೆಯು ಇದ್ದೇ ತೀರುವದೋ ಹಾಗೆ ಯಾರಲ್ಲಿ ಜಿಹ್ಮವು (ಇರುವ)ದಿಲ್ಲವೋ (ಅವರಿಗೆ), ಮತ್ತು ಹೇಗೆ ಗೃಹಸ್ಥರಿಗೆ ಆಟ, ಹಾಸ್ಯ-ಮುಂತಾದ ನಿಮಿತ್ತಗಳಿಂದ

---

1. "ಕೇಷಾಂ ತೇಷಾಂ" ಎಂಬ ಆ॥ ಪಾಠಕ್ಕಿಂತ ಈ ವಾ॥ ಪಾಠವೇ ಮೇಲು.

2. "ಕ್ರೀಡಾದಿನಿಮಿತ್ತಮ್" ಎಂದು ವಾ॥ ಪಾಠ.

3. "ಅಧಿಕಾರಿಷು" ಎಂದು ಆ॥ ಪಾಠ; ಇಲ್ಲಿರುವದು ವಾ॥ ಪಾಠ.

4. "ತತ್ಸಾಧನಾನುರೂಪೇಣೈವ" ಎಂದು ಆ॥ ಪಾಠ; ಇದು ವಾ॥ ಪಾಠ.

5. ಚಂದ್ರನೆಂಬ ಹೆಸರಿನಿಂದ ಸ್ವರ್ಗವನ್ನು ಗ್ರಹಿಸುವಂತೆ ಆದಿತ್ಯನೆಂಬ ಹೆಸರಿನಿಂದ ಪ್ರಾಣ (ಹಿರಣ್ಯಗರ್ಭ) ನ ಬ್ರಹ್ಮಲೋಕವನ್ನು ಗ್ರಹಿಸಬೇಕು ಎಂದು ಭಾವ.

6. ಬಹುಕಾಲವಿರುವ ಆ ಬ್ರಹ್ಮಲೋಕವು. ಈ ಬ್ರಹ್ಮಲೋಕ, ಆ ಬ್ರಹ್ಮಲೋಕ-ಎಂಬ ವಿಶೇಷಗಳಿಂದ ಬೇರೆಬೇರೆಯ ಬ್ರಹ್ಮಲೋಕಗಳನ್ನು ಗ್ರಹಿಸಬೇಕು.

ಅನೃತವು ಬಡುವದಕ್ಕೆ ಆಗದೆ ಇರುವದೋ[1] ಹಾಗೆ ಯಾರಲ್ಲಿ ಆ ಸುಳ್ಳು ಇರುವದಿಲ್ಲವೋ (ಅವರಿಗೆ), ಹಾಗೂ ಗೃಹಸ್ಥರಲ್ಲಿರುವಂತೆ ಯಾರಲ್ಲಿ ಮಾಯೆ ಇರುವದಿಲ್ಲವೋ (ಅವರಿಗೆ). **ಮಾಯೆ** ಎಂದರೆ ಹೊರಗೆ ಒಂದು ಬಗೆಯಿಂದ ತನ್ನನ್ನು ತೋರಿಸಿಕೊಳ್ಳುತ್ತಾ ಮತ್ತೊಂದು ಬಗೆಯಲ್ಲಿಯೇ ಕೆಲಸವನ್ನು ಮಾಡುತ್ತಾರಲ್ಲ, ಅದು ಮಾಯೆ, ಠಕ್ಕಿನ ನಡತೆಯ ರೂಪವಾಗಿರತಕ್ಕದ್ದು. (ಈ ಮಾಯೆ)[2] ಮುಂತಾದವು, ಇವೇ ಮುಂತಾದ ದೋಷಗಳು ಯಾವ ಒಂಟಿಯಾಗಿರುವ[3] ಬ್ರಹ್ಮಚಾರಿ, ವಾನಪ್ರಸ್ಥ, ಸಂನ್ಯಾಸಿ-ಇವರಲ್ಲಿ ಕಾರಣವಿಲ್ಲದ್ದರಿಂದ[4] ಇರುವದಿಲ್ಲವೋ, ಅವರ ಸಾಧನಕ್ಕೆ ಅನುಗುಣವಾಗಿಯೇ ಅವರಿಗೆ ಆ ವಿರಜವಾದ ಬ್ರಹ್ಮಲೋಕವು (ಸಿಕ್ಕುವದು). ಇಗೋ ಇದು ಉಪಾಸನೆಯಿಂದ ಕೂಡಿದ ಕರ್ಮಿಗಳಿಗೆ ಆಗುವ ಗತಿಯು. ಹಿಂದೆ ಹೇಳಿದ ಬ್ರಹ್ಮಲೋಕವೆಂಬುದಾದರೋ ಕೇವಲ ಕರ್ಮಿಗಳಿಗೆ ಸಿಕ್ಕುವ ಚಂದ್ರರೂಪವಾದದ್ದು



1. ಹಾಸ್ಯಕ್ಕಾಗಿ, ಸ್ತ್ರೀಯರೊಡನೆ ಮಾತನಾಡುವಾಗ, ವಿವಾಹದಲ್ಲಿ ಪ್ರಾಣಕ್ಕೆ ಅಪಾಯವಿರುವಾಗ, ಸರ್ವಾರ್ಥವೂ ಹೋಗುತ್ತಿರುವಾಗ, ಸುಳ್ಳುಹೇಳಿದರೆ ಬಾಧಕವಿಲ್ಲವೆಂಬ ಆಪದ್ಧರ್ಮ (ಭಾ. ಶಾಂ. ೧೬೩-೩೦) ವಾಕ್ಯವನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು.

2. "ಮಾಯಾ" ಎಂಬ ಮಾತು ಇಲ್ಲದಿದ್ದರೂ ಸಾಗುತ್ತದೆ. ಇತಿ ಎಂಬುದಕ್ಕೇ ಏವಮಾದಯಃ ಎಂಬುದು ವ್ಯಾಖ್ಯಾನವೆಂದು ಭಾವಿಸುವಪಕ್ಷವೂ ಆಗುತ್ತದೆ.

3. "ಅಧಿಕಾರಿಷು" ಎಂಬ ಆ|| ಕಾ|| ಪಾಠದಲ್ಲಿ "ಯಾವ ಬ್ರಹ್ಮಚಾರಿವಾನಪ್ರಸ್ಥ ಸಂನ್ಯಾಸಿಗಳೆಂಬ ಅಧಿಕಾರಿಗಳಲ್ಲಿ" ಎಂದು ಕನ್ನಡಿಸಿಕೊಳ್ಳಬೇಕು.

4. ಪರಸ್ಪರವಿರುದ್ಧವಾದ ಅನೇಕ ವ್ಯವಹಾರಗಳಲ್ಲಿ ತೊಡಗಿರುವದೆಂಬ ಕಾರಣವಿಲ್ಲವಾದ್ದರಿಂದ.

# ಎರಡನೆಯ ಪ್ರಶ್ನೆ

## ಈ ಪ್ರಶ್ನೆಯ ಸಂಬಂಧ

(ಭಾಷ್ಯ)

೨೩. ಪ್ರಾಣೋಽತ್ತಾ ಪ್ರಜಾಪತಿಃ ಇತ್ಯುಕ್ತಮ್ । ತಸ್ಯ ಪ್ರಜಾಪತಿತ್ವಮ್ ಅತ್ತೃತ್ವಂ ಚ ಅಸ್ಮಿನ್ ಶರೀರೇ ಅವಧಾರಯಿತವ್ಯಮ್ ಇತಿ ಅಯಂ ಪ್ರಶ್ನ ಆರಭ್ಯತೇ—

(ಭಾಷ್ಯಾರ್ಥ)

ಪ್ರಾಣನು ಅತ್ತೃ, ಪ್ರಜಾಪತಿ ಎಂದು (ಹಿಂದೆ) ಹೇಳಲಾಯಿತು.[1] ಅವನು ಪ್ರಜಾಪತಿ ಎಂಬುದನ್ನೂ ಈ ಶರೀರದಲ್ಲಿ ಅತ್ತೃವಾಗಿರುವನೆಂಬುದನ್ನೂ ನಿಶ್ಚಯಿಸ ಬೇಕೆಂದು[2] ಈ ಪ್ರಶ್ನೆಯನ್ನು ಪ್ರಾರಂಭಿಸಿರುತ್ತದೆ:—

### ಭಾರ್ಗವನ ಪ್ರಶ್ನೆ : ಶರೀರದಲ್ಲಿರುವ ಪ್ರಾಣಗಳು ಯಾವವು?

**ಅಥ ಹೈನಂ ಭಾರ್ಗವೋ ವೈದರ್ಭಿಃ ಪಪ್ರಚ್ಛ ।**
**ಭಗವನ್ ಕತ್ಯೇವ ದೇವಾಃ ಪ್ರಜಾಂ ವಿಧಾರಯನ್ತೇ**
**ಕತರ ಏತತ್ಪ್ರಕಾಶಯನ್ತೇ ಕಃ ಪುನರೇಷಾಂ ವರಿಷ್ಠ ಇತಿ ॥ ೧ ॥**

೧. ಆಮೇಲೆ ಭಾರ್ಗವನೈದರ್ಭಿಯು ಈತನನ್ನು ಕೇಳಿದನೇನೆಂದರೆ: ಭಗವಂತನೆ, ಎಷ್ಟು ದೇವತೆಗಳು ಪ್ರಜೆಯನ್ನು ಧರಿಸಿಕೊಂಡಿರುತ್ತಾರೆ? ಯಾರು ಇದನ್ನು ಪ್ರಕಾಶಗೊಳಿಸುವವರು? ಮತ್ತು ಇವರಲ್ಲಿ ಶ್ರೇಷ್ಠನು ಯಾರು?

(ಭಾಷ್ಯ)

೨೪. ಅಥ ಅನನ್ತರಂ ಹ ಕಿಲ ಏನಂ ಭಾರ್ಗವೋ ವೈದರ್ಭಿಃ ಪಪ್ರಚ್ಛ । ಹೇ ಭಗವನ್ ಕತ್ಯೇವ ದೇವಾಃ ಪ್ರಜಾಂ ಶರೀರಲಕ್ಷಣಾಂ ವಿಧಾರಯನ್ತೇ ವಿಶೇಷೇಣ ಧಾರಯನ್ತೇ । ಕತರೇ ಬುದ್ಧೀನ್ದ್ರಿಯಕರ್ಮೇನ್ದ್ರಿಯಪ್ರವಿಭಕ್ತಾನಾಮ್ ಏತತ್ ಪ್ರಕಾಶನಂ ಸ್ವಮಾಹಾತ್ಮ್ಯಪ್ರಖ್ಯಾಪನಂ ಪ್ರಕಾಶಯನ್ತೇ । ಕೋಽಸೌ ಪುನಃ ಏಷಾಂ ವರಿಷ್ಠಃ ಪ್ರಧಾನಃ ಕಾರ್ಯಕರಣಲಕ್ಷಣಾನಾಮ್ ? ಇತಿ ॥

1. ಹಿಂದೆ ಪ್ರಾಣ, ರಯಿ–ಎಂಬ ಮಿಥುನದಿಂದ ಎಲ್ಲವನ್ನೂ ಪ್ರಜಾಪತಿಯು ಸೃಷ್ಟಿಸುತ್ತಾನೆಂದು ಹೇಳಿದೆ. ಆದಿತ್ಯರೂಪನಾದ ಪ್ರಾಣನು ಎಲ್ಲಾ ಪ್ರಾಣಗಳನ್ನೂ ತನ್ನೊಳಗೆ ಅಡಕಮಾಡಿಕೊಳ್ಳುತ್ತಾನೆಂದೂ ಅವನೇ ಅಗ್ನಿಯೆಂದೂ ಹೇಳಿರುವದರಿಂದ ಪ್ರಾಣನು ಅತ್ತೃವೆಂದು ಹೇಳಿದಂತೆ ಆಯಿತು.

2. ಈ ಪ್ರಶ್ನದಲ್ಲಿರುವ ಮಿಕ್ಕ ವಿಷಯಗಳು ಇಷ್ಟು ಮುಖ್ಯವಾಗಿ ವಿವಕ್ಷಿತ ವಲ್ಲವೆಂದು ಭಾವ.

(ಭಾಷ್ಯಾರ್ಥ)

ಆಮೇಲೆ (ಕಬಂಧಿಯ ಪ್ರಶ್ನೆಗೆ ಉತ್ತರವನ್ನು ಹೇಳಿದ) ಬಳಿಕ, ಹ=ಅಂತೆ (ಎಂದರ್ಥ). ಈ (ಪಿಪ್ಪಲಾದನನ್ನು) **ಭಾರ್ಗವವೈದರ್ಭಿಯು** ಕೇಳಿದನೇನಂದರೆ:— ಭಗವಂತನೆ, (ಈ) ಶರೀರರೂಪವಾದ[1] ಪ್ರಜೆಯನ್ನು ಎಷ್ಟು[2] ದೇವತೆಗಳು ವಿಧಾರಣ ಮಾಡಿಕೊಂಡಿರುವರು, ವಿಶೇಷವಾಗಿ ಹಿಡಿದೆತ್ತಿಕೊಂಡಿರುವರು?[3] **ಬುದ್ಧೀನ್ದ್ರಿಯಗಳು, ಕರ್ಮೇಂದ್ರಿಯಗಳು**-ಎಂದು (ಎರಡುಬಗೆಯಾಗಿ) ವಿಂಗಡವಾಗಿರುವ ಇವುಗಳಲ್ಲಿ ಇದನ್ನು ಎಂದರೆ ಈ ಬೆಳಗುವಿಕೆಯನ್ನು ಎಂದರೆ ತಮ್ಮ ಮಹಿಮೆಯನ್ನು ತೋರ್ಪಡಿಸಿಕೊಳ್ಳುವಿಕೆಯನ್ನು ಬೆಳಗುತ್ತಿರುವವು?[4] ಕಾರ್ಯಕರಣರೂಪವಾಗಿರುವ[5] ಇವುಗಳಲ್ಲಿ ಶ್ರೇಷ್ಠನಾದವನು, ಮುಖ್ಯನಾದವನು, ಯಾವನು?

## ಪ್ರಾಣಸಂವಾದ

**ತಸ್ಮೈ ಸ ಹೋವಾಚ । ಆಕಾಶೋ ಹ ವಾ ಏಷ ದೇವೋ ವಾಯುರಗ್ನಿರಾಪಃ ಪೃಥಿವೀ ವಾಙ್ಮನಶ್ಚಕ್ಷುಃ ಶ್ರೋತ್ರಂ ಚ । ತೇ ಪ್ರಕಾಶ್ಯಾಭಿವದನ್ತಿ ವಯಮೇತದ್ ಬಾಣಮವಷ್ಟಭ್ಯ ವಿಧಾರಯಾಮಃ ॥ ೨ ॥**

೨. ಅವನಿಗೆ ಆತನು ಹೇಳಿದನೇನೆಂದರೆ:—ಈ ದೇವನಾದ ಆಕಾಶ, ವಾಯು, ಅಗ್ನಿ, ಅಪ್ಪು, ಪೃಥಿವಿ, ವಾಕ್ಕು, ಮನಸ್ಸು, ಚಕ್ಷುಸ್ಸು, ಮತ್ತು ಶ್ರೋತ್ರ—ಇವರು ಬೆಳಗಿ "ನಾವು ಈ ಬಾಣವನ್ನು ಎತ್ತಿ ನಿಲ್ಲಿಸಿಕೊಂಡು ವಿಧಾರಣೆ ಮಾಡಿಕೊಂಡಿರುವೆವು" ಎಂದು ಹೇಳಿಕೊಳ್ಳುತ್ತಿದ್ದವು.

(ಭಾಷ್ಯ)

೨೫. ಏವಂ ಪೃಷ್ಟವತೇ ತಸ್ಮೈ ಸ ಹ ಉವಾಚ । ಆಕಾಶೋ ಹ ವೈ ಏಷಃ ದೇವಃ ವಾಯುಃ, ಅಗ್ನಿಃ, ಆಪಃ, ಪೃಥಿವೀ ಇತ್ಯೇತಾನಿ ಪಞ್ಚ ಮಹಾಭೂತಾನಿ

---

1. ಹಿಂದಿನ ಪ್ರಶ್ನೆಯಲ್ಲಿ ಹೇಳಿರುವ ಪ್ರಜೆಗಳು ಎಂದರೆ ಸ್ಥೂಲಶರೀರಗಳು ಎಂದು ಭಾವ.

2. 'ಕತ್ಯೇವ' ಎಂದರೆ ಎಷ್ಟೇ ಎಂದು ಕನ್ನಡಿಸಬೇಕಾಗುವದು. ಇಂತಿಷ್ಟೇ ಎಂದು ಗೊತ್ತಾಗಿ ಹೇಳಿರಿ ಎಂದು ಪ್ರಶ್ನೆ.

3. ಮುಖ್ಯವಾಗಿ ಯಾವ ಆಶ್ರಯದಿಂದ ಈ ಶರೀರವು ನಿಂತಿರುವದು?

4. "ಬೆಳಗುವಿಕೆಯನ್ನು ಬೆಳಗುತ್ತಿರುವವು" ಎಂಬುದು ಕನ್ನಡಕ್ಕೆ ಒಪ್ಪುವ ರೀತಿಯಲ್ಲ. "ಆಟವನ್ನು ಆಡುತ್ತಾರೆ" ಎಂಬ ಪ್ರಯೋಗವನ್ನು ಇದಕ್ಕೆ ಹೋಲಿಸಿರಿ. ಇದನ್ನು ಬೆಳಗುವವು, ಎಂದರೆ ಬೆಳಗುವವು, ತೋರಿಕೊಳ್ಳುವವು ಎಂದೇ ಅರ್ಥ.

5. ಶರೀರೇಂದ್ರಿಯರೂಪವಾದ.

ಶರೀರಾರಮ್ಭಕಾಣಿ । ವಾಕ್, ಮನಃ, ಚಕ್ಷುಃ; ಶ್ರೋತ್ರಮ್ ಇತ್ಯಾದೀನಿ **ಕರ್ಮೇನ್ದ್ರಿಯಬುದ್ಧೀನ್ದ್ರಿಯಾಣಿ ಚ ।** ಕಾರ್ಯಲಕ್ಷಣಾಃ ಕರಣಲಕ್ಷಣಾಶ್ಚ ತೇ ದೇವಾ ಆತ್ಮನಃ ಮಾಹಾತ್ಮ್ಯ ಪ್ರಕಾಶ್ಯಂ[1] ಪ್ರಕಾಶ್ಯ ಅಭಿವದನ್ತಿ ಸ್ಪರ್ಧಮಾನಾ ಅಹಂಶ್ರೇಷ್ಠತಾಯೈ । ಕಥಂ ವದನ್ತಿ? ವಯಮ್ ಏತತ್ ಬಾಣಂ **ಕಾರ್ಯಕರಣಸಙ್ಘಾತಮ್** ಅವಷ್ಟಭ್ಯ ಪ್ರಾಸಾದಮಿವ ಸ್ತಮ್ಭಾದಯಃ ಅವಿಶಿಥಿಲೀಕೃತ್ಯ ವಿಧಾರಯಾಮಃ ವಿಸ್ಪಷ್ಟಂ ಧಾರಯಾಮಃ । ಮಯೈವ ಏಕೇನ ಅಯಂ ಸಙ್ಘಾತೋ ಧ್ರಿಯತೇ ಇತಿ ಏಕೈಕಸ್ಯ ಅಭಿಪ್ರಾಯಃ.

(ಭಾಷ್ಯಾರ್ಥ)

ಹೀಗೆ ಹೇಳಿದ ಅವನಿಗೆ ಆ (ಪಿಪ್ಪಲಾದನು) ಹೇಳಿದನೇನೆಂದರೆ: ಈ ದೇವನಾದ[2] **ಆಕಾಶ, ವಾಯು, ಅಗ್ನಿ,** ಅಪ್ಪು, ಪೃಥಿವಿ-ಈ ಐದು ಶರೀರಕ್ಕೆ ಕಾರಣವಾಗಿರುವ **ಮಹಾಭೂತಗಳು** ಮತ್ತು ವಾಕ್ಕು, ಮನಸ್ಸು, ಚಕ್ಷುಸ್ಸು, ಶ್ರೋತ್ರ-ಇವೇ ಮುಂತಾದ[3] **ಕರ್ಮೇಂದ್ರಿಯಬುದ್ಧೀಂದ್ರಿಯಗಳು ಕಾರ್ಯರೂಪವಾಗಿಯೂ ಕರಣರೂಪವಾಗಿಯೂ** ಇರುವ ಆ ದೇವತೆಗಳು ತಮ್ಮ ಹೆಚ್ಚಿಗೆಯನ್ನು ತೋರಿಸಿಕೊಳ್ಳಬೇಕಾದ (ಹೆಚ್ಚುಗಾರಿಕೆಯನ್ನು)[4] ತೋರ್ಪಡಿಸಿಕೊಂಡು ನಾನು ಮೇಲು, ತಾನು ಮೇಲು-ಎಂದು ಮೇಲಾಟದಿಂದ[5] (ಹೊಡೆದಾಡುತ್ತಾ ಹೀಗೆಂದು) ಹೇಳಿಕೊಳ್ಳುತ್ತಿದ್ದವು. ಏನೆಂತ ಹೇಳಿಕೊಳ್ಳುತ್ತಿದ್ದವು? ಎಂದರೆ "ನಾವು ಈ ಬಾಣವನ್ನು ಎಂದರೆ ಕಾರ್ಯಕರಣಗಳ (ಒಟ್ಟು) ಗುಂಪನ್ನು ಎತ್ತಿ ನಿಲ್ಲಿಸಿಕೊಂಡು ಕಂಬವೇ ಮುಂತಾದವು ಉಪ್ಪರಿಗೆಯ ಮನೆಯನ್ನು ಶಿಥಿಲವಾಗದಂತೆ (ಹಿಡಿದುಕೊಂಡಿರುವ) ಹಾಗೆ ವಿಧಾರಣೆಮಾಡಿಕೊಂಡಿರುವೆವು. ವಿಸ್ಪಷ್ಟವಾಗಿ ಎತ್ತಿ ಹಿಡಿದುಕೊಂಡಿರುವೆವು." ನಾನೊಬ್ಬನೇ ಈ ಸಂಘವನ್ನು ಎತ್ತಿಹಿಡಿದುಕೊಂಡಿದೇನೆ ಎಂದು ಒಂದೊಂದಕ್ಕೂ (ಇದ್ದ) ಅಭಿಪ್ರಾಯವು.

---

1. ಈ ಮಾತು ಆ॥ ಪಾಠದಲ್ಲಿಲ್ಲ.

2. ಅಭಿಮಾನಿದೇವತೆಗಳನ್ನು ಲಕ್ಷ್ಯದಲ್ಲಿಟ್ಟು, ಆಕಾಶ, ವಾಯು-ಮುಂತಾದವನ್ನು ದೇವನೆಂದು ಕರೆದಿದೆ.

3. ಮಿಕ್ಕ ಕರ್ಮೇಂದ್ರಿಯಗಳನ್ನೂ ಜ್ಞಾನೇಂದ್ರಿಯಗಳನ್ನೂ ಸೇರಿಸಿಕೊಳ್ಳಬೇಕು ಎಂದು ಭಾವ.

4. ನಾನು ಮಾತಾಡುವೆನು, ನಾನು ನೋಡುವೆನು-ಎಂದು ಮುಂತಾಗಿ ವಾಗಾದಿಗಳ ಹೆಮ್ಮೆ; ನಾನು ಸುಡುವೆನು, ನಾನು ಬೀಸುವೆನು ಎಂದು ಆದಿತ್ಯ-ಎಂದು ಮುಂತಾಗಿ ಅಗ್ನ್ಯಾದಿಗಳ ಹೆಮ್ಮೆ. ಬೃ. ೧-೫-೨೧, ೨೨.

5. ಛಾ. ೫-೧-೬; ಕೌ. ೨-೧೪; ಬೃ. ೬-೧-೭ ನೋಡಿ.

**ತಾನ್ ವರಿಷ್ಠಃ ಪ್ರಾಣ ಉವಾಚ ಮಾ ಮೋಹಮಾಪದ್ಯಥಾಹ
ಮೇವೈತತ್ ಪಞ್ಚಧಾತ್ಮಾನಂ ಪ್ರವಿಭಜ್ಯೈತದ್ ಬಾಣಮ
ವಷ್ಟಭ್ಯ ವಿಧಾರಯಾಮೀತಿ ತೇಽಶ್ರದ್ದಧಾನಾ ಬಭೂವುಃ ॥ ೩ ॥**

೩. ಅವರನ್ನು (ಕುರಿತು) ಶ್ರೇಷ್ಠನಾದ ಪ್ರಾಣನು ಹೇಳಿದನೇನಂದರೆ: "ಮೋಹವನ್ನು ಹೊಂದದಿರಿ. ನಾನೇ ಹೀಗೆ ನನ್ನನ್ನು ಐದು ಬಗೆಯಾಗಿ ವಿಂಗಡಿಸಿಕೊಂಡು ಈ ಬಾಣವನ್ನು ಎತ್ತಿ ನಿಲ್ಲಿಸಿಕೊಂಡು ವಿಧಾರಣೆಮಾಡಿರುವೆನು." ಅವರು ಶ್ರದ್ಧೆಯನ್ನು ಮಾಡದವರಾದರು.

(ಭಾಷ್ಯ)

೨೬ ತಾನ್ ಏವಮ್ ಅಭಿಮಾನವತಃ ವರಿಷ್ಠಃ ಮುಖ್ಯಃ ಪ್ರಾಣಃ ಉವಾಚ ಉಕ್ತವಾನ್ । ಮಾ ಮೈವಂ ಮೋಹಮ್ ಆಪದ್ಯಥ ಅವಿವೇಕಿತಯಾ[1] ಅಭಿಮಾನಂ ಮಾ ಕುರುತ। ಯಸ್ಮಾತ್ ಅಹಮೇವ ಏತತ್ ಬಾಣಮ್ ಅವಷ್ಟಭ್ಯ ವಿಧಾರಯಾಮಿ ಪಞ್ಚಧಾ ಆತ್ಮಾನಂ ಪ್ರವಿಭಜ್ಯ ಪ್ರಾಣಾದಿವೃತ್ತಿಭೇದಂ ಸ್ವಸ್ಯ ಕೃತ್ವಾ ವಿಧಾರಯಾಮಿ। ಇತಿ ಉಕ್ತವತಿ ಚ ತಸ್ಮಿನ್ ತೇ ಅಶ್ರದ್ದಧಾನಾ ಅಪ್ರತ್ಯಯವನ್ತಃ ಬಭೂವುಃ ಕಥಮೇ ತದೇವಮ್ ಇತಿ ॥

(ಭಾಷ್ಯಾರ್ಥ)

ಹೀಗೆ ಅಭಿಮಾನವುಳ್ಳ ಅವರನ್ನು ಕುರಿತು ಶ್ರೇಷ್ಠನಾದ ಪ್ರಾಣನು ಇಂತೆಂದನು ಹೇಳಿದವನಾದನು. ಹೀಗೆ ಮೋಹವನ್ನು ಹೊಂದದಿರಿ; **ಅವಿವೇಕಿಗಳಾಗಿ** ಅಭಿಮಾನವನ್ನು ಮಾಡಬೇಡಿರಿ. ಏಕೆಂದರೆ, ನಾನೇ (ಹೀಗೆ)[2] ಈ ಬಾಣವನ್ನು ಎತ್ತಿ ನಿಲ್ಲಿಸಿಕೊಂಡು ವಿಧಾರಣೆಮಾಡಿರುವೆನು. ನನ್ನನ್ನು ಐದು ಬಗೆಯಾಗಿ ವಿಂಗಡಿಸಿಕೊಂಡು ನನ್ನಲ್ಲಿ ಪ್ರಾಣವೇ ಮುಂತಾದ ಬೇರೆಬೇರೆಯ ವೃತ್ತಿಗಳನ್ನು ಮಾಡಿಕೊಂಡು (ಶರೀರವನ್ನು) ವಿಧಾರಣೆಮಾಡಿಕೊಂಡಿರುತ್ತೇನೆ. ಹೀಗೆಂದು (ಅವನು) ಹೇಳಲು ಅವನಲ್ಲಿ ಅವರು ಶ್ರದ್ಧೆಯನ್ನು ಮಾಡದವರಾದರು. "ಇದು ಹೀಗೆ ಹೇಗಾದೀತು?" ಎಂದುಕೊಂಡು ನಂಬಿಕೆಯಿಲ್ಲದವರಾದರು.

---

1. "ಅವಿವೇಕತಯಾ" ಎಂದು ಅ॥ ಪಾಠ.

2. ಏತತ್ ಎಂಬ ಶಬ್ದಗಳು ಎರಡಿವೆ. ಒಂದನೆಯ ಶಬ್ದಕ್ಕೆ ಭಾಷ್ಯವು ಬರೆದಿರುವವರ ಕೈತಪ್ಪಿನಿಂದ ಬಿಟ್ಟು ಹೋಗಿರಬೇಕೆಂದು ಕಾಣುತ್ತದೆ.

## ಮುಖ್ಯಪ್ರಾಣನ ಹೆಚ್ಚುಗಾರಿಕೆ

**ಸೋಽಭಿಮಾನಾದೂರ್ಧ್ವಮುತ್ಕ್ರಾಮತ ಇವ ತಸ್ಮಿನ್ನುತ್ಕ್ರಾಮತ್ಯಥೇತರೇ ಸರ್ವ ಏವೋತ್ಕ್ರಾಮನ್ತೇ ತಸ್ಮಿಂಶ್ಚ ಪ್ರತಿಷ್ಠಮಾನೇ ಸರ್ವ ಏವ ಪ್ರಾತಿಷ್ಠನ್ತೇ । ತದ್ಯಥಾ ಮಕ್ಷಿಕಾ ಮಧುಕರರಾಜಾನಮುತ್ಕ್ರಾಮನ್ತಂ ಸರ್ವಾ ಏವೋತ್ಕ್ರಾಮನ್ತೇ ತಸ್ಮಿಂಶ್ಚ ಪ್ರತಿಷ್ಠಮಾನೇ ಸರ್ವಾ ಏವ ಪ್ರಾತಿಷ್ಠನ್ತ ಏವಂ ವಾಙ್ಮನಶ್ಚಕ್ಷುಃ ಶ್ರೋತ್ರಂ ಚ ತೇ ಪ್ರೀತಾಃ ಪ್ರಾಣಂ ಸ್ತುನ್ವನ್ತಿ ॥ ೪ ॥**

೪. ಆತನು ಅಭಿಮಾನದಿಂದ ಮೇಲಕ್ಕೆದ್ದಂತೆ ಮಾಡಿದನು. ಅವನು ಮೇಲಕ್ಕೆ ಎದ್ದನೋ ಇಲ್ಲವೋ, ಕೂಡಲೆ ಮಿಕ್ಕವರೆಲ್ಲರೂ ಎದ್ದರು; ಮತ್ತು ಅವನು ನಿಲ್ಲುತ್ತಲೂ ಎಲ್ಲರೂ ನಿಂತರು. ಜೇನು ನೊಣಗಳು ತಮ್ಮ ರಾಜನು ಮೇಲಕ್ಕೇಳುತ್ತಲೂ ಎಲ್ಲವೂ ಹೇಗೆ ಏಳುವವೋ, ಮತ್ತು ಅದು ನಿಲ್ಲುತ್ತಲೂ ಎಲ್ಲವೂ ಹೇಗೆ ನಿಲ್ಲುವವೋ, ಹಾಗೇ ವಾಕ್ಕು, ಮನಸ್ಸು, ಚಕ್ಷುಸ್ಸು, ಶ್ರೋತ್ರ–ಇವರು (ಮಾಡಿದರು). ಇವರು ಪ್ರೀತರಾಗಿ ಪ್ರಾಣನನ್ನು (ಹೀಗೆ) ಸ್ತೋತ್ರಮಾಡಿದರು.

(ಭಾಷ್ಯ)

೨೭. ಸ ಚ ಪ್ರಾಣಃ ತೇಷಾಮ್ ಅಶ್ರದ್ದಧಾನತಾಮ್ ಆಲಕ್ಷ್ಯ ಅಭಿಮಾನಾತ್ ಊರ್ಧ್ವಮ್ ಉತ್ಕ್ರಾಮತೇ[1] ಇವ ಇದಮ್ ಉತ್ಕ್ರಾನ್ತವಾನಿವ[2] ಸ ರೋಷಾತ್ ನಿರಪೇಕ್ಷಃ । ತಸ್ಮಿನ್ ಉತ್ಕ್ರಾಮತಿ ಯದ್ ವೃತ್ತಂ ತದ್ ದೃಷ್ಟಾನ್ತೇನ ಪ್ರತ್ಯಕ್ಷೀಕರೋತಿ । ತಸ್ಮಿನ್ ಉತ್ಕ್ರಾಮತಿ ಸತಿ ಅಥ ಅನನ್ತರಮೇವ ಇತರೇ ಸರ್ವೇ ಏವ ಪ್ರಾಣಾಃ ಚಕ್ಷುರಾದಯಃ ಉತ್ಕ್ರಾಮನ್ತೇ ಉತ್ಕ್ರಾಮನ್ತಿ ಉಚ್ಚಕ್ರಮುಃ[3] । ತಸ್ಮಿಂಶ್ಚ ಪ್ರಾಣೇ ಪ್ರತಿಷ್ಠಮಾನೇ ತೂಷ್ಣೀಂ ಭವತಿ ಅನುತ್ಕ್ರಾಮತಿ ಸತಿ ಸರ್ವೇ ಏವ ಪ್ರಾತಿಷ್ಠನ್ತೇ ತೂಷ್ಣೀಂ ವ್ಯವಸ್ಥಿತಾ ಅಭೂವನ್[4] । ತತ್[5] ಯಥಾ

1. ' "ಉತ್ಕ್ರಮತೇ" ಎಂದು ಉಪನಿಷತ್ತಿನಲ್ಲಿಯೂ ಭಾಷ್ಯದಲ್ಲಿಯೂ ಆ॥ ಪಾಠ. ಆದರೆ ಮುಂದೆ ಉಪನಿಷತ್ತಿನಲ್ಲಿ ಉತ್ಕ್ರಾಮನ್ತೇ ಎಂಬ ಪ್ರಯೋಗವಿದೆ.

2. ಇದು ಆ॥ ಪಾಠ; ವಾ॥ ಪಾಠದಲ್ಲಿ 'ಉತ್ಕ್ರಾಮತೀವ ಉತ್ಕ್ರಾನ್ತವಾನಿವ' ಎಂದಿದೆ.

3. ಇದು ವಾ॥ ಮೈ॥ ಪಾಠ; ಆ ಪಾಠದಲ್ಲಿ 'ಉತ್ಕ್ರಾಮನ್ತೇ ಉಚ್ಚಕ್ರಮಿರೇ' ಎಂದಿದೆ.

4. "ಬಭೂವುಃ" ವಾ॥ ಪಾಠ.

5. "ತತ್ ತತ್ರ" ಎಂದು ಆ॥ ಪಾಠ.

ಲೋಕೇ ಮಕ್ಷಿಕಾಃ ಮಧುಕರಾಃ ಸ್ವರಾಜಾನಂ ಮಧುಕರರಾಜಾನಮ್ ಉತ್ಕ್ರಾಮನ್ತಂ ಪ್ರತಿ ಸರ್ವಾ ಏವ ಉತ್ಕ್ರಾಮನ್ತೇ ತಸ್ಮಿಂಶ್ಚ ಪ್ರತಿಷ್ಠಮಾನೇ ಸರ್ವಾ ಏವ ಪ್ರಾತಿಷ್ಠನ್ತೇ ಪ್ರತಿತಿಷ್ಠನ್ತಿ । ಯಥಾ ಅಯಂ ದೃಷ್ಟಾನ್ತಃ ಏವಂ ವಾಕ್ ಮನಃ ಚಕ್ಷುಃ ಶ್ರೋತ್ರಂ ಚ ಇತ್ಯಾದಯಃ । ತೇ ಉತ್ಸೃಜ್ಯ ಅಶ್ರದ್ಧಧಾನತಾಂ ಬುದ್ಧ್ವಾ ಪ್ರಾಣ ಮಾಹಾತ್ಮ್ಯಂ ಪ್ರೀತಾಃ ಪ್ರಾಣಂ ಸ್ತುನ್ವನ್ತಿ ಸ್ತುವನ್ತಿ ॥

(ಭಾಷ್ಯಾರ್ಥ)

ಆ ಪ್ರಾಣನುಕೂಡ ಅವರು ನಂಬುವದಿಲ್ಲವೆಂಬುದನ್ನು ಕಂಡು ಅಭಿಮಾನದಿಂದ ಎಂದರೆ ಸಿಟ್ಟಿನಿಂದ[1] ಮೇಲಕ್ಕೆ ಈ (ಶರೀರವನ್ನು) ಬಿಟ್ಟು ತಾನೊಬ್ಬನೇ ಮೇಲಕ್ಕೆದ್ದಂತೆ (ಉತ್ಕ್ರಮತೇ=ಉತ್ಕ್ರಾನ್ತವಾನ್) ಮಾಡಿದನು. ಅವನು ಮೇಲಕ್ಕೆ ಎದ್ದನೋ ಇಲ್ಲವೋ; (ಆಗ) ಏನಾಯಿತೋ ಅದನ್ನು ದೃಷ್ಟಾಂತದಿಂದ ಪ್ರತ್ಯಕ್ಷಗೊಳಿಸಿ ಕೊಡುತ್ತಾರೆ. ಅವನು ಮೇಲಕ್ಕೇಳುತ್ತಲೂ ("ಅಥ") ಕೂಡಲೆ ಮಿಕ್ಕ ಎಲ್ಲಾ ಪ್ರಾಣಗಳೂ ಎಂದರೆ ಚಕ್ಷುರಾದಿಗಳು (ಎಲ್ಲವೂ) ಮೇಲಕ್ಕೆ ಎದ್ದರು. (ಉತ್ಕ್ರಾಮನ್ತೇ= ಉತ್ಕ್ರಾಮನ್ತಿ). ಮತ್ತು ಆ ಪ್ರಾಣನು ನಿಲ್ಲುತ್ತಲೂ ಎಂದರೆ ಸುಮ್ಮನಾಗುತ್ತಲೂ, ಮೇಲಕ್ಕೇಳದೆ ಇರಲು, ಎಲ್ಲರೂ ನಿಂತರು ಎಂದರೆ ಸುಮ್ಮನೆ ಇದ್ದುಕೊಳ್ಳುವರಾದರು. ಅದು ಹೇಗೆಂದರೆ, ಲೋಕದಲ್ಲಿ ಜೇನುನೊಣಗಳು ಜೇನನ್ನು ಮಾಡುವ ನೊಣಗಳು ತಮ್ಮ ದೊರೆಯಾದ ಅರಸು ಜೇನುಹುಳುವನ್ನು ಅನುಸರಿಸಿ ಅದು ಮೇಲಕ್ಕೆದ್ದರೆ ಎಲ್ಲವೂ ಏಳುವವು, ಮತ್ತು ಅದು ನಿಂತರೆ ಎಲ್ಲವೂ ನಿಲ್ಲುವವು, ಇದ್ದುಬಿಡುವವು. ಈ ದೃಷ್ಟಾಂತವು ಹೇಗೋ ಹಾಗೆ ವಾಕ್ಕು, ಮನಸ್ಸು, ಚಕ್ಷುಸ್ಸು, ಶ್ರೋತ್ರ,-ಇವೇ ಮುಂತಾದವರು (ಮಾಡಿದರು).[2] ಇವರು ಶ್ರದ್ಧೆಯಿಲ್ಲದಿರುವಿಕೆಯನ್ನು ಬಿಟ್ಟು ಪ್ರಾಣನ ಹೆಚ್ಚುಗಾರಿಕೆಯನ್ನು ಅರಿತುಕೊಂಡು ತೃಪ್ತರಾಗಿ ಪ್ರಾಣವನ್ನು ಹೀಗೆಂದು (ಸ್ತುನ್ವನ್ತಿ = ಸ್ತುವನ್ತಿ) ಸ್ತೋತ್ರಮಾಡಿದರು.

## ಮುಖ್ಯಪ್ರಾಣನ ಸ್ತುತಿ

ಏಷೋಽಗ್ನಿಸ್ತಪತ್ಯೇಷ ಸೂರ್ಯ
ಏಷ ಪರ್ಜನ್ಯೋ ಮಘವಾನೇಷ ವಾಯುಃ ।
ಏಷ ಪೃಥಿವೀ ರಯಿರ್ದೇವಃ
ಸದಸಚ್ಚಾಮೃತಂ ಚ ಯತ್ ॥ ೫ ॥

1. ಸಃ ರೋಷಾತ್ ಎಂಬಲ್ಲಿ ಸಃ ಎಂಬ ಮಾತನ್ನು ಇನ್ನೊಂದು ಸಲ ಅನ್ವಯಕ್ಕಾಗಿ ಭಾಷ್ಯಕಾರರು ಹಾಕಿಕೊಂಡಿರುತ್ತಾರೆ.

2. ಇಲ್ಲಿ ವಾಗಾದಿಗಳನ್ನು ಅಗ್ನ್ಯಾದಿದೇವತೆಗಳು ಆಳುವುದರಿಂದ ವಾಗಾದಿಗಳನ್ನು ಚೇತನವಂತರಾದ ಪುರುಷರಂತೆ ಭಾವಿಸಿದೆ. ಛಾ. ಭಾ. ೫-೧-೧೫ ನೋಡಿ.

೫. ಈತನು ಅಗ್ನಿಯಾಗಿ ಸುಡುತ್ತಾನೆ, ಈತನು ಸೂರ್ಯನು, ಈತನು ಪರ್ಜನ್ಯನು, ಇಂದ್ರನು, ಈತನು ವಾಯು, ಈತನು ಪೃಥಿವಿ, ರಯಿ, ದೇವ, ಸತ್ತು, ಅಸತ್ತು, ಮತ್ತು ಅಮೃತವೆಂಬುದು ಯಾವದೋ (ಅದೂ ಈತನು).

(ಭಾಷ್ಯ)

೨೮. ಕಥಮ್? ಏಷ ಪ್ರಾಣಃ ಅಗ್ನಿಃ ಸನ್ ತಪತಿ ಜ್ವಲತಿ। ತಥಾ ಏಷ ಸೂರ್ಯಃ ಸನ್ ಪ್ರಕಾಶತೇ। ತಥಾ ಏಷಃ ಪರ್ಜನ್ಯಃ ಸನ್ ವರ್ಷತಿ। ಕಿಂಚ ಮಘವಾನ್ ಇನ್ದ್ರಃ ಸನ್ ಪ್ರಜಾಃ ಪಾಲಯತಿ ಜಿಘಾಂಸತಿ ಅಸುರರಕ್ಷಾಂಸಿ। ಏಷಃ ವಾಯುಃ ಆವಹಪ್ರವಹಾದಿಭೇದಃ । ಕಿಂಚ ಏಷಃ ಪೃಥಿವೀ ರಯಿಃ ದೇವಃ ಸರ್ವಸ್ಯ ಜಗತಃ ಸತ್ ಮೂರ್ತಮ್ ಅಸತ್ ಅಮೂರ್ತಂ ಚ ಅಮೃತಂ ಚ ಯತ್ ದೇವಾನಾಂ ಸ್ಥಿತಿಕಾರಣಮ್ ॥

(ಭಾಷ್ಯಾರ್ಥ)

ಹೇಗೆ ಸ್ತೋತ್ರಮಾಡಿದವೆಂದರೆ[1] ; ಈ ಪ್ರಾಣನು **ಅಗ್ನಿಯಾಗಿ** ಸುಡುತ್ತಾನೆ, ಉರಿಯುತ್ತಾನೆ. ಹಾಗೂ ಇವನು **ಸೂರ್ಯನಾಗಿ** ಬೆಳಗುತ್ತಿರುತ್ತಾನೆ ಮತ್ತು ಈತನೇ **ಪರ್ಜನ್ಯನಾಗಿ** ಮಳೆಗರೆಯುತ್ತಾನೆ. ಇದಲ್ಲದೆ **ಇಂದ್ರನಾಗಿ** ಪ್ರಜೆಗಳನ್ನು ಕಾಪಾಡುತ್ತಾನೆ, ಅಸುರರನ್ನು ಕೊಲ್ಲುತ್ತಾನೆ. ಈತನೇ ಆವಹ-ಪ್ರವಹ-ಮುಂತಾದ[2] ಭೇದಗಳಿಂದ ಕಾಣುವ **ವಾಯುವು** ಈತನೇ; ಈತನೇ **ಪೃಥಿವಿಯು**, **ರಯಿಯು**, ಸಮಸ್ತಜಗತ್ತಿಗೂ ದೇವನಾಗಿರುವನು (ಈತನೇ)[3]. ಇರುವದೂ ಎಂದರೆ **ಮೂರ್ತವೂ** ಇಲ್ಲದ್ದೂ ಎಂದರೆ **ಅಮೂರ್ತವೂ** ಮತ್ತು ದೇವತೆಗಳ ಸ್ಥಿತಿಗೆ ಕಾರಣವಾಗಿರುವ **ಅಮೃತವೂ** (ಈತನೇ).

**ಅರಾ ಇವ ರಥನಾಭೌ**
**ಪ್ರಾಣೇ ಸರ್ವಂ ಪ್ರತಿಷ್ಠಿತಮ್।**
**ಋಚೋ ಯಜೂಗ್ಂಷಿ ಸಾಮಾನಿ**
**ಯಜ್ಞಃ ಕ್ಷತ್ರಂ ಬ್ರಹ್ಮ ಚ** ॥ ೬ ॥

---

1. ಅ. ವೇ. ೧೧–೨–೪ ರಲ್ಲಿರುವ ಪ್ರಾಣಸ್ತೋತ್ರವನ್ನು ಇದಕ್ಕೆ ಹೋಲಿಸಿರಿ.

2. ಆವಹ, ಪ್ರವಹ, ಉದ್ವಹ, ಸಂವಹ, ವಿವಹ, ಪರಿವಹ, ಪರಾವಹ–ಎಂದು ಗಾಳಿಯು ಬೀಸುವ ದಿಕ್ಕಿಗೆ ಅನುಗುಣವಾಗಿ ವಾಯುವನ್ನು ವಿಭಾಗಿಸುವರು. ವೋ. ಧ. ೩೨೮–೩೬ ರಿಂದ ೫೨ ನೆಯ ಶ್ಲೋಕಗಳನ್ನು ನೋಡಿರಿ. (ಕುಂಭಕೋಣಪ್ರತಿ) ೩೩೬–೪೯ ರಿಂದ ೭೫ ರ ವರೆಗೆ.

3 ಪ್ರಾಣನು.(ಅಥವಾ ಸೂತ್ರಾತ್ಮನು) ಸರ್ವದೇವತಾಮಯನು.

೬. ಹಾರೆಕೋಲುಗಳು ಬಂಡಿಯ (ಚಕ್ರದ) ಗುಂಬದಲ್ಲಿ ಹೇಗೋ ಹಾಗೆ ಎಲ್ಲವೂ ಪ್ರಾಣನಲ್ಲಿಯೇ ಸೇರಿಕೊಂಡಿರುತ್ತದೆ. ಋಕ್ಕುಗಳು, ಯಜುಸ್ಸುಗಳು, ಸಾಮುಗಳು, ಯಜ್ಞ, ಕ್ಷತ್ರ ಮತ್ತು ಬ್ರಹ್ಮ (ಎಲ್ಲವೂ ಸೇರಿಕೊಂಡಿವೆ).

(ಭಾಷ್ಯ)

೬. ಕಿಂ ಬಹುನಾ? ಅರಾ ಇವ ರಥನಾಭೌ ಶ್ರದ್ಧಾದಿ ನಾಮಾನ್ತಂ ಸರ್ವಂ **ಸ್ಥಿತಿಕಾಲೇ ಪ್ರಾಣೇ ಏವ ಪ್ರತಿಷ್ಠಿತಮ್** । ತಥಾ ಋಚಃ ಯಜೂಂಷಿ ಸಾಮಾನಿ **ಇತಿ ತ್ರಿವಿಧಾ ಮನ್ತ್ರಾಃ** ತತ್ಸಾಧ್ಯಶ್ಚ ಯಜ್ಞಃ ಕ್ಷತ್ರಂ ಚ ಸರ್ವಸ್ಯ ಪಾಲಯಿತೃ ಬ್ರಹ್ಮ ಚ ಯಜ್ಞಾದಿ ಕರ್ಮಕರ್ತೃತ್ವೇ ಅಧಿಕೃತಂ ಚ (?) ಏಷ ಏವ[1] ಪ್ರಾಣಃ ಸರ್ವಮ್.

(ಭಾಷ್ಯಾರ್ಥ)

ಹೆಚ್ಚು ಹೇಳಿದ್ದರಿಂದೇನು? ಹಾರೆಕೋಲುಗಳು ಬಂಡಿಯ (ಗಾಲಿಯ) ಗುಂಬದಲ್ಲಿ ಹೇಗೆ (ಸೇರಿಕೊಂಡಿರುತ್ತವೆ)ಯೋ ಹಾಗೆ **ಶ್ರದ್ಧೆಯಿಂದ ನಾಮದ ವರೆಗಿನ**[2] ಎಲ್ಲವೂ ಸ್ಥಿತಿಕಾಲದಲ್ಲಿ ಪ್ರಾಣನಲ್ಲಿಯೇ (ಸೇರಿಕೊಂಡು) ನಿಂತಿರುವದು. ಹಾಗೂ ಋಕ್ಕುಗಳು, ಯಜುಸ್ಸುಗಳು, ಸಾಮುಗಳು-ಎಂದು **ಮೂರು ಬಗೆಯಾಗಿರುವ ಮಂತ್ರಗಳು,** ಇವುಗಳಿಂದಾಗುವ ಯಜ್ಞವು, ಎಲ್ಲವನ್ನೂ ಕಾಪಾಡುವ ಕ್ಷತ್ರಜಾತಿ, ಯಜ್ಞವೇ ಮುಂತಾದ ಕರ್ಮವನ್ನು ಮಾಡುವ ಅಧಿಕಾರವುಳ್ಳ ಬ್ರಾಹ್ಮಣಜಾತಿ- ಇದೆಲ್ಲವೂ[3] ಈ ಪ್ರಾಣನೇ.

**ಪ್ರಜಾಪ್ರತಿಶ್ಚರಸಿ ಗರ್ಭೇ**
**ತ್ವಮೇವ ಪ್ರತಿಜಾಯಸೇ ।**
**ತುಭ್ಯಂ ಪ್ರಾಣ ಪ್ರಜಾಸ್ತ್ವಿಮಾ ಬಲಿಂ ಹರನ್ತಿ**
**ಯಃ ಪ್ರಾಣೈಃ ಪ್ರತಿತಿಷ್ಠಸಿ** ॥ ೭ ॥

೭. ಪ್ರಜಾಪತಿಯಾಗಿ (ನೀನೇ) ಗರ್ಭದಲ್ಲಿ ಸಂಚರಿಸುತ್ತೀಯೆ, ನೀನೇ ಪ್ರತಿಯಾಗಿ ಹುಟ್ಟುತ್ತೀಯೆ. ಪ್ರಾಣನೆ, ಪ್ರಾಣಗಳೊಡನೆ ಇರುವೆ ಯಲ್ಲ, (ಆ) ನಿನಗೇ ಈ ಪ್ರಜೆಗಳು ಕಾಣಿಕೆಯನ್ನು ತಂದೊಪ್ಪಿಸುತ್ತಿರುವರು.

---

1. "ಚೈವೈಷ" ಎಂದು ಅ॥ ಪಾಠ. ಈ ಎರಡು ಪಾಠಗಳಲ್ಲಿಯೂ "ಚ" ಬೇಕೆ? ಎಂಬುದು ವಿಚಾರಣೀಯ.

2. ಮುಂದೆ ೬-೪ ರಲ್ಲಿ ಹೇಳಿರುವ ಕಲೆಗಳು.

3. ಸಾಧನಸಾಧ್ಯರೂಪವಾದ ಜಗತ್ತೆಲ್ಲವೂ ಪ್ರಾಣವನ್ನೇ ಅವಲಂಬಿಸಿಕೊಂಡಿರುತ್ತದೆ; ಎಂದಭಿಪ್ರಾಯ.

(ಭಾಷ್ಯ)

೩೦. ಕಿಂ ಚ ಯಃ ಪ್ರಜಾಪತಿರಪಿ ಸ ತ್ವಮೇವ ಗರ್ಭೇ ಚರಸಿ ಪಿತುರ್ಮಾತುಶ್ಚ ಪ್ರತಿರೂಪಃ ಸನ್ ಪ್ರತಿ (?) ಜಾಯಸೇ । ಪ್ರಜಾಪತಿತ್ವಾದೇವ ಪ್ರಾಗೇವ ಸಿದ್ಧಂ ತವ ಮಾತೃಪಿತೃತ್ವಮ್ । ಸರ್ವದೇಹದೇಹ್ಯಾಕೃತಿಚ್ಛನ್ನಃ[1] ಏಕಃ ಪ್ರಾಣಃ ಸರ್ವಾತ್ಮಾಸಿ ಇತ್ಯರ್ಥಃ। ತುಭ್ಯಂ ತ್ವದರ್ಥಾಯ[2] ಇಮಾಃ ಮನುಷ್ಯಾದ್ಯಾಃ ಪ್ರಜಾಸ್ತು ಹೇ ಪ್ರಾಣ ಚಕ್ಷುರಾದಿದ್ವಾರೈಃ ಬಲಿಂ ಹರನ್ತಿ। ಯಸ್ತ್ವಂ ಪ್ರಾಣೈಃ ಚಕ್ಷುರಾದಿಭಿಃ ಸಹ ಪ್ರತಿತಿಷ್ಠಸಿ ಸರ್ವಶರೀರೇಷು । ಅತಃ ತುಭ್ಯಂ ಬಲಿಂ ಹರನ್ತಿ ಇತಿ ಯುಕ್ತಮ್ । ಭೋಕ್ತಾಸಿ[3] ಯತಸ್ತ್ವಂ ತವೈವಾನ್ಯತ್ ಸರ್ವಂ ಭೋಜ್ಯಮ್ ॥

(ಭಾಷ್ಯಾರ್ಥ)

ಮತ್ತು ಪ್ರಜಾಪ್ರತಿಯಿದಾನಲ್ಲ, ಅವನೂ ನೀನೇ(ಆಗಿ)ಗರ್ಭದಲ್ಲಿ ಸಂಚರಿಸುವೆ[4]. ತಂದೆಗೂ ತಾಯಿಗೂ ಪ್ರತಿರೂಪನಾಗಿ[5] ಹುಟ್ಟುತ್ತೀಯೆ. ಪ್ರಜಾಪತಿಯಾಗಿರುವದರಿಂದಲೇ ನೀನು ತಾಯಿಯೂ ತಂದೆಯೂ (ಆಗಿರುವೆ)ಯೆಂಬುದು ಮೊದಲೇ ಸಿದ್ಧವಾಗಿರುತ್ತದೆ.[6] ಎಲ್ಲಾ ದೇಹಗಳ ಮತ್ತು ದೇಹಿಗಳ ಆಕೃತಿಯಿಂದ ಮರೆಯಾಗಿ ಪ್ರಾಣನಾದ ನೀನೊಬ್ಬನೇ ಸರ್ವರೂಪನಾಗಿರುವೆ ಎಂದರ್ಥ. ಎಲೈ ಪ್ರಾಣನೆ, ನಿನಗೆ, ನಿನಗೋಸ್ಕರ ಮನುಷ್ಯರೇ ಮುಂತಾದ ಈ ಪ್ರಜೆಗಳು ಚಕ್ಷುರಾದಿಗಳ ಮೂಲಕ ಕಾಣಿಕೆಯನ್ನು ತಂದೊಪ್ಪಿಸುತ್ತಿರುವರು[7]. ಆ ನೀನು ಚಕ್ಷುರಾದಿಪ್ರಾಣಗಳೊಡನೆ ಎಲ್ಲಾ ಶರೀರಗಳಲ್ಲಿಯೂ ಇದ್ದುಕೊಂಡಿರುವೆ; ಆದ್ದರಿಂದ ನಿನಗೆ ಕಾಣಿಕೆಯನ್ನು ತಂದೊಪ್ಪಿಸುವರೆಂಬುದು ಯುಕ್ತವೇ ಆಗಿದೆ. ನೀನು ಭೋಕ್ತನೇ ಆಗಿರುತ್ತೀಯೆ, ನಿನಗೆ ಮಿಕ್ಕದ್ದೆಲ್ಲವೂ ಭೋಜ್ಯವಾಗಿರುತ್ತದೆ[8].

---

1. "ಛದ್ಮನಾ" ಎಂದು ಆ॥ ಪಾಠ.

2. "ತ್ವದರ್ಥಂ ಯಾ ಇಮಾಃ" ಎಂದು ಆ॥ ಪಾಠ.

3. "ಭೋಕ್ತಾ ಹಿ" ಎಂದು ಆ॥ ಪಾಠ.

4. ಹಿಂದಿನ ಪ್ರಶ್ನೆಯಲ್ಲಿ ಹೇಳಿರುವಂತೆ ರೇತೋರೂಪದಿಂದ ಗರ್ಭದಲ್ಲಿರುವ ಪ್ರಜಾಪತಿಯೂ ಪ್ರಾಣನೇ.

5. ತಾಯಿತಂದೆಗಳ ರೂಪದಿಂದ ಹುಟ್ಟುವ ಮಕ್ಕಳೂ ಪ್ರಜಾಪತಿಯೇ. ಪ್ರಜಾಪತಿಯೇ ಎಲ್ಲವೂ ಆಗಿರುವದರಿಂದ ತಾಯಿತಂದೆಗಳೂ ಮಕ್ಕಳೂ ಅತನೇ. ಸರ್ವವೂ ಪ್ರಾಣನೇ ಎಂಬುದನ್ನು ತಿಳಿಸುವದಕ್ಕೆ ಹೀಗೆ ಹೇಳಿರುತ್ತದೆ.

6. ಪ್ರಜಾಪತಿಯು ಎಲ್ಲಾ ಪ್ರಜೆಗಳಿಗೂ ತಂದೆ, ಆದ್ದರಿಂದ ಅವನು ತಂದೆತಾಯಿಗಳ ರೂಪದಿಂದಲೇ ತಂದೆತಾಯಿಗಳೆನಿಸಿಕೊಳ್ಳಬೇಕಾದದ್ದೇನೂ ಇಲ್ಲ.

7. ಇಂದ್ರಿಯಗಳ ಮೂಲಕ ಪ್ರಾಣನಿಗೆ ವಿಷಯಗಳು ಅರ್ಪಿತವಾಗುತ್ತಿರುವವು.

8. ಪ್ರಾಣನೇ ಇಂದ್ರಿಯಗಳ ಮೂಲಕ ವಿಷಯಗಳನ್ನು ಅನುಭವಿಸುವವನು.

**ದೇವಾನಾಮಸಿ ವಹ್ನಿತಮಃ**
**ಪಿತೄಣಾಂ ಪ್ರಥಮಾ ಸ್ವಧಾ ।**
**ಋಷೀಣಾಂ ಚರಿತಂ ಸತ್ಯ**
**ಮಥರ್ವಾಙ್ಗಿರಸಾಮಸಿ** ॥ ೮ ॥

೮. ದೇವತೆಗಳಿಗೆ ಉತ್ತಮ ವಹ್ನಿಯಾಗಿರುವೆ; ಪಿತೃಗಳಿಗೆ ಮೊದಲನೆಯ ಸ್ವಧಾಕಾರನಾಗಿರುವೆ, ಅಥರ್ವಾಂಗಿರಸರಾಗಿರುವ ಋಷಿಗಳಿಗೆ ಸತ್ಯವಾದ ನಡತೆಯಾಗಿರುವೆ.

(ಭಾಷ್ಯ)

೩೧. ಕಿಂಚ **ದೇವಾನಾಮ್** ಇನ್ದ್ರಾದೀನಾಮ್ **ಅಸಿ** ಭವಸಿ ತ್ವಂ **ವಹ್ನಿತಮಃ** ಹವಿಷಾಂ ಪ್ರಾಪಯಿತೃತಮಃ **ಪಿತೄಣಾಂ** ನಾನ್ದೀಮುಖೇ ಶ್ರಾದ್ಧೇ ಯಾ ಪಿತೃಭ್ಯೋ ದೀಯತೇ **ಸ್ವಧಾ** ಅನ್ನಂ ಸಾ ದೇವಪ್ರದಾನಮಪೇಕ್ಷ್ಯ[1] **ಪ್ರಥಮಾ** ಭವತಿ । ತಸ್ಯಾ ಅಪಿ ಪಿತೃಭ್ಯಃ ಪ್ರಾಪಯಿತಾ ತ್ವಮೇವ ಇತ್ಯರ್ಥಃ । ಕಿಂಚ **ಋಷೀಣಾಂ** ಚಕ್ಷುರಾದೀನಾಂ ಪ್ರಾಣಾನಾಮ್ ಅಙ್ಗಿರಸಾಮ್[2] ಅಙ್ಗಿರಸಭೂತಾನಾಮ್ ಆಥರ್ವಣಾಂ ತೇಷಾಮೇವ "ಪ್ರಾಣೋ ವಾಽಥರ್ವಾ"(?) ಇತಿ ಶ್ರುತೇಃ **ಚರಿತಂ** ಚೇಷ್ಟಿತಂ **ಸತ್ಯಮ್** ಅವಿತಥಂ ದೇಹಧಾರಣಾದ್ಯುಪಕಾರಲಕ್ಷಣಂ ತ್ವಮೇವಾಸಿ ॥

(ಭಾಷ್ಯಾರ್ಥ)

ಇದಲ್ಲದೆ ಇಂದ್ರನೇ ಮೊದಲಾದ **ದೇವತೆಗಳಿಗೆ** ನೀನು **ಉತ್ತಮ** ವಹ್ನಿ ಎಂದರೆ ಹವಿಸ್ಸನ್ನು (ತೆಗೆದುಕೊಂಡು ಹೋಗಿ)ಕೊಡುವವರಲ್ಲಿ ಉತ್ತಮನು. ಪಿತೃಗಳಿಗೆ **ನಾಂದೀಮುಖ**ಶ್ರಾದ್ಧದಲ್ಲಿ ಸ್ವಧೆ ಎಂಬ ಅನ್ನವು ಕೊಡಲ್ಪಡುತ್ತದೆಯಷ್ಟೆ. ಅದು ದೇವತೆಗಳಿಗೆ ಕೊಡುವ (ಹೋಮಕ್ಕೆ) ಹೋಲಿಸಿದರೆ ಮೊದಲನೆಯದಾಗುವದು. ಅದನ್ನೂ ಪಿತೃಗಳಿಗೆ (ತೆಗೆದುಕೊಂಡುಹೋಗಿ) ಕೊಡುವವನೂ ನೀನೇ ಎಂದರ್ಥ. ಮತ್ತು:ಅಂಗಿರಸರಾಗಿರುವ[3] ಆಥರ್ವಋಷಿಗಳಿಗೆ[4] ಎಂದರೆ ಚಕ್ಷುರಾದಿಪ್ರಾಣಗಳಿಗೆ

---

1. "ಪ್ರಧಾನಮಪೇಕ್ಷ್ಯ" ಎಂಬ ಆ॥ ಪಾಠಕ್ಕಿಂತ ಈ ವಾ॥ ಪಾಠವೇ ಉತ್ತಮವಾದದ್ದು.

2. "ಅಥರ್ವಾಙ್ಗಿರಸಾಮ್" ಎಂದು ವಾ॥ ಪಾಠ.

3. ಪ್ರಾಣನು ಅಂಗಗಳ ರಸನಾದ್ದರಿಂದ ಅಂಗಿರಸನು ಬೃ. ೧-೩-೧೯ ; ಇದನ್ನು ಇಂದ್ರಿಯಗಳಿಗೂ ಇಲ್ಲಿ ಅನ್ವಯಿಸಿದೆ.

4. ತಮ್ಮತಮ್ಮ ವಿಷಯಗಳನ್ನು ತಿಳಿಯುವದರಿಂದ ಇಂದ್ರಿಯಗಳು ಋಷಿಗಳು.

" ಪ್ರಾಣನೇ ಅಥರ್ವನು " (?) ಎಂಬ ಶ್ರುತಿ ಇದಕ್ಕೆ ಪ್ರಮಾಣವು. ಸತ್ಯವಾಗಿರುವ ದೇಹಧಾರಣೆಯನ್ನು ಮಾಡುವದೇ ಮುಂತಾದ ರೂಪದ ನಡತೆಯು ಎಂದರೆ ವ್ಯಾಪಾರವೂ[1] ನೀನೇ ಆಗಿರುವೆ.

**ಇನ್ದ್ರಸ್ತ್ವಂ ಪ್ರಾಣ ತೇಜಸಾ**
**ರುದ್ರೋಽಸಿ ಪರಿರಕ್ಷಿತಾ ।**
**ತ್ವಮನ್ತರಿಕ್ಷೇ ಚರಸಿ**
**ಸೂರ್ಯಸ್ತ್ವಂ ಜ್ಯೋತಿಷಾಂ ಪತಿಃ ॥ ೯ ॥**

೯. ಪ್ರಾಣನೆ, ನೀನು ಇಂದ್ರನು, ತೇಜಸ್ಸಿನಿಂದ ರುದ್ರನಾಗಿರುವೆ. (ನೀನೇ) ಕಾಪಾಡುವವನು. ನೀನು ಸೂರ್ಯನಾಗಿ ಅಂತರಿಕ್ಷವಲ್ಲಿ ಸಂಚರಿಸುತ್ತಿರುವೆ. ಜ್ಯೋತಿಗಳಿಗೆಲ್ಲ ಒಡೆಯನು ನೀನೇ.

(ಭಾಷ್ಯ)

೩೨. ಕಿಂಚ ಇನ್ದ್ರಃ ಪರಮೇಶ್ವರಃ ತ್ವಂ ಹೇ ಪ್ರಾಣ ತೇಜಸಾ ವೀರ್ಯೇಣ ರುದ್ರೋಽಸಿ ಸಂಹರನ್ ಜಗತ್ । ಸ್ಥಿತೌ ಚ ಪರಿ ಸಮನ್ತಾತ್ ರಕ್ಷಿತಾ ಪಾಲಯಿತಾ ಪರಿರಕ್ಷಿತಾ ತ್ವಮೇವ ಜಗತಃ ಸೌಮ್ಯೇನ ರೂಪೇಣ। ತ್ವಮ್ ಅನ್ತರಿಕ್ಷೇ ಅಜಸ್ರಂ ಚರಸಿ ಉದಯಾಸ್ತಮಯಾಭ್ಯಾಮ್ ಸೂರ್ಯಃ ತ್ವಮೇವ ಚ ಸರ್ವೇಷಾಂ ಜ್ಯೋತಿಷಾಂ ಪತಿಃ ॥

(ಭಾಷ್ಯಾರ್ಥ)

ಮತ್ತು ಎಲೈ ಪ್ರಾಣನೆ, ನೀನು ಇಂದ್ರನು ಎಂದರೆ ಪರಮೇಶ್ವರನು[2]. ತೇಜಸ್ಸಿನಿಂದ ಎಂದರೆ ಪರಾಕ್ರಮದಿಂದ ಜಗತ್ತನ್ನು ಸಂಹರಿಸುವ ರುದ್ರನಾಗಿರುವೆ ಮತ್ತು ಸ್ಥಿತಿಕಾಲದಲ್ಲಿ ಸೌಮ್ಯರೂಪದಿಂದ[3] ಜಗತ್ತಿನ ಪರಿರಕ್ಷಕನಾಗಿರುವವನು-ಪರಿ ಎಲ್ಲಾ ಬಗೆಯಿಂದಲೂ ರಕ್ಷಿಸುವವನು, ಕಾಪಾಡುವವನು ನೀನೇ. ನೀನು ಅಂತರಿಕ್ಷದಲ್ಲಿ ಸೂರ್ಯನಾಗಿ ಒಂದೇ ಸಮನೆ ಉದಯಾಸ್ತಮಯಗಳನ್ನು ಹೊಂದುತ್ತಾ ನಿತ್ಯವೂ ಸಂಚರಿಸುತ್ತಿರುವೆ. ಮತ್ತು ಜ್ಯೋತಿಗಳಿಗೆಲ್ಲ ಒಡೆಯನಾಗಿರುವವನೂ ನೀನೇ.[4]

---

1. ಇಂದ್ರಿಯಗಳ ವ್ಯಾಪಾರವೆಲ್ಲ ಪ್ರಾಣನ ಅಧೀನ.

2. ಇದಿ ಪರಮೈಶ್ವರ್ಯೆ ಎಂಬ ಧಾತುವಿನ ಅರ್ಥವಿದು, ಸೃಷ್ಟಿಕರ್ತನು ಎಂದರ್ಥ.

3. ಸತ್ತ್ವಪ್ರಧಾನನಾದ ವಿಷ್ಣುರೂಪದಿಂದ.

4. ಜ್ಯೋತಿಗಳಿಗೆಲ್ಲ ಒಡೆಯನಾದ ಸೂರ್ಯನು ಎಂದಾಗಲಿ ಚಂದ್ರನು ಎಂದಾಗಲಿ ಅರ್ಥಮಾಡಬಹುದು.

**ಯದಾ ತ್ವಮಭಿವರ್ಷ**
**ಸ್ಯಥೇಮಾಃ ಪ್ರಾಣತೇ ಪ್ರಜಾಃ ।**
**ಆನನ್ದರೂಪಾಸ್ತಿಷ್ಠನ್ತಿ**
**ಕಾಮಾಯಾನ್ನಂ ಭವಿಷ್ಯತೀತಿ ॥ ೧೦ ॥**

೧೦. ಯಾವಾಗ ನೀನು ಮಳೆಗರೆಯುವೆಯೋ ಆಗ ಈ ಪ್ರಜೆಗಳು ಬದುಕಿರುವರು. ಬೇಕಾದಷ್ಟು ಅನ್ನವಾಗುವದೆಂದು ಆನಂದರೂಪರಾಗಿ ಇರುತ್ತಾರೆ.

(ಭಾಷ್ಯ)

೩೩. ಯದಾ ಪರ್ಜನ್ಯೋ ಭೂತ್ವಾ ಅಭಿವರ್ಷಸಿ ತ್ವಮ್ ಅಥ ತದಾ ಅನ್ನಂ ಪ್ರಾಪ್ಯ ಇಮಾಃ ಪ್ರಜಾಃ ಪ್ರಾಣತೇ ಪ್ರಾಣಚೇಷ್ಟಾಂ ಕುರ್ವನ್ತಿ ಇತ್ಯರ್ಥಃ। ಅಥವಾ ಪ್ರಾಣ![1] ತೇ ತವ ಇಮಾಃ ಪ್ರಜಾಃ ಸ್ವಾತ್ಮಭೂತಾಃ ತ್ವದನ್ನಸಂವರ್ಧಿತಾಃ ತ್ವದಭಿವರ್ಷಣದರ್ಶನಮಾತ್ರೇಣ ಚ ಆನನ್ದರೂಪಾಃ ಸುಖಂ ಪ್ರಾಪ್ತಾ ಇವ ಸತ್ಯಃ ತಿಷ್ಠನ್ತಿ। ಕಾಮಾಯ ಇಚ್ಛಾತಃ ಅನ್ನಂ ಭವಿಷ್ಯತಿ ಇತಿ ಏವಮಭಿಪ್ರಾಯಾಃ[2] ॥

(ಭಾಷ್ಯಾರ್ಥ)

ಯಾವಾಗ ಪರ್ಜನ್ಯನಾಗಿ ನೀನು ಮಳೆಯನ್ನು ಸುರಿಯುವೆಯೋ ಆಗ ಆಗ್ಗೆ ಅನ್ನವನ್ನು ಹೊಂದಿದ ಈ ಪ್ರಜೆಗಳು "ಪ್ರಾಣತೇ" ಬದುಕಿರುವ ವ್ಯಾಪಾರವನ್ನು ಮಾಡುತ್ತಾರೆ[3] ಎಂದರ್ಥ. ಅಥವಾ (ಎಲೈ) ಪ್ರಾಣನೆ, 'ತೇ' ನಿನ್ನ[4] ಸ್ವರೂಪರೇ ಆಗಿರುವ[5] ಈ ಪ್ರಜೆಗಳು, ನಿನ್ನ ಅನ್ನದಿಂದ ಬೆಳೆದಿರುವ[6] (ಈ ಪ್ರಜೆಗಳು) ನೀನು

---

1. "ಹೇ ಪ್ರಾಣ" ಎಂದು ವಾ॥ ಪಾಠ.

2. ಅಚ್ಚಿನ ಪುಸ್ತಕಗಳಲ್ಲೆಲ್ಲ "ಇತ್ಯೇವಮಭಿಪ್ರಾಯಃ" ಎಂದೇ ಇದೆ. ಆದರೂ "ಇತಿ ಏವಮಭಿಪ್ರಾಯಾಃ" ಎಂದು ಪ್ರಾಣಗಳಿಗೆ ವಿಶೇಷಣವಾಗಿ ತೆಗೆದುಕೊಳ್ಳುವದರಲ್ಲಿ ಸ್ವಾರಸ್ಯವು ಹೆಚ್ಚು. ಆಗ "ಏವಮಭಿಪ್ರಾಯಾಃ" ಎಂಬುದು ಇತಿ ಎಂಬುದರ ವಿವರಣೆಯಾಗುತ್ತದೆ.

3. ಬದುಕಿರುತ್ತಾರೆ. ಮಳೆಯೇ ಪ್ರಜೆಗಳ ಜೀವನ ಎಂದರ್ಥ.

4. "ಪ್ರಾಣತೇ" ಎಂದು ಒಂದೇ ಕ್ರಿಯಾಪದವಾಗಿ ತೆಗೆದುಕೊಂಡು ಮೊದಲನೆಯ ಅರ್ಥವನ್ನು ಕೊಟ್ಟಿತ್ತು; ಪ್ರಾಣ ತೇ ಎಂದು ಎರಡು ಪದಗಳಾಗಿ ಬಿಡಿಸಿ ಈ ಅರ್ಥವನ್ನು ಹೇಳಿದೆ.

5. ನಿನ್ನ ಪ್ರಜೆಗಳು ಎಂದರೆ ನಿನ್ನಿಂದ ಉಂಟಾಗಿರುವ, ನಿನ್ನ ಸ್ವರೂಪರಾದ ಎಂದರ್ಥ.

6. "ನಿನ್ನ ಪ್ರಜೆಗಳು" ಎಂಬುದಕ್ಕೆ ಇದೂ ಅರ್ಥ. ನಿನ್ನಿಂದ ಬಂದು ನಿನ್ನಿಂದಲೇ ಬೆಳೆದಿರುವವರಾದ್ದರಿಂದ ನೀನೇ ಪೋಷಕನೆಂದು ಹೇಗೋ ಅರಿತಿರುತ್ತಾರೆ ಎಂದು ಭಾವ.

ಮಳೆಗರೆಯುವದನ್ನು ಕಂಡ ಮಾತ್ರದಿಂದಲೇ ಆನಂದರೂಪರಾಗಿ ಸುಖವನ್ನು ಹೊಂದಿದವರಂತೆ[1] ಆದವರಾಗಿ ಇರುತ್ತಾರೆ. ಬೇಕಾದಷ್ಟು ತಾವು ಬಯಸಿದಷ್ಟು ಅನ್ನವು ಆಗುವದು ಎಂದು ಹೀಗೆಂಬ ಅಭಿಪ್ರಾಯವುಳ್ಳವರಾಗಿ (ಆನಂದರೂಪ ರಾಗಿರುತ್ತಾರೆ)[2].

**ವ್ರಾತ್ಯಸ್ತ್ವಂ ಪ್ರಾಣೈಕರ್ಷಿ**
**ರತ್ತಾ ವಿಶ್ವಸ್ಯ ಸತ್ಪತಿಃ ।**
**ವಯಮಾದ್ಯಸ್ಯ ದಾತಾರಃ**
**ಪಿತಾ ತ್ವಂ ಮಾತರಿಶ್ವನಃ ॥ ೧೧ ॥**

೧೧. ಪ್ರಾಣನೆ, ನೀನು ವ್ರಾತ್ಯನು, ಏಕರ್ಷಿಯಾದ ಅತ್ತೃವು, ವಿಶ್ವಕ್ಕೆ ಸತ್ಪತಿಯು, ನಾವು ಆಹಾರವನ್ನು ಕೊಡುವವರು. ಮಾತರಿಶ್ವನೆ, ನೀನು ನಮ್ಮ ತಂದೆ.

(ಭಾಷ್ಯ)

೩೪. ಕಿಂಚ ಪ್ರಥಮಜತ್ವಾತ್ ಅನ್ಯಸ್ಯ ಸಂಸ್ಕರ್ತುರಭಾವಾತ್ ಅಸಂಸ್ಕೃತೋ ವ್ರಾತ್ಯಃ ತ್ವಮ್ । ಸ್ವಭಾವತ ಏವ ಶುದ್ಧಃ ಇತ್ಯಭಿಪ್ರಾಯಃ । ಹೇ ಪ್ರಾಣ, ಏಕರ್ಷಿ ಸ್ತ್ವಮ್ ಆಥರ್ವಣಾನಾಂ ಪ್ರಸಿದ್ಧಃ ಏಕರ್ಷಿನಾಮಾ ಅಗ್ನಿಃ ಸನ್ ಅತ್ತಾ ಸರ್ವ ಹವಿಷಾಮ್ । ತ್ವಮೇವ ವಿಶ್ವಸ್ಯ ಸತಃ ವಿದ್ಯಮಾನಸ್ಯ ಪತಿಃ ಸತ್ಪತಿಃ । ಸಾಧುರ್ವಾ ಪತಿಃ ಸತ್ಪತಿಃ । ವಯಂ ಪುನಃ ಆದ್ಯಸ್ಯ ತವ ಅದನೀಯಸ್ಯ ಹವಿಷಃ ದಾತಾರಃ । ತ್ವಂ ಪಿತಾ ಮಾತರಿಶ್ವ ಹೇ ಮಾತರಿಶ್ವನ್ ನಃ ಅಸ್ಮಾಕಮ್ । ಅಥವಾ ಮಾತರಿಶ್ವನಃ ವಾಯೋಃ ಪಿತಾ[3] ತ್ವಮ್ । ಅತಶ್ಚ ಸರ್ವಸ್ಯೈವ ಜಗತಃ ಪಿತೃತ್ವಂ ಸಿದ್ಧಮ್ ॥

(ಭಾಷ್ಯಾರ್ಥ)

ಮತ್ತು ನೀನೇ ಮೊದಲು ಹುಟ್ಟಿದವನಾಗಿರುವದರಿಂದ ನಿನಗೆ ಸಂಸ್ಕಾರ ವನ್ನುಂಟುಮಾಡುವವರು ಬೇರೆ ಯಾರೂ ಇಲ್ಲದ್ದರಿಂದ ನೀನು ಸಂಸ್ಕಾರವಾಗಿಲ್ಲದ **ವ್ರಾತ್ಯನು,**[4] ಸ್ವಭಾವದಿಂದಲೇ ಶುದ್ಧನಾದವನು ಎಂದು ಅಭಿಪ್ರಾಯ. ಎಲೈ

---

1. ಮುಂದ ಬರುವ ಸುಖವನ್ನು ಈಗಲೇ ಹೊಂದಿದವರಂತೆ, ನಿರೀಕ್ಷಣೆಯಿಂದಲೇ.

2. "ಇತ್ಯೇವಮಭಿಪ್ರಾಯಃ" ಎಂದೇ ಪಾಠವೆಂದು ಇಟ್ಟುಕೊಂಡರೆ ಹೀಗೆ ಕನ್ನ ಡಿಸಬೇಕು. "ಅಭಿಪ್ರಾಯಃ" ಎಂಬ ಪಾಠಕ್ಕೆ "ಹೀಗೆಂದು (ಅವರ) ಅಭಿಪ್ರಾಯವು" ಎಂದು ಅಧ್ಯಾಹಾರಮಾಡಿಕೊಂಡು ಕನ್ನಡಿಸಬೇಕಾಗುವದು.

3. ಈ ಮಾತು ವಾ॥ ಪಾಠದಲ್ಲಿ ಮಾತ್ರ ಇದೆ.

4. ಸಂಸ್ಕಾರವನ್ನು ಬಯಸದವನು. ಈ ಅರ್ಥದಲ್ಲಿ ವ್ರಾತ್ಯಶಬ್ದವನ್ನು ವೇದದಲ್ಲಿ ಉಪಯೋಗಿಸಿರುವದಕ್ಕೆ ಅ. ವೇ. ೧೫ ನೆಯ ಕಾಂಡವನ್ನು ನೋಡಿ.

ಪ್ರಾಣನೆ, ನೀನು ಏಕರ್ಷಿಯು ; ಅಥರ್ವಣರಲ್ಲಿ ಪ್ರಸಿದ್ಧನಾಗಿರುವ **ಏಕರ್ಷಿ** ಎಂಬ ಹೆಸರಿನ ಅಗ್ನಿಯಾಗಿ[1] ಎಲ್ಲಾ ಹವಿಸ್ಸುಗಳನ್ನೂ (ಭಕ್ಷಿಸುವ) ಅತ್ತೃವು, ನೀನು. ನೀನೇ ಇರುವ ಎಲ್ಲಾ (ಜಗತ್ತಿಗೂ) ಪತಿಯು, (ಆದ್ದರಿಂದ) ಸತ್ಪತಿಯು ; ಅಥವಾ ಒಳ್ಳೆಯ (ಯೋಗ್ಯನಾದ) ಪತಿಯು, (ಆದ್ದರಿಂದ) ಸತ್ಪತಿಯು.[2] ನಾವಾದರೋ ಆದ್ಯವನ್ನು ಎಂದರೆ ನಿನಗೆ ಆಹಾರವಾಗಿರುವ ಹವಿಸ್ಸನ್ನು ಕೊಡುವವರು. ಎಲೈ ಮಾತರಿಶ್ವನೆ, ನೀನು 'ನಃ' ನಮ್ಮಗಳಿಗೆ ತಂದೆ; ಅಥವಾ 'ಮಾತರಿಶ್ವನಃ' ಎಂದರೆ ಮಾತರಿಶ್ವನಿಗೆ ವಾಯುವಿಗೆ[3] ನೀನು ತಂದೆ. ಆದ್ದರಿಂದಲೂ[4] ಎಲ್ಲಾ ಜಗತ್ತಿಗೂ (ನೀನು) ತಂದೆಯೆಂದು ಸಿದ್ಧವಾಯಿತು.

**ಯಾ ತೇ ತನೂರ್ವಾಚಿ ಪ್ರತಿಷ್ಠಿತಾ**
**ಯಾ ಶ್ರೋತ್ರೇ ಯಾ ಚ ಚಕ್ಷುಷಿ ।**
**ಯಾ ಚ ಮನಸಿ ಸನ್ತತಾ**
**ಶಿವಾಂ ತಾಂ ಕುರು ಮೋತ್ಕ್ರಮೀಃ** ॥ ೧೨ ॥

೧೨. ನಿನ್ನ ಯಾವ ಶರೀರವು ವಾಕ್ಕಿನಲ್ಲಿ ಇದ್ದುಕೊಂಡಿರುವದೋ, ಯಾವದು ಶ್ರೋತ್ರದಲ್ಲಿ (ಇದ್ದುಕೊಂಡಿರುವದೋ), ಯಾವದು ಚಕ್ಷುಸ್ಸಿನಲ್ಲಿ (ಇದ್ದುಕೊಂಡಿರುವದೋ),ಯಾವದು ಮನಸ್ಸಿನಲ್ಲಿ ಸಂತತವಾಗಿ(ರುವದೋ), ಅದನ್ನು ಮಂಗಲಕರವಾಗಿ ಮಾಡು, ಮೇಲಕ್ಕೆ (ಎದ್ದು) ಹೋಗಬೇಡ.

(ಭಾಷ್ಯ)

೩೫. (ಕಿಂ ಬಹುನಾ?)ಯಾ ತೇ ತ್ವದೀಯಾ ತನೂಃ ವಾಚಿ ಪ್ರತಿಷ್ಠಿತಾ ವಕ್ತೃತ್ವೇನ ವದನಚೇಷ್ಟಾಂ ಕುರ್ವತೀ ಯಾ ಶ್ರೋತ್ರೇ ಯಾ ಚ ಚಕ್ಷುಷಿ ಯಾ ಚ ಮನಸಿ ಸಂಕಲ್ಪಾದಿವ್ಯಾಪಾರೇಣ ಸನ್ತತಾ ಸಮನುಗತಾ ತನೂಃ ತಾಂ ಶಿವಾಂ ಶಾನ್ತಾಂ ಕುರು ಮೋತ್ಕ್ರಮೀಃ ಉತ್ಕ್ರಮಣೇನ ಅಶಿವಾಂ ಮಾಕಾರ್ಷೀಃ ಇತ್ಯರ್ಥಃ ॥

---

1. ಮುಂ. ಭಾ. ೩-೨-೧೦ (ಭಾ. ಭಾ. ೧೨೫).

2. "ಸತ್ಪತಿ'' ಎಂಬ ಮಾತಿನಲ್ಲಿ ಸತ್ ಎಂಬುದಕ್ಕೆ ಇರುವ ಎಂದರ್ಥವನ್ನು ಕೊಟ್ಟು ಮೊದಲನೆಯ ವ್ಯಾಖ್ಯಾನವನ್ನು ಮಾಡಿದೆ; ಒಳ್ಳೆಯ ಎಂಬರ್ಥವನ್ನು ಕೊಟ್ಟು ಎರಡನೆಯ ಅರ್ಥವನ್ನು ಮಾಡಿದೆ.

3. "ಮಾತರಿಶ್ವ ನಃ'' ಎಂದು ಎರಡು ಪದವಾಗಿಟ್ಟುಕೊಂಡು ಒಂದನೆಯ ವ್ಯಾಖ್ಯಾನವನ್ನು ಮಾಡಿದೆ. ಮಾತರಿಶ್ವನಃ ಎಂದು ಷಷ್ಠೀವಿಭಕ್ತ್ಯಂತವಾದ ಒಂದೇ ಪದವಾಗಿಟ್ಟುಕೊಂಡು ಎರಡನೆಯ ವ್ಯಾಖ್ಯಾನ.

4. ತಂದೆತಾಯಿಗಳ ಆಕಾರದಿಂದ ಹುಟ್ಟುವದರಿಂದ ಮಾತ್ರವಲ್ಲ.

(ಭಾಷ್ಯಾರ್ಥ)

(ಹೆಚ್ಚೇಕೆ?)[1] ಯಾವ ನಿನ್ನ ನಿನ್ನದಾದ ತನುವು[2] ವಾಕ್ಕಿನಲ್ಲಿ ಮಾತನಾಡುವ ಕೆಲಸವನ್ನು ಮಾಡುತ್ತಾ ವಕ್ತೃವಾಗಿ ಇದ್ದುಕೊಂಡಿರುವದೋ (ಇದರಂತೆ) ಯಾವದು ಶ್ರೋತ್ರದಲ್ಲಿ (ಇದ್ದುಕೊಂಡಿರುವದೋ)[3] ಮತ್ತು ಯಾವದು ಚಕ್ಷುಸ್ಸಿನಲ್ಲಿ (ಇದ್ದುಕೊಂಡಿರುವದೋ) ಮತ್ತು ಯಾವ ತನುವು ಮನಸ್ಸಿನಲ್ಲಿ ಸಂಕಲ್ಪವೇ ಮುಂತಾದ ವ್ಯಾಪಾರದಿಂದ (ಕೂಡಿ) ಸಂತತವಾಗಿರುವದೋ ಬೆಂಬಿಡದೆ ಹೊಂದಿಕೊಂಡೇ ಇರುವದೋ[4], ಆ (ತನುವನ್ನು) ಮಂಗಲಕರವಾಗಿ ಶಾಂತವಾಗಿ ಮಾಡು; ಮೇಲಕ್ಕೆದ್ದು ಹೋಗಬೇಡ (ಅವುಗಳನ್ನು) ಬಿಟ್ಟು ಹೋಗಿ ಅಮಂಗಲವಾಗಿ ಮಾಡಬೇಡ[5] ಎಂದರ್ಥ.

**ಪ್ರಾಣಸ್ಯೇದಂ ವಶೇ ಸರ್ವಂ**
**ತ್ರಿದಿವೇ ಯತ್ಪ್ರತಿಷ್ಠಿತಮ್ ।**
**ಮಾತೇವ ಪುತ್ರಾನ್ ರಕ್ಷಸ್ವ**
**ಶ್ರೀಶ್ಚ ಪ್ರಜ್ಞಾಂ ಚ ವಿಧೇಹಿ ನ ಇತಿ ॥ ೧೩ ॥**

೧೩. ಇದೆಲ್ಲವೂ ಪ್ರಾಣನ ವಶದಲ್ಲಿಯೇ ಇರುವದು. ತ್ರಿದಿವದಲ್ಲಿ ಯಾವದು ಇರುವದೋ ಅದೂ (ಪ್ರಾಣನ ವಶದಲ್ಲಿಯೇ ಇರುವದು). ತಾಯಿ ಮಕ್ಕಳನ್ನು ಹೇಗೋ ಹಾಗೆ ರಕ್ಷಿಸು. ಶ್ರೀಗಳನ್ನೂ ಪ್ರಜ್ಞೆಯನ್ನೂ ನಮಗೆ ಕೊಡು.

(ಭಾಷ್ಯ)

೩೬. ಕಿಂ ಬಹುನಾ? ಅಸ್ಮಿನ್ ಲೋಕೇ ಪ್ರಾಣಸ್ಯೈವ ವಶೇ ಸರ್ವಮಿದಂ ಯತ್ಕಿಂಚಿದುಪಭೋಗಜಾತಮ್। ತ್ರಿದಿವೇ ತೃತೀಯಸ್ಯಾಂ ದಿವಿ ಚ ಯತ್ ಪ್ರತಿಷ್ಠಿತಂ ದೇವಾದ್ಯುಪಭೋಗಲಕ್ಷಣಂ ತಸ್ಯಾಪಿ ಪ್ರಾಣ ಏವ ಈಶಿತಾ ರಕ್ಷಿತಾ। ಅತಃ ಮಾತೇವ

1. "ಕಿಂ ಬಹುನಾ?" ಎಂಬ ಮಾತು ಬರಹಗಾರರ ಕೈತಪ್ಪಿನಿಂದ ಬಿದ್ದಿದೆ ಎಂದು ತೋರುವದು.

2. ರೂಪವು.

3. ಶ್ರೋತ್ರದಲ್ಲಿ ಶ್ರೋತೃರೂಪದಿಂದ ಚಕ್ಷುಸ್ಸಿನಲ್ಲಿ ದ್ರಷ್ಟೃರೂಪದಿಂದ ಎಂದರ್ಥ.

4. ಸಂಕಲ್ಪ, ವಿಕಲ್ಪ, ಸಂಶಯ, ನಿಶ್ಚಯ–ಮುಂತಾದವುಗಳನ್ನು ಮಾಡುವದಕ್ಕೆ ತಕ್ಕ ರೂಪವನ್ನು ಧರಿಸಿಕೊಂಡು ಅವಿದಿತವಾಗಿ ಕೆಲಸಮಾಡುತ್ತಿರುವದೋ.

5. ಛಾ. ೫-೧-೭ ರ ಸೂಚನೆ. ಮಿಕ್ಕ ಯಾವ ಇಂದ್ರಿಯಗಳು ಇಲ್ಲವಾದರೂ ಶರೀರವು ಅಮಂಗಲವಾಗಿ ತೋರುವದಿಲ್ಲ; ಪ್ರಾಣವು ಹೋದಮಾತ್ರದಿಂದ ಅಮಂಗಲವಾಗುತ್ತದೆ.

ಪುತ್ರಾನ್ ಅಸ್ಮಾನ್ ರಕ್ಷಸ್ವ ಪಾಲಯಸ್ವ। ತ್ವನ್ನಿಮಿತ್ತಾ ಹಿ ಬ್ರಾಹ್ಮ್ಯಃ ಕ್ಷಾತ್ರ್ಯಶ್ಚ[1] ಶ್ರಿಯಃ। ತಾಃ ತ್ವಂ ಶ್ರೀಶ್ಚ ಶ್ರಿಯಶ್ಚ ಪ್ರಜ್ಞಾಂ ಚ ತ್ವತ್ಸ್ಥಿತಿನಿಮಿತ್ತಾಂ ವಿಧೇಹಿ ನಃ ವಿಧತ್ಸ್ವ ಇತ್ಯರ್ಥಃ ಇತಿ। ಏವಂ ಸರ್ವಾತ್ಮತಯಾ ವಾಗಾದಿಭಿಃ ಪ್ರಾಣೈಃ ಸ್ತುತ್ಯಾ ಗಮಿತಮಹಿಮಾ ಪ್ರಾಣಃ ಪ್ರಜಾಪತಿಃ ಅತ್ತಾ ಇತ್ಯವಧೃತಮ್ ॥

(ಭಾಷ್ಯಾರ್ಥ)

ಹೆಚ್ಚು (ಹೇಳಿದ್ದರಿಂ)ದೇನು? ಈ ಲೋಕದಲ್ಲಿ ಯಾವ ಭೋಗಸಮೂಹವೇ ಇರಲಿ, ಅದೆಲ್ಲವೂ ಪ್ರಾಣನ ವಶದಲ್ಲಿಯೇ ಇರುವದು. ತ್ರಿದಿವದಲ್ಲಿ ಎಂದರೆ ಮೂರನೆಯ ದ್ಯುಲೋಕದಲ್ಲಿ[2] ದೇವತೆಗಳೇ ಮೊದಲಾದವರ ಉಪಭೋಗರೂಪವಾಗಿ (ಏನೇನಿರುವದೋ) ಅದಕ್ಕೂ ಪ್ರಾಣನೇ ಒಡೆಯನು, (ಅದನ್ನು) ಕಾಪಾಡುವವನು.[3] ಆದ್ದರಿಂದ (ಎಲೈ ಪ್ರಾಣನೆ,) ಮಕ್ಕಳನ್ನು ತಾಯಿಯು (ಕಾಪಾಡುವ) ಹಾಗೆ ನಮ್ಮನ್ನು ರಕ್ಷಿಸು, ಕಾಪಾಡು. ಬ್ರಾಹ್ಮಣಸಂಬಂಧವಾದ ಮತ್ತು ಕ್ಷತ್ರಿಯರ ಸಂಬಂಧವಾದ ಶ್ರೀಗಳು ನಿನ್ನ ಕಾರಣದಿಂದಲೇ (ಆಗುವ)ವಲ್ಲವೆ? ನೀನು ಆ ಶ್ರೀಗಳನ್ನೂ (ಶ್ರೀಶ್ಚ=ಶ್ರಿಯಶ್ಚ) ಮತ್ತು ನಿನ್ನ ಇರುವಿಕೆಯು ನಿಮಿತ್ತದಿಂದಲೇ (ತೋರಬೇಕಾಗಿರುವ) ಪ್ರಜ್ಞೆಯನ್ನೂ[4] ನಮಗೆ ಉಂಟುಮಾಡು, ಇರುವಂತೆ ಮಾಡು ಎಂದರ್ಥ. ಹೀಗೆಂದು ಪ್ರಾಣಗಳು ಸ್ತೋತ್ರಮಾಡಿದರು.

ಹೀಗೆ ಸರ್ವರೂಪನಾಗಿರುವನೆಂದು ವಾಕ್ಕೇ ಮುಂತಾದ ಪ್ರಾಣಗಳಿಂದ ಸ್ತೋತ್ರದಿಂದ ಸಿದ್ಧವಾದ ಮಹಿಮೆಯುಳ್ಳ ಪ್ರಾಣನು ಪ್ರಜಾಪತಿಯು ಅತ್ತೃವು[5] ಎಂದು ನಿಶ್ಚಯಿಸಿದಂತಾಯಿತು.



1. "ಕ್ಷಾತ್ರಿಯಾಶ್ಚ" ಎಂದು ಆ|| ಪಾಠ. ಇಲ್ಲಿ ಕೊಟ್ಟಿರುವದು ವಾ|| ಪಾಠ.

2. ಸ್ವರ್ಗದಲ್ಲಿ.

3. ಈ ಲೋಕದ ಮತ್ತು ಪರಲೋಕದ ಭೋಗಗಳು ಪ್ರಾಣನ ಅನುಗ್ರಹದಿಂದ ದಕ್ಕುವವು.

4. ಪ್ರಾಣವಿರುವವರೆಗೆ ಪ್ರಜ್ಞೆಯಿರುತ್ತದೆ. ಕೌ. ೩-೪.

5. ಪ್ರಜಾಪತಿಯು ಶರೀರದಲ್ಲಿ ಪ್ರಾಣನಾಗಿ ಅತ್ತೃವಾಗಿರುತ್ತಾನೆ.

# ಮೂರನೆಯ ಪ್ರಶ್ನೆ

## ಕೌಸಲ್ಯನ ಪ್ರಶ್ನೆ : ಪ್ರಾಣನ ಉತ್ಪತ್ತ್ಯಾದಿಗಳು ಹೇಗೆ ಆಗುತ್ತವೆ?

**ಅಥ ಹೈನಂ ಕೌಸಲ್ಯಶ್ಚಾಶ್ವಲಾಯನಃ ಪಪ್ರಚ್ಛ । ಭಗವನ್ ಕುತ ಏಷ ಪ್ರಾಣೋ ಜಾಯತೇ ಕಥಮಾಯಾತ್ಯಸ್ಮಿಞ್ಛರೀರ ಆತ್ಮಾನಂ ವಾ ಪ್ರವಿಭಜ್ಯ ಕಥಂ ಪ್ರಾತಿಷ್ಠತೇ ಕೇನೋತ್ಕ್ರಮತೇ ಕಥಂ ಬಾಹ್ಯಮಭಿಧತ್ತೇ ಕಥಮಧ್ಯಾತ್ಮಮಿತಿ ॥ ೧ ॥**

೧. ಆಮೇಲೆ ಈತನನ್ನು ಕೌಸಲ್ಯ ಆಶ್ವಲಾಯನನು ಹೀಗೆಂದು ಕೇಳಿದನು. ಭಗವಂತನೆ, ಈ ಪ್ರಾಣನು ಎತರಿಂದ ಹುಟ್ಟುವನು? ಈ ಶರೀರದೊಳಕ್ಕೆ ಹೇಗೆ ಬರುವನು? ತನ್ನನ್ನು ವಿಭಾಗಿಸಿಕೊಂಡು ಹೇಗೆ ಇರುತ್ತಿರುವನು? ಯಾವದರಿಂದ ಮೇಲಕ್ಕೆದ್ದು ಹೋಗುವನು? ಹೊರಗಿನದನ್ನು ಹೇಗೆ ತಡೆದುಕೊಂಡಿರುವನು? ಒಳಗಿನದನ್ನು ಹೇಗೆ (ತಡೆದುಕೊಂಡಿರುವನು)?

(ಭಾಷ್ಯ)

೩೭. ಅಥ ಹೈನಂ ಕೌಸಲ್ಯಶ್ಚಾಶ್ವಲಾಯನಃ ಪಪ್ರಚ್ಛ। ಪ್ರಾಣೋ ಹ್ಯೇವಂ ಪ್ರಾಣ್ಯೈರ್ನಿರ್ಧಾರಿತತತ್ತ್ವೈರುಪಲಬ್ಧಮಹಿಮಾಪಿ ಸಂಹತತ್ವಾತ್ ಸ್ಯಾತ್ ಅಸ್ಯ ಕಾರ್ಯತ್ವಮ್। ಅತಃ ಪೃಚ್ಛಾಮಿ। ಭಗವನ್ ಕುತಃ ಕಸ್ಮಾತ್ ಕಾರಣಾತ್ ಏಷಃ ಯಥಾವಧೃತಃ ಪ್ರಾಣಃ ಜಾಯತೇ? ಜಾತಶ್ಚ ಕಥಂ ಕೇನ ವೃತ್ತಿವಿಶೇಷೇಣ ಆಯಾತಿ ಅಸ್ಮಿನ್ ಶರೀರೇ? ಕಿಂನಿಮಿತ್ತಕಮಸ್ಯ ಶರೀರಗ್ರಹಣಮ್? ಇತ್ಯರ್ಥಃ। ಪ್ರವಿಷ್ಟಶ್ಚ ಶರೀರೇ ಆತ್ಮಾನಂ ವಾ ಪ್ರವಿಭಜ್ಯ ಪ್ರವಿಭಾಗಂ ಕೃತ್ವಾ ಕಥಂ ಕೇನ ಪ್ರಕಾರೇಣ ಪ್ರಾತಿಷ್ಠತೇ ಪ್ರತಿತಿಷ್ಠತಿ? ಕೇನ ವಾ ವೃತ್ತಿವಿಶೇಷೇಣ ಅಸ್ಮಾತ್ ಶರೀರಾತ್ ಉತ್ಕ್ರಮತೇ ಉತ್ಕ್ರಾಮತಿ? ಕಥಂ ಬಾಹ್ಯಮ್ ಅಧಿಭೂತಮ್ ಅಧಿದೈವತಂ ಚ ಅಭಿಧತ್ತೇ ಧಾರಯತಿ? ಕಥಮ್ ಅಧ್ಯಾತ್ಮಮ್? ಇತಿ.[1] ॥

(ಭಾಷ್ಯಾರ್ಥ)

"ಆಮೇಲೆ ಈತನನ್ನು ಕೌಸಲ್ಯ ಆಶ್ವಲಾಯನನೂ (ಹೀಗೆಂದು) ಕೇಳಿದನು", ಈ ರೀತಿಯಲ್ಲಿ ಪ್ರಾಣಗಳು ಪ್ರಾಣನ ತತ್ತ್ವವನ್ನು[2] ನಿಶ್ಚಯಿಸಿ ಇವನ ಮಹಿಮೆ

---

1. "ಧಾರಯತೀತಿ ಶೇಷಃ" ಎಂದು ವಾ॥ ಪಾಠದಲ್ಲಿ ಹೆಚ್ಚಾಗಿದೆ.
2. ಪ್ರಾಣನು ಸರ್ವಾತ್ಮಕನು, ಸರ್ವಕರಣಗಳ ಸಾರಭೂತನು–ಎಂದು.

ಯನ್ನು ಕಂಡುಕೊಂಡವಾದರೂ (ಈ ಪ್ರಾಣನೂ ಮಿಕ್ಕವುಗಳೊಡನೆ) ಒಟ್ಟುಗೂಡಿರುವವನಾದ್ದರಿಂದ ಇವನು ಕಾರ್ಯನಾಗಿರಬೇಕು. ಆದ್ದರಿಂದ (ಎಲೈ) ಭಗವಂತನೆ, (ಹೀಗೆಂದು) ಕೇಳುತ್ತಿದೇನೆ. ಈಗ ಈ ನಿಶ್ಚಯಮಾಡಿದ ಸ್ವರೂಪದ ಪ್ರಾಣನು ಏತರಿಂದ, ಯಾವ ಕಾರಣದಿಂದ ಹುಟ್ಟುವನು? ಹುಟ್ಟಿದ ಮೇಲೆ ಹೇಗೆ; ಯಾವ ವೃತ್ತಿವಿಶೇಷದಿಂದ ಈ ಶರೀರದೊಳಗೆ ಬರುವನು? ಇವನು ಶರೀರವನ್ನು ತೆಗೆದುಕೊಳ್ಳುವದಕ್ಕೆ ಕಾರಣವೇನು? ಎಂದರ್ಥ. ಶರೀರವನ್ನು ಹೊಕ್ಕಮೇಲೆ ತನ್ನನ್ನು ವಿಭಾಗಿಸಿಕೊಂಡು ತನ್ನಲ್ಲಿ ಒಳಭಾಗಗಳನ್ನು ಮಾಡಿಕೊಂಡು ಹೇಗೆ, ಯಾವ ಪ್ರಕಾರದಿಂದ 'ಪ್ರಾತಿಷ್ಠತೇ' ಇದ್ದುಕೊಂಡಿರುವನು? ಅಥವಾ ಯಾವ ವೃತ್ತಿವಿಶೇಷದಿಂದ ಈ ಶರೀರವನ್ನು (ಬಿಟ್ಟು) ಮೇಲಕ್ಕೆದ್ದು ಹೋಗುವನು? ಹೊರಗಿನದನ್ನು ಎಂದರೆ ಅಧಿಭೂತವನ್ನು ಮತ್ತು ಅಧಿದೈವತವನ್ನು[1] ಹೇಗೆ ತಡೆದುಕೊಂಡಿರುವನು, ಹಿಡಿದೆತ್ತಿಕೊಂಡಿರುವನು? ಒಳಗಿನದನ್ನು ಹೇಗೆ (ತಡೆದುಕೊಂಡಿರುವನು)?

## ಪಿಪ್ಪಲಾದನು ಕೌಸಲ್ಯನನ್ನು ಮೆಚ್ಚಿದ್ದು

**ತಸ್ಮೈ ಸ ಹೋವಾಚಾತಿಪ್ರಶ್ನಾನ್ ಪೃಚ್ಛಸಿ**
**ಬ್ರಹ್ಮಿಷ್ಠೋಽಸೀತಿ ತಸ್ಮಾತ್ ತೇಽಹಂ ಬ್ರವೀಮಿ　　॥ ೨ ॥**

೨. ಅವನಿಗೆ ಆತನು ಹೇಳಿದನೇನೆಂದರೆ: ಅತಿಪ್ರಶ್ನೆಗಳನ್ನು ಕೇಳುತ್ತಿದ್ದೀಯೆ; ಬ್ರಹ್ಮಿಷ್ಠನಾಗಿರುವೆ. ಆದ್ದರಿಂದ ನಿನಗೆ ನಾನು (ಉತ್ತರವನ್ನು ಹೇಳುವೆನು).

(ಭಾಷ್ಯ)

೩೮. ಏವಂ ಪೃಷ್ಟಃ ತಸ್ಮೈ ಸ ಹ ಉವಾಚ ಆಚಾರ್ಯಃ। ಪ್ರಾಣ ಏವ ತಾವತ್ ದುರ್ವಿಜ್ಞೇಯತ್ವಾತ್ ವಿಷಮಪ್ರಶ್ನಾರ್ಹಃ। ತಸ್ಯಾಪಿ ಜನ್ಮಾದಿ ತ್ವಂ ಪೃಚ್ಛಸಿ ಅತಃ ಅತಿಪ್ರಶ್ನಾನ್ ಪೃಚ್ಛಸಿ। ಬ್ರಹ್ಮಿಷ್ಠೋಽಸೀತಿ ಅತಿಶಯೇನ ತ್ವಂ ಬ್ರಹ್ಮವಿತ್। ಅತಃ ತುಷ್ಟೋಽಹಮ್। ತಸ್ಮಾತ್ ತೇ ತುಭ್ಯಮ್ ಅಹಂ[2] ಬ್ರವೀಮಿ ಯತ್ಪೃಷ್ಟಮ್। ಶೃಣು ॥

---

1. ಇಂದ್ರಿಯಕ್ಕೆ ಹೊರಗಿನ ವಿಷಯವು ಅದಿಭೂತ. ಅದನ್ನು ಅರಿಯುವದಕ್ಕೆ ಸಹಾಯವಾಗಿರುವ ಸೂರ್ಯಾದಿಗಳು ಅಧಿದೈವ. ಹೊರಗಿನ ಪ್ರಪಂಚವು ಅಧಿಭೂತ, ಅಧಿದೈವ–ಎಂದು ಎರಡು ವಿಧ.

2. ಈ ಮಾತು ಆ॥ ಪಾಠದಲ್ಲಿಲ್ಲ.

(ಭಾಷ್ಯಾರ್ಥ)

ಹೀಗೆಂದು ಕೇಳಲು, ಅವನಿಗೆ ಆ ಆಚಾರ್ಯನು ಹೇಳಿದನೇನಂದರೆ: ಪ್ರಾಣನನ್ನು ತಿಳಿಯುವದೇ ಮೊದಲು ಕಷ್ಟವಾದ್ದರಿಂದ ಅವನನ್ನು ಕುರಿತು ಕೇಳುವದೇನೂ ಸುಲಭವಲ್ಲ.[1] ಅವನಿಗೂ ಜನ್ಮಾದಿಗಳನ್ನು ನೀನು ಕೇಳುತ್ತಿರುವೆಯಲ್ಲ! ಆದ್ದರಿಂದ ನೀನು (ಎಲ್ಲವನ್ನೂ) ಮೀರಿದ ಪ್ರಶ್ನೆಗಳನ್ನು ಕೇಳಿರುತ್ತೀಯೆ. (ನೀನು) ಬ್ರಹ್ಮಿಷ್ಠನಾಗಿರುವೆ, ನೀನು ಅತಿಶಯವಾಗಿ ಬ್ರಹ್ಮವನ್ನು ಬಲ್ಲವನಾಗಿರುವೆ[2]; ಆದ್ದರಿಂದ ನನಗೆ ಸಂತೋಷವಾಗಿರುತ್ತದೆ.[3] ಆದ್ದರಿಂದ ನಿನಗೆ ನಾನು (ನೀನು) ಕೇಳಿದೆಯಲ್ಲ, ಅದನ್ನು ಹೇಳುವೆನು, ಕೇಳು.

## ಪ್ರಾಣದ ಉತ್ಪತ್ತಿ ; ಅದು ಶರೀರಕ್ಕೆ ಬರುವ ಬಗೆ

**ಆತ್ಮನ ಏಷ ಪ್ರಾಣೋ ಜಾಯತೇ। ಯಥೈಷಾ ಪುರುಷೇ ಛಾಯೈತಸ್ಮಿನ್ನೇತದಾತತಂ ಮನೋಕೃತೇನಾಯಾತ್ಯಸ್ಮಿಞ್ಶರೀರೇ ॥ ೩ ॥**

೩. ಆತ್ಮನಿಂದ ಈ ಪ್ರಾಣನು ಹುಟ್ಟುತ್ತಾನೆ. ಹೇಗೆ ಪುರುಷನಲ್ಲಿ ಈ ನೆರಳು ಉಂಟಾಗುವದೋ ಹಾಗೆ ಈತನಲ್ಲಿ ಇದು ಸೇರಿಕೊಂಡಿರುತ್ತದೆ. ಮನಸ್ಸಿನ ಕಾರ್ಯದಿಂದ ಈ ಶರೀರದೊಳಕ್ಕೆ ಬರುತ್ತದೆ.

(ಭಾಷ್ಯ)

೩೯. ಆತ್ಮನಃ ಪರಸ್ಮಾತ್ ಪುರುಷಾತ್ ಅಕ್ಷರಾತ್ ಸತ್ಯಾತ್ ಏಷಃ ಉಕ್ತಃ ಪ್ರಾಣಃ ಜಾಯತೇ, ಕಥಮಿತಿ? ಅತ್ರ ದೃಷ್ಟಾನ್ತಃ। ಯಥಾ ಲೋಕೇ ಏಷಾ ಪುರುಷೇ ಶಿರಃಪಾಣ್ಯಾದಿಲಕ್ಷಣೇ ನಿಮಿತ್ತೇ ಛಾಯಾ ನೈಮಿತ್ತಿಕೀ ಜಾಯತೇ, ತದ್ವತ್ ಏತಸ್ಮಿನ್ ಬ್ರಹ್ಮಣಿ ಏತತ್ ಪ್ರಾಣಾಖ್ಯಂ ಛಾಯಾಸ್ಥಾನೀಯಮ್ ಅನೃತರೂಪಮ್ ತತ್ತ್ವಂ ಸತ್ಯೇ ಪುರುಷೇ ಆತತಂ ಸಮರ್ಪಿತಮ್ ಇತ್ಯೇತತ್। ಛಾಯೇವ ದೇಹೇ ಮನೋಕೃತೇನ ಮನಃಸಂಕಲ್ಪೇಚ್ಛಾದಿನಿಷ್ಪನ್ನಕರ್ಮನಿಮಿತ್ತೇನ ಇತ್ಯೇತತ್। ವಕ್ಷ್ಯತಿ ಹಿ "ಪುಣ್ಯೇನ ಪುಣ್ಯಮ್" (೩-೭) ಇತ್ಯಾದಿ। "ತದೇವ ಸಕ್ತಃ ಸಹ ಕರ್ಮಣೈತಿ" (ಬೃ. ೪-೪-೬) ಇತಿ ಚ ಶ್ರುತ್ಯನ್ತರಾತ್। ಆಯಾತಿ ಆಗಚ್ಛತಿ ಅಸ್ಮಿನ್ ಶರೀರೇ ॥

---

1. ಕರಣಗಳಿಗೆಲ್ಲ ಆಧಾರನಾಗಿರುವ ಮುಖ್ಯಪ್ರಾಣನ ಇರವನ್ನು ತಿಳಿಯುವದೇ ಕಷ್ಟ ; ಅವನ ಹುಟ್ಟು ಮುಂತಾದದ್ದನ್ನು ಕುರಿತು ವಿಚಾರವು ಇನ್ನೂ ಕಷ್ಟ.

2. ಏಕೆಂದರೆ ಅಪರಬ್ರಹ್ಮಕ್ಕೂ ಕಾರಣವನ್ನು ಕೇಳುತ್ತಿರುವೆ.

3. ಉತ್ತಮವಾದ ಪ್ರಶ್ನೆಗಳನ್ನು ಕೇಳುವ ಶಿಷ್ಯನಿಗೆ ಗುರುಗಳ ಅನುಗ್ರಹವಾಗುತ್ತದೆ. ಗೀ. ೪-೩೪.

(ಭಾಷ್ಯ)

**ಆತ್ಮ**ನಿಂದ ಎಂದರೆ **ಅಕ್ಷ**ರನೂ **ಸತ್ಯ**ಸ್ವರೂಪನೂ[1] ಆದ ಪರಮಪುರುಷನಿಂದ **ಈ** ಹಿಂದೆ ಹೇಳಿದ ಪ್ರಾಣನು ಹುಟ್ಟುತ್ತಾನೆ. ಹೇಗೆ? ಎಂದರೆ ಇದಕ್ಕೆ ದೃಷ್ಟಾಂತ ವನ್ನು (ಹೇಳುತ್ತೇನೆ). ಹೇಗೆ ಲೋಕದಲ್ಲಿ ತಲೆ, ಕೈ-ಮುಂತಾದ ರೂಪದ ಪುರುಷ ನೆಂಬ[2] ನಿಮಿತ್ತದಿಂದ ಈ ನೈಮಿತ್ತಿಕವಾದ ನೆರಳು ಉಂಟಾಗುವದೋ, ಅದರಂತೆ ಈ ಬ್ರಹ್ಮ (ವೆಂಬ ನಿಮಿತ್ತ) ದಿಂದ ಈ ಪ್ರಾಣನೆಂಬ ನೆರಳಿನಂತಿರುವ ಸುಳ್ಳುತೋರಿಕೆ ಯಾದ[3] ತತ್ತ್ವವು ಸತ್ಯನಾದ ಪುರುಷನಲ್ಲಿ ಆತತವಾಗಿರುವದು ಎಂದರೆ ಸೇರಿ ಕೊಂಡಿರುವದು ಎಂದರ್ಥ. ನೆರಳಿನಂತೆ ದೇಹದಲ್ಲಿ 'ಮನೋಕೃತದಿಂದ' ಎಂದರೆ ಮನಸ್ಸಿನ ಸಂಕಲ್ಪ, ಇಚ್ಛೆ-ಮುಂತಾದ ಕರ್ಮದ ನಿಮಿತ್ತದಿಂದ ಎಂದಭಿಪ್ರಾಯ. ಏಕೆಂದರೆ ಮುಂದೆ(೭ನೆಯ ಮಂತ್ರದಲ್ಲಿ) 'ಪುಣ್ಯದಿಂದ ಪುಣ್ಯ (ಲೋಕಕ್ಕೆ ಒಯ್ಯು ತ್ತದೆ)[4]' ಎಂದು ಮುಂತಾಗಿ ಹೇಳಿರುತ್ತದೆ. "ಆಸಕ್ತನಾಗಿ ಕರ್ಮದೊಡನೆ ಅದನ್ನೇ ಹೊಂದುವನು" (ಬೃ. ೪-೪-೬) ಎಂದು ಬೇರೊಂದು ಶ್ರುತಿಯಲ್ಲಿಯೂ ಹೇಳಿರು ತ್ತದೆ. (ಹೀಗೆ ಮನಸ್ಸಿನ ಸಂಕಲ್ಪಾದಿಕರ್ಮದಿಂದ) ಈ ಶರೀರಕ್ಕೆ ಬಂದು ಸೇರು ತ್ತದೆ.[5]

## ಪ್ರಾಣದ ವಿಭಾಗಕ್ರಮ

**ಯಥಾ ಸಮ್ರಾಡೇವಾಧಿಕೃತಾನ್ ವಿನಿಯುಙ್ಕ್ತೇ। ಏತಾನ್ ಗ್ರಾಮಾನೇತಾನ್ ಗ್ರಾಮಾನಧಿತಿಷ್ಠಸ್ವೇತ್ಯೇವ ಮೇವೈಷ ಪ್ರಾಣ ಇತರಾನ್ ಪ್ರಾಣಾನ್ ಪೃಥಕ್ಪೃಥಗೇವ ಸಂನಿಧತ್ತೇ ॥ ೪ ॥**

೪. ಹೇಗೆ ಸಮ್ರಾಜನಾದವನೇ ಅಧಿಕಾರಿಗಳನ್ನು "ಈ ಹಳ್ಳಿ ಗಳನ್ನು ನೋಡಿಕೊಂಡಿರು, ಈ ಹಳ್ಳಿಗಳನ್ನು ನೋಡಿಕೊಂಡಿರು" ಎಂದು ವಿನಿಯೋಗಿಸುತ್ತಾನೋ, ಇವರಂತೆಯೇ ಈ ಪ್ರಾಣನು ಉಳಿದ ಪ್ರಾಣ ಗಳನ್ನು ಬೇರೆಬೇರೆಯಾಗಿ ಇಡುತ್ತಾನೆ.

---

1. ಅಕ್ಷರನೆಂಬ ಪರಮಾರ್ಥಸತ್ಯನಾದ ಪುರುಷನಿಂದ ಅನೃತವಾದ ಪ್ರಾಣಾದಿಗಳು ಹುಟ್ಟುತ್ತವೆ ಎಂದು ಹಿಂದೆ ಹೇಳಿರುವ ಮುಂ. ಭಾ. ೨-೧-೩ (ಭಾ. ಭಾ. ೫೭) ವನ್ನು ಇಲ್ಲಿ ಸೂಚಿಸಿದೆ.

2. ದೇಹಕ್ಕೇ ನೆರಳಿರುತ್ತದೆಯಾದ್ದರಿಂದ ಇಲ್ಲಿ ಪುರುಷನೆಂದರೆ ದೇಹವೇ.

3. ನೆರಳಿನ ದೃಷ್ಟಾಂತದಿಂದ (೧) ಪ್ರಾಣವು ಬರಿಯ ತೋರಿಕೆ, (೨) ತನ್ನ ಆಧಾರ ದಲ್ಲಿ ಕಲ್ಪಿತವಾಗಿದೆ-ಎಂಬ ಎರಡು ಹೋಲಿಕೆಗಳನ್ನೂ ಗ್ರಹಿಸಬೇಕು.

4. ಪೂರ್ವಜನ್ಮದ ಪುಣ್ಯಾಪುಣ್ಯಗಳೇ ಈ ಶರೀರಕ್ಕೆ ಕಾರಣವೆಂದು ಅಭಿಪ್ರಾಯ.

5. ಈ ಶರೀರವನ್ನು ಧರಿಸುವದಕ್ಕೆ ಹಿಂದಿನ ಸಂಕಲ್ಪಾದಿಗಳು ಕಾರಣವೆಂದು ಹೇಳಿ ದಂತೆ ಆಯಿತು.

(ಭಾಷ್ಯ)

೪೦. ಯಥಾ ಯೇನ ಪ್ರಕಾರೇಣ ಲೋಕೇ ರಾಜಾ ಸಮ್ರಾಡೇವ ಗ್ರಾಮಾದಿಷು ಅಧಿಕೃತಾನ್ ವಿನಿಯುಙ್ಕ್ತೇ । ಕಥಂ ? ಏತಾನ್ ಗ್ರಾಮಾನ್ ಏತಾನ್ ಗ್ರಾಮಾನ್ ಅಧಿತಿಷ್ಠಸ್ವ ಇತಿ ಏವಮೇವ ಯಥಾ ಅಯಂ ದೃಷ್ಟಾನ್ತಃ ಏಷಃ ಮುಖ್ಯಃ ಪ್ರಾಣಃ ಇತರಾನ್ ಪ್ರಾಣಾನ್ ಚಕ್ಷುರಾದೀನ್ ಆತ್ಮಭೇದಾಂಶ್ಚ ಪೃಥಕ್ ಪೃಥಗೇವ ಯಥಾಸ್ಥಾನಂ ಸಂನಿಧತ್ತೇ ವಿನಿಯುಙ್ಕ್ತೇ ॥

(ಭಾಷ್ಯಾರ್ಥ)

ಹೇಗೆ ಯಾವ ಪ್ರಕಾರದಿಂದ ಲೋಕದಲ್ಲಿ ಸಮ್ರಾಜನಾಗಿರುವ ಅರಸನೇ ಹಳ್ಳಿಯೇ ಮುಂತಾದವುಗಳಲ್ಲಿ[1] ಅಧಿಕಾರಿಗಳನ್ನು ವಿನಿಯೋಗಿಸುತ್ತಾನೋ, ಹೇಗೆಂದರೆ "ಈ ಹಳ್ಳಿಗಳನ್ನು (ನೀನು ನೋಡಿಕೊಂಡಿರು), ಈ ಹಳ್ಳಿಗಳನ್ನು ನೀನು ನೋಡಿಕೊಂಡಿರು—ಎಂದು (ಹೇಗೆ ವಿಂಗಡಿಸಿ ಕಟ್ಟುಮಾಡಿರುತ್ತಾನೋ) ಹೀಗೆಯೇ, ಈ ದೃಷ್ಟಾಂತದಂತೆಯೇ, ಈ ಮುಖ್ಯಪ್ರಾಣನು ಉಳಿದ ಪ್ರಾಣಗಳನ್ನು ಎಂದರೆ ಚಕ್ಷುರಾದಿಗಳನ್ನು ತನ್ನ ಭೇದಗಳಾದ (ವೃತ್ತಿಗಳನ್ನು)[2] ಬೇರೆಬೇರೆಯಾಗಿಯೇ ಅವರವರ ಸ್ಥಾನಕ್ಕೆ ತಕ್ಕಂತೆ ವಿನಿಯೋಗಿಸಿರುತ್ತಾನೆ.

(ಭಾಷ್ಯ)

೪೧. ತತ್ರ ವಿಭಾಗಃ—

(ಭಾಷ್ಯಾರ್ಥ)

ಇಲ್ಲಿ ವಿಭಾಗಮಾಡಿರುವದು (ಹೇಗೆಂದರೆ):—

**ಪಾಯೂಪಸ್ಥೇಽಪಾನಂ ಚಕ್ಷುಃಶ್ರೋತ್ರೇ ಮುಖನಾಸಿಕಾಭ್ಯಾಂ ಪ್ರಾಣಃ ಸ್ವಯಂ ಪ್ರಾತಿಷ್ಠತೇ ಮಧ್ಯೇ ತು ಸಮಾನಃ । ಏಷ ಹ್ಯೇತದ್ಧುತಮನ್ನಂ ಸಮಂ ನಯತಿ ತಸ್ಮಾದೇತಾಃ ಸಪ್ತಾರ್ಚಿಷೋ ಭವನ್ತಿ ॥ ೫ ॥**

೫. ಪಾಯೂಪಸ್ಥದಲ್ಲಿ ಅಪಾನವು; ಚಕ್ಷುಃಶ್ರೋತ್ರದಲ್ಲಿ(ಯೂ) ಮುಖನಾಸಿಕಗಳಿಂದಲೂ (ಹೊರಕ್ಕೆ ಬರುತ್ತಾ) ಪ್ರಾಣನು ತಾನೇ ಇದ್ದು

1. ಹಳ್ಳಿಗಳು ಸೇರಿ ಆಗಿರುವ ತಾಲ್ಲೂಕು ಮುಂತಾದ ವಿಭಾಗಗಳಿಗೂ ಇದನ್ನು ಅನ್ವಯಿಸಿಕೊಳ್ಳಬೇಕು.

2. ಪ್ರಾಣಾಪಾನಾದಿಗಳನ್ನು ಪಾಯ್ವಾದಿಸ್ಥಾನಗಳಿಗೆ ತಕ್ಕಂತೆ ವಿನಿಯೋಗಿಸುತ್ತಾನೆ ಎಂದರ್ಥ. ಚಕ್ಷುರಾದಿಗಳನ್ನು ಆಯಾ ಸ್ಥಾನಗಳಲ್ಲಿ ವಿನಿಯೋಗಿಸುತ್ತಾನೆ-ಎಂಬುದು ಸ್ಪಷ್ಟವಾಗಿರುವದರಿಂದ ಶ್ರುತಿ ಹೇಳಲಿಲ್ಲ ಎಂದು ಆ॥ ವ್ಯಾಖ್ಯಾನದಲ್ಲಿದೆ. ಆದರೆ ಇದು ಹಿಂದಿನ ಪ್ರಶ್ನೆಯಲ್ಲಿಯೇ ಹೇಳಿದೆಯಾದ್ದರಿಂದ ಇಲ್ಲಿ ಬೇಕಿಲ್ಲವೆಂಬುದು ನ್ಯಾಯ.

ಕೊಂಡಿರುವನು. ಮಧ್ಯದಲ್ಲಿಯಾದರೆ ಸಮಾನನು; ಇವನೇ ಅಲ್ಲವೆ, ಹೋಮಮಾಡಿದ ಈ ಅನ್ನವನ್ನು ಸಮವಾಗಿ ನಯನಮಾಡುವನು? ಇದರಿಂದ ಈ ಏಳು ಉರಿಗಳು ಆಗುತ್ತಿರುವವು.

(ಭಾಷ್ಯ)

ಇತಿ ಪಾಯೂಪಸ್ಥೇ ಪಾಯುಶ್ಚ ಉಪಸ್ಥಶ್ಚ ಪಾಯೂಪಸ್ಥಂ ತಸ್ಮಿನ್। ಅಪಾನಮ್ ಆತ್ಮಭೇದಂ ಮೂತ್ರಪುರೀಷಾದ್ಯಪನಯನಂ ಕುರ್ವನ್ ತಿಷ್ಠತಿ ಸಂನಿಧತ್ತೇ। ತಥಾ ಚಕ್ಷುಃಶ್ರೋತ್ರೇ ಚಕ್ಷುಶ್ಚ ಶ್ರೋತ್ರಂ ಚ ಚಕ್ಷುಃಶ್ರೋತ್ರಂ ತಸ್ಮಿನ್ ಚಕ್ಷುಃಶ್ರೋತ್ರೇ ಮುಖನಾಸಿಕಾಭ್ಯಾಂ ಚ ಮುಖಂ ಚ ನಾಸಿಕಾ ಚ ಮುಖನಾಸಿಕೇ ತಾಭ್ಯಾಂ ಮುಖನಾಸಿಕಾಭ್ಯಾಂ[1] ಚ ನಿರ್ಗಚ್ಛನ್ ಪ್ರಾಣಃ ಸ್ವಯಂ ಸಮ್ರಾಟ್‌ಸ್ಥಾನೀಯಃ ಪ್ರಾತಿಷ್ಠತೇ ಪ್ರತಿತಿಷ್ಠತಿ। ಮಧ್ಯೇ ತು ಪ್ರಾಣಾಪಾನಯೋಃ ಸ್ಥಾನಯೋಃ ನಾಭ್ಯಾಂ ಸಮಾನಃ। ಅಶಿತಂ ಪೀತಂ ಚ ಸಮಂ ನಯತಿ ಇತಿ ಸಮಾನಃ। ಏಷ ಹಿ ಯಸ್ಮಾತ್ ಯದೇತತ್ ಹುತಂ ಭುಕ್ತಂ ಪೀತಂ ಚ ಆತ್ಮಾಗ್ನೌ ಪ್ರಕ್ಷಿಪ್ತಮ್ ಅನ್ನಂ ಸಮಂ ನಯತಿ। ತಸ್ಮಾತ ಅಶಿತಪೀತೇಂಧನಾತ ಅಗ್ನೇಃ ಔದರ್ಯಾತ್ ಹೃದಯದೇಶಂ ಪ್ರಾಪ್ತಾತ್ ಏತಾಃ ಸಪ್ತಸಂಖ್ಯಾಕಾಃ ಅರ್ಚಿಷಃ ದೀಪ್ತಯಃ ನಿರ್ಗಚ್ಛನ್ತ್ಯಃ ಭವನ್ತಿ ಶೀರ್ಷಣ್ಯಪ್ರಾಣದ್ವಾರಾ[2] ದರ್ಶನಶ್ರವಣಾದಿಲಕ್ಷಣರೂಪಾದಿವಿಷಯಪ್ರಕಾಶಾ[3] ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಪಾಯೂಪಸ್ಥದಲ್ಲಿ; ಪಾಯು, ಉಪಸ್ಥ-ಇವುಗಳು ಸೇರಿದ್ದು ಪಾಯೂಪಸ್ಥವು; ಅದರಲ್ಲಿ ತನ್ನ (ಒಂದು) ಭೇದವಾದ ಅಪಾನವನ್ನು ಮೂತ್ರ ಮಲ-ಮುಂತಾದವು ಹೊರಕ್ಕೆಹಾಕುತ್ತಾ ಇರುವದಲ್ಲ, (ಅದನ್ನು) ಇಟ್ಟಿರುತ್ತಾನೆ[4]. ಇದರಂತೆ ಚಕ್ಷುಃಶ್ರೋತ್ರದಲ್ಲಿ ಚಕ್ಷುಸ್ಸು, ಶ್ರೋತ್ರ-ಇವುಗಳು ಸೇರಿದ್ದು ಚಕ್ಷುಃಶ್ರೋತ್ರವು; ಅದರಲ್ಲಿಯೂ, ಮುಖನಾಸಿಕಗಳಿಂದ-ಮುಖವೂ ನಾಸಿಕೆಯೂ ಮುಖನಾಸಿಕೆಗಳು; ಅವುಗಳಿಂದ-(ಆ) ಬಾಯಿಮೂಗುಗಳಿಂದಲೂ, ಹೊರಕ್ಕೆ ಬರುತ್ತಿರುವ ಸಮ್ರಾಜನಂತಿರುವ

---

1. ಈ ಮಾತು ವಾ॥ ಪಾಠದಲ್ಲಿದೆ. ಇದಿಲ್ಲದಿದ್ದರೂ ಸಾಗುತ್ತದೆ.

2. "ಶೀರ್ಷಣ್ಯಾಃ" ಎಂಬ ಆ॥ ಪಾಠಕ್ಕಿಂತ ಈ ವಾ॥ ಪಾಠವೇ ಮೇಲು.

3. "ಪ್ರಕಾಶಃ" ಎಂದು ವಾ॥ ಪಾಠ.

4. "ಯಃ ತಿಷ್ಠತಿ ತಂ ಸನ್ನಿಧತ್ತೇ" ಎಂದು ಅಧ್ಯಾಹಾರಮಾಡಿಕೊಂಡು ಅನ್ವಯ ಮಾಡಿದೆ. (ಆ॥ ವ್ಯಾಖ್ಯಾನ). "ಸನ್ನಿಧತ್ತೇ ತಿಷ್ಠತಿ" ಎಂಬ ವಾ॥ ಪಾಠಕ್ಕಿಂತ ಈ ಆ॥ ಪಾಠವೇ ಮೇಲು.

ಪ್ರಾಣನು ತಾನೇ ಇದ್ದುಕೊಂಡಿರುವನು (ಪ್ರಾತಿಷ್ಠತೇ=ಪ್ರತಿತಿಷ್ಠತಿ)[1]. ಆದರೆ **ಪ್ರಾಣಾಪಾನಗಳ** ಮಧ್ಯದಲ್ಲಿ, ಅಂದರೆ ಹೊಕ್ಕುಳಲ್ಲಿ **ಸಮಾನ** (ವಿರುತ್ತದೆ). ತಿಂದದ್ದನ್ನೂ ಕುಡಿದದ್ದನ್ನೂ ಸಮವಾಗಿ ತೆಗೆದುಕೊಂಡೊಯ್ಯುವದರಿಂದ (ಇದಕ್ಕೆ) ಸಮಾನ (ವೆಂದು ಹೆಸರು); (ಹಿ) ಏಕೆಂದರೆ ಈ ಹೋಮಮಾಡಿದ್ದುಂಟಲ್ಲ, ಎಂದರೆ ತಿಂದದ್ದು, ಕುಡಿದದ್ದು-ಎಂಬ ಆತ್ಮಾಗ್ನಿಯಲ್ಲಿ[2] ಹಾಕಿದ್ದಿದೆಯಲ್ಲ, ಆ ಅನ್ನವನ್ನೂ ಈ (ಸಮಾನವೇ) ಸಮವಾಗಿ ಕೊಂಡೊಯ್ದು (ಕೊಡುತ್ತಿರುವದು), ಆ ತಿಂದದ್ದು, ಕುಡಿದದ್ದು-ಎಂಬ ಕಟ್ಟಿಗೆಯುಳ್ಳ, ಹೊಟ್ಟೆಯೊಳಗಿನ ಅಗ್ನಿಯು ಹೃದಯಸ್ಥಳವನ್ನು ಸೇರಲು ಅದರಿಂದ ಈ ಏಳು ಸಂಖ್ಯೆಯ ಅರ್ಚಿಗಳು[3] ಬೆಳಕುಗಳು, ತಲೆಯಲ್ಲಿರುವ ಪ್ರಾಣಗಳ ಮೂಲಕವಾಗಿ ನೋಡುವದು, ಕೇಳುವದು-ಮುಂತಾದ ರೂಪಾದಿವಿಷಯ ಗಳ ಅರಿವುಗಳು ಹೊರಹೊರಡುತ್ತಿರುವವು,[4] ಎಂದು ಅಭಿಪ್ರಾಯ.

**ಹೃದಿ ಹ್ಯೇಷ ಆತ್ಮಾ । ಅತ್ರೈತದೇಕಶತಂ ನಾಡೀನಾಂ ತಾಸಾಂ ಶತಂ ಶತಮೇಕೈಕಸ್ಯಾಂ ದ್ವಾಸಪ್ತತಿರ್ದ್ವಾಸಪ್ತತಿಃ ಪ್ರತಿ ಶಾಖಾನಾಡೀಸಹಸ್ರಾಣಿ ಭವನ್ತ್ಯಾಸು ವ್ಯಾನಶ್ಚರತಿ ॥ ೬ ॥**

೬. ಆ ಆತ್ಮವು ಹೃದಯದಲ್ಲಿಯೇ ಇರುತ್ತದೆ. ಇಲ್ಲಿ ನೂರೊಂದು ನಾಡಿಗಳು. (ಇವುಗಳಲ್ಲಿ) ಒಂದೊಂದಕ್ಕೆ ನೂರುನೂರು, ಒಂದೊಂದು ಶಾಖೆಗೆ ಎಪ್ಪತ್ತೆರಡು ಎಪ್ಪತ್ತೆರಡು ಸಾವಿರ ಪ್ರತಿಶಾಖಾನಾಡಿಗಳು ಇರುವವು. ಇವುಗಳಲ್ಲಿ ವ್ಯಾನವು ಸಂಚರಿಸುತ್ತಿರುವದು.

**(ಭಾಷ್ಯ)**

೪೩. ಹೃದಿ ಹಿ ಏಷಃ ಪುಣ್ಡರೀಕಾಕಾರಮಾಂಸಪಿಂಡಪರಿಚ್ಛಿನ್ನೇ ಹೃದಯಾಕಾಶೇ ಏಷಃ ಆತ್ಮಾ ಆತ್ಮಸಂಯುಕ್ತೋ ಲಿಙ್ಗಾತ್ಮಾ[5] । ಅತ್ರ ಅಸ್ಮಿನ್ ಹೃದಯೇ ಏತತ್

---

1. ಇಂದ್ರಿಯಗಳಲ್ಲಿ ಸಾಮಾನ್ಯವೃತ್ತಿರೂಪದಿಂದ ಪ್ರಾಣವಿದೆ; ಎಂಬರ್ಥವನ್ನು ಮಾಡಬೇಕೆಂದು ತೋರುತ್ತದೆ.

2. ಶರೀರದಲ್ಲಿರುವ ಜಾಠರಾಗ್ನಿಯಲ್ಲಿ ತಿಂದದ್ದೂ ಕುಡಿದದ್ದೂ ಹೋಮವಾಗುವವು ಎಂದು ಭಾವಿಸುವದೂ ಒಂದು ಅಗ್ನಿಹೋತ್ರಕ್ಕೆ ಸಮಾನವು. ಮುಂ. ೨-೧-೮ ನೋಡಿ. ಇದು ಪ್ರಾಸಂಗಿಕವಾದ ಉಪದೇಶ.

3. ಮುಂ. ೨-೧-೮ ನೋಡಿ. ವ್ಯಾನದ ಕಾರ್ಯದ ಫಲವಾಗಿ ಈ ಇಂದ್ರಿಯಗಳ ಅರಿವುಗಳು ಹೊರಹೊಮ್ಮುತ್ತಿರುವವು ಎಂದಭಿಪ್ರಾಯ.

4. "ಪ್ರಕಾಶಃ" ಎಂಬ ವಾ॥ ಪಾಠದಲ್ಲಿ "ಪ್ರಕಾಶಗಳು ಹೊರಹೊರಡುತ್ತಿರುವವು; ತಲೆಯಲ್ಲಿರುವ.............ಅರಿವು (ಉಂಟಾಗುವದು) ಎಂದು ಅಭಿಪ್ರಾಯ" ಎಂದು ಕನ್ನಡಿಸಬೇಕು.

5. ಇದಾದ ಬಳಿಕ "ಜೀವಾತ್ಮಾ ಇತ್ಯರ್ಥಃ" ಎಂದು ವಾ॥ ಪಾಠ.

ಏಕಶತಮ್ ಏಕೋತ್ತರಶತಂ ಸಂಖ್ಯಯಾ ಪ್ರಧಾನನಾಡೀನಾಂ ಭವತಿ । ತಾಸಾಂ ಶತಂ ಶತಮ್ ಏಕೈಕಸ್ಯಾಃ ಪ್ರಧಾನನಾಡ್ಯಾ ಭೇದಾಃ । ಪುನರಪಿ ದ್ವಾಸಪ್ತತಿರ್ದ್ವಾಸಪ್ತತಿಃ ದ್ವೇ ದ್ವೇ ಸಹಸ್ರೇ ಅಧಿಕೇ ಸಪ್ತತಿಶ್ಚ ಸಹಸ್ರಾಣಿ ಸಹಸ್ರಾಣಾಂ ದ್ವಾಸಪ್ತತಿಃ ಪ್ರತಿಶಾಖಾನಾಡೀಸಹಸ್ರಾಣಿ ಪ್ರತಿಪ್ರತಿನಾಡೀಶತಂ ಸಂಖ್ಯಯಾ ಪ್ರಧಾನನಾಡೀನಾಂ ಸಹಸ್ರಾಣಿ ಭವನ್ತಿ । ಆಸು ನಾಡೀಷು ವ್ಯಾನೋ ವಾಯುಶ್ಚರತಿ । ವ್ಯಾನಃ ವ್ಯಾಪನಾತ್ । ಆದಿತ್ಯಾದಿವ ರಶ್ಮಯೋ ಹೃದಯಾತ್ ಸರ್ವತೋಗಾಮಿನೀಭಿಃ ನಾಡೀಭಿಃ ಸರ್ವದೇಹಂ ಸಂವ್ಯಾಪ್ಯ ವ್ಯಾನೋ ವರ್ತತೇ । ಸನ್ಧಿಸ್ಕನ್ಧಮರ್ಮದೇಶೇಷು ವಿಶೇಷೇಣ ಪ್ರಾಣಾಪಾನವೃತ್ತ್ಯೋಶ್ಚ ಮಧ್ಯೇ ಉದ್ಭೂತವೃತ್ತಿರ್ವೀರ್ಯವತ್-ಕರ್ಮಕರ್ತಾ ಭವತಿ ॥

(ಭಾಷ್ಯಾರ್ಥ)

ಹೃದಯದಲ್ಲಿಯೇ ಕಮಲದ ಆಕಾರದ ಮಾಂಸದ ಮುದ್ದೆಯ ಅಳತೆಗೆ ಸಿಕ್ಕಿರುವ ಹೃದಯಾಕಾಶದಲ್ಲಿಯೇ **ಈ ಆತ್ಮವು** ಎಂದರೆ ಆತ್ಮನೊಡನೆ ಸೇರಿಕೊಂಡಿರುವ **ಲಿಂಗಾತ್ಮವು**[1](ಇರುವದು). ಇಲ್ಲಿ ಎಂದರೆ ಈ ಹೃದಯದಲ್ಲಿ ಈ ನೂರೊಂದು ನೂರರ ಮೇಲೊಂದು ಸಂಖ್ಯೆಯ ಮುಖ್ಯನಾಡಿಗಳು ಇರುವವು. ಅವುಗಳಲ್ಲಿ ಒಂದೊಂದು ಮುಖ್ಯನಾಡಿಗೂ ನೂರು ನೂರು ಭೇದಗಳಿರುವವು; ಮತ್ತು (ಒಂದೊಂದಕ್ಕೆ) ಎಪ್ಪತ್ತೆರಡು ಎಪ್ಪತ್ತೆರಡು (ಸಾವಿರ), ಎರಡೆರಡುಸಾವಿರ ಹೆಚ್ಚಾಗಿ ಎಪ್ಪತ್ತುಸಾವಿರ-ಹೀಗೆ ಎಪ್ಪತ್ತೆರಡುಸಾವಿರ ಪ್ರತಿ ಶಾಖಾನಾಡೀಸಹಸ್ರಗಳು ಎಂದರೆ ಮುಖ್ಯನಾಡಿಗಳಿಗಿರುವ ಒಂದೊಂದು ನೂರು ಭೇದಗಳಲ್ಲಿ (ಪ್ರತಿಯೊಂದಕ್ಕೂ ಎಪ್ಪತ್ತೆರಡು) ಸಾವಿರ[2] ಪ್ರತಿ ಶಾಖಾನಾಡಿಗಳು ಇರುವವು. ಈ ನಾಡಿಗಳಲ್ಲಿ **ವ್ಯಾನವೆಂಬ ವಾಯು** ಸಂಚರಿಸುತ್ತಿರುವದು. ವ್ಯಾಪಿಸಿಕೊಂಡಿರುವದರಿಂದ ಇದಕ್ಕೆ ವ್ಯಾನವೆಂದು ಹೆಸರು. ಸೂರ್ಯನಿಂದ ಹೊರಡುವ ರಶ್ಮಿಗಳಂತೆ ಹೃದಯದಿಂದ ಎಲ್ಲಾ ಕಡೆಗೂ ಹೋಗಿರುವ ನಾಡಿಗಳಿಂದ ದೇಹವೆಲ್ಲವನ್ನೂ ಚೆನ್ನಾಗಿ ವ್ಯಾಪಿಸಿಕೊಂಡು ವ್ಯಾನವು (ಕೆಲಸ) ಮಾಡುತ್ತಿರುತ್ತದೆ. (ಅದರಲ್ಲಿಯೂ) ಸಂದುಗಳು, ಹೆಗಲುಗಳು, ಮರ್ಮಸ್ಥಳಗಳು-

---

1. ಲಿಂಗಶರೀರವು ಆತ್ಮನಿಗೆ ಉಪಾಧಿಯಾಗಿರುವದರಿಂದ ಇದನ್ನು ಆತ್ಮನೆಂದು ಕರೆದಿದೆ. ಹೃದಯವು ಮನಸ್ಸಿಗೆ ಸ್ಥಾನವೆಂದು ಅಭಿಪ್ರಾಯವನ್ನನುಸರಿಸಿ ಹೇಳಿದ್ದಿದು.

2. ಈ ಲೆಕ್ಕದಂತೆ ೧೦೧ ಪ್ರಧಾನ ನಾಡಿಗಳು; ೧೦೧X೧೦೦ = ೧೦೧೦೦ ಶಾಖಾನಾಡಿಗಳು ಮತ್ತು ೧೦೧೦೦X೭೨೦೦೦ = ೭೨ ಕೋಟಿ ೭೨ ಲಕ್ಷ ಪ್ರತಿ ಶಾಖಾನಾಡಿಗಳು. ಹೀಗೆ ಒಟ್ಟು ೭೨ ಕೋಟಿ ೭೨ ಲಕ್ಷದಮೇಲೆ ೧೦ ಸಾವಿರದ ೨೦೧ ನಾಡಿಗಳಾಗುವುವು. ಆದರೆ ಅನೇಕ ಮುಖ್ಯನಾಡಿಗಳು, ಸುಷುಮ್ನೆ ಎಂಬ ಮತ್ತೊಂದು ಮುಖ್ಯನಾಡಿ ಇದೆ; ಶಾಖೋಪಶಾಖೆಗಳಾಗಿರುವ ನಾಡಿಗಳಲ್ಲಿ ವ್ಯಾನವು ಕೆಲಸಮಾಡುತ್ತಿರುತ್ತದೆ-ಎಂಬುದಿಷ್ಟರಲ್ಲಿಯೇ ವಾಕ್ಯಕ್ಕೆ ತಾತ್ಪರ್ಯವನ್ನು ಕಲ್ಪಿಸಬೇಕು.

ಇವುಗಳಲ್ಲಿ ವಿಶೇಷವಾಗಿ[1] ಪ್ರಾಣಾಪಾನವೃತ್ತಿಗಳ ನಡುವೆ[2] ಹೊರತೋರುವ ವೃತ್ತಿಯುಳ್ಳದ್ದಾಗಿ ವೀರ್ಯವಂತವಾದ ಕೆಲಸಗಳನ್ನೂ[3] ಮಾಡುತ್ತಾ ಇರುತ್ತದೆ.

**ಅಥೈಕಯೋರ್ಧ್ವ ಉದಾನಃ ಪುಣ್ಯೇನ ಪುಣ್ಯಂ ಲೋಕಂ ನಯತಿ ಪಾಪೇನ ಪಾಪಮುಭಾಭ್ಯಾಮೇವ ಮನುಷ್ಯ ಲೋಕಮ್ ‖ ೭ ‖**

೭. ಇನ್ನು ಒಂದು (ನಾಡಿಯಿಂದ) ಮೇಲಕ್ಕೆ ಉದಾನವು ಪುಣ್ಯದಿಂದ ಪುಣ್ಯಲೋಕಕ್ಕೂ ಪಾಪದಿಂದ ಪಾಪಲೋಕಕ್ಕೂ ಎರಡೂ ಸೇರಿಪ್ಪರಿಂದ ಮನುಷ್ಯಲೋಕಕ್ಕೂ ಒಯ್ಯುತ್ತಿರುವದು.

(ಭಾಷ್ಯ)

೪೪. ಅಥ ಯಾ ತು ತತ್ರ ಏಕಶತಾನಾಂ ನಾಡೀನಾಂ ಮಧ್ಯೇ ಊರ್ಧ್ವಗಾ ಸುಷುಮ್ನಾಖ್ಯಾ ನಾಡೀ ತಯಾ ಏಕಯಾ ಊರ್ಧ್ವಃ ಸನ್ ಉದಾನೋ ವಾಯುಃ ಆಪಾದತಲಮಸ್ತಕವೃತ್ತಿಃ ಸಂಚರನ್ ಪುಣ್ಯೇನ ಕರ್ಮಣಾ ಶಾಸ್ತ್ರವಿಹಿತೇನ ಪುಣ್ಯಂ ಲೋಕಂ ದೇವಾದಿಸ್ಥಾನಲಕ್ಷಣಂ ನಯತಿ ಪ್ರಾಪಯತಿ । ಪಾಪೇನ ತದ್ವಿಪರೀತೇನ ಪಾಪಂ ನರಕಂ ತಿರ್ಯಗ್ಯೋನ್ಯಾದಿಲಕ್ಷಣಮ್, ಉಭಾಭ್ಯಾಂ ಸಮಪ್ರಧಾನಾಭ್ಯಾಂ ಪುಣ್ಯಪಾಪಾಭ್ಯಾಮೇವ ಮನುಷ್ಯಲೋಕಂ 'ನಯತಿ' ಇತ್ಯನುವರ್ತತೇ ‖

(ಭಾಷ್ಯಾರ್ಥ)

ಇನ್ನು ಈ ನೂರೊಂದು ನಾಡಿಗಳೊಳಗೆ ಮೇಲಕ್ಕೆ ಹೋಗಿರುವ **ಸುಷುಮ್ನೆ** ಯೆಂಬ ಹೆಸರಿನ ನಾಡಿ (ಯೊಂದಿದೆ) ಯಷ್ಟೆ, ಆ ಒಂದರಿಂದ ಅಂಗಾಲಿನಿಂದ ನೆತ್ತಿಯ ವರೆಗೂ ವೃತ್ತಿಯುಳ್ಳದ್ದಾಗಿ ಸಂಚರಿಸುವ **ಉದಾನ** ವಾಯುವು ಮೇಲಕ್ಕೆ ಹೊರಟು[4] ಪುಣ್ಯಕರ್ಮದಿಂದ ಎಂದರೆ ಶಾಸ್ತ್ರವಿಹಿತವಾದ ಕರ್ಮದಿಂದ ಪುಣ್ಯಲೋಕಕ್ಕೆ ಎಂದರೆ ದೇವತೆಗಳ ಸ್ಥಾನವೇ ಮುಂತಾದ ರೂಪದ (ಲೋಕಕ್ಕೆ) ಒಯ್ಯುವದು, ಕರೆದು ಕೊಂಡು ಹೋಗುವದು. ಪಾಪದಿಂದ ಎಂದರೆ ಅದಕ್ಕೆ ವಿರುದ್ಧವಾಗಿರುವ[5] ಕರ್ಮ

---

1. ಮಿಕ್ಕ ಕಡೆಗಳಲ್ಲಿ ಸಾಮಾನ್ಯವಾಗಿ ಕೆಲಸಮಾಡುತ್ತದೆ.

2. ಪ್ರಾಣಾಪಾನಗಳು ಕೆಲಸಮಾಡದೆ ಇರುವಾಗ.

3. ಛಾ. ಭಾ. ೧-೩-೩ ; ೧-೩-೫ ನೋಡಿರಿ.

4. ಸುಷುಮ್ನೆಯಿಂದ ಮೇಲಕ್ಕೆ ಹೊರಟು ಆಯಾ ಲೋಕಕ್ಕೊಯ್ಯುವದು ಎಂದರ್ಥವಲ್ಲ. ಸುಷುಮ್ನೆಯಿಂದ ಬ್ರಹ್ಮಲೋಕಕ್ಕೆ ಮಾತ್ರ ಉದಾನವು ಒಯ್ಯುತ್ತದೆ. ಉತ್ಕ್ರಾಂತಿಯಾಗುವದು ಉದಾನದಿಂದ ಎಂಬುದು ಪ್ರಕೃತ.

5. ಮಾಡಬಾರದೆಂದು ಶಾಸ್ತ್ರದಲ್ಲಿ ಹೇಳಿರುವ.

ದಿಂದ ಪಾಪಲೋಕಕ್ಕೆ ಎಂದರೆ ಕೀಳುಪ್ರಾಣಿಗಳ ಜನ್ಮವೇ ಮುಂತಾದ ನರಕಕ್ಕೆ[1] (ಒಯ್ಯುವದು). ಎರಡರಿಂದಲೂ ಎಂದರೆ ಸಮಪ್ರಧಾನವಾಗಿರುವ[2] ಪುಣ್ಯಪಾಪಗಳಿಂದಲೇ ಮನುಷ್ಯಲೋಕಕ್ಕೆ "ಒಯ್ಯುವದು "-ಎಂಬ (ಮಾತು) ಇಲ್ಲಿಗೂ ಸೇರಿಬಂದಿರುತ್ತದೆ.

## ಪ್ರಾಣವು ಅಧ್ಯಾತ್ಮಾಧಿಭೂತಗಳನ್ನು ಧರಿಸಿರುವ ಬಗೆ

**ಆದಿತ್ಯೋ ಹ ವೈ ಬಾಹ್ಯಃ ಪ್ರಾಣ ಉದಯತ್ಯೇಷ ಹ್ಯೇನಂ ಚಾಕ್ಷುಷಂ ಪ್ರಾಣಮನುಗೃಹ್ಣಾನಃ । ಪೃಥಿವ್ಯಾಂ ಯಾ ದೇವತಾ ಸೈಷಾ ಪುರುಷಸ್ಯಾಪಾನಮವಷ್ಟಭ್ಯಾನ್ತರಾ ಯದಾಕಾಶಃ ಸ ಸಮಾನೋ ವಾಯುರ್ವ್ಯಾನಃ ॥ ೮ ॥**

೮. ಆದಿತ್ಯನೇ ಹೊರಗಿನ ಪ್ರಾಣವು. ಇವನೇ ಅಲ್ಲವೆ, ಈ ಚಾಕ್ಷುಷಪ್ರಾಣನಿಗೆ ಅನುಗ್ರಹವನ್ನು ಮಾಡುತ್ತಾ ಉದಯಿಸುವನು? ಪೃಥಿವಿಯಲ್ಲಿರುವ ದೇವತೆಯುಂಟಷ್ಟೆ, ಆ ಇದು ಪುರುಷನ ಅಪಾನವನ್ನು ಆಶ್ರಯಿಸಿ (ಕೆಲಸಮಾಡುತ್ತಿರುತ್ತದೆ). ನಡುವೆ ಇರುವ ಆಕಾಶವಿದೆಯಷ್ಟೆ, (ಅದು) ಸಮಾನವು. ವಾಯುವೇ ವ್ಯಾನವು.

(ಭಾಷ್ಯ)

೪೫. ಆದಿತ್ಯೋ ಹ ವೈ ಪ್ರಸಿದ್ಧೋ ಹಿ ಅಧಿದೈವತಂ ಬಾಹ್ಯಃ ಪ್ರಾಣಃ । ಸ ಏಷ ಉದಯತಿ ಉದ್ಗಚ್ಛತಿ । ಏಷ ಹಿ ಏನಮ್ ಆಧ್ಯಾತ್ಮಿಕಂ ಚಕ್ಷುಷಿ ಭವಂ ಚಾಕ್ಷುಷಂ ಪ್ರಾಣಂ ಪ್ರಕಾಶೇನ ಅನುಗೃಹ್ಣಾನಃ ರೂಪೋಪಲಬ್ಧೌ ಚಕ್ಷುಷ ಆಲೋಕಂ ಕುರ್ವನ್ ಇತ್ಯರ್ಥಃ । ತಥಾ ಪೃಥಿವ್ಯಾಮ್ ಅಭಿಮಾನಿನೀ ಯಾ ದೇವತಾ ಪ್ರಸಿದ್ಧಾ ಸೈಷಾ ಪುರುಷಸ್ಯ ಅಪಾನಮ್ ಅಪಾನವೃತ್ತಿಮ್ ಅವಷ್ಟಭ್ಯ ಆಕೃಷ್ಯ ವಶೀಕೃತ್ಯ ಅಧ ಏವಾಪಕರ್ಷಣೇನ ಅನುಗ್ರಹಂ ಕುರ್ವತೀ ವರ್ತತೇ ಇತ್ಯರ್ಥಃ । ಅನ್ಯಥಾ ಹಿ ಶರೀರಂ ಗುರುತ್ವಾತ್ ಪತೇತ್ । ಸಾವಕಾಶೇ ವಾ ಉದ್ಗಚ್ಛೇತ್ । ಯದೇತತ್ ಅನ್ತರಾ ಮಧ್ಯೇ ದ್ಯಾವಾಪೃಥಿವ್ಯೋಃ ಯ ಆಕಾಶಃ ತತ್ಸ್ಥೋ ವಾಯುಃ ಆಕಾಶ

1. ತಿರ್ಯಕ್ ಪ್ರಾಣಿಗಳ ಜನ್ಮ, ಸ್ಥಾವರಪ್ರಾಣಿಗಳ ಜನ್ಮ-ಇವುಗಳಲ್ಲಿ ದುಃಖವು ಹೆಚ್ಚಾಗಿರುವದರಿಂದ ಅವೂ ನರಕವೇ ಎಂದು ಭಾವ.

2. ಪುಣ್ಯವು ಹೆಚ್ಚಾದಾಗ ದೇವಾದಿಸ್ಥಾನವೂ, ಪಾಪವು ಹೆಚ್ಚಾದಾಗ ತಿರ್ಯಕ್ಪ್ರಾಣಿಗಳೇ ಮುಂತಾದವುಗಳ ಲೋಕವೂ ಇವೆರಡೂ ಸಮಾನವಾದಾಗ ಮನುಷ್ಯಲೋಕವೂ ಬರುವದು. ಸಮವಾದಾಗಲೂ ಪುಣ್ಯಪಾಪಗಳ ಫಲದ ಪ್ರಾಧಾನ್ಯದಂತೆ ಆಯಾ ಜನ್ಮವು ಬರುತ್ತದೆ-ಎಂದು ಊಹಿಸಬೇಕು.

ಉಚ್ಯತೇ । ಮಞ್ಚಸ್ಥವತ್ । ಸ ಸಮಾನಃ । ಸ ಸಮಾನಮನುಗೃಹ್ಣಾನೋ ವರ್ತತೇ ಇತ್ಯರ್ಥಃ । ಸಮಾನಸ್ಯ ಅನ್ತರಾಕಾಶಸ್ಥತ್ವಸಾಮಾನ್ಯಾತ್ । ಸಾಮಾನ್ಯೇನ ಚ ಯೋ ಬಾಹ್ಯೋ ವಾಯುಃ ಸಃ ವ್ಯಾಪ್ತಿಸಾಮಾನ್ಯಾತ್ ವ್ಯಾನಃ । ವ್ಯಾನಮ್ ಅನು ಗೃಹ್ಣಾನೋ ವರ್ತತೇ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಆದಿತ್ಯನೇ ಪ್ರಸಿದ್ಧನಾದ ಅಧಿದೈವತನಾದ ಹೊರಗಿನ[1] ಪ್ರಾಣನಷ್ಟೆ, ಆ ಈತನು ಉದಯಿಸುವನು, ಮೇಲಕ್ಕೆ ಬರುವನು. ಇವನೇ ಅಲ್ಲವೆ, ಈ ಆಧ್ಯಾತ್ಮಿಕವಾದ ಚಕ್ಷುಸ್ಸಿನಲ್ಲಿರುವದರಿಂದ ಚಾಕ್ಷುಷನಾಗಿರುವ **ಪ್ರಾಣವನ್ನು** ಬೆಳಕಿನಿಂದ ಅನುಗ್ರಹಿಸುತ್ತಾ, ಎಂದರೆ ರೂಪವನ್ನು ಅರಿಯುವದಕ್ಕೆ ಕಣ್ಣಿಗೆ ಬೆಳಕನ್ನುಂಟುಮಾಡುವವನಾಗಿ (ಉದಯಿಸುವನು) ಎಂದರ್ಥ. ಇದರಿಂದ ಪೃಥಿವಿಯಲ್ಲಿ ಅಭಿಮಾನಿಯಾಗಿರುವ ದೇವತೆಯುಂಟಷ್ಟೆ, ಪ್ರಸಿದ್ಧವಾದ ಆ ಈ ದೇವತೆಯು[2] ಪುರುಷನ **ಅಪಾನವನ್ನು** ಎಂದರೆ ಅಪಾನವೃತ್ತಿಯನ್ನು ಆಶ್ರಯಿಸಿ (ಅದನ್ನು) ಎಳೆದು ವಶಗೊಳಿಸಿಕೊಂಡು ಕೆಳಕ್ಕೇ ಜಗ್ಗುತ್ತಾ ಅನುಗ್ರಹವನ್ನು ಮಾಡುತ್ತಾ ಇರುತ್ತದೆ ಎಂದರ್ಥ. ಏಕೆಂದರೆ ಹಾಗಿಲ್ಲದಿದ್ದರೆ ಶರೀರವು ಭಾರವಾಗಿರುವದರಿಂದ ಬೀಳಬೇಕಾಗುತ್ತಿತ್ತು. ಅಥವಾ ಅವಕಾಶವಿರುವಲ್ಲಿ ಮೇಲಕ್ಕೇರಬೇಕಾಗುತ್ತಿತ್ತು[3]. (ಇನ್ನು) ದ್ಯುಲೋಕ, ಪೃಥಿವಿ-ಇವೆರಡರ ನಡುವೆ ಇರುವ ಆಕಾಶವಿದೆಯಲ್ಲ, ಅದರಲ್ಲಿರುವ ವಾಯುವನ್ನೇ (ಇಲ್ಲಿ) **ಆಕಾಶ**ವೆಂದಿದೆ. ಮಂಚಿಕೆಯಲ್ಲಿ(ರುವವರನ್ನು ಮಂಚಿಕೆಯೆಂದು ಕರೆಯು)ವಂತೆಯೇ[4] ಇದು. ಈ ಆಕಾಶವೇ **ಸಮಾನವು**; ಸಮಾನ(ವೃತ್ತಿ)ಯನ್ನು ಅನುಗ್ರಹಿಸುತ್ತಾ ಇರುತ್ತದೆ ಎಂದರ್ಥ; ಏಕೆಂದರೆ ಸಮಾನವು (ನಡುವೆ ಇರುವದರಿಂದ) ನಡುವಿನ

---

1. ಹೊರಗೆ ಅಧಿದೈವತರೂಪದಿಂದ ಸೂರ್ಯಾದಿಗಳಾಗಿರುವ ಪ್ರಾಣನೇ ಒಳಗೆ ಚಕ್ಷುರಾದಿವ್ಯಾಪಾರಗಳನ್ನು ಮಾಡಿಸುತ್ತಿರುವನು ಎಂದರ್ಥ. ಭಾಷ್ಯದಲ್ಲಿ "ಸ ಏಷಃ" ಎಂಬ ಮಾತುಗಳನ್ನು ಉದಯತಿ ಎಂಬಲ್ಲಿ ಅನ್ವಯಕ್ಕಾಗಿ ಇಟ್ಟುಕೊಂಡಿದೆ.

2. ಪೃಥಿವೀದೇವತೆಯು. ತೈ. ಭಾ. ೨-೨ (ಭಾ. ಭಾ. ೧೨೪) ನೋಡಿ. ಇದು ಅಗ್ನಿದೇವತೆಯೆಂದು ಬೃ. ೩-೯-೧೦ ರ ಆಧಾರದಿಂದ ಆ॥ ವ್ಯಾಖ್ಯಾನಕಾರರು ಬರೆದಿದ್ದಾರೆ; ಆದರೆ ಇದಕ್ಕೆ ಭಾಷ್ಯಾಧಾರವಿಲ್ಲ. ಬೃ. ಭಾ. ವನ್ನು ನೋಡಿ.

3. ಮನುಷ್ಯನು ನೆಟ್ಟಗೆ ಕಾಲೂರಿ ನಿಂತುಕೊಳ್ಳುವದಕ್ಕೆ ಅಪಾನವೃತ್ತಿಯನ್ನು ಎಳೆದಿಟ್ಟುಕೊಂಡಿರುವ ಪೃಥಿವೀದೇವತೆಯ ಸಹಾಯವು ಬೇಕು.

4. "ಮಂಚಿಕೆಗಳು ಕೂಗುತ್ತವೆ" ಎಂದರೆ ಮಂಚಿಕೆಯ ಮೇಲೆ ಕೂತಿರುವವರು ಕೂಗುತ್ತಾರೆ ಎಂದರ್ಥ; ಇದರಂತೆ ಆಕಾಶವು ಎಂದರೆ ಆಕಾಶದಲ್ಲಿರುವ ವಾಯು ಎಂದರ್ಥ.

ಆಕಾಶದಲ್ಲಿರುವದೆಂಬುದು (ಇವೆರಡಕ್ಕೂ) ಸಮಾನವಾಗಿರುತ್ತದೆ[1]. ಮತ್ತು ಸಾಮಾನ್ಯವಾಗಿ[2] ಹೊರಗಿರುವ ವಾಯುವಿದೆಯಲ್ಲ, ಅದು ವ್ಯಾಪ್ತಿ ಎಂಬ ಹೋಲಿಕೆಯಿಂದ **ವ್ಯಾನವು**; ಎಂದರೆ ವ್ಯಾನವನ್ನು ಅನುಗ್ರಹಿಸುತ್ತಿರುವದು-ಎಂದಭಿಪ್ರಾಯ.

**ತೇಜೋ ಹ ವಾ ಉದಾನಸ್ತಸ್ಮಾದುಪಶಾನ್ತತೇಜಾಃ ।**
**ಪುನರ್ಭವಮಿನ್ದ್ರಿಯೈರ್ಮನಸಿ ಸಂಪದ್ಯಮಾನೈಃ ॥ ೯ ॥**

೯. ತೇಜಸ್ಸೇ ಉದಾನವು. ಆದ್ದರಿಂದ ತೇಜಸ್ಸು ಉಪಶಾಂತವಾದವನು ಮರುಹುಟ್ಟನ್ನು ಮನಸ್ಸಿನಲ್ಲಿ ಸೇರಿಕೊಂಡ ಇಂದ್ರಿಯಗಳೊಡನೆ (ಹೊಂದುತ್ತಾನೆ).

(ಭಾಷ್ಯ)

೪೬. ಯದ್ ಬಾಹ್ಯಂ ಹ ವೈ[3] ಪ್ರಸಿದ್ಧಂ ಸಾಮಾನ್ಯಂ[4] **ತೇಜಃ ತತ್ ಶರೀರೇ ಉದಾನಃ** । ಉದಾನಂ ವಾಯುಮ್ ಅನುಗೃಹ್ಣಾತಿ ಸ್ವೇನ ಪ್ರಕಾಶೇನ ಇತ್ಯಭಿಪ್ರಾಯಃ । ಯಸ್ಮಾತ್ ತೇಜಃಸ್ವಭಾವಃ ಬಾಹ್ಯತೇಜೋಽನುಗೃಹೀತಃ ಉತ್ಕ್ರಾನ್ತಿಕರ್ತಾ, ತಸ್ಮಾದ್ಯದಾ ಲೌಕಿಕಃ ಪುರುಷಃ ಉಪಶಾನ್ತತೇಜಾಃ ಭವತಿ ಉಪಶಾನ್ತಂ ಸ್ವಾಭಾವಿಕಂ ತೇಜಃ ಯಸ್ಯ ಸಃ, ತದಾ ತಂ ಕ್ಷೀಣಾಯುಷಂ ಮುಮೂರ್ಷುಂ ವಿದ್ಯಾತ್ । ಸಃ ಪುನರ್ಭವಂ ಶರೀರಾನ್ತರಂ ಪ್ರತಿಪದ್ಯತೇ । ಕಥಮ್ ? ಸಹ ಇನ್ದ್ರಿಯೈಃ ಮನಸಿ ಸಂಪದ್ಯಮಾನೈಃ ಪ್ರವಿಶದ್ಭಿಃ ವಾಗಾದಿಭಿಃ ॥

(ಭಾಷ್ಯಾರ್ಥ)

ಹೊರಗೆ ಪ್ರಸಿದ್ಧವಾದ ಸಾಮಾನ್ಯವಾದ[5] ತೇಜಸ್ಸಿದೆಯಲ್ಲ, ಅದೇ ಶರೀರದಲ್ಲಿ **ಉದಾನವು**; ಉದಾನವಾಯುವನ್ನು ತನ್ನ ಪ್ರಕಾಶದಿಂದ ಅನುಗ್ರಹಿಸುತ್ತಿರುವದು, ಎಂದರ್ಥ. ಹೀಗೆ ಉತ್ಕ್ರಮಣವನ್ನುಂಟುಮಾಡುವ (ಉದಾನವಾಯುವು) ಹೊರಗಿನ ತೇಜಸ್ಸಿನಿಂದ ಅನುಗ್ರಹೀತವಾಗಿ ತೇಜಸ್ಸಿನ ಸ್ವಭಾವವುಳ್ಳದ್ದಾಗಿರುವದಲ್ಲ, ಆ ಕಾರಣ

---

1. ಹೊರಗಿನ (ಆಕಾಶ) ವಾಯು ದ್ಯಾವಾಪೃಥಿವಿಗಳ ನಡುವೆ ಇರುತ್ತದೆ. ಸಮಾನವು ದೇಹದ ನಡುಭಾಗವಾದ ಹೊಕ್ಕಳಲ್ಲಿರುತ್ತದೆ.

2. ವಿಶೇಷಸ್ಥಳಗಳಲ್ಲಿ ವಿಶೇಷರೂಪದಿಂದಲ್ಲದೆ ಸಾಮಾನ್ಯವಾಗಿ ವಾಯುವಾಗಿ ಎಲ್ಲೆಲ್ಲಿಯೂ ಇರುವ.

3. "ವಾವ" ಎಂದು ಉಪನಿಷತ್ತಿನಲ್ಲಿಯೂ ಭಾಷ್ಯದಲ್ಲಿಯೂ ವಾ॥ ಪಾಠದಲ್ಲಿದೆ.

4. "ಸಾಮಾನ್ಯೇ" ಎಂಬ ಅ॥ ಪಾಠಕ್ಕಿಂತ ಈ ವಾ॥ ಪಾಠವು ಉತ್ತಮ.

5. ಆದಿತ್ಯರೂಪವಾದ ವಿಶೇಷತೇಜಸ್ಸಲ್ಲ, ಬಿಸಿಲುಬೆಳಕುಗಳ ರೂಪದಲ್ಲಿ ಹೊರಗೆಲ್ಲ ಇರುವ ತೇಜಸ್ಸು.

ದಿಂದ ಯಾವಾಗ (ಈ) ಲೋಕದಲ್ಲಿರುವ ಪುರುಷನು ಉಪಶಾಂತತೇಜನಾಗುವನೋ ತನ್ನಲ್ಲಿ ಸ್ವಭಾವದಿಂದಿರುವ ತೇಜಸ್ಸು ಆರಿಹೋದವನಾಗುವನೋ[1] ಆಗ ಅವನನ್ನು ಆಯುಸ್ಸು ಮುಗಿದವನು, (ಇನ್ನು) ಸಾಯುವವನು ಎಂದು ತಿಳಿದುಕೊಳ್ಳಬೇಕು. ಅವನು ಮರುಹುಟ್ಟನ್ನು ಎಂದರೆ ಬೇರೊಂದು ಶರೀರವನ್ನು[2] ಪಡೆಯುತ್ತಾನೆ. ಹೇಗೆಂದರೆ ಮನಸ್ಸಿನಲ್ಲಿ ಸೇರಿಕೊಳ್ಳುವ ವಾಕ್ಕೇ ಮುಂತಾದ ಇಂದ್ರಿಯಗಳೊಡನೆ[3] (ಮರುಹುಟ್ಟನ್ನು ಪಡೆಯುತ್ತಾನೆ).

## ಉತ್ಕ್ರಾಂತಿಕ್ರಮ

**ಯಚ್ಚಿತ್ತಸ್ತೇನೈಷ ಪ್ರಾಣಮಾಯಾತಿ ಪ್ರಾಣಸ್ತೇಜಸಾ ಯುಕ್ತಃ ।**
**ಸಹಾಽಽತ್ಮನಾ ಯಥಾಸಂಕಲ್ಪಿತಂ ಲೋಕಂ ನಯತಿ ॥ ೧೦ ॥**

೧೦. ಯಾವ ಚಿತ್ತದಿಂದ ಕೂಡಿರುವನೋ ಅದರಿಂದ ಇವನು ಪ್ರಾಣವನ್ನು ಹೊಂದುತ್ತಾನೆ. ಪ್ರಾಣನು ತೇಜಸ್ಸಿನಿಂದ ಕೂಡಿ ಆತ್ಮನೊಡನೆ ಸಂಕಲ್ಪಕ್ಕೆ ತಕ್ಕಂತೆ (ಆಯಾ) ಲೋಕಕ್ಕೆ ಒಯ್ಯುತ್ತಾನೆ.

(ಭಾಷ್ಯ)

೪೭. ಮರಣಕಾಲೇ ಯಚ್ಚಿತ್ತೋ ಭವತಿ ತೇನ ಏಷ ಜೀವಃ[4] ಚಿತ್ತೇನ ಸಂಕಲ್ಪೇನ ಇನ್ದ್ರಿಯೈಃ ಸಹ ಪ್ರಾಣಂ ಮುಖ್ಯಪ್ರಾಣವೃತ್ತಿಮ್ ಆಯಾತಿ । ಮರಣಕಾಲೇ ಕ್ಷೀಣೇನ್ದ್ರಿಯವೃತ್ತಿಃ ಸನ್ ಮುಖ್ಯಯಾ ಪ್ರಾಣವೃತ್ತ್ಯೈವ ಅವತಿಷ್ಠತೇ ಇತ್ಯರ್ಥಃ । ತದಾ ಹಿ[5] ವದನ್ತಿ ಜ್ಞಾತಯಃ "ಉಚ್ಛ್ವಸತಿ ಜೀವತಿ" ಇತಿ । ಸ ಚ ಪ್ರಾಣಃ ತೇಜಸಾ ಉದಾನವೃತ್ತ್ಯಾ ಯುಕ್ತಃ ಸನ್ ಸಹಾತ್ಮನಾ ಸ್ವಾಮಿನಾ ಭೋಕ್ತ್ರಾ ಸ ಏವಮ್ ಉದಾನವೃತ್ತ್ಯೈವ[6] ಯುಕ್ತಃ ಪ್ರಾಣಃ ತಂ

---

1. ಮೈಬಿಸಿಯೂ ಕಾಂತಿಯೂ ಕಡಿಮೆಯಾದರೆ. ಸೂ. ಭಾ. ೪–೨–೧೧.

2. ಪುನರ್ಭವವೆಂದರೆ ಬೇರೊಂದು ಶರೀರ ಎಂದು ವ್ಯಾಖ್ಯಾನಕಾರರು ಅರ್ಥಮಾಡಿರುತ್ತಾರೆ. ಆದರೆ ಅದೇನೂ ಅವಶ್ಯವಿಲ್ಲ. ಮತ್ತೊಂದು ಶರೀರವನ್ನು ಪಡೆಯುವದೇ ಮರುಹುಟ್ಟು ಎಂಬುದು ಭಾಷ್ಯಾಶಯ. ಸೂ. ಭಾ. ೨–೩–೧೬ ನೋಡಿ.

3. ಭಾ. ೬–೪–೬ ರಲ್ಲಿ ಹೇಳಿರುವ ಉತ್ಕ್ರಾಂತಿಕ್ರಮದ ಸೂಚನೆ. ಇಲ್ಲಿ ವೃತ್ತಿಯ ಲಯವನ್ನು ಮಾತ್ರ ಹೇಳಿದೆಯೇ ಹೊರತು ತತ್ತ್ವಪ್ರಲಯವನ್ನಲ್ಲ. ಸೂ. ಭಾ. ೪–೭–೨.

4. ಇದು ವಾ॥ ಪಾಠ; ಆ॥ ಪಾಠದಲ್ಲಿ "ತೇನೈವ" ಎಂದಿಷ್ಟೇ ಇದೆ.

5. ವಾ॥ ಪಾಠ; "ತದಾಭಿವದನ್ತಿ" ಎಂದು ಆ॥ ಪಾಠ.

6. "ಉದಾನಃ ಉದಾನವೃತ್ತ್ಯಾ" ಎಂಬ ವಾ॥ ಪಾಠದಲ್ಲಿ "ಉದಾನಃ" ಎಂಬ ಮಾತು ಹೆಚ್ಚಾಗಿದೆ.

**ಭೋಕ್ತಾರಂ ಪುಣ್ಯಾಪಾಪಕರ್ಮವಶಾತ್ ಯಥಾ ಸಂಕಲ್ಪಿತಂ ಯಥಾಭಿಪ್ರೇತಂ ಲೋಕಂ ನಯತಿ ಪ್ರಾಪಯತಿ ||**

(ಭಾಷ್ಯಾರ್ಥ)

ಸಾಯುವ ಕಾಲದಲ್ಲಿ ಯಾವ ಚಿತ್ತವುಳ್ಳವನಾಗಿರುವನೋ ಆ ಚಿತ್ತ(ದಿಂದಲೇ) (ಅದೇ) ಸಂಕಲ್ಪದಿಂದಲೇ[1] ಇಂದ್ರಿಯಗಳೊಡನೆ ಮುಖ್ಯಪ್ರಾಣವೃತ್ತಿಯನ್ನು ಸೇರಿಕೊಳ್ಳುತ್ತಾನೆ. ಸಾಯುವ ಕಾಲದಲ್ಲಿ ಇಂದ್ರಿಯವೃತ್ತಿಗಳೆಲ್ಲ ಹೋಗಿ ಮುಖ್ಯಪ್ರಾಣವೃತ್ತಿಯೊಂದರೊಡನೆಯೇ ಇದ್ದುಕೊಂಡಿರುತ್ತಾನೆ ಎಂದರ್ಥ.[2] ಆಗಲೇ (ಸುತ್ತಲಿರುವ) ಜ್ಞಾತಿಗಳು "(ಇನ್ನೂ) ಉಸಿರಾಡುತ್ತಿದಾನೆ, ಬದುಕಿದಾನೆ" ಎಂದುಕೊಳ್ಳುತ್ತಿರುವರು. ಆ ಪ್ರಾಣನೂ ತೇಜಸ್ಸಿನಿಂದ ಎಂದರೆ ಉದಾನವೃತ್ತಿಯಿಂದ ಕೂಡಿದವನಾಗಿ ಒಡೆಯನಾದ ಭೋಕ್ತೃವಾದ ಆತ್ಮನೊಡನೆ[3], ಹೀಗೆ ಉದಾನವೃತ್ತಿಯಿಂದಲೇ ಕೂಡಿರುವ ಪ್ರಾಣನು ಆ ಭೋಕ್ತೃವನ್ನು ಪುಣ್ಯಾಪಾಪಕರ್ಮಗಳ ವಶದಿಂದ ಸಂಕಲ್ಪಕ್ಕೆ ತಕ್ಕಂತೆ ಅವನ ಅಭಿಪ್ರಾಯಕ್ಕೆ ತಕ್ಕಂತೆ (ಆಯಾ) ಲೋಕಕ್ಕೆ ಒಯ್ಯುತ್ತಾನೆ ಕರೆದುಕೊಂಡು ಹೋಗಿ (ಆಯಾ ಲೋಕವನ್ನು) ಸೇರಿಸುತ್ತಾನೆ.

## ಪ್ರಾಣೋಪಾಸನೆಯ ಫಲ

**ಯ ಏವಂ ವಿದ್ವಾನ್ ಪ್ರಾಣಂ ವೇದ । ನ ಹಾಸ್ಯ ಪ್ರಜಾ ಹೀಯತೇಽಮೃತೋ ಭವತಿ ತದೇಷ ಶ್ಲೋಕಃ ॥ ೧೧ ॥**

೧೧. ಯಾವನು ಹೀಗೆಂದು ತಿಳಿದುಕೊಂಡು ಪ್ರಾಣವನ್ನು ಅರಿಯುವನೋ ಅವನ ಪ್ರಜೆ ನಾಶವಾಗುವದಿಲ್ಲ. ಅವನು ಅಮೃತನಾಗುವನು. ಅಲ್ಲಿ ಈ ಶ್ಲೋಕ(ವಿರುತ್ತದೆ) :—

(ಭಾಷ್ಯ)

**೪೮. ಯಃ ಕಶ್ಚಿದೇವಂ ವಿದ್ವಾನ್ ಯಥೋಕ್ತವಿಶೇಷಣೈರ್ವಿಶಿಷ್ಟಮ್ ಉತ್ಪತ್ತ್ಯಾದಿಭಿಃ ಪ್ರಾಣಂ ವೇದ ಜಾನಾತಿ ತಸ್ಯ ಇದಂ ಫಲಮ್ ಐಹಿಕಂ ಆಮುಷ್ಮಿಕಂ**

---

1. ಗೀ. ೮-೬; ಛಾ. ೩-೧೪-೧.

2. ಇಂದ್ರಿಯಗಳ ಮತ್ತು ಮನಸ್ಸಿನ ವೃತ್ತಿಯು ಪ್ರಾಣದಲ್ಲಿ ಲಯವಾಗುತ್ತದೆ. ಸೂ. ಭಾ. ೪-೨-೩. ಇದುವರೆಗಿನ ಉತ್ಕ್ರಾಂತಿಕ್ರಮವನ್ನು ಹೇಳಿರುವದು ಪ್ರಾಣನು ಹೇಗೆ ಉತ್ಕ್ರಾಂತಿಗೆ ಕಾರಣನಾಗುತ್ತಾನೆ ? ಎಂಬ ಪ್ರಶ್ನೆಗೆ ಉತ್ತರವನ್ನು ಹೇಳುವದಕ್ಕೆ. ವಿಸ್ತಾರವಾದ ಉತ್ಕ್ರಾಂತಿಕ್ರಮವನ್ನು ಛಾ. ೬-೮; ಬೃ. ೪-೪-ಇವುಗಳಲ್ಲಿ ಕಾಣಬಹುದು.

3. ಪ್ರಾಣವು ತೇಜಸ್ಸಿನೊಡನೆಯೂ ಜೀವದೊಡನೆಯೂ ಕೂಡಿಕೊಳ್ಳುವದೆಂಬುದರ ವಿವರವನ್ನು ಸೂ. ಭಾ. ೪-೨-೪, ೫ ರಲ್ಲಿ ಕೊಟ್ಟಿರುವದರೊಡನೆ ಹೋಲಿಸಿ ನೋಡಿರಿ.

ಚ ಉಚ್ಯತೇ। ನ ಹ ಅಸ್ಯ ನೈವಾಸ್ಯ ವಿದುಷಃ ಪ್ರಜಾಃ ಪುತ್ರಪೌತ್ರಾದಿಲಕ್ಷಣಾ ಹೀಯತೇ ವಿಚ್ಛಿದ್ಯತೇ। ಪತಿತೇ ಚ ಶರೀರೇ ಪ್ರಾಣಸಾಯುಜ್ಯತಯಾ ಅಮೃತಃ ಅಮರಣಧರ್ಮಾ ಭವತಿ ॥

(ಭಾಷ್ಯಾರ್ಥ)

**ಯಾವನೇ** ಆಗಲಿ, ಹೀಗೆಂದು ತಿಳಿದುಕೊಂಡು, ಎಂದರೆ ಹಿಂದೆ ಹೇಳಿದ **ಉತ್ಪತ್ತಿಯೇ** ಮುಂತಾದ (ಈ ವರೆಗೆ) ಹೇಳಿರುವ ವಿಶೇಷಣಗಳಿಂದ ಕೂಡಿದ[1] ಪ್ರಾಣವನ್ನು ಅರಿಯುವನೋ[2] ಅವನಿಗೆ ಇಹಲೋಕದ ಮತ್ತು ಆ (ಪರ)ಲೋಕದ ಫಲವು (ಆಗುವದೆಂದು ಶ್ರುತಿ) ಹೇಳುತ್ತಿದೆ. ಅವನ ಹೀಗೆಂದು ತಿಳಿದು ಉಪಾಸನೆ ಮಾಡಿದವನ ಮಕ್ಕಳು ಮೊಮ್ಮಕ್ಕಳು ಮುಂತಾದ ರೂಪದ ಪ್ರಜೆಯು (ನ ಹ=ನೈವ) ಹಾಳಾಗುವದಿಲ್ಲ; (ಪ್ರಜಾ ಸಂತತಿಯು) ವಿಚ್ಛೇದವಾಗುವದೇ ಇಲ್ಲ. ಮತ್ತು ಶರೀರವು ಬಿದ್ದಬಳಿಕ ಪ್ರಾಣಸಾಯುಜ್ಯವನ್ನು ಹೊಂದಿ[3] ಅಮೃತನಾಗುತ್ತಾನೆ. ಸಾವಿಲ್ಲದ ಸ್ವಭಾವದವನು[4] ಆಗುತ್ತಾನೆ.

(ಭಾಷ್ಯ)

೪೯. ತತ್ ಏತಸ್ಮಿನ್ ಅರ್ಥೇ ಸಂಕ್ಷೇಪಾಭಿಧಾಯಕಃ ಏಷಃ ಶ್ಲೋಕಃ ಮನ್ತ್ರಃ ಭವತಿ—

(ಭಾಷ್ಯಾರ್ಥ)

ಅಲ್ಲಿ ಎಂದರೆ ಈ ವಿಷಯದಲ್ಲಿ ಸಂಗ್ರಹವಾಗಿ (ಎಲ್ಲವನ್ನೂ) ತಿಳಿಸುವ ಈ ಶ್ಲೋಕವು ಎಂದರೆ ಮಂತ್ರವು ಇರುತ್ತದೆ:—

**ಉತ್ಪತ್ತಿಮಾಯತಿಂ ಸ್ಥಾನಂ**
**ವಿಭುತ್ವಂ ಚೈವ ಪಞ್ಚಧಾ ।**
**ಅಧ್ಯಾತ್ಮಂ ಚೈವ ಪ್ರಾಣಸ್ಯ**
**ವಿಜ್ಞಾಯಾಮೃತಮಶ್ನುತೇ ।**
**ವಿಜ್ಞಾಯಾಮೃತಮಶ್ನುತ ಇತಿ** ॥ ೧೨ ॥

---

1. ಆತ್ಮನಿಂದ ಹುಟ್ಟುವದು, ಕರ್ಮವಾಸನೆಯಿಂದ ಶರೀರಧಾರಣೆ ಮಾಡುವದು, ಪ್ರಾಣಾಪಾನಾದಿವೃತ್ತಿಗಳನ್ನು ಮಾಡುತ್ತಾ ಶರೀರದಲ್ಲಿದ್ದು ಉದಾನವೃತ್ತಿಯಿಂದ ಉತ್ಕ್ರಾಂತಿಯನ್ನು ಹೊಂದುವದು, ಆದಿತ್ಯಾದಿರೂಪಗಳಿಂದ ಹೊರಗೂ ಪ್ರಾಣಾದಿರೂಪಗಳಿಂದ ಒಳಗೂ ಇರುವದು, ಭೋಕ್ತೃವಿನೊಡಗೂಡಿ ಲೋಕಾಂತರಕ್ಕೆ ಹೋಗುವದು–ಎಂಬ ವಿಶೇಷಣಗಳಿಂದ ಕೂಡಿದ.

2. ಉಪಾಸನೆಮಾಡುವನೋ. ಜ್ಞಾನವೇ ಮುಖ್ಯವಾದರೂ ಇಲ್ಲಿ ಅಪರವಿದ್ಯೆಯ ಫಲವನ್ನೂ ಉಪಸಂಹಾರಮಾಡಿರುತ್ತದೆ. ಮುಂ. ೧–೨–೧೧ (ಭಾ. ಭಾ. ೪೨) ವನ್ನು ನೋಡಿ. ಇಲ್ಲಿಯವರೆಗೂ ಅಪರವಿದ್ಯೆಯ ಸ್ವರೂಪವನ್ನು ಅನುವಾದಮಾಡಿದಂತೆ ಆಯಿತು.

3. ಉಪಾಸನೆಯನ್ನು ಮಾಡಿ ಸಾಕ್ಷಾತ್ಕಾರಮಾಡಿಕೊಂಡವರಿಗೆ ಶರೀರವು ಬಿದ್ದ ಬಳಿಕ ಆಯಾ ದೇವತೆಯ ಸಾಯುಜ್ಯವಾಗುತ್ತದೆ.

4. ಇದು ಉಪಾಸನೆಯಿಂದ ಪಡೆಯುವ ಆಪೇಕ್ಷಿಕ ಮುಕ್ತಿ

೧೨. ಪ್ರಾಣನ ಹುಟ್ಟು, ಬರವು, ಸ್ಥಾನವು, ವಿಭುತ್ವ, ಐದು ಬಗೆಯ ಅಧ್ಯಾತ್ಮ–(ಇವುಗಳನ್ನು) ಅರಿತುಕೊಂಡರೆ ಅಮೃತವನ್ನು ಪಡೆದು ಕೊಳ್ಳುತ್ತಾನೆ. ಅರಿತುಕೊಂಡರೆ ಅಮೃತವನ್ನು ಪಡೆದುಕೊಳ್ಳುತ್ತಾನೆ.

(ಭಾಷ್ಯ)

೫೦. ಉತ್ಪತ್ತಿಂ ಪರಮಾತ್ಮನಃ ಪ್ರಾಣಸ್ಯ। ಆಯತಿಮ್ ಆಗಮನಮ್ ಮನೋಕೃತೇನ ಅಸ್ಮಿನ್ ಶರೀರೇ। ಸ್ಥಾನಂ ಸ್ಥಿತಿಂ ಚ ಪಾಯೂಪಸ್ಥಾದಿಸ್ಥಾನೇಷು। ವಿಭುತ್ವಂ ಚ ಸ್ವಾಮ್ಯಮೇವ ಸಮ್ರಾಡಿವ ಪ್ರಾಣವೃತ್ತಿಭೇದಾನಾಂ ಪಞ್ಚಧಾ ಸ್ಥಾಪನಮ್। ಬಾಹ್ಯಮ್ ಆದಿತ್ಯಾದಿರೂಪೇಣ ಅಧ್ಯಾತ್ಮಂ ಚೈವ ಚಕ್ಷುರಾದ್ಯಾಕಾರೇಣ ಅವಸ್ಥಾನಂ ವಿಜ್ಞಾಯ ಏವಂ ಪ್ರಾಣಮ್ ಅಮೃತಮ್, ಅಶ್ನುತೇ ಇತಿ। "ವಿಜ್ಞಾಯಾ ಮೃತಮಶ್ನುತೇ" ಇತಿ ದ್ವಿರ್ವಚನಂ ಪ್ರಶ್ನ[1]ಪರಿಸಮಾಪ್ತ್ಯರ್ಥಮ್ ॥

(ಭಾಷ್ಯಾರ್ಥ)

ಪ್ರಾಣನಿಗೆ ಪರಮಾತ್ಮನಿಂದ (ಆಗುವ) ಹುಟ್ಟು; ಮನಸ್ಸಿನ ಕರ್ಮದಿಂದ ಈ ಶರೀರಕ್ಕೆ ಬರುವಿಕೆ, ಬಂದು ಸೇರುವದು; ಸ್ಥಾನ ಎಂದರೆ ಪಾಯು, ಉಪಸ್ಥ-ಮುಂತಾದ ಸ್ಥಾನಗಳಲ್ಲಿ ಇರುವಿಕೆ; ವಿಭುತ್ವವು ಎಂದರೆ ಸಮ್ರಾಜನಿಗೆ ಬೇರೆ ಬೇರೆಯಾಗಿರುವ (ಐದು ಬಗೆಯ) ಪ್ರಾಣವೃತ್ತಿಗಳನ್ನು ಐದು ಬಗೆಯಲ್ಲಿ ವಿಸಿಯೋಗಿಸಿಟ್ಟಿರುವದು, ಹೊರಗೆ ಆದಿತ್ಯನೇ ಮೊದಲಾದವುಗಳ ರೂಪದಿಂದಲೂ ಒಳಗೆ ಚಕ್ಷುರಾದಿಗಳ ರೂಪದಿಂದಲೂ ಇದ್ದುಕೊಂಡಿರುವಿಕೆ—ಹೀಗೆ ಪ್ರಾಣನನ್ನು[2] ಅರಿತುಕೊಂಡರೆ ಅಮೃತವನ್ನು ಪಡೆದುಕೊಳ್ಳುತ್ತಾನೆ. "ಅರಿತುಕೊಂಡರೆ ಅಮೃತವನ್ನು ಪಡೆದುಕೊಳ್ಳುತ್ತಾನೆ" ಎಂದು ಎರಡು ಸಲ ಹೇಳಿರುವದು ಪ್ರಶ್ನೆಯು ಮುಗಿಯಿತೆಂದು ತಿಳಿಸುವದಕ್ಕೆ.



1. "ಪ್ರಶ್ನಾರ್ಥಪರಿಸಮಾಪ್ತ್ಯರ್ಥಮ್" ಎಂದೇ ಅಚ್ಚಿನ ಪುಸ್ತಕಗಳಲ್ಲಿ ಪಾಠವಿದೆ. ಆದು ಪ್ರಶ್ನೆಯು ಎಂದರೆ ಈ ಉಪನಿಷತ್ತಿನಲ್ಲಿ ಮೂರನೆಯ ಭಾಗವು ಮುಗಿಯಿತು ಎಂಬುದನ್ನು ಸೂಚಿಸುವದಕ್ಕೆ ದ್ವಿರುಕ್ತಿ ಬಂದಿದೆ ಎಂದು ಹೇಳಿದರೆ ಸಾಕಾಗಿರುವದರಿಂದ "ಪ್ರಶ್ನ ಪರಿಸಮಾಪ್ತ್ಯರ್ಥಮ್" ಎಂದೇ ಪಾಠವನ್ನು ಇಟ್ಟುಕೊಂಡಿದೆ.

2. ಇಲ್ಲಿ ಪ್ರಾಣನ ಉತ್ಪತ್ತ್ಯಾದಿಗಳನ್ನು ಮಾತ್ರ ತಿಳಿದರೆ ಸಾಲದು, ಉತ್ಪತ್ತಿಯೇ ಮುಂತಾದ ವಿಶೇಷಣಗಳಿಂದ ಕೂಡಿದ ಪ್ರಾಣವನ್ನೇ ಉಪಾಸನೆಮಾಡಬೇಕು–ಎಂಬುದನ್ನು ತಿಳಿಸುವದಕ್ಕೆ ಹಿಂದಿನ ಮಂತ್ರದಲ್ಲಿ ಹೇಳಿರುವ "ಪ್ರಾಣಮ್" ಎಂಬ ಮಾತನ್ನು ಭಾಷ್ಯಕಾರರು ಸೇರಿಸಿಕೊಂಡಿರುತ್ತಾರೆ.

# ನಾಲ್ಕನೆಯ ಪ್ರಶ್ನೆ

## ಮುಂದಿನ ಗ್ರಂಥದ ಸಂಬಂಧ

(ಭಾಷ್ಯ)

೫೧. "ಅಥ ಹೈನಂ ಸೌರ್ಯಾಯಣೀ ಗಾರ್ಗ್ಯಃ ಪಪ್ರಚ್ಛ" । ಪ್ರಶ್ನತ್ರಯೇಣ **ಅಪರವಿದ್ಯಾಗೋಚರಂ ಸರ್ವಂ ಪರಿಸಮಾಪ್ಯ ಸಂಸಾರಂ ವ್ಯಾಕೃತವಿಷಯಂ ಸಾಧ್ಯ ಸಾಧನಲಕ್ಷಣಮ್ ಅನಿತ್ಯಮ್ ಅಥೇದಾನೀಮ್ ಅಸಾಧ್ಯಸಾಧನಲಕ್ಷಣಮ್**[1] **ಅಪ್ರಾಣಮ್, ಅಮನಃ, ಅಗೋಚರಮ್, ಅತೀನ್ದ್ರಿಯವಿಷಯಮ್**[2] **ಶಿವಂ ಶಾನ್ತಮ್ ಅವಿಕೃತಮ್ ಅಕ್ಷರಂ ಸತ್ಯಂ ಪರವಿದ್ಯಾಗಮ್ಯಂ ಪುರುಷಾಖ್ಯಂ ಸಬಾಹ್ಯಾಭ್ಯನ್ತರಮ್ ಅಜಂ ವಕ್ತವ್ಯಮ್ ಇತಿ ಉತ್ತರಂ ಪ್ರಶ್ನತ್ರಯಮ್ ಆರಭ್ಯತೇ**—

(ಭಾಷ್ಯಾರ್ಥ)

"ಆಮೇಲೆ ಈತನನ್ನು ಸೌರ್ಯಾಯಣಿ ಗಾರ್ಗ್ಯನು ಹೀಗೆಂದು ಪ್ರಶ್ನೆಮಾಡಿದನು" (ಎಂದು ಮೊದಲಾಗಿರುವ ಗ್ರಂಥದ ಸಂಬಂಧವೇನೆಂದರೆ): (ಹಿಂದೆ) ಮೂರು ಪ್ರಶ್ನೆಗಳಿಂದ ವ್ಯಾಕೃತವಿಷಯವಾಗಿ[3] ಸಾಧ್ಯಸಾಧನರೂಪವಾಗಿ ಅನಿತ್ಯವಾಗಿರುವ **ಅಪರವಿದ್ಯೆಯ ವಿಷಯ**ವೆಲ್ಲವನ್ನೂ[4] (ಹೇಳಿ) ಮುಗಿಸಿದ ಬಳಿಕ, ಇನ್ನು ಈಗ ಸಾಧ್ಯಸಾಧನರೂಪವಲ್ಲದ[5] ಪ್ರಾಣವಿಲ್ಲದ, ಮನಸ್ಸಿಲ್ಲದ, ವಿಷಯವಿಲ್ಲದ,[6] ಇಂದ್ರಿಯ

---

1. "ಸಾಧ್ಯಸಾಧನವಿಲಕ್ಷಣಮ್" ಎಂದು ಪಾ॥ ಪಾಠ.

2. ಅತೀನ್ದ್ರಿಯಮ್, ಅವಿಷಯಮ್ ಎಂದು ಪಾ॥ ಪಾಠ.

3. "ಕ್ರಿಯಾಕಾರಕಫಲರೂಪವಾಗಿ ವಿಂಗಡವಾಗಿರುವ" ಎಂದರ್ಥ. ಇದರಲ್ಲಿ ಅವ್ಯಾಕೃತವೂ ಒಂದರ್ಥದಲ್ಲಿ ಸೇರಿಯೇ ಹೋಗಿದೆ. ಮುಂ. ಭಾ. ೧-೨-೧೨ (ಭಾ. ಭಾ. ೪೫) "ಅವ್ಯಕ್ತಾದಿಸ್ಥಾವರಾನ್ತಾನ್ ವ್ಯಾಕೃತಾವ್ಯಾಕೃತಲಕ್ಷಣಾನ್" ಎಂಬ ವಾಕ್ಯವನ್ನು ನೋಡಿರಿ.

4. ಪುತ್ರ, ಕರ್ಮ, ಉಪಾಸನೆ–ಎಂಬ ಸಾಧನಗಳೂ ಅವುಗಳ ಫಲವಾಗಿರುವ ಲೋಕಗಳೂ ಅನಿತ್ಯವೇ. ಮುಂ. ೧-೨-೧೨.

5. ಮುಂ. ೧-೨-೧೨.

6. ಮುಂ. ಭಾ. ೨-೧-೨ (ಭಾ. ಭಾ. ೫೪) ದಲ್ಲಿ "ಅಪ್ರಾಣೋ ಹ್ಯಮನಾಃ" ಎಂಬುದರ ವ್ಯಾಖ್ಯಾನವನ್ನು ನೋಡಿ.

ಗಳನ್ನೂ ವಿಷಯಗಳನ್ನೂ ಮೀರಿರುವ[1] ಶಿವವೂ ಶಾಂತವೂ ಆಗಿರುವ[2] ವಿಕಾರವಿಲ್ಲದ ಪುರುಷನೆಂಬ ಹೆಸರಿನ ಒಳಗೂ ಹೊರಗೂ ಇವುಗಳೊಡನೆ ಇರುವ ಹುಟ್ಟಿಲ್ಲದ[3] ಪರವಿದ್ಯೆಯಿಂದ ತಿಳಿಯಬೇಕಾಗಿರುವ ಅಕ್ಷರವೆಂಬ ಸತ್ಯವನ್ನು[4] ಹೇಳಬೇಕೆಂದು ಮುಂದಿನ ಮೂರು ಪ್ರಶ್ನೆಗಳ (ಗ್ರಂಥಭಾಗವ) ನ್ನು ಆರಂಭಿಸಿರುತ್ತದೆ.

## ಈ ಪ್ರಶ್ನೆಯ ವಿಷಯ

(ಭಾಷ್ಯ)

**೫೨.** ತತ್ರ ಸುದೀಪ್ತಾದಿವ ಅಗ್ನೇಃ ಯಸ್ಮಾತ್ ಪರಾತ್ ಅಕ್ಷರಾತ್ ಸರ್ವೇ ಭಾವಾಃ ವಿಸ್ಫುಲಿಙ್ಗಾ ಇವ ಜಾಯನ್ತೇ। ತತ್ರ ಚೈವಾಪಿಯನ್ತಿ ಇತ್ಯುಕ್ತಂ ದ್ವಿತೀಯೇ ಮುಣ್ಡಕೇ। ಕೇ ತೇ ಸರ್ವೇ ಭಾವಾ ಅಕ್ಷರಾದ್ವಿಸ್ಫುಲಿಙ್ಗಾ ಇವ[5] ವಿಭಜ್ಯನ್ತೇ। ಕಥಂ ವಾ ವಿಭಕ್ತಾಃ ಸನ್ತಃ ತತ್ರೈವಾಪಿಯನ್ತಿ? ಕಿಂಲಕ್ಷಣಂ ವಾ ತದಕ್ಷರಮಿತಿ? ಏತದ್ವಿವಕ್ಷಯಾ ಅಧುನಾ ಪ್ರಶ್ನಾನ್ ಉದ್ಭಾವಯತಿ—

(ಭಾಷ್ಯಾರ್ಥ)

ಇದರಲ್ಲಿ "ಚೆನ್ನಾಗಿ ಹತ್ತಿಕೊಂಡು ಉರಿಯುವ ಬೆಂಕಿಯಿಂದ ಕಿಡಿಗಳು (ಹುಟ್ಟುವಂತೆ) ಯಾವ ಅಕ್ಷರವೆಂಬ ಪರಮಾತ್ಮನಿಂದ ಎಲ್ಲಾ ಭಾವಗಳೂ ಹುಟ್ಟುತ್ತವೆ, ಆದರಲ್ಲಿಯೇ ಲಯವಾಗುತ್ತವೆ" (ಮು. ೨-೧-೧) ಎಂದು **ಎರಡನೆಯ ಮುಂಡಕ**ದಲ್ಲಿ ಹೇಳಿತ್ತಷ್ಟೆ. ಕಿಡಿಗಳಂತೆ ಅಕ್ಷರದಿಂದ ವಿಂಗಡವಾಗಿ ಬರುವ ಎಲ್ಲಾ ಭಾವಗಳು ಎಂದರೆ ಯಾವವು? ಹಾಗೆ ವಿಂಗಡವಾಗಿ (ಬೇರೆಯಾಗಿರುವ) ಅವು ಆದರಲ್ಲಿಯೇ ಲಯವಾಗುತ್ತವೆ ಎಂದರೆ ಹೇಗೆ? ಆ ಅಕ್ಷರವೆಂಬುದರ ಸ್ವರೂಪವಾದರೂ ಏನು? ಇದನ್ನು ಹೇಳಬೇಕೆಂದು ಈಗ ಈ ಪ್ರಶ್ನೆಗಳನ್ನು ಎಬ್ಬಿಸಲಾಗಿರುತ್ತದೆ:—

---

1. ಇನ್ದ್ರಿಯವಿಷಯಗಳ, ವಿಷಯವಿಷಯಿವ್ಯವಹಾರದ, ಕ್ಷೇತ್ರವನ್ನು ಮೀರಿರುವ; ತಾನು ಒಂದನ್ನೂ ವಿಷಯೀಕರಿಸದೆ, ತಾನೂ ಯಾವದಕ್ಕೂ ವಿಷಯವಾಗದೆ ಇರುವ. ಮುಂ. ಭಾ. ೧-೧-೬, (ಭಾ. ಭಾ. ೧೯).

2. ಆನಂದರೂಪವೂ ಅದ್ವಿತೀಯವೂ ಆಗಿರುವ ಮಾಂ. ೭.

3. ಮುಂ. ೨-೧-೨.

4. ಮುಂ. ೨-೧-೧.

5. ಇದು ವಾ॥ ಪಾಠ; ಆ॥ ಪಾಠದಲ್ಲಿ "ವಿಸ್ಫುಲಿಙ್ಗಾ ಇವ" ಎಂಬ ಮಾತುಗಳಿಲ್ಲ.

**ಅಥ ಹೈನಂ ಸೌರ್ಯಾಯಣೀ ಗಾರ್ಗ್ಯಃ ಪಪ್ರಚ್ಛ । ಭಗವನ್ನೇ
ತಸ್ಮಿನ್ ಪುರುಷೇ ಕಾನಿ ಸ್ವಪನ್ತಿ ಕಾನ್ಯಸ್ಮಿಞ್ಜಾಗ್ರತಿ ಕತರ
ಏಷ ದೇವಃ ಸ್ವಪ್ನಾನ್ ಪಶ್ಯತಿ ಕಸ್ಯೈತತ್ ಸುಖಂ ಭವತಿ
ಕಸ್ಮಿನ್ನು ಸರ್ವೇ ಸಂಪ್ರತಿಷ್ಠಿತಾ ಭವನ್ತೀತಿ ॥ ೧ ॥**

೧. ಆಮೇಲೆ ಈತನನ್ನು ಸೌರ್ಯಾಯಣಿ ಗಾರ್ಗ್ಯನು ಕೇಳಿದ ನೇನೆಂದರೆ, ಭಗವಂತನೆ, ಈ ಪುರುಷನಲ್ಲಿ ಯಾವವು ನಿದ್ರಿಸುವವು? ಇದರಲ್ಲಿ ಯಾವವು ಎಚ್ಚುತ್ತಿರುವವು? ಕನಸುಗಳನ್ನು ನೋಡುವ ಈ ದೇವನು ಯಾವನು? ಈ ಸುಖವು ಯಾರಿಗಾಗುವದು? ಯಾರಲ್ಲಾದರೆ ಎಲ್ಲರೂ ಸಂಪ್ರತಿಷ್ಠಿತರಾಗುತ್ತಾರೆ?

(ಭಾಷ್ಯ)

೫೩. ಭಗವನ್ ಏತಸ್ಮಿನ್ ಪುರುಷೇ ಶಿರಃಪಾಣ್ಯಾದಿಮತಿ ಕಾನಿ ಕರಣಾನಿ ಸ್ವಪನ್ತಿ ಸ್ವಾಪಂ ಕುರ್ವನ್ತಿ, ಸ್ವವ್ಯಾಪಾರಾದುಪರಮನ್ತೇ? ಕಾನಿ ಚ ಅಸ್ಮಿನ್ ಜಾಗ್ರತಿ, ಜಾಗರಣಂ ಅನಿದ್ರಾವಸ್ಥಾಂ[1] ಸ್ವವ್ಯಾಪಾರಂ ಕುರ್ವನ್ತಿ? ಕತರಃ ಕಾರ್ಯಕರಣಲಕ್ಷಣ ಯೋರೇಷಃ ದೇವಃ ಸ್ವಪ್ನಾನ್ ಪಶ್ಯತಿ? ಸ್ವಪ್ನೋ ನಾಮ ಜಾಗ್ರದ್ದರ್ಶನಾತ್ ನಿವೃತ್ತಸ್ಯ ಜಾಗ್ರದ್ವತ್ ಅನ್ತಃ ಶರೀರೇ ಯದ್ ದರ್ಶನಮ್ । ತತ್ ಕಿಂ ಕಾರ್ಯ ಲಕ್ಷಣೇನ ದೇವೇನ ನಿರ್ವರ್ತ್ಯತೇ, ಕಿಂ ವಾ ಕರಣಲಕ್ಷಣೇನ ಕೇನಚಿತ್? ಇತ್ಯಭಿ ಪ್ರಾಯಃ। ಉಪರತೇ ಚ ಜಾಗ್ರತ್ಸ್ವಪ್ನವ್ಯಾಪಾರೇ ಯತ್ ಪ್ರಸನ್ನಂ ನಿರಾಯಾಸ ಲಕ್ಷಣಮ್ ಅನಾಬಾಧಂ ಸುಖಂ ಕಸ್ಯ ಏತತ್ ಭವತಿ? ತಸ್ಮಿನ್ ಕಾಲೇ ಜಾಗ್ರತ್ಸ್ವಪ್ನ ವ್ಯಾಪಾರಾತ್ ಉಪರತಾಃ ಸನ್ತಃ ಕಸ್ಮಿನ್ ನು ಸರ್ವೇ ಸಮ್ಯಗೇಕೀಭೂತಾಃ ಸಂಪ್ರತಿಷ್ಠಿತಾಃ[2] ಮಧುನಿ ರಸವತ್ ಸಮುದ್ರಪ್ರವಿಷ್ಟನದ್ಯಾದಿವಚ್ಚ ವಿವೇಕಾನರ್ಹಾಃ ಪ್ರತಿಷ್ಠಿತಾ ಭವನ್ತಿ। ಸಂಗತಾಃ ಸಂಪ್ರತಿಷ್ಠಿತಾ ಭವನ್ತಿ ಇತ್ಯರ್ಥಃ—

(ಭಾಷ್ಯಾರ್ಥ)

ಭಗವಂತನೆ, ತಲೆ ಕೈ ಮುಂತಾದವುಗಳೊಡನೆ ಕೂಡಿರುವ ಈ ಪುರುಷನಲ್ಲಿ[3] ಯಾವ ಕರಣಗಳು ನಿದ್ರಿಸುವವು, ನಿದ್ರೆಯನ್ನು ಮಾಡುವವು, ಎಂದರೆ ತಮ್ಮ

---

1. "ಅನಿದ್ರಾವಸ್ಥಾಂ ಸ್ವವ್ಯಾಪಾರಮ್" ಎಂಬ ಪಾಠಕ್ಕಿಂತ ಇದು ಉತ್ತಮ.

2. "ಸಂಪ್ರತಿಷ್ಠಿತಾಃ ಸಮ್ಯಕ್ ಏಕೀಭೂತಾಃ......................ಪ್ರತಿಷ್ಠಿತಾ ಭವನ್ತಿ ಇತ್ಯರ್ಥಃ" ಎಂದು ಭಾಷ್ಯವು ಇದ್ದು ಬರೆಯುವವರು ಈಗಿರುವಂತೆ ಮಾರ್ಪಡಿಸಿರುವಂತೆ ತೋರುತ್ತದೆ.

3. ದೇಹದಲ್ಲಿ.

ಕೆಲಸವನ್ನು ಬಿಟ್ಟಿರುವವು? ಮತ್ತು ಇದರಲ್ಲಿ[1] ಯಾವವು ಎಚ್ಚತ್ತಿರುವವು, ಎಚ್ಚರದ ತಮ್ಮ ವ್ಯಾಪಾರವನ್ನು ಮಾಡುತ್ತಿರುವವು? ಕಾರ್ಯಕರಣರೂಪವಾಗಿರುವ ಈ ಎರಡರಲ್ಲಿ ಸ್ವಪ್ನವನ್ನು ನೋಡುತ್ತಾನಲ್ಲ, ಈ ದೇವನು ಯಾರು? 'ಸ್ವಪ್ನ' ಎಂದರೆ ಎಚ್ಚರವನ್ನು ಕಾಣುವದನ್ನು ಬಿಟ್ಟು ಶರೀರದೊಳಗಡೆಯಲ್ಲಿ ಎಚ್ಚರದಂತೆಯೇ[2] ಕಾಣುವದಲ್ಲ, ಅದು. ಅದನ್ನು ಕಾರ್ಯರೂಪನಾದ ದೇವನು ಮಾಡುವನೋ, ಅಥವಾ ಕರಣರೂಪನಾದ ಯಾವನಾದರೂ (ದೇವನು ಮಾಡುವನೊ)?[3]-ಎಂದಭಿಪ್ರಾಯ. ಮತ್ತು ಎಚ್ಚರಕನಸುಗಳ ಕೆಲಸವು ನಿಲ್ಲಲು ಪ್ರಸನ್ನವಾಗಿ ಯಾವ ಆಯಾಸವೂ, ಇಲ್ಲದೆ,[4] ಯಾವ ಅಡ್ಡಿಯೂ ಇಲ್ಲದೆ[5] ಸುಖವಿದೆಯಲ್ಲ, ಅದು ಯಾರಿಗೆ ಆಗುತ್ತದೆ?[6] ಆ ಕಾಲದಲ್ಲಿ ಎಚ್ಚರಕನಸುಗಳ ಕೆಲಸವನ್ನು ಕೈಬಿಟ್ಟು, ಯಾರಲ್ಲಿ ಸಂಪ್ರತಿಷ್ಠಿತರಾಗುವರು? (ಸಂ ಎಂದರೆ) ಚೆನ್ನಾಗಿ ಒಂದಾಗಿ ಇದ್ದುಕೊಂಡಿರುವರು? ಜೇನುತುಪ್ಪದಲ್ಲಿ ರಸಗಳಂತೆಯೂ ಸಮುದ್ರವನ್ನು ಹೊಕ್ಕ ನದ್ಯಾದಿಗಳಂತೆಯೂ[7] ಬೇರ್ಪಡಿಸುವದಕ್ಕಾಗದಂತೆ ಇದ್ದುಕೊಂಡಿರುವರು, ಸೇರಿಕೊಂಡಿರುವರು?-ಎಂದರ್ಥ.

(ಭಾಷ್ಯ)

೫೪. ನನು ನ್ಯಸ್ತದಾತ್ರಾದಿಕರಣವತ್ ಸ್ವವ್ಯಾಪಾರಾದುಪರತಾನಿ ಪೃಥಕ್ ಪೃಥಗೇವ ಸ್ವಾತ್ಮನಿ ಅವತಿಷ್ಠನ್ತೇ ಇತ್ಯೇತದ್ ಯುಕ್ತಮ್ । ಕುತಃ ಪ್ರಾಪ್ತಿಃ ಸುಷುಪ್ತಪುರುಷಾಣಾಂ ಕರಣಾನಾಂ ಕಸ್ಮಿಂಶ್ಚಿತ್ ಏಕೀಭಾವಗಮನಾಶಙ್ಕಾಯಾಃ ದ್ರಷ್ಟುಃ? ಯುಕ್ತೈವ ತು ಆಶಙ್ಕಾ । ಯತಃ ಸಂಹತಾನಿ ಕರಣಾನಿ ಸ್ವಾಮ್ಯರ್ಥಾನಿ ಪರತನ್ತ್ರಾಣಿ ಚ ಜಾಗ್ರದ್ವಿಷಯೇ । ತಸ್ಮಾತ್ ಸ್ವಾಪೇಽಪಿ ಸಂಹತಾನಾಂ ಪಾರತನ್ತ್ರ್ಯೇಣೈವ ಕಸ್ಮಿಂಶ್ಚಿತ್ ಸಂಗತಿರ್ನ್ಯಾಯ್ಯಾ ಇತಿ । ತಸ್ಮಾತ್ ಆಶಙ್ಕಾನುರೂಪ ಏವ ಪ್ರಶ್ನೋಽಯಮ್ । ಅತ್ರ ತು ಕಾರ್ಯಕರಣಸಂಘಾತೋ ಯಸ್ಮಿಂಶ್ಚ ಪ್ರಲೀನಃ

---

1. ಈ ಶರೀರದಲ್ಲಿ.

2. ಕನಸು ಶರೀರದೊಳಗಡೆಯಲ್ಲಿ ಎಚ್ಚರದನುಭವದ ವಾಸನೆಯಿಂದ ಆಗುವದೆಂಬ ವ್ಯವಹಾರದ ದೃಷ್ಟಿಯಿಂದ ಹಾಕಿದ ಪ್ರಶ್ನೆಯಿದು. ಕನಸು ಎಚ್ಚರವಲ್ಲದಿದ್ದರೂ ಆ ಕಾಲಕ್ಕೆ ಎಚ್ಚರದಂತೆಯೇ ಕಾಣುತ್ತಿರುತ್ತದೆ.

3. ಪೃಥ್ವಿಮುಂತಾದವುಗಳು ಶರೀರವೆಂಬ ಕಾರ್ಯರೂಪವಾಗಿರುವವು; ವಾಗಾದಿಗಳು ಕರಣರೂಪವಾಗಿರುವವು-ಎಂದು (ಭಾ. ಭಾ. ೨೫) ಹಿಂದೆ ಹೇಳಿರುವವುಗಳಲ್ಲಿ ಕನಸನ್ನು ಕಾಣುವದು ಯಾವದು?

4. ದುಃಖದ ಕಲ್ಮಷವಿಲ್ಲದೆ, ವಿಷಯಗಳನ್ನು ಭೋಗಿಸುವ ಆಯಾಸವಿಲ್ಲದೆ.

5. ವಿಷಯಗಳ ಭೋಗದಿಂದುಂಟಾಗುವ ಸುಖಕ್ಕೆ ಅಡ್ಡಿಗಳಿರುವವು.

6. ಸುಖವಾಗಿ ನಿದ್ರಿಸಿದೆನು ಎಂದು ಪ್ರಸಿದ್ಧವಾಗಿರುವ ಸುಖವು ಯಾರಿಗೆ ಆಗುತ್ತದೆ?

7. ಛಾ. ೬-೯, ೬-೧೦-ಇವುಗಳಲ್ಲಿ ಈ ದೃಷ್ಟಾಂತಗಳನ್ನು ವಿವರಿಸಿದೆ.

ಸುಷುಪ್ತಪ್ರಲಯಕಾಲಯೋಃ ತದ್ವಿಶೇಷಂ ಬುಭುತ್ಸೋಃ ಸ ಕೋನು ಸ್ಯಾತ್? ಇತಿ ಕಸ್ಮಿನ್ ಸರ್ವೇ ಸಂಪ್ರತಿಷ್ಠಿತಾ ಭವನ್ತಿ ಇತಿ ||

(ಭಾಷ್ಯಾರ್ಥ)

(ಆಕ್ಷೇಪ):—ಕೆಳಗಿಟ್ಟ ಕುಡುಗೋಲು ಮುಂತಾದ ಸಾಧನಗಳಂತೆ[1] ತಮ್ಮ ತಮ್ಮ ಕೆಲಸವನ್ನು ಬಿಟ್ಟು ಬೇರೆ ಬೇರೆಯಾಗಿಯೇ (ಕರಣಗಳು) ತಮ್ಮ ಸ್ವರೂಪದಲ್ಲಿದ್ದುಕೊಂಡಿರುವವು, ಎಂಬುದು ಯುಕ್ತ. (ಹೀಗಿರುವಲ್ಲಿ) ನಿದ್ರಿಸಿದ ಪುರುಷನ ಕರಣಗಳು ಯಾವದರಲ್ಲಿಯಾದರೂ ಒಂದಾಗುವವೆಂದು ಪ್ರಶ್ನಕಾರನು ಶಂಕಿಸುವದಕ್ಕೆ ಅವಕಾಶವೆಲ್ಲಿಂದ ಬಂತು?

(ಪರಿಹಾರ):—ಈ ಶಂಕೆಯು ಸರಿಯಾದದ್ದೇ, ಏಕೆಂದರೆ ಒಂದರೊಡನೊಂದು ಸೇರಿಕೊಂಡಿರುವ[2] ಕರಣಗಳು (ತಮ್ಮ) ಒಡೆಯನಿಗಾಗಿದ್ದುಕೊಂಡು (ಅವನ) ಅಧೀನವಾಗಿಯೇ ಎಚ್ಚರದಲ್ಲಿರುತ್ತವೆ. ಆದ್ದರಿಂದ ಹೀಗೆ ಒಂದರೊಡನೊಂದು ಸೇರಿಕೊಂಡಿರುವ (ಅವುಗಳು) ನಿದ್ರೆಯಲ್ಲಿಯೂ ಪರಾಧೀನವಾಗಿಯೇ ಯಾವದರಲ್ಲಿಯೋ ಸೇರಿಕೊಂಡೇ ಇರಬೇಕೆಂಬುದು ಯುಕ್ತ. ಆದ್ದರಿಂದ ಶಂಕೆಗೆ ಅನುಗುಣವಾಗಿಯೇ ಈ ಪ್ರಶ್ನೆ (ಬಂದಿರುತ್ತದೆ). ಆದರೆ (ಈ) ಕಾರ್ಯಕರಣಗಳ ಗುಂಪು ಸುಷುಪ್ತಿಪ್ರಲಯಕಾಲಗಳಲ್ಲಿ[3] ಯಾವದರಲ್ಲಿ ಲಯವಾಗಿರುವದೋ ಅದು ಯಾವದಿರಬಹುದು? ಎಂದು ಅದರ ವಿಶೇಷ (ಸ್ವರೂಪ)ವನ್ನು ತಿಳಿಯಬೇಕೆಂಬ ಇಚ್ಛೆಯಿಂದ[4] "ಯಾವದರಲ್ಲಿ ಎಲ್ಲವೂ ಸೇರಿಕೊಂಡಿರುವವು?" ಎಂದು ಕೇಳಿಕೊಂಡಿದೆ.

## ಕರಣಗಳ ನಿದ್ರೆ

**ತಸ್ಮೈ ಸ ಹೋವಾಚ ಯಥಾ ಗಾರ್ಗ್ಯ ಮರೀಚಯೋಽರ್ಕಸ್ಯಾಸ್ತಂ ಗಚ್ಛತಃ ಸರ್ವಾ ಏತಸ್ಮಿಂಸ್ತೇಜೋಮಣ್ಡಲ ಏಕೀಭವನ್ತಿ । ತಾಃ ಪುನಃ ಪುನರುದಯತಃ ಪ್ರಚರನ್ತ್ಯೇವಂ ಹ ವೈ ತತ್ಸರ್ವಂ ಪರೇ ದೇವೇ ಮನಸ್ಯೇಕೀ ಭವತಿ ।**

---

1. ಕುಡುಗೋಲಿನ ಕೆಲಸವಾದಮೇಲೆ ಅಚೆಗಿಟ್ಟರೆ ಒಂದು ಕಡೆ ಇರುವಂತೆ ಕರಣಗಳೂ ಒಂದೊಂದು ಕಡೆ ಇರಲಿ. ಏತರಲ್ಲಿಯಾದರೂ ಏತಕ್ಕೆ ಸೇರಿಕೊಳ್ಳಬೇಕು?–ಎಂದು ಆಕ್ಷೇಪ. "ದಾತ್ರ–ಆದಿ" ಎಂದು ಸಂಧಿಯನ್ನು ಬಿಡಿಸಿಕೊಂಡರೆ ಹುಲ್ಲುಕೊಯ್ಯುವವರು ಮುಂತಾದವರ ಕರಣಗಳಂತೆ" ಎಂದು ಕನ್ನಡಿಸಬೇಕಾಗುವದು.

2. ಮೂರನೆಯ ಪ್ರಶ್ನೆಯ ಅವತರಣಿಕೆಯನ್ನು ನೋಡಿ. ಸಂಹತವಾಗಿರುವ ಕರಣಗಳು ತಾವೇ ಬಿಡಿಯಾಗಿರಲಾರವು ಎಂದು ಭಾವ.

3. ಪ್ರಲಯವನ್ನೂ ಇಲ್ಲಿ ಸೇರಿಸಿಕೊಂಡಿರುವದರ ಕಾರಣವನ್ನು ೬ ನೆಯ ಪ್ರಶ್ನೆಯ ಭಾಷ್ಯದ ಅವತರಣಿಕೆಯಲ್ಲಿ ಕಾಣಬಹುದು.

4. ಆತ್ಮನ ಪರಮಾರ್ಥಸ್ವರೂಪವನ್ನು ತಿಳಿಯಬೇಕೆಂಬ ಇಚ್ಛೆಯಿಂದ. ಇಲ್ಲಿ ವ್ಯಾಖ್ಯಾನಕಾರರ ಅಭಿಪ್ರಾಯವನ್ನು ಪೀಠಿಕೆಯಲ್ಲಿ ವಿಮರ್ಶಿಸಿದೆ.

**ತೇನ ತರ್ಹ್ಯೇಷ ಪುರುಷೋ ನ ಶೃಣೋತಿ ನ ಪಶ್ಯತಿ ನ ಜಿಘ್ರತಿ ನ ರಸಯತೇ ನ ಸ್ಪೃಶತೇ ನಾಭಿವದತೇ ನಾದತ್ತೇ ನಾನನ್ದಯತೇ ನ ವಿಸೃಜತೇ ನೇಯಾಯತೇ ಸ್ವಪಿತೀತ್ಯಾಚಕ್ಷತೇ ॥ ೨ ॥**

೨. ಅವನಿಗೆ ಆತನು ಹೇಳಿದನೇನೆಂದರೆ:—ಎಲೈ ಗಾರ್ಗ್ಯನೆ, ಅರ್ಕನು ಅಸ್ತವಾಗುತ್ತಿರಲು ಹೇಗೆ ಕಿರಣಗಳೆಲ್ಲ ಈ ತೇಜೋಮಂಡಲದಲ್ಲಿ ಒಂದಾಗುವವೋ ಮತ್ತೆ ಉದಯಿಸಲು ಅವು ಮತ್ತೂ ಅವನಿಂದ ಹೇಗೆ ಹೊರಹೊರಡುತ್ತವೆಯೋ ಇದರಂತೆಯೇ ಅದೆಲ್ಲವೂ ಪರಮದೇವನಾದ ಮನಸ್ಸಿನಲ್ಲಿ ಒಂದಾಗಿ ಬಿಡುತ್ತದೆ. ಆದ್ದರಿಂದ ಆಗ ಈ ಪುರುಷನು ಕೇಳುವದಿಲ್ಲ, ಕಾಣುವದಿಲ್ಲ, ಮೂಸುವದಿಲ್ಲ, ಸವಿಯುವದಿಲ್ಲ, ಸೋಕುವದಿಲ್ಲ, ಮಾತನಾಡುವದಿಲ್ಲ, ತೆಗೆದುಕೊಳ್ಳುವದಿಲ್ಲ, ಸುಖಪಡುವದಿಲ್ಲ, ಬಿಡುವದಿಲ್ಲ, ಹೋಗುವದಿಲ್ಲ. "ನಿದ್ರಿಸುತ್ತಿದಾನೆ" ಎಂದು ಹೇಳುತ್ತಾರೆ.

(ಭಾಷ್ಯ)

ಅಸ್ಮೈ ತಸ್ಮೈ ಸಃ ಹ ಉವಾಚ ಆಚಾರ್ಯಃ। ಶೃಣು ಹೇ ಗಾರ್ಗ್ಯ ಯತ್ತ್ವಯಾ ಪೃಷ್ಟಮ್। ಯಥಾ ಮರೀಚಯಃ ರಶ್ಮಯಃ ಅರ್ಕಸ್ಯ ಆದಿತ್ಯಸ್ಯ ಅಸ್ತಮ್ ಅದರ್ಶನಂ ಗಚ್ಛತಃ ಸರ್ವಾಃ ಅಶೇಷತಃ ಏತಸ್ಮಿನ್ ತೇಜೋಮಣ್ಡಲೇ ತೇಜೋರಾಶಿರೂಪೇ ಏಕೀಭವನ್ತಿ, ವಿವೇಕಾನರ್ಹತ್ವಮ್ ಅವಿಶೇಷತಾಂ ಗಚ್ಛನ್ತಿ ಮರೀಚಯಃ। ತಸ್ಯೈವ ಅರ್ಕಸ್ಯ ತಾಃ[1] ಪುನಃ ಪುನರುದಯತಃ ಉದ್ಗಚ್ಛತಃ ಪ್ರಚರನ್ತಿ ವಿಕೀರ್ಯನ್ತೇ। ಯಥಾಯಂ ದೃಷ್ಟಾನ್ತಃ, ಏವಂ ಹ ವೈ ತತ್ ಸರ್ವಂ ವಿಷಯೇನ್ದ್ರಿಯಾದಿಜಾತಂ ಪರೇ ಪ್ರಕೃಷ್ಟೇ ದೇವೇ ದ್ಯೋತನವತಿ ಮನಸಿ। ಚಕ್ಷುರಾದಿದೇವಾನಾಂ ಮನಸ್ತನ್ತ್ರತ್ವಾತ್ ಪರೋ ದೇವೋ ಮನಃ। ತಸ್ಮಿನ್ ಸ್ವಪ್ನಕಾಲೇ ಏಕೀಭವತಿ ಮಣ್ಡಲೇ ಮರೀಚಿವತ್ ಅವಿಶೇಷತಾಂ ಗಚ್ಛತಿ। ಜಿಜಾಗರಿಷೋಶ್ಚ ರಶ್ಮಿವತ್ ಮಣ್ಡಲಾತ್ ಮನಸ ಏವ ಪ್ರಚರನ್ತಿ ಸ್ವವ್ಯಾಪಾರಾಯ ಪ್ರತಿಷ್ಠನ್ತೇ। ಯಸ್ಮಾತ್ ಸ್ವಪ್ನಕಾಲೇ ಶ್ರೋತ್ರಾದೀನಿ ಶಬ್ದಾದ್ಯುಪಲಬ್ಧಿಕರಣಾನಿ ಮನಸಿ ಏಕಾಭೂತಾನೀವ ಕರಣವ್ಯಾಪಾರಾತ್ ಉಪರತಾನಿ। ತೇನ ತಸ್ಮಾತ್ ತರ್ಹಿ ತಸ್ಮಿನ್ ಸ್ವಾಪಕಾಲೇ ಏಷ ದೇವದತ್ತಾದಿಲಕ್ಷಣಃ ಪುರುಷೋ ನ ಶೃಣೋತಿ, ನ ಪಶ್ಯತಿ, ನ ಜಿಘ್ರತಿ, ನ ರಸಯತೇ, ನ ಸ್ಪೃಶತೇ, ನಾಭಿವದತೇ, ನಾದತ್ತೇ, ನಾನನ್ದಯತೇ, ನ ವಿಸೃಜತೇ, ನೇಯಾಯತೇ "ಸ್ವಪಿತಿ" ಇತಿ ಆಚಕ್ಷತೇ ಲೌಕಿಕಾಃ ॥

1. 'ತಸ್ಯೈವ ಅರ್ಕಸ್ಯ ತಾಃ' ಎಂಬ ಗ್ರಂಥಭಾಗವು ವಾ॥ ಪಾಠದಲ್ಲಿ ಸ್ವಲ್ಪ ವ್ಯತ್ಯಸ್ತವಾಗಿದೆ.

(ಭಾಷ್ಯಾರ್ಥ)

ಅವನಿಗೆ ಆ ಆಚಾರ್ಯನು ಹೇಳಿದನೆಂದರೆ:—ಎಲೈ ಗಾರ್ಗ್ಯನೆ, ನೀನು ಕೇಳಿದೆಯಲ್ಲ (ಅದನ್ನು ಹೇಳುತ್ತೇನೆ) ಕೇಳು. ಹೇಗೆ ಅರ್ಕನು ಸೂರ್ಯನು ಅಸ್ತವನ್ನು ಕಣ್ಮರೆಯಾಗುವಿಕೆಯನ್ನು ಹೊಂದುತ್ತಿರಲು, ಕಿರಣಗಳೆಲ್ಲವೂ, ರಶ್ಮಿಗಳು ಒಂದೂ ಉಳಿಯದಂತೆ ಈ ತೇಜೋಮಂಡಲದಲ್ಲಿ ಬೆಳಕಿನ ರಾಶಿಯ ಸ್ವರೂಪವಾದ (ಸೂರ್ಯನಲ್ಲಿ) ಒಂದಾಗುವವೋ, ಎಂದರೆ (ಹೇಗೆ ಆ) ಕಿರಣಗಳು ಬಿಡಿಸಿ ಅರಿತುಕೊಳ್ಳುವದಕ್ಕಾಗದಂತೆ (ತಮ್ಮ) ವಿಶೇಷರೂಪವಿಲ್ಲದಂತೆ ಆಗುವವೋ, ಮತ್ತು ಅದೇ ಸೂರ್ಯನು ಮತ್ತೆ ಉದಯಿಸಲು ಮೇಲಕ್ಕೆ ಬರಲು ಆ (ಕಿರಣಗಳು) ಅವನಿಂದ ಹೇಗೆ ಹೊರಟುಬರುವವೋ ಬೇರೆ ಬೇರೆಯಾಗಿ ಚದರುವವೋ ಈ ದೃಷ್ಟಾಂತವು ಹೇಗೋ ಇದರಂತೆಯೇ ಇದೆಲ್ಲವೂ ಎಂದರೆ ವಿಷಯಗಳು, ಇಂದ್ರಿಯಗಳು—ಮುಂತಾದವುಗಳ ಸಮೂಹವು ಪರಮನಾದ ಹೆಚ್ಚಿನ ದೇವನಾದ ಪ್ರಕಾಶಮಯವಾಗಿರುವ ಮನಸ್ಸಿನಲ್ಲಿ, ಚಕ್ಷುಸ್ಸೇ ಮುಂತಾದ ದೇವತೆಗಳು ಮನಸ್ಸಿನ ಅಧೀನವಾಗಿರುವದರಿಂದ[1] ಮನಸ್ಸು ಪರಮ ದೇವನು; (ಆದರಲ್ಲಿ) ಸ್ವಪ್ನಕಾಲದಲ್ಲಿ ಒಂದಾಗಿಬಿಡುತ್ತದೆ[2] ಎಂದರೆ ಮಂಡಲದಲ್ಲಿಕಿರಣಗಳು ಹೇಗೋ ಹಾಗೆ (ತನ್ನ) ವಿಶೇಷಸ್ವರೂಪವಿಲ್ಲದ್ದಾಗುವದು; ಮತ್ತು ಎಚ್ಚರವಾಗುತ್ತಲೂ ಮಂಡಲದಿಂದ ಕಿರಣಗಳು (ಹೊರಟು ಬರುವಂತೆ) :ಮನಸ್ಸಿನಿಂದಲೇ ಹೊರಕ್ಕೆ ಬರುತ್ತದೆ, ತನ್ನ ಕೆಲಸವನ್ನು ಮಾಡುವದಕ್ಕೆ ಹೊರಡುತ್ತದೆ.

ಹೀಗೆ ಸ್ವಪ್ನಕಾಲದಲ್ಲಿ ಶಬ್ದವೇ ಮುಂತಾದವುಗಳನ್ನು ಅರಿಯುವದಕ್ಕೆ ಕರಣಗಳಾಗಿರುವ ಶ್ರೋತ್ರಾದಿಗಳು ಮನಸ್ಸಿನಲ್ಲಿ ಒಂದಾದಂತೆ[3] ಕರಣದ ಕೆಲಸವನ್ನು ಬಿಟ್ಟಿರುತ್ತವೆಯಷ್ಟೆ; ಆದ್ದರಿಂದ ಆ ಕಾರಣದಿಂದ ಆಗ ಆ ಸ್ವಪ್ನಕಾಲದಲ್ಲಿ ಈ ದೇವ

---

1. ಮನಸ್ಸಿನ ಸಂಬಂಧವಿಲ್ಲದಿದ್ದರೆ ಚಕ್ಷುರಾದಿಗಳು ಕೆಲಸಮಾಡಲಾರವು.

2. ಚಕ್ಷುರಾದಿಗಳು ಮನಸ್ಸಿನ ಬಲದಿಂದ ಕೆಲಸಮಾಡುತ್ತಿರುತ್ತವೆ. ಕನಸಿನಲ್ಲಿ ಅವುಗಳ ವ್ಯಾಪಾರವು ನಿಂತು ಮನಸ್ಸೊಂದೇ ಕೆಲಸಮಾಡುತ್ತಿರುವದರಿಂದ ಮನಸ್ಸಿನಲ್ಲಿ ಒಂದಾಗಿ ಬಿಡುವವು ಎಂದು ಹೇಳಿದೆ. ಕನಸಿನಲ್ಲಿ ಇಂದ್ರಿಯಗಳಾಗಿ ತೋರುವವು ವಾಸನಾಮಯವಾಗಿರುವದರಿಂದ ಆಗ ನಿಜವಾದ ಇಂದ್ರಿಯಗಳ ವ್ಯಾಪಾರವಿರುವದಿಲ್ಲ. ಇಲ್ಲಿ ವೃತ್ತಿಲಯವನ್ನೇ ಹೇಳಿದೆ ಎಂಬುದಕ್ಕೆ ಸೂ. ಭಾ. ೪-೨-೧, ೪-೨-೨, ೪-೨-೩-ಇವನ್ನು ನೋಡಿ. ಇಲ್ಲಿರುವ ಕನಸಿನ ವರ್ಣನೆಯು ವ್ಯವಹಾರದೃಷ್ಟಿಯಿಂದ ಎಂಬುದನ್ನು ನೆನಪಿಡಬೇಕು.

3. ಎಚ್ಚರದಲ್ಲಿದ್ದ ಇಂದ್ರಿಯಗಳು ತಮ್ಮ ತಮ್ಮ ಎಚ್ಚರದ ವಿಷಯಗಳನ್ನು ಕಾಣುವದಿಲ್ಲವಾದ್ದರಿಂದ ಮನಸ್ಸಿನಲ್ಲಿ ಒಂದಾದಂತೆ; ನಿಜವಾಗಿ ಅವು ಆತ್ಮನಲ್ಲಿಯೇ ಒಂದಾಗಿರುವವು; ಏಕೆಂದರೆ ಕನಸಿನಲ್ಲಿ ಅವುಗಳಾಗಲಿ ವಿಷಯಗಳಾಗಲಿ ಇರುವದೇ ಇಲ್ಲ; ಆದರೆ ಈ ಪರಮಾರ್ಥದೃಷ್ಟಿಯನ್ನು ಇಲ್ಲಿ ಉಪಯೋಗಿಸಿಲ್ಲ.

ದತ್ತನೇ ಮುಂತಾದ ಪುರುಷನು (ಏನೊಂದೂ) ಕೇಳುವದಿಲ್ಲ, ಕಾಣುವದಿಲ್ಲ, ಮೂಸುವದಿಲ್ಲ, ಸವಿಯುವದಿಲ್ಲ, ಸೋಕುವದಿಲ್ಲ, ಮಾತನಾಡುವದಿಲ್ಲ, ತೆಗೆದುಕೊಳ್ಳುವದಿಲ್ಲ, ಸುಖಪಡುವದಿಲ್ಲ, "(ಇವನು) ನಿದ್ರಿಸುತ್ತಿದಾನೆ" ಎಂದು ಜನರು ಆಡಿಕೊಳ್ಳುತ್ತಾರೆ.

## ಪ್ರಾಣಗಳ ಎಚ್ಚರ-ಪ್ರಾಣಾಗ್ನಿಹೋತ್ರಭಾವನೆ

**ಪ್ರಾಣಾಗ್ನಯ ಏವೈತಸ್ಮಿನ್ ಪುರೇ ಜಾಗ್ರತಿ । ಗಾರ್ಹಪತ್ಯೋ ಹ ವಾ ಏಷೋಽಪಾನೋ ವ್ಯಾನೋಽನ್ವಾಹಾರ್ಯಪಚನೋ ಯದ್ಗಾರ್ಹಪತ್ಯಾತ್ ಪ್ರಣೀಯತೇ ಪ್ರಣಯನಾದಾಹವನೀಯಃ ಪ್ರಾಣಃ ॥ ೩ ॥**

೩. ಈ ಪುರದಲ್ಲಿ ಪ್ರಾಣಾಗ್ನಿಗಳೇ ಎಚ್ಚತ್ತಿರುತ್ತವೆ. ಈ ಅಪಾನವೇ ಗಾರ್ಹಪತ್ಯವು, ವ್ಯಾನವು ಅನ್ವಾಹಾರ್ಯಪಚನವು. ಪ್ರಣಯನವಾದ ಗಾರ್ಹಪತ್ಯದಿಂದ ತೆಗೆದುಕೊಂಡದ್ದಾದ್ದರಿಂದ ಪ್ರಾಣವು ಆಹವನೀಯವು.

**(ಭಾಷ್ಯ)**

**೫೬. ಸುಪ್ತವತ್ಸು ಶ್ರೋತ್ರಾದಿಷು ಕರಣೇಷು ಏತಸ್ಮಿನ್ ಪುರೇ ನವದ್ವಾರೇ ದೇಹೇ ಪ್ರಾಣಾಗ್ನಯಃ ಪ್ರಾಣಾದಿಪಞ್ಚ ವಾಯವಃ ಅಗ್ನಯ ಇವ ಅಗ್ನಯಃ ಜಾಗ್ರತಿ ।** ಅಗ್ನಿಸಾಮಾನ್ಯಂ ಹಿ ಆಹ[1] । ಗಾರ್ಹಪತ್ಯೋ ಹ ವಾ ಏಷಃ ಅಪಾನಃ । ಕಥಮಿತಿ ! ಆಹ । ಯಸ್ಮಾತ್ ಗಾರ್ಹಪತ್ಯಾತ್ ಅಗ್ನೇಃ ಅಗ್ನಿಹೋತ್ರಕಾಲೇ[2] ಇತರಃ ಅಗ್ನಿಃ ಆಹವನೀಯಃ ಪ್ರಣೀಯತೇ । ಪ್ರಣಯನಾತ್ ಪ್ರಣೀಯತೇ ಅಸ್ಮಾತ್ ಇತಿ ಪ್ರಣಯನಃ । ಗಾರ್ಹಪತ್ಯೋಽಗ್ನಿಃ । ತಥಾ ಸುಪ್ತಸ್ಯ ಅಪಾನವೃತ್ತೇಃ ಪ್ರಣೀಯತೇ ಇವ ಪ್ರಾಣೋ ಮುಖನಾಸಿಕಾಭ್ಯಾಂ ಸಂಚರತಿ । ಅತಃ ಆಹವನೀಯಸ್ಥಾನೀಯಃ ಪ್ರಾಣಃ । ವ್ಯಾನಸ್ತು ಹೃದಯಾತ್ ದಕ್ಷಿಣಸುಷಿರದ್ವಾರೇಣ ನಿರ್ಗಮಾತ್ ದಕ್ಷಿಣದಿಕ್ಸಂಬನ್ಧಾತ್ ಅನ್ವಾಹಾರ್ಯಪಚನಃ ದಕ್ಷಿಣಾಗ್ನಿಃ ॥

**(ಭಾಷ್ಯಾರ್ಥ)**

ಶ್ರೋತ್ರಾದಿಕರಣಗಳು ನಿದ್ರಿಸಲು ಈ ಒಂಭತ್ತು ಬಾಗಿಲಿನ[3] ಪುರವಾದ ದೇಹದಲ್ಲಿ ಪ್ರಾಣಾಗ್ನಿಗಳೇ, ಅಗ್ನಿಗಳಂತಿರುವದರಿಂದ ಅಗ್ನಿಗಳಾಗಿರುವ ಪ್ರಾಣವೇ

---

1. "ಆಹ" ಎಂಬ ಮಾತು ವಾ॥ ಪಾಠದಲ್ಲಿ ಹೆಚ್ಚು.
2. "ಕಾಲವನ್" ಎಂದು ಆ॥ ಪಾಠ.
3. ಗೀತೆ ೫-೧೩ ರ ಸೂಚನೆ.

ಮುಂತಾದ ಐದು ವಾಯುಗಳೇ ಎಚ್ಚತ್ತಿರುತ್ತವೆ.[1] ಅಗ್ನಿಗಳಿಗೂ (ಅವಕ್ಕೂ) ಹೋಲಿಕೆಯೇನೆಂದರೆ (ಶ್ರುತಿ) ಹೇಳುತ್ತದೆ:—ಈ ಅಪಾನವೇ **ಗಾರ್ಹಪತ್ಯವು.** ಹೇಗೆಂದರೆ (ಶ್ರುತಿ) ಹೇಳುತ್ತದೆ:—ಅಗ್ನಿಹೋತ್ರಕಾಲದಲ್ಲಿ ಗಾರ್ಹಪತ್ಯವೆಂಬ ಪ್ರಣಯನವಾದ ಅಗ್ನಿಯಿಂದ ಇನ್ನೊಂದಾದ ಆಹವನೀಯವೆಂಬ ಅಗ್ನಿಯನ್ನು ತೆಗೆದುಕೊಳ್ಳುತ್ತಾರೆ; ಇದರಿಂದ ತೆಗೆದುಕೊಳ್ಳುತ್ತಾರೆ ("ಪ್ರಣೀಯತೇ"); ಆದ್ದರಿಂದ ಗಾರ್ಹಪತ್ಯವೆಂಬ ಅಗ್ನಿಯು ಪ್ರಣಯನವೆನಿಸುತ್ತದೆ. ಇದರಂತೆ ನಿದ್ರಿಸಿರುವಾತನ ಅಪಾನವೃತ್ತಿಯಿಂದ ತೆಗೆದುಕೊಂಡು ಬಂದರೋ ಎಂಬಂತೆ ಪ್ರಾಣವು ಮುಖ, ಮೂಗು-ಇವುಗಳ ಮೂಲಕವಾಗಿ ಸಂಚರಿಸುತ್ತದೆ; ಆದ್ದರಿಂದ ಪ್ರಾಣವು **ಆಹವನೀಯ**ವಿದ್ದಂತೆ ಇದೆ.[2] ವ್ಯಾನವಾದರೋ **ಅನ್ವಾಹಾರ್ಯಪಚನವು;** ಹೃದಯದ ಬಲರಂಧ್ರದ ಮೂಲಕವಾಗಿ ಹೊರಟುಬರುತ್ತಿರುವದರಿಂದ ದಕ್ಷಿಣದಿಕ್ಕಿನ ಸಂಬಂಧವುಳ್ಳದ್ದಾಯಿತು[3]. ಆದ್ದರಿಂದ ಅನ್ವಾಹಾರ್ಯಪಚನವು, ಎಂದರೆ ದಕ್ಷಿಣಾಗ್ನಿ ||

**ಯದುಚ್ಛ್ವಾಸನಿಃಶ್ವಾಸಾವೇತಾವಾಹುತೀ ಸಮಂ ನಯತೀತಿ ಸ ಸಮಾನಃ । ಮನೋ ಹ ವಾವ ಯಜಮಾನ ಇಷ್ಟಫಲಮೇವೋದಾನಃ ಸ ಏನಂ ಯಜಮಾನಮಹರಹರ್ಬ್ರಹ್ಮ ಗಮಯತಿ ॥ ೪ ॥**

೪. ಉಚ್ಛ್ವಾಸನಿಃಶ್ವಾಸಗಳು ಎಂಬೀ ಆಹುತಿಗಳನ್ನು ಸಮವಾಗಿ ಒಯ್ಯುತ್ತಿರುವದರಿಂದ ಅದು ಸಮಾನವು, ಮನಸ್ಸೇ ಯಜಮಾನನು, ಇಷ್ಟಫಲವೇ ಉದಾನವು. ಅದು ಈ ಯಜಮಾನನನ್ನು ದಿನದಿನವೂ ಬ್ರಹ್ಮವನ್ನು ಹೊಂದಿಸುತ್ತದೆ.

(ಭಾಷ್ಯ)

೫೭. ಅತ್ರ ಚ ಹೋತಾ ಅಗ್ನಿಹೋತ್ರಸ್ಯ ಯತ್ ಯಸ್ಮಾತ್ ಉಚ್ಛ್ವಾಸನಿಃಶ್ವಾಸೌ ಅಗ್ನಿಹೋತ್ರಾಹುತೀ ಇವ ನಿತ್ಯಂ ದ್ವಿತ್ವಸಾಮಾನ್ಯಾದೇವ ತು ಏತೌ

---

1. ಕೋಟೆಯೊಳಗಿರುವ ಊರಿನವರು ಎಲ್ಲರೂ ಮಲಗಿರುವಾಗ ಕೋಟೆಯನ್ನು ನಗರರಕ್ಷಕರು ಕಾಪಾಡುವಂತೆ ಪ್ರಾಣಗಳು ಎಚ್ಚತ್ತಿದ್ದು ಶರೀರವನ್ನು ಕಾಪಾಡಿಕೊಂಡಿರುವವು-ಎಂಬ ಭಾವವು "ಪುರ"ವೆಂಬ ಶಬ್ದದಿಂದ ಹೊರಡುತ್ತದೆ. ನಿದ್ರೆಯ ಕಾಲದಲ್ಲಿ ಪ್ರಾಣಗಳು ರಕ್ಷಿಸುತ್ತಿರುವವೆಂಬುದಕ್ಕೆ ಬೃ. ೪-೩-೧೨ ನೋಡಿರಿ.

2. ಅಪಾನವು ಗಾರ್ಹಪತ್ಯವೆಂಬುದನ್ನು ತಿಳಿಸುವದಕ್ಕೆ ಕಾರಣವನ್ನು ಕೊಡುವದಕ್ಕೋಸ್ಕರ ಮುಂದೆ ಇರುವ ವಾಕ್ಯವನ್ನು ಕೈಬಿಟ್ಟು "ಯದ್ಗಾರ್ಹಪತ್ಯಾತ್" ಎಂಬ ವಾಕ್ಯಕ್ಕೆ ಮೊದಲು ಭಾಷ್ಯವನ್ನು ಬರೆದಿರುತ್ತಾರೆ.

3. ಛಾ. ೩-೧೩-೩ ರಲ್ಲಿ ವ್ಯಾನವು ಹೃದಯದ ಬಲರಂಧ್ರದಿಂದ ಹೊರಟುಬರುತ್ತಿರುವದೆಂದು ಹೇಳಿದೆ.

ಆಹುತೀ ಸಮಂ ಸಾಮ್ಯೇನ ಶರೀರಸ್ಥಿತಿಭಾವಾಯ ನಯತಿ ಯೋ ವಾಯುಃ ಅಗ್ನಿಸ್ಥಾನೀಯೋಽಪಿ ಹೋತಾ ಚ ಆಹುತ್ಯೋರ್ನೇತೃತ್ವಾತ್ । ಕೋಽಸೌ ? ಸ ಸಮಾನಃ । ಅತಶ್ಚ ವಿದುಷಃ ಸ್ವಾಪೋಽಪಿ ಅಗ್ನಿಹೋತ್ರಹವನಮೇವ । ತಸ್ಮಾತ್ ವಿದ್ವಾನ್ ನಾಕರ್ಮೀತ್ಯೇವಂ ಮನ್ತವ್ಯಃ ಇತ್ಯಭಿಪ್ರಾಯಃ । "ಸರ್ವದಾ ಸರ್ವಾಣಿ ಭೂತಾನಿ ಚಿನ್ವನ್ತ್ಯಪಿ ಸ್ವಪತೇ"[1] (ಶ. ಬ್ರಾ. ೧೦-೫-೩-೧೨) ಇತಿ ಹಿ ವಾಜಸನೇಯಕೇ ॥

(ಭಾಷ್ಯಾರ್ಥ)

ಇಲ್ಲಿ ಉಚ್ಛ್ವಾಸನಿಃಶ್ವಾಸವೆಂಬೀ ಎರಡು ಅಗ್ನಿಹೋತ್ರದ ಆಹುತಿಗಳಂತೆ ಯಾವಾಗಲೂ ಎರಡೆಂಬ ಹೋಲಿಕೆಯಿರುವದರಿಂದಲೇ[2] (ಆಹುತಿಗಳಾಗಿರುವ) ಈ ಎರಡು ಆಹುತಿಗಳನ್ನು ಸಮವಾಗಿ ಎಂದರೆ ಸಮತೆಯಿಂದ ಶರೀರವು ಇದ್ದುಕೊಂಡಿರುವದಕ್ಕೋಸ್ಕರ ಒಯ್ಯುತ್ತಿರುವ ವಾಯುವಿದೆಯಲ್ಲ, ಆ ಕಾರಣದಿಂದ ಅದು ಅಗ್ನಿಹೋತ್ರದ ಹೋಮಕರ್ತೃವಾಗಿರುತ್ತದೆ. (ಅದು) ಅಗ್ನಿಯ ಸ್ಥಾನದಲ್ಲಿಯೂ ಇರುವದಾದರೂ[3] ಹೋಮಕರ್ತೃವು. ಏಕೆಂದರೆ ಅದು ಆಹುತಿಗಳೆರಡನ್ನೂ (ಅವನಂತೆ) ಒಯ್ಯುತ್ತದೆ. ಅದು[4] ಯಾವದು ? ಎಂದರೆ ಅದು ಸಮಾನ(ವಾಯು)ವು. **ಆದ್ದರಿಂದ ಜ್ಞಾನಿಯ ನಿದ್ರೆಯೂ ಅಗ್ನಿಹೋತ್ರದ ಹೋಮವೇ ;** ಆದ್ದರಿಂದ **ಜ್ಞಾನಿಯು ಅಕರ್ಮಿ ಎಂದು ಭಾವಿಸಬಾರದು ಎಂದು ಭಾವ.**[5] ನಿದ್ರೆಮಾಡುತ್ತಿರುವ ಈತನಿಗಾಗಿ ಎಲ್ಲಾ ಪ್ರಾಣಿಗಳೂ ಯಾವಾಗಲೂ "ಚಯನಮಾಡುತ್ತಿರುವವು" (ಶ. ಬ್ರಾ. ೧೦-೫-೩-೧೨) ಎಂದಲ್ಲವೆ, **ವಾಜಸನೇಯಕ** (ಬ್ರಾಹ್ಮಣದಲ್ಲಿ)ರುವದು ?

---

1. ಈ ವಾಕ್ಯವನ್ನು ಸೂ. ಭಾ. ೩-೩-೪೪ ರಲ್ಲಿ ಉದಾಹರಿಸಿದೆ; ಅಲ್ಲಿಯ ಪಾಠವನ್ನು ಅಂಗೀಕರಿಸಿ "ಚಿನ್ವನ್ತಿ" ಎಂದು ಇಲ್ಲಿಯೂ ಬರೆದುಕೊಂಡಿರುತ್ತೇವೆ.

2. ಉಚ್ಛ್ವಾಸನಿಃಶ್ವಾಸಗಳನ್ನು ಆಹುತಿಗಳೆಂದು ಭಾವಿಸುವದಕ್ಕೆ ಅವು ಎರಡೆಂಬುದೇ ಹೋಲಿಕೆ.

3. ಪ್ರಾಣಾಗ್ನಿಗಳು ಎಂಬ ಹೋಲಿಕೆಯಲ್ಲಿ ಅಗ್ನಿಯಾಗಿರುವ ಸಮಾನವು ಇಲ್ಲಿ ಆಹುತಿಗಳನ್ನು ಒಯ್ಯುವದರಿಂದ ಹೋತೃವೂ, (ಹೋಮಕರ್ತೃವೂ) ಆಗಿರುತ್ತದೆ-ಎಂದು ಭಾವ.

4. ಆ ಹೋಮಕರ್ತೃ ಯಾವದು ? ಉಚ್ಛ್ವಾಸನಿಃಶ್ವಾಸಗಳನ್ನು ಸಮವಾಗಿಟ್ಟುಕೊಂಡು ಇರುವ ಪ್ರಾಣಭೇದವು ಯಾವದು ?

5. ಪ್ರಾಣಗಳೈದೂ ಅಗ್ನಿಹೋತ್ರಕ್ಕೆ ಬೇಕಾದ ಅಗ್ನಿಗಳಂತೆ, ಹೋಮಕರ್ತೃವಿನಂತೆ ಇರುವದರಿಂದ ಅವೂ ಅಗ್ನಿಹೋತ್ರವನ್ನೇ ಮಾಡುತ್ತಿರುವವು-ಎಂದು ಭಾವಿಸುವ ಉಪಾಸಕನು ಅಷ್ಟರಿಂದಲೇ ಕರ್ಮವನ್ನು ಮಾಡಿದಂತೆ ಆಗುತ್ತದೆ ಎಂದು ಭಾವ. ಇಲ್ಲಿ ಉಪಾಸಕನನ್ನು ಹೊಗಳಿದ್ದರೂ ಜ್ಞಾನಪ್ರಕರಣದಲ್ಲಿರುವ ಉಪಾಸನೆಗೆ ಕ್ರಮಮುಕ್ತಿಯೇ ಫಲವಾಗಿರುವದರಿಂದ ಇದು ಜ್ಞಾನದ [illegible] ಆಗಿರುತ್ತದೆ ಎಂದು ತಿಳಿಯಬೇಕು.

(ಭಾಷ್ಯ)

೫೮. ಅತ್ರ ಹಿ ಜಾಗ್ರತ್ಸು ಪ್ರಾಣಾಗ್ನಿಷು ಉಪಸಂಹೃತ್ಯ ಬಾಹ್ಯಕರಣಾನಿ ವಿಷಯಾಂಶ್ಚ ಅಗ್ನಿಹೋತ್ರಫಲಮಿವ ಸ್ವರ್ಗಂ ಬ್ರಹ್ಮ ಜಿಗಮಿಷುಃ[1] ಮನಃ ಹ ವಾವ ಯಜಮಾನಃ ಜಾಗರ್ತಿ। ಯಜಮಾನವತ್ ಕಾರ್ಯಕರಣೇಷು ಪ್ರಾಧಾನ್ಯೇನ ಸಂವ್ಯವಹಾರಾತ್ ಸ್ವರ್ಗಮಿವ ಬ್ರಹ್ಮ ಪ್ರತಿ ಪ್ರಸ್ಥಿತತ್ವಾತ್ ಯಜಮಾನೋ ಮನಃ ಕಲ್ಪ್ಯತೇ । ಇಷ್ಟಫಲಂ ಯಾಗಫಲಮೇವ ಉದಾನೋ ವಾಯುಃ । ಉದಾನ ನಿಮಿತ್ತತ್ವಾತ್ ಇಷ್ಟಫಲಪ್ರಾಪ್ತೇಃ। ಕಥಮ್ ? ಸಃ ಉದಾನಃ ಏನಂ[2] ಮನಆಖ್ಯಂ ಯಜಮಾನಂ ಸ್ವಪ್ನವೃತ್ತಿರೂಪಾದಪಿ ಪ್ರಚ್ಯಾವ್ಯ ಅಹರಹಃ ಸುಷುಪ್ತಿಕಾಲೇ ಸ್ವರ್ಗಮಿವ ಬ್ರಹ್ಮ ಅಕ್ಷರಂ ಗಮಯತಿ। ಅತೋ ಯಾಗಫಲಸ್ಥಾನೀಯ ಉದಾನಃ ॥

(ಭಾಷ್ಯಾರ್ಥ)

ಇಲ್ಲಿ[3] ಪ್ರಾಣಾಗ್ನಿಗಳು ಎಚ್ಚತ್ತಿರುವಲ್ಲಿ ಹೊರಗಿನ ಕರಣಗಳನ್ನೂ ವಿಷಯಗಳನ್ನೂ ಉಪಸಂಹಾರಮಾಡಿಕೊಂಡು ಅಗ್ನಿಹೋತ್ರದ ಫಲವಾದ ಸ್ವರ್ಗದಂತಿರುವ ಬ್ರಹ್ಮವನ್ನು ಹೋಗಿ ಸೇರಲಿರುವ ಮನಸ್ಸೆಂಬ ಯಜಮಾನನು[4] (ತಾನು) ಎಚ್ಚತ್ತಿರುತ್ತಾನೆ. ಯಜಮಾನನಂತೆ ಕಾರ್ಯಕರಣಗಳ ವಿಷಯದಲ್ಲಿ ಮುಖ್ಯವಾಗಿ ವ್ಯವಹರಿಸುತ್ತಿರುವದರಿಂದಲೂ (ಅಗ್ನಿಹೋತ್ರಿಯು) ಸ್ವರ್ಗಕ್ಕೆ (ಹೋಗಲಿರುವಂತೆ) ಬ್ರಹ್ಮವನ್ನು ಕುರಿತು ಹೊರಟಿರುವದರಿಂದಲೂ ಮನಸ್ಸನ್ನು ಯಜಮಾನನು ಎಂದು ಕಲ್ಪಿಸಿರುತ್ತದೆ. ಇಷ್ಟಫಲವೇ ಎಂದರೆ (ಈ) ಯಾಗದ ಫಲವೇ ಉದಾನವಾಯು. ಏಕೆಂದರೆ ಇಷ್ಟಫಲವು ದೊರಕುವದು ಉದಾನ(ವಾಯುವಿನ) ನಿಮಿತ್ತದಿಂದ. ಅದು ಹೇಗೆ? ಎಂದರೆ ಆ ಉದಾನ (ವಾಯುವು) ಈ ಮನಸ್ಸೆಂಬ ಯಜಮಾನನನ್ನು ಸ್ವಪ್ನವೃತ್ತಿಯ ರೂಪದಿಂದಲೂ ತಪ್ಪಿಸಿ ದಿನದಿನವೂ (ಅಗ್ನಿಹೋತ್ರಿಯನ್ನು) ಸ್ವರ್ಗಕ್ಕೆ (ಒಯ್ಯು)ವಂತೆ ಬ್ರಹ್ಮವನ್ನು ಎಂದರೆ ಅಕ್ಷರವನ್ನು ಪಡೆಯಿಸುತ್ತಿರುವದು.[5] ಆದ್ದರಿಂದ ಉದಾನವು ಯಾಗದ ಫಲದಂತೆ ಇರುತ್ತದೆ.

---

1. " ಜಿಗಮಿಷುಃ " ಎಂದೇ ಅಚ್ಚಿನ ಪುಸ್ತಕಗಳಲ್ಲಿದೆ. ಮನಸ್ಸಿಗೆ ವಿಶೇಷಣವಾಗಿರುವದರಿಂದ ಜಿಗಮಿಷು ಎಂದಿದ್ದರೇ ಉತ್ತಮವೆಂದು ತೋರುವದು.

2. ಇದು ಆ॥ ಪಾಠದ ಭಾಷ್ಯದಲ್ಲಿ ಬಿಟ್ಟುಹೋಗಿದೆ.

3. ಸ್ವಪ್ನದಲ್ಲಿ.

4. ಯಾಗಕರ್ತನು.

5. ಬ್ರಹ್ಮಪ್ರಾಪ್ತಿಯಿಂದ ಆಗುವ ಆನಂದವು ಈ ಉಪಾಸಕನಿಗೆ ಉದಾನದ ಮೂಲಕ ದೊರೆಯುತ್ತದೆ.

(ಭಾಷ್ಯ)

೫೫. ಏವಂವಿದುಷಃ ಶ್ರೋತ್ರಾದ್ಯುಪರಮಕಾಲಾದಾರಭ್ಯ ಯಾವತ್ ಸುಪ್ತೋತ್ಥಿತೋ ಭವತಿ ತಾವತ್ ಸರ್ವಯಾಗಫಲಾನುಭವ ಏವ ನ ಅವಿದುಷಾಮಿವ ಅನರ್ಥಾಯ ಇತಿ ವಿದ್ವತ್ತಾ ಸ್ತೂಯತೇ। ನ ಹಿ ವಿದುಷ ಏವ ಶ್ರೋತ್ರಾದೀನಿ ಸ್ವಪನ್ತೇ। ಪ್ರಾಣಾಗ್ನಯೋ ವಾ ಜಾಗ್ರತಿ, ಜಾಗ್ರತ್ಸ್ವಪ್ನಯೋರ್ಮನಃ ಸ್ವಾತನ್ತ್ರ್ಯಮ್ ಅನುಭವತ್ ಅಹರಹಃ ಸುಷುಪ್ತಂ ವಾ ಪ್ರತಿಪದ್ಯತೇ। ಸಮಾನಂ ಹಿ ಸರ್ವಪ್ರಾಣಿನಾಂ ಪರ್ಯಾಯೇಣ ಜಾಗ್ರತ್ಸ್ವಪ್ನಸುಷುಪ್ತಿಗಮನಮ್। ಅತೋ ವಿದ್ವತ್ತಾಸ್ತುತಿರೇವೇಯಮ್ ಉಪಪದ್ಯತೇ ॥

(ಭಾಷ್ಯಾರ್ಥ)

ಈ ರೀತಿಯಲ್ಲಿ ತಿಳಿದಿರುವವನಿಗೆ[1] ಶ್ರೋತ್ರಾದಿಗಳು ಸುಮ್ಮನಾದ ಕಾಲದಿಂದ ಹಿಡಿದು (ಅವನು) ಮತ್ತೆ ನಿದ್ರೆಯಿಂದ ಎಚ್ಚರವಾಗುವವರೆಗೂ ಯಾಗಫಲವನ್ನೆಲ್ಲ ಅನುಭವಿಸುತ್ತಿರುವದೇ ಹೊರತು ಅಜ್ಞಾನಿಗಳಂತೆ ನಿಷ್ಪ್ರಯೋಜನವಾಗಿರುವದಿಲ್ಲ-[2] ಎಂದು ಜ್ಞಾನವನ್ನು ಹೊಗಳಿರುತ್ತದೆ. ಏಕೆಂದರೆ ಶ್ರೋತ್ರಾದಿಗಳು ನಿದ್ರೆಹೋಗುತ್ತವೆ ಎಂಬುದಾಗಲಿ, ಪ್ರಾಣಾಗ್ನಿಗಳು ಎಚ್ಚತ್ತಿರುವವೆಂಬುದಾಗಲಿ, ಎಚ್ಚರಕನಸುಗಳಲ್ಲಿ ಮನಸ್ಸು ಸ್ವಾತಂತ್ರ್ಯವನ್ನು ಅನುಭವಿಸಿ ದಿನದಿನವೂ ತನಿನಿದ್ರೆಯನ್ನು ಅನುಭವಿಸುತ್ತದೆ-ಎಂಬುದಾಗಲಿ ಜ್ಞಾನಿಗೊಬ್ಬನಿಗೇ (ಆಗುವ)ದಿಲ್ಲ[3]. ಎಚ್ಚರಕನಸುನಿದ್ರೆಗಳನ್ನು ಒಂದಾಗುತ್ತಲೊಂದನ್ನು ಅನುಭವಿಸುತ್ತಿರುವದೆಂಬುದು ಎಲ್ಲಾ ಪ್ರಾಣಿಗಳಿಗೂ ಸಮಾನವಾಗಿಯೇ ಇರುತ್ತದೆಯಷ್ಟೆ. ಆದ್ದರಿಂದ ಇದು ಜ್ಞಾನಿಯಾಗಿರುವದರ ಸ್ತುತಿಯೇ ಎಂಬುದೇ ಯುಕ್ತ.[4]

---

1. ಪ್ರಾಣಾಗ್ನಿಗಳ ಉಪಾಸಕನಿಗೆ.

2. ಅಜ್ಞಾನಿಗಳೂ ಸುಷುಪ್ತಿಯಲ್ಲಿ ಬ್ರಹ್ಮವನ್ನೇ ಸೇರುವರಾದರೂ ಅವರಿಗೆ ಅದರ ಪ್ರಯೋಜನವಾಗುವದಿಲ್ಲ. ಇದಕ್ಕೆ ಅವರಿಗೆ ಈ ಭಾವನೆಯಿಲ್ಲದಿರುವದೇ ಕಾರಣ.

3. ಛಾ. ಭಾ. ೮-೩-೩ ರಲ್ಲಿ "ಏವಂವಿತ್" ಎಂಬುದರ ವ್ಯಾಖ್ಯಾನವನ್ನು ನೋಡಿ.

4. ಜ್ಞಾನಿಗೆ ಆಗುವ ಅವಸ್ಥಾತ್ರಯದ ಅನುಭವವೇ ಬೇರೆ ಎಂದೇನೂ ಅಭಿಪ್ರಾಯವಿಲ್ಲ; ಎಲ್ಲರಿಗೂ ಆಗುವ ಅನುಭವವು ಜ್ಞಾನಿಗೆ ಜ್ಞಾನದ ಬಲದಿಂದ ವಿಲಕ್ಷಣಫಲವುಳ್ಳದ್ದಾಗುತ್ತದೆ ಎಂದು ಭಾವ. ಉತ್ಕ್ರಾಂತಿವಿಚಾರವೂ ಹೀಗೆಯೇ ಜ್ಞಾನಿಗೂ ಅಜ್ಞರಿಗೂ ಸಮಾನವಾದರೂ ಆತ್ಮನಲ್ಲಿ ಸೇರಿದ ಜ್ಞಾನಿಗೆ ಮತ್ತೆ ಪುನರಾವೃತ್ತಿಯಿಲ್ಲ ಸೂ. ಭಾ. ೪-೨-೭.

## ಮನಸ್ಸಿಗೆ ಸ್ವಪ್ನಾನುಭವ

(ಭಾಷ್ಯ)

೬೦. ಯತ್ ಪೃಷ್ಟಂ ಕತರ ಏಷ ದೇವಃ ಸ್ವಪ್ನಾನ್ ಪಶ್ಯತೀತಿ, ತದಾಹ—

(ಭಾಷ್ಯಾರ್ಥ)

ಕನಸನ್ನು ಕಾಣುವನಲ್ಲ, ಈ ದೇವನು ಯಾರು? ಎಂದು ಕೇಳಿತ್ತಷ್ಟೆ. ಆದಕ್ಕೆ (ಈಗ ಉತ್ತರವನ್ನು) ಹೇಳುತ್ತಾನೆ:—

**ಅತ್ರೈಷ ದೇವಃ ಸ್ವಪ್ನೇ ಮಹಿಮಾನಮನುಭವತಿ। ಯದ್ ದೃಷ್ಟಂ ದೃಷ್ಟಮನುಪಶ್ಯತಿ ಶ್ರುತಂ ಶ್ರುತಮೇವ ಅರ್ಥಮನು ಶೃಣೋತಿ ದೇಶದಿಗನ್ತರೈಶ್ಚ ಪ್ರತ್ಯನುಭೂತಂ ಪುನಃ ಪುನಃ ಪ್ರತ್ಯನುಭವತಿ ದೃಷ್ಟಂ ಚಾದೃಷ್ಟಂ ಚ ಶ್ರುತಂ ಚಾಶ್ರುತಂ ಚಾನುಭೂತಂ ಚಾನನುಭೂತಂ ಚ ಸಚ್ಚಾಸಚ್ಚ ಸರ್ವಂ ಪಶ್ಯತಿ ಸರ್ವಃ ಪಶ್ಯತಿ ॥ ೫ ॥**

೫. ಈ ಸ್ವಪ್ನದಲ್ಲಿ ಈ ದೇವನು ಮಹಿಮೆಯನ್ನು ಅನುಭವಿಸುತ್ತಾನೆ. ನೋಡಿನೋಡಿದ್ದನ್ನು ಮತ್ತೆ ನೋಡುತ್ತಿರುತ್ತಾನೆ, ಕೇಳಿಕೇಳಿದ್ದ ವಿಷಯವನ್ನೇ ಮತ್ತೆ ಕೇಳುತ್ತಿರುತ್ತಾನೆ. ದೇಶದಿಗಂತರಗಳಲ್ಲಿ ಅನುಭವಿಸಿದ್ದನ್ನು ಮತ್ತೆ ಮತ್ತೆ ಅನುಭವಿಸುತ್ತಿರುತ್ತಾನೆ. ಕಂಡದ್ದು ಕಾಣದೆ ಇರುವದು; ಕೇಳಿದ್ದು ಕೇಳದೆ ಇರುವದು; ಅನುಭವಿಸಿದ್ದು ಅನುಭವಿಸದೆ ಇರುವದು; ಇರುವದು, ಇಲ್ಲದ್ದು–ಇದೆಲ್ಲವನ್ನೂ ಕಾಣುತ್ತಿರುತ್ತಾನೆ, ಎಲ್ಲವೂ ಆಗಿ ಕಾಣುತ್ತಾನೆ.

(ಭಾಷ್ಯ)

೬೧. ಅತ್ರ ಉಪರತೇಷು ಶ್ರೋತ್ರಾದಿಷು ದೇಹರಕ್ಷಾಯೈ ಜಾಗ್ರತ್ಸು ಪ್ರಾಣಾದಿವಾಯುಷು ಪ್ರಾಕ್ ಸುಷುಪ್ತಿಪ್ರತಿಪತ್ತೇಃ ಏತಸ್ಮಿನ್ ಅನ್ತರಾಲೇ ಏಷ ದೇವಃ ಅರ್ಕರಶ್ಮಿವತ್ ಸ್ವಾತ್ಮನಿ ಸಂಹೃತಶ್ರೋತ್ರಾದಿಕರಣಃ ಸ್ವಪ್ನೇ ಮಹಿಮಾನಂ ವಿಭೂತಿಂ ವಿಷಯವಿಷಯಿಲಕ್ಷಣಮ್ ಅನೇಕಾತ್ಮಭಾವಗಮನಮ್ ಅನುಭವತಿ ಪ್ರತಿಪದ್ಯತೇ ॥

(ಭಾಷ್ಯಾರ್ಥ)

ಇಲ್ಲಿ, ಎಂದರೆ ಶ್ರೋತ್ರವೇ ಮುಂತಾದವುಗಳು ಸುಮ್ಮನಾಗಿ, ದೇಹದ ರಕ್ಷಣೆಗಾಗಿ ಪ್ರಾಣವೇ ಮುಂತಾದ ವಾಯುಗಳು ಎಚ್ಚತ್ತಿರುವಲ್ಲಿ ತನಿನಿದ್ರೆಯನ್ನು ಪಡೆಯುವ

ಮುಂಚೆ, ಈ ನಡುವಣ (ಕಾಲ)ದಲ್ಲಿ, ಈ ದೇವನು ಸೂರ್ಯಕಿರಣಗಳಂತೆ[1] ತನ್ನಲ್ಲಿ ಶ್ರೋತ್ರಾದಿಕರಣಗಳನ್ನು ಉಪಸಂಹಾರಮಾಡಿಕೊಂಡು, ಸ್ವಪ್ನದಲ್ಲಿ ಮಹಿಮೆಯನ್ನು, ಎಂದರೆ ವಿಷಯವಾಗಿಯೂ ವಿಷಯಿಯಾಗಿಯೂ ಇರುವದೆಂಬ ವಿಭೂತಿಯನ್ನು, ಅನೇಕ ಸ್ವರೂಪವನ್ನು ಹೊಂದುವಿಕೆಯನ್ನು[2] ಅನುಭವಿಸುತ್ತಾನೆ, ಪಡೆಯುತ್ತಾನೆ.

## ಮನಸ್ಸಿನ ಸ್ವಾತಂತ್ರ್ಯದ ಬಗ್ಗೆ ಆಕ್ಷೇಪಸಮಾಧಾನಗಳು

(ಭಾಷ್ಯ)

೬೨. ನನು ಮಹಿಮಾನುಭವನೇ ಕರಣಂ ಮನಃ ಅನುಭವಿತುಃ । ತತ್ ಕಥಂ ಸ್ವಾತನ್ತ್ರ್ಯೇಣ "ಅನುಭವತಿ" ಇತ್ಯುಚ್ಯತೇ । ಸ್ವತನ್ತ್ರೋ ಹಿ ಕ್ಷೇತ್ರಜ್ಞಃ । ನೈಷ ದೋಷಃ । ಕ್ಷೇತ್ರಜ್ಞಸ್ಯ ಸ್ವಾತನ್ತ್ರ್ಯಸ್ಯ ಮನಉಪಾಧಿಕೃತತ್ವಾತ್ । ನ ಹಿ ಕ್ಷೇತ್ರಜ್ಞಃ ಪರಮಾರ್ಥತಃ ಸ್ವತಃ ಸ್ವಪಿತಿ, ಜಾಗರ್ತಿ ವಾ । ಮನಉಪಾಧಿಕೃತಮೇವ ತಸ್ಯ ಜಾಗರಣಂ ಸ್ವಪ್ನಶ್ಚ ಇತ್ಯುಕ್ತಂ[3] ವಾಜಸನೇಯಕೇ[4] "ಸಧೀಃ ಸ್ವಪ್ನೋ ಭೂತ್ವಾ" (ಬೃ. ಮಾ. ೪-೩-೭) "ಧ್ಯಾಯತೀವ ಲೇಲಾಯತೀವ" (ಬೃ. ೪-೩-೭) ಇತ್ಯಾದಿ । ತಸ್ಮಾತ್ ಮನಸೋ ವಿಭೂತ್ಯನುಭವೇ ಸ್ವಾತನ್ತ್ರ್ಯವಚನಂ ನ್ಯಾಯ್ಯಮೇವ ॥

(ಭಾಷ್ಯಾರ್ಥ)

(ಆಕ್ಷೇಪ):—ಅನುಭವಿಸುವವನಿಗೆ ಮಹಿಮೆಯನ್ನು ಅನುಭವಿಸುವದಕ್ಕೆ ಮನಸ್ಸು ಕರಣವಾಗಿರುತ್ತದೆ. ಹೀಗಿರುವಲ್ಲಿ (ಅದು) ಸ್ವತಂತ್ರವಾಗಿ "ಅನುಭವಿಸುತ್ತದೆ" ಎಂದು ಹೇಳಿದ್ದು ಹೇಗೆ? ಕ್ಷೇತ್ರಜ್ಞನಲ್ಲವೆ, ಸ್ವತಂತ್ರನು?

(ಸಮಾಧಾನ):—ಇದು ತಪ್ಪಲ್ಲ. ಏಕೆಂದರೆ ಕ್ಷೇತ್ರಜ್ಞನ ಸ್ವಾತಂತ್ರ್ಯವು ಮನಸ್ಸೆಂಬ ಉಪಾಧಿಯಿಂದಾಗಿರುತ್ತದೆ. ಕ್ಷೇತ್ರಜ್ಞನು ನಿಜವಾಗಿ ನೋಡಿದರೆ ತಾನೇ ನಿದ್ರಿಸುವದೂ ಇಲ್ಲ, ಎಚ್ಚತ್ತಿರುವದೂ ಇಲ್ಲ. ಮನಸ್ಸೆಂಬ ಉಪಾಧಿಯಿಂದಲೇ ಅವನಿಗೆ ಎಚ್ಚರವೂ ಕನಸೂ ಆಗುತ್ತಿರುವವು–ಎಂದು ವಾಜಸನೇಯಕದಲ್ಲಿ "ಅವನು ಬುದ್ಧಿಯಿಂದ ಕೂಡಿ ಕನಸ(ನ್ನು ಕಾಣುವವ)ನಾಗಿ (ಈ ಲೋಕವನ್ನು ಅತಿಕ್ರಮಿಸುತ್ತಾನೆ)" (ಬೃ. ಮಾ. ೪-೩-೭) "(ಅವನು ಸಮಾನವಾಗಿ ಎರಡು ಲೋಕಗಳನ್ನೂ

---

1. "ಅರ್ಕೋ ರಶ್ಮಿವತ್" ಎಂದು ಪಾಠವಿದ್ದರೆ ಸೂರ್ಯನು ಕಿರಣಗಳನ್ನು ಉಪಸಂಹಾರಮಾಡಿಕೊಳ್ಳುವಂತೆ ಎಂದು ಸರಳವಾಗಿ ಅರ್ಥವಾಗುತ್ತದೆ.

2. ಮನಸ್ಸೇ ಎಲ್ಲವೂ ಆಗಿ ತೋರಿಕೊಳ್ಳುತ್ತದೆ, ಮನಸ್ಸಿಗಿಂತ ಬೇರೆ ಯಾವ ವಿಷಯವೂ ಇರುವದಿಲ್ಲ.

3. ವಾ॥ ಪಾಠದಲ್ಲಿ "ಉಕ್ತಂ" ಎಂದಿಷ್ಟೇ ಪಾಠವಿದೆ.

4. ಸೂ. ಭಾ. ೨-೩-೪೦ ರಲ್ಲಿ "ಸಧೀಃ ಸ್ವಪ್ನೋ ಭೂತ್ವೇಮಂ ಲೋಕಮತಿಕ್ರಾಮತಿ" ಎಂದು ಈ ವಾಕ್ಯವು ಉದಾಹೃತವಾಗಿದೆ. ಆದ್ದರಿಂದ "ಧ್ಯಾಯತೀವ ಲೇಲಾಯತೀವ" ಎಂಬುದು ಹಿಂದಿನ ವಾಕ್ಯಭಾಗವೆಂದೂ ಮತ್ತೊಂದು ಪ್ರಮಾಣವಾಕ್ಯವೆಂದೂ ಗಣಿಸಲಾಗಿದೆ.

ಒಂದೊಂದಾಗಿ ಸಂಚರಿಸುತ್ತಿರುತ್ತಾನೆ,) ಚಿಂತಿಸುವಂತೆಯೂ, ಚಲಿಸುತ್ತಿರುವಂತೆಯೂ (ತೋರುತ್ತಿರುತ್ತಾನೆ)" (ಬೃ. ೪-೩-೭) ಎಂದು ಮುಂತಾಗಿ (ಹೇಳಿರುತ್ತದೆ). ಆದ್ದರಿಂದ ಮನಸ್ಸೇ ಮಹಿಮೆಯನ್ನನುಭವಿಸುವದಕ್ಕೆ ಸ್ವತಂತ್ರವಾಗಿರುವದೆಂದು ಹೇಳಿದ್ದು ಸರಿಯೇ.[1]

## ಸ್ವಯಂಜ್ಯೋತಿಷ್ಟ್ವದ ಚರ್ಚೆ

(ಭಾಷ್ಯ)

೬೩. ಮನಉಪಾಧಿಸಹಿತತ್ವೇ ಸ್ವಪ್ನಕಾಲೇ ಕ್ಷೇತ್ರಜ್ಞಸ್ಯ ಸ್ವಯಂಜ್ಯೋತಿಷ್ಟ್ವಂ ಬಾಧ್ಯೇತ ಇತಿ ಕೇಚಿತ್ । ತನ್ನ । ಶ್ರುತ್ಯರ್ಥಾಪರಿಜ್ಞಾನಕೃತಾ ಭ್ರಾನ್ತಿಸ್ತೇಷಾಮ್ । ಯಸ್ಮಾತ್ ಸ್ವಯಂಜ್ಯೋತಿಷ್ಟ್ವಾದಿವ್ಯವಹಾರೋಽಪಿ ಆಮೋಕ್ಷಾನ್ತಃ ಸರ್ವೋಽವಿದ್ಯಾವಿಷಯ ಏವ ಮನಆದ್ಯುಪಾಧಿಜನಿತಃ । "ಯತ್ರ ವಾ ಅನ್ಯದಿವ ಸ್ಯಾತ್ ತತ್ರಾನ್ಯೋಽನ್ಯತ್ ಪಶ್ಯೇತ್" (ಬೃ. ೪-೩-೩೧), "ಮಾತ್ರಾಸಂಸರ್ಗಸ್ತ್ವಸ್ಯ ಭವತಿ" (ಬೃ. ಮಾ. ೪-೫-೧೪) "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ಕೇನ ಕಂ ಪಶ್ಯೇತ್" (ಬೃ. ೪-೫-೧೫) ಇತ್ಯಾದಿಶ್ರುತಿಭ್ಯಃ । ಅತೋ ಮನ್ದಬ್ರಹ್ಮವಿದಾಮೇವ ಇಯಮಾಶಙ್ಕಾ ನ ತು ಏಕಾತ್ಮವಿದಾಮ್ ॥

(ಭಾಷ್ಯಾರ್ಥ)

ಕನಸಿನ ಕಾಲದಲ್ಲಿ ಮನಸ್ಸೆಂಬ ಉಪಾಧಿಯಿದ್ದರೆ ಕ್ಷೇತ್ರಜ್ಞನು ಸ್ವಯಂ ಜ್ಯೋತಿ ಎಂಬುದು ಸುಳ್ಳಾಗುತ್ತದೆ-[2] ಎಂದು ಕೆಲವರು ಹೇಳುತ್ತಾರೆ. ಅದು ಸರಿಯಲ್ಲ; ಶ್ರುತಿಯ ಅರ್ಥವನ್ನು ತಿಳಿಯದೆ ಅವರಿಗೆ (ಈ) ಭ್ರಾಂತಿಯಾಗಿರುತ್ತದೆ. ಏಕೆಂದರೆ ಸ್ವಯಂಜ್ಯೋತಿಯಾಗಿರುವದೇ ಮುಂತಾದ[3] ಮೋಕ್ಷದವರೆಗಿನ ವ್ಯವಹಾರ

---

1. ನಿಜವಾಗಿ ಮನಸ್ಸು ಜಡವಾಗಿರುವದರಿಂದ ಅದಕ್ಕೂ ಈ ಸ್ವಾತಂತ್ರ್ಯವಿಲ್ಲ. ಅದರೂ ಆತ್ಮನಿಗೆ ಉಪಾಧಿಯಿಂದಲೇ ಅವಸ್ಥಾವತ್ತ್ವವೆಂಬುದನ್ನು ತಿಳಿಸುವದಕ್ಕೆ ಈ ಸ್ವಾತಂತ್ರ್ಯವನ್ನು ಮನಸ್ಸಿನಲ್ಲಿ ಅಧ್ಯಾರೋಪಮಾಡಿದೆ. ಸೂ. ಭಾ. ೧-೨-೧೨.

2. ಕನಸಿನಲ್ಲಿ ಮನಸ್ಸಿನ ಸಂಬಂಧದಿಂದ ತೋರುತ್ತಾನೆ ಎನ್ನುವದು ಇಲ್ಲಿ ಆತ್ಮನು ಸ್ವಯಂಜ್ಯೋತಿಯಾಗಿರುತ್ತಾನೆಂದು ಹೇಳುವ ಶ್ರುತಿಗೆ ವಿರುದ್ಧವಾಗಿದೆ ಎಂದು ಭಾವ.

3. ಸ್ವಯಂಜ್ಯೋತಿಯೆಂದರೆ ತಾನೇ ಬೆಳಗುವದು; ಮತ್ತೊಂದರಿಂದ ಬೆಳಗುವದಕ್ಕೆ ಹೋಲಿಸಿದರೆ ಆತ್ಮನು ಸ್ವಯಂಜ್ಯೋತಿಯು. ನಿಜವಾಗಿ ಸ್ವಯಂಜ್ಯೋತಿ ಎಂಬುದೂ ಸರಿಯಲ್ಲ.

ವೆಲ್ಲವೂ[1] ಮನಸ್ಸೇ ಮುಂತಾದ ಉಪಾಧಿಯಿಂದಾಗಿರುವದರಿಂದ[2] ಅವಿದ್ಯಾವಿಷಯವೇ ಆಗಿರುತ್ತದೆ. "ಎಲ್ಲಿಯೋ ಮತ್ತೊಂದು ಇದ್ದಂತೆ[3] ಆಗಿರುವದೋ ಅಲ್ಲಿ ಒಬ್ಬನು ಇನ್ನೊಂದನ್ನು ಕಾಣಬಹುದು" (ಬೃ. ೪-೩-೩೧) "ಆದರೆ (ಭೂತೇಂದ್ರಿಯಗಳ) ಮಾತ್ರೆಗಳ ಸಂಬಂಧವು[4] ಅವನಿಗೆ ಇಲ್ಲದೆ ಹೋಗುವದು" (ಬೃ. ಮಾ. ೪-೫-೪೧) "ಆದರೆ ಎಲ್ಲಿ ಇವನಿಗೆ ಎಲ್ಲವೂ ಆತ್ಮನೇ ಆಯಿತೋ ಅಲ್ಲಿ ಏತರಿಂದ ಯಾರನ್ನು ನೋಡಬೇಕು?" (ಬೃ. ೪-೫-೧೫)–ಇವೇ ಮುಂತಾದ ಶ್ರುತಿಗಳು ಇಲ್ಲಿ ಪ್ರಮಾಣವು. ಆದ್ದರಿಂದ ಈ ಆಕ್ಷೇಪವು ಅಲ್ಪಬ್ರಹ್ಮವನ್ನರಿತವರು[5] ಮಾಡುವದೇ ಹೊರತು ಏಕಾತ್ಮವನ್ನು ಬಲ್ಲವರು[6] (ಮಾಡುವ)ದಲ್ಲ.

(ಭಾಷ್ಯ)

೭೪. ನನ್ವೇವಂ ಸತಿ "ಅತ್ರಾಯಂ ಪುರುಷಃ ಸ್ವಯಂಜ್ಯೋತಿಃ" (ಬೃ. ೪-೩-೧೪) ಇತಿ ವಿಶೇಷಣಮ್ ಅನರ್ಥಕಂ ಭವತಿ । ಅತ್ರೋಚ್ಯತೇ । ಅತ್ಯಲ್ಪಮಿದಮುಚ್ಯತೇ । "ಯ ಏಷೋಽನ್ತರ್ಹೃದಯ ಆಕಾಶಸ್ತಸ್ಮಿಞ್ಛೇತೇ" (ಬೃ. ೨-೧-೧೭) ಇತ್ಯನ್ತರ್ಹೃದಯಪರಿಚ್ಛೇದೇ ಸುತರಾಂ ಸ್ವಯಂಜ್ಯೋತಿಷ್ಟ್ವಂ ಬಾಧ್ಯೇತ । ಸತ್ಯಮ್ ಏವಮ್ । ಅಯಂ ದೋಷೋ ಯದ್ಯಪಿ ಸ್ಯಾತ್ ಸ್ವಪ್ನೇ ಕೇವಲತಯಾ ಸ್ವಯಂಜ್ಯೋತಿಷ್ಟ್ವೇನ ಅರ್ಥಂ ತಾವದಪನೀತಂ ಭಾರಸ್ಯ ಇತಿ ಚೇತ್ । ನ । ತತ್ರಾಪಿ "ಪುರೀತತಿ ನಾಡೀಷು ಶೇತೇ" ಇತಿ ಶ್ರುತೇಃ ಪುರೀತನ್ನಾಡೀಸಂಬಂಧಾತ್ ಅತ್ರಾಪಿ[7] ಪುರುಷಸ್ಯ ಸ್ವಯಂಜ್ಯೋತಿಷ್ಟ್ವೇನ ಅರ್ಧಭಾರಾಪನಯಾಭಿಪ್ರಾಯೋ ವ್ಯರ್ಥ ಏವ ॥

---

1. ಬಂಧ, ಮೋಕ್ಷ–ಮುಂತಾದ ವ್ಯವಹಾರಗಳೂ ಪರಮಾರ್ಥವಲ್ಲ, ಅವಿದ್ಯಕವೇ ಮಾಂ. ಕಾ. ೭–೩೨.

2. ಮನಸ್ಸು ಆತ್ಮನ ಬೆಳಕಿನ ಸಹಾಯದಿಂದ ಬೆಳಗುತ್ತಾ ವಿಷಯಗಳನ್ನು ಬೆಳಗುತ್ತದೆ. ಆತ್ಮನು ತಾನೇ ಬೆಳಗುತ್ತಾನೆ, ಮನಸ್ಸನ್ನೂ ಬೆಳಗುತ್ತಾನೆ. ಹೀಗೆಯೇ ಮನಸ್ಸೆಂಬ ಉಪಾಧಿಯಿಂದಲೇ ಆತ್ಮನಿಗೆ ಬಂಧಮೋಕ್ಷಗಳಿವೆ ಎಂದು ವ್ಯವಹಾರವುಂಟಾಗಿರುತ್ತದೆ.

3. ಇದ್ದಂತೆ ಎಂದದ್ದರಿಂದ ದ್ವೈತವು ತೋರುವದು ಅವಿದ್ಯೆಯಿಂದಲೇ ಎಂದಾಯಿತು.

4. ಜ್ಞಾನಿಗೆ ಅವಿದ್ಯಾಕೃತವಾದ ಇಂದ್ರಿಯಗಳ ಅಥವಾ ಭೂತಗಳ ಸಂಪರ್ಕವಿರುವದಿಲ್ಲ.

5. ಬ್ರಹ್ಮವು ಪರಿಚ್ಛಿನ್ನವಾಗಿದೆ ಎಂದು ಭಾವಿಸುವವರು.

6. ಬ್ರಹ್ಮವು ಅದ್ವಿತೀಯವಾಗಿರುವದರಿಂದ ಅನಂತವಾಗಿದೆ ಎಂದು ಅರಿತುಕೊಂಡಿರುವವರು.

7. ವಾ॥ ಪಾಠ.

(ಭಾಷ್ಯಾರ್ಥ)

(ಆಕ್ಷೇಪ) :—ಹಾಗಾದರೆ " ಇಲ್ಲಿ ಈ ಪುರುಷನು ಸ್ವಯಂಜ್ಯೋತಿಯಾಗಿರುವನು " (ಬೃ. ೪-೩-೯, ೧೪) ಎಂದು ವಿಶೇಷಣವನ್ನು ಕೊಟ್ಟದ್ದು ವ್ಯರ್ಥವಾಗುವದಲ್ಲ[1] !

(ಸಮಾಧಾನ) :—ಇದಕ್ಕೆ ಉತ್ತರವನ್ನು ಹೇಳುತ್ತೇವೆ. ನೀವು ಹೇಳಿದ್ದು ಬಹು ಸ್ವಲ್ಪವಾಯಿತು " ಈ ಹೃದಯದ ಒಳಗಡೆ ಆಕಾಶವಿದೆಯಲ್ಲ, ಅದರಲ್ಲಿ ಮಲಗಿರುತ್ತಾನೆ " (ಬೃ. ೨-೧-೧೭) ಎಂದು ಹೃದಯದೊಳಗಡೆ ಎಂಬ ಪರಿಚ್ಛೇದವಿರುವಲ್ಲಿ[2] ಸ್ವಯಂಜ್ಯೋತಿಷ್ಟ್ವಕ್ಕೆ ಇನ್ನೂ ಹೆಚ್ಚಿನ ಪ್ರತಿಬಂಧಕವಿದ್ದಂತೆ ಆಗುತ್ತದೆ

(ಆಕ್ಷೇಪ) :—ನಿಜ, ಹಾಗೆಯೇ ಸರಿ. (ಅಲ್ಲಿ) ಈ ದೋಷವುಂಟಾಗುತ್ತದೆ ಯಾದರೂ ಕನಸಿನಲ್ಲಿ ಆತ್ಮನು ಒಬ್ಬನೇ ಇರುವದರಿಂದ[3] (ಆತ್ಮನು) ಸ್ವಯಂಜ್ಯೋತಿ ಎಂದಾಗುವದರಿಂದ ಅರ್ಧ ಹೊರೆಯನ್ನಾದರೂ ಇಳಿಸಿಕೊಂಡಂತೆ ಆಗುವದಿಲ್ಲವೆ ?[4]

(ಸಮಾಧಾನ) :—ಹಾಗಲ್ಲ. ಅಲ್ಲಿಯೂ " ಪುರೀತತ್ತಿನಲ್ಲಿ ನಾಡಿಗಳಲ್ಲಿ ಮಲಗಿರುತ್ತಾನೆ " ಎಂಬ ಶ್ರುತಿ[5] ಇರುತ್ತದೆಯಾದ್ದರಿಂದ ಪುರೀತತ್ತು ಮತ್ತು ನಾಡಿಗಳ

---

1. ಕನಸಿನಲ್ಲಿ ಆತ್ಮನು ಮನಸ್ಸಿನೊಡನೆಯೇ ಇದ್ದರೆ ಆತ್ಮನು ಅಲ್ಲಿ ಸ್ವಯಂಜ್ಯೋತಿಯಾಗಿರುವನೆಂದು ಶ್ರುತಿಯಲ್ಲಿ ಹೇಳಿರುವದು ಹೇಗೆ ? ಎಂದು ಆಕ್ಷೇಪ.

2. ಕನಸಿನಲ್ಲಿ ಮನಸ್ಸಿನ ಸಂಬಂಧದಿಂದ ಸ್ವಯಂಜ್ಯೋತಿಷ್ಟ್ವಕ್ಕೆ ಬಾಧೆಯಾಗುವದಾದರೆ ಸುಷುಪ್ತಿಯಲ್ಲಿಯೂ ಹೃದಯಾದಿಗಳ ಸಂಬಂಧವನ್ನು ಶ್ರುತಿಯಲ್ಲಿ ಹೇಳಿರುವದರಿಂದ ಅಲ್ಲಿ ಇನ್ನೂ ಹೆಚ್ಚಿನ ಬಾಧೆಯೇ ಆಗುತ್ತದೆ.

3. ಪೂರ್ವಪಕ್ಷಿಯ ಅಭಿಪ್ರಾಯದಲ್ಲಿ ದ್ವಿತೀಯವಸ್ತುವಿನ ಸಂಬಂಧವಿದ್ದರೆ ಆತ್ಮನು ಸ್ವಯಂಜ್ಯೋತಿಯಾಗಲಾರನು.

4. ಬೃಹದಾರಣ್ಯಕದಲ್ಲಿರುವ ವರ್ಣನೆಯಲ್ಲಿ ಸುಷುಪ್ತಿಯಲ್ಲಿ ಹೃದಯಾಕಾಶ, ಪುರೀತತ್ತು, ನಾಡಿ- ಇವುಗಳ ಸಂಬಂಧವು ಆತ್ಮನಿಗಿರುತ್ತವೆಯೆಂದಿರುವದರಿಂದ ಅಲ್ಲಿ ಸ್ವಯಂಜ್ಯೋತಿಷ್ಟ್ವಕ್ಕೆ ಅಡ್ಡಿಯು ಹೆಚ್ಚಾಗಿದೆ ಎಂದು ಹೇಳಿದರೂ ಹೇಳಬಹುದು. ಕನಸಿನಲ್ಲಿ ಯಾವ ಪ್ರತಿಬಂಧಕವೂ ಇಲ್ಲವೆಂದು ತೋರಿಸಿದರೆ ಅಲ್ಲಿ ಸ್ವಯಂಜ್ಯೋತಿಷ್ಟ್ವವನ್ನು ಪ್ರತಿಪಾದನೆಮಾಡಿದಂತೆ ಆಗುವದರಿಂದ ವೇದಾಂತಿಯಮೇಲೆ ಈ ವಿಷಯದಲ್ಲಿರುವ ಹೊಣೆಗಾರಿಕೆಯಲ್ಲಿ ಅರ್ಧವಾದರೂ ಇಳಿದಂತೆ ಆಗುವದಿಲ್ಲವೆ ?-ಎಂದು ಆಕ್ಷೇಪಕನ ಭಾವ.

5. ಬೃಹದಾರಣ್ಯಕದ ಕನಸಿನ ವರ್ಣನೆಯಲ್ಲಿಯೂ ಆತ್ಮನಿಗೆ ಈ ನಾಡಿಗಳ ಸಂಬಂಧವನ್ನು ಹೇಳಿದೆ. (ಬೃ. ೪–೨–೩ ; ೪–೩–೨೦). ಆದ್ದರಿಂದ ಕನಸ್ಸಿನಲ್ಲಿಯೂ ದ್ವಿತೀಯ ಸಂಬಂಧವಿರುವದರಿಂದ ಅಲ್ಲಿಯೂ ಸ್ವಯಂಜ್ಯೋತಿಷ್ಟ್ವವನ್ನು ಪ್ರತಿಪಾದನೆಮಾಡಿದಂತಾಗುವದಿಲ್ಲ.

ಸಂಬಂಧವಿರುತ್ತದೆಯಾದ್ದರಿಂದ ಇಲ್ಲಿ ಕೂಡ[1] ಪುರುಷನು ಸ್ವಯಂಜ್ಯೋತಿಯಾಗಿರುವದರಿಂದ ಅರ್ಥಹೊರೆ ಇಳಿದಂತಾಗುವದೆಂಬ ಅಭಿಪ್ರಾಯವು ಸುಳ್ಳೇ ಆಗುವದು.

(ಭಾಷ್ಯ)

೭೫. ಕಥಂ ತರ್ಹಿ "ಅತ್ರಾಯಂ ಪುರುಷಃ ಸ್ವಯಂಜ್ಯೋತಿಃ" (ಬೃ. ೪-೩-೧೪) ಇತಿ? ಅನ್ಯಶಾಖಾತ್ವಾತ್ ಅನಪೇಕ್ಷ್ಯಾ[2] ಸಾ ಶ್ರುತಿಃ ಇತಿ ಚೇತ್। ನ। ಅರ್ಥೈಕತ್ವಸ್ಯ ಇಷ್ಟತ್ವಾತ್। ಏಕೋ ಹಿ ಆತ್ಮಾ ಸರ್ವವೇದಾನ್ತಾನಾಮರ್ಥೋ ವಿಜಿಜ್ಞಾಪಯಿಷಿತಃ ಬುಭುತ್ಸಿತಶ್ಚ । ತಸ್ಮಾತ್ ಯುಕ್ತಾ ಸ್ವಪ್ನೇ ಆತ್ಮನಃ ಸ್ವಯಂಜ್ಯೋತಿಷ್ಟ್ವೋಪಪತ್ತಿರ್ವಕ್ತುಮ್। ಶ್ರುತೇರ್ಯಥಾರ್ಥತತ್ತ್ವಪ್ರಕಾಶಕತ್ವಾತ್ ॥

(ಭಾಷ್ಯಾರ್ಥ)

(ಆಕ್ಷೇಪ):—ಇಲ್ಲ ಈ ಪುರುಷನು ಸ್ವಯಂಜ್ಯೋತಿಯಾಗಿರುತ್ತಾನೆ. (ಬೃ. ೪-೩-೧೪) ಎಂಬ ಶ್ರುತಿಯು ಹೇಗೆ (ಹೊಂದುತ್ತದೆ)? ಆ ಶ್ರುತಿಯು ಬೇರೆಯ ಶಾಖೆಯಲ್ಲಿರುವದರಿಂದ[3] ಅದನ್ನು (ಇಲ್ಲಿ ಲೆಕ್ಕಕ್ಕೆ) ತೆಗೆದುಕೊಳ್ಳಬೇಕಾದದ್ದಿಲ್ಲ ಎಂದು (ನೀವು) ಹೇಳಬಹುದು; ಆದರೆ ಅದು ಸರಿಯಲ್ಲ. ಏಕೆಂದರೆ, ಶ್ರುತಿಗಳಿಗೆಲ್ಲ ಒಂದೇ ಅರ್ಥವು (ಅಭಿಪ್ರೇತವಾಗಿದೆ) ಎಂಬುದು (ವೇದಾಂತಿಗಳಿಗೆ) ಇಷ್ಟವಾಗಿರುತ್ತದೆ. ಎಲ್ಲಾ ಉಪನಿಷತ್ತುಗಳಿಗೂ ಒಬ್ಬನೇ ಆತ್ಮನು ವಿಷಯವಾಗಿರುತ್ತಾನೆ; (ಅವನನ್ನೇ ಎಲ್ಲಾ ಉಪನಿಷತ್ತುಗಳೂ) ತಿಳಿಯಿಸುವದಕ್ಕೆ ಹೊರಟಿವೆ, ಮತ್ತು (ಆ ಒಬ್ಬನನ್ನೇ ನಾವು) ತಿಳಿಯಬೇಕೆಂದಿರುತ್ತೇವೆ.[4] ಆದ್ದರಿಂದ ಕನಸಿನಲ್ಲಿ ಆತ್ಮನು ಸ್ವಯಂಜ್ಯೋತಿಯಾಗಿರುವನೆಂಬುದು ಹೇಗೆಂಬುದಕ್ಕೆ ಯುಕ್ತಿಯನ್ನು ಹೇಳುವದು ನ್ಯಾಯವಾಗಿದೆ. ಏಕೆಂದರೆ ಶ್ರುತಿಯು ಇದ್ದವಿಷಯವನ್ನು ಇದ್ದಂತೆ ತಿಳಿಸಿಕೊಡತಕ್ಕದ್ದಾಗಿದೆ.[5]

---

1. ಕನಸಿನಲ್ಲಿಕೂಡ. "ಸುಷುಪ್ತಿಯಲ್ಲಿ ಪೂರಹೊರೆ ಇಳಿಯುವಂತಿದ್ದರೆ ಕನಸಿನಲ್ಲಿ ಅರ್ಧಹೊರೆಯಾದರೂ ಇಳಿಯಿತೆನ್ನಬಹುದು; ಆದರೆ ಹಾಗಿಲ್ಲ, ಅಲ್ಲಿಯೂ ಬಹಳ ಪ್ರತಿಬಂಧಕವಿರುತ್ತದೆ" ಎಂಬ ಅಭಿಪ್ರಾಯವನ್ನು ವ್ಯಾಖ್ಯಾನಕಾರರು ತೆಗೆದಿರುತ್ತಾರೆ. ಆದರೆ ಪೂರ್ವಪಕ್ಷಿಯು ಸುಷುಪ್ತಿಯಲ್ಲಿ ಪೂರಹೊರೆ ಇಳಿಯುವದೆಂದೇನೂ ಹೇಳಿಲ್ಲ.

2. "ಅನಪೇಕ್ಷಾ" ಎಂದೇ ಮುದ್ರಿತಪುಸ್ತಕಗಳಲ್ಲಿದೆಯಾದರೂ "ಅನಪೇಕ್ಷ್ಯಾ", ಎಂದೇ ಇರಬೇಕೆಂದು ತೋರುತ್ತದೆ.

3. ಈ ಉಪನಿಷತ್ತು ಅಥರ್ವಣಶಾಖೆಗೆ ಸೇರಿದ್ದು; ಸ್ವಯಂಜ್ಯೋತಿಃಶ್ರುತಿಯು ವಾಜಸನೇಯಶಾಖೆಯ ಬೃಹದಾರಣ್ಯಕೋಪನಿಷತ್ತಿನಲ್ಲಿದೆ.

4. ಉಪನಿಷತ್ತುಗಳಲ್ಲೆಲ್ಲ ಒಂದೇ ಆತ್ಮತತ್ತ್ವವನ್ನು ಪ್ರತಿಪಾದಿಸಿರುತ್ತದೆ ಎಂದು ತೋರಿಸುವದೇ ಭಾಷ್ಯದ ಗುರಿ. ಸೂ. ಭಾ. ೧-೧-೪, ೩-೩-೧.

5. ವಸ್ತುಸ್ವರೂಪವು ಬೇರೆಬೇರೆಯಾಗಿರುವದು ಅಸಂಭವವಾದ್ದರಿಂದ ಒಂದೊಂದು ಶ್ರುತಿಯಲ್ಲಿ ಒಂದೊಂದುಬಗೆಯಾಗಿ ಅದನ್ನು ಹೇಳಿದೆ ಎಂದರೆ ಶ್ರುತಿಯೇ ಅಪ್ರಮಾಣವಾಗುತ್ತದೆ. ಸೂ. ಭಾ. ೧-೧-೨ "ಅನುಭವಾವಸಾನತ್ವಾತ್, ಭೂತವಸ್ತುವಿಷಯತ್ವಾಚ್ಚ ಬ್ರಹ್ಮಜ್ಞಾನಸ್ಯ" ಎಂಬ ವಾಕ್ಯದ ವಿವರಣೆಯನ್ನು ನೋಡಿ.

(ಭಾಷ್ಯ)

೬೬. ಏವಂ ತರ್ಹಿ ಶೃಣು ಶ್ರುತ್ಯರ್ಥಂ ಹಿತ್ವಾ ಸರ್ವಮಭಿಮಾನಮ್ । ನ ತ್ವಭಿಮಾನೇನ[1] ವರ್ಷಶತೇನಾಪಿ ಶ್ರುತ್ಯರ್ಥೋ ಜ್ಞಾತುಂ ಶಕ್ಯತೇ ಸರ್ವೈಃ ಪಣ್ಡಿತಂ ಮನ್ಯೈಃ । ಯಥಾ ಹೃದಯಾಕಾಶೇ ಪುರೀತತಿ ನಾಡೀಷು ಚ ಸ್ವಪತಃ ತತ್ಸಂಬನ್ಧಾಭಾವಾತ್ ತತೋ ವಿವಿಚ್ಯ ದರ್ಶಯಿತುಂ ಶಕ್ಯತೇ ಇತ್ಯಾತ್ಮನಃ ಸ್ವಯಂಜ್ಯೋತಿಷ್ಟ್ವಂ ನ ಬಾಧ್ಯತೇ । ಏವಂ ಮನಸಿ ಅವಿದ್ಯಾಕಾಮಕರ್ಮನಿಮಿತ್ತೋದ್ಭೂತವಾಸನಾವತಿ ಕರ್ಮನಿಮಿತ್ತಾ ವಾಸನಾಃ[2] ಅವಿದ್ಯಯಾ ಅನ್ಯದ್ ವಸ್ತ್ವನ್ತರಮಿವ ಪಶ್ಯತಃ ಸರ್ವಕಾರ್ಯಕರಣೇಭ್ಯಃ ಪ್ರವಿವಿಕ್ತಸ್ಯ ದ್ರಷ್ಟುಃ ವಾಸನಾಭ್ಯೋ ದೃಶ್ಯರೂಪಾಭ್ಯೋಽನ್ಯತ್ವೇನ ಸ್ವಯಂಜ್ಯೋತಿಷ್ಟ್ವಂ ಸುದರ್ಶಿತೇನಾಪಿ ತಾರ್ಕಿಕೇಣ ನ[3] ವಾರಯಿತುಂ ಶಕ್ಯತೇ । ತಸ್ಮಾತ್ ಸಾಧೂಕ್ತಂ ಮನಸಿ ಪ್ರಲೀನೇಷು ಕರಣೇಷು ಅಪ್ರಲೀನೇ ಚ ಮನಸಿ ಮನೋಮಯಃ ಸ್ವಪ್ನಾನ್ ಪಶ್ಯತೀತಿ ॥

(ಭಾಷ್ಯಾರ್ಥ)

(ಸಮಾಧಾನ):—ಹಾಗಾದರೆ ಎಲ್ಲಾ ಅಭಿಮಾನವನ್ನೂ ತೊರೆದು ಶ್ರುತ್ಯರ್ಥವನ್ನು ಕೇಳು. (ಏಕೆಂದರೆ) ತಾವೇ ಪಂಡಿತರೆಂದು ಭಾವಿಸಿಕೊಂಡಿರುವ ಯಾರೇ ಆಗಲಿ ಅಭಿಮಾನದಿಂದ ಶ್ರುತಿಯ ಅರ್ಥವನ್ನು ನೂರುವರ್ಷವಾದರೂ ತಿಳಿದುಕೊಳ್ಳಲಾರರು.[4] **ಹೃದಯಾಕಾಶದಲ್ಲಿಯೂ ಪುರೀತತ್ತಿನಲ್ಲಿಯೂ ನಾಡಿಗಳಲ್ಲಿಯೂ[5] ನಿದ್ರಿಸುತ್ತಿರುವ (ಆತ್ಮನಿಗೆ) ಅವುಗಳ ಸಂಬಂಧವಿಲ್ಲವಾದ್ದರಿಂದ[6] ಅವುಗಳಿಂದ ವಿಂಗಡಿಸಿ ತೋರಿಸುವದಕ್ಕಾಗುತ್ತದೆ ಎಂಬುದರ ಮೇಲೆ ಆತ್ಮನು ಸ್ವಯಂಜ್ಯೋತಿ ಎಂಬುದಕ್ಕೆ ಹೇಗೆ ಬಾಧೆಯಾಗುವದಿಲ್ಲವೋ ಹಾಗೆಯೇ ಅವಿದ್ಯೆ, ಕಾಮ, ಕರ್ಮ-ಎಂಬ ನಿಮಿತ್ತಗಳಿಂದ ಮೇಲಕ್ಕೆ**

---

1. "ನ ಹಿ ಅಭಿಮಾನೇನ" ಎಂದು ವಾ॥ ಪಾಠ.

2. "ವಾಸನಾವಿದ್ಯಯಾ" ಎಂಬ ಆ॥ ಪಾಠಕ್ಕಿಂತ ಈ ವಾ॥ ಪಾಠವು ಉತ್ತಮ.

3. "ಕೇನ" ಎಂದು ವಾ॥ ಪಾಠ.

4. ಗುರುವಿನ ಅನುಗ್ರಹದಿಂದಲೇ ತಿಳಿದುಕೊಳ್ಳಬೇಕು. ಮುಂ. ಭಾ. ೨-೧-೨.

5. ಪುರೀತತ್ತೆಂದರೆ ಹೃದಯದ ಮೇಲುಮುಸುಕು ; ಹೃದಯಾಕಾಶವೆಂದರೆ ಬ್ರಹ್ಮವೇ. ಇಲ್ಲಿ ಹೃದಯಾಕಾಶ, ಪುರೀತತ್ತು, ನಾಡಿಗಳು-ಇವುಗಳು ಸಮುಚ್ಚಯವನ್ನು ಹೇಗೆ ಅರ್ಥಮಾಡಿಕೊಳ್ಳಬೇಕೆಂಬುದನ್ನು ಸೂ. ಭಾ. ೩-೨-೭ ರಲ್ಲಿ ವಿವರಿಸಿದೆ.

6. ನಾಡೀಪುರೀತತ್ತುಗಳ ಮೂಲಕ ಆಕಾಶವನ್ನು ಸೇರಿ ನಿದ್ರಿಸುತ್ತಿರುವನೆಂಬುದು ಎಚ್ಚರದ ದೃಷ್ಟಿಯಿಂದ ; ನಿಜವಾಗಿ ಸುಷುಪ್ತಿಯಲ್ಲಿ ಆತ್ಮನಿಗೆ ಯಾವ ಸಂಬಂಧವೂ ಇರುವದಿಲ್ಲ. ಎಚ್ಚರದ ದೃಷ್ಟಿಯಿಂದ ನೋಡಿದರೂ ಗಡಿಗೆಯೊಳಗಿನ ಆಕಾಶವು ಗಡಿಗೆಗೆ ನಿಜವಾಗಿ ಕಟ್ಟುಬಿದ್ದಿರದಂತೆ ಆತ್ಮನು ಹೃದಯಾದಿಗಳ ಎಲ್ಲೆಕಟ್ಟಿನೊಳಗೆ ಇರುವದಿಲ್ಲ.

**ಎದ್ದ ವಾಸನೆಯುಳ್ಳ[1] ಮನಸ್ಸಿನಲ್ಲಿ ಕರ್ಮನಿಮಿತ್ತವಾದ ವಾಸನೆಗಳನ್ನು ಅವಿದ್ಯೆಯಿಂದ, ವಿಲಕ್ಷಣವಾದ ಬೇರೊಂದು ವಸ್ತುವಿನಂತೆ ಕಾಣುತ್ತಿರುವ ಎಲ್ಲಾ ಕಾರ್ಯಕರಣಗಳಿಂದಲೂ ಬೇರ್ಪಟ್ಟಿರುವ ದ್ರಷ್ಟೃವಾದ[2] (ಆತ್ಮನು) ದೃಶ್ಯರೂಪವಾದ ವಾಸನೆಗಳಿಗಿಂತ ಬೇರೆಯಾಗಿರುವದರಿಂದ ಸ್ವಯಂಜ್ಯೋತಿಯಾಗಿರುವನೆಂಬುದನ್ನು ಎಂಥ ಗರ್ವಿತನಾದ ತಾರ್ಕಿಕನಿಂದಲೂ ತಪ್ಪಿಸಲಾಗುವಂತಿಲ್ಲ.[3]** ಆದ್ದರಿಂದ ಕರಣಗಳು ಮನಸ್ಸಿನಲ್ಲಿ ಲಯವಾಗಿ ಮನಸ್ಸು ಲಯವಾಗದೆ ಇರುವಲ್ಲಿ ಮನೋಮಯನಾದ (ಆತ್ಮನು) ಸ್ವಪ್ನಗಳನ್ನು ಕಾಣುತ್ತಾನೆ ಎಂದದ್ದು ಸರಿಯೇ (ಆಯಿತು).

## ಕನಸಿನಲ್ಲಾಗುವ ಅನುಭವದ ವಿವರ

(ಭಾಷ್ಯ)

೬೭. ಕಥಂ ಮಹಿಮಾನಮನುಭವತೀತಿ? ಉಚ್ಯತೇ। ಯತ್ ಮಿತ್ರಂ ಪುತ್ರಾದಿ ವಾ ಪೂರ್ವಂ ದೃಷ್ಟಮ್ (ಅನು?)[4] ತದ್ವಾಸನಾವಾಸಿತಃ ಪುತ್ರಮಿತ್ರಾದಿವಾಸನಾಸಮುದ್ಭೂತಂ ಪುತ್ರಂ ಮಿತ್ರಮಿವ ವಾ ಅವಿದ್ಯಯಾ ಪಶ್ಯತಿ ಇತ್ಯೇವಂ ಮನ್ಯತೇ। ತಥಾ ಶ್ರುತಮ್ ಅರ್ಥಂ ತದ್ವಾಸನಯಾ ಅನುಶೃಣೋತೀವ। ದೇಶದಿಗನ್ತರೈಶ್ಚ ದೇಶಾನ್ತರೈರ್ದಿಗನ್ತರೈಶ್ಚ ಪ್ರತ್ಯನುಭೂತಂ ಪುನಃ ಪುನಃ ತತ್ ಪ್ರತ್ಯನುಭವತೀವ ಅವಿದ್ಯಯಾ। ತಥಾ ದೃಷ್ಟಂ ಚ ಅಸ್ಮಿನ್ ಜನ್ಮನಿ। ಅದೃಷ್ಟಂ ಚ ಜನ್ಮಾನ್ತರದೃಷ್ಟಮ್ ಇತ್ಯರ್ಥಃ। ಅತ್ಯನ್ತಾದೃಷ್ಟೇ ವಾಸನಾನುಪಪತ್ತೇಃ। ಏವಂ ಶ್ರುತಂ ಚ ಅಶ್ರುತಂ ಚ। ಅನುಭೂತಂ ಚ ಅಸ್ಮಿನ್ ಜನ್ಮನಿ ಕೇವಲೇನ ಮನಸಾ। ಅನನುಭೂತಂ ಚ ಮನಸೈವ ಜನ್ಮಾನ್ತರೇ ಅನುಭೂತಮ್ ಇತ್ಯರ್ಥಃ। ಸಚ್ಚ ಪರಮಾರ್ಥೋದಕಾದಿ। ಅಸಚ್ಚ ಮರೀಚ್ಯುದಕಾದಿ। ಕಿಂ ಬಹುನಾ? ಉಕ್ತಾನುಕ್ತಂ ಸರ್ವಂ ಪಶ್ಯತಿ ಸರ್ವಃ ಪಶ್ಯತಿ ಸರ್ವಮನೋವಾಸನೋಪಾಧಿಃ ಸನ್। ಏವಂ ಸರ್ವಕರಣಾತ್ಮಾ ಮನೋದೇವಃ ಸ್ವಪ್ನಾನ್ ಪಶ್ಯತಿ ॥

1. ಎಚ್ಚರದ ವಾಸನೆಯಿಂದ ಕನಸಾಗುವದೆಂಬ ವ್ಯಾವಹಾರಿಕದೃಷ್ಟಿಯಿಂದ ಆಡಿದ ಮಾತು.

2. ದೃಶ್ಯವಾದ ಕಾರ್ಯಕರಣಗಳಂತೆ ದೃಶ್ಯವಾದ ವಾಸನೆಗಳೂ ದ್ರಷ್ಟೃವಾದ ಆತ್ಮನಿಗಿಂತ ಬೇರೆ. ಆದ್ದರಿಂದ ಆತ್ಮನಿಗೆ ಮನಸ್ಸಿನ ಅಥವಾ ವಾಸನೆಯ ಸೋಂಕಿಲ್ಲ. ಛಾ. ಭಾ. ೮-೧೨-೧, ಬೃ. ಭಾ. ೪-೩-೯-ಇವುಗಳಲ್ಲಿ ವರ್ಣಿಸಿರುವದನ್ನು ನೋಡಿರಿ.

3. "ಯಾವ ಗರ್ವಿತನಾದ ತಾರ್ಕಿಕನಿಂದ ತಪ್ಪಿಸಲಾದೀತು?" ಎಂದು ವಾ॥ ಪಾಠಕ್ಕೆ ಅರ್ಥ.

4. ಇಲ್ಲಿ "ಅನು" ಎಂಬ ಮಾತು ಭಾಷ್ಯದಲ್ಲಿ ಬಿಟ್ಟುಹೋಗಿರುವಂತೆ ತೋರುತ್ತದೆ. "ದೃಷ್ಟಮ್ ಅನು" ಎಂದು ಕಲ್ಪಿಸಿಕೊಳ್ಳಬೇಕು.

(ಭಾಷ್ಯಾರ್ಥ)

ಮಹಿಮೆಯನ್ನು ಹೇಗೆ ಅನುಭವಿಸುತ್ತಾನೆ?-ಎಂದರೆ (ಶ್ರುತಿ) ಹೇಳುತ್ತದೆ. ಗೆಳೆಯನನ್ನಾಗಲಿ ಮಗನೇ ಮುಂತಾದದ್ದನ್ನಾಗಲಿ ಹಿಂದೆ ಯಾವದನ್ನು ನೋಡಿದ್ದನೋ ಆ ವಾಸನೆಯಿಂದ ಊಡಿಕೊಂಡು ವಾಸನೆಯಿಂದಾಗಿರುವ ಮಗನು, ಗೆಳೆಯನು ಮುಂತಾದದ್ದನ್ನು (ನಿಜವಾದ) ಮಗನಂತೆ ಅಥವಾ ಗೆಳೆಯನು (ಮುಂತಾದದ್ದ)ರಂತೆ ಅವಿದ್ಯೆಯಿಂದ ಕಾಣುತ್ತಾನೆ, ಎಂದರೆ ಹಾಗೆಂದು ಭಾವಿಸಿಕೊಳ್ಳುತ್ತಾನೆ (ಎಂದರ್ಥ). ಹಾಗೆಯೇ ಕೇಳಿದ್ದನ್ನೂ ಅದರ ವಾಸನೆಯಿಂದ ಮತ್ತೆ ಕೇಳುವಂತೆ (ಇರುತ್ತಾನೆ). ದೇಶದಿಗಂತರಗಳಲ್ಲಿ ಎಂದರೆ ಬೇರೆಬೇರೆಯ ದೇಶಗಳಲ್ಲಿಯೂ ಬೇರೆಬೇರೆಯ ದಿಕ್ಕುಗಳಲ್ಲಿಯೂ ಅನುಭವಿಸಿದ್ದನ್ನೇ ಮತ್ತೆ ಮತ್ತೆ ಅನುಭವಿಸುವಂತೆ ಅವಿದ್ಯೆಯಿಂದ (ಕಾಣುತ್ತಾನೆ). ಹಾಗೂ ನೋಡಿದ್ದನ್ನು ಎಂದರೆ ಈ ಜನ್ಮದಲ್ಲಿ (ಕಂಡಿರುವದನ್ನೂ) ನೋಡದ್ದನ್ನೂ ಎಂದರೆ ಮತ್ತೊಂದು ಜನ್ಮದಲ್ಲಿ ಕಂಡಿರುವದನ್ನೂ ಎಂದರ್ಥ; ಏಕೆಂದರೆ ತೀರ ನೋಡದೆ ಇದ್ದರೆ (ಅದರ) ವಾಸನೆಯೇ ಉಂಟಾಗಲಾರದು.[1] ಇದರಂತೆಯೇ ಕೇಳಿದ್ದನ್ನೂ ಕೇಳದ್ದನ್ನೂ (ಎಂಬುದರ ಅರ್ಥವನ್ನು ಅರಿಯಬೇಕು). ಅನುಭವಿಸಿದ್ದನ್ನು ಎಂದರೆ ಈ ಜನ್ಮದಲ್ಲಿ ಬರಿಯ ಮನಸ್ಸಿನಿಂದ (ಅನುಭವಿಸಿದ್ದನ್ನು)[2]. ಅನುಭವಿಸದೆ ಇರುವದನ್ನು ಎಂದರೆ-ಮನಸ್ಸಿನಿಂದಲೇ (ಹಿಂದಿನ) ಬೇರೊಂದು ಜನ್ಮದಲ್ಲಿ ಅನುಭವಿಸಿರುವದನ್ನು ಎಂದರ್ಥ. ಇರುವದನ್ನು ಎಂದರೆ ನಿಜವಾದ ನೀರು ಮುಂತಾದದ್ದನ್ನು; ಇಲ್ಲದ್ದನ್ನು ಎಂದರೆ ಬಿಸಿಲುಕುದುರೆಯ ನೀರೇ ಮುಂತಾದದ್ದನ್ನು[3]. ಹೆಚ್ಚು (ಹೇಳಿದ್ದ)ರಿಂದೇನು? (ಇವುಗಳನ್ನು) ಹೇಳಿರುವದು, ಹೇಳದೆ ಇರುವದು-ಎಲ್ಲವನ್ನೂ[4] ನೋಡುತ್ತಾನೆ; ಎಲ್ಲವೂ ಆಗಿ ನೋಡುತ್ತಾನೆ, ಎಂದರೆ ಎಲ್ಲಾ (ವಿಷಯದ) ಮನೋವಾಸನೆಗಳೆಂಬ ಉಪಾಧಿಯುಳ್ಳವನಾಗಿ (ನೋಡುತ್ತಾನೆ). ಹೀಗೆ ಎಲ್ಲಾ ಕರಣಗಳ ಸ್ವರೂಪನಾದ[5] ಮನೋದೇವನು ಕನಸುಗಳನ್ನು ಕಾಣುತ್ತಿರುತ್ತಾನೆ.

---

1. ಎಚ್ಚರದಲ್ಲಿ ಕಾಣದೆ ಇರುವದನ್ನೂ ಕನಸಿನಲ್ಲಿ ಕಾಣುವದುಂಟು; ಉದಾಹರಣೆಗೆ ತನಗೆ ನಾಲ್ಕು ಕೈಗಳಿರುವಂತೆ ಕಾಣುವದುಂಟು. ಆದರೆ ನಾಲ್ಕು, ಕೈಗಳು-ಇವುಗಳನ್ನು ಎಚ್ಚರದಲ್ಲಿ ನೋಡಿಯೇ ಇರುತ್ತಾನೆ; ಅವುಗಳ ಸಂಬಂಧವನ್ನು ಮಾತ್ರ ಅವಿದ್ಯೆಯಿಂದ ಕಲ್ಪಿಸಿರುತ್ತಾನೆ. ಇದೂ ಎಚ್ಚರದ ದೃಷ್ಟಿಯಿಂದ ಹೇಳಿದ್ದೆಂಬುದನ್ನು ಮರೆಯಬಾರದು.

2. ಉದಾಹರಣೆಗೆ ಸುಖದುಃಖಗಳನ್ನು.

3. ತೈ. ಭಾ. ೨-೬ (ಭಾ. ಭಾ. ೧೭೯) ರಲ್ಲಿ "ಸತ್ಯಂ ಚಾನೃತಂಚ" ಎಂಬುವದರ ವಿವರವನ್ನು ನೋಡಿ.

4. ಈ ಜನ್ಮದಲ್ಲಿ ಎಚ್ಚರದಲ್ಲಿ ಕಂಡದ್ದು, ಅಥವಾ ಜನ್ಮಾಂತರದಲ್ಲಿ ಕಂಡದ್ದು-ಎಲ್ಲವನ್ನೂ.

5. ಎಲ್ಲಾ ಕರಣಗಳ ವಾಸನೆಯಿಂದಲೂ ಕೆಲಸಮಾಡುತ್ತಿರುವ.

## ಸುಷುಪ್ತಿಯಲ್ಲಾಗುವ ನಿರುಪಾಧಿಕ ಸುಖ

**ಸ ಯದಾ ತೇಜಸಾಭಿಭೂತೋ ಭವತಿ। ಅತ್ರೈಷ ದೇವಃ ಸ್ವಪ್ನಾನ್ ನ ಪಶ್ಯತ್ಯಥ ತದೈತಸ್ಮಿಞ್ಶರೀರ ಏತತ್ಸುಖಂ ಭವತಿ॥ ೬**

೬. ಅವನು ಯಾವಾಗ ತೇಜಸ್ಸಿನಿಂದ ತಿರಸ್ಕರಿಸಲ್ಪಡುತ್ತಾನೋ (ಆಗ) ಇಲ್ಲಿ ಈ ದೇವನು ಕನಸುಗಳನ್ನು ಕಾಣುವದಿಲ್ಲ. ಆಗ ಈ ಶರೀರದಲ್ಲಿ ಈ ಸುಖವುಂಟಾಗುತ್ತದೆ.

(ಭಾಷ್ಯ)

೬೮. ಸಃ ಯದಾ ಮನೋರೂಪೋ ದೇವ. ಯಸ್ಮಿನ್ ಕಾಲೇ ಸೌರೇಣ ಪಿತ್ತಾಖ್ಯೇನ ತೇಜಸಾ ನಾಡೀಶಯೇನ ಸರ್ವತೋಽಭಿಭೂತಃ ಭವತಿ ತಿರಸ್ಕೃತ ವಾಸನಾದ್ವಾರೋ ಭವತಿ ತದಾ ಸಹ ಕರಣೈರ್ಮನಸೋ ರಶ್ಮಯೋ ಹೃದ್ಯುಪ ಸಂಹೃತಾ ಭವನ್ತಿ ಯದಾ ಮನೋ ದಾರ್ವಗ್ನಿವತ್ ಅವಿಶೇಷವಿಜ್ಞಾನರೂಪೇಣ ಕೃತ್ಸ್ನಂ ಶರೀರಂ ವ್ಯಾಪ್ಯ ಅವತಿಷ್ಠತೇ ತದಾ ಸುಷುಪ್ತೋ ಭವತಿ। ಅತ್ರ ಏತಸ್ಮಿನ್ ಕಾಲೇ ಏಷಃ ಮನಆಖ್ಯೋ ದೇವಃ ಸ್ವಪ್ನಾನ್ ನ ಪಶ್ಯತಿ। ದರ್ಶನದ್ವಾರಸ್ಯ ನಿರುದ್ಧತ್ವಾತ್ ತೇಜಸಾ। ಅಥ ತದಾ ಏತಸ್ಮಿನ್ ಶರೀರೇ ಏತತ್ ಸುಖಂ ಭವತಿ ಯದ್ವಿಜ್ಞಾನಂ ನಿರಾಬಾಧಮ್ ಅವಿಶೇಷೇಣ ಶರೀರವ್ಯಾಪಕಂ ಪ್ರಸನ್ನಂ ಭವತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಅವನು ಎಂದರೆ (ಆ) ಮನೋರೂಪನಾದ ದೇವನು ಯಾವಾಗ ಯಾವ ಕಾಲದಲ್ಲಿ ನಾಡಿಗಳಲ್ಲಿರುವ ಸೂರ್ಯಸಂಬಂಧವಾದ **ಪಿತ್ತವೆಂಬ ಹೆಸರಿನ ತೇಜಸ್ಸಿನಿಂದ**[1] ಎಲ್ಲಾ ಕಡೆಯಲ್ಲಿಯೂ ಅಭಿಭೂತನಾಗುವನೋ ಎಂದರೆ ವಾಸನಾದ್ವಾರಗಳು ಮುಚ್ಚಿಹೋದವನಾಗುವನೋ[2] ಆಗ ಕರಣಗಳೊಡನೆ ಮನಸ್ಸಿನ ಕಿರಣಗಳು ಹೃದಯದಲ್ಲಿ ಅಡಗುತ್ತವೆ.[3] ಯಾವಾಗ ಮನಸ್ಸು ಕಟ್ಟಿಗೆಯ ಬೆಂಕಿಯಂತೆ

---

1. ಈ ತೇಜಸ್ಸು ಎಲ್ಲೆಲ್ಲಿಯೂ ವ್ಯಾಪಿಸಿಕೊಳ್ಳುವದರಿಂದ ಹೊರಗಿನ ಅರಿವು ಇಲ್ಲದಂತಾಗುವದು. ಛಾ. ಭಾ. ೮-೬-೩ ನೋಡಿ. ತೇಜಸ್ಸೆಂದರೆ ಆತ್ಮರೂಪವೆಂದು ಅರ್ಥ ಮಾಡಿದರೆ ತೇಜಸ್ಸಿನಲ್ಲಿ ಯಾವಾಗ ಮನಸ್ಸು ಸೇರುವದೋ ಎಂದರ್ಥ. ಸೂ. ಭಾ. ೩-೨-೭ ನೋಡಿ.

2. ಕರಣದ್ವಾರಗಳನ್ನು ಪಿತ್ತವು ಮುಚ್ಚಿಕೊಂಡರೆ ವಾಸನೆಗಳು ಉಂಟಾಗದೆ ಇರುವವೆಂದು ಭಾವ. ಎಚ್ಚರವಾಗದೆ ಇರುವದಕ್ಕೆ ಇದೇ ಕಾರಣ. ಛಾ. ಭಾ. ೮-೬-೩

3. ಮನಸ್ಸಿನ ಅನುಭವಸ್ಮೃತಿಗಳೆಂಬ ವ್ಯಾಪಾರಗಳು ವಿಶೇಷರೂಪವನ್ನು ಬಿಟ್ಟು ಪ್ರಾಣರೂಪದಿಂದ ಹೃದಯದಲ್ಲಿ ನಿಂತುಬಿಡುವವು. ಮಾಂ. ಕಾ. ಭಾ. ೧-೨; ಛಾ. ಭಾ. ೪-೩-೩.

ಸಾಮಾನ್ಯವಾದ ವಿಜ್ಞಾನದ ರೂಪದಿಂದ[1] ಶರೀರವೆಲ್ಲವನ್ನೂ ವ್ಯಾಪಿಸಿಕೊಂಡಿರುವದೋ ಇನ್ನು (ಆಗ) ಸುಷುಪ್ತನಾಗುತ್ತಾನೆ. ಇಲ್ಲಿ ಈ ಕಾಲದಲ್ಲಿ ಮನಸ್ಸೆಂಬ ಹೆಸರಿನ ದೇವನು ಕನಸುಗಳನ್ನು ಕಾಣುವದಿಲ್ಲ; ಏಕೆಂದರೆ ಕಾಣುವ ದ್ವಾರವು ತೇಜಸ್ಸಿನಿಂದ ಮುಚ್ಚಿಹೋಗಿರುತ್ತದೆ.[2] ಇನ್ನು ಆಗ[3] ಈ ಶರೀರದಲ್ಲಿ ಈ ಸುಖವುಂಟಾಗುತ್ತದೆ.[4] ಅದರ ಅರಿವು ಸಾಮಾನ್ಯರೂಪದಿಂದ (ಶರೀರವನ್ನೆಲ್ಲ) ವ್ಯಾಪಿಸಿಕೊಂಡು ಪ್ರಸನ್ನವಾಗಿರುತ್ತದೆ ಎಂದರ್ಥ.[5]

## ಸುಷುಪ್ತಿಯಲ್ಲಿರುವ ಅದ್ವಯಾತ್ಮಸ್ವರೂಪ

(ಭಾಷ್ಯ)

೬೯. ಏತಸ್ಮಿನ್ ಕಾಲೇ ಅವಿದ್ಯಾಕಾಮಕರ್ಮನಿಬನ್ಧನಾನಿ ಕಾರ್ಯಕರಣಾನಿ ಶಾನ್ತಾನಿ ಭವನ್ತಿ । ತೇಷು ಶಾನ್ತೇಷು ಆತ್ಮಸ್ವರೂಪಮ್ ಉಪಾಧಿಭಿರನ್ಯಥಾವಿಭಾವ್ಯಮಾನಮ್ ಅದ್ವಯಮ್ ಏಕಂ ಶಿವಂ ಶಾನ್ತಂ ಭವತಿ ಇತಿ ಏತಾಮವಸ್ಥಾಂ ಪೃಥಿವ್ಯಾದ್ಯವಿದ್ಯಾಕೃತಮಾತ್ರಾನುಪ್ರವೇಶೇನ ದರ್ಶಯಿತುಂ ದೃಷ್ಟಾನ್ತಮಾಹ—

(ಭಾಷ್ಯಾರ್ಥ)

**ಈ ಕಾಲದಲ್ಲಿ ಅವಿದ್ಯಾಕಾಮಕರ್ಮಗಳಿಂದಾಗಿರುವ ಕಾರ್ಯಕರಣಗಳು ಇಲ್ಲವಾಗುವವು.[6] ಅವು ಇಲ್ಲವಾಗಲು ಉಪಾಧಿಗಳಿಂದ ಬೇರೆಯು ಪ್ರಕಾರವಾಗಿ ತಿಳಿಯುಬರುತ್ತಿರುವ[7] ಆತ್ಮಸ್ವರೂಪವು ತನಗೆರಡನೆಯದಿಲ್ಲದೆ**

1. ಚೈತನ್ಯರೂಪದಿಂದ ಎಂದರ್ಥ. "ಚೇತನಾ ಎಂಬ ಸಾಮಾನ್ಯವೃತ್ತಿರೂಪದಿಂದ" ಎಂಬ ವ್ಯಾಖ್ಯಾನವು ಭಾಷ್ಯಕ್ಕೂ ಅನುಭವಕ್ಕೂ ವಿರುದ್ಧ. ಚೈತನ್ಯವು ಶರೀರವನ್ನೆಲ್ಲ ಕಟ್ಟಿಗೆಯ ಬೆಂಕಿಯು ವ್ಯಾಪಿಸಿಕೊಂಡಿರುವಂತೆ ವ್ಯಾಪಿಸಿಕೊಂಡಿರುತ್ತದೆ-ಎಂದು ಹೇಳಿರುವದು ಎಚ್ಚರದ ದೃಷ್ಟಿಯಿಂದ; ಸುಷುಪ್ತನ ದೃಷ್ಟಿಯಿಂದ ಶರೀರವೇ ಇರುವದಿಲ್ಲ.

2. ಕರಣಗಳನ್ನು ಪಿತ್ತವು ಮುಚ್ಚಿಹಾಕಿರುತ್ತದೆ; ಆದ್ದರಿಂದ ದರ್ಶನವಾಗಲಿ ವಾಸನೆಯಾಗಲಿ ಇರುವದಿಲ್ಲ.

3. "ಅಥ ತದಾ" ಎಂಬುದಕ್ಕೆ ಬದಲು "ಅಥ" ಎಂದಿಷ್ಟೇ ಇರುವ ಉಪನಿಷತ್ಪಾಠದಲ್ಲಿ ತದಾ ಎಂಬುದು ಭಾಷ್ಯಕ್ಕೆ ಸೇರಿದ್ದೆಂದು ಭಾವಿಸಬೇಕು.

4. ಇಲ್ಲಿ ಆನಂದಮಯಕೋಶವೆಂಬ ಹೆಸರಿನ ಅಜ್ಞಾನವನ್ನು ಹೇಳಿರುತ್ತದೆ-ಎಂಬ ವ್ಯಾಖ್ಯಾನವು ಭಾಷ್ಯವಿರುದ್ಧ. ಈ ವಿಷಯಕ್ಕೆ ಪೀಠಿಕೆಯನ್ನು ನೋಡಿರಿ.

5. ಈ ಸುಖವು ಆತ್ಮನ ಸ್ವರೂಪವೇ. ಸೂ. ಭಾ. ೧-೩-೯ ನೋಡಿ.

6. ಸುಷುಪ್ತಿಯಲ್ಲಿ ಅವಿದ್ಯಾಕಾಮಕರ್ಮಗಳು ಇರುವದಿಲ್ಲವಾದ್ದರಿಂದ ಕಾರ್ಯಕರಣಗಳಾಗಲಿ ವಿಷಯಗಳಾಗಲಿ ಇರುವದಿಲ್ಲವೆಂಬ ಬಗ್ಗೆ ಬೃ. ೪-೩-೨೧ ನೋಡಿ.

7. ಶ್ರೋತ್ರವೇ ಮುಂತಾದ ಉಪಾಧಿಗಳಿಂದ ಶ್ರೋತೃತ್ವವೇ ಮುಂತಾದವು ಆತ್ಮನ ರೂಪಗಳೆಂದು ತೋರುತ್ತಿರುವವು. ಬೃ. ಭಾ. ೧-೪-೭.

**ಒಂದೇ ಒಂದಾಗಿ ಮಂಗಳಕರವಾಗಿ ಶಾಂತವಾಗಿರುವದು** ಎಂದು ಈ ಅವಸ್ಥೆಯನ್ನು ಅವಿದ್ಯೆಯಿಂದಾಗಿರುವ ಪೃಥವಿಯೇ ಮುಂತಾದವುಗಳ ಮಾತ್ರೆಗಳ ಪ್ರವೇಶದಿಂದ ತೋರಿಸಿಕೊಡುವದಕ್ಕಾಗಿ[1] (ಶ್ರುತಿಯು) ದೃಷ್ಟಾಂತವನ್ನು ಹೇಳುತ್ತದೆ:—

**ಸ ಯಥಾ ಸೋಮ್ಯ ವಯಾಂಸಿ ವಾಸೋವೃಕ್ಷಂ ಸಂಪ್ರತಿಷ್ಠನ್ತೇ**
**ಏವಂ ಹ ವೈ ತತ್ ಸರ್ವಂ ಪರ ಆತ್ಮನಿ ಸಂಪ್ರತಿಷ್ಠತೇ ॥ ೭ ॥**

೭. ಅದು ಹೇಗೆಂದರೆ: ಎಲೈ ಸೋಮ್ಯನೆ, ಹೇಗೆ ಪಕ್ಷಿಗಳು (ತಮ್ಮ) ವಾಸದ ವೃಕ್ಷವನ್ನು ಹೋಗಿ ಸೇರಿಕೊಳ್ಳುವವೋ, ಹೀಗೆಯೇ ಅದೆಲ್ಲವೂ ಪರಮಾತ್ಮನಲ್ಲಿ ಸೇರಿಕೊಳ್ಳುವದು.

(ಭಾಷ್ಯ)

೭೦. ಸ ದೃಷ್ಟಾನ್ತಃ ಯಥಾ ಯೇನ ಪ್ರಕಾರೇಣ ಸೋಮ್ಯ[2] ಪ್ರಿಯದರ್ಶನ ವಯಾಂಸಿ ಪಕ್ಷಿಣಃ ವಾಸಾರ್ಥಂ ವೃಕ್ಷಂ ವಾಸೋವೃಕ್ಷಂ ಪ್ರತಿ ಸಂಪ್ರತಿಷ್ಠನ್ತೇ ಗಚ್ಛನ್ತಿ ಏವಂ ಯಥಾ[3] ದೃಷ್ಟಾನ್ತಃ ಹ ವೈ ತತ್ ವಕ್ಷ್ಯಮಾಣಂ ಸರ್ವಂ ಪರೇ ಆತ್ಮನಿ ಅಕ್ಷರೇ ಸಂಪ್ರತಿಷ್ಠತೇ ॥

(ಭಾಷ್ಯಾರ್ಥ)

ಆ ದೃಷ್ಟಾಂತವು ಹೇಗೆಂದರೆ: ಹೇಗೆ[4] ಯಾವ ಪ್ರಕಾರದಿಂದ, ಎಲೈ ಸೋಮ್ಯನೆ, ಪ್ರಿಯದರ್ಶನನೆ, 'ವಯಾಂಸಿ' ಎಂದರೆ ಪಕ್ಷಿಗಳು ವಾಸದ ವೃಕ್ಷವನ್ನು (ತಾವು) ವಾಸಕ್ಕಾಗಿ ಮಾಡಿಕೊಂಡಿರುವ ಮರವನ್ನು ಕುರಿತು ಹೊರಡುತ್ತವೆಯೋ ಹೋಗಿ ಸೇರಿಕೊಳ್ಳುತ್ತವೆಯೋ, ಹೀಗೆಯೇ ಈ ದೃಷ್ಟಾಂತದಂತೆಯೇ ಅದೆಲ್ಲವೂ ಎಂದರೆ ಮುಂದೆ ಹೇಳುವದೆಲ್ಲವೂ ಪರಮಾತ್ಮನಲ್ಲಿ ಅಕ್ಷರ (ತತ್ತ್ವ)ದಲ್ಲಿ ಹೋಗಿ ಸೇರಿಕೊಳ್ಳುವದು.

---

1. ಉಪಾಧಿಗಳೆಲ್ಲವೂ ಆತ್ಮರೂಪದಲ್ಲಿ ಬೆರೆತುಕೊಂಡಿರುವವೆಂದು ತೋರಿಸುವದಕ್ಕೆ.

2. "ಹಿ ಸೋಮ್ಯ" ಎಂದು ವಾ॥ ಪಾಠ. "ಹೇ ಸೋಮ್ಯ" ಎಂದಿದ್ದರೆ ಸರಿಯಾದೀತು.

3. "ಯಥಾ" ಎಂಬ ಮಾತಿನ ಮುಂದೆ "ಅಯಂ" ಎಂದಿದ್ದರೆ ಅರ್ಥವು ಸ್ಫುಟವಾಗುತ್ತದೆ.

4. "ಸ ದೃಷ್ಟಾನ್ತಃ ಯಥಾ" ಎಂದಿರಬೇಕು. ಅಥವಾ ಯಥಾ ಎಂಬ ಮಾತು ಎರಡು ಕಡೆಗೂ ಅನ್ವಯಿಸುತ್ತದೆ ಎಂದಿಟ್ಟುಕೊಳ್ಳಬೇಕು. ಇಲ್ಲಿ ಕೊಟ್ಟಿರುವ ದೃಷ್ಟಾಂತದಲ್ಲಿ ಹಕ್ಕಿಗಳು ಗೂಡಿನಲ್ಲಿ ಮರೆಯಾಗಿರುತ್ತವೆಯೇ ಹೊರತು ಒಂದಾಗಿರುವದಿಲ್ಲ; ದಾರ್ಷ್ಟಾಂತಿಕದಲ್ಲಿ ಎಲ್ಲವೂ ಆತ್ಮನಲ್ಲಿ ಒಂದಾಗಿರುತ್ತದೆ; ಆದ್ದರಿಂದ ತನ್ನ ಮೂಲವನ್ನು ಬಿಟ್ಟು ಬೇರೆಯಾಗಿರುವದಿಲ್ಲವೆಂಬುದಷ್ಟೇ ಇಲ್ಲಿ ಹೋಲಿಕೆ ಎಂದು ತಿಳಿಯಬೇಕು.

(ಭಾಷ್ಯ)

೭೧. ಕಿಂ ತತ್ ಸರ್ವಮ್ ?

(ಭಾಷ್ಯಾರ್ಥ)

ಅದೆಲ್ಲವೂ ಎಂದರೆ (ಯಾವ) ಯಾವದು ?[1] (ಎಂದರೆ ಶ್ರುತಿ ಹೇಳುತ್ತದೆ) :—

**ಪೃಥಿವೀ ಚ ಪೃಥಿವೀಮಾತ್ರಾ ಚಾಪಶ್ಚಾಪೋಮಾತ್ರಾ ಚ ತೇಜಶ್ಚ ತೇಜೋಮಾತ್ರಾ ಚ ವಾಯುಶ್ಚ ವಾಯುಮಾತ್ರಾ ಚಾಕಾಶಶ್ಚಾಕಾಶಮಾತ್ರಾ ಚ ಚಕ್ಷುಶ್ಚ ದ್ರಷ್ಟವ್ಯಂ ಚ ಶ್ರೋತ್ರಂ ಚ ಶ್ರೋತವ್ಯಂ ಚ ಘ್ರಾಣಂ ಚ ಘ್ರಾತವ್ಯಂ ಚ ರಸಶ್ಚ ರಸಯಿತವ್ಯಂ ಚ ತ್ವಕ್ಚ ಸ್ಪರ್ಶಯಿತವ್ಯಂ ಚ ವಾಕ್ಚ ವಕ್ತವ್ಯಂ ಚ ಹಸ್ತೌ ಚಾದಾತವ್ಯಂ ಚೋಪಸ್ಥಶ್ಚಾನನ್ದಯಿತವ್ಯಂ ಚ ಪಾಯುಶ್ಚ ವಿಸರ್ಜಯಿತವ್ಯಂ ಚ ಪಾದೌ ಚ ಗನ್ತವ್ಯಂ ಚ ಮನಶ್ಚ ಮನ್ತವ್ಯಂ ಚ ಬುದ್ಧಿಶ್ಚ ಬೋದ್ಧವ್ಯಂ ಚಾಹಂಕಾರಶ್ಚಾಹಂಕರ್ತವ್ಯಂ ಚ ಚಿತ್ತಂ ಚ ಚೇತಯಿತವ್ಯಂ ಚ ತೇಜಶ್ಚ ವಿದ್ಯೋತಯಿತವ್ಯಂ ಚ ಪ್ರಾಣಶ್ಚ ವಿಧಾರಯಿತವ್ಯಂ ಚ ॥ ೮ ॥**

೮. ಪೃಥ್ವಿಯೂ ಪೃಥ್ವೀಮಾತ್ರೆಯೂ, ಅಪ್ಪೂ ಆಪೋಮಾತ್ರೆಯೂ, ತೇಜಸ್ಸೂ ತೇಜೋಮಾತ್ರೆಯೂ, ವಾಯುವೂ ವಾಯುಮಾತ್ರೆಯೂ, ಆಕಾಶವೂ ಆಕಾಶಮಾತ್ರೆಯೂ, ಕಣ್ಣೂ ನೋಡತಕ್ಕದ್ದೂ, ಕಿವಿಯೂ ಕೇಳತಕ್ಕದ್ದೂ, ಮೂಗೂ ಮೂಸಲ್ಪಡತಕ್ಕದ್ದೂ, ನಾಲಗೆಯೂ ಸವಿನೋಡಲ್ಪಡತಕ್ಕದ್ದೂ, ತ್ವಕ್ಕೂ ಸೋಕಲ್ಪಡತಕ್ಕದ್ದೂ, ವಾಕ್ಕೂ ಮಾತಾಡತಕ್ಕದ್ದೂ, ಹಸ್ತಗಳೂ ತೆಗೆದುಕೊಳ್ಳಲ್ಪಡತಕ್ಕದ್ದೂ, ಉಪಸ್ಥವೂ ಆನಂದಪಡತಕ್ಕದ್ದೂ, ಪಾಯುವೂ ಬಿಡತಕ್ಕದ್ದೂ, ಪಾದಗಳೂ ನಡೆಯುತಕ್ಕದ್ದೂ, ಮನಸ್ಸೂ ಮನನಮಾಡಲ್ಪಡತಕ್ಕದ್ದೂ, ಬುದ್ಧಿಯೂ ನಿಶ್ಚಯಿಸಲ್ಪಡತಕ್ಕದ್ದೂ, ಅಹಂಕಾರವೂ ಅಭಿಮಾನಿಸಲ್ಪಡತಕ್ಕದ್ದೂ, ಚಿತ್ತವೂ ಅರಿಯಲ್ಪಡತಕ್ಕದ್ದೂ, ತೇಜಸ್ಸೂ ಬೆಳಗಲ್ಪಡತಕ್ಕದ್ದೂ, ಪ್ರಾಣವೂ ತಡೆದುಕೊಂಡಿರಬೇಕಾದದ್ದೂ.

---

1. ಸುಷುಪ್ತಿಯಲ್ಲಿ ಆತ್ಮನಲ್ಲಿ ಒಂದಾಗುವದು ಯಾವಯಾವದು ?

(ಭಾಷ್ಯ)

೭.೨. ಪೃಥಿವೀ ಚ ಸ್ಥೂಲಾ ಪಞ್ಚಗುಣಾ ತತ್ಕಾರಣಂ[1] ಚ ಪೃಥಿವೀಮಾತ್ರಾ[2] ಚ ಗನ್ಧತನ್ಮಾತ್ರಾ । ತಥಾ ಆಪಶ್ಚ ಆಪೋಮಾತ್ರಾ[3] ಚ ತೇಜಶ್ಚ ತೇಜೋಮಾತ್ರಾ ಚ ವಾಯುಶ್ಚ ವಾಯುಮಾತ್ರಾ ಚ ಆಕಾಶಶ್ಚ ಆಕಾಶಮಾತ್ರಾ ಚ ಸ್ಥೂಲಾನಿ ಚ ಸೂಕ್ಷ್ಮಾಣಿ ಚ ಭೂತಾನಿ ಇತ್ಯರ್ಥಃ । ತಥಾ ಚಕ್ಷುಶ್ಚ ಇನ್ದ್ರಿಯಂ ರೂಪಂ ಚ ದ್ರಷ್ಟವ್ಯಂ ಚ, ಶ್ರೋತ್ರಂ ಚ ಶ್ರೋತವ್ಯಂ ಚ, ಘ್ರಾಣಂ ಚ ಘ್ರಾತವ್ಯಂ ಚ, ರಸಶ್ಚ ರಸಯಿತವ್ಯಂ ಚ, ತ್ವಕ್ಚ ಸ್ಪರ್ಶಯಿತವ್ಯಂ ಚ, ವಾಕ್ಚ ವಕ್ತವ್ಯಂ ಚ, ಹಸ್ತೌ ಚ, ಆದಾತವ್ಯಂ ಚ, ಉಪಸ್ಥಶ್ಚ ಆನನ್ದಯಿತವ್ಯಂ ಚ, ಪಾಯುಶ್ಚ ವಿಸರ್ಜಯಿತವ್ಯಂ ಚ, ಪಾದೌ ಚ ಗನ್ತವ್ಯಂ ಚ । ಬುದ್ಧೀನ್ದ್ರಿಯಾಣಿ ಕರ್ಮೇನ್ದ್ರಿಯಾಣಿ ತದರ್ಥಾಶ್ಚ ಉಕ್ತಾಃ[4] । ಮನಶ್ಚ ಪೂರ್ವೋಕ್ತಮ್ । ಮನ್ತವ್ಯಂ ಚ ತದ್ವಿಷಯಃ । ಬುದ್ಧಿಶ್ಚ ನಿಶ್ಚಯಾತ್ಮಿಕಾ । ಬೋದ್ಧವ್ಯಂ ಚ ತದ್ವಿಷಯಃ । ಅಹಂಕಾರಶ್ಚ ಅಭಿಮಾನಲಕ್ಷಣಮ್ ಅನ್ತಃಕರಣಮ್ । ಅಹಂಕರ್ತವ್ಯಂ ಚ ತದ್ವಿಷಯಃ । ಚಿತ್ತಂ ಚ ಚೇತನಾವತ್ ಅನ್ತಃಕರಣಮ್ । ಚೇತಯಿತವ್ಯಂ ಚ ತದ್ವಿಷಯಃ । ತೇಜಶ್ಚ ತ್ವಗಿನ್ದ್ರಿಯವ್ಯತಿರೇಕೇಣ ಪ್ರಕಾಶವಿಶಿಷ್ಟಾ ಯಾ ತ್ವಕ್ । ತಯಾ ನಿರ್ಭಾಸ್ಯೋ ವಿಷಯಃ ವಿದ್ಯೋತಯಿತವ್ಯಮ್ । ಪ್ರಾಣಶ್ಚ ಸೂತ್ರಂ ಯದಾಚಕ್ಷತೇ । ತೇನ ವಿಧಾರಯಿತವ್ಯಂ ಸಂಗ್ರಥನೀಯಮ್ । ಸರ್ವಂ ಹಿ ಕಾರ್ಯಕರಣಜಾತಂ[5] ಪಾರಾರ್ಥ್ಯೇನ ಸಂಹತಂ ನಾಮರೂಪಾತ್ಮಕಮ್ ಏತಾವದೇವ ॥

(ಭಾಷ್ಯಾರ್ಥ)

ಐದು ಗುಣಗಳಿಂದ ಕೂಡಿದ[6] ಪೃಥಿವಿಯು ಸ್ಥೂಲ (ಪೃಥಿವಿಯು); ಮತ್ತು ಪೃಥಿವೀಮಾತ್ರೆ ಎಂದರೆ ಈ (ಸ್ಥೂಲಪೃಥಿವಿ)ಗೆ ಕಾರಣವಾಗಿರುವ **ಗಂಧತನ್ಮಾತ್ರೆ**.[7]

---

1. "ತತ್ಕಾರಣಾ ಚ" ಎಂಬ ಆ॥ ಪಾಠಕ್ಕಿಂತ ಈ ವಾ॥ ಪಾಠವು ಮೇಲು.

2. "ಪೃಥಿವೀಮಾತ್ರಾ" ಎಂದು ಚಕಾರರಹಿತವಾಗಿ ವಾ॥ ಪಾಠ.

3. "ಆಪೋಮಾತ್ರಾ" ಎಂಬಲ್ಲಿ ಸಮಾಸವಾಗಿದ್ದರೂ ವಿಭಕ್ತಿಪ್ರತ್ಯಯವು ಲೋಪವಾಗದೆ ಇರುವದು ವೈದಿಕಪ್ರಯೋಗವೆಂದು ವ್ಯಾಖ್ಯಾನದಲ್ಲಿದೆ; ಆಪಃ ಎಂಬುದು ಸಾಂತಶಬ್ದವೆಂದು ಕೆಲವರ ಅಭಿಪ್ರಾಯ.

4. "ತಥಾ ಚೋಕ್ತಾನಿ" ಎಂಬ ಆ॥ ಪಾಠಕ್ಕಿಂತ ಈ ವಾ॥ ಪಾಠವು ಮೇಲು.

5. "ಕಾರ್ಯಕಾರಣಜಾತಮ್" ಎಂಬ ಪಾಠಕ್ಕಿಂತ ಈ ವಾ॥ ಪಾಠವೇ ಮೇಲು.

6. "ಸ್ಥೂಲಪೃಥ್ವಿಯಲ್ಲಿ ಐದು ಗುಣಗಳಿರುವವೆಂದು ಹೇಳಿರುವದರ ಅಭಿಪ್ರಾಯವೇನೆಂಬುದು ಸ್ಪಷ್ಟವಿಲ್ಲ; ಏಕೆಂದರೆ ಆಚಾರ್ಯರು ಛಾ. ಭಾ. ೬-೪-೪ ರಲ್ಲಿ ಪಂಚೀಕರಣವನ್ನು ಒಪ್ಪಿರುವದರಿಂದ ಎಲ್ಲಾ ಗುಣಗಳೂ ಎಲ್ಲಾ ಭೂತಗಳಲ್ಲಿಯೂ ಇರುತ್ತವೆ ಎಂದು ಹೇಳಿದಂತೆ ಆಯಿತು.

7. ತನ್ಮಾತ್ರೆಗಳ ವಿಷಯದಲ್ಲಿಯೂ ಅವುಗಳಿಗೂ ಸ್ಥೂಲಭೂತಗಳಿಗೂ ಇರುವ ಸಂಬಂಧದ ವಿಷಯಕ್ಕೂ ಪೀಠಿಕೆಯನ್ನು ನೋಡಿ.

ಇದರಂತೆ ಅಪ್ಪೂ ಅಪೋಮಾತ್ರೆಯೂ, ತೇಜಸ್ಸೂ ತೇಜೋಮಾತ್ರೆಯೂ, ವಾಯುವೂ ವಾಯುಮಾತ್ರೆಯೂ, ಆಕಾಶವೂ ಆಕಾಶಮಾತ್ರೆಯೂ-ಎಂದರೆ ಸ್ಥೂಲವಾದ ಮತ್ತು ಸೂಕ್ಷ್ಮವಾದ ಭೂತಗಳು ಎಂದರ್ಥ. ಹಾಗೂ ಚಕ್ಷುಸ್ಸೆಂಬ ಇಂದ್ರಿಯವೂ ಅದರಿಂದ ನೋಡಲ್ಪಡತಕ್ಕ ರೂಪವೂ, ಶ್ರೋತ್ರವೂ ಕೇಳಲ್ಪಡತಕ್ಕದ್ದೂ, ಘ್ರಾಣವೂ ಮೂಸಲ್ಪಡತಕ್ಕದ್ದೂ ಜಿಹ್ವೇಂದ್ರಿಯವೂ ಸವಿನೋಡಲ್ಪಡತಕ್ಕದ್ದೂ, ತ್ವಗಿಂದ್ರಿಯವೂ, ಮುಟ್ಟಲ್ಪಡತಕ್ಕದ್ದೂ, ವಾಗಿಂದ್ರಿಯವೂ ಮಾತಾಡಲ್ಪಡತಕ್ಕದ್ದೂ, ಹಸ್ತಗಳೂ ತೆಗೆದುಕೊಳ್ಳಲ್ಪಡತಕ್ಕದ್ದೂ, ಉಪಸ್ಥವೂ (ಅನುಭವಿಸಿ) ಆನಂದಪಡತಕ್ಕದ್ದೂ, ಪಾಯುವೂ ಬಿಡತಕ್ಕದ್ದೂ, ಪಾದಗಳೂ ನಡೆಯತಕ್ಕದ್ದೂ; ಎಂದರೆ ಹಿಂದೆ ಹೇಳಿದ[1] ಬುದ್ಧೀಂದ್ರಿಯಗಳು, ಕರ್ಮೇಂದ್ರಿಯಗಳು, ಮತ್ತು ಅವುಗಳ ವಿಷಯಗಳು (ಎಂದರ್ಥ). ಹಿಂದೆ ಹೇಳಿದ ಮನಸ್ಸು[2] ಮತ್ತು ಮನನಮಾಡಲ್ಪಡತಕ್ಕದ್ದು ಎಂಬ ಅದರ ವಿಷಯವು; ನಿಶ್ಚಯಮಾಡುವ ರೂಪದ ಬುದ್ಧಿಯು ಮತ್ತು ಅದರ ವಿಷಯವಾದ ಬೋದ್ಧವ್ಯವು; ಅಹಂಕಾರವು ಎಂದರೆ ಅಭಿಮಾನ (ಮಾಡುವ) ರೂಪದ ಅಂತಃಕರಣವು, ಮತ್ತು ಅಹಂಕರ್ತವ್ಯವು (ಅಭಿಮಾನಮಾಡಲ್ಪಡತಕ್ಕ) ಅದರ ವಿಷಯವು; ಚಿತ್ತವು ಎಂದರೆ ಚೇತನಾ (ವೃತ್ತಿಯುಳ್ಳ)[3] ಅಂತಃಕರಣವು ಮತ್ತು ಚೇತಯಿತವ್ಯವಾದ ಅದರ ವಿಷಯವು; ತೇಜಸ್ಸು ಎಂದರೆ ತ್ವಗಿಂದ್ರಿಯವಲ್ಲದೆ (ವಿಷಯವನ್ನು) ತಿಳಿಸುವ (ಶಕ್ತಿಯಿಂದ) ಕೂಡಿರುವ[4] ತ್ವಕ್ಕಿದೆಯಲ್ಲ, ಅದು ಮತ್ತು ಅದರಿಂದ ತಿಳಿಸಲ್ಪಡತಕ್ಕ ವಿಷಯವು ವಿದ್ಯೋತಯಿತವ್ಯವು; ಪ್ರಾಣವು ಎಂದರೆ ಸೂತ್ರನೆನ್ನುವರಲ್ಲ, ಅದು. (ಮತ್ತು) ಅದರಿಂದ ತಡೆದುಕೊಳ್ಳಲ್ಪಡತಕ್ಕದ್ದು ಎಂದರೆ ಗಂಟುಹಾಕಿ ನಿಲ್ಲಿಸಿಕೊಳ್ಳತಕ್ಕ (ವಿಷಯವು). ಮತ್ತೊಬ್ಬ (ಆತ್ಮನಿ)ಗಾಗಿ ಒಂದರೊಡನೊಂದು ಕೂಡಿಕೊಂಡು ಗುಂಪಾಗಿರುವ[5] ನಾಮರೂಪಾತ್ಮಕವಾದ ಕಾರ್ಯಕರಣ ಸಮೂಹವೆಲ್ಲ ಇಷ್ಟೇ[6].

---

1. ಪ್ರ. ಭಾ. ೨-೨ ರಲ್ಲಿ ಹೇಳಿರುವ.

2. ಪ್ರ. ಭಾ. ೨-೨ ರಲ್ಲಿ ಹೇಳಿರುವ ಅಂತಃಕರಣ; ಇದನ್ನು ಇಲ್ಲಿ ಮನಸ್ಸು, ಬುದ್ಧಿ, ಚಿತ್ತ, ಅಹಂಕಾರ-ಎಂದು ವೃತ್ತಿಭೇದದಿಂದ ವಿಂಗಡಿಸಿ ಹೇಳಿರುತ್ತದೆ. ಸಾಮಾನ್ಯದರಿವು ಚಿತ್ತವು; ಇಂಥದ್ದು, ಅಂಥದ್ದು-ಎಂದು ವಿಕಲ್ಪಿಸುವದು ಮನಸ್ಸು; ಇಂಥದ್ದೇ ಎಂದು ನಿಶ್ಚಯಿಸುವದು ಬುದ್ಧಿ; ಅನಾತ್ಮವಸ್ತುಗಳಲ್ಲಿ ನಾನು ಎಂದು ಭಾವಿಸುವದು ಅಹಂಕಾರವು.

3. ಸಾಮಾನ್ಯವಾಗಿ ಅರಿಯುವ.

4. ಉದಾಹರಣೆಗೆ ಬೆನ್ನಮೇಲೆ ಹಾಲಿನ ತನಿ ಎರೆದರೆ ಅದರ ಚಲನೆಯನ್ನು ತಿಳಿಸುವ.

5. ಕಾರ್ಯಕರಣಗಳು ಒಟ್ಟಾಗಿ ಒಂದಕ್ಕೊಂದಕ್ಕೆ ಹೊಂದಿಕೊಂಡು ಕೆಲಸಮಾಡುತ್ತಿರುವದು ಭೋಕ್ತೃವಾದ ಆತ್ಮನಿಗಾಗಿ. ಕೇ. ಭಾ. ಭಾ. ೧೬, ಕ. ಭಾ. ಭಾ. ೧೩೧, ತೈ. ಭಾ. ಭಾ. ೧೮೬, ಐ. ಭಾ. ಭಾ. ೫೧, ೫೨-ಇವುಗಳಲ್ಲಿ "ಸಂಹತ" ವಿಚಾರವಿದೆ.

6. ಪ್ರಪಂಚವೆಲ್ಲಾ ಇಷ್ಟೇ. ಇದು ಅಸ್ವತಂತ್ರವು, ಸಂಹತವು, ಸುಷುಪ್ತಿಯಲ್ಲಿ ಒಂದಾಗಿ ಅಡಗುತ್ತದೆ.

(ಭಾಷ್ಯ)

೭೩. ಅತಃ ಪರಂ ಯತ್ ಆತ್ಮರೂಪಂ[1] ಜಲಸೂರ್ಯಕಾದಿವತ್ ಭೋಕ್ತೃತ್ವ ಕರ್ತೃತ್ವೇನ ಇಹ ಅನುಪ್ರವಿಷ್ಟಮ್—

(ಭಾಷ್ಯಾರ್ಥ)

ಇದಾದ ಬಳಿಕ[2] ನೀರಿನಲ್ಲಿ (ತೋರುವ) ಸೂರ್ಯಪ್ರತಿಬಿಂಬವೇ ಮುಂತಾದವುಗಳಂತೆ[3] ಕರ್ತೃಭೋಕ್ತೃರೂಪದಿಂದ ಇಲ್ಲಿ ಹೊಕ್ಕಿರುವ[4] ಆತ್ಮರೂಪವಿದೆಯಷ್ಟೆ:—

**ಏಷ ಹಿ ದ್ರಷ್ಟಾ ಸ್ಪ್ರಷ್ಟಾ ಶ್ರೋತಾ ಘ್ರಾತಾ ರಸಯಿತಾ ಮನ್ತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಾ ಪುರುಷಃ । ಸ ಪರೇಽಕ್ಷರ ಆತ್ಮನಿ ಸಂಪ್ರತಿಷ್ಠತೇ ॥ ೯ ॥**

೯. ಈ ನೋಡುವ, ಮುಟ್ಟುವ, ಕೇಳುವ, ಮೂಸುವ, ಸವಿಯುವ, ಯೋಚಿಸುವ, ಅರಿತುಕೊಳ್ಳುವ, ಕರ್ತೃವಾದ ವಿಜ್ಞಾನಾತ್ಮನಾದ ಪುರುಷನಿರುವನಲ್ಲ, ಇವನು ಅಕ್ಷರವೆಂಬ ಪರಮಾತ್ಮನಲ್ಲಿ ಸೇರಿಕೊಳ್ಳುತ್ತಾನೆ.

(ಭಾಷ್ಯ)

೭೪. ಏಷ ಹಿ ದ್ರಷ್ಟಾ ಸ್ಪ್ರಷ್ಟಾ ಶ್ರೋತಾ ಘ್ರಾತಾ ರಸಯಿತಾ ಮನ್ತಾ ಬೋದ್ಧಾ ಕರ್ತಾ ವಿಜ್ಞಾನಾತ್ಮಾ । ವಿಜ್ಞಾನಂ ವಿಜ್ಞಾಯತೇ ಅನೇನ ಇತಿ ಕರಣಭೂತಂ ಬುದ್ಧ್ಯಾದಿ । ಇದಂ ತು ವಿಜಾನಾತೀತಿ ವಿಜ್ಞಾನಂ ಕರ್ತೃಕಾರಕರೂಪಮ್ । ತದಾತ್ಮಾ ತತ್ಸ್ವಭಾವಃ । ವಿಜ್ಞಾತೃಸ್ವಭಾವಃ ಇತ್ಯರ್ಥಃ । ಪುರುಷಃ ಕಾರ್ಯಕರಣಸಙ್ಘಾತೋಕ್ತೋಪಾಧಿಪೂರಣಾತ್[5] ಪುರುಷಃ । ಸ ಚ ಜಲಸೂರ್ಯಕಾದಿಪ್ರತಿಬಿಮ್ಬಸ್ಯ ಸೂರ್ಯಾದಿಪ್ರವೇಶವತ್ ಜಲಾದ್ಯಾಧಾರಶೋಷೇ[6] ಪರೇ ಅಕ್ಷರೇ ಆತ್ಮನಿ ಸಂಪ್ರತಿಷ್ಠತೇ ॥

1. "ಆತ್ಮಸ್ವರೂಪಂ" ಎಂದು ವಾ॥ ಪಾಠ.

2. ಕಾರ್ಯಕರಣಗಳು ಆತ್ಮನಲ್ಲಿ ಅಡಗಿದ ಬಳಿಕ.

3. ಉಪಾಧಿನಿಮಿತ್ತವಾಗಿರುವ, ಪರಮಾರ್ಥವಲ್ಲದೆ ಇರುವ-ಎಂಬುದನ್ನು ತಿಳಿಸುವ ದೃಷ್ಟಾಂತವಿದು. ಸೂ. ಭಾ. ೩-೨-೧೮.

4. ಈ ಶರೀರದಲ್ಲಿ ಹೊಕ್ಕಿರುವ. ಪ್ರವೇಶಶ್ರುತಿಯ ಚರ್ಚೆಯನ್ನು ತೈ. ಭಾ. ಭಾ. ೧೬೮ ರಿಂದ ೧೭೭, ಬೃ. ಭಾ. ೧-೪-೭ ಇವುಗಳಲ್ಲಿ ಕಾಣಬಹುದು.

5. "ಪೂರ್ಣತ್ವಾತ್" ಎಂದು ಆ॥ ಪಾಠ; ನಾವು ಕೊಟ್ಟಿರುವದು ವಾ॥ ಪಾಠ.

6. "ಜಗದಾಧಾರಶೇಷೇ" ಆ॥, "ಜಗದಾಧಾರಶೋಷೇ" ಕಾ॥ ಎಂಬ ಪಾಠಗಳಿಗಿಂತ ಈ॥ ವಾ॥ ಪಾಠವು ಮೇಲೆಂದು ತೋರುವದು.

(ಭಾಷ್ಯಾರ್ಥ)

ಈ ನೋಡುವ, ಮುಟ್ಟುವ, ಕೇಳುವ, ಮೂಸುವ, ಸವಿಯುವ, ಯೋಚಿಸುವ, **ಅರಿತುಕೊಳ್ಳುವ, ಕರ್ತೃವಾದ ವಿಜ್ಞಾನಾತ್ಮನಾದ** ಕರಣವಾಗಿರುವ ಬುದ್ಧಿಯೇ ಮುಂತಾದದ್ದು ತನ್ನಿಂದ ಅರಿಯುತ್ತಾರಾದ್ದರಿಂದ ವಿಜ್ಞಾನವೆನಿಸಿರುತ್ತದೆ; ಆದರೆ ಇದು ಅರಿಯುತ್ತದೆಯಾದ್ದರಿಂದ ವಿಜ್ಞಾನವು, ಕರ್ತೃಕಾರಕರೂಪವಾದದ್ದು.[1] ಆ (ವಿಜ್ಞಾ)ನಾತ್ಮನು ಎಂದರೆ ಆ ಸ್ವಭಾವದವನು. ಅರಿಯುವ ಸ್ವಭಾವದವನಾದ ಎಂದರ್ಥ. (ಅಂಥ) **ಪುರುಷನು**; ಹಿಂದೆ ಹೇಳಿರುವ ಕಾರ್ಯಕರಣಗಳ ಗುಂಪೆಂಬ ಉಪಾಧಿಯನ್ನು ತುಂಬಿಕೊಂಡಿರುವದರಿಂದ[2] **ಪುರುಷ**(ನೆನಿಸಿರುತ್ತಾನೆ). ಇವನು ನೀರಿನ ಸೂರ್ಯಬಿಂಬವೇ ಮುಂತಾದ ಪ್ರತಿಬಿಂಬವು ನೀರೇ ಮುಂತಾದ (ತನ್ನ) ಆಧಾರವು ಬತ್ತಿಹೋಗಲು ಸೂರ್ಯನೇ ಮುಂತಾದ (ಬಿಂಬ)ವನ್ನು ಹೊಗುವಂತೆ[3] ಅಕ್ಷರವೆಂಬ ಪರಮಾತ್ಮನಲ್ಲಿ ಹೋಗಿ ಸೇರಿಕೊಳ್ಳುತ್ತಾನೆ.

## ಉಪಸಂಹಾರ

(ಭಾಷ್ಯ)

೭೫. ತದೇಕತ್ವವಿದಃ ಫಲಮ್ ಆಹ—

(ಭಾಷ್ಯಾರ್ಥ)

ಆ ಐಕ್ಯವನ್ನು ತಿಳಿದುಕೊಂಡವನಿಗೆ(ಆಗುವ) ಫಲವನ್ನು(ಶ್ರುತಿ) ಹೇಳುತ್ತದೆ:-

**ಪರಮೇವಾಕ್ಷರಂ ಪ್ರತಿಪದ್ಯತೇ ಸ ಯೋ ಹ ವೈ ತದಚ್ಛಾಯಮ**
**ಶರೀರಮಲೋಹಿತಂ ಶುಭ್ರಮಕ್ಷರಂ ವೇದಯತೇ ಯಸ್ತು**
**ಸೋಮ್ಯ । ಸ ಸರ್ವಜ್ಞಃ ಸರ್ವೋ ಭವತಿ ತದೇಷ ಶ್ಲೋಕಃ ॥೧೦॥**

೧೦. ಎಲೈ ಸೋಮ್ಯನೆ, ಯಾವನು ಆ ನೆರಳಿಲ್ಲದ ಶರೀರವಿಲ್ಲದ, ಕೆಂಪಿಲ್ಲದ, ಶುಭ್ರವಾದ, ಅಕ್ಷರವನ್ನು ಅರಿತುಕೊಳ್ಳುತ್ತಾನೋ ಆತನು ಅಕ್ಷರವೆಂಬ ಪರ(ವಸ್ತು)ವನ್ನೇ ಪಡೆದುಕೊಳ್ಳುತ್ತಾನೆ. ಯಾವನು ಹೀಗೆ ಅರಿತುಕೊಳ್ಳುತ್ತಾನೋ ಅವನು ಸರ್ವಜ್ಞನೂ ಸರ್ವನೂ ಆಗುತ್ತಾನೆ. ಅಲ್ಲಿ ಈ ಶ್ಲೋಕವಿದೆ :

---

1. ವಿಜ್ಞಾನಶಬ್ದವು ಕರಣಾರ್ಥದಲ್ಲಿ ಬುದ್ಧಿವಾಚಕ, ಕರ್ತ್ರರ್ಥದಲ್ಲಿ ಆತ್ಮವಾಚಕ.

2. ಕರಣಗಳಲ್ಲಿ ತೋರುವ ಅರಿವುಗಳೆಲ್ಲ ಈ ಆತ್ಮನ ಅರಿವಿನ ಅಧೀನ.

3. ನೀರು ಬತ್ತಿಹೋದರೆ ಪ್ರತಿಬಿಂಬವು ಸೂರ್ಯನಲ್ಲಿ ಬೆರೆತಂತೆ ಆಗುವ ಹಾಗೆ ಸುಷುಪ್ತಿಯಲ್ಲಿ ಉಪಾಧಿಲಯದಿಂದ ಜೀವರೂಪವೂ ಪರಮಾತ್ಮನಲ್ಲಿ ಬೆರೆತುಕೊಂಡಂತಾಗುತ್ತದೆ. ಸೂ. ಭಾ. ೧-೧-೯, ೩-೨-೩೪, ೩೫.

(ಭಾಷ್ಯ)

೭೬. ಪರಮೇವ ಅಕ್ಷರಂ ವಕ್ಷ್ಯಮಾಣವಿಶೇಷಣಂ ಪ್ರತಿಪದ್ಯತೇ ಇತ್ಯೇತದುಚ್ಯತೇ[1] । ಸ ಯೋ ಹ ವೈ ತತ್ ಸರ್ವೈಷಣಾವಿನಿರ್ಮುಕ್ತಃ ಅಚ್ಛಾಯಂ ತಮೋವರ್ಜಿತಮ್, ಅಶರೀರಂ ನಾಮರೂಪಸರ್ವೋಪಾಧಿಶರೀರವರ್ಜಿತಮ್[2] ಅಲೋಹಿತಂ ಲೋಹಿತಾದಿಸರ್ವಗುಣವರ್ಜಿತಮ್ । ಯತ ಏವಮ್ ಅತಃ ಶುಭ್ರಂ ಶುದ್ಧಮ್ । ಸರ್ವವಿಶೇಷಣರಹಿತತ್ವಾತ್ । ಅಕ್ಷರಂ ಸತ್ಯಂ ಪುರುಷಾಖ್ಯಮ್ ಅಪ್ರಾಣಮ್ ಅಮನಃ ಅಗೋಚರಮ್, ಶಿವಂ ಶಾನ್ತಂ ಸಬಾಹ್ಯಾಭ್ಯನ್ತರಮ್ ಅಜಂ ವೇದಯತೇ ವಿಜಾನಾತಿ ಯಸ್ತು ಸರ್ವತ್ಯಾಗೀ ಹೇ[3] ಸೋಮ್ಯ, ಸಃ ಸರ್ವಜ್ಞಃ ನ ತೇನ ಅವಿದಿತಂ ಕಿಂಚಿತ್ ಸಂಭವತಿ । ಪೂರ್ವಮ್ ಅವಿದ್ಯಯಾ ಅಸರ್ವ ಆಸೀತ್, ಪುನರ್ವಿದ್ಯಯಾ ಅವಿದ್ಯಾಪನಯೇ ಸರ್ವೋ ಭವತಿ । ತತ್ ಅಸ್ಮಿನ್ನರ್ಥೇ[4] ಏಷಃ ಶ್ಲೋಕಃ ಮನ್ತ್ರಃ ಭವತಿ ಉಕ್ತಾರ್ಥಸಙ್ಗ್ರಾಹಕಃ ॥

(ಭಾಷ್ಯಾರ್ಥ)

(ಅವನು) ಅಕ್ಷರವೆಂಬ ಪರ (ತತ್ತ್ವ)ವನ್ನೇ ಎಂದರೆ ಮುಂದೆ ಹೇಳುವ (ಪರತತ್ತ್ವವನ್ನೇ) ಪಡೆಯುತ್ತಾನೆ ಎಂಬೀ ಅಭಿಪ್ರಾಯವನ್ನು ತಿಳಿಸಿರುತ್ತದೆ. ಯಾವನಾದರೆ ಹಾಗೆ ಎಂದರೆ ಎಲ್ಲಾ ಏಷಣೆಗಳನ್ನೂ ಬಿಟ್ಟು[5] ನೆರಳಿಲ್ಲದ ಎಂದರೆ (ಅಜ್ಞಾನದ) ತಮಸ್ಸಿಲ್ಲದ ಶರೀರವಿಲ್ಲದ ನಾಮರೂಪಗಳ ಯಾವ ಉಪಾಧಿಶರೀರವೂ ಇಲ್ಲದ,[6] ಕೆಂಪಿಲ್ಲದ ಎಂದರೆ ಕೆಂಪೇ ಮುಂತಾದ ಯಾವ ಗುಣವೂ ಇಲ್ಲದ.[7] ಹೀಗಿರುವದರಿಂದ ಶುಭ್ರವಾದ ಎಂದರೆ ಶುದ್ಧವಾದ (ಎಂದರ್ಥ); ಏಕೆಂದರೆ (ಅದರಲ್ಲಿ) ಯಾವ ವಿಶೇಷಣವೂ ಇರುವದಿಲ್ಲ.[8] ಅಕ್ಷರವನ್ನು ಎಂದರೆ ಪುರುಷನೆಂಬ ಹೆಸರಿನ

---

1. "ಏತದುಚ್ಯತೇ" ಎಂಬ ಮಾತುಗಳು ಇಲ್ಲದಿದ್ದರೂ ಸಾಗುತ್ತದೆ. ಭಾಷ್ಯದಲ್ಲಿ ಅವು ಮೊದಲು ಇಲ್ಲದೆಯೂ ಇರಬಹುದೆಂದು ತೋರುತ್ತದೆ.

2. "ನಾಮರೂಪಕೃತ............" ಎಂದಿದ್ದರೆ ಸ್ಪಷ್ಟತರವಾಗುತ್ತಿತ್ತು.

3. ಈ ಮಾತು ವಾ॥ ಪಾಠದಲ್ಲಿ ಮಾತ್ರ ಇದೆ.

4. "ತದಾ ತಸ್ಮಿನ್ನರ್ಥೇ" ಎಂಬ ಆ॥ ಪಾಠವು ಸರಿಯಾಗಿಲ್ಲ; "ತತ್ ಏತಸ್ಮಿನ್ನರ್ಥೇ" ಎಂಬ ಮೈ॥ ಪಾಠಕ್ಕೆ ಬದಲು ಅದು ತಪ್ಪಾಗಿ ಬಿದ್ದಿರಬಹುದೆಂತ ಕಾಣುತ್ತದೆ. ನಾವು ಕೊಟ್ಟಿರುವದು ವಾ॥ ಪಾಠ.

5. ತತ್ ಎಂದರೆ ಆಶ್ಚರ್ಯಕರವಾಗಿ; ಏಷಣಾತ್ರಯತ್ಯಾಗವೆಂಬುದು ಸಾಮಾನ್ಯರಿಗೆ ಆಶ್ಚರ್ಯಕರವಾಗಿರುವದರಿಂದ ತತ್ ಎಂಬ ವಿಶೇಷಣಕ್ಕೆ ಈ ಅರ್ಥವನ್ನು ಮಾಡಿದೆ.

6. ಸ್ಥೂಲಸೂಕ್ಷ್ಮಶರೀರಗಳಿಲ್ಲದ

7. ದ್ರವ್ಯಗುಣಕರ್ಮಗಳಲ್ಲಿ ಒಂದೂ ಅಲ್ಲದ.

8. ಇಂಥದ್ದೆಂದು ನೇರಾಗಿ ಹೇಳದೆ ಮತ್ತೊಂದು ಧರ್ಮದ ನಿಷೇಧದಿಂದಲೇ ತಿಳಿಸಬೇಕಾಗಿರುವ, ತನಗೆರಡನೆಯದಿಲ್ಲದ ಒಂದೇ ಆಗಿರುವ ನಿರ್ವಿಶೇಷವಾದ. ಬೃ. ಭಾ.೩-೮-೮ ನೋಡಿ.

ಸತ್ಯವನ್ನು[1] ಪ್ರಾಣವಿಲ್ಲದ, ಮನಸ್ಸಿಲ್ಲದ,[2] ಅವಿಷಯವಾಗಿರುವ,[3] ಶಿವವೂ ಶಾಂತವೂ ಹೊರಗುಒಳಗುಗಳಿಂದ ಕೂಡಿ ಜನ್ಮರಹಿತವಾಗಿರುವ[4] (ತತ್ತ್ವವನ್ನು) ಅರಿತುಕೊಳ್ಳುತ್ತಾನೋ ಅನುಭವಕ್ಕೆ ತಂದುಕೊಳ್ಳುತ್ತಾನೋ (ಅವನು ಅಕ್ಷರವೆಂಬ ಪರವಸ್ತುವನ್ನೇ ಪಡೆದುಕೊಳ್ಳುತ್ತಾನೆ). ಯಾವ ಸರ್ವತ್ಯಾಗಿಯಾದರೆ (ಹೀಗೆ ಅರಿತುಕೊಳ್ಳುವನೋ) ಅವನು ಸರ್ವಜ್ಞನು, ಎಂದರೆ ಅವನು ಅರಿತುಕೊಳ್ಳದೆ ಇರುವದೆಂಬುದು ಯಾವದೊಂದೂ (ಇರು)ವಂತಿಲ್ಲ.[5] (ಅವನು) ಮೊದಲು ಅವಿದ್ಯೆಯಿಂದ ಅಸರ್ವನಾಗಿರುತ್ತಿದ್ದನು, ಮತ್ತೆ (ಈಗ) ವಿದ್ಯೆಯಿಂದ ಅವಿದ್ಯೆಯು ತೊಲಗಲಾಗಿ ಸರ್ವವೂ ಆಗುವನು.[6]

ಅಲ್ಲಿ ಎಂದರೆ ಈ ವಿಷಯದಲ್ಲಿ (ಈ ವರೆಗೆ) ಹೇಳಿದ ವಿಷಯಗಳನ್ನು ಸಂಗ್ರಹವಾಗಿ ತಿಳಿಸುವ ಈ ಶ್ಲೋಕವು ಎಂದರೆ ಮಂತ್ರವು ಇರುತ್ತದೆ:—

**ವಿಜ್ಞಾನಾತ್ಮಾ ಸಹ ದೇವೈಶ್ಚ ಸರ್ವೈಃ**
**ಪ್ರಾಣಾ ಭೂತಾನಿ ಸಂಪ್ರತಿಷ್ಠನ್ತಿ ಯತ್ರ ।**
**ತದಕ್ಷರಂ ವೇದಯತೇ ಯಸ್ತು ಸೋಮ್ಯ**
**ಸ ಸರ್ವಜ್ಞಃ ಸರ್ವಮೇವಾವಿವೇಶೇತಿ ॥ ೧೧ ॥**

೧೧. ಎಲೈ ಸೋಮ್ಯನೆ, ಎಲ್ಲಾ ದೇವತೆಗಳೊಡನೆ ವಿಜ್ಞಾನಾತ್ಮನೂ ಪ್ರಾಣಗಳೂ ಭೂತಗಳೂ ಎಲ್ಲಿ ಸೇರಿಕೊಳ್ಳುವವೋ, ಆ ಅಕ್ಷರವನ್ನು ಯಾವನಾದರೆ ಅರಿತುಕೊಳ್ಳುವನೋ ಆ ಸರ್ವಜ್ಞನು ಎಲ್ಲವನ್ನೂ ಪ್ರವೇಶಿಸುವನು.

(ಭಾಷ್ಯ)

೭೭. ವಿಜ್ಞಾನಾತ್ಮಾ ಸಹ ದೇವೈಶ್ಚ ಅಗ್ನ್ಯಾದಿಭಿಃ ಪ್ರಾಣಾಃ ಚಕ್ಷುರಾದಯಃ ಭೂತಾನಿ ಪೃಥಿವ್ಯಾದೀನಿ ಸಂಪ್ರತಿಷ್ಠನ್ತಿ ಪ್ರವಿಶನ್ತಿ ಯತ್ರ ಯಸ್ಮಿನ್ ಅಕ್ಷರೇ ತತ್ ಅಕ್ಷರಂ ವೇದಯತೇ ಯಸ್ತು ಹೇ[7] ಸೋಮ್ಯ ಪ್ರಿಯದರ್ಶನ, ಸ ಸರ್ವಜ್ಞಃ ಸರ್ವಮೇವ ಆವಿಶೇಷ ಆವಿಶತಿ ಇತ್ಯರ್ಥಃ ॥

---

1. ಮುಂ. ೧-೨-೧೪ 2. ಮುಂ. ೨-೧-೨

3. ಮುಂ. ೧-೧-೬ 4. ಮುಂ. ೨-೧-೨

5. ಯಾವದನ್ನು ಅರಿತರೆ ಸರ್ವವನ್ನೂ ಅರಿತಂತಾಗುವದು ? ಎಂಬ ಮುಂ. ೧-೧-೩ರ ಪ್ರಶ್ನೆಗೆ ಉತ್ತರವಿದು.

6. ಬ್ರಹ್ಮಜ್ಞಾನದಿಂದ ನಿತ್ಯಸಿದ್ಧವಾದ ಸರ್ವಾತ್ಮಭಾವವನ್ನು ಜ್ಞಾನಿಯು ಪಡೆದುಕೊಳ್ಳುವನು. ಬೃ. ಭಾ. ೧-೪-೧೦.

7. ಈ ಮಾತು ಆ॥ ಪಾಠದಲ್ಲಿಲ್ಲ.

(ಭಾಷ್ಯಾರ್ಥ)

ಎಲೈ ಸೋಮ್ಯನ, ಪ್ರಿಯದರ್ಶನನೆ, ಅಗ್ನಿಯೇ ಮುಂತಾದ ದೇವತೆಗಳೊಡನೆ[1] ವಿಜ್ಞಾನಾತ್ಮನೂ ಚಕ್ಷುಸ್ಸು ಮುಂತಾದ ಪ್ರಾಣಗಳೂ ಪೃಥಿವಿಯೇ ಮುಂತಾದ ಭೂತಗಳೂ ಎಲ್ಲಿ ಎಂದರೆ ಯಾವ ಅಕ್ಷರದಲ್ಲಿ ಹೋಗಿ ಸೇರಿಕೊಳ್ಳುವವೋ ಆ ಅಕ್ಷರವನ್ನು ಯಾವನಾದರೆ ಅರಿತುಕೊಳ್ಳುವನೋ ಆ ಸರ್ವಜ್ಞನು, ಎಲ್ಲವನ್ನೂ (ಆವಿವೇಶ=ಆವಿಶತಿ) ಪ್ರವೇಶಿಸುವನು ಎಂದರ್ಥ.[2]



1. ಹಿಂದೆ ಬರಿಯ ಇಂದ್ರಿಯಗಳ ಮತ್ತು ವಿಷಯಗಳ ಲಯವನ್ನು ಹೇಳಿರುವದರಿಂದ ಅಧಿದೈವವಾದ ದೇವತೆಗಳನ್ನು ಬಿಟ್ಟದೆ ಎಂದು ತಿಳಿಯಬಾರದು ಕೌ. ಬ್ರಾ. ಉಪನಿಷತ್ತಿನಲ್ಲಿ (೩-೩) ದೇವತೆಗಳ ಲಯವನ್ನೂ ಸ್ಪಷ್ಟವಾಗಿ ಹೇಳಿರುತ್ತದೆ.

2. ಸರ್ವಾತ್ಮನಾಗುವನು, ತಾನು ಎಲ್ಲಕ್ಕೂ ಆತ್ಮನೆಂಬುದನ್ನು ಕಂಡುಕೊಳ್ಳುವನು.

# ಐದನೆಯ ಪ್ರಶ್ನೆ

## ಈ ಪ್ರಶ್ನೆಯ ಸಂಬಂಧ

(ಭಾಷ್ಯ)

೭೮. "ಅಥ ಹೈನಂ ಶೈಬ್ಯಃ ಸತ್ಯಕಾಮಃ ಪ್ರಪಚ್ಛ" । ಅಥೇದಾನೀಂ ಪರಾಪರಬ್ರಹ್ಮಪ್ರಾಪ್ತಿಸಾಧನತ್ವೇನ ಓಂಕಾರಸ್ಯ ಉಪಾಸನವಿಧಿತ್ಸಯಾ ಪ್ರಶ್ನ ಆರಭ್ಯತೇ—

(ಭಾಷ್ಯಾರ್ಥ)

"ಅಥ ಹೈನಂ ಶೈಬ್ಯಃ ಸತ್ಯಕಾಮಃ ಪಪ್ರಚ್ಛ" ಬಳಿಕ ಈತನನ್ನು ಶೈಬ್ಯಸತ್ಯಕಾಮನು ಕೇಳಿದನೇನೆಂದರೆ (ಎಂದು ಮೊದಲಾಗಿರುವ ಗ್ರಂಥದ ಸಂಬಂಧವಿದು): ಇನ್ನು[1] ಈಗ ಪರಾಪರಬ್ರಹ್ಮಗಳನ್ನು ಪಡೆಯುವದಕ್ಕೆ ಸಾಧನವಾಗಿ ಓಂಕಾರದ ಉಪಾಸನೆಯನ್ನು ವಿಧಾನಮಾಡಬೇಕೆಂದು (ಈ) ಪ್ರಶ್ನೆಯನ್ನು ಆರಂಭಿಸಿರುತ್ತದೆ:—

## ಸತ್ಯಕಾಮನ ಪ್ರಶ್ನೆ: ಓಂಕಾರಧ್ಯಾನದ ಫಲವೇನು?

**ಅಥ ಹೈನಂ ಶೈಬ್ಯಃ ಸತ್ಯಕಾಮಃ ಪಪ್ರಚ್ಛ। ಸ ಯೋ ಹ ವೈ ತದ್ಭಗವನ್ ಮನುಷ್ಯೇಷು ಪ್ರಾಯಣಾನ್ತಮೋಂಕಾರಮಭಿಧ್ಯಾಯೀತ ಕತಮಂ ವಾವ ಸ ತೇನ ಲೋಕಂ ಜಯತೀತಿ ॥ ೧ ॥**

೧. ಆಮೇಲೆ ಈತನನ್ನು ಶೈಬ್ಯಸತ್ಯಕಾಮನು ಕೇಳಿದನೇನೆಂದರೆ: ಭಗವಂತನೆ, ಮನುಷ್ಯರಲ್ಲಿ ಪ್ರಾಯಣದವರೆಗೂ ಓಂಕಾರವನ್ನು ಯಾವನಾದರೆ ಹಾಗೆ ಅಭಿಧ್ಯಾನಮಾಡುತ್ತಿರುವನೋ ಅವನು ಅದರಿಂದ ಯಾವ ಲೋಕವನ್ನು ಗೆದ್ದುಕೊಳ್ಳುತ್ತಾನೆ?

(ಭಾಷ್ಯ)

೭೯. ಸ ಯಃ ಕಶ್ಚಿದ್ ಹ ವೈ ಭಗವನ್ ಮನುಷ್ಯೇಷು ಮನುಷ್ಯಾಣಾಂ ಮಧ್ಯೇ ತತ್ ಅದ್ಭುತಮಿವ ಪ್ರಾಯಣಾನ್ತಂ ಮರಣಾನ್ತಮ್ । ಯಾವಜ್ಜೀವಮ್ ಇತ್ಯೇತತ್ । ಓಂಕಾರಮ್ ಅಭಿಧ್ಯಾಯೀತ ಆಭಿಮುಖ್ಯೇನ ಚಿನ್ತಯೇತ್ । ಬಾಹ್ಯವಿಷಯೇಭ್ಯ ಉಪಸಂಹೃತಕರಣಃ, ಸಮಾಹಿತಚಿತ್ತಃ, ಭಕ್ತ್ಯಾವೇಶಿತಬ್ರಹ್ಮಭಾವ ಓಂಕಾರೇ। ಆತ್ಮಪ್ರತ್ಯಯಸನ್ತಾನಾವಿಚ್ಛೇದೋ ಭಿನ್ನಜಾತೀಯಪ್ರತ್ಯಯಾನ್ತರಾಖಿಲೀ

1. ಅಕ್ಷರದಲ್ಲಿ ಸರ್ವವೂ ಲಯವಾಗುತ್ತದೆಯಾದ್ದರಿಂದ ಅದು ಅದ್ವಿತೀಯಾತ್ಮನು ಎಂಬ ಜ್ಞಾನದಿಂದ ಆಗುವ ಸದ್ಯೋಮುಕ್ತಿಯನ್ನು ತಿಳಿಸಿದ ಬಳಿಕ.

ಕೃತೋ ನಿವಾತಸ್ಥದೀಪಶಿಖಾಸಮೋಽಭಿಧ್ಯಾನಶಬ್ದಾರ್ಥಃ ಸತ್ಯಬ್ರಹ್ಮಚರ್ಯಾಹಿಂಸಾಪರಿಗ್ರಹತ್ಯಾಗಸಂನ್ಯಾಸಶೌಚಸನ್ತೋಷಾಮಾಯಾವಿತ್ವಾದ್ಯನೇಕಯಮನಿಯಮಾನುಗೃಹೀತಃ । ಸಃ ಏವಂ ಯಾವಜ್ಜೀವವ್ರತಧಾರಣಃ ಕತಮಂ ವಾವ । ಅನೇಕೇ ಹಿ ಜ್ಞಾನಕರ್ಮಭಿರ್ಜೇತವ್ಯಾ ಲೋಕಾಸ್ತಿಷ್ಠನ್ತಿ । ತೇಷು ತೇನ ಓಂಕಾರಾಭಿಧ್ಯಾನೇನ ಕತಮಂ ಸಃ ಲೋಕಂ ಜಯತಿ ? ಇತಿ ॥

(ಭಾಷ್ಯಾರ್ಥ)

ಎಲೈ ಪೂಜ್ಯರೆ, ಮನುಷ್ಯರಲ್ಲಿ ಮನುಷ್ಯರೊಳಗೆ ಯಾವನಾದರೆ ಹಾಗೆ ಆಶ್ಚರ್ಯಕರವಾಗಿ[1] ಪ್ರಾಯಣದವರೆಗೂ ಎಂದರೆ ಸಾಯುವ ತನಕ (ತಾನು) ಬದುಕಿರುವವರೆಗೂ[2] ಎಂದರ್ಥ. ಓಂಕಾರವನ್ನು ಅಭಿಧ್ಯಾನಮಾಡುತ್ತಿರುವನೋ ಎಂದರೆ ಅಭಿಮುಖನಾಗಿ ಚಿಂತಿಸುತ್ತಿರುವನೋ (ಎಂದರ್ಥ). ಹೊರಗಿನ ವಿಷಯಗಳಿಂದ ಕರಣಗಳನ್ನು ಹಿಂದಕ್ಕೆಳೆದುಕೊಂಡು, ಚಿತ್ತವನ್ನು ಸಮಾಧಾನಗೊಳಿಸಿಕೊಂಡು, ಭಕ್ತಿಯಿಂದ ಓಂಕಾರದಲ್ಲಿ ಬ್ರಹ್ಮಭಾವವನ್ನು ಇಟ್ಟುಕೊಂಡು[3] (ಚಿಂತಿಸುತ್ತಾನೋ ಎಂದರ್ಥ). "ಅಭಿಧ್ಯಾನ"ವೆಂಬ ಮಾತಿಗೆ ಮತ್ತೊಂದು ಜಾತಿಯ ಪ್ರತ್ಯಯಗಳು ಅಡ್ಡಬರದಂತೆ ಸತ್ಯ, ಬ್ರಹ್ಮಚರ್ಯ, ಅಹಿಂಸೆ, ಅಪರಿಗ್ರಹ,[4] ತ್ಯಾಗ, ಸಂನ್ಯಾಸ, ಶೌಚ, ಸಂತೋಷ, ಅಮಾಯಾವಿತ್ವ-ಮುಂತಾದ ಅನೇಕ[5] ಯಮನಿಯಮಗಳಿಂದ ಅನುಗ್ರಹವನ್ನು ಪಡೆದು,[6] ಗಾಳಿಯಿಲ್ಲದೆಡೆಯಲ್ಲಿರುವ ದೀಪದ ಕುಡಿಯಂತೆ ಆತ್ಮಪ್ರತ್ಯಯಗಳ ಪ್ರವಾಹವನ್ನು ಕಡಿವಡೆಯದಂತೆ (ಇಟ್ಟುಕೊಳ್ಳುವದೆಂದು) ಅರ್ಥ.[7] (ಯಾವನು ಹೀಗೆ

---

1. ಇಂಥ ಧ್ಯಾನವನ್ನು ಮಾಡುವದು ಅದ್ಭುತವಾದದ್ದು ಎಂಬುದನ್ನು ತತ್(ಹಾಗೆ) ಎಂಬ ಮಾತು ಸೂಚಿಸುತ್ತದೆ ಎಂದು ಭಾವ.

2. ಪಡೆಯಬೇಕಾದ ಫಲವನ್ನು ಭಾವಿಸುವ ಉಪಾಸನೆಯನ್ನು ಸಾಯುವವರೆಗೂ ಮಾಡುತ್ತಿರಬೇಕೆಂಬುದನ್ನು ಸೂ. ಭಾ. ೪-೧-೧೨ ರಲ್ಲಿ ನಿರ್ಣಯಿಸಿದೆ.

3. ಅದೇ ಬ್ರಹ್ಮವೆಂಬ ಭಾವನೆಯನ್ನಿಟ್ಟುಕೊಂಡು.

4. ತನ್ನದೆಂಬ ಸ್ವತ್ತಿಲ್ಲದೆ ಇರುವದು.

5. ಯೋ. ಸೂ. ೨-೩೦, ೩೧ ರಲ್ಲಿ ಹೇಳಿರುವ ಯಮನಿಯಮಗಳನ್ನು ಉಪಲಕ್ಷಣವಾಗಿ ಹೇಳಿದೆ; ಅಷ್ಟೇ ಎಂದು ಲೆಕ್ಕಮಾಡಿ ಅಲ್ಲಿ ಹೇಳಿಲ್ಲ-ಎಂದು ಭಾವ.

6. "ಸತ್ಯ.....................ಯಮನಿಯಮಾನುಗೃಹೀತಃ" ಎಂಬುದನ್ನು "ಆತ್ಮಪ್ರತ್ಯಯಸನ್ತಾನಾವಿಚ್ಛೇದಃ" ಎಂಬುದಕ್ಕೆ ವಿಶೇಷಣವೆಂದು ಎಣಿಸುವದರಲ್ಲಿ ಸ್ವಾರಸ್ಯವು ಹೆಚ್ಚು. "ಅಭಿಧ್ಯಾನ" ಎಂಬ ಮಾತಿನ ಅಭಿ ಎಂಬ ಉಪಸರ್ಗಕ್ಕೆ ಇದೆಲ್ಲ ಅರ್ಥವೆಂದು ವಿವರಿಸಿದಂತೆ ಆಗುತ್ತದೆ.

7. ತೈ. ಭಾ. ೧-೩ (ಭಾ. ಭಾ. ೨೦), ಬೃ. ಭಾ. ೧-೩-೨, ಗೀ. ಭಾ. ೧೨-೩, ಸೂ. ಭಾ. ೪-೧೧-ಇವುಗಳಲ್ಲಿ ಉಪಾಸನಶಬ್ದಾರ್ಥವಿವರಣೆಯನ್ನು ನೋಡಿ.

ಅಭಿಧ್ಯಾನಮಾಡುತ್ತಾನೋ) ಬದುಕಿರುವವರೆಗೂ (ಈ) ವ್ರತವನ್ನಿಟ್ಟುಕೊಂಡಿರುವ ಆತನು ಯಾವ ಲೋಕವನ್ನು-ಜ್ಞಾನಕರ್ಮಗಳಿಂದ ಪಡೆದುಕೊಳ್ಳಬಹುದಾದ ಲೋಕಗಳು ಅನೇಕವಾಗಿರುವವಷ್ಟೆ[1] ; ಅವುಗಳಲ್ಲಿ ಯಾವ ಲೋಕವನ್ನು-ಅದರಿಂದ ಆ ಓಂಕಾರದ ಅಭಿಧ್ಯಾನದಿಂದ ಗೆದ್ದುಕೊಳ್ಳುತ್ತಾನೆ?

## ಓಂಕಾರವು ಬ್ರಹ್ಮಪ್ರತೀಕ

**ತಸ್ಮೈ ಸ ಹೋವಾಚ । ಏತದ್ವೈ ಸತ್ಯಕಾಮ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ । ತಸ್ಮಾದ್ವಿದ್ವಾನೇತೇನೈವಾಯತನೇನೈಕತರಮನ್ವೇತಿ ॥ ೨ ॥**

೨. ಅವನಿಗೆ ಆತನು ಹೇಳಿದನೇನೆಂದರೆ: ಎಲೈ ಸತ್ಯಕಾಮನೆ, ಈ ಪರ(ಬ್ರಹ್ಮ)ವೆಂಬುದೂ ಅಪರಬ್ರಹ್ಮವೆಂಬುದೂ ಯಾವದುಂಟೋ (ಅದು) ಓಂಕಾರವೇ. ಆದ್ದರಿಂದ ತಿಳಿದವನು ಇದೇ ಆಯತನದಿಂದ ಇವೆರಡರಲ್ಲಿ ಒಂದನ್ನು ಹಿಂಬಾಲಿಸುತ್ತಾನೆ.

(ಭಾಷ್ಯ)

೮೦. ಪೃಷ್ಟವತೇ ತಸ್ಮೈ ಸ ಹ ಉವಾಚ ಪಿಪ್ಪಲಾದಃ । ಏತದ್ ವೈ ಸತ್ಯಕಾಮ । ಏತದ್ ಬ್ರಹ್ಮ ವೈ ಪರಂ ಚ ಅಪರಂ ಚ ಬ್ರಹ್ಮ । ಪರಂ ಸತ್ಯಮ್ ಅಕ್ಷರಂ ಪುರುಷಾಖ್ಯಮ್ । ಅಪರಂ ಚ ಪ್ರಾಣಾಖ್ಯಂ ಪ್ರಥಮಜಂ ಯತ್ ತದೋಂಕಾರ ಏವ ಓಂಕಾರಾತ್ಮಕಮ್ । ಓಂಕಾರಪ್ರತೀಕತ್ವಾತ್ । ಪರಂ ಹಿ ಬ್ರಹ್ಮ ಶಬ್ದಾದ್ಯುಪಲಕ್ಷಣಾನರ್ಹಂ ಸರ್ವಧರ್ಮವಿಶೇಷವರ್ಜಿತಮ್ । ಅತೋ ನ ಶಕ್ಯಮ್ ಅತೀನ್ದ್ರಿಯಗೋಚರತ್ವಾತ್ ಕೇವಲೇನ ಮನಸಾ ಅವಗಾಹಿತುಮ್ । ಓಂಕಾರೇ ತು ವಿಷ್ಣ್ವಾದಿಪ್ರತಿಮಾಸ್ಥಾನೀಯೇ ಭಕ್ತ್ಯಾವೇಶಿತಬ್ರಹ್ಮಭಾವೇ ಧ್ಯಾಯಿನಾಂ ತತ್ ಪ್ರಸೀದತಿ ಇತ್ಯವಗಮ್ಯತೇ ಶಾಸ್ತ್ರಪ್ರಾಮಾಣ್ಯಾತ್ । ತಥಾ ಅಪರಂ ಚ ಬ್ರಹ್ಮ । ತಸ್ಮಾತ್ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ ಇತ್ಯುಪಚರ್ಯತೇ । ತಸ್ಮಾತ್ ಏವಂ ವಿದ್ವಾನ್ ಏತೇನೈವ (ಆಯತನೇನ)[2] ಆತ್ಮಪ್ರಾಪ್ತಿಸಾಧನೇನೈವ ಓಂಕಾರಾಭಿ

---

1. ಪುತ್ರನಿಂದ ಮನುಷ್ಯಲೋಕವು, ಕರ್ಮದಿಂದ ಪಿತೃಲೋಕವು, ವಿದ್ಯೆಯಿಂದ ದೇವಲೋಕಗಳು–ಎಂದು ಅನೇಕವಾಗಿರುವವು.

2. ಉಪನಿಷತ್ತಿನ "ಆಯತನೇನ" ಎಂಬ ಮಾತು ಭಾಷ್ಯದಲ್ಲಿ ಬರೆದವರ ಕೈತಪ್ಪಿನಿಂದ ಬಿಟ್ಟುಹೋಗಿದೆ.

**ಧ್ಯಾನೇನ ಏಕತರಂ ಪರಮ್ ಅಪರಂ ವಾ ಬ್ರಹ್ಮ[1] ಅನ್ವೇತಿ ಅನುಗಚ್ಛತಿ। ನೇದಿಷ್ಠಂ ಹಿ ಆಲಮ್ಬನಮ್ ಓಂಕಾರೋ ಬ್ರಹ್ಮಣಃ ॥**

(ಭಾಷ್ಯಾರ್ಥ)

(ಹೀಗೆಂದು) ಕೇಳಿದ ಅವನಿಗೆ ಆ ಪಿಪ್ಪಲಾದನು ಹೇಳಿದನೇನೆಂದರೆ: ಎಲೈ ಸತ್ಯಕಾಮನೆ, ಈ ಬ್ರಹ್ಮವೇ ಪರಬ್ರಹ್ಮವೆಂಬುದೂ ಅಪರಬ್ರಹ್ಮವೆಂಬುದೂ[2] **ಪರ**ವೆಂದರೆ ಪುರುಷನೆಂಬ ಹೆಸರಿನ ಸತ್ಯವಾದ ಅಕ್ಷರವು, **ಅಪರ**ವೆಂದರೆ (ಎಲ್ಲಕ್ಕಿಂತಲೂ) ಮೊದಲು ಹುಟ್ಟಿದ[3] ಪ್ರಾಣನೆಂಬ ಹೆಸರಿನ (ಬ್ರಹ್ಮವು) ಯಾವದೋ ಅದು ಓಂಕಾರವೇ, ಓಂಕಾರರೂಪವಾದದ್ದೇ. ಏಕೆಂದರೆ **ಓಂಕಾರವು ಅದಕ್ಕೆ ಪ್ರತೀಕವಾಗಿರುತ್ತದೆ.** ಹೇಗೆಂದರೆ **ಪರಬ್ರಹ್ಮವು** ಶಬ್ದವೇ ಮುಂತಾದ ಉಪಲಕ್ಷಣಕ್ಕೆ ತಕ್ಕದ್ದಲ್ಲ, (ಅದರಲ್ಲಿ) ಯಾವ ಧರ್ಮವಿಶೇಷವೂ ಇರುವದಿಲ್ಲ; ಆದ್ದರಿಂದ ಇಂದ್ರಿಯಗೋಚರವಾಗಿರುವ (ದನ್ನೆಲ್ಲ) ಮೀರಿರುತ್ತದೆಯಾದ್ದರಿಂದ ಬರಿಯ ಮನಸ್ಸಿನಿಂದ[4] (ತಟ್ಟನೆ) ತಿಳಿಯುವದಕ್ಕೆ ಶಕ್ಯವಲ್ಲ. ಆದರೆ **ವಿಷ್ಣುವೇ ಮುಂತಾದ (ದೇವತೆಗಳ) ಪ್ರತಿಮೆಗಳಂತಿರುವ ಓಂಕಾರದಲ್ಲಿ ಭಕ್ತಿಯಿಂದ ಬ್ರಹ್ಮಭಾವನ್ನಿಟ್ಟರೆ[5] ಉಪಾಸಕರಿಗೆ ಆ (ಪರಬ್ರಹ್ಮವು) ಪ್ರಸನ್ನವಾಗುತ್ತದೆ ಎಂದು ಶಾಸ್ತ್ರಪ್ರಮಾಣದಿಂದ ಗೊತ್ತಾಗುತ್ತದೆ.**[6] ಅಪರಬ್ರಹ್ಮವೂ ಹಾಗೆಯೇ.[7] ಆದ್ದರಿಂದ "ಪರಬ್ರಹ್ಮವೂ ಅಪರಬ್ರಹ್ಮವೂ (ಎಂಬುದು) ಯಾವದೋ (ಅದು) ಓಂಕಾರವು" ಎಂದು ಉಪಚಾರದಿಂದ ಹೇಳಿರುತ್ತದೆ.[8]

---

1. "ಬ್ರಹ್ಮ" ಎಂಬ ಮಾತು ಅನ್ವೇತಿ ಎಂಬುದಾದಮೇಲೆಯೇ ಮುದ್ರಿತ ಪುಸ್ತಕಗಳಲ್ಲಿದೆ; ಆದರೆ "ಅಪರಂ ವಾ" ಎಂಬುದಾದಮೇಲೆಯೇ ಅದು ಇರಬೇಕಾದದ್ದು.

2. ಪರ, ಅಪರ–ಎಂಬುದು ಒಂದೇ ಬ್ರಹ್ಮದ ಎರಡು ರೂಪಗಳು. ಸೂ. ಭಾ. ೧–೧–೧೨, ೩–೨–೧೧, ೪–೩–೯, ೪–೩–೧೪.

3. ಬೃ. ೫–೪–೧.

4. ಪ್ರತೀಕದ ಸಹಾಯವಿಲ್ಲದ ಬರಿಯ ಮನಸ್ಸಿನಿಂದ ಎಂದರ್ಥ. ಪರಬ್ರಹ್ಮದಲ್ಲಿ ಶಬ್ದಾದಿಗಳು ಯಾವವೂ ಇಲ್ಲದ್ದರಿಂದಲೂ ಅಪರಬ್ರಹ್ಮವು ಕೇವಲ ಮನೋಮಯವಾಗಿರುವದರಿಂದಲೂ ಸ್ಥೂಲಬುದ್ಧಿಗಳಾದವರು ಅದನ್ನು ಉಪಾಸನೆಮಾಡಲಾರರು.

5. "ಅಭಿಧ್ಯಾಯೀತ" ಎಂಬ ಶಬ್ದದ ವ್ಯಾಖ್ಯಾನವನ್ನು ಭಾ. ಭಾ. ೭೭ ರಲ್ಲಿ ಮಾಡಿರುವಂತೆ ಇಲ್ಲಿಯೂ ಓಂಕಾರೋಪಾಸನೆಗೆ ಸಹಕಾರಸಾಮಗ್ರಿಯನ್ನು ಕಲ್ಪಿಸಿಕೊಳ್ಳಬೇಕು.

6. ತಾನೇ ನೇರಾಗಿ ಉಪಾಸನೆಗೆ ನಿಲುಕದಿದ್ದರೂ ಓಂಕಾರದ ಮೂಲಕವಾಗಿ ಉಪಾಸ್ಯವಾಗಿ ಒಲಿಯುತ್ತದೆ.

7. ಅಪರಬ್ರಹ್ಮವು ಸ್ವತಃ ಮನೋಮಯವಾಗಿ ಸೂಕ್ಷ್ಮವಾಗಿದ್ದರೂ ಓಂಕಾರವೆಂಬ ಶಬ್ದರೂಪವಾದ ಪ್ರತೀಕಮೂಲಕವಾಗಿ ಮಂದಮತಿಗಳಿಗೂ ಉಪಾಸ್ಯವಾಗಿ ಒಲಿಯುತ್ತದೆ.

8. ಓಂಕಾರವು ಬ್ರಹ್ಮವಲ್ಲದಿದ್ದರೂ ಬ್ರಹ್ಮಪ್ರಾಪ್ತಿಗೆ ಸಾಧನವಾಗಿರುವದರಿಂದ ಅದನ್ನು ಬ್ರಹ್ಮವೆಂದು ಗೌಣವೃತ್ತಿಯಿಂದ ಕರೆದಿರುತ್ತದೆ.

ಆದ್ದರಿಂದ ಹೀಗೆಂದು ತಿಳಿದಾತನು[1] ಇದೇ (ಆಯತನದಿಂದ, ಆಲಂಬನದಿಂದ) ಆತ್ಮಪ್ರಾಪ್ತಿಗೆ ಸಾಧನವಾಗಿರುವ ಓಂಕಾರದ ಅಭಿಧ್ಯಾನದಿಂದಲೇ, ಇವೆರಡರಲ್ಲೊಂದನ್ನು ಎಂದರೆ ಪರಬ್ರಹ್ಮವನ್ನೋ ಅಪರಬ್ರಹ್ಮವನ್ನೋ[2] ಹಿಂಬಾಲಿಸುತ್ತಾನೆ, ಪಡೆದುಕೊಳ್ಳುತ್ತಾನೆ. ಏಕೆಂದರೆ **ಓಂಕಾರವು ಬ್ರಹ್ಮಕ್ಕೇ ತೀರ ಹತ್ತಿರವಾದ ಆಲಂಬನವಾಗಿರುತ್ತದೆ.**[3]

## ಮಾತ್ರೆಗಳಲ್ಲಿ ಒಂದೊಂದರ ಜ್ಞಾನದಿಂದ ಕೂಡಿದ ಉಪಾಸನೆ

**ಸ ಯದ್ಯೇಕಮಾತ್ರಮಭಿಧ್ಯಾಯೀತ ಸ ತೇನೈವ ಸಂವೇದಿತಸ್ತೂರ್ಣಮೇವ ಜಗತ್ಯಾಮಭಿಸಂಪದ್ಯತೇ। ತಮೃಚೋ ಮನುಷ್ಯಲೋಕಮುಪನಯನ್ತೇ ಸ ತತ್ರ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ಸಂಪನ್ನೋ ಮಹಿಮಾನಮನುಭವತಿ ॥ ೩ ॥**

೩. ಆತನು ಒಂದು ಮಾತ್ರೆಯನ್ನು ಅಭಿಧ್ಯಾನಮಾಡಿದರೆ ಅವನು ಅದರಿಂದಲೇ ಅರಿತುಕೊಂಡವನಾಗಿ ಬೇಗನೆ ಜಗತ್ತಿನಲ್ಲಿ ಪಡೆದುಕೊಳ್ಳುತ್ತಾನೆ. ಅವನನ್ನು ಋಕ್ಕುಗಳು ಮನುಷ್ಯಲೋಕವನ್ನು ಸೇರಿಸುತ್ತವೆ. ಅವನು ಅಲ್ಲಿ ತಪಸ್ಸಿನಿಂದಲೂ ಬ್ರಹ್ಮಚರ್ಯದಿಂದಲೂ ಶ್ರದ್ಧೆಯಿಂದಲೂ ಕೂಡಿ ಮಹಿಮೆಯನ್ನನುಭವಿಸುತ್ತಾನೆ.

(ಭಾಷ್ಯ)

೮೧. ಸಃ ಯದ್ಯಪಿ ಓಂಕಾರಸ್ಯ ಸಕಲಮಾತ್ರಾವಿಭಾಗಜ್ಞೋ ನ ಭವತಿ, ತಥಾಪಿ ಓಂಕಾರಾಭಿಧ್ಯಾನಪ್ರಭಾವಾದ್ ವಿಶಿಷ್ಟಾಮೇವ ಗತಿಂ ಗಚ್ಛತಿ। ಏತದೇಕದೇಶಜ್ಞಾನವೈಗುಣ್ಯತಯಾ ಓಂಕಾರಶರಣಃ ಕರ್ಮಜ್ಞಾನೋಭಯಭ್ರಷ್ಟೋ ನ ದುರ್ಗತಿಂ ಗಚ್ಛತಿ। ಕಿಂ ತರ್ಹಿ ಯದಿ ಏವಮ್ ಓಂಕಾರಮೇವ ಏಕಮಾತ್ರಾವಿಭಾಗಜ್ಞ ಏವ ಕೇವಲಃ ಅಭಿಧ್ಯಾಯೀತ ಏಕಮಾತ್ರಂ ಸದಾ ಧ್ಯಾಯೀತ, ಸ ತೇನೈವ ಏಕಮಾತ್ರಾವಿಶಿಷ್ಟೋಂಕಾರಾಭಿಧ್ಯಾನೇನೈವ ಸಂವೇದಿತಃ ಸಂಬೋಧಿತಃ ತೂರ್ಣಂ ಕ್ಷಿಪ್ರಮೇವ ಜಗತ್ಯಾಂ ಪೃಥಿವ್ಯಾಮ್ ಅಭಿಸಂಪದ್ಯತೇ। ಕಿಮ್? ಮನುಷ್ಯಲೋಕಮ್। ಅನೇಕಾನಿ

---

1. ಉಪಾಸನೆಮಾಡಿದವನು.

2. ಯಾವದನ್ನು ಉಪಾಸನೆಮಾಡಿರುವನೋ ಅದನ್ನು ಕ. ಭಾ. ೧-೨-೧೬.

3. ಪರಮಾತ್ಮನ ನಾಮಗಳಲ್ಲೆಲ್ಲ ಓಂಕಾರವು ತೀರ ಹತ್ತಿರವಾದದ್ದು; ಆದಿತ್ಯಾದಿ ಪ್ರತೀಕಗಳೆಲ್ಲಕ್ಕಿಂತಲೂ ಪರಮಾತ್ಮನಿಗೆ ಇದು ಹತ್ತಿರವಾದದ್ದು. ಛಾ. ಭಾ. ೧-೧-೧. ಆದ್ದರಿಂದ ಓಂಕಾರಧ್ಯಾನದಿಂದ ಅವಶ್ಯವಾಗಿ ಬ್ರಹ್ಮಪ್ರಾಪ್ತಿಯಾಗುತ್ತದೆ ಎಂದು ಭಾವ.

ಹಿ ಜನ್ಮಾನಿ ಜಗತ್ಯಾಂ ಸಂಭವನ್ತಿ । ತತ್ರ ತಂ ಸಾಧಕಂ ಜಗತ್ಯಾಂ ಮನುಷ್ಯಲೋಕಮೇವ ಋಚಃ[1] ಉಪನಯನ್ತೇ ಉಪನಿಗಮಯನ್ತಿ । ಋಗ್ವೇದರೂಪಾ ಹಿ ಓಂಕಾರಸ್ಯ ಪ್ರಥಮಾ ಏಕಮಾತ್ರಾ ಅಭಿಧ್ಯಾತಾ। ತೇನ ಸ ತತ್ರ ಮನುಷ್ಯಜನ್ಮನಿ ದ್ವಿಜಾಗ್ರ್ಯಃ ಸನ್ ತಪಸಾ ಬ್ರಹ್ಮಚರ್ಯೇಣ ಶ್ರದ್ಧಯಾ ಚ ಸಂಪನ್ನಃ ಮಹಿಮಾನಂ ವಿಭೂತಿಮ್ ಅನುಭವತಿ। ನ ವೀತಶ್ರದ್ಧೋ ಯಥೇಷ್ಟಚೇಷ್ಟೋ ಭವತಿ। ಯೋಗಭ್ರಷ್ಟಃ ಕದಾಚಿದಪಿ ನ ದುರ್ಗತಿಂ ಗಚ್ಛತಿ ॥

(ಭಾಷ್ಯಾರ್ಥ)

ಅವನು ಓಂಕಾರದ ಎಲ್ಲಾ ಮಾತ್ರೆಗಳ ವಿಂಗಡವನ್ನೂ ಅರಿಯದವನಾಗಿದ್ದರೂ ಓಂಕಾರದ ಅಭಿಧ್ಯಾನದ ಬಲದಿಂದ ಉತ್ತಮವಾದ ಗತಿಯನ್ನೇ ಪಡೆಯುವನು. ಇದರ ಒಂದು ಭಾಗದ ಅರಿವು ಊನವಾದ್ದರಿಂದ ಓಂಕಾರಶರಣನಾದವನು[2] "ಕರ್ಮಜ್ಞಾನಗಳೆರಡರಿಂದಲೂ ಭ್ರಷ್ಟನಾಗಿ ದುರ್ಗತಿಯನ್ನು ಹೊಂದುವದಿಲ್ಲ." ಮತ್ತೇನೆಂದರೆ ಈ ರೀತಿಯಲ್ಲಿ ಕೇವಲವಾಗಿ ಒಂದೇ ಮಾತ್ರೆಯ ವಿಂಗಡವನ್ನು ಅರಿತುಕೊಂಡು ಒಂದು ಮಾತ್ರೆಯ ಓಂಕಾರವನ್ನೇ[3] ಯಾವಾಗಲೂ ಧ್ಯಾನಮಾಡುತ್ತಿದ್ದರೆ, ಅವನು ಅದರಿಂದಲೇ ಎಂದರೆ ಒಂದು ಮಾತ್ರೆಯಿಂದೊಡಗೂಡಿದ ಓಂಕಾರದ ಅಭಿಧ್ಯಾನದಿಂದಲೇ[4] ಅರಿತವನಾಗಿ ಜ್ಞಾನವನ್ನು ಹೊಂದಿದವನಾಗಿ[5] ಬೇಗನೆ ಈ ಜಗತ್ತಿನಲ್ಲಿ ಪಡೆಯುತ್ತಾನೆ. ಏನನ್ನು? ಎಂದರೆ ಮನುಷ್ಯಲೋಕವನ್ನು[6] (ಈ) ಜಗತ್ತಿನಲ್ಲಿ ಅನೇಕ ಜನ್ಮಗಳು ಉಂಟಾಗಬಹುದಷ್ಟೆ; ಅವುಗಳಲ್ಲಿ ಆ ಸಾಧಕನನ್ನು ಋಕ್ಕುಗಳು ಜಗತ್ತಿನಲ್ಲಿ ಪೃಥ್ವಿಯಲ್ಲಿ ಮನುಷ್ಯಜನ್ಮವನ್ನೇ ಸೇರಿಸುತ್ತವೆ, ಹೊಂದಿಸುತ್ತವೆ. ಏಕೆಂದರೆ ಓಂಕಾರದ ಮೊದಲನೆಯದಾದ ಋಗ್ವೇದರೂಪವಾದ ಒಂದು ಮಾತ್ರೆಯನ್ನು[7] ಅವನು ಅಭಿಧ್ಯಾನಮಾಡಿರುತ್ತಾನೆ. ಆದ್ದರಿಂದ ಅವನು ಅಲ್ಲಿ

1. ಈ ಮಾತು ವಾ॥ ಪಾಠದಲ್ಲಿ ವಾಕ್ಯದ ಕೊನೆಯಲ್ಲಿದೆ.

2. ಓಂಕಾರವೊಂದನ್ನೇ ಸರ್ವಕರ್ಮಸಂನ್ಯಾಸಪೂರ್ವಕವಾಗಿ ಉಪಾಸನೆಮಾಡುತ್ತಿರುವವನು.

3. ಒಂದು ಮಾತ್ರೆಯ ಜ್ಞಾನದಿಂದ ಕೂಡಿ ಓಂಕಾರವನ್ನು ಅನನ್ಯಭಕ್ತಿಯಿಂದ ಉಪಾಸನೆಮಾಡುತ್ತಿದ್ದರೆ ಎಂದರ್ಥ; ಅಕಾರವನ್ನು ಮಾತ್ರ ಉಪಾಸನೆಮಾಡುತ್ತಿದ್ದರೆ ಎಂಬ ವ್ಯಾಖ್ಯಾನವು ಭಾಷ್ಯವಿರುದ್ಧ.

4. ಒಂದು ಮಾತ್ರೆಯ ಜ್ಞಾನದಿಂದ ಮಾಡಿದ ಉಪಾಸನೆಯಿಂದಲೇ ಎಂದರ್ಥ.

5. ಆ ಗುಣದಿಂದ ಕೂಡಿದ ಓಂಕಾರವನ್ನು ಸಾಕ್ಷಾತ್ಕಾರಮಾಡಿಕೊಂಡು.

6. ಇದು ವಾಕ್ಯಶೇಷದಿಂದ ಗೊತ್ತಾಗುತ್ತದೆ.

7. ಒಂದು ಮಾತ್ರೆಯ ಜ್ಞಾನದಿಂದ ಕೂಡಿ ಉಪಾಸನೆಮಾಡಿದ ಓಂಕಾರವನ್ನು ಒಂದು ಮಾತ್ರೆ ಎಂದಿದೆ. ಮುಂದೆ "ಎರಡು ಮಾತ್ರೆ" ಎಂಬ ಮಾತಿಗೂ ಹೀಗೆಯೇ ಅರ್ಥವನ್ನು ಮಾಡಬೇಕು.

ಎಂದರೆ (ಆ) ಮನುಷ್ಯಜನ್ಮದಲ್ಲಿ ಬ್ರಾಹ್ಮಣಶ್ರೇಷ್ಠನಾಗಿ[1] ತಪಸ್ಸು, ಬ್ರಹ್ಮಚರ್ಯೆ, ಶ್ರದ್ಧೆ-ಇವುಗಳಿಂದೊಡಗೂಡಿ ಮಹಿಮೆಯನ್ನು ಎಂದರೆ ವಿಭೂತಿಯನ್ನು ಅನುಭವಿಸುತ್ತಾನೆ; ಶ್ರದ್ಧೆಯಿಲ್ಲದ ಸ್ವೇಚ್ಛಾಚಾರಿಯಾಗುವದಿಲ್ಲ.[2] ಯೋಗಭ್ರಷ್ಟನಾದವನಿಗೆ ಎಂದಿಗೂ ದುರ್ಗತಿಯಾಗುವದಿಲ್ಲ.[3]

**ಅಥ ಯದಿ ದ್ವಿಮಾತ್ರೇಣ ಮನಸಿ ಸಂಪದ್ಯತೇ ಸೋಽನ್ತರಿಕ್ಷಂ ಯಜುರ್ಭಿರುನ್ನೀಯತೇ ಸೋಮಲೋಕಮ್। ಸ ಸೋಮಲೋಕೇ ವಿಭೂತಿಮನುಭೂಯ ಪುನರಾವರ್ತತೇ ॥ ೪ ॥**

೪. ಇನ್ನು ಎರಡು ಮಾತ್ರೆಯಿಂದ ಮನಸ್ಸಿನಲ್ಲಿ ಸೇರಿಕೊಳ್ಳುತ್ತಾನಾದರೆ ಅವನು ಅಂತರಿಕ್ಷದ ಸೋಮಲೋಕಕ್ಕೆ ಯಜುಸ್ಸುಗಳಿಂದ ಒಯ್ಯಲ್ಪಡುತ್ತಾನೆ. ಅವನು ಸೋಮಲೋಕದಲ್ಲಿ ವಿಭೂತಿಯನ್ನು ಅನುಭವಿಸಿ ಮತ್ತೆ ಹಿಂದಿರುಗುತ್ತಾನೆ.

(ಭಾಷ್ಯ)

೮೨. ಅಥ ಪುನಃ ಯದಿ ದ್ವಿಮಾತ್ರಾವಿಭಾಗಜ್ಞೋ ದ್ವಿಮಾತ್ರೇಣ ವಿಶಿಷ್ಟಮ್ ಓಂಕಾರಮ್ ಅಭಿಧ್ಯಾಯೀತ ಸ್ವಪ್ನಾತ್ಮಕೇ ಮನಸಿ ಮನನೀಯೇ ಯಜುರ್ಮಯೇ ಸೋಮದೈವತ್ಯೇ[4] ಸಂಪದ್ಯತೇ ಏಕಾಗ್ರತಯಾ ಆತ್ಮಭಾವಂ ಗಚ್ಛತಿ। ಸ ಏವಂ ಸಂಪನ್ನಃ ಮೃತಃ ಅನ್ತರಿಕ್ಷಮ್ ಅನ್ತರಿಕ್ಷಾಧಾರಂ ದ್ವಿತೀಯಮಾತ್ರಾರೂಪಂ ದ್ವಿತೀಯಮಾತ್ರಾರೂಪೈರೇವ ಯಜುರ್ಭಿಃ ಉನ್ನೀಯತೇ ಸೋಮಲೋಕಮ್। ಸೌಮ್ಯಂ ಜನ್ಮ ಪ್ರಾಪಯನ್ತಿ ತಂ ಯಜೂಂಷಿ ಇತ್ಯರ್ಥಃ ಸಃ ತತ್ರ ವಿಭೂತಿಮ್ ಅನುಭೂಯ ಸೋಮಲೋಕೇ ಮನುಷ್ಯಲೋಕಂ ಪ್ರತಿ ಪುನರಾವರ್ತತೇ ॥

(ಭಾಷ್ಯಾರ್ಥ)

ಇನ್ನು ಎರಡು ಮಾತ್ರೆಗಳ ವಿಂಗಡವನ್ನು ಅರಿತುಕೊಂಡು ಎರಡು ಮಾತ್ರೆಗಳಿಂದೊಡಗೂಡಿದ ಓಂಕಾರವನ್ನು[5] ಅಭಿಧ್ಯಾನಮಾಡುತ್ತಾನಾದರೆ ಸ್ವಪ್ನರೂಪವಾದ[6]

1. ಗೀ. ೬-೪೧.

2. ಯೋಗದ ವಾಸನೆಯಿಂದ ಅದೇ ದಾರಿಯಲ್ಲಿ ಮುನ್ನಡೆಯುತ್ತಾನೆ. ಗೀ. ೬-೪೪.

3. ಗೀ. ೬-೪೦.

4. "ಸೌಮದೈವತ್ಯೇ" ಎಂಬ ಪಾಠಕ್ಕಿಂತ ಇದೇ ಮೇಲೆಂದು ಕಾಣುತ್ತದೆ.

5. ಓಂಕಾರದಲ್ಲಿ ಎರಡೇ ಮಾತ್ರೆಗಳಿರುವವೆಂದು ಅಭಿಪ್ರಾಯವಲ್ಲ; ಮೂರನೆಯ ಮಾತ್ರೆಯ ಸ್ವರೂಪದ ಅರಿವಿಲ್ಲದೆ ಎರಡು ಮಾತ್ರೆಗಳ ಅರಿವುಳ್ಳವನು ಮಾಡುವ ಓಂಕಾರೋಪಾಸನೆಗೆ ಇಲ್ಲಿ ಫಲವನ್ನು ಹೇಳಿರುತ್ತದೆ.

6. ಉಕಾರವು ಸ್ವಪ್ನಾವಸ್ಥೆಯ ತೈಜಸನನ್ನು ತಿಳಿಸುವ ಪ್ರತೀಕವು. ಮಾಂ. ೧೦.

ಮನಸ್ಸಿನಲ್ಲಿ ಎಂದರೆ ಮನನಮಾಡತಕ್ಕ ಸೋಮದೇವತಾಕವಾದ[1] ಯಜುಃಸ್ವರೂಪವಾದ (ಓಂಕಾರದಲ್ಲಿ) ಸೇರಿಕೊಳ್ಳುತ್ತಾನಾದರೆ, ಎಂದರೆ ಏಕಾಗ್ರತೆಯಿಂದ ಅದೇ ತಾನೆಂಬ ಭಾವವನ್ನು ಪಡೆದುಕೊಂಡರೆ[2] ಅವನು ಎಂದರೆ ಹಾಗೆ ಸೇರಿಕೊಂಡವನು ಸತ್ತಮೇಲೆ ಅಂತರಿಕ್ಷದ ಎಂದರೆ ಅಂತರಿಕ್ಷವೆಂಬ ಆಧಾರವುಳ್ಳ ಎರಡನೆಯ ಮಾತ್ರೆಯ ರೂಪವಾದ ಸೋಮಲೋಕಕ್ಕೆ ಎರಡನೆಯ ಮಾತ್ರೆಯ ರೂಪವಾಗಿರುವ ಯಜುಸುಗಳಿಂದಲೇ ಒಯ್ಯಲ್ಪಡುತ್ತಾನೆ; ಅವನಿಗೆ ಯಜುಸ್ಸುಗಳು ಸೋಮಲೋಕದ ಜನ್ಮವನ್ನು ದೊರಕಿಸುತ್ತವೆ ಎಂದರ್ಥ.[3] ಅವನು ಆ ಸೋಮಲೋಕದಲ್ಲಿ ವಿಭೂತಿಯನ್ನು ಅನುಭವಿಸಿ ಮನುಷ್ಯಲೋಕಕ್ಕೆ ಮತ್ತೆ ಹಿಂತಿರುಗುತ್ತಾನೆ.

## ಓಂಕಾರದ ಪೂರ್ಣೋಪಾಸನೆಯ ಫಲ

**ಯಃ ಪುನರೇತಂ ತ್ರಿಮಾತ್ರೇಣೋಮಿತ್ಯೇತೇನೈವಾಕ್ಷರೇಣ ಪರಂ ಪುರುಷಮಭಿಧ್ಯಾಯೀತ ಸ ತೇಜಸಿ ಸೂರ್ಯೇ ಸಂಪನ್ನಃ । ಯಥಾ ಪಾದೋದರಸ್ತ್ವಚಾ ವಿನಿರ್ಮುಚ್ಯತ ಏವಂ ಹ ವೈ ಸ ಪಾಪ್ಮನಾ ವಿನಿರ್ಮುಕ್ತಃ ಸ ಸಾಮಭಿರುನ್ನೀಯತೇ ಬ್ರಹ್ಮಲೋಕಂ ಸ ಏತಸ್ಮಾಜ್ಜೀವಘನಾತ್ ಪರಾತ್ಪರಂ ಪುರಿಶಯಂ ಪುರುಷಮೀಕ್ಷತೇ ತದೇತೌ ಶ್ಲೋಕೌ ಭವತಃ ॥ ೫ ॥**

೫. ಆದರೆ ಯಾವನು ಈ (ಓಂಕಾರವನ್ನು) ಮೂರು ಮಾತ್ರೆಗಳಿಂದೊಡಗೂಡಿದ ಓಮ್ ಎಂಬ ಇದೇ ಅಕ್ಷರದಿಂದ ಪರಮಪುರುಷನನ್ನಾಗಿ ಧ್ಯಾನಿಸುವನೋ, ಅವನು ತೇಜಸ್ಸಾದ ಸೂರ್ಯನಲ್ಲಿ ಸೇರಿಕೊಳ್ಳುವನು. ಹೇಗೆ ಪಾದೋದರವು ಪರೆಯಿಂದ ಬಿಡಲ್ಪಡುತ್ತದೆಯೋ ಹಾಗೆಯೇ ಅವನು ಪಾಪದಿಂದ ಬಿಡುಗಡೆಹೊಂದುತ್ತಾನೆ. ಅವನು ಸಾಮಗಳಿಂದ ಬ್ರಹ್ಮಲೋಕಕ್ಕೆ ಒಯ್ಯಲ್ಪಡುತ್ತಾನೆ. ಅವನು ಈ ಹೆಚ್ಚಿನ ಜೀವಘನನಿಗಿಂತಲೂ ಹೆಚ್ಚಿನವನಾದ ಪುರದಲ್ಲಿದ್ದುಕೊಂಡಿರುವ ಪುರುಷನನ್ನು ಕಂಡುಕೊಳ್ಳುತ್ತಾನೆ, ಅಲ್ಲಿ ಈ ಎರಡು ಶ್ಲೋಕಗಳು ಇರುತ್ತವೆ.

---

1. ಮನಸ್ಸಿಗೆ ಚಂದ್ರನು ಅಭಿಮಾನಿದೇವತೆ.

2. "ಪಡೆದುಕೊಳ್ಳುತ್ತಾನೆ" ಎಂದೂ ಕನ್ನಡಿಸಬಹುದು; ಅಭಿಧ್ಯಾನಮಾಡುತ್ತಿದ್ದರೆ ಅದೇ ಸಾಕ್ಷಾತ್ಕಾರವನ್ನು ಪಡೆಯುತ್ತಾನೆ ಎಂದು ಅರ್ಥ.

3. ಮೊದಲನೆಯ ಉಪಾಸನೆಯಿಂದ ಪೃಥ್ವಿಯಲ್ಲಿ ಉತ್ತಮವಾದ ಮನುಷ್ಯಜನ್ಮವು ಬರುತ್ತದೆ ಎಂದಭಿಪ್ರಾಯ.

(ಭಾಷ್ಯ)

೮೩. ಯಃ ಪುನಃ ಏತಮ್ ಓಂಕಾರಂ ತ್ರಿಮಾತ್ರೇಣ ತ್ರಿಮಾತ್ರಾವಿಷಯ ವಿಜ್ಞಾನವಿಶಿಷ್ಟೇನ ಓಮಿತ್ಯೇತೇನೈವ ಅಕ್ಷರೇಣ ಪರಂ ಸೂರ್ಯಾನ್ತರ್ಗತಂ ಪುರುಷಂ ಪ್ರತಿಕೇನ[1] ಅಭಿಧ್ಯಾಯೀತ ತೇನ ಅಭಿಧ್ಯಾನೇನ—ಪ್ರತೀಕತ್ವೇನ ಹಿ ಆಲಮ್ಬನತ್ವಂ ಪ್ರಕೃತಮ್ ಓಂಕಾರಸ್ಯ । "ಪರಂ ಚ ಅಪರಂ ಚ ಬ್ರಹ್ಮ" (೫-೨) ಇತ್ಯಭೇದಶ್ರುತೇಃ । "ಓಂಕಾರಮ್" ಇತಿ ಚ ದ್ವಿತೀಯಾ ಅನೇಕಶಃ ಶ್ರುತಾ ಬಾಧ್ಯೇತ ಅನ್ಯಥಾ । ಯದ್ಯಪಿ ತೃತೀಯಾಭಿಧಾನತ್ವೇನ ಕರಣತ್ವಮ್ ಉಪಪದ್ಯತೇ ತಥಾಪಿ ಪ್ರಕೃತಾನು ರೋಧಾತ್ "ತ್ರಿಮಾತ್ರಂ ಪರಂ ಪುರುಷಮ್" ಇತಿ ದ್ವಿತೀಯೈವ ಪರಿಣೇಯಾ 'ತ್ಯಜೇದೇಕಂ ಕುಲಸ್ಯಾರ್ಥೇ' ಇತಿ ನ್ಯಾಯೇನ। ಸ ತೃತೀಯಮಾತ್ರಾರೂಪೇ[2] ತೇಜಸಿ ಸೂರ್ಯೇ ಸಂಪನ್ನೋ ಭವತಿ ಧ್ಯಾಯಮಾನಃ । ಮೃತೋಽಪಿ ಸೂರ್ಯಾತ್ ಸೋಮಲೋಕಾದಿವತ್ ನ ಪುನರಾವರ್ತತೇ । ಕಿಂ ತು ಸೂರ್ಯೇ ಸಂಪನ್ನಮಾತ್ರ ಏವ ಯಥಾ ಪಾದೋದರಃ ಸರ್ಪಃ ತ್ವಚಾ ವಿನಿರ್ಮುಚ್ಯತೇ ಜೀರ್ಣತ್ವಗ್ವಿನಿರ್ಮುಕ್ತಃ ಸ ಪುನರ್ನವೋ ಭವತಿ, ಏವಂ ಹ ವೈ ಏಷ ಯಥಾ ದೃಷ್ಟಾನ್ತಃ ಸ ಪಾಪ್ಮನಾ ಸರ್ಪತ್ವಕ್ಸ್ಥಾನೀಯೇನ ಅಶುದ್ಧಿರೂಪೇಣ ವಿನಿರ್ಮುಕ್ತಃ ಸಾಮಭಿಃ ತೃತೀಯ ಮಾತ್ರಾರೂಪೈಃ ಊರ್ಧ್ವಮ್ ಉನ್ನೀಯತೇ ಬ್ರಹ್ಮಲೋಕಂ ಹಿರಣ್ಯಗರ್ಭಸ್ಯ ಬ್ರಹ್ಮಣೋ ಲೋಕಂ ಸತ್ಯಾಖ್ಯಮ್ । ಸ ಹಿರಣ್ಯಗರ್ಭಃ ಸರ್ವೇಷಾಂ ಸಂಸಾರಿಣಾಂ ಜೀವಾನಾಮ್ ಆತ್ಮಭೂತಃ । ಸ ಹಿ ಅನ್ತರಾತ್ಮಾ ಲಿಙ್ಗರೂಪೇಣ ಸರ್ವಭೂತಾ ನಾಮ್ । ತಸ್ಮಿನ್ ಹಿ ಲಿಙ್ಗಾತ್ಮನಿ ಸಂಹತಾಃ ಸರ್ವೇ ಜೀವಾಃ । ತಸ್ಮಾತ್ ಸ ಜೀವಘನಃ । ಸ ವಿದ್ವಾನ್ ತ್ರಿಮಾತ್ರೋಂಕಾರಾಭಿಜ್ಞಃ ಏತಸ್ಮಾತ್ ಜೀವಘನಾತ್ ಹಿರಣ್ಯಗರ್ಭಾತ್ ಪರಾತ್ ಪರಂ ಪರಮಾತ್ಮಾಖ್ಯಂ ಪುರುಷಮ್ ಈಕ್ಷತೇ ಪುರಿಶಯಂ ಸರ್ವಶರೀರಾನುಪ್ರವಿಷ್ಟಂ ಪಶ್ಯತಿ ಧ್ಯಾಯಮಾನಃ । ತತ್ ಏತಸ್ಮಿನ್ ಅರ್ಥೇ ಏತೌ ಯಥೋಕ್ತಾರ್ಥಪ್ರಕಾಶಕೌ ಶ್ಲೋಕೌ ಮನ್ತ್ರೌ[3] ಭವತಃ ॥

---

1. "ಪ್ರತೀಕತ್ವೇನ" ಎಂಬ ವಾ॥ ಪಾಠಕ್ಕಿಂತ ಈ ಅ॥ ಪಾಠವು ಮೇಲು.

2. "ತೃತೀಯಮಾತ್ರರೂಪಃ" ಎಂಬ ಪಾಠಕ್ಕಿಂತ ಇದು ಉತ್ತಮವೆಂದು ತೋರುತ್ತದೆ.

3. ಈ ವಾಕ್ಯವು ವಾ॥ ಕಾ॥ ಪಾಠಗಳಲ್ಲಿ "ತತ್ ಏತೌ ಅಸ್ಮಿನ್ ಯಥೋಕ್ತಾರ್ಥ ಪ್ರಕಾಶಕೌ ಶ್ಲೋಕೌ ಮನ್ತ್ರೌ ಭವತಃ" ಎಂದಿದೆ ; ಅ॥ ಪಾಠದಲ್ಲಿ "ತದೇತಸ್ಮಿನ್ ಯಥೋ ಕ್ತಾರ್ಥಪ್ರಕಾಶಕೌ" ಎಂದಿಷ್ಟೇ ಇದೆ. ನಾವು ಹಿಡಿದಿರುವ ಪಾಠವು ಹಿಂದಿನ ಇಂಥ ಭಾಷ್ಯ ವಾಕ್ಯಗಳಿಗೆ ಅನುಗುಣವಾಗಿ ಉಪನಿಷನ್ಮೂಲಕ್ಕೂ ಹೊಂದಿಕೆಯಾಗಿದೆ.

(ಭಾಷ್ಯಾರ್ಥ)

ಆದರೆ ಯಾವಾತನು ಈ ಓಂಕಾರವನ್ನು ಮೂರು ಮಾತ್ರೆಯುಳ್ಳ ಎಂದರೆ ಮೂರು ಮಾತ್ರೆಗಳ ವಿಷಯದ ಅರಿವಿನಿಂದ ಕೂಡಿದ ಓಂ ಎಂಬೀ ಅಕ್ಷರದಿಂದಲೇ[1] ಪರಮನಾದ ಸೂರ್ಯನೊಳಗಿರುವ[2] ಪುರುಷನನ್ನು[3] (ಓಂ ಎಂಬ) ಪ್ರತೀಕದಿಂದ ಅಭಿಧ್ಯಾನಮಾಡುತ್ತಾನೋ ಆ ಅಭಿಧ್ಯಾನದಿಂದ (ಎಂದರ್ಥ). ಏಕೆಂದರೆ ಓಂಕಾರವು ಪ್ರತೀಕವಾಗಿಯೇ[4] ಆಲಂಬನವಾಗಿದೆಯೆಂದು ಪ್ರಕರಣದಿಂದ ಗೊತ್ತಾಗುತ್ತದೆ.[5] "ಪರವೂ ಅಪರವೂ ಆಗಿರುವ ಬ್ರಹ್ಮವು (ಯಾವದೋ ಅದು) ಓಂಕಾರವು" (೫-೨) ಎಂದು (ಬ್ರಹ್ಮವನ್ನೂ ಓಂಕಾರವನ್ನೂ) ಅಭೇದವಾಗಿ (ತಿಳಿಸುವ) ಶ್ರುತಿ ಇದಕ್ಕೆ ಪ್ರಮಾಣವು.[6] ಹೀಗೆ (ಅರ್ಥ)ಮಾಡದಿದ್ದರೆ "ಓಂಕಾರವನ್ನು" ಎಂದು ಮತ್ತೆ ಮತ್ತೆ ದ್ವಿತೀಯೆಯನ್ನು ಶ್ರುತಿಯಲ್ಲಿ ಹೇಳಿರುವದಕ್ಕೆ ಬಾಧೆಯುಂಟಾಗುವದು. ತೃತೀಯೆಯಿಂದ ಹೇಳಿರುವದಕ್ಕಿಂತ (ಓಂಕಾರವು ಉಪಾಸನೆಗೆ) ಕರಣವೆಂಬುದೂ ಹೊಂದುತ್ತದೆಯಾದರೂ ಪ್ರಕೃತಕ್ಕೆ ತಕ್ಕಂತೆ "ಮೂರು ಮಾತ್ರೆಯುಳ್ಳ (ಓಂಕಾರ ವನ್ನು) ಪರಮಪುರುಷನನ್ನಾಗಿ" ಎಂದು ದ್ವಿತೀಯಾವಿಭಕ್ತಿಯಾಗಿಯೇ (ಅದನ್ನು) ಮಾರ್ಪಡಿಸಿಕೊಳ್ಳಬೇಕು. "ಕುಲಕ್ಕಾಗಿ ಒಬ್ಬನನ್ನು ಬಿಡಬೇಕು" ಎಂಬ ನ್ಯಾಯಕ್ಕೆ ಅನುಗುಣವಾಗಿ[7] (ಹೀಗೆ ಮಾರ್ಪಡಿಸಿಕೊಳ್ಳುವದು ಅವಶ್ಯವಾಗಿದೆ).

---

1. ಪೂರ್ಣವಾದ ಓಂಕಾರದಿಂದಲೇ, ಕೆಲವು ಮಾತ್ರೆಗಳಿಂದಲ್ಲ.

2. ಪರಮಾತ್ಮನು ಎಲ್ಲೆಲ್ಲಿಯೂ ಇದ್ದರೂ ಉತ್ಕೃಷ್ಟೋಪಾಧಿಯಾದ ಸೂರ್ಯನಲ್ಲಿ ವಿಶೇಷವಾಗಿ ಪ್ರಕಟವಾಗಿರುತ್ತಾನೆ.

3. ಈ ಪುರುಷನು ಪರಬ್ರಹ್ಮವೇ.

4. "ಈ ಆಯತನದಿಂದಲೇ ಮುಂತಾದ" ಶ್ರುತಿಯು ಓಂಕಾರವು ಇಲ್ಲಿ ಪ್ರತೀಕವೆಂಬುದನ್ನೆ ತಿಳಿಸುತ್ತದೆ.

5. ಈ ಪ್ರಕರಣದಲ್ಲಿ ಓಂಕಾರದ ಧ್ಯಾನವು ಪ್ರಕೃತವಾಗಿರುತ್ತದೆ.

6. ಓಂಕಾರವು ಪ್ರತೀಕವಲ್ಲದಿದ್ದರೆ ಓಂಕಾರವೇ ಬ್ರಹ್ಮವೆಂದು ತಿಳಿಸುತ್ತಿರಲಿಲ್ಲ.

7. "ಪ್ರಶ್ನೆಯಲ್ಲಿ ಓಂಕಾರವನ್ನು ಧ್ಯಾನಮಾಡುವವನಿಗೆ ಫಲವೇನು"? ಎಂದು ಕೇಳಿದೆ. ಮೂರನೆಯ ಮಂತ್ರದಲ್ಲಿ "ಒಂದು ಮಾತ್ರೆಯ (ಓಂಕಾರವನ್ನು)" ಧ್ಯಾನ ಮಾಡಿದರೆ ಆಗುವ ಫಲವನ್ನು ಹೇಳಿದೆ. ಇಲ್ಲಿಯೂ ಏತವ್ ಎಂಬ ಪ್ರಕೃತಗಾಮಿಯಾದ ಸರ್ವನಾಮವು ದ್ವಿತೀಯೆಯಲ್ಲಿದೆ. ದ್ವಿಮಾತ್ರೇಣ ಎಂಬ ತೃತೀಯೆಯು ಇರುವ ಶ್ರುತಿಯಲ್ಲಿ ಆತ್ಮನ ಉಪಾಸನೆಯನ್ನಾಗಲಿ ಓಂಕಾರೋಪಾಸನೆಯನ್ನಾಗಲಿ ಬಾಯಿಬಿಟ್ಟು ಹೇಳಿಲ್ಲ. ಆದ್ದರಿಂದ ದ್ವಿತೀಯಾಶ್ರುತಿಯೇ ಪ್ರಬಲ.

ಅವನು ಮೂರನೆಯ ಮಾತ್ರೆಯ ರೂಪದ[1] ಬೆಳಕಿನಲ್ಲಿ ಎಂದರೆ ಸೂರ್ಯನಲ್ಲಿ ಧ್ಯಾನಮಾಡುತ್ತಾ ಸೇರಿಕೊಳ್ಳುತ್ತಾನೆ.[2] ಸತ್ತಬಳಿಕವೂ ಸೋಮಲೋಕವೇ ಮುಂತಾದವುಗಳಿಂದ (ಹಿಂತಿರುಗುವಂತೆ) ಸೂರ್ಯನಿಂದ ಹಿಂತಿರುಗುವದಿಲ್ಲ.[3] ಮತ್ತೇನೆಂದರೆ ಸೂರ್ಯನಲ್ಲಿ ಸೇರಿಕೊಂಡವನೇ, ಹೇಗೆ ಪಾದೋದರವು ಎಂದರೆ ಹಾವು ಪರೆಯಿಂದ ಬಿಡುಗಡೆಯನ್ನು ಹೊಂದುತ್ತದೆಯೋ, ಹಳೆಯ ಪರೆಯಿಂದ ಬಿಡುಗಡೆಯನ್ನು ಹೊಂದಿ ಅದು ಹೇಗೆ ಮತ್ತೆ ಹೊಸದಾಗುವದೋ, ಇದರಂತೆಯೇ ಎಂದರೆ ಈ ದೃಷ್ಟಾಂತದಂತೆಯೇ ಅವನು ಹಾವಿನ ಪರೆಯಂತಿರುವ ಅಶುದ್ಧಿರೂಪವಾದ ಪಾಪದಿಂದ ಬಿಡುಗಡೆಯನ್ನು ಹೊಂದಿ[4] ಮೂರನೆಯ ಮಾತ್ರೆಯ ರೂಪವಾಗಿರುವ **ಸಾಮಗಳಿಂದ** ಮೇಲಕ್ಕೆ ಬ್ರಹ್ಮಲೋಕಕ್ಕೆ ಎಂದರೆ **ಹಿರಣ್ಯಗರ್ಭ**ನೆಂಬ ಬ್ರಹ್ಮದ **ಸತ್ಯ**ವೆಂಬ ಹೆಸರಿನ ಲೋಕಕ್ಕೆ ಒಯ್ಯಲ್ಪಡುವನು. **ಆ ಹಿರಣ್ಯಗರ್ಭನು** ಸಂಸಾರಿಗಳಾದ ಜೀವರುಗಳಿಗೆಲ್ಲ ಆತ್ಮರೂಪನಾಗಿರುತ್ತಾನೆ; ಏಕೆಂದರೆ ಅವನು ಲಿಂಗ(ಶರೀರ) ರೂಪದಿಂದ ಸರ್ವಪ್ರಾಣಿಗಳಿಗೂ ಒಳಗಿನ ಆತ್ಮರೂಪನಾಗಿರುತ್ತಾನೆ. **ಲಿಂಗಾತ್ಮನಾದ** ಆತ್ಮನಲ್ಲಿಯೇ ಅಲ್ಲವೆ, ಎಲ್ಲಾ ಜೀವರುಗಳೆಲ್ಲರೂ ಒಟ್ಟಾಗಿರುತ್ತಾರೆ[5]? ಆದ್ದರಿಂದ ಅವನು **ಜೀವಘನನು.**[6] ಮೂರುಮಾತ್ರೆಗಳ ಓಂಕಾರವನ್ನು ಬಲ್ಲ ಆ ಉಪಾಸಕನು ಈ ಜೀವಘನನಾದ ಹೆಚ್ಚಿನ **ಹಿರಣ್ಯಗರ್ಭ**ನಿಗಿಂತಲೂ ಹೆಚ್ಚಿನವನಾದ **ಪರಮಾತ್ಮ**ನೆಂಬ ಹೆಸರಿನ, ಪುರದಲ್ಲಿದ್ದುಕೊಂಡಿರುವ ಎಂದರೆ ಎಲ್ಲರ ಶರೀರಗಳಲ್ಲಿಯೂ ಅನುಪ್ರವೇಶಮಾಡಿರುವ[7] ಪುರುಷನನ್ನು ಧ್ಯಾನಮಾಡುತ್ತಾ[8] ಕಂಡುಕೊಳ್ಳುವನು. ಅಲ್ಲಿ ಎಂದರೆ ಈ ವಿಷಯದಲ್ಲಿ, ಈ ಹೇಳಿದ ವಿಷಯವನ್ನು ಬೆಳಗುವ ಈ ಎರಡು ಶ್ಲೋಕಗಳು, ಮಂತ್ರಗಳು, ಇರುತ್ತವೆ.

---

1. "ತೃತೀಯಮಾತ್ರಾರೂಪಃ" ಎಂಬುದನ್ನು ಮೂರನೆಯ ಮಾತ್ರೆಯ ರೂಪವನ್ನು ಹೊಂದಿ ಎಂದು ಕನ್ನಡಿಸಬೇಕು.

2. ಮೂರನೆಯ ಮಾತ್ರೆಯನ್ನು ಪ್ರಧಾನವಾಗಿ ಮಾಡಿಕೊಂಡು ಅಪರಬ್ರಹ್ಮವನ್ನು ಉಪಾಸನೆಮಾಡಿದ್ದರ ಫಲವಾಗಿ ಸೂರ್ಯಸಾಕ್ಷಾತ್ಕಾರ.

3. ಕ್ರಮಮುಕ್ತಿಯನ್ನೇ ಹೊಂದುತ್ತಾನೆ.

4. ಪಾಪದಿಂದ ಬಿಡುಗಡೆಯಾಗುವದೆಂಬುದೂ ಪರಬ್ರಹ್ಮದ ಉಪಾಸನೆಯೆಂಬುದನ್ನು ಸೂಚಿಸುತ್ತದೆ ಎಂದು ಸೂ. ಭಾ. ೧-೩-೧೩ ರಲ್ಲಿದೆ.

5. ಲಿಂಗವು ಅಂತರಾತ್ಮನೆಂಬುದಕ್ಕೆ ಮುಂ. ಭಾ. ೨-೧-೯ ನೋಡಿ. ಲಿಂಗ ಸಮಷ್ಟಿಯೇ ಹಿರಣ್ಯಗರ್ಭನ ಉಪಾಧಿ.

6. ಜೀವಘನವೆಂದರೆ ಬ್ರಹ್ಮಲೋಕವೆಂದು ಸೂ. ಭಾ. ೧-೩-೧ ರಲ್ಲಿ ಲಕ್ಷಣಾರ್ಥವನ್ನೂ ಕೊಟ್ಟಿದೆ.

7. ತೈ. ೨-೬ ರ ಸೂಚನೆ.

8. ಮುಂ. ಭಾ. ೩-೧-೮. ಪರಾತ್ಪರನೆಂದರೆ ಪರಮಾತ್ಮನೇ ಎಂದು ಸೂ. ಭಾ. ೧-೩-೧೩ ರಲ್ಲಿ ಸೂಚಿಸಿದೆ.

## ಉಪಸಂಹಾರ

**ತಿಸ್ರೋ ಮಾತ್ರಾ ಮೃತ್ಯುಮತ್ಯಃ ಪ್ರಯುಕ್ತಾ**
**ಅನ್ಯೋನ್ಯಸಕ್ತಾ ಅನವಿಪ್ರಯುಕ್ತಾಃ ।**
**ಕ್ರಿಯಾಸು ಬಾಹ್ಯಾಭ್ಯನ್ತರಮಧ್ಯಮಾಸು**
**ಸಮ್ಯಕ್ಪ್ರಯುಕ್ತಾಸು ನ ಕಮ್ಪತೇ ಜ್ಞಃ ॥ ೬ ॥**

೬. ಅನ್ಯೋನ್ಯಸಕ್ತವಾಗಿರುವ ಮೂರು ಮಾತ್ರೆಗಳು ಅನವಿ ಪ್ರಯುಕ್ತವಾಗಿ ಪ್ರಯೋಗಿಸಲ್ಪಟ್ಟರೆ ಮೃತ್ಯುವಂತವಾಗಿರುವವು. ಹೊರಗಿನ, ಒಳಗಿನ, ನಡುವಿನ ಕ್ರಿಯೆಗಳು ಚೆನ್ನಾಗಿ ಪ್ರಯೋಗಿಸಲ್ಪಟ್ಟರೆ ಜ್ಞಾನಿಯು ಅಲುಗಾಡುವದಿಲ್ಲ.

(ಭಾಷ್ಯ)

೨೪. ತಿಸ್ರಃ ತ್ರಿಸಂಖ್ಯಾಕಾಃ ಅಕಾರೋಕಾರಮಕಾರಾಖ್ಯಾಃ ಓಂಕಾರಸ್ಯ ಮಾತ್ರಾಃ । ಮೃತ್ಯುಮತ್ಯಃ ಮೃತ್ಯುರ್ಯಾಸಾಂ ವಿದ್ಯತೇ ತಾ ಮೃತ್ಯುಮತ್ಯಃ ಮೃತ್ಯುಗೋಚರಾತ್ ಅನತಿಕ್ರಾನ್ತಾಃ । ಮೃತ್ಯುಗೋಚರಾ ಏವ ಇತ್ಯರ್ಥಃ । ತಾ ಆತ್ಮನೋ ಧ್ಯಾನಕ್ರಿಯಾಸು ಪ್ರಯುಕ್ತಾಃ । ಕಿಂ ಚ ಅನ್ಯೋನ್ಯಸಕ್ತಾ ಇತರೇತರಸಂಬದ್ಧಾಃ । ಅನವಿಪ್ರಯುಕ್ತಾಃ ವಿಶೇಷೇಣ ಏಕೈಕವಿಷಯೇ ಏವ ಪ್ರಯುಕ್ತಾಃ ವಿಪ್ರಯುಕ್ತಾಃ; ನ ತಥಾ ವಿಪ್ರಯುಕ್ತಾಃ ಅವಿಪ್ರಯುಕ್ತಾಃ; ನ ಅವಿಪ್ರಯುಕ್ತಾಃ ಅನವಿಪ್ರಯುಕ್ತಾಃ । ಕಿಂ ತರ್ಹಿ? ವಿಶೇಷೇಣ ಏಕಸ್ಮಿನ್ (ಪ್ರಯುಕ್ತಾ ಏವ[1]) ಧ್ಯಾನಕಾಲೇ । ತಿಸೃಷು ಕ್ರಿಯಾಸು ಬಾಹ್ಯಾಭ್ಯನ್ತರಮಧ್ಯಮಾಸು ಜಾಗ್ರತ್ಸ್ವಪ್ನಸುಷುಪ್ತಸ್ಥಾನಪುರುಷಾಭಿಧ್ಯಾನಲಕ್ಷಣಾಸು ಯೋಗಕ್ರಿಯಾಸು[2] ಸಮ್ಯಕ್ ಪ್ರಯುಕ್ತಾಸು ಸಮ್ಯಕ್ ಧ್ಯಾನಕಾಲೇ ಪ್ರಯೋಜಿತಾಸು ನ ಕಮ್ಪತೇ ನ ಚಲತಿ ಜ್ಞಃ ಯೋಗೀ ಯಥೋಕ್ತವಿಭಾಗಜ್ಞಃ ಓಂಕಾರಸ್ಯ ಇತ್ಯರ್ಥಃ । ನ ತಸ್ಯ ಏವಂವಿದಃ ಚಲನಮ್ ಉಪಪದ್ಯತೇ । ಯಸ್ಮಾತ್ ಜಾಗ್ರತ್ಸ್ವಪ್ನಸುಷುಪ್ತಪುರುಷಾಃ ಸಹ ಸ್ಥಾನೈಃ ಮಾತ್ರಾತ್ರಯರೂಪೇಣ ಓಂಕಾರಾತ್ಮರೂಪೇಣ ದೃಷ್ಟಾಃ । ಸ ಹಿ ಏವಂವಿದ್ವಾನ್ ಸರ್ವಾತ್ಮಭೂತಃ ಓಂಕಾರಮಯಃ ಕುತೋ ವಾ ಚಲೇತ್ ಕಸ್ಮಿನ್ ವಾ ? ॥

(ಭಾಷ್ಯಾರ್ಥ)

ಓಂಕಾರದ ಮೂರು (ಮಾತ್ರೆ)ಗಳು ಎಂದರೆ ಅಕಾರ, ಉಕಾರ, ಮಕಾರ ಎಂಬ ಮೂರು ಸಂಖ್ಯೆಯ ಮಾತ್ರೆಗಳು ಮೃತ್ಯುವಂತವಾಗಿರುವವು. ಮೃತ್ಯುವಂತ

---

1. ಈ ಮಾತುಗಳು ಭಾಷ್ಯದಲ್ಲಿ ಕೈಬಿಟ್ಟುಹೋಗಿವೆ ಎಂದು ಕಲ್ಪಿಸಲಾಗಿದೆ.
2. " ಯುಕ್ತಾಸು " ಎಂದು ವಾ॥ ಪಾಠದಲ್ಲಿ ಹೆಚ್ಚಾಗಿದೆ.

ವಾಗಿರುವವು ಎಂದರೆ ಮೃತ್ಯುವು ಅವಕ್ಕೆ ಇರುತ್ತದೆ, ಮೃತ್ಯುವಿನ ವಿಷಯವನ್ನು ಅವು ಮೀರಿರುವದಿಲ್ಲ; ಮೃತ್ಯುವಿಗೆ ಗೋಚರವಾದವುಗಳೇ ಆಗಿರುತ್ತವೆ ಎಂದರ್ಥ.[1] ಅವು ತಮ್ಮ[2] ಧ್ಯಾನಕ್ರಿಯೆಗಳಲ್ಲಿ ಪ್ರಯೋಗಿಸಲ್ಪಟ್ಟರೆ ಮತ್ತು ಅನ್ಯೋನ್ಯಸಕ್ತ ವಾಗಿರುವ ಎಂದರೆ ಒಂದಕ್ಕೊಂದಕ್ಕೆ ಸಂಬಂಧಪಟ್ಟಿರುವ (ಈ ಮಾತ್ರೆಗಳು) ಅನವಿ ಪ್ರಯುಕ್ತವಾಗಿ (ಪ್ರಯೋಗಿಸಲ್ಪಟ್ಟರೆ)-ವಿಶೇಷವಾಗಿ ಒಂದೊಂದು ವಿಷಯದಲ್ಲಿಯೇ ಪ್ರಯೋಗಿಸಿದರೆ ವಿಪ್ರಯುಕ್ತ(ವೆನಿಸುವವು); ಹಾಗೆ ವಿಪ್ರಯುಕ್ತವಾಗದೆ ಇದ್ದರೆ ಅವಿಪ್ರಯುಕ್ತ(ವಾಗುವವು); ಅವಿಪ್ರಯುಕ್ತವಾಗದೆ ಅನವಿಪ್ರಯುಕ್ತವಾಗಿ (ಪ್ರಯೋ ಗಿಸಲ್ಪಟ್ಟರೆ)-(ಅವಿಪ್ರಯುಕ್ತವಾಗಿ ಅಲ್ಲ,) ಮತ್ತೇನೆಂದರೆ ವಿಶೇಷವಾಗಿ (ಪ್ರಯುಕ್ತವೇ ಆದರೆ[3] ಮೃತ್ಯುವಂತವಾಗಿರುವವು).

ಧ್ಯಾನಕಾಲದಲ್ಲಿ ಹೊರಗಿನ, ಒಳಗಿನ ಮತ್ತು ನಡುವಿನ ಎಂದರೆ ಎಚ್ಚರ, ಕನಸು, ತನಿನಿದ್ರೆ-ಎಂಬ (ಮೂರ)ವಸ್ಥೆಗಳ ಪುರುಷರನ್ನು ಅಭಿಧ್ಯಾನಮಾಡುವದೆಂಬ ಮೂರು ಕ್ರಿಯೆಗಳೂ (ಮೂರು) ಯೋಗಕ್ರಿಯೆಗಳೂ ಚೆನ್ನಾಗಿ ಪ್ರಯೋಗಿಸಲ್ಪಟ್ಟರೆ[4] ಜ್ಞಾನಿಯು ಎಂದರೆ **ಓಂಕಾರದ ಈ ಹೇಳಿದ ವಿಭಾಗವನ್ನು ಬಲ್ಲ-ಯೋಗಿಯು ಎಂದರ್ಥ[5]; (ಅವನು) ಅಲುಗಾಡುವದಿಲ್ಲ, ಚಲಿಸುವದಿಲ್ಲ ಎಂದರ್ಥ. ಹೀಗೆ ಅರಿತ[6] ಅವನಿಗೆ ಚಲನವೆಂಬುದು ಎಂದಿಗೂ ಆಗುವ ಹಾಗಿಲ್ಲ;**

---

1. ಮುಂದೆ ಹೇಳುವಂತೆ ಒಂದೊಂದು ವಿಷಯಕ್ಕೇ ಸಂಬಂಧಪಟ್ಟಿದ್ದರೆ ಅವುಗಳ ಧ್ಯಾನವು ಅನಿತ್ಯಫಲವನ್ನು ಮಾತ್ರ ಕೊಡುವದು.

2. "ಆತ್ಮನ ಧ್ಯಾನಕ್ರಿಯೆಗಳಲ್ಲಿ" ಎಂಬುದಕ್ಕಿಂತ "ತಮ್ಮ ಧ್ಯಾನಕ್ರಿಯೆಗಳಲ್ಲಿ" ಎಂದು ಅರ್ಥಮಾಡುವದರಲ್ಲಿ ಸ್ವಾರಸ್ಯ ಹೆಚ್ಚು. ಆಯಾ ಮಾತ್ರೆಯನ್ನು ಮಾತ್ರ ಧ್ಯಾನಿಸಿದರೆ ಅನಿತ್ಯಫಲ ಎಂದರ್ಥ.

3. "ವಿಶೇಷೇಣ" ಎಂಬ ಮಾತಿನ ಮುಂದೆ "ಪ್ರಯುಕ್ತಾ ಏವ" ಎಂದಿರಬೇಕು. ವಿ-ವಿಶೇಷವಾಗಿ (ಒಂದೊಂದರಲ್ಲಿಯೇ) ಪ್ರಯುಕ್ತಾಃ-ಪ್ರಯೋಗಿಸಲ್ಪಟ್ಟವು. ಅವಿ ಪ್ರಯುಕ್ತಾಃ ಎಂದರೆ ಹಾಗೆ ಪ್ರಯೋಗಿಸಲ್ಪಡದೆ ಇರುವವು. ಅನವಿಪ್ರಯುಕ್ತಾಃ ಎಂದರೆ ಅವಿಪ್ರಯುಕ್ತವಾಗದೆ ಎಂದರೆ ವಿಪ್ರಯುಕ್ತವಾಗಿಯೇ ಇರುವವುಗಳು ಎಂದು ವಿಗ್ರಹವಾಕ್ಯ ಕಥನ. ಒಂದೊಂದೇ ಅವಸ್ಥೆಯ ಪುರುಷನನ್ನು ಧ್ಯಾನಮಾಡುವದಕ್ಕೆ ಮಾತ್ರೆಗಳನ್ನು ಪ್ರಯೋಗಿಸಿದರೆ ಅವು ಮೃತ್ಯುವಂತಾಗುವವು ಎಂದು ಅಭಿಪ್ರಾಯ.

4. ಒಟ್ಟುಗೂಡಿಸಿ ಓಂಕಾರವಾಗಿ ಮಾಡಿಕೊಂಡು ಪರಮಪುರುಷನನ್ನೇ ಧ್ಯಾನ ಮಾಡಿದರೆ ಎಂದರ್ಥ.

5 ಓಂಕಾರೋಪಾಸಕನನ್ನೇ ಇಲ್ಲಿ "ಜ್ಞಃ" ಎಂದು ಕರೆದಿದೆ. ಗೀ. ಭಾ. ೮-೧೨.

6. ಸಾಕ್ಷಾತ್ಕಾರಮಾಡಿಕೊಂಡಿರುವ.

**ಏಕೆಂದರೆ ಎಚ್ಚರ, ಕನಸು, ತನಿನಿದ್ರೆ**—ಇವುಗಳ **ಪುರುಷರು** (ಆ) **ಅವಸ್ಥೆಗಳೊಡನೆ ಮೂರುಮಾತ್ರೆಗಳ ರೂಪದ ಓಂಕಾರಾತ್ಮರೂಪದಿಂದಲೇ ಸಾಕ್ಷಾತ್ಕರಿಸಲ್ಪಟ್ಟಿರುತ್ತಾರೆ.**[1] ಹೀಗೆಂದು ಅರಿತುಕೊಂಡಿರುವ ಆ ಉಪಾಸಕನು ಸರ್ವಾತ್ಮನಾಗಿ ಓಂಕಾರಮಯನಾಗಿರುವದರಿಂದ ಏತರಿಂದ ಎಲ್ಲಿಗೆ ಚಲಿಸಿಯಾನು?[2]

(ಭಾಷ್ಯ)

೮೫. ಸರ್ವಾರ್ಥಸಂಗ್ರಹಾರ್ಥೋ ದ್ವಿತೀಯೋ ಮನ್ತ್ರಃ—

(ಭಾಷ್ಯಾರ್ಥ)

(ಇದುವರೆಗೆ ಹೇಳಿರುವ) ವಿಷಯವನ್ನೆಲ್ಲ[3] ಸಂಗ್ರಹಿಸಿ ತಿಳಿಸುವದಕ್ಕೆ (ಈ) ಎರಡನೆಯ ಮಂತ್ರವು (ಬಂದಿದೆ):-

**ಋಗ್ಭಿರೇತಂ ಯಜುರ್ಭಿರನ್ತರಿಕ್ಷಂ**
**ಸಾಮಭಿರ್ಯತ್ತತ್ಕವಯೋ ವೇದಯನ್ತೇ ।**
**ತಮೋಂಕಾರೇಣೈವಾಯತನೇನಾನ್ವೇತಿ ವಿದ್ವಾನ್**
**ಯತ್ತಚ್ಛಾನ್ತಮಜರಮಮೃತಮಭಯಂ ಪರಂ ಚೇತಿ ॥ ೭ ॥**

೭. ಋಕ್ಕುಗಳಿಂದ ಈ (ಲೋಕವನ್ನು), ಯಜುಸ್ಸುಗಳಿಂದ ಅಂತರಿಕ್ಷವನ್ನು, ಸಾಮಗಳಿಂದ ಯಾವದನ್ನು ಕವಿಗಳು ತಿಳಿದಿರುವರೋ ಅದನ್ನು ಓಂಕಾರವೆಂಬ ಆಯತನದಿಂದಲೇ ವಿದ್ವಾಂಸನು ಹೊಂದುತ್ತಾನೆ. ಯಾವದು ಶಾಂತವಾಗಿ ಮುಪ್ಪಿಲ್ಲದೆ ಮರಣವಿಲ್ಲದೆ ಭಯವಿಲ್ಲದೆ ಇರುವದೋ ಆ ಪರ (ಬ್ರಹ್ಮವನ್ನು ಹೊಂದುತ್ತಾನೆ).

(ಭಾಷ್ಯ)

೮೬. ಋಗ್ಭಿಃ ಏತಂ ಲೋಕಂ ಮನುಷ್ಯೋಪಲಕ್ಷಿತಮ್ । ಯಜುರ್ಭಿಃ ಅನ್ತರಿಕ್ಷಂ ಸೋಮಾಧಿಷ್ಠಿತಮ್ । ಸಾಮಭಿಃ ಯತ್ ತತ್ ಬ್ರಹ್ಮಲೋಕಃ ಇತಿ

1. ಅಕಾರವು ಎಚ್ಚರ ಮತ್ತು ವೈಶ್ವಾನರ; ಉಕಾರವು ಕನಸು ಮತ್ತು ತೈಜಸ; ಮಕಾರವು ಸುಷುಪ್ತಿ ಮತ್ತು ಪ್ರಾಜ್ಞ. ಆದರೆ ಓಂಕಾರವು ಈ ಮೂರು ಅವಸ್ಥೆಗಳಿಗೂ ಸೇರಿರುವ ಪರಮಾತ್ಮನೇ ಎಂದು ಓಂಕಾರೋಪಾಸಕನು ಸಾಕ್ಷಾತ್ಕಾರಮಾಡಿಕೊಂಡಿರುತ್ತಾನೆ. ವೈಶ್ವಾನರಾದಿರೂಪದಿಂದ ತೋರುವ ಪುರುಷರು ಈ ಪರಮಾತ್ಮನಿಗಿಂತ ಬೇರೆಯಲ್ಲ. ಇವನನ್ನೇ ಅಜ್ಞರು ಆಯಾ ವಿಶೇಷರೂಪದಿಂದ ಕಾಣುತ್ತಾರೆ ಎಂಬುದು ಸಾಕ್ಷಾತ್ಕಾರದಿಂದಾದ ತಿಳಿವಳಿಕೆ.

2. ಪರಮಾತ್ಮರೂಪವಾದ ಓಂಕಾರವೇ ನಾನು ಎಂಬ ಅರಿವಾಗಿರುವವನಿಗೆ ಎರಡನೆಯದಾಗಿ ಏನೂ ಉಳಿದಿರುವದಿಲ್ಲ; ಆದ್ದರಿಂದ ಅವನಿಗೆ ವಿಶೇಷವೆಂಬುದಿಲ್ಲ.

3. ಓಂಕಾರದ ಉಪಾಸನೆಯಿಂದ ಪರಾಪರಬ್ರಹ್ಮಗಳ ಪ್ರಾಪ್ತಿಯಾಗುವದೆಂಬುದನ್ನು.

ತೃತೀಯಂ ಕವಯಃ ಮೇಧಾವಿನಃ ವಿದ್ಯಾವನ್ತ ಏವ ನಾವಿದ್ವಾಂಸಃ ವೇದಯನ್ತೇ। ತಂ ತ್ರಿವಿಧಂ ಲೋಕಮ್ ಓಂಕಾರೇಣ ಸಾಧನೇನ ಅಪರಬ್ರಹ್ಮಲಕ್ಷಣಮ್ ಅನ್ವೇತಿ ಅನುಗಚ್ಛತಿ ವಿದ್ವಾನ್। ತೇನೈವ ಓಂಕಾರೇಣ ಯತ್ ತತ್ ಪರಂ ಬ್ರಹ್ಮ ಅಕ್ಷರಂ ಸತ್ಯಂ ಪುರುಷಾಖ್ಯಂ ಶಾನ್ತಂ ವಿಮುಕ್ತಜಾಗ್ರತ್ಸ್ವಪ್ನಸುಷುಪ್ತಾದಿವಿಶೇಷಂ ಸರ್ವಪ್ರಪಞ್ಚವಿವರ್ಜಿತಮ್ ಅತ ಏವ। ಅಜರಂ ಜರಾವಿವರ್ಜಿತಮ್। ಅಮೃತಂ ಮೃತ್ಯುವರ್ಜಿತಮ್ ಅತ ಏವ। ಯಸ್ಮಾತ್ ಜರಾದಿವಿಕ್ರಿಯಾರಹಿತಮ್ ಅತಃ ಅಭಯಮ್। ಯಸ್ಮಾದೇವ ಅಭಯಂ ತಸ್ಮಾತ್ ಪರಂ ನಿರತಿಶಯಮ್। ತದಪಿ ಓಂಕಾರೇಣೈವ ಆಯತನೇನ ಗಮನಸಾಧನೇನ ಅನ್ವೇತಿ ಇತ್ಯರ್ಥಃ। ಇತಿಶಬ್ದಃ ವಾಕ್ಯಪರಿಸಮಾಪ್ತ್ಯರ್ಥಃ ||

(ಭಾಷ್ಯಾರ್ಥ)

ಋಕ್ಕುಗಳಿಂದ[1] ಈ ಲೋಕವನ್ನು ಮನುಷ್ಯ (ಜನ್ಮವೆಂಬ) ಉಪಲಕ್ಷಣವುಳ್ಳ (ಈ ಲೋಕವನ್ನು)[2]; ಯಜುಸ್ಸುಗಳಿಂದ ಸೋಮನು ಆಳುತ್ತಿರುವ ಅಂತರಿಕ್ಷ (ಲೋಕ)ವನ್ನು ; ಸಾಮಗಳಿಂದ ಮೂರನೆಯದಾದ ಬ್ರಹ್ಮಲೋಕವೆಂದು ಕವಿಗಳು ಎಂದರೆ (ರಹಸ್ಯವನ್ನು) ಬಲ್ಲ ಉಪಾಸಕರೇ ಹೊರತು ಉಪಾಸಕರಲ್ಲದವರು ಯಾವದನ್ನು ಅರಿಯರೋ ಅದನ್ನು[3]-ಅಪರಬ್ರಹ್ಮರೂಪವಾದ[4] ಈ ಮೂರು ಬಗೆಯ ಲೋಕವನ್ನೂ ಓಂಕಾರವೆಂಬ ಸಾಧನದಿಂದ ಉಪಾಸಕನು ಹೊಂದುತ್ತಾನೆ, ಹೋಗಿ ಸೇರುತ್ತಾನೆ. **ಅದೇ ಓಂಕಾರದಿಂದಲೇ[5] ಯಾವದು ಪುರುಷನೆಂಬ ಹೆಸರಿನ**

---

1. ಋಗ್ರೂಪವಾದ ಅಕಾರಮಾತ್ರೆಯ ಜ್ಞಾನದಿಂದೊಡಗೂಡಿ ಓಂಕಾರವನ್ನು ಉಪಾಸನೆಮಾಡಿದ್ದರಿಂದ ಹೀಗೆಯೇ " ಯಜುಸ್ಸುಗಳಿಂದ, ಸಾಮಗಳಿಂದ " ಎಂದರೆ ಉಕಾರಮಾತ್ರೆಯ ಜ್ಞಾನದಿಂದ, ಮಕಾರಮಾತ್ರೆಯ ಜ್ಞಾನದಿಂದ, ಕೂಡಿದ ಓಂಕಾರವನ್ನು ಉಪಾಸನೆಮಾಡಿದ್ದರಿಂದ ಎಂದರ್ಥವನ್ನು ಮಾಡಬೇಕು.

2. ಈ ಲೋಕದಲ್ಲಿ ಉಳಿದ ಪ್ರಾಣಿಗಳೂ ಇವೆಯಾದರೂ ಕರ್ಮಜ್ಞಾನಗಳಿಗೆ ಅಧಿಕಾರವಿರುವ ಮನುಷ್ಯರನ್ನೇ ಹೆಗ್ಗುರುತಾಗಿ ಹೇಳಿದೆ.

3. ಹಿರಣ್ಯಗರ್ಭನನ್ನು ಉಪಾಸನೆಮಾಡಿರುವ ಮಹನೀಯರು ಮಾತ್ರ ಬ್ರಹ್ಮಲೋಕವನ್ನು ಬಲ್ಲರು. ಮೂರನೆಯ ಮಾತ್ರೆಯ ಉಪಾಸನೆಯನ್ನು ಪ್ರತ್ಯೇಕವಾಗಿ ಹೇಳದೆ ಇದ್ದರೂ ೫ ನೆಯ ಮಂತ್ರದಲ್ಲಿ ಅದೂ ಅಡಕವಾಗಿದೆ ಎಂಬುದಕ್ಕೆ ಈ ಭಾಷ್ಯವು ಗಮಕವು.

4. ಪರಬ್ರಹ್ಮವಲ್ಲದ್ದೆಲ್ಲ ಅಪರಬ್ರಹ್ಮಲಕ್ಷಣವಾದ ಫಲವೇ.

5. ಯಾವ ಓಂಕಾರದ ಉಪಾಸನೆಯಿಂದ ಅಪರಬ್ರಹ್ಮವನ್ನು ಪಡೆಯುವರೋ ಅದರ ಉಪಾಸನೆಯಿಂದಲೇ ಎಂದರ್ಥ. ಒಂದು ಮಾತ್ರೆ, ಎರಡು ಮಾತ್ರೆ-ಎಂದು ಹೇಳಿರುವಾಗ ಬರಿಯ ಮಾತ್ರೆಗಳ ಉಪಾಸನೆಯಲ್ಲವೆಂದೂ ಆಯಾ ಮಾತ್ರೆಗಳ ಅರಿವಿನಿಂದ ಕೂಡಿ ಓಂಕಾರವನ್ನು ಉಪಾಸನೆಮಾಡುವದೆಂದೂ ಭಾಷ್ಯಕಾರರ ಅಭಿಪ್ರಾಯವು. " ಈ ಓಮ್ ಎಂಬೀ ಅಕ್ಷರದಿಂದಲೇ " ಎಂಬ ೫ ನೆಯ ಮಂತ್ರದ ಅವಧಾರಣೆಗೆ ಇದೇ ಅಭಿಪ್ರಾಯ.

**ಸತ್ಯವಾದ ಅಕ್ಷರವೋ**[1] **ಆ ಪರಬ್ರಹ್ಮವನ್ನೂ** ಶಾಂತವಾದ ಮುಕ್ತಸ್ವರೂಪವಾದ ಎಚ್ಚರ, ಕನಸು, ತನಿನಿದ್ರೆ-ಮುಂತಾದ ಯಾವ ವಿಶೇಷವೂ ಇಲ್ಲದ ಯಾವ ಪ್ರಪಂಚವೂ ಇಲ್ಲದ[2], ಆದ್ದರಿಂದಲೇ ಅಜರವಾಗಿರುವ ಎಂದರೆ ಮುಪ್ಪಿಲ್ಲದ, ಆದ್ದರಿಂದಲೇ ಅಮೃತವಾದ ಎಂದರೆ ಮರಣವಿಲ್ಲದ, ಮುಪ್ಪೇ ಮುಂತಾದ ವಿಕಾರಗಳಿಲ್ಲದಿರುವದರಿಂದ ಅಭಯವಾಗಿರುವ, ಅಭಯವಾಗಿರುವದರಿಂದಲೇ ಪರವಾದ, ಎಂದರೆ ತನಗಿಂತ ಮಿಗಿಲಿಲ್ಲದ (ಬ್ರಹ್ಮವು ಯಾವದೋ) ಅದನ್ನೂ-ಓಂಕಾರವೆಂಬ ಆಯತನದಿಂದಲೇ ಎಂದರೆ (ಆ) ಗತಿಸಾಧನದಿಂದಲೇ ಹೊಂದುತ್ತಾನೆ ಎಂದರ್ಥ. (ಕೊನೆಯಲ್ಲಿ) ಇತಿ ಎಂಬ ಮಾತನ್ನು ಪ್ರಯೋಗಿಸಿರುವದು ವಾಕ್ಯವು[3] ಮುಗಿಯಿತೆಂದು ತಿಳಿಸುವದಕ್ಕೆ.



1. ಮುಂಡಕದಲ್ಲಿ ಹೇಳಿದ ಅಕ್ಷರವನ್ನೂ ಉಪಾಸನೆಯಿಂದ ಪಡೆಯಬಹುದೆಂದು ಭಾವ.

2. " ಜಾಗ್ರತ್ಸ್ವಪ್ನಸುಷುಪ್ತ್ಯಾದಿವಿಶೇಷಸರ್ವಪ್ರಪಂಚವರ್ಜಿತಮ್ " ಎಂಬ ಆ॥ ಪಾಠದಲ್ಲಿ ವಿಶೇಷಗಳೆಂಬ ಯಾವ ಪ್ರಪಂಚವೂ ಇಲ್ಲದ ಎಂಪರ್ಥ.

3. ಈ ಪ್ರಶ್ನೆಯು.

# ಆರನೆಯ ಪ್ರಶ್ನೆ

## ಈ ಪ್ರಶ್ನೆಯ ಸಂಬಂಧ

(ಭಾಷ್ಯ)

೮೭. "ಅಥ ಹೈನಂ ಸುಕೇಶಾ ಭಾರದ್ವಾಜಃ ಪಪ್ರಚ್ಛ"। ಸಮಸ್ತಂ ಜಗತ್ **ಕಾರ್ಯಕರಣಲಕ್ಷಣಂ**[1] ಸಹ ವಿಜ್ಞಾನಾತ್ಮನಾ ಪರಸ್ಮಿನ್ **ಅಕ್ಷರೇ ಸುಷುಪ್ತಿಕಾಲೇ ಸಂಪ್ರತಿಷ್ಠತೇ** ಜಗತ್ ತತ ಏವೋತ್ಪದ್ಯತೇ ಇತಿ ಸಿದ್ಧಂ ಭವತಿ । ನ ಹಿ ಅಕಾರಣೇ ಕಾರ್ಯಸ್ಯ ಸಂಪ್ರತಿಷ್ಠಾನಮ್ ಉಪಪದ್ಯತೇ । ಉಕ್ತಂ ಚ "ಆತ್ಮನ ಏಷ ಪ್ರಾಣೋ ಜಾಯತೇ" (೩-೩) ಇತಿ । ಜಗತಶ್ಚ ಯನ್ಮೂಲಂ ತತ್ಪರಿಜ್ಞಾನಾತ್ ಪರಂ ಶ್ರೇಯಃ ಇತಿ ಸರ್ವೋಪನಿಷದಾಂ ನಿಶ್ಚಿತೋಽರ್ಥಃ । ಅನನ್ತರಂ ಚೋಕ್ತಮ್ "ಸ ಸರ್ವಜ್ಞಃ ಸರ್ವೋ ಭವತಿ" (೪-೧೦) ಇತಿ । ವಕ್ತವ್ಯಂ ಚ ಕ್ವ ತರ್ಹಿ ತದಕ್ಷರಂ ಸತ್ಯಂ ಪುರುಷಾಖ್ಯಂ ವಿಜ್ಞೇಯಮ್ ಇತಿ । ತದರ್ಥೋಽಯಂ ಪ್ರಶ್ನ ಆರಭ್ಯತೇ । ವೃತ್ತಾನ್ವಾಖ್ಯಾನಂ ಚ ವಿಜ್ಞಾನಸ್ಯ ದುರ್ಲಭತ್ವಖ್ಯಾಪನೇನ ತಲ್ಲಬ್ಧ್ಯರ್ಥಂ ಮುಮುಕ್ಷೂಣಾಂ ಯತ್ನವಿಶೇಷೋತ್ಪಾದನಾರ್ಥಮ್[2] ॥

(ಭಾಷ್ಯಾರ್ಥ)

"ಅಥ ಹೈನಂ ಸುಕೇಶಾ ಭಾರದ್ವಾಜಃ ಪಪ್ರಚ್ಛ" ಆಗ ಈತನನ್ನು ಸುಕೇಶ ಭಾರದ್ವಾಜನು ಕೇಳಿದನು (ಎಂಬ ಆರನೆಯ ಪ್ರಶ್ನೆಯ ಸಂಬಂಧವೇನೆಂದರೆ): **ಸುಷುಪ್ತಿಕಾಲದಲ್ಲಿ ಕಾರ್ಯಕರಣರೂಪವಾಗಿರುವ ಜಗತ್ತೆಲ್ಲವೂ ವಿಜ್ಞಾನಾತ್ಮನೊಡನೆ ಪರಮಾತ್ಮನಾದ ಅಕ್ಷರದಲ್ಲಿ ಸೇರಿಹೋಗುತ್ತದೆ** ಎಂದು ಹಿಂದೆ (೪-೧೧) ರಲ್ಲಿ ಹೇಳಿದ್ದಾಗಿದೆ. ಪ್ರಲಯದಲ್ಲಿಯೂ ಅದೇ ಅಕ್ಷರದಲ್ಲಿ ಜಗತ್ತು ಸೇರಿಹೋಗುತ್ತದೆಯೆಂದೂ ಅದರಿಂದಲೇ ಉಂಟಾಗುತ್ತದೆಯೆಂದೂ (ನ್ಯಾಯ) ಸಾಮರ್ಥ್ಯದಿಂದ[3] ಸಿದ್ಧವಾಗುತ್ತದೆ.[4] ಏಕೆಂದರೆ ಕಾರಣವನ್ನು ಬಿಟ್ಟು ಮತ್ತೇತ

---

1. "ಕಾರ್ಯಕಾರಣಲಕ್ಷಣಮ್" ಎಂದು ಅಚ್ಚಿನಪುಸ್ತಕಗಳಲ್ಲಿರುವದನ್ನು ಹೀಗೆಂದು ತಿದ್ದಿಕೊಂಡಿದೆ.

2. "ಯತ್ನವಿಶೇಷೋಪಾದಾನಾರ್ಥಂ" ಎಂದು ಆ॥ ವಾ॥ ಪಾಠ; ಇಲ್ಲಿ ಕೊಟ್ಟಿರುವದು ಮೈ॥ ಪಾಠ.

3. ಸುಷುಪ್ತಿಯಂತೆಯೇ ಪ್ರಲಯವೂ ಕಾರ್ಯವಿಲ್ಲದ ಅವಸ್ಥೆ ಎಂಬುದು ನ್ಯಾಯ. ಈ ಅವಸ್ಥೆಗಳಲ್ಲಿ ಜಗತ್ತು ಕಾರಣಾವಿದ್ಯೆಯಲ್ಲಿ ಲಯವಾಗುತ್ತದೆ ಎಂಬ ವಾದವು ಈ ಭಾಷ್ಯಕ್ಕೆ ವಿರುದ್ಧ.

4. ಈ ಜ್ಞಾನದಿಂದ ಅಕ್ಷರವು ನಿಷ್ಪ್ರಪಂಚವೆಂದು ಏರ್ಪಡುತ್ತದೆ.

ರಲ್ಲಿಯೂ ಕಾರ್ಯವು ಲಯವಾಗುವದೆಂಬುದು ಹೊಂದುವದೇ ಇಲ್ಲ. "ಆತ್ಮನಿಂದ ಈ ಪ್ರಾಣನು ಹುಟ್ಟುತ್ತಾನೆ" (೩-೩) ಎಂದು ಹಿಂದೆ ಹೇಳಿಯೂ ಇರುತ್ತದೆ.[1] ಮತ್ತು **ಜಗತ್ತಿನ ಕಾರಣವು ಯಾವದೋ ಅದರ ಅರಿವಿನಿಂದ ಹೆಚ್ಚಿನ ಶ್ರೇಯಸ್ಸು (ಆಗುತ್ತದೆ) ಎಂಬುದು ಉಪನಿಷತ್ತುಗಳಲ್ಲೆಲ್ಲ ನಿಶ್ಚಯವಾಗಿರುವ ವಿಷಯವಾಗಿರುತ್ತದೆ.**[2] "ಆ ಸರ್ವಜ್ಞನು ಸರ್ವವೂ ಆಗುವನು" (೪-೧೦) ಎಂದು ಆ ಬಳಿಕ ಹೇಳಿರುತ್ತದೆ.[3] ಹಾಗಾದರೆ ಆ ಪುರುಷನೆಂಬ ಹೆಸರಿನ ಸತ್ಯವಾದ ಅಕ್ಷರವನ್ನು ಎಲ್ಲಿ ಅರಿತುಕೊಳ್ಳಬೇಕು ? ಎಂಬುದನ್ನು (ಈಗ) ಹೇಳಬೇಕಾಗಿರುತ್ತದೆ. ಅದಕ್ಕಾಗಿ ಈ ಪ್ರಶ್ನೆಯನ್ನು ಪ್ರಾರಂಭಿಸಿರುತ್ತದೆ.

ಹಿಂದೆ ನಡೆದ ವೃತ್ತಾಂತವನ್ನು ಹೇಳಿರುವದು[4] ಜ್ಞಾನವು ದಕ್ಕುವದು ಕಷ್ಟವೆಂದು ತಿಳಿಸಿ ಅದನ್ನು ಪಡೆಯುವದಕ್ಕಾಗಿ ಮುಮುಕ್ಷುಗಳಲ್ಲಿ ಅಸಾಧಾರಣವಾದ ಯತ್ನವನ್ನುಂಟುಮಾಡುವದಕ್ಕಾಗಿ.[5]

## ಸುಕೇಶನ ಪ್ರಶ್ನೆ : ಷೋಡಶಕಲೆಗಳ ಪುರುಷನಿರುವದೆಲ್ಲಿ ?

**ಅಥ ಹೈನಂ ಸುಕೇಶಾ ಭಾರದ್ವಾಜಃ ಪಪ್ರಚ್ಛ ಭಗವನ್ ಹಿರಣ್ಯನಾಭಃ ಕೌಸಲ್ಯೋ ರಾಜಪುತ್ರೋ ಮಾಮುಪೇತ್ಯೈತಂ ಪ್ರಶ್ನಮಪೃಚ್ಛತ। ಷೋಡಶಕಲಂ ಭಾರದ್ವಾಜ ಪುರುಷಂ ವೇತ್ಥ ತಮಹಂ ಕುಮಾರಮಬ್ರುವಂ ನಾಹಮಿಮಂ ವೇದ ಯದ್ಯಹಮಿಮಮವೇದಿಷಂ ಕಥಂ ತೇ ನಾವಕ್ಷ್ಯಮಿತಿ ಸಮೂಲೋ ವಾ ಏಷ ಪರಿಶುಷ್ಯತಿ ಯೋಽನೃತಮಭಿವದತಿ ತಸ್ಮಾನ್ನಾರ್ಹಾಮ್ಯನೃತಂ ವಕ್ತುಂ ಸ ತೂಷ್ಣೀಂ ರಥಮಾರುಹ್ಯ ಪ್ರವವ್ರಾಜ। ತಂ ತ್ವಾ ಪೃಚ್ಛಾಮಿ ಕ್ವಾಸೌ ಪುರುಷ ಇತಿ ॥ ೧ ॥**

---

1. ಆತ್ಮನಿಂದ ಪ್ರಾಣಾದಿಗಳು ಉಂಟಾಗುತ್ತವೆ ಎಂದು ಶ್ರುತಿಯು ಸ್ಪಷ್ಟವಾಗಿ ಹೇಳಿರುತ್ತದೆ; ಆದ್ದರಿಂದ ಆತ್ಮನಲ್ಲಿಯೇ ಅದು ಲಯವಾಗುವದು ಯುಕ್ತವಾಗಿರುತ್ತದೆ.

2. ಜಗತ್ಕಾರಣನಾದ ಆತ್ಮನಲ್ಲಿ ಲಯವನ್ನು ಹೇಳಿರುವದು ಆತ್ಮಸ್ವರೂಪವನ್ನು ತಿಳಿಸುವದಕ್ಕೇ ಎಂದು ಇದರಿಂದ ಏರ್ಪಡುತ್ತದೆ.

3. ಆತ್ಮನನ್ನು ತಿಳಿದರೇ ಪರಮಪುರುಷಾರ್ಥವೆಂಬುದನ್ನು ಈ ಶ್ರುತಿಯೂ ಹೇಳಿದಂತೆ ಆಯಿತು.

4. ಸುಕೇಶನು ತನ್ನ ಪ್ರಶ್ನೆಯನ್ನು ರಾಜಪುತ್ರನ ಕಥೆಯಿಂದ ಪ್ರಾರಂಭಿಸಿರುವದು.

5. ರಾಜಪುತ್ರನೂ ಸುಕೇಶನೂ ಹೇಗೆ ಕಷ್ಟಪಟ್ಟು ಆತ್ಮನನ್ನು ಹೇಳುವ ಗುರುವನ್ನು ಹುಡುಕಿದರೋ ಹಾಗೆಯೇ ಉಳಿದ ಮುಮುಕ್ಷುಗಳೂ ಹುಡುಕಬೇಕೆಂದು ತಿಳಿಸುವದಕ್ಕೆ.

೧. ಆಮೇಲೆ ಸುಕೇಶಭಾರದ್ವಾಜನು ಈತನನ್ನು ಪ್ರಶ್ನೆಮಾಡಿದ ನೇನೆಂದರೆ: ಭಗವಂತನೆ, ರಾಜಪುತ್ರನಾದ ಕೌಸಲ್ಯಹಿರಣ್ಯನಾಭನು ನನ್ನ ಬಳಿಗೆ ಬಂದು ಈ ಪ್ರಶ್ನೆಯನ್ನು ಮಾಡಿದನು: "ಭಾರದ್ವಾಜನೆ, ಷೋಡಶ ಕಲೆಗಳ ಪುರುಷನನ್ನು ಬಲ್ಲೆಯು?" ನಾನು ಆ ಕುಮಾರನಿಗೆ ಹೇಳಿದೆ ನೇನೆಂದರೆ: "ನನಗೆ ಈ (ಪುರುಷನು) ಗೊತ್ತಿಲ್ಲ. ಈ (ಪುರುಷನನ್ನು) ನಾನು ಅರಿತಿದ್ದರೆ ಹೇಗೆತಾನೆ ನಿನಗೆ ಹೇಳದೆ ಇರುತ್ತಿದ್ದೆನು? ಯಾವನು ಸುಳ್ಳನ್ನು ಹೇಳುತ್ತಾನೋ ಅವನು ಬೇರು ಸಹಿತವಾಗಿ ಒಣಗಿಹೋಗುವನು; ಆದ್ದರಿಂದ ನಾನು ಸುಳ್ಳು ಹೇಳಲಾರೆ." ಅವನು ಸುಮ್ಮನೆ ರಥವನ್ನೇರಿ ಹೊರಟುಹೋದನು. ಆತನ ವಿಷಯವನ್ನು ನಿನ್ನನ್ನು ಕೇಳುತ್ತಿದೇನೆ. ಆ ಪುರುಷನು ಎಲ್ಲಿರುವನು?

(ಭಾಷ್ಯ)

೮೮. ಹೇ ಭಗವನ್ ಹಿರಣ್ಯನಾಭೋ ನಾಮತಃ ಕೋಸಲಾಯಾಂ ಭವಃ ಕೌಸಲ್ಯಃ ರಾಜಪುತ್ರಃ ಜಾತಿತಃ ಕ್ಷತ್ರಿಯಃ ಮಾಮ್ ಉಪೇತ್ಯ ಉಪಗಮ್ಯ ಏತಮ ಉಚ್ಯಮಾನಂ ಪ್ರಶ್ನಮ್ ಅಪೃಚ್ಛತ। ಷೋಡಶಕಲಂ ಷೋಡಶಸಂಖ್ಯಾಕಾಃ ಕಲಾ ಅವಯವಾ ಇವ ಆತ್ಮನಿ ಅವಿದ್ಯಾಧ್ಯಾರೋಪಿತರೂಪಾಃ ಯಸ್ಮಿನ್ ಪುರುಷೇ ಸೋಽಯಂ ಷೋಡಶಕಲಃ। ತಂ ಷೋಡಶಕಲಂ ಹೇ ಭಾರದ್ವಾಜ ಪುರುಷಂ ವೇತ್ಥ[1] ವಿಜಾನಾಸಿ? ತಮ್ ಅಹಂ ರಾಜಪುತ್ರಂ ಕುಮಾರಂ ಪೃಷ್ಟವನ್ತಮ್ ಅಬ್ರುವಮ್ ಉಕ್ತವಾನ್ ಅಸ್ಮಿ। ನಾಹಮ್ ಇಮಂ ವೇದ ಯಂ ತ್ವಂ ಪೃಚ್ಛಸಿ ಇತಿ। ಏವಮ್ ಉಕ್ತವತ್ಯಪಿ ಮಯಿ ಅಜ್ಞಾನಮ್ ಅಸಂಭಾವಯನ್ತಂ ತಮ್ ಅಜ್ಞಾನೇ ಕಾರಣಮ್ ಅವಾದಿಷಮ್। ಯದಿ ಕಥಂಚಿತ್ ಅಹಮ್ ಇಮಂ ತ್ವಯಾ ಪೃಷ್ಟಂ ಪುರುಷಮ್ ಅವೇದಿಷಂ ವಿದಿತವಾನಸ್ಮಿ ಕಥಮ್ ಅತ್ಯನ್ತಶಿಷ್ಯಗುಣವತೇ ಅರ್ಥಿನೇ ತೇ ತುಭ್ಯಂ ನಾವಕ್ಷ್ಯಂ ನೋಕ್ತವಾನಸ್ಮಿ? ನ ಬ್ರೂಯಾಮ್ ಇತ್ಯರ್ಥಃ। ಭೂಯೋಽಪಿ ಅಪ್ರತ್ಯಯ ಮಿವ[2] ಆಲಕ್ಷ್ಯ ಪ್ರತ್ಯಾಯಯಿತುಮ್ ಅಬ್ರುವಮ್। ಸಮೂಲಃ ಸಹ ಮೂಲೇನ ವೈ ಏಷಃ ಅನ್ಯಥಾ ಸನ್ತಮ್ ಆತ್ಮಾನಮ್ ಅನ್ಯಥಾ ಕುರ್ವನ್ ಅನೃತಮ್ ಅಯಥಾ ಭೂತಾರ್ಥಮ್ ಅಭಿವದತಿ ಯಃ ಸ ಪರಿಶುಷ್ಯತಿ ಶೋಷಮ್ ಉಪೈತಿ ಇಹಲೋಕ ಪರಲೋಕಾಭ್ಯಾಂ ವಿಚ್ಛಿದ್ಯತೇ ವಿನಶ್ಯತಿ। ಯತಃ ಏವಂ ಜಾನೇ ತಸ್ಮಾತ್ ನಾರ್ಹಾಮಿ ಅಹಮ್ ಅನೃತಂ ವಕ್ತುಂ ಮೂಢವತ್। ಸ ರಾಜಪುತ್ರಃ ಏವಂ ಪ್ರತ್ಯಾಯಿತಃ

1. "ವೇತ್ಥ ತ್ವಂ" ವಾ॥ ಪಾಠ.
2. "ಅಪ್ರತ್ಯಯಮೇವ" ವಾ॥.

ತೂಷ್ಣೀಂ ವ್ರೀಡಿತಃ ರಥಮ್ ಆರುಹ್ಯ ಪ್ರವವ್ರಾಜ, ಪ್ರಗತವಾನ್ ಯಥಾಗತಮೇವ। ಅತೋ ನ್ಯಾಯತ ಉಪಸನ್ನಾಯ ಯೋಗ್ಯಾಯ ಜಾನತಾ ವಿದ್ಯಾ ವಕ್ತವ್ಯೈವ ಅನೃತಂ ಚ ನ ವಕ್ತವ್ಯಂ ಸರ್ವಾಸ್ವಪಿ ಅವಸ್ಥಾಸು ಇತ್ಯೇತತ್ ಸಿದ್ಧಂ ಭವತಿ। ತಂ ಪುರುಷಂ ತ್ವಾ ತ್ವಾಂ ಪೃಚ್ಛಾಮಿ ಮಮ ಹೃದಿ ವಿಜ್ಞೇಯತ್ವೇನ ಶಲ್ಯಮಿವ[1] ಸ್ಥಿತಂ ಕ್ವಾಸೌ ವರ್ತತೇ ವಿಜ್ಞೇಯಃ ಪುರುಷಃ ಇತಿ ॥

(ಭಾಷ್ಯಾರ್ಥ)

ಎಲೈ ಭಗವಂತನೆ, ಹಿರಣ್ಯನಾಭನೆಂಬ ಹೆಸರುಳ್ಳ ಕೌಸಲ್ಯ ಎಂದರೆ ಕೋಸಲೆಯಲ್ಲಿ ಹುಟ್ಟಿದ, ರಾಜಪುತ್ರನು ಕ್ಷತ್ರಿಯ ಜಾತಿಯವನು, ನನ್ನ ಬಳಿಗೆ ಬಂದು ಎಂದರೆ (ಶಿಷ್ಯನಾಗಿ) ಹತ್ತಿರಕ್ಕೆ ಬಂದು ಈ ಮುಂದೆ ಹೇಳುವ ಪ್ರಶ್ನೆಯನ್ನು ಕೇಳಿದನು: ಎಲೈ ಭಾರದ್ವಾಜನೆ, ಷೋಡಶಕಲೆಗಳ-ಹದಿನಾರು **ಸಂಖ್ಯೆಯ ಕಲೆಗಳು ಎಂದರೆ ಅವಯವಗಳಂತೆ ತನ್ನಲ್ಲಿ ಅವಿದ್ಯೆಯಿಂದ ಹುಟ್ಟುಗಟ್ಟಿರುವ ರೂಪಗಳು**[2] ಯಾವ ಪುರುಷನಲ್ಲಿರುವವೋ ಅವನು ಷೋಡಶಕಲೆಗಳ (ಪುರುಷನು). ಆ ಷೋಡಶ ಕಲೆಗಳ-ಪುರುಷನನ್ನು ಬಲ್ಲೆಯ, ಅರಿತಿರುವೆಯ? ನಾನು ಆ ಕುಮಾರನಿಗೆ (ಪ್ರಶ್ನೆಯನ್ನು) ಕೇಳಿದ (ಆ) ರಾಜಪುತ್ರನಿಗೆ ಹೇಳಿದೆನೇನೆಂದರೆ ತಿಳಿಸಿದ್ದೇನೆಂದರೆ: "ನೀನು ಯಾವ (ಪುರುಷ)ನನ್ನು ಕೇಳುತ್ತಿರುವೆಯೋ ಅವನನ್ನು ನಾನು ಅರಿಯೆನು." ನಾನು ಹೀಗೆಂದು ತಿಳಿಸಿದರೂ ನನ್ನಲ್ಲಿ ಅಜ್ಞಾನವು ಇರಲಾರದೆಂದು ಭಾವಿಸಿದ್ದ ಅವನಿಗೆ ನನಗೆ ಅದು ತಿಳಿಯದೆಂಬುದಕ್ಕೆ ಕಾರಣವನ್ನು ತಿಳಿಸಿದೆನು. "ಒಂದುವೇಳೆ ಹೇಗೋ ನೀನು ಕೇಳುತ್ತಿರುವ ಈ ಪುರುಷನನ್ನು ನಾನು ತಿಳಿದಿದ್ದರೆ ಬಲ್ಲವನಾಗಿದ್ದರೆ (ಎಲ್ಲಾ) ಶಿಷ್ಯಗುಣಗಳೂ[3] ಚೆನ್ನಾಗಿರುವ (ತತ್ತ್ವವನ್ನರಿಯಬೇಕೆಂದು) ಬಯಸುತ್ತಿರುವ ನಿನಗೆ ಹೇಗೆ ತಾನೆ ಹೇಳದೆ ಇದ್ದೇನು? ತಿಳಿಸದೆ ಇರುವೆನಲ್ಲ, ಅದು ಹೇಗೆ? (ಹೇಗೆ) ಹೇಳಿಕೊಡದೆ ಇದ್ದೇನು? ಎಂದರ್ಥ. ಇನ್ನೂ (ನಾನು ಹೇಳಿದ್ದರಲ್ಲಿ) ನಂಬಿಕೆಯಾಗದವನಂತೆ ಕಂಡುಬಂದದ್ದರಿಂದ (ಅವನಿಗೆ) ನಂಬಿಗೆ ಹುಟ್ಟಿಸುವದಕ್ಕಾಗಿ (ನಾನು) ಹೇಳಿದೆನೇನೆಂದರೆ: "ತಾನು ಒಂದು ರೀತಿಯಲ್ಲಿರುವಾಗ ಇನ್ನೊಂದು ರೀತಿಯಲ್ಲಿ ತೋರಿಸಿಕೊಂಡು[4] ಯಾವನು ಸುಳ್ಳನ್ನು, ಇದ್ದದ್ದು ಇದ್ದಂತೆ ಇರುವದಲ್ಲದ

---

1. "ಶಲ್ಯಮಿವ" ಎಂಬ ಮಾತಿನ ಮುಂದೆ "ಮೇ ಹೃದಿ" ಎಂದು ಆ॥ ಮುಂತಾದ ಕೆಲವು ಪಾಠಗಳಲ್ಲಿರುವದು ಅವಶ್ಯವಿಲ್ಲ.

2. ಆತ್ಮನಿಗೆ ಸೇರಿರುವಂತೆ ತೋರುವ ಪ್ರಾಣಾದಿಕಲೆಗಳು ನಿಜವಾಗಿ ಅವನಿಗೆ ಸೇರಿರುವದಿಲ್ಲ; ತಪ್ಪುತಿಳಿವಳಿಕೆಯಿಂದ ಜನರು ಅವನ್ನು ಅವನ ಅವಯವಗಳೆಂದು ಭಾವಿಸಿರುತ್ತಾರೆ.

3. ತತ್ತ್ವಜ್ಞಾನದಲ್ಲಿ ಆಸೆ, ಸಾಮರ್ಥ್ಯ, ತಿಳಿವಳಿಕೆ, ಯೋಗ್ಯತೆ-ಇವು.

4. ತನ್ನ ಸ್ವರೂಪವನ್ನು ಮರೆಮಾಚಿ ಮತ್ತೊಂದು ಸ್ವರೂಪದವನು ತಾನೆಂದು ತೋರಿಸಿಕೊಂಡವನು ಎಲ್ಲಾ ಪಾಪಗಳನ್ನೂ ಮಾಡಿದಂತೆ ಎಂದು (ಮನು. ೪-೨೫೫) ಸ್ಮೃತಿ.

ವಿಷಯವನ್ನು ಹೇಳುತ್ತಾನೋ ಅವನು ಸಮೂಲವಾಗಿ ಎಂದರೆ ಬೇರುಸಹಿತವಾಗಿ ಒಣಗಿಹೋಗುತ್ತಾನೆ, ಈಲೋಕಪರಲೋಕಗಳಿಂದ ಚ್ಯುತನಾಗುತ್ತಾನೆ, ಹಾಳಾಗುತ್ತಾನೆ. ಹೀಗೆಂದು ನಾನು ಅರಿತಿರುವದರಿಂದ ಮೂಢನಂತೆ ಸುಳ್ಳನ್ನು ಆಡಲಾರೆನು." ಆ ರಾಜಪುತ್ರನು ಹೀಗೆ (ಹೇಳಿದ್ದರಿಂದ) ನಂಬಿಗೆಯಾದವನಾಗಿ ಸುಮ್ಮನೆ ನಾಚಿಕೆಯಿಂದ ರಥವನ್ನೇರಿ ಬಂದ ದಾರಿಯನ್ನೇ ಹಿಡಿದುಹೋದನು, ಹೊರಟುಹೋದನು. **ಆದ್ದರಿಂದ ನ್ಯಾಯದಿಂದ (ಶಿಷ್ಯನಾಗಿ) ಹತ್ತಿರಬಂದ ಯೋಗ್ಯನಿಗೆ ತಿಳಿದವನು ವಿದ್ಯೆಯನ್ನು ಹೇಳಲೇಬೇಕು; ಎಂಥ ಅವಸ್ಥೆಯಲ್ಲಿಯೂ ಸುಳ್ಳನ್ನು ಹೇಳಬಾರದು.**[1] ಎಂಬುದು ಸಿದ್ಧವಾಯಿತು.

ಆ ಪುರುಷನನ್ನು (ತ್ವಾ=ತ್ವಾಮ್) ನಿನ್ನನ್ನು ಕೇಳುತ್ತಿದ್ದೇನೆ. ನನ್ನ ಹೃದಯದಲ್ಲಿ (ಆತನನ್ನು) ತಿಳಿಯಬೇಕೆಂಬ (ಆಸೆಯು) ಮುಳ್ಳಿನಂತೆ (ನೆಟ್ಟುಕೊಂಡು) ಇದೆ[2] (ಯಾದ್ದರಿಂದ) ಆ ತಿಳಿಯಬೇಕಾದ ಪುರುಷನು ಎಲ್ಲಿರುತ್ತಾನೆ? ಎಂದು (ಕೇಳುತ್ತಿದೇನೆ).

## ಪುರುಷನು ಶರೀರದೊಳಗೇ ಇರುತ್ತಾನೆ

**ತಸ್ಮೈ ಸ ಹೋವಾಚ । ಇಹೈವಾನ್ತಃಶರೀರೇ ಸೋಮ್ಯ ಸ ಪುರುಷೋ ಯಸ್ಮಿನ್ನೇತಾಃ ಷೋಡಶಕಲಾಃ ಪ್ರಭವನ್ತೀತಿ ॥ ೨ ॥**

೨. ಅವನಿಗೆ ಆತನು ಹೇಳಿದನೇನೆಂದರೆ: ಎಲೈ ಸೋಮ್ಯನೆ, ಯಾವನಲ್ಲಿ ಈ ಹದಿನಾರು ಕಲೆಗಳು ಉಂಟಾಗುತ್ತಿರುವವೋ ಆ ಪುರುಷನು ಇಲ್ಲಿಯೇ (ಈ) ಶರೀರದೊಳಗೆ (ಇರುತ್ತಾನೆ).

**(ಭಾಷ್ಯ)**

೮೯. ತಸ್ಮೈ ಸ ಹ ಉವಾಚ । ಇಹೈವ ಅನ್ತಃಶರೀರೇ ಹೃದಯಪುಣ್ಡರೀಕಾಕಾಶಮಧ್ಯೇ ಹೇ ಸೋಮ್ಯ, ಸ ಪುರುಷಃ ನ ದೇಶಾನ್ತರೇ ವಿಜ್ಞೇಯಃ । ಯಸ್ಮಿನ್ ಏತಾಃ ಉಚ್ಯಮಾನಾಃ[3] ಷೋಡಶಕಲಾಃ ಪ್ರಾಣಾದ್ಯಾಃ ಪ್ರಭವನ್ತಿ ಉತ್ಪದ್ಯನ್ತೇ ಇತಿ॥

---

1. ತನಗೆ ತಿಳಿದರೂ ತಿಳಿಯದಿದ್ದರೂ ಇದ್ದ ಸಂಗತಿಯನ್ನು ಹೇಳಬೇಕು.

2. ಷೋಡಶಕಲಪುರುಷನನ್ನು ತಿಳಿದುಕೊಳ್ಳದೆ ಇದ್ದರೆ ಮಿಕ್ಕ ಯಾವದನ್ನು ತಿಳಿದುಕೊಂಡಿದ್ದರೂ ತಿಳಿವಳಿಕೆ ಪೂರ್ಣವಾಗಲಿಲ್ಲ ಎಂಬ ಭಾವವು ಈ ವಾಕ್ಯದಲ್ಲಿ ಅಡಗಿದೆ.

3. "ಉಚ್ಯಮಾನಾಃ" ಎಂಬುದು "ವಕ್ಷ್ಯಮಾಣಾಃ" ಎಂದಿರಬೇಕು; ಅಥವಾ ಆ ಅರ್ಥದಲ್ಲಿ ಪ್ರಯೋಗವಾಗಿದೆ ಎಂದು ಕಲ್ಪಿಸಬೇಕು.

(ಭಾಷ್ಯಾರ್ಥ)

ಅವನಿಗೆ ಆ (ಪಿಪ್ಪಲಾದನು) ಹೇಳಿದನೇನೆಂದರೆ ಇಲ್ಲಿಯೇ (ಈ) ಶರೀರದೊಳಗೇ ಹೃದಯಕಮಲದ ಆಕಾಶದಲ್ಲಿಯೇ[1], ಎಲೈ ಸೋಮ್ಯನೆ, ಆ ಪುರುಷನನ್ನು ಅರಿಯಬೇಕು, ಬೇರೊಂದು ಕಡೆಯಲ್ಲಲ್ಲ.[2] ಯಾವ ಆತನಲ್ಲಿಯೇ ಈ (ಮುಂದೆ) ಹೇಳುವ ಪ್ರಾಣವೇ ಮುಂತಾದ ಹದಿನಾರು ಕಲೆಗಳು ಉಂಟಾಗುತ್ತಿರುವವು.

(ಭಾಷ್ಯ)

೯೦ ಷೋಡಶಭಿಃ ಕಲಾಭಿಃ[3] ಉಪಾಧಿಭೂತಾಭಿಃ ಸಕಲ ಇವ ನಿಷ್ಕಲಃ ಪುರುಷೋ ಲಕ್ಷ್ಯತೇ ಅವಿದ್ಯಯಾ ಇತಿ ತದುಪಾಧಿಕಲಾಧ್ಯಾರೋಪಾಪನಯೇನ[4] ವಿದ್ಯಯಾ ಸ ಪುರುಷಃ ಕೇವಲೋ ದರ್ಶಯಿತವ್ಯಃ ಇತಿ ಕಲಾನಾಂ ತತ್ಪ್ರಭವತ್ವಮ್ ಉಚ್ಯತೇ ಪ್ರಾಣಾದೀನಾಮ್ । ಅತ್ಯನ್ತನಿರ್ವಿಶೇಷೇ ಹಿ ಅದ್ವಯೇ ಶುದ್ಧೇ[5] ತತ್ತ್ವೇ ನ ಶಕ್ಯಃ ಅಧ್ಯಾರೋಪಮನ್ತರೇಣ ಪ್ರತಿಪಾದ್ಯಪ್ರತಿಪಾದನಾದಿವ್ಯವಹಾರಃ ಕರ್ತುಮ್ ಇತಿ ಕಲಾನಾಂ ಪ್ರಭವಸ್ಥಿತ್ಯಪ್ಯಯಾ ಆರೋಪ್ಯನ್ತೇ ಅವಿದ್ಯಾವಿಷಯಾಃ । ಚೈತನ್ಯಾವ್ಯತಿರೇಕೇಣೈವ ಹಿ ಕಲಾ ಜಾಯಮಾನಾಃ ತಿಷ್ಠನ್ತ್ಯಃ ಪ್ರಲೀಯಮಾನಾಶ್ಚ ಸರ್ವದಾ ಲಕ್ಷ್ಯನ್ತೇ । ಅತ ಏವ ಭ್ರಾನ್ತಾಃ ಕೇಚಿತ್ ಅಗ್ನಿಸಂಯೋಗಾತ್ ಘೃತಮಿವ ಘಟಾದ್ಯಾಕಾರೇಣ ಚೈತನ್ಯಮೇವ ಪ್ರತಿಕ್ಷಣಂ ಜಾಯತೇ ನಶ್ಯತಿ ಇತಿ । ತನ್ನಿರೋಧೇ ಶೂನ್ಯಮೇವ[6] ಸರ್ವಮ್ ಇತ್ಯಪರೇ । ಘಟಾದಿವಿಷಯಂ ಚೈತನ್ಯಂ ಚೇತಯಿತುರ್ನಿತ್ಯಸ್ಯಾತ್ಮನಃ ಅನಿತ್ಯಂ ಜಾಯತೇ ವಿನಶ್ಯತಿ ಇತ್ಯಪರೇ । ಚೈತನ್ಯಂ ಭೂತಧರ್ಮಃ ಇತಿ ಲೋಕಾಯತಿಕಾಃ ॥

(ಭಾಷ್ಯಾರ್ಥ)

**ಉಪಾಧಿಯಾಗಿರುವ ಹದಿನಾರು ಕಲೆಗಳಿಂದ ಸಕಲನಾಗಿರುವಂತೆ ನಿಷ್ಕಲನಾದ ಪುರುಷನು ಅವಿದ್ಯೆಯಿಂದ ತೋರಿಕೊಳ್ಳುತ್ತಿರುವದರಿಂದ[7]**

---

1. ಆತ್ಮನನ್ನು ಹೃದಯಾಕಾಶದಲ್ಲಿ ಬುದ್ಧಿಸಾಕ್ಷಿಯ ರೂಪದಿಂದಲೇ ಅರಿತುಕೊಳ್ಳಬೇಕು. ತೈ. ೨-೧.

2. ಅನಾತ್ಮರೂಪದಿಂದಲ್ಲ; ಆತ್ಮನು ದೃಶ್ಯನಲ್ಲ, ದೃಗ್ರೂಪನೇ.

3. "ಷೋಡಶಕಲಾಭಿಃ" ಆ॥ ಪಾಠ.

4. "ಅಪನಯನೇನ" ವಾ॥ ಪಾಠ.

5. "ವಿಶುದ್ಧೇ" ವಾ॥ ಪಾಠ.

6. "ಶೂನ್ಯಮಿವ" ಎಂಬ ಆ॥ ಪಾಠಕ್ಕಿಂತ ಈ ವಾ॥ ಪಾಠವು ಉತ್ತಮ.

7. ಪ್ರಾಣವೇ ಮುಂತಾದ ಉಪಾಧಿಗಳು ಅವಿದ್ಯಾಕಲ್ಪಿತವಾಗಿರುವದರಿಂದ ಅವಿದ್ಯಾಕಾಲದಲ್ಲಿ ಆತ್ಮನಿಗೆ ಸೇರಿರುವಂತೆ ಕಾಣುತ್ತವೆ. ಉಪಾಧಿಗಳು ಅವಿದ್ಯಾಕಲ್ಪಿತವೆಂಬುದಕ್ಕೆ ಸೂ. ಭಾ, ೩-೨-೧೧ ನ್ನು ನೋಡಿ.

**ಆ ಉಪಾಧಿಗಳಾಗಿರುವ ಕಲೆಗಳ ಆರೋಪವನ್ನು ವಿದ್ಯೆಯಿಂದ ತೊಲಗಿಸಿ ಆ ಕೇವಲಪುರುಷನನ್ನು ತೋರಿಸಬೇಕೆಂದು ಪ್ರಾಣವೇ ಮುಂತಾದ ಕಲೆಗಳು ಆ (ಪುರುಷ)ನಿಂದ ಹುಟ್ಟುತ್ತವೆ ಎಂದು ಹೇಳಲಾಗಿರುತ್ತದೆ.**[1] ಏಕೆಂದರೆ ತನಗೆರಡನೆಯದಿಲ್ಲದ, ಅತ್ಯಂತವಾಗಿ ನಿರ್ವಿಶೇಷವಾಗಿರುವ ಪರಿಶುದ್ಧವಾದ ತತ್ತ್ವದಲ್ಲಿ ಅಧ್ಯಾರೋಪವಿಲ್ಲದೆ[2] ತಿಳಿಸಲ್ಪಡತಕ್ಕ ವಿಷಯ, ತಿಳಿಸುವ (ಶಾಸ್ತ್ರ)ಬೋಧೆ ಮುಂತಾದ ವ್ಯವಹಾರವನ್ನು[3] ಮಾಡುವದಕ್ಕಾಗಲಾರದು. ಆದ್ದರಿಂದ ಅವಿದ್ಯೆಯ ವಿಷಯವಾದ ಕಲೆಗಳ ಹುಟ್ಟು, ಇರವು, ಲಯ-ಇವುಗಳನ್ನು (ಅದರಲ್ಲಿ) ಆರೋಪಿಸಲಾಗಿದೆ.[4]

ಚೈತನ್ಯಕ್ಕಿಂತ ಬೇರೆಯಾಗಿರದೆ ಕಲೆಗಳು ಹುಟ್ಟವಾಗಲೂ ಇರುವಾಗಲೂ ಲಯವಾಗುವಾಗಲೂ ಯಾವಾಗಲೂ (ಅದಕ್ಕೆ ಸೇರಿಕೊಂಡೇ) ಕಾಣಬರುತ್ತವೆ.[5] ಆದ್ದರಿಂದಲೇ ಕೆಲವರು ಬೆಂಕಿಯ ಸಂಬಂಧದಿಂದ ತುಪ್ಪವು (ಕರಗಿ ಮಾರ್ಪಡುವಂತೆ[6]) ಚೈತನ್ಯವೇ ಗಡಿಗೆಯೇ ಮುಂತಾದ ಆಕಾರದಲ್ಲಿ ಒಂದೊಂದು ಕ್ಷಣದಲ್ಲಿಯೂ ಹುಟ್ಟಿ ಸಾಯುತ್ತಿರುವದು ಎಂದು ಕೆಲವರು ಭ್ರಾಂತರಾಗಿರುತ್ತಾರೆ.[7] ಅದು ನಾಶವಾಗಲು ಎಲ್ಲವೂ ಶೂನ್ಯವಾಗುವದೆಂದು ಮತ್ತೆ ಕೆಲವರು ಭ್ರಾಂತರಾಗಿರುತ್ತಾರೆ.[8] ಗಡಿಗೆ ಮುಂತಾದವುಗಳ ವಿಷಯವಾದ ಅನಿತ್ಯವಾದ ಅರಿವು ನಿತ್ಯನಾದ ಜ್ಞಾತೃವಾದ

---

1. ಕಲೆಗಳನ್ನು ಆತ್ಮೈಕತ್ವಜ್ಞಾನಕ್ಕೆ ಉಪಾಯವಾಗಿ ಹೇಳಿದೆ.

2. ಅವಿದ್ಯೆಯಿಂದಾಗಿರುವ ಆರೋಪವನ್ನು ಇಟ್ಟುಕೊಳ್ಳದೆ.

3. ಶಾಸ್ತ್ರಶಿಷ್ಯಾದಿಭೇದವೂ ಅಧ್ಯಾರೋಪಿತವಾದರೂ ಅಜ್ಞರ ಉಪದೇಶಕ್ಕಾಗಿ ಈ ಭೇದವನ್ನು ಅವರ ದೃಷ್ಟಿಯಿಂದ ಇಟ್ಟುಕೊಂಡಿದೆ. ಮಾಂ. ಕಾ. ಭಾ. ೧-೧೮.

4. ಉತ್ಪತ್ತ್ಯಾದಿಗಳನ್ನು ಹೇಳಿರುವದು ಆತ್ಮಜ್ಞಾನಕ್ಕಾಗಿಯೇ ಹೊರತು ಉತ್ಪತ್ತ್ಯಾದಿಗಳನ್ನು ತಿಳಿಸುವದಕ್ಕಲ್ಲ. ತೈ. ಭಾ. ೨-೯, (ಛಾ. ಭಾ. ೨೨೦); ಬೃ. ಭಾ. ೨-೧-೨೦; ಸೂ. ಭಾ. ೪-೩-೧೪.

5. ಆತ್ಮಚೈತನ್ಯವಿಲ್ಲದೆ ಇವು ಕಾಣಬರುವದಿಲ್ಲ; ಆದ್ದರಿಂದ ಇವು ಚೈತನ್ಯಕ್ಕಿಂತ ಬೇರೆಯಲ್ಲ.

6. ಈ ದೃಷ್ಟಾಂತವನ್ನು ಏತಕ್ಕೆ ಕೊಟ್ಟಿದ್ದಾರೆಂಬುದು ಸ್ಪಷ್ಟವಾಗಿಲ್ಲ; ತುಪ್ಪವು ಬೆಂಕಿಯಿಂದ ನೀರಾಗುವಂತೆ ಆಲಯವಿಜ್ಞಾನವು ವಾಸನೆಯ ವಶದಿಂದ ವಿಷಯಾಕಾರವಾಗುತ್ತದೆ ಎಂಬುದು ವಿವಕ್ಷಿತವಾದ ಹೋಲಿಕೆಯೆಂದು ಆ॥ ಟೀಕೆಯಲ್ಲಿದೆ. ವಿಜ್ಞಾನವೇ ವಿಷಯಾಕಾರವನ್ನು ತಳೆಯುತ್ತದೆ ಎಂಬುದು ವಿಜ್ಞಾನವಾದಿಗಳ ಮತವು.

7. ಬೌದ್ಧರಲ್ಲಿ ಕ್ಷಣಿಕವಿಜ್ಞಾನವಾದಿಗಳ ಮತವಿದು.

8. ಶೂನ್ಯವಾದಿಗಳಾದ ಬೌದ್ಧರ ಮತವಿದು.

(ಆತ್ಮ)ನಿಗೆ (ಧರ್ಮವಾಗಿ) ಹುಟ್ಟಿ ಸಾಯುತ್ತಿರುವದು ಎಂದು ಇನ್ನು ಕೆಲವರು[1] (ಭ್ರಾಂತರಾಗಿರುವರು). ಚೈತನ್ಯವೆಂಬುದು ಭೂತಗಳ ಧರ್ಮವು ಎಂದು **ಲೋಕಾಯತರು** (ಹೇಳುತ್ತಿರುವರು)[2].

## ಆತ್ಮಚೈತನ್ಯವು ಕೂಟಸ್ಥವೂ ಅದ್ವಿತೀಯವೂ ಆಗಿದೆ

(ಭಾಷ್ಯ)

೯೧. **ಅನಪಾಯೋಪಜನಧರ್ಮಕಚೈತನ್ಯಮ್**[3] ಆತ್ಮೈವ ನಾಮರೂಪಾದ್ಯುಪಾಧಿಧರ್ಮೈಃ ಪ್ರತ್ಯವಭಾಸತೇ । "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. ೨-೧), "ಪ್ರಜ್ಞಾನಂ ಬ್ರಹ್ಮ" (ಐ. ೩-೩), "ವಿಜ್ಞಾನಮಾನನ್ದಂ ಬ್ರಹ್ಮ" (ಬೃ. ೩-೯-೨೮), "ವಿಜ್ಞಾನಘನ ಏವ" (ಬೃ. ೨-೪-೧೨) ಇತ್ಯಾದಿಶ್ರುತಿಭ್ಯಃ । ಸ್ವರೂಪವ್ಯಭಿಚಾರಿಷು ಪದಾರ್ಥೇಷು ಚೈತನ್ಯಸ್ಯ ಅವ್ಯಭಿಚಾರಾತ್ । ಯಥಾ ಯಥಾ ಯೋ ಯಃ ಪದಾರ್ಥೋ ಜ್ಞಾಯತೇ ತಥಾ ತಥಾ ಜ್ಞಾಯಮಾನತ್ವಾದೇವ ತಸ್ಯ ತಸ್ಯ ಚೈತನ್ಯಸ್ಯ ಅವ್ಯಭಿಚಾರಿತ್ವಮ್ । ವಸ್ತುತತ್ತ್ವಂ ಭವತಿ ಕಿಂಚಿತ್ ನ ಜ್ಞಾಯತೇ ಇತಿ ಚ ಅನುಪಪನ್ನಮ್ । ರೂಪಂ ಚ ದೃಶ್ಯತೇ ನ ಚಾಸ್ತಿ ಚಕ್ಷುಃ ಇತಿ ಯಥಾ । ವ್ಯಭಿಚರತಿ ತು ಜ್ಞೇಯಂ (ಜ್ಞಾನಮ್[4]), ನ ಜ್ಞಾನಂ ವ್ಯಭಿಚರತಿ ಕದಾಚಿದಪಿ ಜ್ಞೇಯಮ್ । ಜ್ಞೇಯಾಭಾವೇಽಪಿ ಜ್ಞೇಯಾನ್ತರೇ ಭಾವಾತ್ ಜ್ಞಾನಸ್ಯ । ನ ಹಿ ಜ್ಞಾನೇ ಅಸತಿ ಜ್ಞೇಯಂ ನಾಮ ಭವತಿ ಕಸ್ಯಚಿತ್ । ಸುಷುಪ್ತೇ ಅದರ್ಶನಾತ್ ॥

(ಭಾಷ್ಯಾರ್ಥ)

ಸಾವುಹುಟ್ಟುಗಳೆಂಬ ಧರ್ಮಗಳಿಲ್ಲದ ಚೈತನ್ಯವಾದ ಆತ್ಮನೇ ನಾಮರೂಪಾದಿಗಳಾದ ಧರ್ಮವುಳ್ಳವನಂತೆ ತೋರುತ್ತಿರುತ್ತಾನೆ. "ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮವು" (ತೈ ೨-೧), "ಪ್ರಜ್ಞಾನವು ಬ್ರಹ್ಮವು" (ಐ. ೩-೩), "ವಿಜ್ಞಾನವೂ ಆನಂದವೂ ಆದದ್ದು ಬ್ರಹ್ಮವು" (ಬೃ. ೩-೯-೨೮), "ವಿಜ್ಞಾನದ ಗಟ್ಟಿಯೇ" (ಬೃ ೨-೪-೧೨)-ಇವೇ ಮುಂತಾದ ಶ್ರುತಿಗಳು ಇದಕ್ಕೆ ಪ್ರಮಾಣವು. ಪದಾರ್ಥಗಳು

1. ವೈಶೇಷಿಕರೇ ಮೊದಲಾದವರ ಮತದಲ್ಲಿ ಜ್ಞಾನವು ಆತ್ಮನ ಧರ್ಮವು.

2. ಅನೇಕ ಪದಾರ್ಥಗಳ ಸೇರುವೆಯಿಂದ ಮದಶಕ್ತಿಯುಂಟಾಗುವಂತೆ ಭೂತಗಳ ಸೇರುವೆಯಿಂದ ಚೈತನ್ಯವು ಹುಟ್ಟುತ್ತದೆ-ಎಂಬ ಚಾರ್ವಾಕರ ಮತವಿದು. ಇದುವರೆಗೆ ಹೇಳಿರುವ ನಾಲ್ಕು ಮತಗಳಲ್ಲಿಯೂ ಆತ್ಮನಿಗಿಂತ ಬೇರೆಯಾದ ಹುಟ್ಟುಹೊಂದುಗಳುಳ್ಳ ಕಲಾವಿಶೇಷವನ್ನೇ ಚೈತನ್ಯವೆಂಬ ತಪ್ಪಾದ ಭಾವನೆಯಿದೆ. ಆದ್ದರಿಂದ ಕಲೆಗಳಿಲ್ಲದೆಯೂ ಚೈತನ್ಯವಿರುವದೆಂಬ ಸಿದ್ಧಾಂತವನ್ನು ತೋರಿಸಿಕೊಡುವದು ಅವಶ್ಯ ಎಂದು ಭಾವ.

3. "ಧರ್ಮಕಂ ಚೈತನ್ಯಮ್" ಎಂದೇ ಭಾಷ್ಯವಿದ್ದಿರಬಹುದು.

4. ಈ ಮಾತು ಇಲ್ಲಿರಬೇಕಾದದ್ದು ಬಿಟ್ಟುಹೋಗಿದೆ.

ತಮ್ಮ ತಮ್ಮ ಸ್ವರೂಪವನ್ನು ಬೇರ್ಪಡಿಸಿಕೊಳ್ಳುತ್ತಿದ್ದರೂ ಚೈತನ್ಯವು ಬೇರ್ಪಡದೆ ಇರುವದರಿಂದ ಯಾವ ಯಾವ ಪದಾರ್ಥವು ಹೇಗೆ ಹೇಗೆ ಅರಿಯಲ್ಪಡುವದೋ ಹಾಗೆ ಹಾಗೆ (ಅದು) ಅರಿಯಲ್ಪಡುವದರಿಂದಲೇ ಅದರದರ ಅರಿವು ಬೇರ್ಪಡುವದಿಲ್ಲ-ಎಂದಾಗುತ್ತದೆ.[1] (ಏಕೆಂದರೆ) ಯಾವದಾದರೂ ವಸ್ತುತತ್ತ್ವವು ಇದೆ, ಆದರೆ (ಅದು) ಅರಿಯಲ್ಪಡುವದಿಲ್ಲ ಎಂಬುದು ಅಯುಕ್ತ.[2] ರೂಪವು ಕಾಣುತ್ತದೆ, ಆದರೆ ಕಣ್ಣು ಇಲ್ಲ-ಎಂಬುದು ಹೇಗೆ (ಅಯುಕ್ತವೋ ಹಾಗೆಯೇ ಇದೂ ಅಯುಕ್ತ). ಜ್ಞೇಯವು (ಜ್ಞಾನವನ್ನು) ಬಿಟ್ಟುಹೋಗುವದುಂಟು,[3] ಆದರೆ ಜ್ಞಾನವು ಎಂದಿಗೂ ಜ್ಞೇಯವನ್ನು ಬಿಟ್ಟುಹೋಗುವದಿಲ್ಲ; ಏಕೆಂದರೆ (ಒಂದು) ಜ್ಞೇಯವು ಇಲ್ಲವಾದರೂ ಮತ್ತೊಂದು ಜ್ಞೇಯದ ವಿಷಯದಲ್ಲಿ ಜ್ಞಾನವು (ಇದ್ದೇ) ಇರುತ್ತದೆ.[4] ಜ್ಞಾನವಿಲ್ಲದೆ ಜ್ಞೇಯವೆಂಬುದು ಯಾರ ಮತದಲ್ಲಿಯೂ ಇರುವದೇ ಇಲ್ಲ; ಏಕೆಂದರೆ ಸುಷುಪ್ತಿಯಲ್ಲಿ (ಅದು) ಕಂಡುಬರುವದಿಲ್ಲ.[5]

## ಜ್ಞಾನಕ್ಕೆ ಅಭಾವವಿಲ್ಲ

(ಭಾಷ್ಯ)

೯೨. ಜ್ಞಾನಸ್ಯಾಪಿ ಸುಷುಪ್ತೇ ಅಭಾವಾತ್ ಜ್ಞೇಯವತ್ ಜ್ಞಾನಸ್ವರೂಪಸ್ಯ ವ್ಯಭಿಚಾರಃ ಇತಿ ಚೇತ್ । ನ । ಜ್ಞೇಯಾವಭಾಸಕಸ್ಯ ಜ್ಞಾನಸ್ಯ ಆಲೋಕವತ್ ಜ್ಞೇಯಾಭಿವ್ಯಞ್ಜಕತ್ವಾತ್[6] ಸ್ವವ್ಯಙ್ಗ್ಯಾಭಾವೇ ಆಲೋಕಾಭಾವಾನುಪಪತ್ತಿವತ್[7]

---

1. ಏಕೆಂದರೆ ಜ್ಞಾನವೂ ಬೇರ್ಪಡುತ್ತಿದ್ದರೆ ಆಗ ಹೀಗಿತ್ತು, ಈಗ ಹೀಗಿದೆ-ಎಂದು ಅರಿಯುವದಕ್ಕೆ ಆಗುತ್ತಿರಲಿಲ್ಲ.

2. ವಸ್ತುವು ಪ್ರತ್ಯಕ್ಷವಾಗಿರಲಿ, ಅಪ್ರತ್ಯಕ್ಷವಾಗಿರಲಿ, ಜ್ಞಾತವಾಗಿಯೇ ಹಾಗೆ ತೋರುತ್ತದೆ. ವಸ್ತುವೆಂದರೆ ಜ್ಞಾನಕ್ಕೆ ಸಂಬಂಧಪಟ್ಟಿರುವದೆಂದೇ ಅರ್ಥ.

3. ಜ್ಞಾನವಿರುವಾಗಲೇ ಜ್ಞೇಯವು ಇಲ್ಲವಾಗಬಹುದು ಎಂದರ್ಥ.

4. ಪ್ರತಿವಾದಿಗಳು ಒಂದೊಂದು ವಿಷಯಕ್ಕೆ ಒಂದೊಂದು ಜ್ಞಾನವುಂಟಾಗುವದೆನ್ನುತ್ತಾರೆ; ಒಂದೇ ಜ್ಞಾನವೇ ಸಾಕಾಗಿರುವಾಗ ಹಾಗೆ ಅನೇಕ ಜ್ಞಾನಗಳನ್ನು ಕಲ್ಪಿಸುವದು ಯುಕ್ತಿವಿರುದ್ಧ. ಘಟಸತ್ತೆಯೂ ಪಟಸತ್ತೆಯೂ ಒಂದೇ; ಹೀಗೆಯೇ ಘಟಜ್ಞಾನವೂ ಪಟಜ್ಞಾನವೂ ಒಂದೇ.

5. ಜ್ಞಾನವು ನಿತ್ಯವೆಂದು ಒಪ್ಪದ ವಾದಿಗಳಾದರೂ ಜ್ಞಾನವಿಲ್ಲದೆ ಜ್ಞೇಯವಿದೆ ಎಂದು ಹೇಳುವದಕ್ಕೆ ಬರುವದಿಲ್ಲವೆಂಬುದಕ್ಕೆ ಈ ದೃಷ್ಟಾಂತ. ಸಿದ್ಧಾಂತದಲ್ಲಿ ಜ್ಞಾನರೂಪನಾದ ಆತ್ಮನು ಸುಷುಪ್ತಿಯಲ್ಲಿಯೂ ಇದ್ದೇ ಇರುತ್ತಾನೆ.

6. "ಅಭಿವಕ್ತ್ರರ್ಥತ್ವಾತ್" ವಾ॥

7. ಇದಾದ ಬಳಿಕ "ಅಪ್ರತೀತೇಷು ವಸ್ತುಷು" ಎಂದು ವಾ॥ ಪಾಠದಲ್ಲಿ ಹೆಚ್ಚಾಗಿದೆ.

ಸುಷುಪ್ತೇ ವಿಜ್ಞಾನಾಭಾವಾನುಪಪತ್ತೇಃ । ನ ಹಿ ಅನ್ಧಕಾರೇ ಚಕ್ಷುಷಾ ರೂಪಾನುಪಲಬ್ಧೌ ಚಕ್ಷುಷೋಽಭಾವಃ ಶಕ್ಯಃ ಕಲ್ಪಯಿತುಮ್ ಅವೈನಾಶಿಕೇನ[1] । ವೈನಾಶಿಕೋ ಜ್ಞೇಯಾಭಾವೇ ಜ್ಞಾನಾಭಾವಂ ಕಲ್ಪಯತ್ಯೇವ ಇತಿ ಚೇತ್ । ಯೇನ ತದಭಾವಂ ಕಲ್ಪಯೇತ್ ತಸ್ಯಾಭಾವಃ ಕೇನ ಕಲ್ಪ್ಯತೇ ಇತಿ ವಕ್ತವ್ಯಂ ವೈನಾಶಿಕೇನ । ತದಭಾವಸ್ಯಾಪಿ ಜ್ಞೇಯತ್ವಾತ್ ಜ್ಞಾನಾಭಾವೇ ತದನುಪಪತ್ತೇಃ । ಜ್ಞಾನಸ್ಯ ಜ್ಞೇಯಾವ್ಯತಿರಿಕ್ತತ್ವಾತ್ ಜ್ಞೇಯಾಭಾವೇ ಜ್ಞಾನಾಭಾವಃ ಇತಿ ಚೇತ್ । ನ । ಅಭಾವಸ್ಯಾಪಿ ಜ್ಞೇಯತ್ವಾಭ್ಯುಪಗಮಾತ್ । ಅಭಾವೋಽಪಿ ಜ್ಞೇಯೋಽಭ್ಯುಪಗಮ್ಯತೇ ವೈನಾಶಿಕೈಃ । ನಿತ್ಯಶ್ಚ । ತದವ್ಯತಿರಿಕ್ತಂ ಚೇತ್ ಜ್ಞಾನಂ ನಿತ್ಯಂ ಕಲ್ಪಿತಂ ಸ್ಯಾತ್ । ತದಭಾವಸ್ಯ ಚ ಜ್ಞಾನಾತ್ಮಕತ್ವಾತ್ ಅಭಾವತ್ವಂ ವಾಙ್ಮಾತ್ರಮೇವ ನ ಪರಮಾರ್ಥತೋಽಭಾವತ್ವಮ್ ; ಅನಿತ್ಯತ್ವಂ ಚ ಜ್ಞಾನಸ್ಯ । ನ ಚ ನಿತ್ಯಸ್ಯ ಜ್ಞಾನಸ್ಯ ಅಭಾವನಾಮಮಾತ್ರಾಧ್ಯಾರೋಪೇ ಕಿಂಚಿನ್ನಶ್ಛಿನ್ನಮ್ ॥

(ಭಾಷ್ಯಾರ್ಥ)

(ಆಕ್ಷೇಪ) :—ಜ್ಞಾನವೂ ತನಿನಿದ್ರೆಯಲ್ಲಿ ಇರುವದಿಲ್ಲವಾದ್ದರಿಂದ ಜ್ಞೇಯದಂತೆ ಜ್ಞಾನಸ್ವರೂಪವೂ ಬೇರ್ಪಡುವದೆಂತಾಯಿತಲ್ಲ[2] !

(ಪರಿಹಾರ) :—ಹಾಗಲ್ಲ. ಜ್ಞೇಯವನ್ನು ಬೆಳಗುವ ಜ್ಞಾನವು ಬೆಳಕಿನಂತೆ ಜ್ಞೇಯಕ್ಕೆ ಅಭಿವ್ಯಂಜಕವಾಗಿರುತ್ತದೆ ; ತಾನು ತೋರಿಕೊಡಬೇಕಾಗಿರುವ (ಪದಾರ್ಥ) ವಿಲ್ಲದಿರುವಾಗ ಬೆಳಕೇ ಇಲ್ಲವೆಂಬುದು ಹೇಗೆ (ಸರಿಯಲ್ಲವೋ) ಹಾಗೆ (ವಸ್ತುಗಳು ಕಾಣದಿರುವಾಗ)[3] ಸುಷುಪ್ತಿಯಲ್ಲಿ ಜ್ಞಾನವೇ ಇಲ್ಲವೆಂಬುದು ಸರಿಯಲ್ಲ.[4] ಕತ್ತಲೆಯಲ್ಲಿ ಕಣ್ಣು ರೂಪವನ್ನು ಅರಿಯದೆ ಇದ್ದರೆ ಕಣ್ಣೇ ಇಲ್ಲವೆಂದು ಅವೈನಾಶಿಕನು[5] ಕಲ್ಪಿಸುವದಕ್ಕಾಗಲಾರದಷ್ಟೆ.

---

1. " ಅವೈನಾಶಿಕೇನ " ಎಂದು ಆ॥ ; " ವೈನಾಶಿಕೇನ " ಎಂದು ವಾ॥ ಪಾಠ.

2. ವಿಶೇಷಜ್ಞಾನಕ್ಕಿಂತ ಬೇರೆಯಾದ ಸ್ವರೂಪಜ್ಞಾನವನ್ನು ಪೂರ್ವಪಕ್ಷಿ ಒಪ್ಪಿಲ್ಲ. ಆದ್ದರಿಂದ ಈ ಆಕ್ಷೇಪವನ್ನು ತೆಗೆದಿರುತ್ತಾನೆ.

3. ಕಂಸದಲ್ಲಿರುವದು ವಾ॥ ಪಾಠಕ್ಕೆ ಅನುವಾದ.

4. ಜ್ಞೇಯವನ್ನು ಬೆಳಗದಿದ್ದರೆ ಜ್ಞಾನವಿಲ್ಲ ಎಂದು ವಾದಿಸಬಹುದು ; ಜ್ಞೇಯವಿಲ್ಲದ ಸುಷುಪ್ತಿಯಲ್ಲಿ ಜ್ಞಾನವು ಅದನ್ನು ಬೆಳಗಲಿಲ್ಲವಲ್ಲ !–ಎಂದು ಆಕ್ಷೇಪಿಸುವದಕ್ಕೆ ಕಾರಣವಿಲ್ಲ. ಬೃ. ೪–೩–೨೪ ರಿಂದ ೩೦ ರ ವರೆಗಿನ ಮಂತ್ರಗಳನ್ನು ನೋಡಿ.

5. ಆತ್ಮನು ಆಗಂತುಕಚೈತನ್ಯವುಳ್ಳವನೆಂದೂ ಸುಷುಪ್ತಿಯಲ್ಲಿ ಚೈತನ್ಯಧರ್ಮವು ಅವನಲ್ಲಿರುವದಿಲ್ಲವೆಂದೂ ವಾದಿಸುವ ವೈಶೇಷಿಕನ ಖಂಡನೆಯಿದೆಂದು ಭಾವಿಸಬಹುದು. ಜ್ಞೇಯವಿಲ್ಲದ ಮಾತ್ರದಿಂದ ಜ್ಞಾನಸ್ವರೂಪವನ್ನು ಅಲ್ಲಗಳೆದರೆ ವೈನಾಶಿಕಸಿದ್ಧಾಂತವಾದೀತು–ಎಂದು ಭಾವ. ಅರಿಯುವ ಶಕ್ತಿಯು ಸುಷುಪ್ತಿಯಲ್ಲಿಯೂ ಇದೆ ಎಂಬುದಕ್ಕೆ ಸೂ. ಭಾ. ೨–೩–೧೮ ನೋಡಿ.

(ಆಕ್ಷೇಪ):—ಜ್ಞೇಯವು ಇಲ್ಲದಿರುವಾಗ ಜ್ಞಾನವೂ ಇಲ್ಲವೆಂದು ವೈನಾಶಿಕನು ಕಲ್ಪಿಸಿಯೇ ಕಲ್ಪಿಸುತ್ತಾನಲ್ಲ[1] !

(ಪರಿಹಾರ):—ಯಾವದರಿಂದ ಅದು ಇಲ್ಲವೆಂದು ಕಲ್ಪಿಸುತ್ತಾನೋ ಅದರ ಅಭಾವವನ್ನು ಏತರಿಂದ ಕಲ್ಪಿಸಲಾಗುತ್ತದೆ ಎಂಬುದನ್ನು ವೈನಾಶಿಕನು ಹೇಳ ಬೇಕಾಗುತ್ತದೆ. ಏಕೆಂದರೆ ಅದರ ಅಭಾವವೂ ಜ್ಞೇಯವಾಗಿರುವದರಿಂದ ಜ್ಞಾನವಿಲ್ಲದೆ ಅದು ಇರಲಾರದು.[2]

(ಆಕ್ಷೇಪ):—ಜ್ಞಾನವು ಜ್ಞೇಯಕ್ಕಿಂತ ಬೇರೆಯಲ್ಲವಾದ್ದರಿಂದ[3] ಜ್ಞೇಯವಿಲ್ಲ ದಿದ್ದರೆ ಜ್ಞಾನವೂ ಇರುವದಿಲ್ಲ.

(ಪರಿಹಾರ):—ಹಾಗಲ್ಲ. ಏಕೆಂದರೆ ಅಭಾವವೂ ಜ್ಞೇಯವೆಂದು ಅಂಗೀಕರಿಸ ಲಾಗಿದೆ. ವೈನಾಶಿಕರು ಅಭಾವವು ಜ್ಞೇಯವೆಂದೂ ನಿತ್ಯವೆಂದೂ ಒಪ್ಪುತ್ತಾರೆ. ಜ್ಞಾನವು ಅದಕ್ಕಿಂತ ಬೇರೆಯಲ್ಲದಿದ್ದರೆ ಅದು ನಿತ್ಯವೆಂದೇ ಕಲ್ಪಿಸಿದಂತೆ ಆಗುತ್ತದೆ.[4] ಅದರ ಅಭಾವವೂ ಜ್ಞಾನಾತ್ಮಕವಾಗಿರುವದರಿಂದ[5] ಅದನ್ನು ಅಭಾವವೆನ್ನುವದು ಬರಿಯಮಾತೇ (ಆಗುವದೇ ಹೊರತು) ನಿಜವಾಗಿ ಜ್ಞಾನವು ಅಭಾವವೂ ಅಲ್ಲ, ಅನಿತ್ಯವೂ ಅಲ್ಲ. ನಿತ್ಯವಾಗಿರುವ ಜ್ಞಾನಕ್ಕೆ ಅಭಾವವೆಂಬ ಹೆಸರೊಂದನ್ನು ಹುಟ್ಟು ಗಟ್ಟಿದ ಮಾತ್ರದಿಂದ ನಮಗೇನೂ ಹಾನಿಯಾಗುವದೂ ಇಲ್ಲ.[6]

---

1. ಇದು ಬೌದ್ಧನ ಆಕ್ಷೇಪವು.

2. ಜ್ಞೇಯಕ್ಕೆ ಜ್ಞಾನವು ಬೇಕೇಬೇಕು ಎಂದು ಹಿಂದೆ ತೋರಿಸಲಾಗಿದೆ; ಜ್ಞಾನವು ತನಗೆ ತಾನೇ ಜ್ಞೇಯವೆಂಬುದು ಬೌದ್ಧನ ಸಿದ್ಧಾಂತವಾಗಿದೆ. ಆದ್ದರಿಂದ ಜ್ಞೇಯವಿದ್ದರೆ ಜ್ಞಾನವಿರಬೇಕು.

3. ಜ್ಞಾನವು ಯಾವಾಗಲೂ ತನ್ನನ್ನು ವಿಷಯೀಕರಿಸಿಯೇ ತೀರುತ್ತದೆ, ಇಲ್ಲದಿದ್ದರೆ ತಾನೇ ಇರಲಾರದು ಎಂದರ್ಥ. "ಅವ್ಯತಿರಿಕ್ತ" ವೆಂದರೆ ಅಭಿನ್ನವೆಂದರ್ಥವಲ್ಲ, ಪೀಠಿಕೆ ಯನ್ನು ನೋಡಿ.

4. ಸೂ. ಭಾ. ೨-೨-೨೨ ರಲ್ಲಿ ಅಭಾವವು ಜ್ಞೇಯವೆಂದೂ ನಿತ್ಯವೆಂದೂ ಕ್ಷಣಿಕ ವಾದಿಗಳಾದ ಬೌದ್ಧರೂ ಒಪ್ಪುತ್ತಾರೆಂತ ಹೇಳಿದೆ.

5. ಜ್ಞೇಯದ ಅಭಾವವು ಹೇಗೆ ಜ್ಞೇಯವೇ ಆಗಿರುವದೋ, ಜ್ಞಾನದ ಅಭಾವವೂ ಜ್ಞೇಯವೇ; ಜ್ಞಾನವು ತನಗೆತಾನೇ ಜ್ಞೇಯವೆಂದು ಕಲ್ಪಿಸುವ ಬೌದ್ಧರಿಗೆ ಜ್ಞೇಯವೂ ಜ್ಞಾನಾತ್ಮಕವೇ ಆಗಿರುತ್ತದೆ.

6. ಜ್ಞಾನವಿಲ್ಲದ ಸ್ಥಲವನ್ನು ಬೌದ್ಧರು ಎಂದಿಗೂ ತೋರಿಸಿದಂತೆ ಆಗುವದಿಲ್ಲ. ಜ್ಞೇಯವು ಭಾವರೂಪವಾಗಿರಲಿ ಅಭಾವರೂಪವಾಗಿರಲಿ ಜ್ಞಾನವಿಲ್ಲದೆ ಇರಲಾರದು ಎಂಬುದು ಮೊದಲಿನ ಯುಕ್ತಿ; ನಿಮ್ಮ ಮತದಲ್ಲಿ ಜ್ಞೇಯವೆಂದರೂ ಜ್ಞಾನವಾಗಿರುವದ ರಿಂದ ಭಾವರೂಪಜ್ಞೇಯವಾಗಲಿ ಅಭಾವರೂಪಜ್ಞೇಯವಾಗಲಿ ಜ್ಞಾನವೇ ಆಗಿರುತ್ತದೆ. ಆದ್ದರಿಂದ ಜ್ಞಾನವಿಲ್ಲದ ಸ್ಥಲವಿಲ್ಲ ಎಂದು ಈಗಿನ ಯುಕ್ತಿ.

# ಜ್ಞಾನವು ಜ್ಞೇಯವಲ್ಲ

(ಭಾಷ್ಯ)

೯೩. ಅಥ ಅಭಾವೋ ಜ್ಞೇಯೋಽಪಿ ಸನ್ ಜ್ಞಾನವ್ಯತಿರಿಕ್ತಃ ಇತಿ ಚೇತ್ । ನ ತರ್ಹಿ ಜ್ಞೇಯಾಭಾವೇ ಜ್ಞಾನಾಭಾವಃ । ಜ್ಞೇಯಂ ಜ್ಞಾನವ್ಯತಿರಿಕ್ತಂ ನ ತು ಜ್ಞಾನಂ ಜ್ಞೇಯವ್ಯತಿರಿಕ್ತಮ್ ಇತಿ ಚೇತ್ । ನ । ಶಬ್ದಮಾತ್ರತ್ವಾತ್ ವಿಶೇಷಾನುಪಪತ್ತೇಃ । ಜ್ಞೇಯಜ್ಞಾನಯೋರೇಕತ್ವಂ ಚೇತ್ ಅಭ್ಯುಪಗಮ್ಯತೇ 'ಜ್ಞೇಯಂ ಜ್ಞಾನವ್ಯತಿರಿಕ್ತಮ್, ನ ಜ್ಞೇಯವ್ಯತಿರಿಕ್ತಂ ಜ್ಞಾನಮ್, ಇತಿ ತು ಶಬ್ದಮಾತ್ರಮೇವ ತತ್ "ವಹ್ನಿರಗ್ನಿವ್ಯತಿರಿಕ್ತಃ, ಅಗ್ನಿರ್ನ ವಹ್ನಿವ್ಯತಿರಿಕ್ತಃ" ಇತಿ ಯದ್ವದಭ್ಯುಪಗಮ್ಯತೇ । ಜ್ಞೇಯವ್ಯತಿರೇಕೇ ತು ಜ್ಞಾನಸ್ಯ ಜ್ಞೇಯಾಭಾವೇ ಜ್ಞಾನಾಭಾವಾನುಪಪತ್ತಿಃ ಸಿದ್ಧಾ ॥

(ಭಾಷ್ಯಾರ್ಥ)

(ಆಕ್ಷೇಪ):—ಅಭಾವವು ಜ್ಞೇಯವಾದರೂ ಜ್ಞಾನಕ್ಕಿಂತ ಬೇರೆಯೇ ಎಂದರೊ?[1]

(ಪರಿಹಾರ):—ಹಾಗಾದರೆ ಜ್ಞೇಯವಿಲ್ಲದಿದ್ದರೆ ಜ್ಞಾನವಿಲ್ಲವೆಂಬುದೇ ಸರಿಯಾಗುವದಿಲ್ಲ.[2]

(ಆಕ್ಷೇಪ):—ಜ್ಞೇಯವು ಜ್ಞಾನಕ್ಕಿಂತ ಬೇರೆ; ಆದರೆ ಜ್ಞಾನವು ಜ್ಞೇಯಕ್ಕಿಂತ ಬೇರೆಯಾಗಿರುವದಿಲ್ಲ.[3]

(ಪರಿಹಾರ):—ಇದು ಸರಿಯಲ್ಲ. ಏಕೆಂದರೆ (ಇದು) ಬರಿಯ ಮಾತಾಗುತ್ತದೆಯಾದ್ದರಿಂದ (ಅವೆರಡಕ್ಕೂ) ಯಾವ ಹೆಚ್ಚುಕಡಿಮೆಯೂ ಇರುವದೆಂಬುದು ಹೊಂದುವದಿಲ್ಲ. ಜ್ಞೇಯಜ್ಞಾನಗಳೆರಡೂ ಒಂದೇ[4] ಎಂಬುದನ್ನು ಒಪ್ಪಿಕೊಂಡರೆ

---

1. ಜ್ಞೇಯಸ್ವಭಾವವು ಜ್ಞಾನಸ್ವಭಾವಕ್ಕಿಂತ ಬೇರೆ ಎಂದು ಭಾವ.

2. ಬೇರೆಯಾಗಿರುವ ಆ ಜ್ಞೇಯವಿಲ್ಲದಿದ್ದರೆ ಜ್ಞಾನವೇತಕ್ಕೆ ಇರಬಾರದು ? ಕುದುರೆಯಿದ್ದರೂ ಇಲ್ಲದಿದ್ದರೂ ಎತ್ತು ಇರಬಹುದಷ್ಟೆ ?

3. ಜ್ಞೇಯವು ಸ್ವಭಾವದಿಂದ ಬೇರೆಯಾಗಿರುತ್ತದೆ; ಅದರ ತತ್ತ್ವವು ಜ್ಞಾನವೇ ಎಂದರ್ಥ. ಜ್ಞೇಯವಾದ ಅನಾತ್ಮವು ಆರೋಪಿತವು, ಜ್ಞಾನಸ್ವರೂಪನಾದ ಆತ್ಮನಿಗಿಂತ ಬೇರೆಯೆಂದಾಗಲಿ ಬೇರೆಯಲ್ಲವೆಂದಾಗಲಿ ಹೇಳುವದಕ್ಕೆ ಬರುವದಿಲ್ಲ; ಅಧಿಷ್ಠಾನವಾಗಿರುವ ಆತ್ಮನು ಅದಕ್ಕಿಂತ ಬೇರೆಯೇ ಎಂಬ ವೇದಾಂತಿಗಳ ಮತವು (ಸೂ. ಭಾ. ೨-೧-೧೪) ಇದಕ್ಕಿಂತ ವಿಲಕ್ಷಣವಾಗಿದೆ. ಈ ಬೌದ್ಧರ ಮತದಲ್ಲಿ ಜ್ಞಾನವು ಕ್ಷಣಿಕವಾಗಿ ತನಗೆತಾನೇ ನಿಜವಾಗಿ ಜ್ಞೇಯವಾಗಿಯೂ ಇದೆ.

4. ಎರಡೂ ಜ್ಞಾನವೇ ಎಂದರ್ಥ; ಜ್ಞಾನವೂ ಜ್ಞೇಯವೇ ಎಂದರ್ಥವಲ್ಲ.

'ಜ್ಞೇಯವು ಜ್ಞಾನಕ್ಕಿಂತ ಬೇರೆ, ಜ್ಞಾನವೂ ಜ್ಞೇಯಕ್ಕಿಂತ ಬೇರೆಯಲ್ಲ' ಎಂದು (ಹೇಳುವದು) "ವಹ್ನಿಯು ಅಗ್ನಿಗಿಂತ ಬೇರೆ, ಅಗ್ನಿಯು ವಹ್ನಿಗಿಂತ ಬೇರೆಯಲ್ಲ" ಎಂಬಂತೆ ಬರಿಯ ಮಾತನ್ನು ಮಾತ್ರ ಇಟ್ಟುಕೊಂಡಂತೆ ಆಗುತ್ತದೆ.[1] ಜ್ಞೇಯಕ್ಕಿಂತ ಜ್ಞಾನವು ಬೇರೆ ಎಂದರಂತೂ ಜ್ಞೇಯವಿಲ್ಲದಾಗ ಜ್ಞಾನವು ಇಲ್ಲವೆಂಬುದು ಹೊಂದುವದಿಲ್ಲವೆಂಬುದು ಸಿದ್ಧ(ವಾಗಿಯೇ ಇದೆ.)[2]

(ಭಾಷ್ಯ)

೯೪. ಜ್ಞೇಯಾಭಾವೇ ಅದರ್ಶನಾತ್ ಅಭಾವೋ ಜ್ಞಾನಸ್ಯ ಇತಿ ಚೇತ್ । ನ । ಸುಷುಪ್ತೇ ಜ್ಞಪ್ತ್ಯಭ್ಯುಪಗಮಾತ್ । ವೈನಾಶಿಕೈರಭ್ಯುಪಗಮ್ಯತೇ ಹಿ ಸುಷುಪ್ತೇಽಪಿ ಜ್ಞಾನಾಸ್ತಿತ್ವಮ್ । ತತ್ರಾಪಿ ಜ್ಞೇಯತ್ವಮಭ್ಯುಪಗಮ್ಯತೇ ಜ್ಞಾನಸ್ಯ ಸ್ವೇನೈವ ಇತಿ ಚೇತ್ । ನ । ಭೇದಸ್ಯ ಸಿದ್ಧತ್ವಾತ್ । ಸಿದ್ಧಂ ಹಿ ಅಭಾವವಿಜ್ಞೇಯವಿಷಯಸ್ಯ ಜ್ಞಾನಸ್ಯ ಅಭಾವಜ್ಞೇಯವ್ಯತಿರೇಕಾತ್ ಜ್ಞೇಯಜ್ಞಾನಯೋರನ್ಯತ್ವಮ್ । ನ ಹಿ ತತ್ ಸಿದ್ಧಂ ಮೃತಮಿವ ಉಜ್ಜೀವಯಿತುಂ ಪುನರನ್ಯಥಾ ಕರ್ತುಂ ಶಕ್ಯತೇ ವೈನಾಶಿಕಶತೈರಪಿ ॥

(ಭಾಷ್ಯಾರ್ಥ)

(ಆಕ್ಷೇಪ):—ಜ್ಞೇಯವು ಇಲ್ಲದಾಗ (ಜ್ಞಾನವು) ಕಾಣದೆ ಇರುವದರಿಂದ[3] ಜ್ಞಾನವು (ಆಗ) ಇರುವದಿಲ್ಲ(ವೆಂಬುದೇ ಸರಿ).

(ಪರಿಹಾರ):—ಹಾಗಲ್ಲ. ಏಕೆಂದರೆ ಸುಷುಪ್ತಿಯಲ್ಲಿ ಜ್ಞಾನವನ್ನು ಅಂಗೀಕರಿಸಲಾಗಿದೆ. ವೈನಾಶಿಕರು ಸುಷುಪ್ತಿಯಲ್ಲಿಯೂ ಜ್ಞಾನವಿರುವದೆಂದೇ ಒಪ್ಪುತ್ತಾರಲ್ಲವೆ[4] ?

---

1. ಏಕೆಂದರೆ ಆಗ ಜ್ಞಾನಕ್ಕಿಂತ ಜ್ಞಾನವು ಬೇರೆ ಎಂದಂತೆ ಆಗುವದು.

2. ಇದು ವೇದಾಂತಿಗಳ ಅಭಿಪ್ರಾಯ. ಜ್ಞೇಯವಿರುವಾಗ ಅದನ್ನು ಜ್ಞಾನವು ಬೆಳಗುತ್ತಿರುತ್ತದೆ. ಇಲ್ಲದಾಗ ತಾನೇ ಬೆಳಗುತ್ತಿರುತ್ತದೆ. ಈ ಮತವನ್ನು ಮುಂದಿನ ಭಾ. ಭಾ. ದಲ್ಲಿ ಸ್ಪಷ್ಟಗೊಳಿಸಲಾಗುವದು.

3. ಜ್ಞಾನವು ಇದ್ದರೆ ತನಗೆ ತಾನೇ ಅನುಭವಕ್ಕೆ ಬರಬೇಕು ಎಂಬುದು ಕ್ಷಣಿಕ ವಿಜ್ಞಾನವಾದಿಯ ಮತ. ಸೂ. ಭಾ. ೨-೨-೨೮.

4. ವಿಜ್ಞಾನವಾದಿಗಳು ಸ್ವವಿಜ್ಞೇಯವಾದ ವಿಜ್ಞಾನವನ್ನು ಸುಷುಪ್ತಿಯಲ್ಲಿ ಒಪ್ಪಿರುತ್ತಾರೆ; ತನಗಿಂತ ಬೇರೆಯಾದ ವಿಷಯವು ಎಚ್ಚರದಲ್ಲಿರುವಂತೆ ತೋರಿದರೂ ಅದು ಕನಸಿನ ವಿಷಯಗಳಂತೆ ಭ್ರಾಂತಿ ಎನ್ನುತ್ತಾರೆ.

(ಆಕ್ಷೇಪ):—ಅಲ್ಲಿಯೂ ಜ್ಞಾನವು ತನಗೆ ತಾನೇ ಜ್ಞೇಯವೆಂದು ಅವರು ಒಪ್ಪುತ್ತಾರಲ್ಲ[1] !

(ಪರಿಹಾರ):—ಅದು ಸರಿಯಲ್ಲ. ಏಕೆಂದರೆ ಭೇದವು ಸಿದ್ಧವಾಗಿರುತ್ತದೆ. (ಹೇಗೆಂದರೆ): ಅಭಾವರೂಪವಾಗಿರುವ ಜ್ಞೇಯವನ್ನು ವಿಷಯಮಾಡುವ ಜ್ಞಾನವು ಅಭಾವ(ರೂಪ)ಜ್ಞೇಯಕ್ಕಿಂತ ಬೇರೆಯಾಗಿರುವದರಿಂದ ಜ್ಞೇಯಜ್ಞಾನಗಳು ಬೇರೆ (ಬೇರೆ) ಎಂದು ಸಿದ್ಧವಾಗಿಯೇ ಇರುತ್ತದೆ. ಹಾಗೆ ಸಿದ್ಧವಾಗಿರುವದನ್ನು (ಜ್ಞಾನವು ಸ್ವಜ್ಞೇಯ ಎಂಬ ವಾದವನ್ನು ಹಿಡಿದು) ಸತ್ತವರನ್ನು ಬದುಕಿಸುವಂತೆ ಮತ್ತೆ ಬದಲಾಯಿಸುವದಕ್ಕೆ ನೂರು ಜನ ವೈನಾಶಕರಿಂದಲೂ ಆಗಲಾರದು.[2]

## ಕೂಟಸ್ಥಚೈತನ್ಯವಾದದಲ್ಲಿ ಯಾವ ದೋಷವೂ ಇಲ್ಲ

(ಭಾಷ್ಯ)

೯೫. ಜ್ಞಾನಸ್ಯ ಸ್ವಾಜ್ಞೇಯತ್ವೇ[3] ತದಪ್ಯನ್ಯೇನ, ತದಪ್ಯನ್ಯೇನ–ಇತಿ ತ್ವತ್ಪಕ್ಷೇ ಅತಿಪ್ರಸಙ್ಗಃ ಇತಿ ಚೇತ್ । ನ । ತದ್ವಿಭಾಗೋಪಪತ್ತೇಃ ಸರ್ವಸ್ಯ । ಯದಾ ಹಿ ಸರ್ವಂ ಜ್ಞೇಯಂ ಕಸ್ಯಚಿತ್ ತದಾ ತದ್ವ್ಯತಿರಿಕ್ತಂ ಜ್ಞಾನಂ ಜ್ಞಾನಮೇವೇತಿ ದ್ವಿತೀಯೋ ವಿಭಾಗ ಏವ ಅಭ್ಯುಪಗಮ್ಯತೇ ಅವೈನಾಶಿಕೈಃ, ನ ತೃತೀಯಸ್ತದ್ವಿಷಯಃ ಇತಿ ಅನವಸ್ಥಾನುಪಪತ್ತಿಃ । ಜ್ಞಾನಸ್ಯ ಸ್ವೇನೈವ ಅವಿಜ್ಞೇಯತ್ವೇ ಸರ್ವಜ್ಞತ್ವಹಾನಿಃ ಇತಿ ಚೇತ್ । ಸೋಽಪಿ ದೋಷಸ್ತಸ್ಯೈವಾಸ್ತು ಕಿಂ ತನ್ನಿಬರ್ಹಣೇನ ಅಸ್ಮಾಕಮ್ ? ಅನವಸ್ಥಾದೋಷಶ್ಚ । ಜ್ಞಾನಸ್ಯ ಜ್ಞೇಯತ್ವಾಭ್ಯುಪಗಮಾತ್ । ಅವಶ್ಯಂ ಚ ವೈನಾಶಿಕಾನಾಂ ಜ್ಞಾನಂ ಜ್ಞೇಯಮ್ । ಸ್ವಾತ್ಮನಾ ಚ ಅವಿಜ್ಞೇಯತ್ವೇನ ಅನವಸ್ಥಾ ಅನಿವಾರ್ಯಾ । ಸಮಾನ ಏವಾಯಂ ದೋಷಃ ಇತಿ ಚೇತ್ । ನ । ಜ್ಞಾನಸ್ಯ ಏಕತ್ವೋಪಪತ್ತೇಃ । ಸರ್ವದೇಶಕಾಲಪುರುಷಾದ್ಯವಸ್ಥಮ್ ಏಕಮೇವ ಜ್ಞಾನಂ

---

1. ವಿಜ್ಞಾನವು ತನ್ನನ್ನೇ ತಾನು ಅರಿಯುತ್ತದೆಯೆಂದು ನಾವು ಒಪ್ಪುವದರಿಂದ ನಮ್ಮ ಮತದಂತೆ ವಿಜ್ಞಾನವಿರಬಹುದು ; ಆದರೆ ನಿಮ್ಮ ಮತದಂತೆ ಸುಷುಪ್ತಿಯಲ್ಲಿರುವ ಜ್ಞಾನವು ವಿಜ್ಞೇಯವಲ್ಲ, ಬೇರೆ ವಿಜ್ಞೇಯಗಳೂ ಇಲ್ಲ ; ಆದ್ದರಿಂದ ನಿಮ್ಮ ಮತದಂತೆ ಜ್ಞಾನವಿರುವದಿಲ್ಲವೆಂಬುದೇ ಸರಿ ಎಂದು ಪೂರ್ವಪಕ್ಷಿಯ ಭಾವ.

2. ಎಚ್ಚರಕನಸುಗಳಲ್ಲಿ ತೋರುವ ವಿಷಯಗಳ ಅಭಾವವನ್ನು ನೀವೂ ಒಪ್ಪಿದ್ದೀರಿ; ಅದನ್ನು ಅರಿಯುವ ವಿಜ್ಞಾನವು ಆ ಅಭಾವರೂಪಜ್ಞೇಯಕ್ಕಿಂತ ಬೇರೆಯೇ ಆಗಿದೆ. ವಿಜ್ಞಾನವು ತನ್ನನ್ನು ತಾನು ಅರಿಯಲಿ, ಬಿಡಲಿ, ತಾನು ಅರಿಯುವ ವಿಷಯಾಭಾವಕ್ಕಿಂತ ಬೇರೆ ಎಂಬುದನ್ನು ಅಲ್ಲಗಳೆಯುವದು ಹೇಗೆ? ಅದನ್ನು ಒಪ್ಪಿದಮೇಲೆ ಜ್ಞೇಯಕ್ಕಿಂತ ಜ್ಞಾನವು ಬೇರೆ ಎಂಬುದನ್ನು ಮತ್ತೆ ನಿಷೇಧಿಸುವದು ಸತ್ತವರನ್ನು ಬದುಕಿಸುವ ಪ್ರಯತ್ನವಲ್ಲವೆ ?

3. " ಜ್ಞೇಯತ್ವಮೇವೇತಿ '' ಎಂಬ ಅ॥ ಪಾಠಕ್ಕಿಂತ ಈ ವಾ॥ ಪಾಠವೇ ಮೇಲು.

ನಾಮರೂಪಾದ್ಯನೇಕೋಪಾಧಿಭೇದಾತ್ ಸವಿತ್ರಾದಿಜಲಾದಿಪ್ರತಿಬಿಮ್ಬವತ್ ಅನೇಕಧಾ ಅವಭಾಸತೇ ಇತಿ ನಾಸೌ ದೋಷಃ। ತಥಾ ಚೇಹ ಇದಮ್ ಉಚ್ಯತೇ ॥

(ಭಾಷ್ಯಾರ್ಥ)

(ಆಕ್ಷೇಪ):—ಜ್ಞಾನವು ತನ್ನನ್ನು ತಾನೇ ಅರಿಯುವದಿಲ್ಲವಾದರೆ ಅದೂ ಮತ್ತೊಂದರಿಂದ (ಅರಿಯಲ್ಪಡಬೇಕು), ಅದೂ ಮತ್ತೊಂದರಿಂದ ಎಂದು ನಿನ್ನ ಪಕ್ಷದಲ್ಲಿ ಅತಿಪ್ರಸಕ್ತಿಯಾಗುವದಲ್ಲ![1]

(ಪರಿಹಾರ):—ಹಾಗಲ್ಲ. ಎಲ್ಲವೂ ಅದಕ್ಕಿಂತ ಬೇರೆ (ಎಂದು ಹೇಳುವದು) ಯುಕ್ತವಾಗಿರುತ್ತದೆ. ಯಾವಾಗ ಎಲ್ಲವೂ ಒಂದಕ್ಕೆ ಜ್ಞೇಯವೆಂದಾಯಿತೋ ಆಗ (ಜ್ಞೇಯಕ್ಕಿಂತ) ಬೇರೆಯಾದ ಜ್ಞಾನವು ಜ್ಞಾನವೇ ಆಗಿರುವದರಿಂದ (ಜ್ಞಾನವೆಂಬ) ಎರಡನೆಯ ವಿಭಾಗವೊಂದನ್ನೇ ಅವೈನಾಶಿಕರು[2] ಒಪ್ಪುತ್ತಾರೆಯೋ ಹೊರತು ಅದನ್ನು ವಿಷಯಮಾಡಿಕೊಂಡಿರುವ ಮೂರನೆಯ (ಜ್ಞಾನವನ್ನು) (ಒಪ್ಪುವ)ದಿಲ್ಲ. ಆದ್ದರಿಂದ (ಅವರ ಪಕ್ಷದಲ್ಲಿ) ಅನವಸ್ಥೆಯೆಂಬುದು ಯುಕ್ತವಲ್ಲ.[3]

(ಆಕ್ಷೇಪ):—ಜ್ಞಾನವು ತನ್ನನ್ನು ತಾನೇ ಅರಿಯುವದಿಲ್ಲವೆಂದರೆ ಅದು ಸರ್ವಜ್ಞವೆಂಬುದು ಹೋಗುವದಲ್ಲ![4]

(ಪರಿಹಾರ):—ಆ ದೋಷವೂ ಅವನಿಗೇ ಆಗಲಿ! ಅದನ್ನು ಖಂಡಿಸುವದರಿಂದ ನಮಗೇನಾಗಬೇಕು[5]? ಅನವಸ್ಥಾದೋಷವೂ (ಅವನಿಗೇ ಆಗಲಿ)! ಏಕೆಂದರೆ

---

1. ಬೌದ್ಧರಲ್ಲದ ನಿಮ್ಮ ಪಕ್ಷದಲ್ಲಿ ಜ್ಞಾನವು ತನ್ನನ್ನು ತಾನು ಅರಿಯುವದಿಲ್ಲವಾದ್ದರಿಂದ ಅದನ್ನು ಅರಿಯುವದಕ್ಕೆ ಮತ್ತೊಂದು ಜ್ಞಾನವು ಬೇಕಾಗುವದು. ಹೀಗೆ ಜ್ಞಾನಗಳ ಸಾಲಿಗೆ ನಿಲುಗಡೆಯೇ ಇಲ್ಲದೆ ಹೋಗುತ್ತದೆ; ಮತ್ತೊಂದು ಜ್ಞಾನವನ್ನು ಒಪ್ಪದಿದ್ದರೆ ಜ್ಞಾನವೇ ಸಿದ್ಧಿಸುವದಿಲ್ಲ–ಎಂದು ಆಕ್ಷೇಪ.

2. ಅವೈನಾಶಿಕರೆಂದರೆ ಇಲ್ಲಿ ವೇದಾಂತಿಗಳೆಂದರ್ಥ; ಏಕೆಂದರೆ ತಾರ್ಕಿಕರು ಜ್ಞಾನವಿಷಯಕವಾದ ಅನುವ್ಯವಸಾಯವೆಂಬ ಜ್ಞಾನವನ್ನು ಒಪ್ಪಿರುತ್ತಾರೆ.

3. ಜ್ಞಾನವು ಸ್ವತಃಸಿದ್ಧವಾಗಿರುವದರಿಂದ ಅದನ್ನು ಅರಿಯುವದಕ್ಕೆ ಮತ್ತೊಂದು ಜ್ಞಾನವು ಬೇಕಿಲ್ಲ; ಜ್ಞೇಯವೆಲ್ಲವನ್ನೂ ಒಂದೇ ಜ್ಞಾನವು ಅರಿಯುತ್ತದೆ ಎಂದು ನಾವು ಒಪ್ಪುವದರಿಂದ ಅನೇಕ ಜ್ಞಾನಗಳೂ ಬೇಕಾಗುವದಿಲ್ಲ ಎಂದು ಭಾವ.

4. ತನ್ನನ್ನು ಅರಿಯುವದಿಲ್ಲವೆಂಬಷ್ಟುಮಟ್ಟಿಗೆ ಅಸರ್ವಜ್ಞವಾಯಿತಲ್ಲ!

5. ಅಜ್ಞೇಯವಾದ ತನ್ನನ್ನು ಜ್ಞಾನವು ಅರಿಯದೆ ಇದ್ದರೆ ಅಸರ್ವಜ್ಞತ್ವವುಂಟಾಗದು. ಆದರೆ ಬೌದ್ಧರ ಪಕ್ಷದಲ್ಲಿ ಜ್ಞಾನವು ಜ್ಞೇಯವೇ ಎಂದು ಒಪ್ಪಿರುವದರಿಂದಲೂ ಜ್ಞೇಯಕ್ಕಿಂತ ಜ್ಞಾನವು ಬೇರೆಯೆಂದು ನಾವು ತೋರಿಸಿಕೊಟ್ಟಿರುವದರಿಂದ ಜ್ಞಾನವು ತನ್ನನ್ನು ತಾನು ಅರಿಯಲಾರದೆಂದಾಗುವದರಿಂದಲೂ ಅಸರ್ವಜ್ಞತ್ವದೋಷವು ಗಂಟುಬೀಳುತ್ತದೆ.

ಜ್ಞಾನವು ಜ್ಞೇಯವೆಂದು (ಅವನು) ಒಪ್ಪಿರುತ್ತಾನೆ. ಜ್ಞಾನವು ಜ್ಞೇಯವೇ ಆಗಿರಬೇಕೆಂಬುದು ವೈನಾಶಿಕನ (ಮತವು); (ಅದು) ತನ್ನನ್ನು ತಾನೇ ಅರಿಯಲಾರದಾದ್ದರಿಂದ (ಅವರಿಂದ) ಅನವಸ್ಥಾದೋಷವನ್ನು ಪರಿಹರಿಸುವದು ಆಗಲೂ ಆರದು.[1]

(ಆಕ್ಷೇಪ):—ಈ ದೋಷವು (ಇಬ್ಬರಿಗೂ) ಸಮಾನವೇ (ಆಗಿರುತ್ತದೆ).[2]

(ಪರಿಹಾರ):—ಹಾಗಲ್ಲ. ಏಕೆಂದರೆ ಜ್ಞಾನವು ಒಂದೇ[3] (ಎಂಬುದು) ಯುಕ್ತವಾಗಿರುತ್ತದೆ. ಎಲ್ಲಾ ದೇಶಗಳು, ಕಾಲಗಳು, ಪುರುಷರು-ಮುಂತಾದ ಅವಸ್ಥೆಗಳುಳ್ಳದ್ದಾಗಿ ಜ್ಞಾನವು ತಾನೊಂದೇ ಆಗಿದ್ದು ನಾಮರೂಪಗಳೇ ಮುಂತಾದ ಅನೇಕ ಉಪಾಧಿಗಳ ಭೇದದಿಂದ[4] ಸೂರ್ಯನೇ ಮುಂತಾದವುಗಳಿಗೆ (ಅನೇಕ) ಪ್ರತಿಬಿಂಬಗಳಾಗುವಂತೆ ಬಲುಬಗೆಯಾಗಿ ತೋರುತ್ತಿರುತ್ತದೆ. ಆದ್ದರಿಂದ ಈ ದೋಷವಿಲ್ಲ.[5] ಆದ್ದರಿಂದಲೇ ಇಲ್ಲಿ ಈ (ವಿಷಯವನ್ನು) ಹೇಳಿಯೂ ಇರುತ್ತದೆ.[6]

## ಪುರುಷನು ಶರೀರದಲ್ಲಿರುವ ಬಗೆ

(ಭಾಷ್ಯ)

೯೬. ನನು ಶ್ರುತೇರಿಷ್ಯೈವ ಅನ್ತಃಶರೀರೇ ಪರಿಚ್ಛಿನ್ನಃ ಕುಣ್ಡಬದರವತ್ ಪುರುಷಃ ಇತಿ । ನ । ಪ್ರಾಣಾದಿಕಲಾಕಾರಣತ್ವಾತ್ । ನ ಹಿ ಶರೀರಮಾತ್ರಪರಿಚ್ಛಿನ್ನಃ[7] ಪ್ರಾಣ

---

1. ಜ್ಞಾನವು ತನ್ನನ್ನೇ ತಾನು ಅರಿಯುವದೆಂದರೆ ಆತ್ಮಾಶ್ರಯದೋಷ; ಅದು ಅರಿಯುವದೆಂಬುದು ಸಿದ್ಧವಾಗಿಯೂ ಇಲ್ಲ. ಜ್ಞಾನಕ್ಕಿಂತ ಬೇರೆಯಾದ ಜ್ಞಾನವು ಅದನ್ನು ಅರಿಯುವದೆಂದರೆ ಅನವಸ್ಥಾದೋಷವು ಬರುತ್ತದೆ ಜ್ಞಾನವು ಜ್ಞೇಯವಲ್ಲ ಎಂಬ ನಮ್ಮ ಪಕ್ಷವನ್ನು ಒಪ್ಪಿಕೊಂಡಹೊರತು ಈ ದೋಷವು ಹೋಗಲಾರದು.

2. ಜ್ಞಾನವು ಸ್ವಪ್ರಕಾಶವೆಂದು ಒಪ್ಪಿದರೆ ಆತ್ಮಾಶ್ರಯದೋಷವು; ಅದನ್ನು ತಪ್ಪಿಸಿಕೊಳ್ಳುವದಕ್ಕೆ ಹೊರಟರೆ ನಮ್ಮಂತೆಯೇ ವೇದಾಂತಿಗಳಾದ ನಿಮಗೂ ಅನವಸ್ಥಾದೋಷವು ಬರುತ್ತದೆ.

3. ಅದ್ವಿತೀಯವು.

4. ಈ ಉಪಾಧಿಗಳೂ ಅವಿದ್ಯಾಕಲ್ಪಿತವಾಗಿರುತ್ತವೆ. ಸೂ. ಭಾ. ೩-೨-೧೫.

5. ಆತ್ಮಾಶ್ರಯ, ಅನವಸ್ಥಾ-ಮುಂತಾದ ದೋಷಗಳು ದ್ವೈತವನ್ನು ಸತ್ಯವೆಂದು ಒಪ್ಪುವ ನಿಮಗೆ ಉಂಟಾಗುವವೇ ಹೊರತು ಅದ್ವೈತಿಗಳಾದ ನಮಗೆ ಉಂಟಾಗುವದಿಲ್ಲ. ನಮ್ಮ ಮತದಲ್ಲಿ ಜ್ಞಾನವು ಅದ್ವಿತೀಯವಾಗಿರುತ್ತದೆ; ಅದೇ ಅವಿದ್ಯಾವ್ಯವಹಾರದಲ್ಲಿ ವೃತ್ತಿಜ್ಞಾನಗಳಾಗಿಯೂ ಜ್ಞಾನಜ್ಞೇಯಗಳ ರೂಪದಿಂದಲೂ ಕಾಣಿಸಿಕೊಳ್ಳುತ್ತದೆ ಎಂದು ನಾವು ಒಪ್ಪಿರುವದರಿಂದ ನಮ್ಮ ಪಕ್ಷದಲ್ಲಿ ಯಾವ ದೋಷಗಳೂ ಇರುವದಿಲ್ಲ.

6. ಶ್ರುತಿಯಲ್ಲಿ ಚೈತನ್ಯವೊಂದೇ ಪರಮಾರ್ಥವೆಂದು ಹೇಳಿಯೂ ಇದೆ.

7. ಈ ಪಾ॥ ಪಾಠವೇ ಸರಿ.

ಶ್ರದ್ಧಾದೀನಾಂ ಕಲಾನಾಂ ಕಾರಣತ್ವಂ ಪ್ರತಿಪತ್ತುಂ ಶಕ್ನುಯಾತ್ । ಕಲಾಕಾರ್ಯತ್ವಾಚ್ಚ ಶರೀರಸ್ಯ । ನ ಹಿ ಪುರುಷಕಾರ್ಯಾಣಾಂ ಕಲಾನಾಂ ಕಾರ್ಯಂ ಸತ್ ಶರೀರಂ ಕಾರಣಕಾರಣಂ ಸ್ವಸ್ಯ ಪುರುಷಂ ಕುಣ್ಡಬದರಮಿವ ಅಭ್ಯನ್ತರೀಕುರ್ಯಾತ್ । ಬೀಜವೃಕ್ಷಾದಿವತ್ ಸ್ಯಾತ್ ಇತಿ ಚೇತ್ । ಯಥಾ ಬೀಜಕಾರ್ಯಂ ವೃಕ್ಷಃ ತತ್ಕಾರ್ಯಂ ಚ ಫಲಂ ಸ್ವಕಾರಣಕಾರಣಂ ಬೀಜಮ್ ಅಭ್ಯನ್ತರೀಕರೋತಿ ಆಮ್ರಾದಿ ತದ್ವತ್ ಪುರುಷಮ್ ಅಭ್ಯನ್ತರೀಕುರ್ಯಾತ್ ಶರೀರಂ ಸ್ವಕಾರಣಮಪಿ ಇತಿ ಚೇತ್ । ನ । ಅನ್ಯತ್ವಾತ್, ಸಾವಯವತ್ವಾಚ್ಚ । ದೃಷ್ಟಾನ್ತೇ ಕಾರಣಾದ್[1] ಬೀಜಾತ್ ವೃಕ್ಷಫಲಸಂವೃತ್ತಾನಿ ಅನ್ಯಾನ್ಯೇವ ಬೀಜಾನಿ । ದಾರ್ಷ್ಟಾನ್ತಿಕೇ ತು ಸ್ವಕಾರಣಕಾರಣಭೂತಃ ಸ ಏವ ಪುರುಷಃ ಶರೀರೇ ಅಭ್ಯನ್ತರೀಕೃತಃ ಶ್ರೂಯತೇ । ಬೀಜವೃಕ್ಷಾದೀನಾಂ ಸಾವಯವತ್ವಾಚ್ಚ ಸ್ಯಾದಾಧಾರಾಧೇಯತ್ವಮ್ । ನಿರವಯವಶ್ಚ ಪುರುಷಃ, ಸಾವಯವಾಶ್ಚ ಕಲಾಃ ಶರೀರಂ ಚ । ಏತೇನ ಆಕಾಶಸ್ಯಾಪಿ ಶರೀರಾಧಾರತ್ವಮ್ ಅನುಪಪನ್ನಂ ಕಿಮುತ ಆಕಾಶಕಾರಣಸ್ಯ ಪುರುಷಸ್ಯ । ತಸ್ಮಾತ್ ಅಸಮಾನೋ ದೃಷ್ಟಾನ್ತಃ ॥

(ಭಾಷ್ಯಾರ್ಥ)

(ಆಕ್ಷೇಪ) :—ಶ್ರುತಿಪ್ರಮಾಣದಿಂದ ನೋಡಿದರೆ, ಕುಂಡದಲ್ಲಿ ಎಗಚೀ ಕಾಯಿಗಳಿರುವಂತೆ ಪುರುಷನೂ ಶರೀರದೊಳಗೆ ಅಡಕವಾಗಿರಬೇಕಲ್ಲವೆ[2] ?

(ಪರಿಹಾರ) :—ಹಾಗಲ್ಲ. ಏಕೆಂದರೆ (ಅವನು) ಪ್ರಾಣವೇ ಮುಂತಾದ ಕಲೆಗಳಿಗೆ ಕಾರಣನಾಗಿರುತ್ತಾನೆ.[3] ಶರೀರದಷ್ಟೇ ಅಳತೆಯುಳ್ಳವನು ಪ್ರಾಣ, ಶ್ರದ್ಧೆ-ಮುಂತಾದ ಕಲೆಗಳಿಗೆ ಕಾರಣತ್ವವನ್ನು ಹೊಂದುವದಕ್ಕೆ ಶಕ್ತನಾಗಲಾರನಷ್ಟೆ. ಶರೀರವು ಕಲೆಗಳ ಕಾರ್ಯವಾಗಿರುವದರಿಂದಲೂ (ಹೀಗೆಂದು ತಿಳಿಯಬೇಕು). ಏಕೆಂದರೆ ಶರೀರವು ಪುರುಷನ ಕಾರ್ಯವಾಗಿರುವ ಕಲೆಗಳ ಕಾರ್ಯವಾಗಿದ್ದುಕೊಂಡೇ ತನ್ನ ಕಾರಣಕ್ಕೂ ಕಾರಣನಾಗಿರುವ ಪುರುಷನನ್ನು ಕುಂಡವು ಎಗಚೀಕಾಯಿಗಳನ್ನು (ಒಳಗೊಳ್ಳುವಂತೆ)[4] ತನ್ನೊಳಗೆ ಇಟ್ಟುಕೊಳ್ಳಲಾರದು.

---

1. "ಕಾರಣಬೀಜಾತ್" ಎಂದು ಅ॥ ಪಾಠ.

2. ಜ್ಞಾನರೂಪನಾದ ಆತ್ಮನು ಅದ್ವಿತೀಯನು, ನಿತ್ಯನು-ಎಂಬುದು ಪುರುಷನು ಶರೀರದ ಅಳತೆಗೆ ಕಟ್ಟುಬಿದ್ದಿರುತ್ತಾನೆಂದು ಹೇಳುವ ಶ್ರುತಿಗೆ ವಿರುದ್ಧವಲ್ಲವೆ ?

3. ಶ್ರುತಿಯು ವಾಕ್ಯಶೇಷದಲ್ಲಿ ಈ ಪುರುಷನಿಂದ ಕಲೆಗಳು ಉಂಟಾಗುವವೆಂದು ಹೇಳಿರುವದರಿಂದ ಪುರುಷನು ಕಲೆಗಳಿಂದ ಪರಿಚ್ಛಿನ್ನನಾಗಲಾರನು.

4. "ಕುಣ್ಡಬದರವತ್'' ಎಂಬುದು "ಕುಣ್ಡೇ ಬದರವತ್" ಎಂದೂ, "ಕುಣ್ಡಬದರಮಿವ" ಎಂಬುದು "ಕುಣ್ಡಂ ಬದರಮಿವ" ಎಂದೂ ಇದ್ದರೆ ದೃಷ್ಟಾಂತವು ಇನ್ನೂ ಸ್ಫುಟವಾಗುವದು.

(ಆಕ್ಷೇಪ):– ಬೀಜವೃಕ್ಷಾದಿಗಳಂತೆ ಇರಬಹುದಲ್ಲ! (ಹೇಗೆಂದರೆ) ಬೀಜದ ಕಾರ್ಯವು ಮರವು; ಅದರ ಕಾರ್ಯವಾದ ಮಾವಿನಹಣ್ಣೇ ಮುಂತಾದದ್ದು ತನ್ನ ಕಾರಣಕ್ಕೂ ಕಾರಣವಾಗಿರುವ ಬೀಜವನ್ನು ಹೇಗೆ ತನ್ನೊಳಗೆ ಇಟ್ಟುಕೊಂಡಿರುವದೋ ಹಾಗೆ ಶರೀರವು ತನ್ನ ಕಾರಣಕ್ಕೂ ಕಾರಣವಾಗಿರುವ ಪುರುಷನನ್ನು ತನ್ನೊಳಗೆ ಇಟ್ಟುಕೊಳ್ಳಬಹುದಲ್ಲ!

(ಪರಿಹಾರ):—ಹಾಗಲ್ಲ. ಏಕೆಂದರೆ (ಅದು) ಬೇರೆಯಾಗಿರುತ್ತದೆ, ಸಾವಯವ ವಾಗಿಯೂ ಇರುತ್ತದೆ (ಇದರ ವಿವರ): ದೃಷ್ಟಾಂತದಲ್ಲಿ ಕಾರಣವಾದ ಬೀಜಕ್ಕಿಂತ ಮರದ ಹಣ್ಣಿನಿಂದ ಆಗಿರುವ ಬೀಜಗಳು ಬೇರೆಯೇ ಆಗಿರುತ್ತವೆ; ಆದರೆ ದಾರ್ಷ್ಟಾಂತಿಕ ದಲ್ಲಿ ತನ್ನ ಕಾರಣಕ್ಕೂ ಕಾರಣನಾಗಿರುವ ಅದೇ ಪುರುಷನನ್ನೇ ಶರೀರದೊಳಗೆ ಅಡಕ ಮಾಡಿಕೊಂಡಿರುತ್ತದೆ ಎಂದು ಶ್ರುತಿಯಲ್ಲಿದೆ.[1] (ಇದಲ್ಲದೆ) ಬೀಜ, ವೃಕ್ಷ-ಮುಂತಾದವು ಗಳು ಅವಯವಗಳುಳ್ಳವಾಗಿರುವದರಿಂದ (ಅವುಗಳಲ್ಲಿ) ಒಂದು ಆಧಾರವೂ ಇನ್ನೊಂದು ಆಧೇಯವೂ ಆಗಿರಬಹುದು. ಆದರೆ ಪುರುಷನಿಗೆ ಅವಯವಗಳಿಲ್ಲ; ಕಲೆಗಳಿಗೆ ಅವಯವಗಳಿವೆ, ಶರೀರಕ್ಕೂ ಇವೆ. (ಆದ್ದರಿಂದ ಇಲ್ಲಿ ಆಧಾರಾಧೇಯಭಾವವಿರ ಲಾರದು)[2] ಈ ಕಾರಣದಿಂದಲೇ[3] ಆಕಾಶವುಕೂಡ ಶರೀರವೆಂಬ ಆಧಾರದಲ್ಲಿದೆ ಎನ್ನುವದು ಹೊಂದುವಂತಿಲ್ಲ. (ಹೀಗಿರುವಲ್ಲಿ) ಆಕಾಶಕ್ಕೂ ಕಾರಣನಾಗಿರುವ ಪುರುಷನು (ಅದರೊಳಗೆ) ಇರಲಾರನೆಂಬುದನ್ನು ಹೇಳತಕ್ಕದ್ದೇನು?[4] ಆದ್ದರಿಂದ (ನೀವು ಕೊಟ್ಟ) ದೃಷ್ಟಾಂತವು ಸಮನಲ್ಲ.

(ಭಾಷ್ಯ)

೯೭. ಕಿಂ ದೃಷ್ಟಾನ್ತೇನ? ವಚನಾತ್ ಸ್ಯಾತ್ ಇತಿ ಚೇತ್ । ನ । ವಚನಸ್ಯ ಅಕಾರಕತ್ವಾತ್ । ನ ಹಿ ವಚನಂ ವಸ್ತುನೋಽನ್ಯಥಾಕರಣೇ ವ್ಯಾಪ್ರಿಯತೇ । ಕಿಂ ತರ್ಹಿ ಯಥಾಭೂತಾರ್ಥಾವದ್ಯೋತನೇ । ತಸ್ಮಾತ್ ಅನ್ತಃಶರೀರೇ ಇತ್ಯೇತದ್ ವಚನಂ "ಅಣ್ಡಸ್ಯಾನ್ತರ್ವ್ಯೋಮ" ಇತಿವತ್[5] ದ್ರಷ್ಟವ್ಯಮ್ ॥

---

1. ಪುರುಷರು ಅನೇಕರೆಂದಾಗಲಿ, ಕಲೆಗಳಿಗೆ ಕಾರಣನಾಗಿರುವ ಪುರುಷನೂ ಶರೀರ ದೊಳಗಿರುವ ಪುರುಷನೂ ಬೇರೆಯೆಂದಾಗಲಿ ಶ್ರುತಿಯಲ್ಲಿಲ್ಲ. ಹೀಗೆ ಶರೀರದೊಳಗೆ ಪುರುಷನಿದಾನೆ ಎಂಬ ವಾಕ್ಯವು ಮುಂದಿನ ವಾಕ್ಯಕ್ಕೆ ಹೊಂದಿಕೆಯಾಗುವದಿಲ್ಲವಾದ್ದರಿಂದ ಈ ವಾಕ್ಯಕ್ಕೆ ಅಕ್ಷರಾರ್ಥವನ್ನು ತೆಗೆದುಕೊಳ್ಳಬಾರದು ಎಂದು ಭಾವ.

2. ನಿರವಯವವಸ್ತುವಿಗೆ ಸಾವಯವವಾದದ್ದು ಆಧಾರವಾಗಲಾರದು.

3. ನಿರವಯವವಾಗಿರುವದರಿಂದಲೇ.

4. ನಿಜವಾಗಿ ಅವನೇ ಆಕಾಶಾದಿಯಾಗಿ ಎಲ್ಲಕ್ಕೂ ಆಧಾರವಾಗಿರುತ್ತಾನೆ, ಏಕೆಂದರೆ ಅವನಲ್ಲಿ ಎಲ್ಲವೂ ಕಲ್ಪಿತವಾಗಿರುತ್ತದೆ.

5. "ಇತಿವಚ್ಚ" ಎಂಬ ಪಾಠದಲ್ಲಿ ಚ ಹೆಚ್ಚು.

(ಭಾಷ್ಯಾರ್ಥ)

(ಆಕ್ಷೇಪ):—ದೃಷ್ಟಾಂತದಿಂದೇನು?[1] ವಚನದಿಂದಲೇ (ಶರೀರವು ಆಧಾರ) ವಾಗಬಹುದಲ್ಲವೆ?

(ಪರಿಹಾರ):—ಹಾಗಲ್ಲ. ಏಕೆಂದರೆ **ವಚನವು ಕಾರಕವಲ್ಲ. ವಚನಕ್ಕೆ ಇರುವದನ್ನು ಬೇರೆಯಾಗಿ ಮಾಡುವದು ಕೆಲಸವಲ್ಲ, ಮತ್ತೇನೆಂದರೆ-ಪದಾರ್ಥವು ಹೇಗಿರುವದೋ ಹಾಗೆ ಅದನ್ನು ತೋರಿಸಿಕೊಡುವದೇ (ಅದರ ಕೆಲಸವು).**[2] ಆದ್ದರಿಂದ "ಶರೀರದೊಳಗೆ" ಎಂಬ (ಮಾತನ್ನು) 'ಮೊಟ್ಟೆಯಲ್ಲಿ ಆಕಾಶವಿರುವದು' ಎಂಬಂತೆ[3] ಅರಿಯಬೇಕು.

(ಭಾಷ್ಯ)

೯೮. ಉಪಲಬ್ಧಿನಿಮಿತ್ತತ್ವಾಚ್ಚ । ದರ್ಶನಶ್ರವಣಮನನವಿಜ್ಞಾನಾದಿಲಿಙ್ಗೈಃ **ಅನ್ತಃಶರೀರೇ ಪರಿಚ್ಛಿನ್ನ ಇವ ಹಿ ಉಪಲಭತೇ ಪುರುಷಃ ಉಪಲಭ್ಯತೇ ಚಾತ್ರ**[4] । **ಅತ ಉಚ್ಯತೇ "ಅನ್ತಃಶರೀರೇ ಸೋಽಮ್ಯ ಸ ಪುರುಷಃ" ಇತಿ । ನ ಪುನರಾಕಾಶ** ಕಾರಣಭೂತಃ ಸನ್ ಕುಣ್ಡಬದರವತ್ ಶರೀರಪರಿಚ್ಛಿನ್ನಃ ಇತಿ ಮನಸಾಪಿ ಇಚ್ಛತಿ ವಕ್ತುಂ ಮೂಢೋಽಪಿ । ಕಿಮುತ ಪ್ರಮಾಣಭೂತಾ ಶ್ರುತಿಃ ॥

(ಭಾಷ್ಯಾರ್ಥ)

ಅರಿವಿಗೆ ನಿಮಿತ್ತವಾಗಿರುವದರಿಂದಲೂ (ಹೀಗೆಂದು ಹೇಳಿರುತ್ತದೆ). ಪುರುಷನು ನೋಡುವದು, ಕೇಳುವದು, ಯೋಚಿಸುವದು, ಗೊತ್ತಾಗಿ ಅರಿಯುವದು-ಮುಂತಾದ

---

1. ಶ್ರುತಿಯು ಸ್ಪಷ್ಟವಾಗಿ ಹೇಳಿರುವದರಿಂದ ದೃಷ್ಟಾಂತವು ಹೊಂದದಿದ್ದರೂ ಶರೀರದೊಳಗೆ ಪುರುಷನಿದಾನೆಂದು ಹೇಳಬಹುದಲ್ಲ! ಎಂದು ಭಾವ.

2. ವಚನವು ಪ್ರಮಾಣವಾದ್ದರಿಂದ ಅದು ಅನುಭವವನ್ನುಂಟುಮಾಡುವದಾಗಿರಬೇಕು. ಅನುಭವಕ್ಕೆ ವಿರುದ್ಧವಾಗಿ ವಚನವು ಎಂದಿಗೂ ಹೇಳಲಾರದು. ತೈ. ಭಾ. ೧-೧೧ ಉಪಸಂಹಾರಭಾಷ್ಯ (ಭಾ. ಭಾ. ೭೩); ಬೃ. ಭಾ. ೨-೧-೨೦, ೩-೯ ಉಪಸಂಹಾರ; ಗೀತಾ. ಭಾ. ೧೮-೬೬.

3. "ಮೊಟ್ಟೆಯಲ್ಲಿ ಆಕಾಶವಿದೆ" ಎಂಬುದು ಮುಖ್ಯಾರ್ಥದಲ್ಲಿ ಹೊಂದುವದಿಲ್ಲ; ಮತ್ತು ಆಕಾಶವೇ ಪರಂಪರೆಯಿಂದ ಮೊಟ್ಟೆಯಾಗಿರುತ್ತದೆ.

4. ಇದು ವಾ॥ ಕಾ॥ ಪಾಠ; "ಉಪಲಭ್ಯತೇ ಚ" ಎಂದಿಷ್ಟೇ ಆ॥

ಲಿಂಗಗಳಿಂದ[1] ಶರೀರದೊಳಗಡೆಯಲ್ಲಿ ಅವತೆಗೆ ಸಿಕ್ಕಿರುವಂತೆ ಕಾಣುತ್ತಿರುತ್ತಾನೆ, ಮತ್ತು ಅಲ್ಲಿಯೇ (ತನ್ನ ರೂಪದಲ್ಲಿ) ಅರಿಯಲ್ಪಡುತ್ತಾನೆ.[2] ಆದ್ದರಿಂದ "ಎಲೈ ಸೋವ್ಯನೆ, ಆ ಪುರುಷನು ಶರೀರದೊಳಗೆ ಇರುತ್ತಾನೆ" ಎಂದು ಹೇಳಿರುತ್ತದೆ. ಇಷ್ಟೇ ಹೊರತು ಆಕಾಶಕ್ಕೂ ಕಾರಣನಾಗಿರುವ (ಆತ್ಮನು) ಕುಂಡದಲ್ಲಿ ಎಗಚಿ ಕಾಯಿಗಳು (ಅಡಕವಾಗಿರು)ವಂತೆ ಶರೀರದಲ್ಲಿ ಅಡಕನಾಗಿರುತ್ತಾನೆಂದು ಹೇಳುವದಕ್ಕೆ ಮೂಢನಿಗೆಕೂಡ ಮನಸ್ಸಿನಲ್ಲಿಯೂ ಬರಲಾರದು ; ಹೀಗಿರುವಲ್ಲಿ ಪ್ರಮಾಣವಾದ ಶ್ರುತಿಯು (ಹಾಗೆಂದು ಹೇಳುವದಕ್ಕೆ ಹೊರಡಲಾರದೆಂದು) ಹೇಳತಕ್ಕದ್ದೇನು ?

## ಪುರುಷನಿಂದ ಕಲೆಗಳ ಸೃಷ್ಟಿ

(ಭಾಷ್ಯ)

೯೯. "ಯಸ್ಮಿನ್ನೇತಾಃ ಷೋಡಶಕಲಾಃ ಪ್ರಭವನ್ತಿ" ಇತ್ಯುಕ್ತಃ ಪುರುಷ ವಿಶೇಷಣಾರ್ಥಃ[3] ಕಲಾನಾಂ ಪ್ರಭವಃ । ಸ ಚ ಅನ್ಯಾರ್ಥೋಽಪಿ ಶ್ರುತಃ ಕೇನ ಕ್ರಮೇಣ ಸ್ಯಾತ್ ಇತ್ಯತಃ ಇದಮುಚ್ಯತೇ । ಚೇತನಪೂರ್ವಿಕಾ ಚ ಸೃಷ್ಟಿಃ ಇತ್ಯೇವಮರ್ಥಂ ಚ ॥

(ಭಾಷ್ಯಾರ್ಥ)

"ಯಾವಾತನಲ್ಲಿ ಈ ಹದಿನಾರು ಕಲೆಗಳು ಹುಟ್ಟುತ್ತವೆಯೋ" ಎಂದು ಹೇಳಿರುವ ಕಲೆಗಳ ಉತ್ಪತ್ತಿಯು ಪುರುಷನಿಗೆ ವಿಶೇಷಣವನ್ನು ತಿಳಿಸುವದಕ್ಕೋಸ್ಕರ (ಬಂದಿರುತ್ತದೆ)[1]. (ಹೀಗೆ) ಬೇರೊಂದು ಪ್ರಯೋಜನಕ್ಕಾಗಿ ಶ್ರುತಿಯಲ್ಲಿ ಹೇಳಿದ್ದಾ

1. ಹೊಗೆಯಿಂದ ಬೆಂಕಿಯನ್ನು ಅರಿಯುವಂತೆ ದೃಷ್ಟ್ಯಾದಿಗಳಿಂದ ಪುರುಷನನ್ನು ಈ ಶರೀರದಲ್ಲಿ ಪರಿಚ್ಛಿನ್ನರೂಪದಿಂದ ಅರಿಯುವರು. ಮುಂ. ಭಾ. ೨-೨-೧, ಗೀ. ಭಾ. ೧೫-೧೦. ನಿಜವಾಗಿ ನೋಡಿದರೆ ಆತ್ಮನಿಗೆ ಈ ದೃಷ್ಟ್ಯಾದಿಗಳು ಲಿಂಗವಾಗಿವೆ ಎಂಬುದೇನೂ ಶ್ರುತಿಯಲ್ಲಿ ವಿವಕ್ಷಿತವಲ್ಲ. ಸೂ. ಭಾ. ೧-೧-೩೧ರಲ್ಲಿ "ವಕ್ತಾರಂ ವಿದ್ಯಾತ್" ಎಂಬುದರ ವಿವರವನ್ನು ನೋಡಿರಿ.

2. ಅವನ ಪರಮಾರ್ಥಸ್ವರೂಪವನ್ನು ಹೃದಯದಲ್ಲಿರುವ ಬುದ್ಧಿಗೆ ಸಾಕ್ಷಿಯಾಗಿರುವನೆಂದು ಈ ಶರೀರದಲ್ಲಿಯೇ ಜಿಜ್ಞಾಸುಗಳು ಅರಿತುಕೊಳ್ಳಬೇಕಾಗಿರುವದು. ಮುಂ. ಭಾ. ೨-೨-೬, ತೈ. ಭಾ. ೨-೧.

3. "ಇತ್ಯುಕ್ತಂ ಪುರುಷವಿಶೇಷಣಾರ್ಥಮ್" ಎಂಬ ಪಾಠದಲ್ಲಿ ಸ ಚ ಎಂಬುದಕ್ಕೆ ಪರಾಮೃಷ್ಟವಾದದ್ದು ಯಾವದೂ ಇಲ್ಲದೆ ಹೋಗುತ್ತದೆ ; ಆದ್ದರಿಂದ ಈ ಪಾ॥ ಕಾ॥ ಪಾಠವನ್ನು ಅನುಸರಿಸಿದೆ.

4. ಪುರುಷನಿಗಿಂತ ಬೇರೆಯಾಗಿ ಕಲೆಗಳಿಲ್ಲ, ಅವನು ಅದ್ವಿತೀಯನು ಎಂದು ತಿಳಿಸುವದಕ್ಕೆ ಬಂದಿದೆ. ಶ್ರುತಿಗೆ ಸೃಷ್ಟಿಯಲ್ಲಿ ತಾತ್ಪರ್ಯವಿಲ್ಲ. ಸೂ. ಭಾ. ೨-೧-೩೩, ೪-೩-೧೪; ಮಾಂ. ಕಾ. ಭಾ. ೩-೧೫ ; ಛಾಂ. ಭಾ. ೬-೪-೩ ; ಬೃ. ಭಾ. ೧-೪-೭.

ದರೂ ಇದು ಯಾವ ಕ್ರಮದಿಂದ[1] ಆಗುತ್ತದೆ ಎಂಬುದನ್ನು ತಿಳಿಸುವದಕ್ಕಾಗಿಯೂ ಚೇತನಪೂರ್ವಕವಾಗಿಯೇ[2] ಸೃಷ್ಟಿಯಾಗುತ್ತದೆ ಎಂದು ತಿಳಿಸುವದಕ್ಕಾಗಿಯೂ ಹೇಳಿರುತ್ತದೆ:—

**ಸ ಈಕ್ಷಾಂಚಕ್ರೇ । ಕಸ್ಮಿನ್ನಹಮುತ್ಕ್ರಾಂತ ಉತ್ಕ್ರಾಂತೋ**
**ಭವಿಷ್ಯಾಮಿ ಕಸ್ಮಿನ್ ವಾ ಪ್ರತಿಷ್ಠಿತೇ ಪ್ರತಿಷ್ಠಾಸ್ಯಾಮೀತಿ ॥೩॥**

೩. ಅವನು "ಯಾವನು ಉತ್ಕ್ರಾಂತನಾದರೆ ನಾನು ಉತ್ಕ್ರಾಂತನಾಗುವೆನು, ಯಾವನು ನಿಂತರೆ ನಾನು ನಿಂತುಕೊಂಡಿರುವೆನು ?" ಎಂದು (ಆಲೋಚಿಸಿ) ನೋಡಿದನು.

(ಭಾಷ್ಯ)

೧೦೦. ಸಃ[3] ಪುರುಷಃ ಷೋಡಶಕಲಃ ಪೃಷ್ಟೋ ಯೋ ಭರದ್ವಾಜೇನ । ಸ ಈಕ್ಷಾಂಚಕ್ರೇ ಈಕ್ಷಣಂ ದರ್ಶನಂ ಚಕ್ರೇ ಕೃತವಾನ್ ಇತ್ಯರ್ಥಃ । ಸೃಷ್ಟಿಫಲಕ್ರಮಾದಿವಿಷಯಮ್ । ಕಥಮಿತಿ ? ಉಚ್ಯತೇ । ಕಸ್ಮಿನ್ ಕರ್ತೃವಿಶೇಷೇ ದೇಹಾತ್ ಉತ್ಕ್ರಾಂತೇ ಉತ್ಕ್ರಾಂತೋ ಭವಿಷ್ಯಾಮಿ ಅಹಮೇವ । ಕಸ್ಮಿನ್ ವಾ ಶರೀರೇ ಪ್ರತಿಷ್ಠಿತೇ ಅಹಂ ಪ್ರತಿಷ್ಠಾಸ್ಯಾಮಿ ಪ್ರತಿಷ್ಠಿತಃ ಸ್ಯಾಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಅವನು ಎಂದರೆ ಭರದ್ವಾಜನು ಕೇಳಿದ ಹದಿನಾರುಕಲೆಗಳ ಪುರುಷನು. ಅವನು ನೋಡಿದನು ಎಂದರೆ ಸೃಷ್ಟಿಯ ಫಲ, ಕ್ರಮ-ಮುಂತಾದದ್ದರ ವಿಷಯದ[4] ಈಕ್ಷಣವನ್ನು ದರ್ಶನವನ್ನು (ಆಲೋಚನೆಯನ್ನು)[5] ಮಾಡಿದನು, ಮಾಡಿದವನಾದನು ಎಂದರ್ಥ. ಹೇಗೆ ? ಎಂದರೆ (ಶ್ರುತಿ) ಹೇಳುತ್ತದೆ: ಯಾವನು ಎಂದರೆ (ಯಾವ) ಒಬ್ಬಾನೊಬ್ಬ ಕರ್ತೃವು ದೇಹದಿಂದ ಹೊರಟರೆ ನಾನೇ ಹೊರಟವ

---

1. ಈ ಕ್ರಮವು ಉಪಾಸನೆಗೂ ಲಯಚಿಂತನೆಗೂ ಉಪಯೋಗವಾಗುತ್ತದೆ. ಸೂ. ಭಾ. ೨-೧-೧೪, ೨-೩-೧೪.

2. ಚೇತನರೂಪವಾದ ಕಾರಣದಿಂದಲೇ.

3. ಈ ಮಾತು ವಾ॥ ಕಾ॥ ಪಾಠಗಳಲ್ಲಿದೆ, ಅ॥ ಪಾಠದಲ್ಲಿಲ್ಲ.

4. ಇಂಥ ಕ್ರಮದಲ್ಲಿ ಸೃಷ್ಟಿಮಾಡಬೇಕು, ಇಂಥ ಪ್ರಯೋಜನಕ್ಕಾಗಿ ಮಾಡುವೆನು- ಎಂದು ಮುಂತಾಗಿ.

5. ಈಕ್ಷಧಾತುವಿಗೆ ನೋಡುವದು ಎಂದರ್ಥ. ಆದ್ದರಿಂದ ದರ್ಶನವೆಂಬರ್ಥವನ್ನು ಭಾಷ್ಯದಲ್ಲಿ ಕೊಟ್ಟಿದೆ; ಇದಕ್ಕೆ ಆಲೋಚನೆಯೆಂಬುದೇ ಪ್ರಕೃತವಾದ ಅರ್ಥ.

ನಾಗುವೆನು ?[1] ಅಥವಾ ಯಾವದು ಶರೀರದಲ್ಲಿ ನಿಂತಿದ್ದರೆ (ನಾನೂ) ನಿಂತಿರುವನಾಗುವೆನು ?- ಎಂದರ್ಥ.

## ಆತ್ಮನು ಸೃಷ್ಟಿಕರ್ತನೆಂಬ ಬಗ್ಗೆ ಚರ್ಚೆ

(ಭಾಷ್ಯ)

೧೧. ನನು ಆತ್ಮಾ ಅಕರ್ತಾ, ಪ್ರಧಾನಂ ಕರ್ತೃ । ಅತಃ ಪುರುಷಾರ್ಥಂ ಪ್ರಯೋಜನಮ್ ಉರರೀಕೃತ್ಯ ಪ್ರಧಾನಂ ಪ್ರವರ್ತತೇ ಮಹದಾದ್ಯಾಕಾರೇಣ । ತತ್ರ ಇದಮನುಪಪನ್ನಂ ಪುರುಷಸ್ಯ ಸ್ವಾತನ್ತ್ರ್ಯೇಣ ಈಕ್ಷಾಪೂರ್ವಕಂ ಕರ್ತೃತ್ವವಚನಂ ಸತ್ತ್ವಾದಿಗುಣಸಾಮ್ಯೇ ಪ್ರಧಾನೇ ಪ್ರಮಾಣೋಪಪನ್ನೇ ಸೃಷ್ಟಿಕರ್ತರಿ ಸತಿ, ಈಶ್ವರೇಚ್ಛಾನುವರ್ತಿಷು ವಾ ಪರಮಾಣುಷು ಸತ್ಸು । ಆತ್ಮನೋಽಪಿ ಏಕತ್ವೇನ ಕರ್ತೃತ್ವೇ ಸಾಧನಾಭಾವಾತ್ । ಆತ್ಮನ ಆತ್ಮನಿ ಅನರ್ಥಕರ್ತೃತ್ವಾನುಪಪತ್ತೇಶ್ಚ । ನ ಹಿ ಚೇತನಾವಾನ್ ಬುದ್ಧಿಪೂರ್ವಕಾರೀ ಆತ್ಮನೋಽನರ್ಥಂ ಕುರ್ಯಾತ್ । ತಸ್ಮಾತ್ ಪುರುಷಾರ್ಥೇನ ಪ್ರಯೋಜನೇನ ಈಕ್ಷಾಪೂರ್ವಕಮಿವ ನಿಯತಕ್ರಮೇಣ ಪ್ರವರ್ತಮಾನೇ ಅಚೇತನೇ ಪ್ರಧಾನೇ ಚೇತನವದುಪಚಾರೋಽಯಂ "ಸ ಈಕ್ಷಾಂಚಕ್ರೇ" ಇತ್ಯಾದಿಃ । ಯಥಾ ರಾಜ್ಞಃ ಸರ್ವಾರ್ಥಕಾರಿಣಿ ಭೃತ್ಯೇ "ರಾಜಾ" ಇತಿ, ತದ್ವತ್ ॥

(ಭಾಷ್ಯಾರ್ಥ)

(ಪೂರ್ವಪಕ್ಷ) :-ಆತ್ಮನು ಕರ್ತೃವಲ್ಲ, ಪ್ರಧಾನವೇ ಕರ್ತೃ. ಆದ್ದರಿಂದ ಪುರುಷನಿಗೆ ಪ್ರಯೋಜನವುಂಟಾಗಲೆಂದು ಇಟ್ಟುಕೊಂಡು ಪ್ರಧಾನವು **ಮಹತ್ತು** ಮುಂತಾದ ರೂಪದಲ್ಲಿ ಮುಂದುವರಿಯುತ್ತಿರುವದು. ಹೀಗಿರುವಲ್ಲಿ ಪುರುಷನು ತಾನೇ ಆಲೋಚನೆಮಾಡಿ (ಸೃಷ್ಟಿ) ಮಾಡುತ್ತಾನೆಂದು (ಹೇಳುವ) ಈ (ಅಭಿಪ್ರಾಯವು) ಸರಿಯಾಗುವದಿಲ್ಲ. ಸತ್ತ್ವಾದಿಗುಣಗಳ ಸಾಮ್ಯವಾದ **ಪ್ರಧಾನವು** ಸೃಷ್ಟಿ ಮಾಡುವದೆಂದು[2] ಅಥವಾ ಈಶ್ವರನ ಇಚ್ಛೆಗೆ ಅನುಸಾರವಾಗಿ **ಪರಮಾಣುಗಳು**

---

1. ಅಂಥ ಉಪಾಧಿಯು ಯಾವದು ? ಎಂದು ಅಭಿಪ್ರಾಯ. ಆತ್ಮನಿಗೆ ಸ್ವತಃ ಉತ್ಕ್ರಾಂತಿಯಿಲ್ಲ, ಪ್ರಾಣವೆಂಬ ಉಪಾಧಿಯಿಂದಲೇ ಉತ್ಕ್ರಾಂತಿಯಾಗುತ್ತದೆ. ಇದರಂತೆ ಲೋಕಾಂತರಕ್ಕೆ ಹೋಗುವದು, ಅಲ್ಲಿಂದ ಮರಳಿಬರುವದು-ಇವೆಲ್ಲವೂ ಈ ಉಪಾಧಿಯಿಂದಲೇ ಆಗುತ್ತದೆ ಎಂದು ಸೂ. ಭಾ. ೨-೩-೨೯ ರಲ್ಲಿ ನಿರ್ಣಯಿಸಿದೆ. ಮಾಂ. ಕಾ. ಭಾ. ೩-೯ ನ್ನೂ ನೋಡಿ.

2. ಪುರುಷನಿಗೆ ಮೋಕ್ಷವನ್ನುಂಟುಮಾಡುವದಕ್ಕಾಗಿ ಪ್ರಧಾನವು ಮಹದಾದಿಗಳ ರೂಪದಿಂದ ಪರಿಣಮಿಸುತ್ತದೆ ಎಂಬುದು ಸಾಂಖ್ಯಸಿದ್ಧಾಂತ. (ಸಾಂ. ಕಾ. ೫೬-೫೮) ಈ ಸಿದ್ಧಾಂತದ ವಿವರವನ್ನು ಸಾಂಖ್ಯಕಾರಿಕಾ, ತತ್ತ್ವಸಮಾಸ-ಈ ಗ್ರಂಥಗಳಿಂದ ತಿಳಿದುಕೊಳ್ಳಬೇಕು. ಸೂ. ಭಾ. ೨೨-೧ ರಿಂದ ೧೦ ರ ವರೆಗಿನ ಭಾಗದಲ್ಲಿ ಇವನ್ನು ಖಂಡಿಸಿದೆ.

(ಸೃಷ್ಟಿಮಾಡುವವನೆಂದು)[1] ಪ್ರಮಾಣದಿಂದ[2] ಹೊಂದುತ್ತಿರುವಾಗ (ಹೀಗೇಕೆ ಒಪ್ಪಬೇಕು)? ಇದಲ್ಲದೆ (ನಿಮ್ಮ ಮತದಲ್ಲಿ) ಆತ್ಮನು ಒಬ್ಬನೇ ಆಗಿರುವದರಿಂದ ಅವನಿಗೆ (ಸೃಷ್ಟಿಯನ್ನು) ಮಾಡುವದಕ್ಕೆ ಸಾಧನವಿರುವದಿಲ್ಲ.[3] ಮತ್ತು ಆತ್ಮನು ತನಗೆ ತಾನೇ ಅನರ್ಥವನ್ನುಂಟುಮಾಡಿಕೊಳ್ಳಲೂ ಆರನು; ಜ್ಞಾನವುಳ್ಳವನಾಗಿ ಬುದ್ಧಿಪೂರ್ವಕವಾಗಿ ಕೆಲಸಮಾಡುವವನು ತನಗೆ ತಾನೇ ಅನರ್ಥವನ್ನುಂಟುಮಾಡಿಕೊಳ್ಳಲಾರನಲ್ಲವೆ?[4] ಆದ್ದರಿಂದ ಪುರುಷಾರ್ಥವೆಂಬ ಪ್ರಯೋಜನಕ್ಕಾಗಿ ಆಲೋಚನೆ ಮಾಡಿಕೊಂಡು ನಡೆಯುತ್ತಿದೆಯೋ ಎಂಬಂತೆ ಗೊತ್ತಾದ ಕ್ರಮದಲ್ಲಿ ಪ್ರವರ್ತಿಸುತ್ತಿರುವದರಿಂದ ಅಚೇತನವಾದ ಪ್ರಧಾನವನ್ನು ಚೇತನದಂತೆ (ಇಟ್ಟುಕೊಂಡು) ಉಪಚಾರಕ್ಕಾಗಿ "ಅವನು ನೋಡಿದನು" ಎಂದು ಮುಂತಾಗಿ (ಶ್ರುತಿಯಲ್ಲಿ) ಹೇಳಿದೆ[5] (ಎಂದು ಒಪ್ಪಬೇಕು). ಅರಸನಿಗಾಗಿ ಎಲ್ಲಾ ಕೆಲಸವನ್ನೂ ಮಾಡುತ್ತಿರುವ ಅಧಿಕಾರಿಯನ್ನೇ ಹೇಗೆ ಅರಸನೆನ್ನುವರೋ ಅದರಂತೆಯೇ ಈ (ಪ್ರಯೋಗವನ್ನೂ) ಅರಿಯಬೇಕು.

(ಭಾಷ್ಯ)

೧೦೨. ನ। ಆತ್ಮನೋ ಭೋಕ್ತೃತ್ವವತ್ ಕರ್ತೃತ್ವೋಪಪತ್ತೇಃ। ಯಥಾ ಸಾಙ್ಖ್ಯಸ್ಯ ಚಿನ್ಮಾತ್ರಸ್ಯ ಅಪರಿಣಾಮಿನೋಽಪಿ ಆತ್ಮನೋ ಭೋಕ್ತೃತ್ವಮ್, ತದ್ವತ್ ವೇದವಾದಿನಾಮ್ ಈಕ್ಷಾದಿಪೂರ್ವಕಂ ಜಗತ್ಕರ್ತೃತ್ವಮ್ ಉಪಪನ್ನಂ ಶ್ರುತಿಪ್ರಾಮಾಣ್ಯಾತ್ ॥

---

1. ಪರಮಾಣುಗಳು ಈಶ್ವರೇಚ್ಛೆಯಿಂದ ಜಗತ್ತಿಗೆ ಕಾರಣವಾಗುವವೆಂಬುದು ವೈಶೇಷಿಕರಮತ. ಇದನ್ನು ಸೂ. ಭಾ. ೨-೨-೧೨ ರಿಂದ ೧೭ ರ ವರೆಗಿನ ಗ್ರಂಥಭಾಗದಲ್ಲಿ ಖಂಡಿಸಿದೆ.

2. ಅನುಮಾನಪ್ರಮಾಣದಿಂದ ಎಂದರ್ಥ. ಸಾಂಖ್ಯರಿಗೂ, ವೈಶೇಷಿಕರಿಗೂ ಅನುಮಾನವೇ ಮುಖ್ಯಪ್ರಮಾಣವು. ತರ್ಕಶುದ್ಧವಾದ ಮತವನ್ನು ಬಿಟ್ಟು ತರ್ಕವಿರುದ್ಧವಾದ ವೇದಾಂತವನ್ನೇಕೆ ಒಪ್ಪಬೇಕು?-ಎಂದು ಆಕ್ಷೇಪ.

3. ಈ ಪೂರ್ವಪಕ್ಷವನ್ನೂ ಇದರ ಸಮಾಧಾನವನ್ನೂ ಸೂ. ಭಾ. ೨-೧-೨೪, ೨೫ ರಲ್ಲಿ ನೋಡಿ.

4. ಈ ಪೂರ್ವಪಕ್ಷವನ್ನೂ ಇದರ ಸಮಾಧಾನವನ್ನೂ ಸೂ. ಭಾ. ೨-೧-೨೧ ರಿಂದ ೨೩ ರ ವರೆಗಿನ ಗ್ರಂಥದಲ್ಲಿ ನೋಡಿ.

5. ಈಕ್ಷಣವೆಂಬುದು ಮುಖ್ಯಾರ್ಥದಲ್ಲಿ ಹೊಂದುವದಿಲ್ಲವಾದ್ದರಿಂದ ಗೌಣಾರ್ಥದಲ್ಲಿ ಅದನ್ನು ಪ್ರಧಾನಕ್ಕೆ ಹೊಂದಿಸಿಕೊಳ್ಳಬೇಕೆಂದು ಭಾವ. ಸೂ. ಭಾ. ೧-೧-೫ ರಿಂದ ೧೧ ರ ವರೆಗಿನ ಗ್ರಂಥದಲ್ಲಿ ಈ ಪೂರ್ವಪಕ್ಷಸಿದ್ಧಾಂತಗಳ ವಿವರವನ್ನು ಕಾಣಬಹುದು. ಇಲ್ಲಿ ಮುಖ್ಯವಾದ ಪೂರ್ವಪಕ್ಷವು ಸಾಂಖ್ಯನದು; ಇದನ್ನು ವೈಶೇಷಿಕಮತಕ್ಕಾದರೂ ಹೊಂದಿಸಿಕೊಳ್ಳಬಹುದೆಂಬುದನ್ನು ಸೂಚನಾರೂಪವಾಗಿ ಹೇಳಿದೆ.

(ಭಾಷ್ಯಾರ್ಥ)

(ಸಿದ್ಧಾಂತಿ):-ಹಾಗಲ್ಲ. ಏಕೆಂದರೆ ಆತ್ಮನಿಗೆ ಭೋಕ್ತೃತ್ವದಂತೆ ಕರ್ತೃತ್ವವೂ ಇರಬಹುದಾಗಿದೆ. ಬರಿಯ ಚೈತನ್ಯವಾಗಿಯೇ ಇರುವ ಯಾವ ಪರಿಣಾಮವನ್ನೂ ಹೊಂದುವ ಸ್ವಭಾವವಿಲ್ಲದ ಆತ್ಮನಿಗೆ ಭೋಕ್ತೃತ್ವವು (ಇರಬಹುದೆಂದು) ಹೇಗೆ ಸಾಂಖ್ಯನ (ಮತದಲ್ಲಿ ಒಪ್ಪಿದೆಯೋ) ಅದರಂತೆಯೇ ವೇದವಾದಿಗಳ ಪಕ್ಷದಲ್ಲಿ (ಆತ್ಮನು) ಆಲೋಚನೆಮಾಡುವದೇ ಮುಂತಾದವುಗಳಿಂದಕೂಡಿ ಜಗತ್ತನ್ನು ಸೃಷ್ಟಿ ಮಾಡುತ್ತಾನೆಂಬುದೂ ಶ್ರುತಿಪ್ರಾಮಾಣ್ಯದಿಂದ ಹೊಂದುತ್ತದೆ.

## ಆತ್ಮನಲ್ಲಿರುವ ಕರ್ತೃತ್ವಭೋಕ್ತೃತ್ವಗಳು ಅವಿದ್ಯಕ

(ಭಾಷ್ಯ)

೧೦೩. ತತ್ತ್ವಾನ್ತರಪರಿಣಾಮಃ ಆತ್ಮನೋಽನಿತ್ಯತ್ವಾಶುದ್ಧತ್ವಾನೇಕತ್ವ ನಿಮಿತ್ತಮ್, ನ ಚಿನ್ಮಾತ್ರಸ್ವರೂಪವಿಕ್ರಿಯಾ । ಅತಃ ಪುರುಷಸ್ಯ ಸ್ವಾತ್ಮನ್ಯೇವ ಭೋಕ್ತೃತ್ವೇ ಚಿನ್ಮಾತ್ರಸ್ವರೂಪವಿಕ್ರಿಯಾ ನ ದೋಷಾಯ । ಭವತಾಂ ಪುನರ್ವೇದ ವಾದಿನಾಂ ಸೃಷ್ಟಿಕರ್ತೃತ್ವೇ ತತ್ತ್ವಾನ್ತರಪರಿಣಾಮ ಏವ ಇತಿ ಆತ್ಮನೋಽನಿತ್ಯತ್ವಾದಿ ಸರ್ವದೋಷಪ್ರಸಙ್ಗಃ ಇತಿ ಚೇತ್ । ನ । ಏಕಸ್ಯಾಪ್ಯಾತ್ಮನಃ ಅವಿದ್ಯಾವಿಷಯ ನಾಮರೂಪೋಪಾಧ್ಯನುಪಾಧಿಕೃತವಿಶೇಷಾಭ್ಯುಪಗಮಾತ್ । ಅವಿದ್ಯಾಕೃತನಾಮ ರೂಪೋಪಾಧಿನಿಮಿತ್ತೋ ಹಿ ವಿಶೇಷಃ ಅಭ್ಯುಪಗಮ್ಯತೇ ಆತ್ಮನೋ ಬನ್ಧಮೋಕ್ಷಾದಿ ಶಾಸ್ತ್ರಕೃತಸಂವ್ಯವಹಾರಾಯ । ಪರಮಾರ್ಥತೋಽನುಪಾಧಿಕೃತಂ ಚ ತತ್ತ್ವಮ್ ಏಕಮೇವಾದ್ವಿತೀಯಮ್ ಅಹೇಯಮನುಪಾದೇಯಂ[1] ಸರ್ವತಾರ್ಕಿಕಬುದ್ಧ್ಯನವ ಗಾಹ್ಯಂ[2] ಹ್ಯಜಮುಭಯಂ[3] ಶಿವಮ್ ಇಷ್ಯತೇ । ನ ತತ್ರ ಕರ್ತೃತ್ವಂ ಭೋಕ್ತೃತ್ವಂ ವಾ ಕ್ರಿಯಾಕಾರಕಫಲಂ ವಾ ಅಸ್ತಿ[4] । ಅದ್ವೈತತ್ವಾತ್ ಸರ್ವಭಾವಾನಾಮ್ ॥

(ಭಾಷ್ಯಾರ್ಥ)

(ಸಾಂಖ್ಯ):-ಆತ್ಮನು ಬೇರೊಂದು ತತ್ತ್ವವಾಗಿಯೇ ಪರಿಣಮಿಸುವದು (ಅವನು) ಅನಿತ್ಯನು, ಅಶುದ್ಧನು, ಅನೇಕನು-ಎಂಬ (ದೋಷಗಳಿಗೆ) ಕಾರಣವಾಗುವದೇ ಹೊರತು ಚಿನ್ಮಾತ್ರಸ್ವರೂಪದಲ್ಲಿ ಆಗುವ ವಿಕಾರವು (ಹಾಗೆ ಯಾವ ದೋಷಕ್ಕೂ)

1. ಇದು ನಾವು ಕಲ್ಪಿಸಿರುವ ಪಾಠ, ಇದರ ಅನುವಾದವನ್ನೂ, ಟಿಪ್ಪಣಿಯನ್ನೂ ನೋಡಿ.

2. "ಬುದ್ಧ್ಯನವಗಮ್ಯಮ್" ವಾ॥.

3. "ಅಜಮ್" ಎಂಬುದು ಆ॥ ಪಾಠದಲ್ಲಿಲ್ಲ.

4. "ಫಲಂ ಚ ಸ್ಯಾತ್" ಆ॥.

ಕಾರಣವಾಗುವದಿಲ್ಲ.[1] ಆದ್ದರಿಂದ ಪುರುಷನಿಗೆ ಭೋಕ್ತೃತ್ವವನ್ನು (ಹೊಂದುವದ)ರಲ್ಲಿ ತನ್ನಲ್ಲಿಯೇ ಚಿನ್ಮಾತ್ರಸ್ವರೂಪದಲ್ಲಾಗುವ ವಿಕಾರವು ಯಾವ ದೋಷವನ್ನೂ (ಮಾಡ)ಲಾರದು. ಆದರೆ ವೇದವಾದಿಗಳಾದ ನಿಮ್ಮ ಪಕ್ಷದಲ್ಲಿ[2] ಆತ್ಮನು ಸೃಷ್ಟಿಕರ್ತನಾದರೆ ಬೇರೊಂದು ತತ್ತ್ವವೇ ಆಗಿ ಪರಿಣಮಿಸಬೇಕಾಗುತ್ತದೆಯಾದ್ದರಿಂದ ಆತ್ಮನಿಗೆ ಅನಿತ್ಯತ್ವವೇ ಮುಂತಾದ ಎಲ್ಲಾ ದೋಷಗಳೂ ಬಂದೊದಗುವವಲ್ಲ !

(ಸಿದ್ಧಾಂತಿ) :–ಹಾಗಲ್ಲ. ಏಕೆಂದರೆ ಆತ್ಮನು ಒಬ್ಬನೇ[3] ಆಗಿದ್ದರೂ ಅವಿದ್ಯೆಗೆ ಗೋಚರವಾಗಿರುವ[4] ನಾಮರೂಪಗಳೆಂಬ ಉಪಾಧಿಯಿರುವದು, ಇಲ್ಲದಿರುವದು-ಎಂಬ ವಿಶೇಷವನ್ನು (ನಾವು) ಒಪ್ಪುತ್ತೇವೆ (ಇದರ ವಿವರ) :–ಆತ್ಮನಿಗೆ ಬಂಧ, ಮೋಕ್ಷ-ಮುಂತಾದ ಶಾಸ್ತ್ರಕೃತವ್ಯವಹಾರಕ್ಕಾಗಿ[5] ಅವಿದ್ಯೆಯಿಂದಾಗಿರುವ ನಾಮರೂಪಗಳೆಂಬ ಉಪಾಧಿಯನಿಮಿತ್ತದಿಂದಾಗುವ ವಿಶೇಷವುಂಟೆಂದು (ನಾವು) ಒಪ್ಪಿರುತ್ತೇವೆ. ನಿಜವಾಗಿ ಯಾವ ಉಪಾಧಿಯೂ ಇಲ್ಲದ ತನಗೆರಡನೆಯದಿಲ್ಲದ ಒಂದೇ ಒಂದಾದ, (ಬಿಡುವದಕ್ಕಾಗಲಿ) ತೆಗೆದುಕೊಳ್ಳುವದಕ್ಕಾಗಲಿ (ಬಾರದ)[6] ಯಾವ ತಾರ್ಕಿಕರ ಬುದ್ಧಿಗೂ ನಿಲುಕದ,[7] ಹುಟ್ಟಿಲ್ಲದ ಅಂಜಿಕೆಯಿಲ್ಲದ ಮಂಗಲಕರವಾದ ತತ್ತ್ವವು ಎಂದು ಅಭಿಪ್ರಾಯಪಡುತ್ತೇವೆ.

---

1. ಪ್ರಧಾನವು ಮಹತ್ತು, ಅಹಂಕಾರ-ಮುಂತಾದ ಬೇರೆಬೇರೆಯ ತತ್ತ್ವಗಳೇ ಆಗಿ ಬೇರ್ಪಡುವಂತೆ ಪುರುಷನು ಭೋಕ್ತೃವಾದಾಗ ಮತ್ತೊಂದು ತತ್ತ್ವವೇ ಆಗಿಬಿಡುವನೆಂದು ನಾವು ಹೇಳಿದ್ದರೆ ಅನಿತ್ಯತ್ವಾದಿದೋಷಗಳು ಬರುತ್ತಿದ್ದವು. ಆದರೆ ಹಾಗೇನೂ ಹೇಳುವದಿಲ್ಲ; ಅವನು ಇದ್ದಂತೆಯೇ ಭೋಕ್ತೃವಾಗುವನೆನ್ನುತ್ತೇವೆ,–ಎಂದರ್ಥ.

2. ಸಾಂಖ್ಯರೂ ವೇದವನ್ನು ಪ್ರಮಾಣವಾಗಿ ಒಪ್ಪುತ್ತಾರಾದರೂ ತರ್ಕಕ್ಕೆ ಹೆಚ್ಚು ಬೆಲೆಯನ್ನು ಕೊಡುತ್ತಾರೆ. ವೇದಾಂತಿಗಳು ಆತ್ಮಾದಿಗಳ ವಿಷಯಕ್ಕೆ ವೇದವೇ ಮುಖ್ಯಪ್ರಮಾಣವೆನ್ನುವರು.

3. ಅದ್ವಿತೀಯನಾಗಿ ನಿರ್ವಿಶೇಷನಾಗಿದ್ದರೂ,

4. ಅವಿದ್ಯಾವಿಷಯ, ಅವಿದ್ಯಾಕೃತ, ಅವಿದ್ಯಾಲಕ್ಷಣ-ಎಂಬ ಮಾತುಗಳೆಲ್ಲಾ ಒಂದೇ ಅರ್ಥದವು ; ನಿಜವಾಗಿಲ್ಲದಿದ್ದರೂ ತೋರುತ್ತಿರುವ ಎಂದು ಅರ್ಥ.

5. ಶಾಸ್ತ್ರವು ಬೋಧನೆಗಾಗಿ ಈ ಅವಿದ್ಯಾವ್ಯವಹಾರವನ್ನು ಇಟ್ಟುಕೊಂಡಿರುವದೇ ಹೊರತು ಅದು ಪರಮಾರ್ಥವೆಂದೇನೂ ಹೇಳುವದಿಲ್ಲ. ಮಾಂ. ಕಾ. ಭಾ. ೧–೧೮, ೨–೩೨

6. " ಅಹೇಯಮ್ ಅನುಪಾದೇಯಮ್ " ಎಂಬ ಪಾಠವು ಬರೆದವರ ಕೈತಪ್ಪಿನಿಂದ " ಉಪಾದೇಯಮ್ '' ಎಂದಾಗಿರಬೇಕೆಂದು ತೋರುತ್ತದೆ. ಬಿಡುವದಕ್ಕೂ ತೆಗೆದುಕೊಳ್ಳುವದಕ್ಕೂ ಬಾರದ ಎಂಬ ವಿಶೇಷಣವು ಪ್ರಕೃತಕ್ಕೂ ಹೊಂದುತ್ತದೆ.

7. ಕ. ೧–೨–೯.

ಅದರಲ್ಲಿ[1] ಕರ್ತೃತ್ವವಾಗಲಿ ಭೋಕ್ತೃತ್ವವಾಗಲಿ ಕ್ರಿಯಾಕಾರಕಫಲಗಳಾಗಲಿ ಇರುವದಿಲ್ಲ ; ಏಕೆಂದರೆ ಎಲ್ಲಾ ಭಾವಗಳೂ ಅದ್ವೈತವಾಗಿರುತ್ತವೆ[2].

## ಸಾಂಖ್ಯಾದಿಮತಗಳ ಖಂಡನೆಯ ಉದ್ದೇಶ

(ಭಾಷ್ಯ)

೧೦೪. ಸಾಙ್ಖ್ಯಾಸ್ತು ಅವಿದ್ಯಾಧ್ಯಾರೋಪಿತಮೇವ ಪುರುಷೇ ಕರ್ತೃತ್ವಂ ಕ್ರಿಯಾಕಾರಕಫಲಂ ಚ ಇತಿ ಕಲ್ಪಯಿತ್ವಾ ಆಗಮಬಾಹ್ಯತ್ವಾತ್ ಪುನಸ್ತತಸ್ತ್ರಸ್ಯನ್ತಃ ಪರಮಾರ್ಥತ ಏವ ಭೋಕ್ತೃತ್ವಂ ಪುರುಷಸ್ಯ ಇಚ್ಛನ್ತಿ । ತತ್ತ್ವಾನ್ತರಂ ಚ ಪ್ರಧಾನಂ ಪುರುಷಾತ್[3] ಪರಮಾರ್ಥವಸ್ತುಭೂತಮೇವ ಕಲ್ಪಯನ್ತಃ, ಅನ್ಯತಾರ್ಕಿಕಬುದ್ಧಿ ವಿಷಯಾಃ ಸನ್ತೋ ವಿಹನ್ಯನ್ತೇ । ತಥಾ ಇತರೇ ತಾರ್ಕಿಕಾಃ ಸಾಙ್ಖ್ಯೈಃ ಇತಿ । ಏವಂ ಪರಸ್ಪರವಿರುದ್ಧಾರ್ಥಕಲ್ಪನಾತಃ ಆಮಿಷಾರ್ಥಿನ ಇವ ಪ್ರಾಣಿನಃ ಅನ್ಯೋನ್ಯ ವಿರುಧ್ಯಮಾನಾರ್ಥದರ್ಶಿತ್ವಾತ್ ಪರಮಾರ್ಥತತ್ತ್ವಾದ್ ದೂರಮೇವ ಅಪಕೃಷ್ಯನ್ತೇ । ಅತಸ್ತನ್ಮತಮ್ ಅನಾದೃತ್ಯ ವೇದಾನ್ತಾರ್ಥತತ್ತ್ವಮ್ ಏಕತ್ವದರ್ಶನಂ ಪ್ರತಿ ಆದರವನ್ತೋ ಮುಮುಕ್ಷವಃ ಸ್ಯುಃ ಇತಿ ತಾರ್ಕಿಕಮತದೋಷಪ್ರದರ್ಶನಂ ಕಿಂಚಿದುಚ್ಯತೇಽಸ್ಮಾಭಿಃ, ನ ತು ತಾರ್ಕಿಕವತ್ ತಾತ್ಪರ್ಯೇಣ । ತಥಾ ಏತದತ್ರೋಕ್ತಮ್– "ವಿವದತ್ಸ್ವೇವ ನಿಕ್ಷಿಪ್ಯ ವಿರೋಧೋದ್ಭವಕಾರಣಮ್ । ತೈಃ ಸಂರಕ್ಷಿತಸದ್ಬುದ್ಧಿಃ ಸುಖಂ ನಿರ್ವಾತಿ ವೇದವಿತ್ ॥" (?)

(ಭಾಷ್ಯಾರ್ಥ)

ಆದರೆ ಸಾಂಖ್ಯರು ಕರ್ತೃತ್ವವೂ ಕ್ರಿಯಾಕಾರಕಫಲಗಳೂ ಅವಿದ್ಯೆಯಿಂದ[4] ಪುರುಷನಲ್ಲಿ ಆರೋಪಿತವಾಗಿಯೇ ಇರುವವೆಂದು ಕಲ್ಪಿಸಿದಮೇಲೆಯೂ **ಆಗಮಬಾಹ್ಯರಾದ್ದರಿಂದ**[5] ಅದಕ್ಕೆ ಅಂಜಿಕೊಂಡು[6] ಪುರುಷನಿಗೆ ಭೋಕ್ತೃತ್ವವು ನಿಜ

1. ಉಪಾಧಿರಹಿತವಾದ ಪರಮಾರ್ಥದಲ್ಲಿ.

2. ಅವಿದ್ಯಾಕಲ್ಪಿತವಾದ ಭಾವಗಳೂ ನಿಜವಾಗಿ ಅದ್ವೈತದಲ್ಲಿಯೇ ಕಲ್ಪಿತವಾಗಿರುತ್ತವೆ. ಹಾಗೆ ಕಲ್ಪಿತವಾಗಿರುವ ಭಾವಗಳಿಂದಲೇ ವ್ಯವಹಾರವು ಸಾಗುತ್ತಿದೆ. ಮಾಂ. ಕಾ. ಭಾ. ೨-೩೩ ; ಬೃ. ಭಾ. ೩-೫-೧.

3. ಇದಾದ ಬಳಿಕ "ಬಾಹ್ಯಮ್" ಎಂದು ವಾ॥ ಪಾಠದಲ್ಲಿ ಹೆಚ್ಚಾಗಿದೆ.

4. ಪ್ರಕೃತಿಪುರುಷರ ವಿವೇಕವಿಲ್ಲದ್ದರಿಂದ ಎಂದರ್ಥ. ಪ್ರಕೃತಿಯೂ ಅವಿದ್ಯಾಕಲ್ಪಿತವೆಂಬ ವೇದಾಂತಿಗಳ ವಾದವನ್ನು ಸಾಂಖ್ಯರು ಒಪ್ಪುವದಿಲ್ಲ.

5. ವೇದಕ್ಕೂ ವೇದಾರ್ಥವನ್ನು ಬಲ್ಲವರ ಸಂಪ್ರದಾಯಗತವಾದ ಉಪದೇಶಕ್ಕೂ ಹೊರತಾಗಿ ತರ್ಕವನ್ನೇ ಮುಖ್ಯವೆಂದು ನಂಬಿರುವದರಿಂದ.

6. ಎಲ್ಲವೂ ಅವಿದ್ಯಾಕೃತವೆಂದರೆ ಪ್ರತ್ಯಕ್ಷಾನುಮಾನಗಳಿಗೆ ವಿರೋಧವಾದೀತೆಂದು ಹೆದರಿ. ಸಾಂಖ್ಯರು ಕೆಲವು ಭಾಗದಲ್ಲಿ ವೇದಕ್ಕೆ ಹೊಂದಿಕೆಯಾಗಿ ವಾದಿಸಿದರೂ ಮಿಕ್ಕ ಅಂಶಗಳಲ್ಲಿ ವೇದವಿರುದ್ಧವಾಗಿಯೇ ಹೇಳುತ್ತಿರುವರೆಂದು ಇದರಿಂದ ಸೂಚಿಸಿದಂತೆ ಆಯಿತು.

ವಾಗಿ ಇರುವದೆಂದು ಅಭಿಪ್ರಾಯಪಡುತ್ತಿರುವರು. ಪ್ರಧಾನವೆಂಬುದು ಪುರುಷನಿಗಿಂತ ಬೇರೆಯ ತತ್ತ್ವವೇ, ಪರಮಾರ್ಥವಾಗಿರುವ ವಸ್ತುವೇ ಎಂದು-ಕಲ್ಪಿಸಿಕೊಂಡು ಮಿಕ್ಕ ತಾರ್ಕಿಕರುಗಳು ಮಾಡಿಕೊಂಡಿರುವ ಬುದ್ಧಿಗೆ ಸಿಕ್ಕಿಬಿದ್ದು ಪೆಟ್ಟುತಿನ್ನುವರು.[1] ಹೀಗೆಯೇ ಉಳಿದ ತಾರ್ಕಿಕರೂ ಸಾಂಖ್ಯರಿಂದ (ಪೆಟ್ಟುತಿನ್ನುವರು)-ಇತ್ಯಾದಿ. ಹೀಗೆ ಒಬ್ಬರಿಗೊಬ್ಬರು ವಿರುದ್ಧವಾಗಿರುವ ವಿಷಯುಗಳನ್ನು ಕಲ್ಪಿಸುತ್ತಿರುವದರಿಂದ ಮಾಂಸ ವನ್ನು ಬಯಸುತ್ತಿರುವ ಪ್ರಾಣಿಗಳಂತೆ[2] ಒಬ್ಬರಿಗೆ ವಿರುದ್ಧವಾದ ಅರ್ಥವನ್ನು ಮತ್ತೊಬ್ಬರು ಒಪ್ಪುತ್ತಿರುವದರಿಂದ[3] ಪರಮಾರ್ಥತತ್ತ್ವಕ್ಕೆ ದೂರವಾಗಿಯೇ ಹೋಗು ತ್ತಿರುವರು. **ಆದ್ದರಿಂದ ಅವರ ಮತವನ್ನು ಅಸಡ್ಡೆಮಾಡಿ ಉಪನಿಷತ್ತು ಗಳಲ್ಲಿರುವ ವಿಷಯುದ ತತ್ತ್ವವಾದ ಏಕತ್ವದರ್ಶನದಲ್ಲಿ ಮುಮುಕ್ಷುಗಳು ಆದರವುಳ್ಳವರಾಗಲಿ ಎಂದು ತಾರ್ಕಿಕರ ಮತದಲ್ಲಿ ದೋಷವನ್ನು ಸ್ವಲ್ಪ ಮಟ್ಟಿಗೆ ನಾವು ಹೇಳುತ್ತಿರುವೆವೇ ಹೊರತು ತಾರ್ಕಿಕರಂತೆ ಅದೇ ಬೇಕಾಗಿ (ದೂಷಣವನ್ನು ಹೇಳುತ್ತಿಲ್ಲ).** ಹೀಗೆಂದು ಈ (ಶ್ಲೋಕ)ದಲ್ಲಿ ಹೇಳಿರುತ್ತದೆ:

ವಿವದತ್ಸ್ವೇವ ನಿಕ್ಷಿಪ್ಯ ವಿರೋಧೋದ್ಭವಕಾರಣಮ್ ॥
ತೈಃ ಸಂರಕ್ಷಿತಸದ್ಬುದ್ಧಿಃ ಸುಖಂ ನಿರ್ವಾತಿ ವೇದವಿತ್ ॥[4]

"ವೇದಾರ್ಥವನ್ನು ಬಲ್ಲಾತನು ಒಬ್ಬರಿಗೊಬ್ಬರು ವಿರುದ್ಧವಾಗಿ ವಾದ ಮಾಡುತ್ತಿರುವವರಲ್ಲಿಯೇ ವಿರೋಧವುಂಟಾಗುವ ಕಾರಣವನ್ನು ಬಿಟ್ಟು ಅವರಿಂದ ಸದ್ಬುದ್ಧಿಯನ್ನು ಕಾಪಾಡಿಕೊಂಡು ಸುಲಭವಾಗಿ ಆನಂದವನ್ನು ಹೊಂದುತ್ತಾನೆ ॥[5]

---

1. ಪ್ರತಿವಾದಿಗಳ ತರ್ಕವನ್ನು ಎದುರಿಸಲಾರದೆ ವಾದಜಿತರಾಗುವರು.

2. ಮಾಂಸವನ್ನು ಬಯಸುವ ನಾಯಿ, ನರಿ, ಹದ್ದು-ಮುಂತಾದ ಪ್ರಾಣಿಗಳು ತಮ್ಮ ತಮ್ಮ ಕಡೆಗೆ ಅದನ್ನು ಎಳೆದುಕೊಳ್ಳುತ್ತಲೂ ತಮ್ಮ ಅಭೀಷ್ಟಕ್ಕೆ ವಿರುದ್ಧವಾಗಿ ಎಳೆಯು ತ್ತಿರುವ ಬೇರೆಯ ಪ್ರಾಣಿಗಳೊಡನೆ ಕಚ್ಚಾಡುತ್ತಲೂ ಇರುವವು. ವೇದಾಂತಿಗಳಲ್ಲದ ವಾದಿ ಗಳೂ ಹೀಗೆಯೇ ಒಬ್ಬರೊಡನೊಬ್ಬರು ಕಾದುತ್ತಿರುವರು ಎಂದರ್ಥ.

3. ತಾರ್ಕಿಕರು ದ್ವೈತಿಗಳಾದ್ದರಿಂದಲೂ ಅವರ ಮತವು ಪರಸ್ಪರವಿರುದ್ಧವಾಗಿರು ವದರಿಂದಲೂ ಒಬ್ಬರನ್ನೊಬ್ಬರು ತಾತ್ಪರ್ಯದಿಂದ ಖಂಡಿಸಿದಲ್ಲದೆ ತಮ್ಮತಮ್ಮ ಸಿದ್ಧಾಂತ ವನ್ನು ತಿಳಿಸಿಕೊಡಲಾರರು. ಉದಾಹರಣೆಗೆ ಸಾಂಖ್ಯರು ಭೋಕ್ತೃತ್ವವು ಪರಮಾರ್ಥ ವೆಂದರೆ ಕರ್ತೃತ್ವವೂ ಪರಮಾರ್ಥವೇಕಲ್ಲ?-ಎಂಬ ತಾರ್ಕಿಕರಿಗೆ ಉತ್ತರವನ್ನು ಕೊಡಲಾರದೆ ಇರುವರು. ಪ್ರಧಾನವು ಆತ್ಮನಿಗಿಂತ ಬೇರೆಯಾಗಿದೆ, ಸತ್ಯವಾಗಿದೆ ಎಂದರೆ ಪರಮಾಣುಗಳೂ ಬೇರೆಯಾಗಿವೆ, ಸತ್ಯವಾಗಿವೆ-ಎಂಬವರಿಗೆ ವಿರುದ್ಧವಾಗಿ ನುಡಿದವರಾಗುವರು. ಇತ್ಯಾದಿ. ಆದರೆ ಅದ್ವೈತವು ಸರ್ವಾನನ್ಯತ್ವವನ್ನು ಹೇಳುವದರಿಂದ ಯಾರಿಗೂ ವಿರುದ್ಧವಲ್ಲ. ಅದನ್ನು ಅನುಭವದಿಂದ ತೋರಿಸಿಕೊಡಲೂ ಬಹುದು.

4. ಇದು ಯಾರ ಶ್ಲೋಕವೋ ತಿಳಿಯದು. ಇದು ಆಚಾರ್ಯರೇ ಬರೆದದ್ದಾದರೂ ಇರಬಹುದು.

5. ಇದು ಹೇಗೆಂಬುದು ಮಾಂ. ಕಾ. ಭಾ. ಅಲಾತಶಾಂತಿಪ್ರಕರಣದಲ್ಲಿ ಸ್ಪಷ್ಟ.

## ಆತ್ಮನ ಕರ್ತೃತ್ವಭೋಕ್ತೃತ್ವಗಳೆರಡೂ ಅಪರಮಾರ್ಥ

(ಭಾಷ್ಯ)

೧೦೫. ಕಿಂಚ ಭೋಕ್ತೃತ್ವಕರ್ತೃತ್ವಯೋಃ ವಿಕ್ರಿಯಯೋಃ ವಿಶೇಷಾನುಪಪತ್ತಿಃ। ಕಾ ನಾಮ ಅಸೌ ಕರ್ತೃತ್ವಾತ್ ಜಾತ್ಯನ್ತರಭೂತಾ ಭೋಕ್ತೃತ್ವವಿಶಿಷ್ಟಾ ವಿಕ್ರಿಯಾ ಯತೋ ಭೋಕ್ತೈವ ಪುರುಷಃ ಕಲ್ಪ್ಯತೇ ನ ಕರ್ತಾ। ಪ್ರಧಾನಂ ತು ಕರ್ತ್ರೇವ ನ ಭೋಕ್ತೃ ಇತಿ ? ನನು ಉಕ್ತಮ್ ಪುರುಷಶ್ಚಿನ್ಮಾತ್ರ ಏವ, ಸ ಚ ಸ್ವಾತ್ಮಸ್ಥೋ ವಿಕ್ರಿಯತೇ ಭುಞ್ಜಾನಃ। ನ ತತ್ತ್ವಾನ್ತರಪರಿಣಾಮೇನ। ಪ್ರಧಾನಂ ತು ತತ್ತ್ವಾನ್ತರಪರಿಣಾಮೇನ ವಿಕ್ರಿಯತೇ। ಅತಃ ಅನೇಕಮ್ ಅಶುದ್ಧಮ್, ಅಚೇತನಂ ಚ ಇತ್ಯಾದಿಧರ್ಮವತ್। ತದ್ವಿಪರೀತಃ ಪುರುಷಃ। ನಾಸೌ ವಿಶೇಷಃ। ವಾಙ್ಮಾತ್ರತ್ವಾತ್। ಪ್ರಾಗ್ ಭೋಗೋತ್ಪತ್ತೇಃ ಕೇವಲಚಿನ್ಮಾತ್ರಸ್ಯ ಭೋಕ್ತೃತ್ವಂ ವಿಶೇಷೋ ಭೋಗೋತ್ಪತ್ತಿಕಾಲೇ ಚೇತ್ ಜಾಯತೇ ನಿವೃತ್ತೇ ಚ ಭೋಗೇ ಪುನಸ್ತದ್ವಿಶೇಷಾತ್ ಅಪೇತಶ್ಚಿನ್ಮಾತ್ರ ಏವ ಭವತಿ ಇತಿ[1] ಚೇತ್ ಮಹದಾದ್ಯಾಕಾರೇಣ ಚ ಪರಿಣಮ್ಯ ತತೋಽಪೇತ್ಯ ಪುನಃ ಪ್ರಧಾನಂ ಸ್ವರೂಪೇಣ ಅವತಿಷ್ಠತೇ ಇತ್ಯಸ್ಯಾಂ ಕಲ್ಪನಾಯಾಂ ನ ಕಶ್ಚಿತ್ ವಿಶೇಷಃ ಇತಿ ವಾಙ್ಮಾತ್ರೇಣ ಪ್ರಧಾನಪುರುಷಯೋಃ ವಿಶಿಷ್ಟವಿಕ್ರಿಯಾ ಕಲ್ಪ್ಯತೇ ||

(ಭಾಷ್ಯಾರ್ಥ)

ಇನ್ನೊಂದು ಮಾತು: ಭೋಕ್ತೃತ್ವ, ಕರ್ತೃತ್ವ ಎರಡೂ ವಿಕಾರಗಳಾಗಿರುವದರಿಂದ ಇವೆರಡಕ್ಕೂ ಹೆಚ್ಚುಕಡಿಮೆ ಇರುವದಕ್ಕೆ ಕಾರಣವಿಲ್ಲ. ಪುರುಷನು ಭೋಕ್ತೃವೇ ಕರ್ತೃವಲ್ಲ, ಪ್ರಧಾನವು ಕರ್ತೃವೇ ಭೋಕ್ತೃವಲ್ಲ-ಎಂದು ಕಲ್ಪಿಸಿರುತ್ತೀರಷ್ಟೆ; ಕರ್ತೃತ್ವಕ್ಕಿಂತ ಬೇರೆಯ ಜಾತಿಯದಾಗಿರುವ ಭೋಕ್ತೃತ್ವವೆಂಬ ಆ ವಿಕಾರವಾದರೂ ಯಾವದು ?

(ಸಾಂಖ್ಯ):–ಪುರುಷನು ಬರಿಯ ಚಿದ್ರೂಪನಾಗಿರುತ್ತಾನೆ, ಅವನು ವಿಷಯವನ್ನು ಅನುಭವಿಸುವಾಗ ತನ್ನ ರೂಪದಿಂದ ತಾನು ಇದ್ದುಕೊಂಡೇ ವಿಕಾರವನ್ನು ಹೊಂದುವನೇ ಹೊರತು ಬೇರೆ ಒಂದು ತತ್ತ್ವವೇ ಆಗಿ ಪರಿಣಮಿಸಿ (ವಿಕಾರ) ವಾಗುವದಿಲ್ಲ[2] ; ಆದರೆ ಪ್ರಧಾನವು ಬೇರೊಂದು ತತ್ತ್ವವಾಗಿ ಪರಿಣಮಿಸಿಯೇ ವಿಕಾರವಾಗುತ್ತದೆ. ಆದ್ದರಿಂದ (ಅದು) ಅನೇಕವಾಗಿರುವದು, ಅಶುದ್ಧವಾಗಿರುವದು,

1. ಈ ಮಾತು ಇಲ್ಲದಿದ್ದರೂ ಆಗುತ್ತದೆ.

2. ಸ್ಫಟಿಕದ ಹತ್ತಿರ ಇಟ್ಟ ಹೂವಿನಿಂದ ಹೂವಿನ ಬಣ್ಣವು ಅದರಲ್ಲಿಯೂ ತೋರಿಕೊಂಡರೂ ಅದರ ಸ್ಫಟಿಕತ್ವವೇನೂ ಹೋಗದಿರುವಂತೆ ಆತ್ಮನ ಆತ್ಮತ್ವವೇನೂ ಹೋಗುವದಿಲ್ಲ ಎಂದು ಭಾವ.

ಅಚೇತನವಾಗಿರುವದು[1] -(ಇವೇ) ಮುಂತಾದ ಧರ್ಮಗಳುಳ್ಳದ್ದು. ಪುರುಷನು ಇದಕ್ಕೆ ವಿರುದ್ಧವಾದ ಸ್ವಭಾವವುಳ್ಳವನು. (ಇದನ್ನೆಲ್ಲ ನಾವು) ಆಗಲೇ ಹೇಳಿರುವೆವಲ್ಲ!

(ಸಿದ್ಧಾಂತಿ):–ಇದೇನೂ (ನಿಜವಾದ) ಹೆಚ್ಚುಕಡಿಮೆಯಲ್ಲ. ಏಕೆಂದರೆ (ಇದು) ಬರಿಯ ಮಾತಾಗಿದೆ. ಭೋಗವುಂಟಾಗುವ ಮುಂಚೆ ಬರಿಯ ಚಿನ್ಮಾತ್ರನಾಗಿರುವ(ಪುರುಷನಿಗೆ) ಭೋಕ್ತೃತ್ವವೆಂಬ ವಿಶೇಷವು ಭೋಗವುಂಟಾಗುವ ಕಾಲದಲ್ಲಿ ಉಂಟಾಗುವದಾದರೆ ಮತ್ತು ಭೋಗವು ಮುಗಿದಮೇಲೆ ಮತ್ತೆ ಆ ವಿಶೇಷವನ್ನು ಕಳಚಿಕೊಂಡು (ಅವನು) ಚಿನ್ಮಾತ್ರನೇ ಆಗುವದಾದರೆ, (ಆಗ) ಮಹತ್ತೇ ಮುಂತಾದವುಗಳ ರೂಪದಿಂದ ಪರಿಣಮಿಸಿದ ಪ್ರಧಾನವೂ ಆ (ಆಕಾರವನ್ನು) ಬಿಟ್ಟು ತನ್ನ ರೂಪದಿಂದಲೇ ನಿಲ್ಲುವದಾದ್ದರಿಂದ ಈ ಕಲ್ಪನೆಯಲ್ಲಿ (ಅವೆರಡಕ್ಕೂ) ಯಾವ ವಿಶೇಷವೂ ಇರುವದಿಲ್ಲ. ಆದ್ದರಿಂದ ಪ್ರಧಾನಕ್ಕೂ ಪುರುಷನಿಗೂ ಬೇರೆಬೇರೆಯ ಬಗೆಯ ವಿಕಾರ (ವಾಗುವದೆಂದು) ಕಲ್ಪಿಸಿದ್ದು ಬರಿಯ ಮಾತೇ ಆಯಿತು.

(ಭಾಷ್ಯ)

೧೧೦. ಅಥ ಭೋಗಕಾಲೇಽಪಿ ಚಿನ್ಮಾತ್ರ ಏವ ಪ್ರಾಗ್ವತ್ ಪುರುಷಃ ಇತಿ ಚೇತ್ । ನ ತರ್ಹಿ ಪರಮಾರ್ಥತೋ ಭೋಗಃ ಪುರುಷಸ್ಯ । ಭೋಗಕಾಲೇ[2] ಚಿನ್ಮಾತ್ರಸ್ಯ ವಿಕ್ರಿಯಾ ಪರಮಾರ್ಥೈವ, ತೇನ ಭೋಗಃ ಪುರುಷಸ್ಯ ಇತಿ ಚೇತ್ । ನ[3] । ಪ್ರಧಾನಸ್ಯಾಪಿ ಭೋಗಕಾಲೇ ವಿಕ್ರಿಯಾವತ್ತ್ವಾದ್ ಭೋಕ್ತೃತ್ವಪ್ರಸಙ್ಗಃ । ಚಿನ್ಮಾತ್ರಸ್ಯೈವ ವಿಕ್ರಿಯಾ ಭೋಕ್ತೃತ್ವಮ್ ಇತಿ ಚೇತ್ । ಔಷ್ಣ್ಯಾದ್ಯಸಾಧಾರಣಧರ್ಮವತಾಮ್ ಅಗ್ನ್ಯಾದೀನಾಮ್ ಅಭೋಕ್ತೃತ್ವೇ ಹೇತ್ವನುಪಪತ್ತಿಃ ॥

(ಭಾಷ್ಯಾರ್ಥ)

(ಸಾಂಖ್ಯ):–ಭೋಗಕಾಲದಲ್ಲಿಯೂ ಪುರುಷನು ಮುನ್ನಿನಂತೆ ಚಿನ್ಮಾತ್ರನೇ ಆಗಿರುತ್ತಾನಲ್ಲ!

(ಸಿದ್ಧಾಂತಿ):–ಹಾಗಾದರೆ ಪುರುಷನಿಗೆ ನಿಜವಾಗಿಯೂ ಭೋಗವಿಲ್ಲವೆಂದಾಯಿತು[4]!

---

1. ನಿಜವಾಗಿ ಪರಿಣಮಿಸುವದರಿಂದ ಸಾವಯವ, ಅಹಂಕಾರಾದಿಗಳ ಅಶುದ್ಧಿಯೂ ಆದರಲ್ಲಿರುತ್ತದೆ.

2. " ಅಥ ಭೋಗಕಾಲೇ " ವಾ॥ ಕಾ॥.

3. ಈ ಮಾತು ಇಲ್ಲದಿದ್ದರೂ ಸಾಗುವಂತಿದೆ.

4. ಹಗ್ಗವು ಹಾವೆಂದು ತೋರುವಾಗಲೂ ಹಗ್ಗವೇ ಆಗಿರುವಂತೆ ಪುರುಷನು ಭೋಗಕಾಲದಲ್ಲಿಯೂ ತನ್ನ ಸ್ವರೂಪವನ್ನು ಬಿಡದಿದ್ದರೆ ಸರ್ಪತ್ವದಂತೆ ಭೋಕ್ತೃತ್ವವೂ ಕಲ್ಪಿತವೇ ಎಂದಾಗುವದು. ಆಗ ನೀವೂ ವೇದಾಂತಿಗಳ ಅಭಿಪ್ರಾಯವನ್ನು ಒಪ್ಪಿದಂತೆ ಆಗುವದು ಎಂದು ಭಾವ.

(ಸಾಂಖ್ಯ) :-ಭೋಗಕಾಲದಲ್ಲಿ ಚಿನ್ಮಾತ್ರನಾದ (ಪುರುಷನಿಗೆ) ಆಗುವ ವಿಕಾರವು ನಿಜವಾದದ್ದೇ ; ಅದರಿಂದ ಪುರುಷನಿಗೆ ಭೋಗ(ವುಂಟಾಗುತ್ತದೆ).

(ಸಿದ್ಧಾಂತಿ) :-ಇದು ಸರಿಯಲ್ಲ. (ಏಕೆಂದರೆ) ಪ್ರಧಾನಕ್ಕೂ ಭೋಗಕಾಲದಲ್ಲಿ ವಿಕಾರವಾಗುವದರಿಂದ ಅದೂ ಭೋಕ್ತೃವಾಗಬೇಕಾದೀತು !

(ಸಾಂಖ್ಯ):-ಚಿನ್ಮಾತ್ರವೇ ಆಗಿರುವ (ಪುರುಷನಿಗೆ ಆಗುವ) ವಿಕಾರವೇ ಭೋಕ್ತೃತ್ವ(ವೆನಿಸುತ್ತದೆ)[1].

(ಸಿದ್ಧಾಂತಿ) :-(ಹಾಗಾದರೆ) ಬಿಸಿಯೇ ಮುಂತಾದ ಅಸಾಧಾರಣಧರ್ಮವುಳ್ಳ ಬೆಂಕಿಯೇ ಮುಂತಾದವುಗಳಿಗೆ ಭೋಕ್ತೃತ್ವವಿಲ್ಲವೆನ್ನುವದಕ್ಕೆ ಕಾರಣವೇನೂ ಇರುವದಿಲ್ಲ[2].

(ಭಾಷ್ಯ)

೧೦೭. ಪ್ರಧಾನಪುರುಷಯೋರ್ದ್ವಯೋಃ ಯುಗಪದ್ ಭೋಕ್ತೃತ್ವಮ್ ಇತಿ ಚೇತ್ । ನ । ಪ್ರಧಾನಸ್ಯ ಪಾರಾರ್ಥ್ಯಾನುಪಪತ್ತೇಃ । ನ ಹಿ ಭೋಕ್ತ್ರೋರ್ದ್ವಯೋಃ ಇತರೇತರಗುಣಪ್ರಧಾನಭಾವ ಉಪಪದ್ಯತೇ ಪ್ರಕಾಶಯೋರಿವ ಇತರೇತರಪ್ರಕಾಶನೇ ॥

(ಭಾಷ್ಯಾರ್ಥ)

(ಸಾಂಖ್ಯ) :-(ಹಾಗಾದರೆ) ಪ್ರಧಾನಪುರುಷರಿಬ್ಬರಿಗೂ ಏಕಕಾಲದಲ್ಲಿ ಭೋಕ್ತೃತ್ವವಾಗುವದೆನ್ನೋಣ[3].

(ಸಿದ್ಧಾಂತಿ) :-ಅದು ಸರಿಯಲ್ಲ. (ಏಕೆಂದರೆ) ಆಗ ಪ್ರಧಾನವು ಮತ್ತೊಬ್ಬರಿಗಾಗಿ ಕೆಲಸಮಾಡುವದೆಂಬುದು ಹೊಂದುವದಿಲ್ಲ[4]. ಎರಡು ಬೆಳಕುಗಳು ಒಂದ

1. ಪುರುಷನು ತನ್ನ ರೂಪದಿಂದಲೇ ಇದ್ದುಕೊಂಡಿರುವದರಿಂದ ಅವನು ಭೋಕ್ತೃವೆನಿಸಬಹುದು ; ಮಹದಾದಿಗಳ ರೂಪವಾಗಿ ಪರಿಣಮಿಸುವ ಪ್ರಧಾನಕ್ಕೆ ಭೋಕ್ತೃತ್ವವು ದಕ್ಕಲಾರದು ಎಂದು ಭಾವ.

2. ಬೆಂಕಿಯು ಸುಡುವಾಗಲೂ ತಾನೊಂದೇ ಇರುವಾಗಲೂ ತನ್ನ ರೂಪದಿಂದಲೇ ಇರುವವರಿಂದ ಅದಕ್ಕೂ ಭೋಕ್ತೃತ್ವವುಂಟೆಂದು ಸಾಂಖ್ಯನು ಒಪ್ಪಬೇಕಾದೀತು.

3. ಪುರುಷನಿಗೆ ಪ್ರಧಾನದಿಂದಲೂ ಪ್ರಧಾನಕ್ಕೆ ತನ್ನ ಪರಿಣಾಮನಿಮಿತ್ತವಾಗಿಯೂ ಭೋಕ್ತೃತ್ವವೆನ್ನಬಹುದು ಎಂದು ಭಾವ. ಪುರುಷನಲ್ಲಿ ಉಪಾಧಿಕೃತವಾದರೂ ಪರಮಾರ್ಥವಾದ ಭೋಕ್ತೃತ್ವವಿದೆಯೆಂದು ಸಾಧಿಸುವದಕ್ಕೆ ಸಾಂಖ್ಯನು ಹೊರಟಿದ್ದಾನೆ.

4. ಪ್ರಕೃತಿಯು ಪುರುಷನ ಭೋಗಮೋಕ್ಷಗಳಿಗಾಗಿ ಕೆಲಸಮಾಡುವದೆಂದ ಸಾಂಖ್ಯರ ಸಿದ್ಧಾಂತ. ಪ್ರಧಾನಕ್ಕೂ ಭೋಕ್ತೃತ್ವವನ್ನೊಪ್ಪಿದರೆ ಈ ಸಿದ್ಧಾಂತವನ್ನು ಕೈಬಿಡಬೇಕಾಗುವದು ಎಂದರ್ಥ.

ನ್ನೊಂದು ಬೆಳಗಿದರೆ (ಒಂದು ಪ್ರಧಾನವು, ಇನ್ನೊಂದು ಅದರ ಅಧೀನವು ಎಂಬುದು ಹೇಗೆ ಹೊಂದುವದಿಲ್ಲವೋ) ಹಾಗೆ ಇಬ್ಬರು ಭೋಕ್ತೃಗಳಲ್ಲಿ ಒಬ್ಬನು ಮುಖ್ಯನು, ಇನ್ನೊಂದು ಅಧೀನ-ಎಂಬ ಸಂಬಂಧವು ಇರಬಾರದಾಗುತ್ತದೆ.

(ಭಾಷ್ಯ)

೧೧೮. ಭೋಗಧರ್ಮವತಿ ಸತ್ತ್ವಾಙ್ಗಿನಿ ಚೇತಸಿ ಪುರುಷಸ್ಯ ಚೈತನ್ಯಪ್ರತಿಬಿಮ್ಬೋದಯಃ[1] ಅವಿಕ್ರಿಯಸ್ಯ ಪುರುಷಸ್ಯ ಭೋಕ್ತೃತ್ವಮ್ ಇತಿ ಚೇತ್ । ನ । ಪುರುಷಸ್ಯ ವಿಶೇಷಾಭಾವೇ ಭೋಕ್ತೃತ್ವಕಲ್ಪನಾನರ್ಥಕ್ಯಾತ್ । ಭೋಗರೂಪಶ್ಚೇತ್ ಅನರ್ಥಃ ಪುರುಷಸ್ಯ ನಾಸ್ತಿ ಸದಾ ನಿರ್ವಿಶೇಷತ್ವಾತ್ ಪುರುಷಸ್ಯ ಕಸ್ಯ ಅಪನಯನಾರ್ಥಂ ಮೋಕ್ಷಸಾಧನಂ ಶಾಸ್ತ್ರಂ ಪ್ರಣೀಯತೇ ? ಅವಿದ್ಯಾಧ್ಯಾರೋಪಿತಾನರ್ಥಾಪನಯನಾಯ ಶಾಸ್ತ್ರಪ್ರಣಯನಮ್ ಇತಿ ಚೇತ್ ಪರಮಾರ್ಥತಃ ಪುರುಷೋ ಭೋಕ್ತೈವ ನ ಕರ್ತಾ, ಪ್ರಧಾನಂ ಕರ್ತ್ರೇವ ನ ಭೋಕ್ತೃ ಪರಮಾರ್ಥಸದ್ ವಸ್ತ್ವನ್ತರಂ ಪುರುಷಾಚ್ಚ-ಇತೀಯಂ ಕಲ್ಪನಾ ಆಗಮಬಾಹ್ಯಾ ವ್ಯರ್ಥಾ ನಿರ್ಹೇತುಕಾ ಚೇತಿ ನಾದರ್ತವ್ಯಾ ಮುಮುಕ್ಷುಭಿಃ ॥

(ಭಾಷ್ಯಾರ್ಥ)

(ಸಾಂಖ್ಯ):-ಭೋಗಧರ್ಮವುಳ್ಳದ್ದಾಗಿ ಸತ್ತ್ವ (ಗುಣವು) ಪ್ರಧಾನವಾಗಿರುವ ಚಿತ್ತದಲ್ಲಿ ಪುರುಷನ ಚೈತನ್ಯದ ಪ್ರತಿಬಿಂಬವು ಹುಟ್ಟಿತೋರುವದೇ ವಿಕಾರರಹಿತನಾದ ಪುರುಷನ ಭೋಕ್ತೃತ್ವವು ಎಂದರೊ[2] ?

(ಸಿದ್ಧಾಂತಿ):-ಇದು ಸರಿಯಿಲ್ಲ. ಏಕೆಂದರೆ ಪುರುಷನಲ್ಲಿ (ಯಾವ) ವಿಶೇಷವೂ ಇಲ್ಲದಿರುವಾಗ (ಅವನು) ಭೋಕ್ತೃವೆಂದು ಕಲ್ಪಿಸುವದು ವ್ಯರ್ಥವಾಗುತ್ತದೆ. ಭೋಗರೂಪವಾದ ಅನರ್ಥವು ಪುರುಷನಲ್ಲಿ ಇಲ್ಲದಿದ್ದರೆ ಪುರುಷನು ಯಾವಾಗಲೂ ಯಾವ ವಿಶೇಷವೂ ಇಲ್ಲದವನೆಂದಾಗುವದರಿಂದ ಯಾವ (ಬಂಧವನ್ನು) ಪರಿಹರಿಸುವದಕ್ಕಾಗಿ[3] ಮೋಕ್ಷಶಾಸ್ತ್ರವನ್ನು ರಚಿಸಿರುತ್ತದೆ? (ಎಂಬುದನ್ನು ಹೇಳುವದಕ್ಕೆ ಬರುವದಿಲ್ಲ).

---

1. "ಪ್ರತಿಬಿಮ್ಬೋದಯಾತ್" ಎಂದು ಪಾ॥.

2. ಪುರುಷನ ಪ್ರತಿಬಿಂಬವು ಸತ್ತ್ವಪ್ರಧಾನವಾದ ಅಂತಃಕರಣದಲ್ಲಿ ಬಿದ್ದಾಗ ಸುಖವಾಗುತ್ತದೆ. ಪುರುಷನು ಇದಕ್ಕೆ ಬಿಂಬವಾಗಿರುವದರಿಂದ ಭೋಕ್ತೃವೆನಿಸುವನು ಎಂದು ಭಾವ. ಭೋಕ್ತೃತ್ವವೆಂಬ ವಿಕಾರವೂ ಇಲ್ಲದೆ ಪುರುಷನಲ್ಲಿ ಭೋಕ್ತೃತ್ವವನ್ನು ಕಲ್ಪಿಸುವ ಪ್ರಯತ್ನವಿದು.

3. ಭೋಕ್ತೃತ್ವವೇ ಬಂಧಕಾರಣವು; ಅದೇ ನಿಜವಾಗಿಲ್ಲವೆಂದಾದರೆ ಇನ್ನು ಮೋಕ್ಷಕ್ಕಾಗಿ ಸಾಂಖ್ಯಶಾಸ್ತ್ರವು ಹೊರಟಿರುವದೇಕೆ ?-ಎಂದು ಆಕ್ಷೇಪ.

(ಸಾಂಖ್ಯ):–**ಅವಿದ್ಯೆಯಿಂದ** ಆರೋಪಿತವಾಗಿರುವ ಅನರ್ಥವನ್ನು ತೊಲಗಿಸುವದಕ್ಕಾಗಿ ಶಾಸ್ತ್ರವನ್ನು ರಚಿಸಿರುತ್ತದೆ[1].

(ಸಿದ್ಧಾಂತಿ):–ಹಾಗಾದರೆ "ಪುರುಷನು ನಿಜವಾಗಿ ಭೋಕ್ತೃವೇ ಕರ್ತೃವಲ್ಲ, ಪ್ರಧಾನವು ಕರ್ತೃವೇ ಭೋಕ್ತೃವಲ್ಲ; ಇದು ಪರಮಾರ್ಥವಾಗಿ ಪುರುಷನಿಗಿಂತ ಬೇರೆಯಾಗಿರುವ ವಸ್ತು" ಎಂಬೀ ಕಲ್ಪನೆಯು ಆಗಮಬಾಹ್ಯವೂ ವ್ಯರ್ಥವೂ ಯಾವ ಕಾರಣವೂ ಇಲ್ಲದ್ದೂ (ಆಗಿದೆ) ಎಂದಾಯಿತು. ಆದ್ದರಿಂದ ಇದನ್ನು ಮುಮುಕ್ಷುಗಳು ಒಪ್ಪಬಾರದು[2].

## ಅದ್ವೈತಪ್ರಕ್ರಿಯೆಯಲ್ಲಿ ಯಾವ ದೋಷವೂ ಇಲ್ಲ

(ಭಾಷ್ಯ)

೧೮೯. ಏಕತ್ವೇಽಪಿ ಶಾಸ್ತ್ರಪ್ರಣಯನಾದ್ಯಾನರ್ಥಕ್ಯಮ್ ಇತಿ ಚೇತ್ । ನ । ಅಭಾವಾತ್ । ಸತ್ಸು ಹಿ ಶಾಸ್ತ್ರಪ್ರಣೇತ್ರಾದಿಷು ತತ್ಫಲಾರ್ಥಿಷು ಚ ಶಾಸ್ತ್ರಸ್ಯ ಪ್ರಣಯನಮ್ ಅನರ್ಥಕಂ ಸಾರ್ಥಕಂ ವಾ ಇತಿ ವಿಕಲ್ಪನಾ ಸ್ಯಾತ್ । ನ ಹಿ ಆತ್ಮೈಕತ್ವೇ ಶಾಸ್ತ್ರಪ್ರಣೇತ್ರಾದಯಸ್ತತೋ ಭಿನ್ನಾಃ ಸನ್ತಿ । ತದಭಾವೇ ಏವಂ ವಿಕಲ್ಪನೈವ ಅನುಪಪನ್ನಾ । ಅಭ್ಯುಪಗತೇ ಆತ್ಮೈಕತ್ವೇ ಪ್ರಮಾಣಾರ್ಥಶ್ಚಾಭ್ಯುಪಗತೋ ಭವತಾ (ಯದಾತ್ಮೈಕತ್ವಮಭ್ಯುಪಗಚ್ಛತಾ)[3] । ತದಭ್ಯುಪಗಮೇ ಚ ವಿಕಲ್ಪಾನುಪಪತ್ತಿಮಾಹ ಶಾಸ್ತ್ರಮ್ "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್" (ಬೃ. ೪-೫-೧೫) ಇತ್ಯಾದಿ । ಶಾಸ್ತ್ರಪ್ರಣಯನಾದ್ಯುಪಪತ್ತಿಂ ಚಾಹ ಅನ್ಯತ್ರ ಪರಮಾರ್ಥವಸ್ತುಸ್ವರೂಪಾತ್ ಅವಿದ್ಯಾವಿಷಯೇ "ಯತ್ರ ಹಿ ದ್ವೈತಮಿವ ಭವತಿ" (ಬೃ. ೪-೫-೧೫) ಇತ್ಯಾದಿ ವಿಸ್ತರತೋ **ವಾಜಸನೇಯಕೇ** । ಅತ್ರ ಚ ವಿಭಕ್ತೇ ವಿದ್ಯಾವಿದ್ಯೇ ಪರಾಪರೇ ಇತಿ ಆದಾವೇವ ಶಾಸ್ತ್ರಸ್ಯ । ಅತೋ ನ ತಾರ್ಕಿಕವಾದಭಟಪ್ರವೇಶೋ ವೇದಾನ್ತರಾಜಪ್ರಮಾಣಬಾಹುಗುಪ್ತೇ ಇಹ ಆತ್ಮೈಕತ್ವವಿಷಯೇ ಇತಿ ।

---

1. ಭೋಕ್ತೃತ್ವವು ಅವಿದ್ಯಾರೋಪಿತವೆಂದು ಸಾಂಖ್ಯನು ಮೊದಲು ಒಪ್ಪದಿದ್ದರೂ ಈಗ ಭೋಗವು ಪ್ರಕೃತಿಯಲ್ಲಿಯೇ ಆಗುವದು ಎಂದದ್ದರಿಂದ ಒಪ್ಪಬೇಕಾಗಿದೆ.

2. ವೇದಕ್ಕೆ ಒಪ್ಪಾಗಿ ಸಪ್ರಯೋಜನವಾಗಿ ಯುಕ್ತಿಸಮ್ಮತವಾಗಿರುವ ವೇದಾಂತ ದರ್ಶನವನ್ನು ಒಪ್ಪಿ ಆತ್ಮನ ಹೊರತು ಮಿಕ್ಕದ್ದೆಲ್ಲವೂ-ಪ್ರಕೃತಿಯುಕೂಡ-ಅವಿದ್ಯಾಕಲ್ಪಿತವೆಂದು ಒಪ್ಪಬೇಕು ಎಂದರ್ಥ. "ಮುಮುಕ್ಷುಗಳು ಒಪ್ಪಬಾರದು" ಎಂದದ್ದರಿಂದ ಮುಮುಕ್ಷುಗಳಿಗಾಗಿಯೇ ಈ ಚರ್ಚೆಯನ್ನು ತೆಗೆದಿದೆ ಎಂದು ಮತ್ತೆ ಜ್ಞಾಪಿಸಿದಂತೆ ಆಯಿತು. ಮಾಂ. ಕಾ. ಭಾ. ೩-೫ ರಲ್ಲಿ ಸಾಂಖ್ಯಖಂಡನೆಯನ್ನು ನೋಡಿರಿ.

3. ಈ ಭಾಷ್ಯಭಾಗವು ಬರೆದವರ ಕೈತಪ್ಪಿನಿಂದ ಹೆಚ್ಚಾಗಿ ಸೇರಿದೆ ಎಂದು ತೋರುತ್ತದೆ.

ಏತೇನ ಅವಿದ್ಯಾಕೃತನಾಮರೂಪಾದ್ಯುಪಾಧಿಕೃತಾನೇಕಶಕ್ತಿಸಾಧನಕೃತಭೇದವತ್ತ್ವಾತ್ ಬ್ರಹ್ಮಣಃ ಸೃಷ್ಟ್ಯಾದಿಕರ್ತೃತ್ವೇ ಸಾಧನಾದ್ಯಭಾವೋ ದೋಷಃ ಪ್ರತ್ಯುಕ್ತೋ ವೇದಿತವ್ಯಃ ಪರೈರುಕ್ತಃ, ಆತ್ಮಾನರ್ಥಕರ್ತೃತ್ವಾದಿದೋಷಶ್ಚ ॥

(ಭಾಷ್ಯಾರ್ಥ)

(ಸಾಂಖ್ಯ):-(ಆತ್ಮ)ನೊಬ್ಬನೇ (ಪರಮಾರ್ಥ) ಎಂಬ (ಮತ)ದಲ್ಲಿಯೂ ಶಾಸ್ತ್ರವನ್ನು ರಚಿಸುವದೇ ಮುಂತಾದದ್ದು ವ್ಯರ್ಥವಾಗುವದಿಲ್ಲವೆ[1] ?

(ಸಿದ್ಧಾಂತಿ):-ಇಲ್ಲ. ಏಕೆಂದರೆ(ಅವು) ಇರುವದಿಲ್ಲ. ಶಾಸ್ತ್ರವನ್ನು ಮಾಡಿದವರೇ ಮುಂತಾದವರೂ ಅದರ(ಲ್ಲಿ ಹೇಳಿರುವ) ಫಲವನ್ನು ಬಯಸುವವರೂ ಇದ್ದರಲ್ಲವೆ, ಶಾಸ್ತ್ರವನ್ನು ಮಾಡಿದ್ದು ವ್ಯರ್ಥವೋ, ಸಾರ್ಥಕವೂ?-ಎಂಬ ವಿಕಲ್ಪವುಂಟಾಗುವದು? ಆತ್ಮನು ಒಬ್ಬನೇ ಆಗಿರುವಾಗ ಶಾಸ್ತ್ರವನ್ನು ಮಾಡಿದವರೇ ಮುಂತಾದವರು (ಆತ್ಮನಿಗಿಂತ) ಬೇರೆಯಾಗಿ ಇರುವದೇ ಇಲ್ಲ. ಅವು ಇಲ್ಲದಿರುವಾಗ ಹೀಗೆ ಕೇಳುವದೇ ಸರಿಯಾಗುವದಿಲ್ಲ[2]. ಆತ್ಮನು ಒಬ್ಬನೆಂದು ಒಪ್ಪಿಕೊಂಡರೆ ಪ್ರಮಾಣದ ಸಾರ್ಥಕ್ಯವನ್ನು ನೀವು ಒಪ್ಪಿಕೊಂಡಂತೆಯೇ ಆಗುತ್ತದೆ[3]. ಮತ್ತು ಅದನ್ನು ಒಪ್ಪಿದಮೇಲೆ (ಹೀಗೆ) ವಿಕಲ್ಪಿಸುವದು ಆಗುವದಿಲ್ಲವೆಂಬುದನ್ನು ಶಾಸ್ತ್ರವೂ "ಎಲ್ಲಿಯಾದರೆ ಇವನಿಗೆ ಎಲ್ಲವೂ ಆತ್ಮನೇ ಆಯಿತೋ ಅಲ್ಲಿ ಏತರಿಂದ ಯಾವದನ್ನು ಕಾಣಬೇಕು?" (ಬೃ. ೪-೫-೧೫) ಎಂದು ಮುಂತಾದ (ವಾಕ್ಯದಿಂದ) ತಿಳಿಸುತ್ತದೆ[4]. ಪರಮಾರ್ಥವಸ್ತುಸ್ವರೂಪವನ್ನು ಬಿಟ್ಟರೆ ಮಿಕ್ಕ ಅವಿದ್ಯಾವಿಷಯವಾಗಿರುವ (ಕಡೆಯಲ್ಲಿ) ಶಾಸ್ತ್ರವನ್ನು ರಚಿಸುವದೇ ಮುಂತಾದದ್ದು ಯುಕ್ತಿಗೆ ಹೊಂದುತ್ತದೆ ಎಂದೂ "ಎಲ್ಲಿ ದ್ವೈತದಂತೆ ಇರುವದೋ (ಅಲ್ಲಿ ಒಬ್ಬನು ಮತ್ತೊಬ್ಬನನ್ನು ಕಾಣುತ್ತಾನೆ)"

---

1. ಶಾಸ್ತ್ರವನ್ನು ಯಾರಿಗಾಗಿ ರಚಿಸಬೇಕು ? ಯಾವ ಬಂಧವನ್ನು ಕಳೆಯುವದಕ್ಕಾಗಿ ರಚಿಸಬೇಕು ?-ಎಂಬ ಆಕ್ಷೇಪಣೆ ಆಗಲೂ ಬರುತ್ತದೆ-ಎಂದರ್ಥ.

2. ಆತ್ಮನೊಬ್ಬನೇ ಪರಮಾರ್ಥವೆಂದು ಒಪ್ಪಿಕೊಂಡರೆ ಶಾಸ್ತ್ರಾದಿಗಳೂ ಇಲ್ಲವೆಂದೇ ಒಪ್ಪಿಕೊಂಡಂತೆ. ಆಗ ಈ ಪ್ರಶ್ನೆಯಾಗಲಿ ಉತ್ತರವಾಗಲಿ ಹೇಗೆ ಇದ್ದಾವು ?

3. ಶಾಸ್ತ್ರಕ್ಕೆ ವಿಷಯವು ಆತ್ಮೈಕ್ಯವು ಎಂಬ ನಮ್ಮ ಸಿದ್ಧಾಂತಕ್ಕೆ ಮುಖ್ಯವಾಗಿರುವ ಆತ್ಮೈಕ್ಯವನ್ನು ಒಪ್ಪಿದಮೇಲೆ ಶಾಸ್ತ್ರಕ್ಕೆ ಪ್ರಯೋಜನವಿಲ್ಲವೆಂದು ವಾದಿಸುವದಕ್ಕೆ ಬರುವದಿಲ್ಲ; ದ್ವೈತಜ್ಞಾನವನ್ನು ಕಳೆದು ಅದರಿಂದಾಗುವ ಅನರ್ಥವನ್ನು ಕಳೆಯುವದೇ ಶಾಸ್ತ್ರದ ಪ್ರಯೋಜನವು. ಇಲ್ಲಿ "ಯದಾತ್ಮೈಕತ್ವಮಭ್ಯುಪಗಚ್ಛತಾ" ಎಂಬ ಗ್ರಂಥವನ್ನು ಕನ್ನಡಿಸಿಲ್ಲ.

4. ಆತ್ಮೈಕತ್ವವನ್ನು ಅರಿತ ಅವಸ್ಥೆಯಲ್ಲಿ ಒಬ್ಬನು ಇನ್ನೊಬ್ಬನನ್ನು ಕಾಣುವದೆಂಬುದಾಗಲಿ, ಒಬ್ಬನು ಇನ್ನೊಂದನ್ನು ಕೇಳುವದೆಂಬುದಾಗಲಿ ಇಲ್ಲ-ಎಂದದ್ದರಿಂದ ಶಾಸ್ತ್ರಾದಿವಿಷಯದ ವಿಕಲ್ಪವು ಆಗ ಹೊಂದುವದಿಲ್ಲವೆಂದಂತೆ ಆಯಿತು.

(ಬೃ. ೪-೫-೧೪) ಎಂದು ಮುಂತಾದ (ವಾಕ್ಯಗಳಿಂದ) **ವಾಜಸನೇಯಕದಲ್ಲಿ** ವಿಸ್ತಾರವಾಗಿ ಹೇಳಿರುತ್ತದೆ[1]. ಇಲ್ಲಿಯೂ[2] ಪರವಿದ್ಯೆ, ಅಪರವಿದ್ಯೆ-ಎಂದು ವಿದ್ಯಾವಿದ್ಯೆಗಳನ್ನು[3] ಶಾಸ್ತ್ರದ ಮೊದಲಿನಲ್ಲಿಯೇ ವಿಂಗಡಿಸಿ (ತಿಳಿಸಿರುತ್ತದೆ). ಆದ್ದರಿಂದ **ವೇದಾಂತವೆಂಬ ರಾಜಪ್ರಮಾಣದ** ಬಾಹುವಿನಿಂದ ರಕ್ಷಿತವಾಗಿರುವ ಈ ಆತ್ಮೈಕತ್ವದ ವಿಷಯದಲ್ಲಿ ತಾರ್ಕಿಕವಾದದ ಭಟರಿಗೆ ಪ್ರವೇಶವಿರುವದಿಲ್ಲ[4].

**ಅವಿದ್ಯೆಯಿಂದಾದ ನಾಮ, ರೂಪ-ಮುಂತಾದ ಉಪಾಧಿಯಿಂದಾಗಿರುವ ಅನೇಕ ಶಕ್ತಿಗಳಿಂದಲೂ ಸಾಧನಗಳಿಂದಲೂ ಆಗಿರುವ ಭೇದಗಳು ಬ್ರಹ್ಮದಲ್ಲಿರುವದರಿಂದ "ಸೃಷ್ಟಿಯೇ ಮುಂತಾದದ್ದನ್ನು ಮಾಡುವದಕ್ಕೆ (ಬ್ರಹ್ಮಕ್ಕೆ) ಸಾಧನಗಳು ಇಲ್ಲವಲ್ಲ!" ಎಂಬ ದೋಷವನ್ನೂ "ಆತ್ಮನು (ತನಗೆ ತಾನೇ) ಅನರ್ಥವನ್ನು ಮಾಡಿಕೊಂಡವನಾಗುವನಲ್ಲ!" ಎಂಬ ದೋಷವನ್ನೂ ಪರರು ಹೇಳಿದ್ದಕ್ಕೆ ಇದರಿಂದಲೇ ಪರಿಹಾರವನ್ನು ಹೇಳಿದಂತಾಯಿತೆಂದು ತಿಳಿಯಬೇಕು.**

## ಅಚೇತನಕರ್ತೃತ್ವವಾದದಲ್ಲಿ ದೋಷ

(ಭಾಷ್ಯ)

೧೧೦. ಯಸ್ತು ದೃಷ್ಟಾನ್ತಃ ರಾಜ್ಞಃ ಸರ್ವಾರ್ಥಕಾರಿಣಿ ಕರ್ತರಿ ಉಪಚಾರಾದ್[5] "ರಾಜಾ" "ಕರ್ತಾ" ಇತಿ(ಇತಿ)[6], ಸೋಽತ್ರಾನುಪಪನ್ನಃ। "ಸ

1. ಕಲ್ಪಿತದ್ವೈತವಿರುವಾಗ ಕಲ್ಪಿತಶಾಸ್ತ್ರಾದಿಗಳೂ ಉಂಟೆಂದು 'ಇವ' ಶಬ್ದದಿಂದ ಶ್ರುತಿಯು ತಿಳಿಸಿದಂತೆ ಆಯಿತು.

2. ಈ ಅಥರ್ವವೇದದ ಉಪನಿಷತ್ತಿನಲ್ಲಿ ಮಂತ್ರಭಾಗವಾದ ಮುಂಡಕದಲ್ಲಿಯೂ.

3. ಋಗ್ವೇದಾದಿಗಳು ಅಪರವಿದ್ಯೆ, ಬ್ರಹ್ಮವಿದ್ಯೆಯು ಪರವಿದ್ಯೆ-ಎಂದು ವಿಂಗಡಿಸಿರುವದರಿಂದ ಕರ್ಮಕ್ಕೆ ಸಂಬಂಧಪಟ್ಟ ಋಗ್ವೇದಾದಿಗಳು ಅವಿದ್ಯಾಕ್ಷೇತ್ರಕ್ಕೆ ಸೇರಿದವುಗಳೆಂದೂ ಶಾಸ್ತ್ರಾದಿವಿಕಲ್ಪವು ಅಪರವಿದ್ಯೆಗೆ ಸೇರಿದ್ದೆಂದೂ ಹೇಳಿದಂತೆ ಆಯಿತು. "**ವಿಭಕ್ತೇ ವಿದ್ಯೇ**" ಎಂದೂ **ಭಾಷ್ಯಕಾರರು** ಬರೆದಿರಬಹುದು. ಹೇಗಾದರೂ ಅಪರವಿದ್ಯೆಯು ಅವಿದ್ಯಾಕ್ಷೇತ್ರಕೆ ಸೇರಿದ್ದಾಗುತ್ತದೆ.

4. ವೇದಾಂತರಕ್ಷಿತವಾದ ನಮ್ಮ ಸಿದ್ಧಾಂತದ ದುರ್ಗವನ್ನು ತಾರ್ಕಿಕರೆಂಬ ಅಪೂರ್ಣದೃಷ್ಟಿಯ ಭಟರು ಒಳಹೊಗಲಾರರು ; ಏಕೆಂದರೆ ಅವಿದ್ಯೆಯಿಂದಾಗಿರುವ ವ್ಯವಹಾರವನ್ನೂ ಪರಮಾರ್ಥವಾಗಿರುವ ಅದ್ವೈತವನ್ನೂ ಒಪ್ಪಿರುವ ವೇದಾಂತವೆಂಬ ಶ್ರೇಷ್ಠಪ್ರಮಾಣವನ್ನು ನಾವು ಒಪ್ಪಿರುತ್ತೇವೆ. ಪ್ರತ್ಯಕ್ಷವೇ ಮುಂತಾದವನ್ನು ಮಾತ್ರ ಒಪ್ಪಿರುವ ತಾರ್ಕಿಕರಿಗೆ ಇದು ಹಿಡಿಯುವ ಸಂಭವವಿಲ್ಲ.

5. "ಉಪಚಾರವತ್" ಎಂದಿದ್ದರೆ ಸರಳವಾಗಿ ಅನ್ವಯವಾಗುವದು.

6. ಇಲ್ಲಿ ಒಂದು ಇತಿ ಶಬ್ದವು ಬಿಟ್ಟುಹೋಗಿದೆ; ಅಥವಾ ಅದನ್ನು ಅಧ್ಯಾಹಾರ ಮಾಡಿಕೊಳ್ಳಬೇಕು.

ಈಕ್ಷಾಂಚಕ್ರೇ" ಇತಿ ಶ್ರುತೇರ್ಮುಖ್ಯಾರ್ಥಬಾಧನಾತ್ ಪ್ರಮಾಣಭೂತಾಯಾಃ। ತತ್ರ ಹಿ ಗೌಣೀ ಕಲ್ಪನಾ ಶಬ್ದಸ್ಯ ಯತ್ರ ಮುಖ್ಯಾರ್ಥೋ ನ ಸಂಭವತಿ। ಇಹ ತು ಅಚೇತನಸ್ಯ ಮುಕ್ತಬದ್ಧಪುರುಷವಿಶೇಷಾಪೇಕ್ಷಯಾ ಕರ್ತೃಕರ್ಮದೇಶಕಾಲನಿಮಿತ್ತಾಪೇಕ್ಷಯಾ ಚ ಬನ್ಧಮೋಕ್ಷಾದಿಫಲಾರ್ಥಾ ನಿಯತಾ ಪುರುಷಂ ಪ್ರತಿ ಪ್ರವೃತ್ತಿರ್ನೋಪಪದ್ಯತೇ। ಯಥೋಕ್ತಸರ್ವಜ್ಞೇಶ್ವರಕರ್ತೃತ್ವಪಕ್ಷೇ ತು ಉಪಪನ್ನಾ॥

(ಭಾಷ್ಯಾರ್ಥ)

ರಾಜನಿಗೆ ಎಲ್ಲಾ ಪ್ರಯೋಜನವನ್ನೂ ಮಾಡಿಕೊಡುವ ಕರ್ತೃವನ್ನು "ರಾಜನು," "ಕರ್ತನು" ಎಂದು ಉಪಚಾರಕ್ಕಾಗಿ ಕರೆಯುವಂತೆ ಅಚೇತನವಾದ ಪ್ರಧಾನಕ್ಕೂ ಕರ್ತೃತ್ವವನ್ನು ಹೇಳಿದೆ) ಎಂದು ದೃಷ್ಟಾಂತವನ್ನು ಹೇಳಿತ್ತಷ್ಟೆ, ಅದು ಇಲ್ಲಿ ಹೊಂದುವದಿಲ್ಲ; ಏಕೆಂದರೆ "ಅವನು ನೋಡಿದನು" ಎಂದು ಹೇಳುವ ಪ್ರಮಾಣಭೂತವಾದ ಶ್ರುತಿಗೆ ಮುಖ್ಯಾರ್ಥವನ್ನು ತಪ್ಪಿಸಬೇಕಾಗುತ್ತದೆ[1]. ಎಲ್ಲಿ ಶಬ್ದಕ್ಕೆ ಮುಖ್ಯಾರ್ಥವು ಹೊಂದುವದಿಲ್ಲವೋ ಅಲ್ಲಿಯೇ ಗೌಣಾರ್ಥವನ್ನು ಕಲ್ಪಿಸಬೇಕು. ಆದರೆ ಇಲ್ಲಿ ಅಚೇತನವಾದ ಪ್ರಧಾನವು "ಇವರು ಮುಕ್ತರು, ಇವರು ಬದ್ಧರು" ಎಂದು ಆಯಾ ಪುರುಷರನ್ನೂ (ಆಯಾ) ಕರ್ತೃ, ಕರ್ಮ, ದೇಶ, ಕಾಲ, ನಿಮಿತ್ತ-ಇವುಗಳನ್ನೂ ನೋಡಿಕೊಂಡು ಬಂಧಮೋಕ್ಷಗಳೇ ಮುಂತಾದ(?) ಫಲಗಳು ಉಂಟಾಗುವದಕ್ಕೋಸ್ಕರ (ಒಂದು) ನಿಯಮದಿಂದ ಪುರುಷನಿಗಾಗಿ ಪ್ರವರ್ತಿಸುವದೆಂಬುದು ಹೊಂದುವದಿಲ್ಲ[2]. ಮೇಲೆ ಹೇಳಿದ ಸರ್ವಜ್ಞನಾದ ಈಶ್ವರನು ಕರ್ತೃವೆಂಬ ಪಕ್ಷದಲ್ಲಿಯಾದರೋ (ಇದು) ಹೊಂದುತ್ತದೆ[3].

## ಅವಿದ್ಯೆಯಿಂದ ಕಲೆಗಳ ಉತ್ಪತ್ತಿ, ವಿದ್ಯೆಯಿಂದ ಲಯ

(ಭಾಷ್ಯ)

೧೧೧. ಈಶ್ವರೇಣೇವ[4] ಸರ್ವಾಧಿಕಾರೀ ಪ್ರಾಣಃ ಪುರುಷೇಣ ಸೃಜ್ಯತೇ। ಕಥಮ್ ?—

1. ಸಾಂಖ್ಯನು 'ಕರ್ತೃ', 'ಈಕ್ಷಿತೃ', 'ಆತ್ಮ'-ಎಂಬ ಶಬ್ದಗಳಿಗೆಲ್ಲ ಗೌಣಾರ್ಥವನ್ನು ಕಲ್ಪಿಸಿ ಅವುಗಳನ್ನು ಪ್ರಧಾನಕ್ಕೆ ಹೊಂದಿಸಿಕೊಂಡಿರುತ್ತಾನೆ. ಮುಖ್ಯಾರ್ಥವು ಹೊಂದುವಾಗ ಗೌಣಾರ್ಥವನ್ನು ತೆಗೆದುಕೊಳ್ಳುವದು ಸರಿಯಲ್ಲ. ಸೂ. ಭಾ. ೧-೧-೫ರಿಂದ ೭ ನೋಡಿ.

2. ಅಚೇತನಕ್ಕೆ ಇದೆಲ್ಲ ಹೇಗೆ ತಿಳಿಯಬೇಕು ? ಸೂ. ಭಾ. ೨-೨-೨, ೩.

3. ಅವಿದ್ಯಾದೃಷ್ಟಿಯಿಂದ ಆತ್ಮನು ಕರ್ತೃವೆಂದಿಟ್ಟುಕೊಂಡರೆ ಚೇತನನಾದ ಅವನಿಗೆ ಇದೆಲ್ಲ ತಿಳಿಯುವ ಸಂಭವವಿದೆ.

4. "ಈಶ್ವರೇಣೈವ" ಎಂಬ ಪಾಠಕ್ಕಿಂತ ಇದೇ ಉತ್ತಮ.

(ಭಾಷ್ಯಾರ್ಥ)

ಒಡೆಯನಾದವನಿಂದ ಸರ್ವಾಧಿಕಾರಿಯು (ಸೃಷ್ಟನಾಗುವಂತೆ)[1] ಪ್ರಾಣನು ಪುರುಷನಿಂದ ಸೃಷ್ಟನಾಗುತ್ತಾನೆ. ಹೇಗೆಂದರೆ:—

**ಸ ಪ್ರಾಣಮಸೃಜತ ಪ್ರಾಣಾಚ್ಛ್ರದ್ಧಾಂ ಖಂ ವಾಯುರ್ಜ್ಯೋತಿ**
**ರಾಪಃ ಪೃಥಿವೀನ್ದ್ರಿಯಂ ಮನಃ । ಅನ್ನಮನ್ನಾದ್ ವೀರ್ಯಂ**
**ತಪೋ ಮನ್ತ್ರಾಃ ಕರ್ಮ ಲೋಕಾ ಲೋಕೇಷು ನಾಮ ಚ ॥೪॥**

೪. ಅವನು ಪ್ರಾಣನನ್ನು ಸೃಷ್ಟಿಸಿದನು, ಪ್ರಾಣನಿಂದ ಶ್ರದ್ಧೆಯನ್ನೂ, ಆಕಾಶ, ವಾಯು, ಜ್ಯೋತಿ, ಅಪ್ಪು, ಪೃಥಿವಿ, ಇಂದ್ರಿಯ, ಮನಸ್ಸು, ಅನ್ನ--ಇವುಗಳನ್ನೂ ಅನ್ನದಿಂದ ವೀರ್ಯ, ತಪಸ್ಸು, ಮಂತ್ರಗಳು, ಕರ್ಮ, ಲೋಕಗಳು (ಇವನ್ನೂ), ಲೋಕಗಳಲ್ಲಿ ನಾಮವನ್ನೂ (ಸೃಷ್ಟಿಸಿದನು).

(ಭಾಷ್ಯ)

೧೧೨. ಸ ಪುರುಷಃ ಉಕ್ತಪ್ರಕಾರೇಣ ಈಕ್ಷಿತ್ವಾ ಪ್ರಾಣಂ[2] ಹಿರಣ್ಯಗರ್ಭಾಖ್ಯಂ ಸರ್ವಪ್ರಾಣಿಕರಣಾಧಾರಮ್ ಅನ್ತರಾತ್ಮಾನಮ್ ಅಸೃಜತ ಸೃಷ್ಟವಾನ್ । ಅತಃ[3] ಪ್ರಾಣಾತ್ ಶ್ರದ್ಧಾಂ ಸರ್ವಪ್ರಾಣಿನಾಂ ಶುಭಕರ್ಮಪ್ರವೃತ್ತಿಹೇತುಭೂತಾಮ್ । ತತಃ ಕರ್ಮಫಲೋಪಭೋಗಸಾಧನಾಧಿಷ್ಠಾನಾನಿ ಕಾರಣಭೂತಾನಿ ಮಹಾಭೂತಾನಿ ಅಸೃಜತ । ಖಂ ಶಬ್ದಗುಣಮ್[4] । ವಾಯುಃ[5] ಸ್ವೇನ ಸ್ಪರ್ಶೇನ ಕಾರಣಗುಣೇನ ಚ ವಿಶಿಷ್ಟಃ ದ್ವಿಗುಣಃ । ತಥಾ ಜ್ಯೋತಿಃ ಸ್ವೇನ ರೂಪೇಣ ಪೂರ್ವಾಭ್ಯಾಂ ಚ ವಿಶಿಷ್ಟಂ ತ್ರಿಗುಣಂ ಶಬ್ದಸ್ಪರ್ಶಾಭ್ಯಾಮ್ । ತಥಾ ಆಪಃ ರಸಗುಣೇನ[6] ಅಸಾಧಾರಣೇನ ಪೂರ್ವಗುಣಾನುಪ್ರವೇಶೇನ ಚ ಚತುರ್ಗುಣಾಃ । ತಥಾ ಗನ್ಧಗುಣೇನ ಪೂರ್ವಗುಣಾನುಪ್ರವೇಶೇನ ಚ ಪಞ್ಚಗುಣಾ ಪೃಥಿವೀ । ತಥಾ ತೈರೇವ ಭೂತೈಃ ಆರಬ್ಧಮ್

1. ಅರಸಾದವನು ತನಗೊಬ್ಬ ಅಧಿಕಾರಿಯನ್ನು ಗೊತ್ತುಮಾಡಿಕೊಳ್ಳುವಂತೆ ಚೈತನ್ಯಸ್ವರೂಪನಾದ ಆತ್ಮನು ತನ್ನ ವ್ಯವಹಾರಕ್ಕಾಗಿ ಪ್ರಾಣನನ್ನು ಸೃಷ್ಟಿಮಾಡಿಕೊಂಡನು ಎಂದರ್ಥ. ಇದೂ ಪ್ರಧಾನಕ್ಕೆ ಹೊಂದುವದಿಲ್ಲ. ಈಶ್ವರೇಣೈವ............ಸೃಜ್ಯತೇ ಎಂಬ ವಾಕ್ಯವನ್ನು ಹಿಂದಿನ ಭಾಷ್ಯಭಾಗಕ್ಕಾಗಲಿ, ಅಥವಾ "ಯಥೋಕ್ತ.......... ಉಪಪನ್ನಾ" ಎಂಬ ವಾಕ್ಯವನ್ನು ಈ ಭಾಷ್ಯಭಾಗಕ್ಕಾಗಲಿ ಜೋಡಿಸಿಕೊಂಡರೂ ಅರ್ಥವು ಒಂದೇ ಆಗುತ್ತದೆ.

2. "ಸರ್ವಪ್ರಾಣಂ" ಎಂಬ ಪಾ॥ ಪಾಠವು ಬೇಕಿಲ್ಲ.

3. 'ತತಃ' ಪಾ॥

4. "ಶಬ್ದಗುಣಕಮ್" ಪಾ॥

5. "ವಾಯುಮ್" ಎಂಬ ದ್ವಿತೀಯಾಂತವಾದ ಆ॥ ಪಾಠಕ್ಕಿಂತ ಈ ಪಾ॥ ಪಾಠವು ಮೂಲಾನುಸಾರಿಯಾಗಿರುವದರಿಂದ ಉತ್ತಮ.

6. "ರಸೇನ ಗುಣೇನ" ಆ॥

ಇನ್ದ್ರಿಯಂ ದ್ವಿಪ್ರಕಾರಂ ಬುದ್ಧ್ಯರ್ಥಂ ಕರ್ಮಾರ್ಥಂ ಚ ದಶಸಙ್ಖ್ಯಮ್ । ತಸ್ಯ ಚ ಈಶ್ವರಮ್ ಅನ್ತಸ್ಥಂ ಸಂಶಯಸಂಕಲ್ಪಾದಿಲಕ್ಷಣಂ[1] ಮನಃ । ಏವಂ ಪ್ರಾಣಿನಾಂ ಕಾರ್ಯಂ ಕರಣಂ[2] ಚ ಸೃಷ್ಟ್ವಾ ತತ್ಸ್ಥಿತ್ಯರ್ಥಂ ವ್ರೀಹಿಯವಾದಿಲಕ್ಷಣಮ್ ಅನ್ನಮ್ । ತತಶ್ಚ ಅನ್ನಾತ್ ಅದ್ಯಮಾನಾತ್ ವೀರ್ಯಂ ಸಾಮರ್ಥ್ಯಂ ಬಲಂ ಸರ್ವಕರ್ಮಪ್ರವೃತ್ತಿಸಾಧನಮ್ । ತದ್ವೀರ್ಯವತಾಂ ಚ ಪ್ರಾಣಿನಾಂ ತಪಃ ವಿಶುದ್ಧಿಸಾಧನಂ ಸಂಕೀರ್ಯಮಾಣಾನಾಮ್ । ಮನ್ತ್ರಾಃ ತಪೋವಿಶುದ್ಧಾನ್ತರ್ಬಹಿಃ ಕರಣೇಭ್ಯಃ ಕರ್ಮಸಾಧನಭೂತಾಃ ಋಗ್ಯಜುಃಸಾಮಾಥರ್ವಾಙ್ಗಿರಸಃ । ತತಃ ಕರ್ಮ ಅಗ್ನಿಹೋತ್ರಾದಿಲಕ್ಷಣಮ್ । ತತಃ ಲೋಕಾಃ ಕರ್ಮಣಾಂ ಫಲಮ್ । ಇೀಷು ಚ ಸೃಷ್ಟಾನಾಂ ಪ್ರಾಣಿನಾಂ ನಾಮ ಚ " ದೇವದತ್ತಃ " " ಯಜ್ಞದತ್ತಃ " ಇತ್ಯಾದಿ ॥

(ಭಾಷ್ಯಾರ್ಥ)

ಆ ಪುರುಷನು ಹಿಂದೆ ಹೇಳಿದಂತೆ ಆಲೋಚನೆಮಾಡಿ **ಹಿರಣ್ಯಗರ್ಭ**ನೆಂಬ[3] ಎಲ್ಲಾ ಪ್ರಾಣಿಗಳ ಕರಣಗಳಿಗೂ ಆಧಾರನಾಗಿರುವ ಅಂತರಾತ್ಮನಾದ[4] **ಪ್ರಾಣ**ನನ್ನು ಸೃಷ್ಟಿಮಾಡಿದನು. ಈ ಪ್ರಾಣನಿಂದ ಎಲ್ಲಾ ಪ್ರಾಣಿಗಳೂ ಶುಭಕರ್ಮದಲ್ಲಿ ತೊಡಗುವದಕ್ಕೆ ಕಾರಣವಾಗಿರುವ **ಶ್ರದ್ಧೆ**ಯನ್ನು[5] (ಸೃಷ್ಟಿಮಾಡಿದನು). ಆಮೇಲೆ ಕರ್ಮಫಲವನ್ನುಅನುಭವಿಸುವದಕ್ಕೂ ಸಾಧನವನ್ನು ಮಾಡುವದಕ್ಕೂ ಆಶ್ರಯವಾಗಿ ಕಾರಣವಾಗಿರುವ **ಮಹಾಭೂತಗಳನ್ನು** ಸೃಷ್ಟಿಸಿದನು. ಖಂ ಎಂದರೆ ಶಬ್ದಗುಣವುಳ್ಳ (ಆಕಾಶವು) ; **ವಾಯು** ಎಂದರೆ ತನ್ನ ಸ್ಪರ್ಶ(ವೆಂಬ ಗುಣದಿಂದಲೂ), ಕಾರಣದ ಗುಣ (ವಾದ ಶಬ್ದ) ದಿಂದಲೂ ಕೂಡಿ ಎರಡು ಗುಣಗಳುಳ್ಳ (ಭೂತವು) ; ಇದರಂತೆ

1. " ಸಂಶಯಸಂಕಲ್ಪಲಕ್ಷಣಮ್ '' ಆ||, " ಸಂಶಯವಿಕಲ್ಪಾದಿಲಕ್ಷಣಮ್ " ಆ|| ಈ ಎರಡು ಪಾಠಗಳಿಗಿಂತ ಆ|| ಪಾಠದಲ್ಲಿ ಟಿಪ್ಪಣಿಯಲ್ಲಿ ಕೊಟ್ಟಿರುವ ಈ ಪಾಠವು ಮೇಲು.

2. " ಕಾರಣಂ ಚ " ಎಂಬ ಪಾಠಕ್ಕಿಂತ ಇದೇ ಮೇಲು.

3. " ಹಿರಣ್ಯಗರ್ಭನೆಂಬ ಹೆಸರು ಯಾವ ಉಪಾಧಿಯಿಂದ ಬರುತ್ತದೆಯೋ ಆ ಸಮಷ್ಟಿಪ್ರಾಣವನ್ನು ಎಂದರ್ಥ. ಏಕೆಂದರೆ 'ಯಾವದರ ಉತ್ಕ್ರಾಂತಿಯಿಂದ ನಾನು ಉತ್ಕ್ರಾಂತನಾಗುವೆನು '' ಎಂಬ ಆಲೋಚನೆಗೆ ಅನುಗುಣವಾಗಬೇಕಾದರೆ ಪ್ರಾಣವೇ ಬೇಕು"—ಎಂದು ಆ|| ವ್ಯಾಖ್ಯಾನಕಾರರು ಬರೆದಿರುತ್ತಾರೆ. ಹಿರಣ್ಯಗರ್ಭನ ಸೃಷ್ಟಿಯೊಡನೆಯೇ ಪ್ರಾಣವೂ ಸೃಷ್ಟಿಯಾಗಿರುವದರಿಂದ ಆಚಾರ್ಯರು ಹಿರಣ್ಯಗರ್ಭನೆಂದು ಬರೆದಿರುವಂತೆ ತೋರುತ್ತದೆ. ಪೀಠಿಕೆಯನ್ನು ನೋಡಿರಿ.

4. ಹಿರಣ್ಯಗರ್ಭನೇ ಪ್ರಾಣಿಗಳಲ್ಲಿ ದ್ರಷ್ಟೃ, ಶ್ರೋತೃ-ಎಂದು ಮುಂತಾಗಿ ತೋರಿಕೊಳ್ಳುವ ಸರ್ವಕರಣಾತ್ಮನು. ಮುಂ. ಭಾ. ೨-೧-೪.

5. ತೈ. ಭಾ. ಭಾ. ೧೩೯ ನೋಡಿ. ಶ್ರದ್ಧೆಯೆಂದರೆ ಭೂತಸೂಕ್ಷ್ಮವೆಂಬ ಅರ್ಥವನ್ನೂ ಮಾಡಬಹುದಾದರೂ(ಸೂ. ಭಾ. ೩-೧-೨)ಇಲ್ಲಿ ಆ ಅರ್ಥವಿಲ್ಲವೆಂದು ತೋರುವದು.

**ಜ್ಯೋತಿ** ಎಂದರೆ ತನ್ನದಾದ ರೂಪದಿಂದಲೂ ಹಿಂದಿನ ಶಬ್ದಸ್ಪರ್ಶಗಳೆಂಬ (ಗುಣ) ಗಳೆರಡರಿಂದಲೂ ಕೂಡಿ ಮೂರು ಗುಣವುಳ್ಳ (ಭೂತವು) ; ಇದರಂತೆ **ಅಪ್ಪು** ಎಂದರೆ (ತನ್ನ)ಅಸಾಧಾರಣವಾದ ರಸಗುಣದಿಂದಲೂ ಹಿಂದಿನ ಗುಣಗಳ ಸೇರುವಿಕೆಯಿಂದಲೂ ನಾಲ್ಕುಗುಣವುಳ್ಳ (ಭೂತ) ; ಹಾಗೂ ಗಂಧಗುಣದಿಂದಲೂ ಹಿಂದಿನ ಗುಣಗಳ ಸೇರುವಿಕೆಯಿಂದಲೂ ಐದುಗುಣಗಳುಳ್ಳ **ಪೃಥಿವಿ** (ಈ ಐದು ಭೂತಗಳು)[1] ಹೀಗೆಯೇ ಅದೇ ಭೂತಗಳಿಂದ[2] ಉಂಟಾಗಿರುವ ಅರಿವಿಗಾಗಿಯೂ ಕೆಲಸಕ್ಕಾಗಿಯೂ (ಏರ್ಪಟ್ಟಿರುವ) ಹತ್ತುಸಂಖ್ಯೆಯ **ಇಂದ್ರಿಯ ;** ಮತ್ತು ಅದನ್ನು ಆಳುವ ಒಳಗಿರುವ ಸಂಶಯ, ಸಂಕಲ್ಪ-ಮುಂತಾದ ರೂಪದ **ಮನಸ್ಸು** (ಇವನ್ನೂ ಸೃಷ್ಟಿಸಿದನು)[3].

ಹೀಗೆ ಪ್ರಾಣಿಗಳ ಕಾರ್ಯವನ್ನೂ ಕರಣವನ್ನೂ[4] ಸೃಷ್ಟಿಸಿ ಅವುಗಳು ಬಾಳುವದಕ್ಕಾಗಿ ಬತ್ತ, ಜವೆ-ಮುಂತಾದ ರೂಪದ **ಅನ್ನ**ವನ್ನೂ ; ಆ ಅನ್ನವನ್ನು ತಿಂದದ್ದರಿಂದ **ವೀರ್ಯ**ವನ್ನೂ ಎಂದರೆ ಸಾಮರ್ಥ್ಯವನ್ನೂ, ಎಲ್ಲಾಕರ್ಮಗಳಲ್ಲಿಯೂ ತೊಡಗುವದಕ್ಕೆ ಸಾಧನವಾಗಿರುದ **ಬಲ**ವನ್ನೂ ; ಆ ವೀರ್ಯವುಳ್ಳ ಪ್ರಾಣಿಗಳು ಸಂಕರವಾದರೆ ವಿಶುದ್ಧಿಯಾಗುವದಕ್ಕಾಗಿ **ತಪಸ್ಸ**ನ್ನೂ ; ತಪಸ್ಸಿನಿಂದ ಅಂತಃಕರಣದಲ್ಲಿಯೂ ಬಹಿಃಕರಣಗಳಲ್ಲಿಯೂ ವಿಶುದ್ಧಿಯನ್ನು ಹೊಂದಿದ (ಜೀವರು) ಗಳಿಗೆ ಕರ್ಮಕ್ಕೆ ಸಾಧನವಾಗಿರುವ ಋಕ್ಕು, ಯಜುಸ್ಸು, ಸಾಮ, ಅಥರ್ವಾಂಗಿರಸ್ಸು-ಎಂಬ ಮಂತ್ರಗಳನ್ನೂ, ಆಮೇಲೆ ಅಗ್ನಿ**ಹೋತ್ರವೇ** ಮುಂತಾದ ರೂಪದ ಕರ್ಮವನ್ನೂ ಆಮೇಲೆ ಕರ್ಮಗಳಿಗೆ ಫಲವಾಗಿರುವ **ಲೋಕ**ಗಳನ್ನೂ ; ಆ ಲೋಕಗಳಲ್ಲಿ ಸೃಷ್ಟಿಯಾಗುವ ಪ್ರಾಣಿಗಳ ದೇವದತ್ತ, ಯಜ್ಞದತ್ತ-ಎಂದು ಮುಂತಾದ[5] ಹೆಸರುಗಳನ್ನೂ (ಸೃಷ್ಟಿಮಾಡಿದನು.)[6]

(ಭಾಷ್ಯ)

೧೧೩. ಏವಮೇತಾಃ ಕಲಾಃ ಪ್ರಾಣಿನಾಮ್ ಅವಿದ್ಯಾದಿದೋಷಬೀಜಾಪೇಕ್ಷಯಾ ಸೃಷ್ಟಾಃ ತೈಮಿರಿಕದೃಷ್ಟಿಸೃಷ್ಟಾ ಇವ ದ್ವಿಚನ್ದ್ರಮಶಕಮಕ್ಷಿಕಾದ್ಯಾಃ

---

1. ಭೂತಗಳ ಈ ಉತ್ತರೋತ್ತರಗುಣವೃದ್ಧಿಯನ್ನು ಮುಂ. ಭಾ. ೨-೧-೩. (ಛಾ. ಭಾ. ೫೮). ತೈ. ಭಾ. ಭಾ. ೧೧೪-ಇವುಗಳಲ್ಲಿ ನೋಡಿರಿ.

2. ಸೂಕ್ಷ್ಮಭೂತಗಳಿಂದ.

3. ಇಲ್ಲಿ ಹೇಳಿರುವ ಸೃಷ್ಟಿಯ ಕ್ರಮದ ವಿಷಯಕ್ಕೆ ಪೀಠಿಕೆಯನ್ನು ನೋಡಿರಿ.

4. ದೇಹೇಂದ್ರಿಯಗಳನ್ನು ಎಂದರ್ಥ; ಭೂತಸೃಷ್ಟಿಯನ್ನು ಹೇಳಿರುವದು ಭೌತಿಕವಾದ ದೇಹೇಂದ್ರಿಯಗಳ ಸೃಷ್ಟಿಯನ್ನೂ ತಿಳಿಸುವದಕ್ಕೆ ಎಂದರ್ಥ.

5. ಇಲ್ಲಿ ಎಲ್ಲಾ ವಸ್ತುಗಳ ನಾಮಗಳನ್ನೂ ತೆಗೆದುಕೊಳ್ಳಬೇಕು. ನಾಮರೂಪಗಳೆರಡನ್ನೂ ಸೃಷ್ಟಿಸಿದನು ಎಂದು ಒಟ್ಟರ್ಥ.

6. ಮುಂಡಕದಲ್ಲಿ ವಿಸ್ತಾರವಾಗಿ ಹೇಳಿರುವ ಸೃಷ್ಟಿಯನ್ನೆಲ್ಲ ಇಲ್ಲಿ ಹದಿನಾರು ಕಲೆಗಳ ರೂಪದಲ್ಲಿ ಸಂಗ್ರಹಿಸಿ ಹೇಳಿರುತ್ತದೆ.

ಸ್ವಪ್ನದೃಕ್ಸೃಷ್ಟಾ ಇವ ಚ ಸರ್ವಪದಾರ್ಥಾಃ ಪುನಸ್ತಸ್ಮಿನ್ನೇವ ಪುರುಷೇ ಪ್ರಲೀಯನ್ತೇ ಹಿತ್ವಾ ನಾಮರೂಪಾದಿವಿಭಾಗಮ್ । ಕಥಮ್ ?--

(ಭಾಷ್ಯಾರ್ಥ)

**ಹೀಗೆ ಈ ಕಲೆಗಳು ತಿಮಿರರೋಗವುಳ್ಳವರ ದೃಷ್ಟಿಯಿಂದ ಸೃಷ್ಟಿಯಾಗುವ ಎರಡನೆಯ ಚಂದ್ರ, ಸೊಳ್ಳೆಗಳು, ನೊಣಗಳು ಮುಂತಾದವುಗಳಂತೆಯೂ ಕನಸುಕಾಣುವಾತನಿಂದ ಸೃಷ್ಟವಾದ ಎಲ್ಲಾ ಪದಾರ್ಥಗಳಂತೆಯೂ ಪ್ರಾಣಿಗಳ ಅವಿದ್ಯೆಯೇ ಮುಂತಾದ ದೋಷಗಳೆಂಬ ಬೀಜದ[1] ಅಪೇಕ್ಷೆಯಿಂದ ಸೃಷ್ಟವಾಗಿ ಮತ್ತೆ ನಾಮ, ರೂಪ-ಮುಂತಾದ ವಿಂಗಡವನ್ನು ಬಿಟ್ಟು ಅದೇ ಪುರುಷನಲ್ಲಿ ಲಯವಾಗುತ್ತವೆ.** ಹೇಗೆಂದರೆ:--

**ಸ ಯಥೇಮಾ ನದ್ಯಃ ಸ್ಯನ್ದಮಾನಾಃ ಸಮುದ್ರಾಯಣಾಃ ಸಮುದ್ರಂ ಪ್ರಾಪ್ಯಾಸ್ತಂ ಗಚ್ಛನ್ತಿ ಭಿದ್ಯೇತೇ ತಾಸಾಂ ನಾಮ ರೂಪೇ ಸಮುದ್ರ ಇತ್ಯೇವಂ ಪ್ರೋಚ್ಯತೇ । ಏವಮೇವಾಸ್ಯ ಪರಿದ್ರಷ್ಟುರಿಮಾಃ ಷೋಡಶಕಲಾಃ ಪುರುಷಾಯಣಾಃ ಪುರುಷಂ ಪ್ರಾಪ್ಯಾಸ್ತಂ ಗಚ್ಛನ್ತಿ ಭಿದ್ಯೇತೇ ಚಾಸಾಂ ನಾಮರೂಪೇ ಪುರುಷ ಇತ್ಯೇವಂ ಪ್ರೋಚ್ಯತೇ ಸ ಏಷೋಽಕಲೋಽಮೃತೋ ಭವತಿ ತದೇಷ ಶ್ಲೋಕಃ ॥ ೫ ॥**

೫. ಅದು ಹೇಗೆಂದರೆ, (ಹೇಗೆ) ಸಮುದ್ರಕ್ಕೆ ಹೋಗಬೇಕಾಗಿ ಹರಿಯುತ್ತಿರುವ ಈ ನದಿಗಳು ಸಮುದ್ರವನ್ನು ಸೇರಿದಮೇಲೆ ಅಸ್ತವಾಗುವವೋ (ಹೇಗೆ) ಅವುಗಳ ನಾಮರೂಪಗಳು ನಾಶವಾಗುವವೋ (ಹೇಗೆ ಎಲ್ಲವೂ) ಸಮುದ್ರವೆಂದೇಪರಿಯಲ್ಲಿ ಹೇಳಲ್ಪಡುತ್ತದೆಯೋ, ಇದರಂತೆಯೇ ಪುರುಷನನ್ನು ಸೇರಬೇಕಾಗಿರುವ ಈ ಪರಿದ್ರಷ್ಟೃವಿನ ಈ ಹದಿನಾರು ಕಲೆಗಳು ಪುರುಷನನ್ನು ಸೇರಿದಮೇಲೆ ಅಸ್ತವಾಗುತ್ತವೆ; ಇವುಗಳ ನಾಮರೂಪಗಳು ನಾಶವಾಗಿ ಬಿಡುತ್ತವೆ; ಎಲ್ಲವೂ ಪುರುಷನೆಂದೇಪರಿಯಲ್ಲಿ ಹೇಳಲ್ಪಡುತ್ತದೆ; ಆ ಈತನು ಅಕಲನೂ ಅಮೃತನೂ ಆಗುತ್ತಾನೆ. ಅಲ್ಲಿ ಈ ಶ್ಲೋಕ(ವಿದೆ).

---

1. ಇಲ್ಲಿ ಬೀಜವೆಂಬ ಶಬ್ದವಿರುವದರಿಂದ ನಿಜವಾಗಿ ಉಪಾದಾನಕಾರಣವೊಂದುಂಟೆಂದು ಭಾವಿಸಬಾರದು. ಅವಿದ್ಯಾಕಾಮಕರ್ಮಗಳೆಂಬ ದೋಷಗಳಿರುವವರೆಗೂ ಮತ್ತೆ ಮತ್ತೆ ಹುಟ್ಟಿ ಸಾಯಲೇಬೇಕಾದರೂ ಆತ್ಮನಿಗಿಂತ ಬೇರೆಯಾಗಿ ಯಾವದೊಂದೂ ಪರಮಾರ್ಥವಾಗಿ ಹುಟ್ಟಿರುವದಿಲ್ಲ, ಲಯವಾಗುವದೂ ಇಲ್ಲ ಎಂದರ್ಥ. ಪ್ರಾತಿಭಾಸಿಕರಜತಾದಿಗಳೂ ಒಂದು ಉಪಾದಾನದಿಂದ ಹುಟ್ಟುವವೆಂದು ಕೆಲವರು ಭಾವಿಸಿರುವರು ; ಇದು ತಪ್ಪೆಂಬುದಕ್ಕೆ ತೈ. ಭಾ. ಭಾ. ೨೧೩ ; ಸೂ. ಭಾ. ೩-೨-೩-೨೪-ಇವುಗಳನ್ನು ನೋಡಿ. ದ್ವಿತೀಯಚಂದ್ರಾದಿಗಳಂತೆ ಕಲೆಗಳೂ ಹುಸಿತೋರಿಕೆಯು ಎಂಬುದೇ ಇಲ್ಲಿ ವಿವಕ್ಷಿತ.

(ಭಾಷ್ಯ)

೧೧೪. ಸ ದೃಷ್ಟಾನ್ತಃ । ಯಥಾ ಲೋಕೇ ಇಮಾ ನದ್ಯಃ ಸ್ಯನ್ದಮಾನಾಃ ಸ್ರವನ್ತ್ಯಃ ಸಮುದ್ರಾಯಣಾಃ ಸಮುದ್ರ (ಏವ)[1] ಅಯನಂ ಗತಿಃ ಆತ್ಮಭಾವಃ ಯಾಸಾಂ ತಾಃ ಸಮುದ್ರಾಯಣಾಃ ಸಮುದ್ರಂ ಪ್ರಾಪ್ಯ ಉಪಗಮ್ಯ ಅಸ್ತಮ್ ಅದರ್ಶನಂ[2] ನಾಮರೂಪತಿರಸ್ಕಾರಂ ಗಚ್ಛನ್ತಿ । ತಾಸಾಂ ಚ ಅಸ್ತಂಗತಾನಾಂ ಭಿದ್ಯೇತೇ ವಿನಶ್ಯೇತೇ ನಾಮರೂಪೇ ಗಙ್ಗಾ ಯಮುನಾ-ಇತ್ಯಾದಿಲಕ್ಷಣೇ ತದಭೇದೇನ[3] ಸಮುದ್ರ ಇತ್ಯೇವಂ ಪ್ರೋಚ್ಯತೇ ತದ್ವಸ್ತು ಉದಕಲಕ್ಷಣಮ್ । ಏವಂ ಯಥಾಯಂ ದೃಷ್ಟಾನ್ತಃ ಉಕ್ತಲಕ್ಷಣಸ್ಯ ಪ್ರಕೃತಸ್ಯ ಅಸ್ಯ ಪುರುಷಸ್ಯ ಪರಿದ್ರಷ್ಟುಃ ಪರಿ ಸಮನ್ತಾತ್ ದ್ರಷ್ಟುಃ ದರ್ಶನಸ್ಯ ಕರ್ತುಃ ಸ್ವರೂಪಭೂತಸ್ಯ । ಯಥಾ ಅರ್ಕಃ ಸ್ವಾತ್ಮಪ್ರಕಾಶಸ್ಯ ಕರ್ತಾ ಸರ್ವತಃ ತದ್ವತ್ । ಇಮಾಃ ಷೋಡಶ[4] ಪ್ರಾಣಾದ್ಯಾ ಉಕ್ತಾಃ ಕಲಾಃ ಪುರುಷಾಯಣಾಃ ನದೀನಾಮಿವ ಸಮುದ್ರಃ ಪುರುಷಃ ಅಯನಮ್ ಆತ್ಮಭಾವ ಗಮನಮ್ ಯಾಸಾಂ ಕಲಾನಾಂ ತಾಃ ಪುರುಷಾಯಣಾಃ ಪುರುಷಂ ಪ್ರಾಪ್ಯ ಪುರುಷಾತ್ಮಭಾವಮ್ ಉಪಗಮ್ಯ ತಥೈವ ಅಸ್ತಂ ಗಚ್ಛನ್ತಿ । ಭಿದ್ಯೇತೇ ಚ ಆಸಾಂ ನಾಮರೂಪೇ ಪ್ರಾಣಾದ್ಯಾಖ್ಯಾ ರೂಪಂ ಚ ಯಥಾಸ್ವಮ್ । ಭೇದೇ ಚ ನಾಮರೂಪಯೋಃ ಯದನಷ್ಟಂ ತತ್ತ್ವಂ ಪುರುಷ ಇತ್ಯೇವಂ ಪ್ರೋಚ್ಯತೇ ಬ್ರಹ್ಮವಿದ್ಭಿಃ ॥

(ಭಾಷ್ಯಾರ್ಥ)

ಆ ದೃಷ್ಟಾಂತವು ಹೇಗೆಂದರೆ ಹೇಗೆ ಲೋಕದಲ್ಲಿ ಸಮುದ್ರಾಯಣವಾಗಿ ಎಂದರೆ ಸಮುದ್ರವೇ ತಮಗೆ ಗತಿಯಾಗಿ, (ತಮ್ಮ) ಸ್ವರೂಪವಾಗಿ ಉಳ್ಳವಾಗಿ[5] ಹರಿಯುತ್ತಿರುವ ಓಡಿನಡೆಯುತ್ತಿರುವ ಈ ನದಿಗಳು ಸಮುದ್ರವನ್ನು ಸೇರಿದಮೇಲೆ ಅಸ್ತವಾಗುವವೋ; ಕಾಣದಂತೆ ನಾಮರೂಪಗಳ ಮರೆಯಾಗುವಿಕೆಯನ್ನು ಹೊಂದುವವೋ, ಹೀಗೆ ಅಸ್ತವಾಗುವ ಅವುಗಳ ಗಂಗೆ, ಯಮುನೆ-ಮುಂತಾದ ನಾಮರೂಪಗಳು (ಹೇಗೆ) ಭಿನ್ನವಾಗುವವೋ, ನಾಶವಾಗುವವೋ; ಅದರೊಡನೆ ಒಂದಾಗಲು[7]

1. ಈ ಮಾತು ಆ॥ ಪಾಠದಲ್ಲಿಲ್ಲ.

2. ಇದು ಆ॥ ಪಾಠದಲ್ಲಿಲ್ಲದಿದ್ದರೂ ಅವಶ್ಯ.

3. "ತದಭೇದೇ" ಎಂಬಷ್ಟೇ ಆ॥ ಪಾಠ.

4. ಇಲ್ಲಿ "ಕಲಾಃ" ಎಂಬ ಮಾತು ಆ॥ ಪಾಠದಲ್ಲಿ ಹೆಚ್ಚಾಗಿದೆ.

5. ಯಥಾ ಎಂಬ ಮಾತು ಎರಡೂ ಕಡೆಗೆ ಅನ್ವಯವಾಗಿದೆ.

6. ನೋಡುವುದಕ್ಕೆ ಬೇರೆಬೇರೆಯ ರೂಪವಾಗಿದ್ದರೂ ಅವುಗಳ ರೂಪವು ಆಗಲೂ ಸಮುದ್ರವೇ ಎಂಬುದು ನಿಜ.

7. "ತದಭೇದೇ" ಎಂಬುದರ ಅನುವಾದವಿದು; "ತದ್ಭೇದೇ" ಎಂದಿದ್ದರೆ ಅವುಗಳು ನಾಶವಾಗಲು ಎಂದರ್ಥ.

ಆ ನೀರೆಂಬ ವಸ್ತುವು ಸಮುದ್ರ ಎಂದೀಪರಿಯಲ್ಲಿ (ಹೇಗೆ) ಎನಿಸಿಕೊಳ್ಳುವದೋ, ಹೀಗೆಯೇ ಈ ದೃಷ್ಟಾಂತದಂತೆಯೇ, ಹಿಂದೆ ಹೇಳಿದ ಸ್ವರೂಪದ ಈ ಪರಿದ್ರಷ್ಟೃವಿನ- ಹೇಗೆ ಸೂರ್ಯನು ತನ್ನ ಬೆಳಕನ್ನು ಎಲ್ಲಾ ಕಡೆಗೂ (ಪಸರಿಸುವ) ತನ್ನ ಬೆಳಕಿಗೆ ಕರ್ತೃವೋ ಹಾಗೆ ಪರಿ-ಸುತ್ತಲೂ ದ್ರಷ್ಟೃವಾಗಿರುವ ತನ್ನ ಸ್ವರೂಪವಾದ ನೋಟಕ್ಕೆ ಕರ್ತೃವಾದ[1]-ಪ್ರಕೃತನಾದ ಈ ಪುರುಷನ ಈ ಪ್ರಾಣನೇ ಮುಂತಾದ ಮೇಲೆ ಹೇಳಿದ ಹದಿನಾರು ಕಲೆಗಳು ಪುರುಷಾಯಣವಾಗಿ[2]—ನದಿಗಳಿಗೆ ಸಮುದ್ರದಂತೆ ಪುರುಷನು ಅಯನವು, ಎಂದರೆ ಸ್ವರೂಪವನ್ನು ಪಡೆಯುವಿಕೆಯು ಯಾವ ಕಲೆಗಳಿಗೆ (ಆಗಿರುವನೋ) ಅವು ಪುರುಷಾಯಣವಾಗಿ-ಪುರುಷನನ್ನು ಸೇರಿದಮೇಲೆ ಪುರುಷನ ಸ್ವರೂಪವನ್ನು ಹೊಂದಿದ ಬಳಿಕ ಹಾಗೆಯೇ ಅಸ್ತವಾಗುತ್ತವೆ, ಮತ್ತು ಇವುಗಳ ನಾಮರೂಪಗಳು ಪ್ರಾಣನೇ ಮುಂತಾದ ಆಯಾ ಹೆಸರೂ ರೂಪವೂ ಭಿನ್ನವಾಗುತ್ತವೆ. ನಾಮರೂಪಗಳು ನಾಶವಾಗುತ್ತಲೂ ನಾಶವಾಗದೆ ಇರುವ ತತ್ತ್ವವಿರುವದಷ್ಟೆ, ಅದನ್ನು ಬ್ರಹ್ಮಜ್ಞಾನಿಗಳು **ಪುರುಷನು** ಎಂದು ಕರೆಯುತ್ತಾರೆ.

(ಭಾಷ್ಯ)

೧೧೫. ಯ ಏವಂ ವಿದ್ವಾನ್ ಗುರುಣಾ ಪ್ರದರ್ಶಿತಕಲಾಪ್ರಲಯಮಾರ್ಗಃ ಸ ಏಷ ವಿದ್ಯಯಾ ಪ್ರವಿಲಾಪಿತಾಸು ಅವಿದ್ಯಾಕಾಮಕರ್ಮಜನಿತಾಸು ಪ್ರಾಣಾದಿ ಕಲಾಸು ಅಕಲಃ । ಅವಿದ್ಯಾಕೃತಕಲಾನಿಮಿತ್ತೋ ಹಿ ಮೃತ್ಯುಃ । ತದಪಗಮೇ ಅಕಲತ್ವಾದೇವ ಅಮೃತಃ ಭವತಿ । ತತ್ ಏತಸ್ಮಿನ್ ಅರ್ಥೇ ಏಷಃ ಶ್ಲೋಕಃ ॥

(ಭಾಷ್ಯಾರ್ಥ)

ಯಾವನು ಹೀಗೆಂದು ತಿಳಿದುಕೊಂಡು ಗುರುವು ತೋರಿಸಿಕೊಟ್ಟಂತೆ ಕಲೆಗಳನ್ನು ಪ್ರವಿಲಯಮಾಡಿಕೊಳ್ಳುವ ಮಾರ್ಗವನ್ನು (ಕಂಡುಕೊಂಡಿರುವನೋ) ಆ ಈತನು **ಅವಿದ್ಯಾಕಾಮಕರ್ಮಗಳಿಂದುಂಟಾದ ಪ್ರಾಣನೇ ಮುಂತಾದ ಕಲೆಗಳು ವಿದ್ಯೆಯಿಂದ ಲಯಮಾಡಲ್ಪಡಲಾಗಿ**[3] ಅಕಲನಾಗಿರುತ್ತಾನೆ,

---

1. ಸೂರ್ಯನು ಪ್ರಕಾಶಕನೆಂಬುದು ಹೇಗೋ ಆತ್ಮನು ದ್ರಷ್ಟೃವೆಂಬುದೂ ಹಾಗೆಯೇ; ನೋಟಕ್ಕೂ ಅವನ ಸ್ವರೂಪಕ್ಕೂ ಭೇದವಿರುವದಿಲ್ಲ.

2. ನಿಜವಾಗಿ ಪುರುಷಸ್ವರೂಪವೇ ಆಗಿದ್ದು.

3. ಪ್ರಪಂಚಪ್ರಲಯವಾದಿಗಳೆಂಬ ಕೆಲವರು ಕಲೆಗಳನ್ನು ಲಯಗೊಳಿಸುವದಕ್ಕೆ ಒಂದಾನೊಂದು ಸಾಧನೆಯು ಬೇಕೆಂದು ವಾದಿಸುತ್ತಿದ್ದರು. ಆತ್ಮವಸ್ತುಜ್ಞಾನದಿಂದಲೇ ಕೃತಕೃತ್ಯತೆಯನ್ನು ಹೇಳುವ ಆಚಾರ್ಯರು ಅವರ ಮತವನ್ನು ಖಂಡಿಸಿ ಜ್ಞಾನದಿಂದಲೇ ಪ್ರಪಂಚವಿಲಯವಾಗುತ್ತದೆ ಎಂದು ತಮ್ಮ ಭಾಷ್ಯದಲ್ಲಿ ಅಲ್ಲಲ್ಲಿ ತಿಳಿಸಿರುತ್ತಾರೆ. ಸೂ. ಭಾ. ೧-೪-೧; ೪-೨-೨೧. ಸುಷುಪ್ತಿಮರಣಪ್ರಲಯಗಳಲ್ಲಿ ಕಲೆಗಳ ಲಯವಾದರೂ ಅವು ತೀರ ಹೋಗುವದು ವಿದ್ಯೆಯಿಂದ ಮಾತ್ರ ಸೂ. ಭಾ. ೪-೨-೮, ೧೬.

(ಅಮೃತನಾಗಿರುತ್ತಾನೆ) ಅವಿದ್ಯೆಯಿಂದಾಗಿರುವ ಕಲೆಗಳೆಂಬ ನಿಮಿತ್ತದಿಂದಲೇ ಅಲ್ಲವೆ, ಮೃತ್ಯು ಉಂಟಾಗುವದು?[1] ಅದು ಹೋಗಲಾಗಿ ಕಲೆಗಳಿಲ್ಲದವನಾಗಿರುವದರಿಂದಲೇ ಅಮೃತನಾಗಿರುತ್ತಾನೆ. ಆ ಈ ಅರ್ಥದಲ್ಲಿ ಈ (ಮುಂದಿನ) ಶ್ಲೋಕ (ವಿರುತ್ತದೆ):—

**ಅರಾ ಇವ ರಥನಾಭೌ**
**ಕಲಾ ಯಸ್ಮಿನ್ ಪ್ರತಿಷ್ಠಿತಾಃ ।**
**ತಂ ವೇದ್ಯಂ ಪುರುಷಂ ವೇದ**
**ಯಥಾ ಮಾ ವೋ ಮೃತ್ಯುಃ ಪರಿವ್ಯಥಾ ಇತಿ ॥ ೬ ॥**

೬. ಬಂಡಿಯ ಗಾಲಿಯ ಗುಂಬದಲ್ಲಿ ಹಾರೆಯ ಕೋಲುಗಳಂತೆ ಯಾವನಲ್ಲಿ ಕಲೆಗಳು ನಿಂತಿರುವವೋ ವೇದ್ಯನಾದ ಆ ಪುರುಷನನ್ನು ಅರಿತುಕೊಳ್ಳಬೇಕು, (ಹಾಗಾದರೆ) ನಿಮ್ಮನ್ನು ಮೃತ್ಯು ವ್ಯಥೆಗೊಳಿಸದೆ ಇದ್ದೀತು.

(ಭಾಷ್ಯ)

೧೧೬. ಅರಾ ಇವ[2] ರಥಚಕ್ರಪರಿವಾರಾ ಇವ ರಥನಾಭೌ ರಥಚಕ್ರಸ್ಯ ನಾಭೌ ಯಥಾ ಪ್ರವೇಶಿತಾಃ ತದಾಶ್ರಯಾ ಭವನ್ತಿ ಯಥಾ ತಥಾ ಇತ್ಯರ್ಥಃ । ಕಲಾಃ ಪ್ರಾಣಾದ್ಯಾಃ ಯಸ್ಮಿನ್ ಪುರುಷೇ ಪ್ರತಿಷ್ಠಿತಾಃ ಉತ್ಪತ್ತಿಸ್ಥಿತಿಪ್ರಲಯಕಾಲೇಷು ತಂ ಪುರುಷಂ ಕಲಾನಾಮ್ ಆತ್ಮಭೂತಂ ವೇದ್ಯಂ ವೇದನೀಯಂ ಪೂರ್ಣತ್ವಾತ್ ಪುರುಷಂ ಪುರಿ ಶಯನಾದ್ ವಾ ವೇದ ಜಾನೀಯಾತ್ । ಯಥಾ ಹೇ ಶಿಷ್ಯಾಃ ಮಾ ವೋ ಯುಷ್ಮಾನ್ ಮೃತ್ಯುಃ ಪರಿವ್ಯಥಾ ಮಾ ಪರಿವ್ಯಥಯತು। ನ ಚೇದ್ ವಿಜ್ಞಾಯೇತ ಪುರುಷಃ ಮೃತ್ಯುನಿಮಿತ್ತಾಂ ವ್ಯಥಾಮಾಪನ್ನಾ ದುಃಖಿನ ಏವ ಯೂಯಂ ಸ್ಥ । ಅತಃ ತನ್ಮಾಭೂತ್ ಯುಷ್ಮಾಕಮ್ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಬಂಡಿಯ ಚಕ್ರದ ಸುತ್ತಲೂ ಇರುವ ಹಾರೆಕೋಲುಗಳು ಹೇಗೆ ರಥನಾಭಿಯಲ್ಲಿ ಎಂದರೆ ಬಂಡಿಯಗಾಲಿಯ ಗುಂಬದಲ್ಲಿ ಸೇರಿಕೊಂಡು ಅದನ್ನೇ ಆಶ್ರಯಿಸಿಕೊಂಡಿರುವವೋ ಹಾಗೆ ಎಂದರ್ಥ. (ಹಾಗೆ) ಪ್ರಾಣವೇ ಮುಂತಾದ ಕಲೆಗಳು ಯಾವ ಪುರುಷನಲ್ಲಿ ಹುಟ್ಟುವದು, ಇರುವದು, ನಾಶವಾಗುವದು-(ಈ ಮೂರು) ಕಾಲಗಳಲ್ಲಿಯೂ ನಿಂತಿರುವವೋ **ಕಲೆಗಳಿಗೆ ಆತ್ಮನಾಗಿರುವ ವೇದ್ಯನಾದ ಅರಿಯಲ್ಪಡಬೇಕಾಗಿರುವ ಆ ಪುರುಷನನ್ನು**—ಪೂರ್ಣನಾಗಿರುವದರಿಂದ[3] ಅಥವಾ ಪುರು

---

1. ಕಲೆಗಳು ಮಾರ್ಪಡುತ್ತಿರುವದನ್ನು ಪುರುಷನಲ್ಲಿ ಅಧ್ಯಾಸಮಾಡಿಕೊಳ್ಳುವದರಿಂದ ಅವನಲ್ಲಿ ಜನನಮರಣಾದಿವಿಕಾರಗಳಿರುವಂತೆ ತೋರುತ್ತದೆ-ಎಂದು ಭಾವ.

2. ಇದು ಮಾ॥ ಕಾ॥ ಪಾಠದಲ್ಲಿದೆ.

3. ಕಲೆಗಳು ತೋರುವಾಗ ಅವುಗಳನ್ನೆಲ್ಲ ವ್ಯಾಪಿಸಿಕೊಂಡಿರುವದರಿಂದ, ಅವುಗಳು ಅಡಗಿದಾಗ ತಾನೊಬ್ಬನೇ ಇರುವದರಿಂದ.

(ಶರೀರ) ದಲ್ಲಿ ಇದ್ದುಕೊಂಡಿರುವದರಿಂದ[1] ಪುರುಷನೆನಿಸಿಕೊಂಡಿರುವ (ಆತ್ಮನನ್ನು) ತಿಳಿಯಬೇಕು, ಅರಿತುಕೊಳ್ಳಬೇಕು. ಎಲೈ ಶಿಷ್ಯರೆ, ಹಾಗಾದರೆ ಮೃತ್ಯುವು ನಿಮ್ಮನ್ನು ವ್ಯಥೆಗೊಳಿಸದೆ ಇದ್ದೀತು ; ಪುರುಷನನ್ನು ಅರಿತುಕೊಳ್ಳದಿದ್ದರೆ ಮೃತ್ಯುನಿಮಿತ್ತವಾದ ವ್ಯಥೆಯನ್ನು ಹೊಂದಿ ನೀವು ದುಃಖಿಗಳಾಗಿಯೇ ಇರುವಿರಿ, ಆದ್ದರಿಂದ ಅದು ನಿಮಗೆ ಆಗದೆ ಇರಲಿ !-ಎಂದಭಿಪ್ರಾಯ.

## ಕಥೆಯ ಉಪಸಂಹಾರ

**ತಾನ್ ಹೋವಾಚೈತಾವದೇವಾಹಮೇತತ್ಪರಂ ಬ್ರಹ್ಮ ವೇದ ನಾತಃ ಪರಮಸ್ತೀತಿ ॥ ೭ ॥**

೭. ಆತನು ಅವರಿಗೆ ಹೇಳಿದ್ದೇನೆಂದರೆ :–" ಇಷ್ಟೇ, ಈ ಪರಬ್ರಹ್ಮವನ್ನು ನಾನು ಅರಿತಿರುವೆನು ; ಇದಕ್ಕಿಂತ ಹೆಚ್ಚಿನದು ಇಲ್ಲ."

(ಭಾಷ್ಯ)

೧೧೭. ತಾನ್ ಏವಂ ಅನುಶಿಷ್ಯ ಶಿಷ್ಯಾನ್ ತಾನ್ ಹೋವಾಚ ಪಿಪ್ಪಲಾದಃ ಕಿಲ ಏತಾವದೇವ ವೇದ್ಯಂ ಪರಂ ಬ್ರಹ್ಮ । ವೇದ ವಿಜಾನಾಮಿ ಅಹಮ್ ಏತತ್ । ನ ಅತಃ ಅಸ್ಮಾತ್ ಪರಮ್ ಅಸ್ತಿ ಪ್ರಕೃಷ್ಟತರಂ ವೇದಿತವ್ಯಂ ಇತಿ ಏವಮ್ ಉಕ್ತವಾನ್ ಶಿಷ್ಯಾಣಾಮ್ ಅವಿದಿತಶೇಷಾಸ್ತಿತ್ವಾಶಙ್ಕಾನಿವೃತ್ತಯೇ ಕೃತಾರ್ಥಬುದ್ಧಿಜನನಾರ್ಥಂ ಚ ॥

(ಭಾಷ್ಯಾರ್ಥ)

ಆ ಶಿಷ್ಯರಿಗೆ ಈ ರೀತಿ ಬೋಧಿಸಿದವನಾಗಿ **ಪಿಪ್ಪಲಾದನು** ಅವರನ್ನು ಕುರಿತು ಇಂತೆಂದನಂತೆ : " ತಿಳಿಯಬೇಕಾದ ಪರಬ್ರಹ್ಮವು ಇಷ್ಟೇ[2]. ನಾನು ಇದನ್ನು ಅರಿತಿರುವೆನು. ಇದಕ್ಕಿಂತಲೂ ಈ (ಬ್ರಹ್ಮಕ್ಕಿಂತಲೂ) ಹೆಚ್ಚಿನದು, ತಿಳಿಯಬೇಕಾದ ಹೆಚ್ಚಿನ (ವಸ್ತು) ಇರುವದಿಲ್ಲ[3] ಎಂದು ಹೀಗೆ ಶಿಷ್ಯರಿಗೆ ತಿಳಿಯದೆ ಉಳಿದಿರುವದು (ಏನಾದರೂ) ಇರಬಹುದೆಂಬ ಶಂಕೆಯನ್ನು ತೊಲಗಿಸುವದಕ್ಕಾಗಿಯೂ (ತಾವು) ಕೃತಾರ್ಥರಾದೆವೆಂಬ ಬುದ್ಧಿಯನ್ನುಂಟುಮಾಡುವದಕ್ಕಾಗಿಯೂ ಹೇಳಿದನು.

---

1. ಹಿಂದೆ ೬-೨ ಭಾ. ಭಾ. ೯೬ ರಲ್ಲಿ ಹೇಳಿರುವಂತೆ ಜಿಜ್ಞಾಸುವಿನ ಶರೀರದಲ್ಲಿಯೇ ಅರಿತುಕೊಳ್ಳಬೇಕಾಗಿರುವದರಿಂದ.

2. ಏತಾವದೇವ ಎಂಬಲ್ಲಿಗೇ ವಾಕ್ಯವನ್ನು ಮುಗಿಸಿಕೊಳ್ಳದಿದ್ದರೆ " ಇಷ್ಟೇ ನನಗೆ ತಿಳಿಯುವದು " ಎಂದಂತಾಗಿ ಗುರು ಪೂರ್ಣವಾಗಿ ಹೇಳಲಿಲ್ಲವೆಂದಾಗುವದು.

3. ಇನ್ನಿಲ್ಲ ಎಂದದ್ದರಿಂದ ನೀವು ಎಲ್ಲವನ್ನೂ ತಿಳಿದುಕೊಂಡಿರಿ, ಕೃತಾರ್ಥರಾದಿರಿ ಎಂದಂತೆ ಆಯಿತು.

**ತೇ ತಮರ್ಚಯನ್ತಸ್ತ್ವಂ ಹಿ ನಃ ಪಿತಾ ಯೋಽಸ್ಮಾಕಮ ವಿದ್ಯಾಯಾಃ ಪರಂ ಪಾರಂ ತಾರಯಸೀತಿ । ನಮಃ ಪರಮ ಋಷಿಭ್ಯೋ ನಮಃ ಪರಮಋಷಿಭ್ಯಃ ॥ ೮ ॥**

೮. ಅವರು ಆತನನ್ನು ಅರ್ಚಿಸುತ್ತಾ "ನೀನೇ ನಮ್ಮ ತಂದೆಯು. ಯಾವ ನೀನು ನಮ್ಮ ಅವಿದ್ಯೆಯ ಆಚೆಯ ದಡವನ್ನು ಮುಟ್ಟಿಸಿರುತ್ತೀಯೆ" (ಎಂದರು). ಪರಮಋಷಿಗಳಿಗೆ ನಮಸ್ಕಾರ ! ಪರಮಋಷಿಗಳಿಗೆ ನಮಸ್ಕಾರ !

(ಭಾಷ್ಯ)

೧೧೮. ತತಃ ತೇ ಶಿಷ್ಯಾಃ ಗುರುಣಾ ಅನುಶಿಷ್ಟಾಃ ತಂ ಗುರುಂ ಕೃತಾರ್ಥಾಃ ಸನ್ತಃ ವಿದ್ಯಾನಿಷ್ಕ್ರಯಮ್[1] ಅಪಶ್ಯನ್ತಃ ಕಿಂ ಕೃತವನ್ತಃ ಇತಿ? ಉಚ್ಯತೇ । ಅರ್ಚಯನ್ತಃ ಪೂಜಯನ್ತಃ ಪಾದಯೋಃ ಪುಷ್ಪಾಞ್ಜಲಿಪ್ರಕಿರಣೇನ ಪ್ರಣಿಪಾತೇನ ಚ ಶಿರಸಾ । ಕಿಮ್ ಊಚುಃ ಇತಿ? ಆಹ—ತ್ವಂ ಹಿ ನಃ ಅಸ್ಮಾಕಂ ಪಿತಾ । ಬ್ರಹ್ಮ ಶರೀರಸ್ಯ ವಿದ್ಯಯಾ ಜನಯಿತೃತ್ವಾತ್ ನಿತ್ಯಸ್ಯ ಅಜರಾಮರಣಸ್ಯ ಅಭಯಸ್ಯ । ಯಃ ತ್ವಮೇವ ಅಸ್ಮಾಕಮ್ ಅವಿದ್ಯಾಯಾಃ ವಿಪರೀತಜ್ಞಾನಾತ್ ಜನ್ಮಜರಾಮರಣ ರೋಗದುಃಖಾದಿಗ್ರಾಹಾತ್ ಅಪಾರಾತ್ ಅವಿದ್ಯಾಮಹೋದಧೇಃ ವಿದ್ಯಾಪ್ಲವೇನ ಪರಮ್ ಅಪುನರಾವೃತ್ತಿಲಕ್ಷಣಂ ಮೋಕ್ಷಾಖ್ಯಂ ಮಹೋದಧೇರಿವ ಪಾರಂ ತಾರಯಸಿ ಅಸ್ಮಾನ್ ಇತ್ಯತಃ ಪಿತೃತ್ವಂ ತವ ಅಸ್ಮಾನ್ ಪ್ರತಿ ಉಪಪನ್ನಮ್ ಇತರಸ್ಮಾತ್ । ಇತರೋಽಪಿ ಹಿ ಪಿತಾ ಶರೀರಮಾತ್ರಂ ಜನಯತಿ ತಥಾಪಿ ಸ ಪೂಜ್ಯತಮೋ ಲೋಕೇ । ಕಿಮು ವಕ್ತವ್ಯಮ್ ಆತ್ಯನ್ತಿಕಾಭಯದಾತುಃ ಇತ್ಯಭಿಪ್ರಾಯಃ । ನಮಃ ಪರಮಋಷಿಭ್ಯಃ ಬ್ರಹ್ಮವಿದ್ಯಾಸಂಪ್ರದಾಯಕರ್ತೃಭ್ಯಃ । "ನಮಃ ಪರಮಋಷಿಭ್ಯಃ" ಇತಿ ದ್ವಿರ್ವಚನಮ್ ಆದರಾರ್ಥಮ್ ॥

(ಭಾಷ್ಯಾರ್ಥ)

ಆಮೇಲೆ ಗುರುವಿನಿಂದ ಬೋಧಿತರಾಗಿದ್ದ ಆ ಶಿಷ್ಯರು ಕೃತಾರ್ಥರಾಗಿ ವಿದ್ಯೆಗೆ ನಿಷ್ಕ್ರಯವೇನೂ[2] ತೋರದ್ದರಿಂದ ಆ ಗುರುವಿಗೆ ಏನು ಮಾಡಿದರು? ಎಂದರೆ ಹೇಳುತ್ತಾರೆ: ಆತನನ್ನು ಅಡಿಗಳೆಡೆಯಲ್ಲಿ ಪುಷ್ಪಾಂಜಲಿಯನ್ನು ಎರಚುವದು, ತಲೆ

---

1. "ಅನ್ಯತ್" ಎಂದು ವಾ॥ ಪಾಠದಲ್ಲಿ ಹೆಚ್ಚಾಗಿದೆ.

2. ವಾ॥ ಪಾಠಕ್ಕೆ ಬೇರೆಯೇನೂ "ತೋರದ್ದರಿಂದ" ಎಂದರ್ಥ. ಬ್ರಹ್ಮವಿದ್ಯೆಗೆ ಯಾವ ಗುರುದಕ್ಷಿಣೆಯನ್ನು ಕೊಟ್ಟರೂ ಸರಿತೂಗಲಾರದು ಎಂದು ಭಾವ.

**ಬಾಗಿ** ನಮಸ್ಕರಿಸುವದು ಇವುಗಳಿಂದ ಅರ್ಚಿಸುತ್ತಾ ಪೂಜಿಸುತ್ತಾ[1] ಏನು ಹೇಳಿದರೆಂದರೆ (ಶ್ರುತಿ) ಹೇಳುತ್ತದೆ: ನೀನೇ ನಮಗೆ ನಮ್ಮಗಳಿಗೆ ತಂದೆಯು; **ಏಕೆಂದರೆ ನಿತ್ಯ**ವಾಗಿಯೂ ಮುಪ್ಪುಸಾವುಗಳಿಲ್ಲದೆ ಅಂಜಿಕೆಯಿಲ್ಲದ್ದಾಗಿಯೂ ಇರುವ **ಬ್ರಹ್ಮ ಶರೀರ**ವನ್ನು (ನೀನು) ವಿದ್ಯೆಯಿಂದ ಉಂಟುಮಾಡಿಕೊಟ್ಟಿರುತ್ತೀಯೆ[2] ಯಾವ (ಈ) ನೀನೇ ನಮ್ಮಗಳ **ಅವಿದ್ಯೆಯಿಂದ ಎಂದರೆ ತಪ್ಪುತಿಳಿವಳಿಕೆಯಿಂದ**[3] ಹುಟ್ಟು, ಮುಪ್ಪು, ಸಾವು, ಬೇನೆ, ದುಗುಡ-ಮುಂತಾದ ಮೊಸಳೆಗಳುಳ್ಳ ಕಡೆಗಾಣದ ಅವಿದ್ಯೆ ಯೆಂಬ ದೊಡ್ಡಸಾಗರದಿಂದ ನಮ್ಮನ್ನು ವಿದ್ಯೆಯೆಂಬ ಹಡಗಿನಲ್ಲಿ ಆಚೆಯ ಎಂದರೆ ಮತ್ತೆ ಹಿಂತಿರುಗದ ಸ್ವರೂಪದ **ಮೋಕ್ಷ**ವೆಂಬ ಹೆಸರಿನ-ಕಡಲಿನ ಆಚೆಯ ದಡದಂತೆ (ಸಂಸಾರದ ಕಡಲಿನ)-ಆಚೆಯ ದಡವನ್ನು ಮುಟ್ಟಿಸಿರುತ್ತೀಯೆ. ಆದ್ದರಿಂದ ಇನ್ನೊಬ್ಬ (ದೇಹದಾತೃವಾದ) ತಂದೆಗಿಂತಲೂ ನೀನೇ ನಮ್ಮಗಳ ತಂದೆ ಎನ್ನುವದು ಯುಕ್ತವು. ಆ ಇನ್ನೊಬ್ಬ ತಂದೆಯಾದರೂ ಶರೀರವನ್ನು ಮಾತ್ರ ಉಂಟುಮಾಡಿಕೊಡುತ್ತಾನೆ; ಆದರೂ (ಅಷ್ಟು ಮಾತ್ರದಿಂದಲೇ) ಅವನು ಲೋಕದಲ್ಲಿ (ಉಳಿದ) ಎಲ್ಲರಿಗಿಂತಲೂ ಪೂಜ್ಯನಾಗಿರುತ್ತಾನೆ. ಆತ್ಯಂತಿಕವಾದ[4] ಅಭಯವನ್ನು ಕೊಟ್ಟಿರುವ (ನಿನ್ನ ವಿಷಯದಲ್ಲಿ ಪೂಜ್ಯತಮನೆಂದು) ಹೇಳುವದೇನು? ಎಂದು ಅಭಿಪ್ರಾಯ. ಬ್ರಹ್ಮವಿದ್ಯಾ ಸಂಪ್ರದಾಯಕರ್ತೃಗಳಾದ ಪರಮಋಷಿಗಳಿಗೆ ನಮಸ್ಕಾರ! "ಪರಮಋಷಿಗಳಿಗೆ ನಮಸ್ಕಾರ" ಎಂದು ಎರಡು ಸಲ ಹೇಳಿರುವದು ಆದರವನ್ನು ಸೂಚಿಸುವದಕ್ಕೆ.

**ಓಂ ತತ್ ಸತ್**

---

1. ಗುರುಭಕ್ತಿಗಿಂತ ಹೆಚ್ಚಿನ ದಕ್ಷಿಣೆಯಿಲ್ಲ, ಇದು ಜ್ಞಾನಕ್ಕೆ ಒಂದು ಮುಖ್ಯ ಕಾರಣ-ಎಂದು ಭಾವ.

2. ಅವಿದ್ಯೆಯಿಂದ ಸಂಸಾರಿಗಳಾಗಿದ್ದ ನಮಗೆ ವಿದ್ಯೆಯಿಂದ ನಮ್ಮ ಸ್ವರೂಪವು ಈಗ ಹೊಸದಾಗಿ ಹುಟ್ಟಿದಂತಾಯಿತು ಎಂದರ್ಥ.

3. ಆಚಾರ್ಯರ ಸಿದ್ಧಾಂತದಲ್ಲಿ ಅವಿದ್ಯೆಯೆಂದರೆ ಅಧ್ಯಾಸವೇ ಎಂಬುದಕ್ಕೆ ಈ ವಾಕ್ಯವೊಂದು ಗಮಕವು.

4. ನಿತ್ಯವಾದ, ಕೊನೆಗಾಣದ.

# ಉಪನಿಷತ್ತಿನ ಸಾರ

---

## ಒಂದನೆಯ ಪ್ರಶ್ನೆ

೧-೨. ಸುಕೇಶಭಾರದ್ವಾಜನೇ ಮುಂತಾಗಿ ಆರು ಜನರು ಪೂಜ್ಯನಾದ ಪಿಪ್ಪಲಾದನ ಬಳಿಗೆ ಬಂದು ಒಂದು ವರ್ಷಪವರೆಗೆ ಬ್ರಹ್ಮಚರ್ಯವನ್ನು ಮಾಡಿದಬಳಿಕ ಆತನನ್ನು ಕೇಳಿದ ಪ್ರಶ್ನೆಗಳಿಗೆ ಪಿಪ್ಪಲಾದನು ಕೊಟ್ಟ ಉತ್ತರಗಳು ಈ ಉಪನಿಷತ್ತಿನಲ್ಲಿರುತ್ತವೆ.

೩. ಕಬಂಧಿಕಾತ್ಯಾಯನನ ಪ್ರಶ್ನೆ : ಪೂಜ್ಯರೆ, ಈ ಪ್ರಜೆಗಳು ಹೇಗೆ ಹುಟ್ಟುತ್ತಾರೆ ?

೪. ಪಿಪ್ಪಲಾದನ ಉತ್ತರ : ಪೂರ್ವಕಲ್ಪದಲ್ಲಿ ಎಲ್ಲರಿಗಿಂತಲೂ ಉತ್ಕೃಷ್ಟಸಾಧನವನ್ನು ಮಾಡಿದವನು ಅದರ ಫಲವಾಗಿ ಈ ಕಲ್ಪಕ್ಕೆ ಪ್ರಜಾಪತಿಯಾಗುತ್ತಾನೆ. ಅವನು ಎಲ್ಲವನ್ನೂ ಸೃಷ್ಟಿಸುತ್ತಾನೆ. ಅವನು ರಯಿ, ಪ್ರಾಣ-ಎಂಬ ಎರಡು ರೂಪಗಳನ್ನು ತಳೆದು ಕ್ರಮಕ್ರಮವಾಗಿ ಎಲ್ಲವೂ ಆಗುತ್ತಾನೆ.

೫-೮. ಹೇಗೆಂದರೆ ಮೊದಲು ಆದಿತ್ಯನೆಂಬ ಪ್ರಾಣನೂ ಚಂದ್ರನೆಂಬ ರಯಿಯೂ ಆಗುತ್ತಾನೆ. ಆದಿತ್ಯನು ಸರ್ವರ ಪ್ರಾಣವನ್ನೂ ಕೊಟ್ಟು ಮತ್ತೆ ತನ್ನಲ್ಲಿಯೇ ಉಪಸಂಹಾರ ಮಾಡಿಕೊಳ್ಳುತ್ತಿರುತ್ತಾನೆ. ಆದ್ದರಿಂದ ಸರ್ವಪ್ರಾಣಿಗಳಿಗೂ ಪ್ರಾಣರೂಪದಿಂದ ಕಾರಣನಾಗಿರುವವನು ಆದಿತ್ಯರೂಪನಾದ ಪ್ರಜಾಪತಿ.

೯-೧೧. ಆದಿತ್ಯಚಂದ್ರರೂಪರಾಗಿರುವ ಪ್ರಾಣರಯಿಗಳಿಂದ ಸಂವತ್ಸರವಾಗುತ್ತದೆ. ಆದ್ದರಿಂದ ಸಂವತ್ಸರವೂ ಪ್ರಜಾಪತಿಯೇ; ಸಂವತ್ಸರದ ಒಂದು ಭಾಗವಾದ ಉತ್ತರಾಯಣವು ಪ್ರಾಣ, ದಕ್ಷಿಣಾಯನವು ಚಂದ್ರ. ಉತ್ತರಾಯಣದ ಮಾರ್ಗದಿಂದ ಹೋಗುವ ಸಾಧಕರು ಪುನರಾವೃತ್ತಿಯಿಲ್ಲದ ಗತಿಯನ್ನು ಪಡೆಯುವರು ; ದಕ್ಷಿಣಾಯನದಿಂದ ಹೋಗುವವರು ಸಂಸಾರಕ್ಕೆ ಮತ್ತೆ ಹಿಂತಿರುಗುವರು. ಋತುಮಾಸಗಳೆಂಬ ಅವಯವಗಳಿಂದ ಕೂಡಿದ ಸಂವತ್ಸರರೂಪಿಯಾದ ಪ್ರಜಾಪತಿಯಲ್ಲಿ ಇಡಿಯ ಜಗತ್ತೇ ಸೇರಿಕೊಂಡಿರುವದು.

೧೨-೧೩. ಸಂವತ್ಸರದ ಅವಯವಗಳಾದ ಮಾಸವೂ ದಿವಸವೂ ಒಂದೊಂದೂ ಪ್ರಜಾಪತಿಯೆಂದೇ ಭಾವಿಸಬೇಕು. ಉದಾಹರಣೆಗೆ ಮಾಸರೂಪಿಯಾದ ಪ್ರಜಾಪತಿಗೆ ಶುಕ್ಲಪಕ್ಷವೇ ಪ್ರಾಣ, ಕೃಷ್ಣಪಕ್ಷವೇ ರಯಿ. ಇದರಂತೆ ದಿವಸರೂಪಿಯಾದ ಪ್ರಜಾಪತಿಗೆ ಹಗಲೇ ಪ್ರಾಣ, ರಾತ್ರಿಯೇ ರಯಿ. ಪ್ರಾಣರೂಪವಾದ ಶುಕ್ಲಪಕ್ಷದಲ್ಲಿ ಯಾಗಮಾಡುವವರಿಗೆ ಉತ್ತಮಗತಿ; ಪ್ರಾಣೋಪಾಸಕರಿಗೆ ಎರಡೂ ಶುಕ್ಲಪಕ್ಷವೇ ಆಗಿರುತ್ತವೆ, ಆದ್ದರಿಂದ ಅವರಿಗೆ ಶುಭಫಲವೇ ಆಗುತ್ತದೆ. ಇವರಂತೆ ಪ್ರಾಣರೂಪವಾದ ಹಗಲಿನಲ್ಲಿ ಸ್ತ್ರೀಸಂಯೋಗವನ್ನು ಮಾಡದೆ ರಾತ್ರಿಯಲ್ಲಿ ಮಾತ್ರವೇ ಋತುಕಾಲದಲ್ಲಿ ಭಾರ್ಯಾಗಮನವನ್ನು ಮಾಡುವವರಿಗೆ ಬ್ರಹ್ಮಚರ್ಯದ ಫಲವೇ ದೊರೆಯುತ್ತದೆ.

೧೪. ಪ್ರಜಾಪತಿಯು ದಿವಸರೂಪಿಯಾಗಿ ಆಮೇಲೆ ಬತ್ತವೇ ಮುಂತಾದ ಧಾನ್ಯಗಳ ರೂಪವನ್ನು ತೆಗೆದುಕೊಳ್ಳುತ್ತಾನೆ. ಅನ್ನವನ್ನು ತಿಂದ ಜನರಲ್ಲಿ ರಕ್ತವೂ ರೇತಸ್ಸೂ ಆಗಿ ಅದರಿಂದ ಪ್ರಜೆಗಳು ಹುಟ್ಟುತ್ತವೆ.

೧೫–೧೬. ಕರ್ಮವನ್ನು ನಿಯಮದಿಂದ ಮಾಡಿದ ಗೃಹಸ್ಥರು ಚಂದ್ರಲೋಕವನ್ನು ಪಡೆಯುತ್ತಾರೆ. ಕರ್ಮವನ್ನೂ ಉಪಾಸನೆಯನ್ನೂ ಚಿತ್ತಶುದ್ಧಿಯಿಂದ ಮಾಡಿದ ಮಿಕ್ಕ ಆಶ್ರಮಿಗಳು ಸೂರ್ಯದ್ವಾರದಿಂದ ಬ್ರಹ್ಮಲೋಕವನ್ನು ಪಡೆಯುತ್ತಾರೆ, ಬ್ರಹ್ಮಲೋಕದಿಂದ ಮತ್ತೆ ಹಿಂತಿರುಗುವದಿಲ್ಲ. ಆದರೆ ಚಂದ್ರಲೋಕಕ್ಕೆ ಹೋದ ಕರ್ಮಿಗಳು ಕರ್ಮದ ಫಲವು ಸವೆಯಲು ಸಂಸಾರಕ್ಕೆ ಮರಳಿಬರುತ್ತಾರೆ. ಅವರೇ ಮೇಲೆ ಹೇಳಿದ ರೀತಿಯಿಂದ ಅನ್ನ, ರಕ್ತ, ರೇತಸ್ಸು–ಇವುಗಳ ಮೂಲಕವಾಗಿ ಬೇರೆಬೇರೆಯ ಪ್ರಜೆಗಳಾಗಿ ಹುಟ್ಟುತ್ತಾರೆ. ಆದ್ದರಿಂದ ಕರ್ಮಕ್ಕನುಗುಣವಾಗಿ ಪ್ರಜೆಗಳು ಹುಟ್ಟುತ್ತಿವೆ, ಅವು ನಿಜವಾಗಿ ಪ್ರಜಾಪತಿಯಿಂದಲೇ ಬಂದಿರುತ್ತವೆ.

## ಎರಡನೆಯ ಪ್ರಶ್ನೆ

೧. ಭಾರ್ಗವವೈದರ್ಭಿಯ ಪ್ರಶ್ನೆ: ಈ ಶರೀರವನ್ನು ಧರಿಸುವದಕ್ಕೆ ಯಾವ ಯಾವದು ಬೇಕಾಗಿರುತ್ತದೆ? ಇದರಲ್ಲಿ ಯಾವವು ತಮ್ಮ ಹೆಚ್ಚಿಗೆಯನ್ನು ತೋರ್ಪಡಿಸಿಕೊಳ್ಳುತ್ತಿರುವವು? ಇವುಗಳಲ್ಲೆಲ್ಲ ಶ್ರೇಷ್ಠವಾದದ್ದು ಯಾವದು?

೨–೪. ಪಿಪ್ಪಲಾದನ ಉತ್ತರ: ಆಕಾಶವೇ ಮುಂತಾದ ಐದು ಭೂತಗಳು ಶರೀರದ ರೂಪವನ್ನು ತಳೆದಿರುತ್ತವೆ. ಪಂಚಬುದ್ಧೀಂದ್ರಿಯಗಳೂ ಪಂಚಕರ್ಮೇಂದ್ರಿಯಗಳೂ ಇದರಲ್ಲಿ ತಮ್ಮ ವ್ಯಾಪಾರವನ್ನು ಮಾಡುತ್ತಿರುವವು. ಒಂದಾನೊಂದು ಕಾಲದಲ್ಲಿ ಇವು ತಾವು ಒಬ್ಬೊಬ್ಬರೇ ಈ ದೇಹವನ್ನು ತಡೆದಿಟ್ಟುಕೊಂಡಿರುವೆವೆಂದು ಹೆಮ್ಮೆಪಡುವದಕ್ಕೆ ಮೊದಲು ಮಾಡಿದವು. ಆದರೆ ಮುಖ್ಯಪ್ರಾಣನು "ಎಲಾ, ಭ್ರಾಂತರಾಗದಿರಿ, ನಾನೇ ಪ್ರಾಣಾಪಾನಾದಿ ವೃತ್ತಿಭೇದಗಳಿಂದ ಶರೀರದಲ್ಲಿರುವ ವ್ಯಾಪಾರವನ್ನೆಲ್ಲ ನಡೆಯಿಸುತ್ತಿರುವೆನು" ಎಂದು ಅವಕ್ಕೆ ತಿಳಿಯಹೇಳಿದನು. ಆದರೆ ಕರಣಗಳಿಗೆ ಈ ವಿಷಯದಲ್ಲಿ ನಂಬಿಕೆಯಾಗದೆ ಹೋಯಿತು. ಆದ್ದರಿಂದ ಪ್ರಾಣನು ಸ್ವಲ್ಪ ಮುನಿಸಿನಿಂದ ಶರೀರವನ್ನು ಬಿಟ್ಟು ಮೇಲಕ್ಕೇಳುವವನಂತೆ ಮಾಡಿದನು. ಕೂಡಲೆ, ಜೇನುಗಳರಸನು ಎದ್ದ ಕ್ಷಣದಲ್ಲಿ ಮಿಕ್ಕನೊಣಗಳು ತಾವೂ ಏಳುವಂತೆ, ಪ್ರಾಣನ ಹಿಂಗಡೆಯಲ್ಲಿಯೇ ಮಿಕ್ಕ ಪ್ರಾಣಗಳಾದ ಕರಣಗಳೂ ಏಳಬೇಕಾಗಿ ಬಂದಿತು. ಆಗ ಅವು ಪ್ರಾಣನ ಹೆಚ್ಚುಗಾರಿಕೆಯನ್ನು ಮನಗಂಡು ಹೀಗೆಂದು ಅವನನ್ನು ಹೊಗಳಿದವು.

೫–೧೩. ಈ ಪ್ರಾಣನೇ ಅಗ್ನಿ, ಸೂರ್ಯ, ಪರ್ಜನ್ಯ, ವಾಯು, ಭೂಮಿ, ಚಂದ್ರ–ಮುಂತಾದ ದೇವತೆಯು. ಮೂರ್ತಾಮೂರ್ತಸ್ವರೂಪವಾಗಿರುವದೆಲ್ಲವೂ ಈತನೇ. ಈತನೇ ದೇವತೆಗಳ ಅಮೃತವು. ವೇದಗಳೂ ಬ್ರಹ್ಮಕ್ಷತ್ರಬಲವೂ ಇವನವೇ. ಸಂತಾನಬೀಜವೂ ತಂದೆತಾಯಿಗಳೂ ಮಕ್ಕಳೂ ಈತನೇ. ಈತನೇ ಚಕ್ಷುರಾದಿಪ್ರಾಣಗಳ ರೂಪದಲ್ಲಿ ನಿಂತಿರುವವನು: ಆ ಚಕ್ಷುರಾದಿಗಳು ತಮ್ಮ ತಮ್ಮ ವಿಷಯವನ್ನು ಈತನಿಗೇ ಕಾಣಿಕೆಯಾಗಿ ಒಪ್ಪಿಸುತ್ತಿರುವವು. ದೇವತೆಗಳಿಗೂ ಪಿತೃಗಳಿಗೂ ಹವ್ಯಕವ್ಯಗಳನ್ನು ಮುಟ್ಟಿಸುವವನು ಈತನೇ. ಅಧ್ಯಾತ್ಮದಲ್ಲಿ ಸಮಸ್ತಶರೀರವ್ಯಾಪಾರವನ್ನೂ ನಡೆಯಿಸುತ್ತಾ ಅಂಗಗಳಿಗೆಲ್ಲ ಸಾರವೆನಿಸಿಕೊಂಡಿರುವವನು ಈತನೇ. ಪರ್ಜನ್ಯನಾಗಿ ಮಳೆಯನ್ನು ಸುರಿಸಿ ತನ್ನ ಸ್ವರೂಪರಾದ ಪ್ರಜೆಗಳಿಗೆಲ್ಲ ಆನಂದವನ್ನುಂಟುಮಾಡುವವನೂ ಈತನೇ. "ಪ್ರಾಣನೆ, ನೀನು ಸ್ವಭಾವಶುದ್ಧನು, ಅಥರ್ವಣರಿಗೆ ಪೂಜ್ಯನಾಗಿರುವ ಏಕರ್ಷಿಯೆಂಬ ಅಗ್ನಿಯು ನೀನೇ. ಚಕ್ಷುರಾದಿಗಳಾದ ನಾವು ಹೋಮದ್ರವ್ಯವನ್ನು ನಿನಗೆ ಕೊಡುವವರು, ನೀನೇ ಜಗತ್ತಿಗೆಲ್ಲ

ಒಡೆಯನು, ನೀನೇ ನಮಗೆ ತಂದೆ, ಎಲ್ಲಕ್ಕೂ ತಂದೆ. ನಮ್ಮಗಳಲ್ಲಿಯೂ ಮನಸ್ಸಿನಲ್ಲಿಯೂ ಇರುವ ನಿನ್ನಿಂದಲೇ ನಾವು ಮಂಗಳಸ್ವರೂಪರಾಗಿ ಕಾಣಿಸಿಕೊಳ್ಳುತ್ತಿರುವೆವು; ಆದ್ದರಿಂದ ನಮ್ಮನ್ನು ಬಿಟ್ಟುಹೋಗಿ ನಮ್ಮನ್ನು ಅಮಂಗಲರೂಪರನ್ನಾಗಿ ಮಾಡದಿರು. ಈ ಲೋಕ ವಲ್ಲಿಯೂ ಪರಲೋಕದಲ್ಲಿಯೂ ಇರುವ ಭೋಗವೆಲ್ಲ ಭೋಕ್ತನಾದ ನಿನ್ನ ವಶದಲ್ಲಿರುವದು. ಆದಕಾರಣ ಪ್ರಾಣನೆ, ಮಕ್ಕಳನ್ನು ತಾಯಿ ಕಾಪಾಡುವಂತೆ ನೀನೂ ನಮ್ಮನ್ನು ಕಾಪಾಡ ಬೇಕು. ಜನರಿಗೆ ಬ್ರಾಹ್ಮಣಸಂಪತ್ತೂ ಕ್ಷತ್ರಿಯಸಂಪತ್ತೂ ನಿನ್ನಿಂದಲೇ ದೊರಕಬೇಕಾಗಿರು ವದು; ನೀನಿಷ್ಟರೆ ಮಾತ್ರವೇ ದೊರಕಬಹುದಾಗಿರುವ ಸಂಪತ್ತನ್ನೂ ಪ್ರಜ್ಞೆಯನ್ನೂ ನಮಗೆ ಅನುಗ್ರಹಿಸು"

ಹೀಗೆ ಕಾರ್ಯಕರಣರೂಪವಾಗಿರುವ ಆಕಾಶಾದಿಗಳು, ವಾಕ್ಚಕ್ಷುರಾದಿಗಳು, ಮನಸ್ಸು–ಇವೆಲ್ಲದರೊಳಗೂ ಇದ್ದುಕೊಂಡಿರುವ ಪ್ರಾಣನೇ ಎಲ್ಲಕ್ಕೂ ಹೆಚ್ಚಿನವನು. ಇವನೇ ಭೋಕ್ತೃವಾದ ಸರ್ವಾತ್ಮನಾದ ಪ್ರಜಾಪತಿಯು.

## ಮೂರನೆಯ ಪ್ರಶ್ನೆ

೧. ಕೌಸಲ್ಯಆಶ್ವಲಾಯನನ ಪ್ರಶ್ನೆ: ಪ್ರಾಣನು ಯತರಿಂದ ಹುಟ್ಟುತ್ತಾನೆ? ಶರೀರದಲ್ಲಿ ಹೇಗೆ ಪ್ರವೇಶಿಸುತ್ತಾನೆ? ಇವ ಹೇಗೆ ಬೇರೆಬೇರೆಯಾಗಿ ವಿಂಗಡಿಸಿಕೊಂಡಿರುವನು? ಇವನು ಉತ್ಕ್ರಮಣವಾಗುವದು ಹೇಗೆ? ಇವನು ಹೊರಗೂ ಒಳಗೂ ಎಲ್ಲವನ್ನೂ ಧರಿಸಿರುವದು ಹೇಗೆ?

೨–೩. ಪಿಪ್ಪಲಾದನ ಉತ್ತರ: ಮನುಷ್ಯನಿಂದ ನೆರಳು ಹುಟ್ಟುವಂತೆ ಆತ್ಮನಿಂದಲೇ ಪ್ರಾಣನು ಉತ್ಪತ್ತಿಯಾಗುತ್ತಾನೆ. ಇವನು ಕರ್ಮವಾಸನೆಯ ಬೆಸೆಯಿಂದ ಈ ಶರೀರಕ್ಕೆ ಬರುತ್ತಾನೆ.

೪-೭. ಇವನು ಪ್ರಾಣ, ಅಪಾನ, ವ್ಯಾನ, ಉದಾನ, ಸಮಾನ–ಎಂದು ಐದು ಬಗೆ ಯಾಗಿ ಹಂಚಿಕೊಂಡು ಶರೀರದಲ್ಲಿ ಕೆಲಸಮಾಡುತ್ತಿರುತ್ತಾನೆ. ಇಂದ್ರಿಯಗಳನ್ನೂ ತನ್ನ ವೃತ್ತಿಗಳನ್ನೂ ಇಂಥಿಂಥ ಕೆಲಸಮಾಡಬೇಕೆಂದು ಕಟ್ಟುಮಾಡಿ ನಿಲ್ಲಿಸುತ್ತಾನೆ. ಕೆಳಭಾಗ ದಲ್ಲಿ ಅಪಾನ, ಮೇಲೆ ಪ್ರಾಣ, ನಡುವೆ ಸಮಾನ, ಹೃದಯದಿಂದ ದೇಹದ ಎಲ್ಲಾ ಕಡೆಗೂ ಹಬ್ಬಿಕೊಂಡಿರುವ ನಾಡಿಗಳಲ್ಲಿ ವ್ಯಾನ, ಈ ನಾಡಿಗಳಲ್ಲಿ ಮೇಲಕ್ಕೆ ಹೋಗಿರುವ ಸುಷುಮ್ನೆ ಯಲ್ಲಿ ಉದಾನ–ಹೀಗೆ ಹಂಚಿಕೊಂಡಿರುತ್ತಾನೆ.

೮–೯. ಪ್ರಾಣನು ಹೊರಗೆ ಆದಿತ್ಯಾದಿರೂಪದಿಂದ ಇದ್ದುಕೊಂಡು ಒಳಗಿರುವ ಚಕ್ಷುರಾದಿಗಳನ್ನು ಅನುಗ್ರಹಿಸುತ್ತಾನೆ. ಆದಿತ್ಯಪ್ರಾಣನು ಶರೀರದಲ್ಲಿರುವ ಪ್ರಾಣವೃತ್ತಿಗೂ ಭೂಪ್ರಾಣನು ಅಪಾನವೃತ್ತಿಗೂ ಅಂತರಿಕ್ಷಪ್ರಾಣನು ಸಮಾನಕ್ಕೂ ವಾಯುಪ್ರಾಣನು ವ್ಯಾನಕ್ಕೂ ತೇಜಃಪ್ರಾಣನು ಉದಾನಕ್ಕೂ ಅನುಗ್ರಾಹಕರಾಗಿರುತ್ತಾರೆ. ಹೀಗೆ ಪ್ರಾಣನು ಆದಿತ್ಯಾದಿರೂಪದಿಂದಲೂ ಚಕ್ಷುರಾದಿರೂಪದಿಂದಲೂ ಒಳಗೂ ಹೊರಗೂ ವ್ಯಾಪಿಸಿಕೊಂಡಿ ರುತ್ತಾನೆ.

೧೦. ಉದಾನವೃತ್ತಿರೂಪದಿಂದ ಈ ಪ್ರಾಣನು ಮನುಷ್ಯನನ್ನು ಇಂದ್ರಿಯಗಳೊಡನೆ ಪುಣ್ಯಲೋಕಕ್ಕೂ ಪಾಪಲೋಕಕ್ಕೂ ಅವನವನ ಭಾವನೆಯಂತೆ ಕರೆದೊಯ್ಯುತ್ತಾನೆ.

೧೧-೧೨. ಹೀಗೆ ಪ್ರಾಣನ ಉತ್ಪತ್ತಿ, ಶರೀರಕ್ಕೆ ಬರುವಿಕೆ, ಬೇರೆಬೇರೆಯ ಸ್ಥಾನಗಳಲ್ಲಿ ಇರುವಿಕೆ, ಹೊರ ಒಳಗಿನ ವ್ಯಾಪ್ತಿ–ಇವುಗಳನ್ನು ತಿಳಿದು ಉಪಾಸನೆ ಮಾಡಿದವನಿಗೆ ಈ ಲೋಕದಲ್ಲಿ ಪ್ರಜಾಸಂತತಿಯೂ ಪರಲೋಕದಲ್ಲಿ ಪ್ರಾಣಾತ್ಮಸಾಯುಜ್ಯವೂ ಆಗುವವು.

## ನಾಲ್ಕನೆಯ ಪ್ರಶ್ನೆ

೧. ಸೌರ್ಯಾಯಣಿ ಗಾರ್ಗ್ಯನ ಪ್ರಶ್ನೆ: ಶರೀರದಲ್ಲಿ ನಿದ್ರೆಮಾಡುವ ಭಾಗಗಳು ಯಾವವು? ಎಚ್ಚತ್ತಿರುವವು ಯಾವವು? ಕನಸುಗಳನ್ನು ನೋಡುತ್ತಿರುವವರು ಯಾರು? ಗಾಢನಿದ್ರೆಯಲ್ಲಿ ಆಗುವ ಸುಖವು ಯಾರದು? ಆಗ ಮಿಕ್ಕದ್ದೆಲ್ಲವೂ ಏತರಲ್ಲಿ ಸೇರಿಕೊಳ್ಳುವದು?

೨-೪. ಪಿಪ್ಪಲಾದನ ಉತ್ತರ: ಶ್ರೋತ್ರವೇ ಮುಂತಾದ ಕರಣಗಳು ತಮ್ಮ ವ್ಯಾಪಾರವನ್ನು ಬಿಟ್ಟು ಮನಸ್ಸಿನಲ್ಲಿ ಲಯವಾಗುತ್ತವೆ; ಆಗ ಮನುಷ್ಯನು ನಿದ್ರಿಸುತ್ತಾನೆ ಎನ್ನುತ್ತಾರೆ. ಆಗಲೂ ಪ್ರಾಣಗಳು ಎಚ್ಚರವಾಗಿರುತ್ತವೆ. ಈ ಪ್ರಾಣಗಳಲ್ಲಿ ಉದಾನವೆಂಬುದು ಮನುಷ್ಯನಿಗೆ ಸುಷುಪ್ತಿಯಲ್ಲಿ ಪ್ರತಿದಿನವೂ ಬ್ರಹ್ಮಪ್ರಾಪ್ತಿಯಾಗುವಂತೆ ಮಾಡುತ್ತದೆ.

೫-೯. ಮನಸ್ಸು ಕನಸಿನಲ್ಲಿ ವಿಷಯವಿಷಯಿಭಾವವನ್ನು ತಳೆಯುತ್ತಿರುವದು. ಆಗ ಮನುಷ್ಯನು ಜಾಗ್ರತ್ತಿನ ವಾಸನೆಯಿಂದ ಎಲ್ಲವನ್ನೂ ಕಾಣುತ್ತಿರುವನು. ಯಾವಾಗ ಈ ಮನಸ್ಸು ಪಿತ್ತವೆಂಬ ತೇಜಸ್ಸಿನಿಂದ ವ್ಯಾಪ್ತವಾಗಿ ಸುಮ್ಮನಾಗುವದೋ ಆಗ ಮನಸ್ಸಿನ ವೃತ್ತಿಗಳೂ ಕರಣಗಳೂ ಹೃದಯದಲ್ಲಿ ಲಯವಾಗುತ್ತವೆ. ಆಗ ಆತ್ಮರೂಪದ ಸಾಮಾನ್ಯವಾದ ಸುಖವೂ ಸಾಮಾನ್ಯವಾದ ಅರಿವೂ ಇರುತ್ತವೆ; ಪೃಥ್ವ್ಯಾದಿಸೂಕ್ಷ್ಮಭೂತಗಳು, ಸ್ಥೂಲಭೂತಗಳು, ಚಕ್ಷುರಾದಿಕರಣಗಳು, ರೂಪಾದಿವಿಷಯಗಳು, ಅಗ್ನ್ಯಾದಿದೇವತೆಗಳು, ಮನ ಆದಿ ಅಂತಃಕರಣ, ಪ್ರಾಣಕಾರ್ಯ–ಇವೆಲ್ಲವೂ ಪರಮಾತ್ಮಸ್ವರೂಪದಲ್ಲಿಯೇ ಸೇರಿಹೋಗಿರುತ್ತವೆ. ಉಪಾಧಿಗಳಿಂದಾಗಿದ್ದ ಕರ್ತೃಭೋಕ್ತೃಸ್ವರೂಪನಾದ ಜೀವನೂ ಪರಮಾತ್ಮನಲ್ಲಿ ಬೆರೆತುಕೊಂಡಿರುತ್ತಾನೆ.

೧೦-೧೧. ಯಾವ ವಿಶೇಷಣವೂ ಇಲ್ಲದ ಅಕ್ಷರವೆಂಬ ಪರಮಾತ್ಮನ ಈ ಸ್ವರೂಪವನ್ನೂ ಇದರಲ್ಲಿ ಕಾರ್ಯಕರಣಗಳಿಂದೊಡಗೂಡಿದ ವಿಜ್ಞಾನಾತ್ಮನು ಐಕ್ಯವಾಗುವನೆಂಬುದನ್ನೂ ಅರಿತುಕೊಂಡವನಿಗೆ ಅಕ್ಷರಪ್ರಾಪ್ತಿಯೂ ಸರ್ವಾತ್ಮತ್ವವೂ ದೊರಕುವವು.

## ಐದನೆಯ ಪ್ರಶ್ನೆ

೧. ಶೈಬ್ಯಸತ್ಯಕಾಮನ ಪ್ರಶ್ನೆ: ಸಾಯುವವರೆಗೂ ತತ್ಪರನಾಗಿ ಓಂಕಾರವನ್ನು ಉಪಾಸನೆ ಮಾಡುವವನಿಗೆ ಯಾವ ಲೋಕವು ದೊರಕುತ್ತದೆ?

೨. ಪಿಪ್ಪಲಾದನ ಉತ್ತರ: ಓಂಕಾರವು ಪರಬ್ರಹ್ಮಕ್ಕೂ ಅಪರಬ್ರಹ್ಮಕ್ಕೂ ಪ್ರತೀಕವಾಗಿರುತ್ತದೆ. ಆದ್ದರಿಂದ ಸಾಧಕನು ಇದನ್ನು ಯಾವ ದೃಷ್ಟಿಯಿಂದ ಉಪಾಸನೆಮಾಡುತ್ತಾನೋ ಆ ಬ್ರಹ್ಮವನ್ನು ಪಡೆಯುತ್ತಾನೆ.

೩-೫. ಹೇಗೆಂದರೆ ಯಾವನು ಓಂಕಾರದ ಒಂದು ಮಾತ್ರೆಯ ಸ್ವರೂಪವನ್ನರಿತು ಓಂಕಾರವನ್ನುಪಾಸನೆಮಾಡಿದರೆ, ಎಂದರೆ ಅಕಾರವೊಂದರ ಅರ್ಥವನ್ನು ತಿಳಿದುಕೊಂಡು ಉಪಾಸನೆಮಾಡಿದರೆ, ಮನುಷ್ಯಲೋಕದಲ್ಲಿ ಬ್ರಾಹ್ಮಣಶ್ರೇಷ್ಠನಾಗಿ ಹುಟ್ಟಿ ಬ್ರಹ್ಮಚರ್ಯ, ತಪಸ್ಸು,

ಶ್ರದ್ಧೆ-ಇಗವುಳಿಂದೊಡಗೂಡಿ ಪ್ರಖ್ಯಾತನಾಗುತ್ತಾನೆ. ಹೀಗೆಯೇ ಎರಡು ಮಾತ್ರೆಗಳ ಜ್ಞಾನದಿಂದೊಡಗೂಡಿ ಓಂಕಾರವನ್ನು ಉಪಾಸನೆ ಮಾಡಿದರೆ ಸೋಮಲೋಕವನ್ನು ಪಡೆಯುತ್ತಾನೆ. ಆದರೆ ಮೂರುಮಾತ್ರೆಗಳ ಜ್ಞಾನದಿಂದ ಕೂಡಿದ ಓಂಕಾರೋಪಾಸನೆಯಿಂದ ಬ್ರಹ್ಮಲೋಕವನ್ನೇ ಪಡೆಯುತ್ತಾನೆ; ಅಲ್ಲಿಂದ ಮುಂದಕ್ಕೆ ಜ್ಞಾನವನ್ನು ಹೊಂದಿ ಪರಮಾತ್ಮನ ಸಾಕ್ಷಾತ್ಕಾರವನ್ನು ಪಡೆದುಕೊಳ್ಳುತ್ತಾನೆ.

೬-೭. ಹೀಗೆ ಓಂಕಾರವನ್ನು ಅದರ ಪೂರ್ಣಸ್ವರೂಪವನ್ನರಿಯದೆ ಉಪಾಸನೆ ಮಾಡಿದ್ದರಿಂದ ಅಪರಬ್ರಹ್ಮವನ್ನೂ ಅದರ ಮೂರು ಮಾತ್ರೆಗಳ ಸ್ವರೂಪದ ವಿವೇಚನೆಯನ್ನು ಮಾಡಿ ಹೊಂದಿಸಿಕೊಂಡು ಉಪಾಸನೆಮಾಡಿದ್ದರಿಂದ ಮೊದಲು ಅಪರಬ್ರಹ್ಮವನ್ನೂ ಕ್ರಮಕ್ರಮವಾಗಿ ಶಾಂತಶಿವಾದ್ವೈತಸ್ವರೂಪವಾದ ಪರಬ್ರಹ್ಮವನ್ನೂ ಪಡೆಯುತ್ತಾನೆ.

## ಆರನೆಯ ಪ್ರಶ್ನೆ

೧. **ಸುಕೇಶಭಾರದ್ವಾಜನ ಪ್ರಶ್ನೆ**: ಹದಿನಾರು ಕಲೆಗಳಿಂದಕೂಡಿದ ಪುರುಷನನ್ನು ಎಲ್ಲಿ ಅರಿತುಕೊಳ್ಳಬೇಕು ?

೨. **ಪಿಪ್ಪಲಾದನ ಉತ್ತರ**: ಈ ಕಲೆಗಳಿಗೆ ಆಧಾರನಾಗಿರುವ ಪುರುಷನು ನಮ್ಮ ಶರೀರದಲ್ಲಿ ಹೃದಯದಲ್ಲಿಯೇ ಇರುತ್ತಾನೆ.

೩. ಪ್ರಾಣದ ಉತ್ಕ್ರಾಂತಿಯಿಂದ ಆತ್ಮನಿಗೆ ಉತ್ಕ್ರಾಂತಿಯೆಂದೂ ಪ್ರಾಣವಿದ್ದರೆ ಆತ್ಮನು ಶರೀರದಲ್ಲಿರುವನೆಂದೂ ವ್ಯವಹಾರ.

೪-೬. ಆದರೆ ಪ್ರಾಣಾದಿಕಲೆಗಳು ಅವಿದ್ಯೆಯ ವೃಷ್ಟಿಯಲ್ಲಿ ಆತ್ಮನಿಂದಲೇ ಹುಟ್ಟಿ ಆತ್ಮನಲ್ಲಿಯೇ ತೋರುತ್ತಿದ್ದು, ನದಿಗಳು ಸಮುದ್ರದಲ್ಲಿ ಸೇರಿಕೊಳ್ಳುವಂತೆ ಕಡೆನೆಗೆ ಆತ್ಮನಲ್ಲಿಯೇ ಸೇರಿಕೊಳ್ಳುತ್ತವೆ. ನಿಜವಾಗಿ ನೋಡಿದರೆ ನದಿಗಳೆಲ್ಲವೂ ನೀರಿನ ರೂಪದಿಂದ ಯಾವಾಗಲೂ ಸಮುದ್ರವೇ ಆಗಿರುವಂತೆ ಕಲೆಗಳೆಲ್ಲವೂ ಪುರುಷನೇ ಆಗಿರುತ್ತವೆ. ಪ್ರಾಣ, ಶ್ರದ್ಧೆ, ಆಕಾಶ, ವಾಯು, ತೇಜಸ್ಸು, ಅಪ್ಪು, ಪೃಥ್ವಿ, ಇಂದ್ರಿಯಗಳು, ಮನಸ್ಸು, ಅನ್ನ, ವೀರ್ಯ, ತಪಸ್ಸು, ವೇದಗಳು, ಕರ್ಮ, ಲೋಕಗಳು, ಹೆಸರುಗಳು-ಈ ಹದಿನಾರು ಕಲೆಗಳೂ ಪುರುಷನಿಂದಲೇ ಸೃಷ್ಟವಾಗಿ, ಪುರುಷನಿಗಿಂತ ಬೇರೆಯಾಗಿರದೆ, ಪುರುಷನಲ್ಲಿಯೇ ಅಡಗುತ್ತಿರುವದರಿಂದ ಎಲ್ಲವೂ ಪುರುಷನೇ ಎಂದು ಯಾವನು ವಿದ್ಯೆಯಿಂದ ತಿಳಿದುಕೊಳ್ಳುವನೋ ಅವನು ನಿಷ್ಕಲನೂ ಅಮೃತನೂ ಆಗಿರುವ ಪುರುಷನೇ ಆಗುವನು.

೭-೮. **ಕಥೆಯ ಉಪಸಂಹಾರ**: ಪಿಪ್ಪಲಾದನು ಶಿಷ್ಯರಿಗೆ ಹೀಗೆಂದು ಉಪದೇಶಮಾಡಿದ ಬಳಿಕ "ಇಷ್ಟೇ ತಿಳಿದುಕೊಳ್ಳಬೇಕಾದ ಪರಬ್ರಹ್ಮವೆಂಬುದು; ಇದಕ್ಕಿಂತ ಹೆಚ್ಚಿನದೇನೂ ಇಲ್ಲ" ಎಂದು ನುಡಿದನು. ಅವರು "ನೀನು ನಮ್ಮ ತಂದೆಗಿಂತಲೂ ಪೂಜ್ಯನು, ಏಕೆಂದರೆ ತತ್ತ್ವಬೋಧೆಯಿಂದ ನಮ್ಮನ್ನು ಅವಿದ್ಯೆಯೆಂಬ ಹೆಗ್ಗಡಲಿನ ಆಚೆಯ ದಡವನ್ನು ಸೇರಿಸಿರುವೆ" ಎಂದು ನಮಸ್ಕಾರಾದಿಗಳಿಂದ ಆತನನ್ನು ಪೂಜಿಸಿದರು. ಆದ್ದರಿಂದ ಈ ಪರಬ್ರಹ್ಮವಿದ್ಯೆಯನ್ನು ಉಪದೇಶಮಾಡುವ ಸಂಪ್ರದಾಯವನ್ನು ನಡೆಯಿಸಿಕೊಂಡು ಬಂದಿರುವ ಪರಮಋಷಿಗಳಿಗೆ ಮುಮುಕ್ಷುವಾದವನು ಆದರದಿಂದ ನಿತ್ಯವೂ ನಮಸ್ಕಾರಮಾಡಬೇಕು.

*

# ಮಂತ್ರಗಳ ಅನುಕ್ರಮಣಿಕೆ

| ಮಂತ್ರಗಳ ಪ್ರತೀಕ | ಪ್ರ. | ಮ. | ಪುಟ |
|---|---|---|---|
| ಯಃ ಪುನರೇತಂ ತ್ರಿಮಾತ್ರೇಣ . . | ೫ | ೫ | ೧೧೧ |
| ಯಾ ತೇ ತನೂರ್ವಾಚಿ . . | ೨ | ೧೨ | ೪೩ |
| ವಿಜ್ಞಾನಾತ್ಮಾ ಸಹ . . | ೪ | ೧೧ | ೯೨ |
| ವಿಶ್ವರೂಪಂ ಹರಿಣಮ್ . . | ೧ | ೮ | ೧೨ |
| ವ್ರಾತ್ಯಸ್ತ್ವಂ ಪ್ರಾಣ . . | ೨ | ೧೧ | ೪೨ |
| ಸ ಈಕ್ಷಾಂಚಕ್ರೇ . . | ೬ | ೩ | ೧೩೦ |
| ಸ ಏಷ ವೈಶ್ವಾನರಃ . . | ೧ | ೭ | ೧೨ |
| ಸಂವತ್ಸರೋ ವೈ ಪ್ರಜಾಪತಿಃ . . | ೧ | ೯ | ೧೪ |
| ಸ ಪ್ರಾಣಮಸೃಜತ . . | ೬ | ೪ | ೧೪೫ |
| ಸ ಯಥೇಮಾ ನದ್ಯಃ . . | ೬ | ೫ | ೧೪೮ |
| ಸ ಯದಾ ತೇಜಸಾ . . | ೪ | ೬ | ೮೩ |
| ಸ ಯಥಾ ಸೋಮ್ಯ . . | ೪ | ೭ | ೮೫ |
| ಸ ಯದ್ಯೇಕಮಾತ್ರಮ್ . . | ೫ | ೩ | ೯೮ |
| ಸುಕೇಶಾ ಚ ಭಾರದ್ವಾಜಃ . . | ೧ | ೧ | ೨ |
| ಸೋಽಭಿಮಾನಾದೂರ್ಧ್ವಮ್ . . | ೨ | ೪ | ೩೪ |
| ಹೃದಿ ಹ್ಯೇಷ ಆತ್ಮಾ . . | ೩ | ೬ | ೫೭ |



# ಶಬ್ದಾನುಕ್ರಮಣಿಕೆ

ಇಲ್ಲಿ ಕೊಟ್ಟಿರುವ ಸಂಖ್ಯೆಗಳು ಸಂಸ್ಕೃತಭಾಷ್ಯದ ಭಾಗವನ್ನು ಸೂಚಿಸುವವು.

೧. **ಅಕ್ಷರಮ್**—

ಪರಮಾತ್ಮ, ೩೯, ೫೨, ೫೮, ೭೦, ೭೪, ೭೬, ೭೭.

೨. **ಅಜ್ಞಾನಮ್**—

ತಿಳಿಯದೆ ಇರುವದು, ೩, ೮೮

೩. **ಅಣ್ಡೋತ್ಪತ್ತಿಕ್ರಮಃ**—

ಬ್ರಹ್ಮಾಂಡವು ಉತ್ಪತ್ತಿಯಾಗುವ ಕ್ರಮ, ೫.

೪. **ಅದೃಷ್ಟಂ ಫಲಮ್**—

ಈ ಲೋಕದಲ್ಲಿ ಕಾಣಲರಿಯದ, ಪರಲೋಕದಲ್ಲಾಗುವದೆಂದು ಶಾಸ್ತ್ರದಲ್ಲಿ ಹೇಳಿರುವ ಫಲ, ೨೧.

೫. **ಅಧಿಭೂತಮ್**—

ಭೂತಗಳಿಗೆ ಸಂಬಂಧಪಟ್ಟ, ಹೊರಗಿನ, ೩೭.

೬. **ಅಧಿದೈವತಮ್**—

ಸೂರ್ಯನೇ ಮುಂತಾದ ದೇವತೆಗಳಿಗೆ ಸಂಬಂಧಪಟ್ಟಿರುವ, ೩೭, ೪೫.

೭. **ಅಧ್ಯಾತ್ಮಮ್, ಆಧ್ಯಾತ್ಮಿಕಮ್**—

ತನಗೆ ಸಂಬಂಧಪಟ್ಟ, ತನ್ನ ಶರೀರದೊಳಗಿನ, ೩೭, ೪೫, ೫೦.

೮. **ಅಧ್ಯಾರೋಪಃ**—

ಕಲ್ಪನೆ, ತತ್ತ್ವವನ್ನು ತಿಳಿಸುವದಕ್ಕಾಗಿ ಶ್ರುತಿಯಲ್ಲಿಟ್ಟುಕೊಂಡಿರುವ ಕಲ್ಪನೆ, ೯೦.

೯. **ಅನಪಾಯೋಪಜನಧರ್ಮಕಮ್**—

ನಾಶವಾಗಲಿ, ಹುಟ್ಟಾಗಲಿ ತನ್ನ ಧರ್ಮವಲ್ಲದಿರುವ ಚೈತನ್ಯ, ೯೧.

೧೦. **ಅನೃತಮ್**—

ಸುಳ್ಳಾಡುವದು, ೨೧, ೨೨, ೩೯; ಹುಸಿ ತೋರಿಕೆ, ೩೯.

೧೧. **ಅನ್ತರಾತ್ಮಾ**—

ಆತ್ಮನಿಗೂ ಶರೀರಕ್ಕೂ ನಡುವೆ ಇದ್ದು ಆತ್ಮನಂತೆ ಕಾಣುತ್ತಿರುವ ಸೂಕ್ಷ್ಮ ಶರೀರ, ೮೩, ೧೧೨.

೧೨. **ಅನ್ತರ್ಬಹಿಃಕರಣಾನಿ**—

ಒಳಗಿನ ಕರಣವಾದ ಮನಸ್ಸು ಮತ್ತು ಹೊರಗಿನ ಕರಣಗಳಾದ ಇಂದ್ರಿಯಗಳು, ೧೧೨.

೧೩. **ಅನ್ನಮ್**—

ಭೋಗ್ಯವಾದದ್ದು; ಪ್ರಾಣ, ರಯಿ—ಇವುಗಳಲ್ಲಿ ಎರಡನೆಯದು, ೫, ೬, ೧೨, ೧೭; ಆಹಾರವಸ್ತು, ೨೦.

೧೪. **ಅಪರಂ ಬ್ರಹ್ಮ**—

ಕಡಿಮೆಯ ಬ್ರಹ್ಮ, ಹಿರಣ್ಯಗರ್ಭ, ೨, ೨೬, ೮೦, ೮೬.

೧೫. **ಅಪರಾ ವಿದ್ಯಾ**—

ಕಡಿಮೆಯ ವಿದ್ಯೆ, ಕರ್ಮ ಮತ್ತು ಉಪಾಸನೆ, ೪, ೫೧.

**೧೫. ಅಭಿಧ್ಯಾನಮ್—**
ಯಮನಿಯಮಾದಿಗಳಿಂದ ಕೂಡಿಕೊಂಡು ಭಕ್ತಿಯಿಂದ ಚಿಂತಿಸುವದು, ೭೯, ೮೧.

**೧೬. ಅಮೃತಮ್—**
ನಾಶವಿಲ್ಲದ ಮೋಕ್ಷ (ಆಪೇಕ್ಷಿಕ), ೧೪, ೪೮, ೫೦; ಮರಣವಿಲ್ಲದ ಸ್ಥಿತಿ, ಮುಖ್ಯಮೋಕ್ಷ, ೮೬, ೧೧೫.

**೧೭. ಅವಿದ್ಯಾ—**
ಆತ್ಮನ ಸ್ವರೂಪವನ್ನು ತಪ್ಪಾಗಿ ತಿಳಿದುಕೊಂಡಿರುವದು, ೬೩, ೬೬, ೭೬, ೧೦೩, ೧೦೯, ೧೧೮.

**೧೮. ಅವಿದ್ಯಾಕಾಮಕರ್ಮಾಣಿ—**
ತತ್ತ್ವವನ್ನು ತಪ್ಪಾಗಿ ತಿಳಿದುಕೊಂಡಿರುವದು, ವಿಷಯದ ಆಸೆ, ಅದಕ್ಕಾಗಿ ಕರ್ಮವನ್ನು ಮಾಡುವದು-ಇವು, ೬೬, ೬೯.

**೨೦. ಅವಿದ್ಯಾಕೃತ—**
ತಪ್ಪುತಿಳಿವಳಿಕೆಯಿಂದ ಹುಟ್ಟುಗಟ್ಟಿರುವ (ನಾಮರೂಪಗಳು), ೧೦೩, ೧೯೯ ; (ಪ್ರಾಣಾದಿಕಲೆಗಳು), ೧೧೫ ; (ಭೂತಮಾತ್ರೆಗಳು), ೬೯.

**೨೧. ಅವಿದ್ಯಾದಿದೋಷಾಃ—**
ಅವಿದ್ಯೆ, ಕಾಮ, ಕರ್ಮ-ಇವು, ೧೧೩.

**೨೨. ಅವಿದ್ಯಾಧ್ಯಾರೋಪಿತಮ್—**
ತಪ್ಪುತಿಳಿವಳಿಕೆಯಿಂದ ಹುಟ್ಟುಗಟ್ಟಿರುವ, (ಕರ್ತೃತ್ವಭೋಕ್ತೃತ್ವ), ೧೦೪.

**೨೩. ಅಹಙ್ಕಾರಃ—**
ಅಂತಃಕರಣದ ಅಭಿಮಾನಾತ್ಮಕವೃತ್ತಿ, ೭೩.

**೨೪. ಆಕಾಶಃ—**
ಪಂಚಭೂತಗಳಲ್ಲಿ ಒಂದು, ೩೫ ; ಸಮಾನವೆಂಬ ಪ್ರಾಣವೃತ್ತಿ, ೪೫.

**೨೫. ಆಗಮಬಾಹ್ಯ—**
ವೇದಾಂತಸಂಪ್ರದಾಯಕ್ಕೆ ಹೊರಚ್ಚಾದ, ೧೦೪, ೧೦೭.

**೨೬. ಆಚಾರ್ಯಃ—**
ತತ್ತ್ವವನ್ನು ಹೇಳಬಲ್ಲ ಗುರು, ೨, ೩೮.

**೨೭. ಆತ್ಮಾ—**
ಲಿಂಗಾತ್ಮ ೪೩ ; ಸ್ಥಾವರಜಂಗಮಗಳ ಅಂತರಾತ್ಮನಾದ ಸೂರ್ಯ, ೧೪ ; ಭೋಕ್ತೃವಾದ ಜೀವ, ೪೭ ; ಪರಮಾತ್ಮ, ೬೫, ೬೬, ೮೦, ೮೪.

**೨೮. ಆಲಮ್ಬನಮ್—**
ವಾಚಕವಾಗಿ, ಅಥವಾ ಪ್ರತೀಕವಾಗಿ ಇರುವ ವಸ್ತು (ಓಂಕಾರ), ೮೦.

**೨೯. ಇನ್ದ್ರಃ—**
ಪರಮೇಶ್ವರನು, ೩೨.

**೩೦. ಇಷ್ಟಾಪೂರ್ತಮ್—**
ಯಾಗ, ಭಾವಿಯೇ ಮುಂತಾದವುಗಳನ್ನು ಕಟ್ಟಿಸುವದು-ಇವು, ೧೩, ೨೦.

**೩೧. ಉತ್ತರಾಯಣಃ—**
ಉತ್ತರಾಯಣಮಾರ್ಗದಿಂದ ಹೋಗಿ ಪಡೆಯುವ (ಪ್ರಾಣಾತ್ಮಭಾವ), ೨೨.

**೩೨. ಉಪಸನ್ನಃ—**
ಶಿಷ್ಯವೃತ್ತಿಗಾಗಿ ಗುರುವಿನ ಬಳಿಗೆ ಬಂದವನು, ೨, ೮೮.

**೩೩. ಉಪಾಧಿಃ—**
ವಸ್ತುಸ್ವರೂಪಕ್ಕೆ ಸಂಬಂಧಪಡದೆ ಅದನ್ನು ಗುರುತಿಸುವದಕ್ಕೆ ಉಪಯೋಗವಾಗುವ ಸುತ್ತುಗಟ್ಟು, (ಉದಾಹರಣೆಗೆ ಆತ್ಮನಿಗೆ ದೇಹಪ್ರಾಣಗಳು), ೬೨, ೬೭, ೬೯, ೭೪, ೭೧.

**೩೪. ಋಷಿಃ—**
ಸ್ವರ್ಗವನ್ನು ಬಲ್ಲವನು, ೧೩; ಪ್ರಾಣನ ತತ್ತ್ವವನ್ನು ಬಲ್ಲವನು, ೧೭; ಚಕ್ಷು ರಾದಿ ಪ್ರಾಣಗಳು, ೩೧; ಪರತತ್ತ್ವ ವನ್ನು ಬಲ್ಲವನು, ೩.

**೩೫. ಏಕರ್ಷಿಃ—**
ಅಥರ್ವವೇದದಲ್ಲಿ ಹೇಳಿರುವ ಒಂದಾ ನೊಂದು ಅಗ್ನಿ, ೩೪.

**೩೬. ಏಕತ್ವದರ್ಶನಮ್—**
ತತ್ತ್ವವು ತನಗೆರಡನೆಯದಿಲ್ಲದೆ ಒಂದೇ ಆಗಿರುವದೆಂಬ ತಿಳಿವಳಿಕೆ, ೧೦೪.

**೩೭. ಏಕಾತ್ಮವಿದಃ—**
ಅದ್ವಿತೀಯಾತ್ಮಜ್ಞಾನಿಗಳು, ೬೩.

**೩೮. ಕರ್ತೃತ್ವಮ್—**
ಕರ್ಮವನ್ನು ಮಾಡುವ ಸ್ವಭಾವ, ೧೦೧, ೧೦೪, ೧೦೫, ೧೧೦.

**೩೯. ಕರ್ಮೇನ್ದ್ರಿಯಾಣಿ—**
ಬೇರೆಬೇರೆಯ ಕೆಲಸವನ್ನು ಮಾಡುವ ವಾಕ್ಕು, ಪಾಣಿ, ಪಾದ, ಪಾಯು, ಉಪಸ್ಥ-ಎಂಬ ಇಂದ್ರಿಯಗಳು, ೨೪, ೨೫, ೭೨.

**೪೦. ಕಲಾಃ—**
ಆತ್ಮನಿಗೆ ಉಪಾಧಿಗಳಾಗಿ ಅವನಿಂದ ಸೃಷ್ಟವಾಗಿರುವ ಪ್ರಾಣಾದಿನಾಮಾಂತ ವಾದ ತತ್ತ್ವಗಳು, ೮೯, ೯೦, ೯೬, ೯೯, ೧೧೩, ೧೧೪, ೧೧೬.

**೪೧. ಕಲಾಪ್ರಲಯಃ—**
ಕಲೆಗಳು ಆತ್ಮನಿಗಿಂತ ಬೇರೆಯಾಗಿರು ರುವದಿಲ್ಲವೆಂದು ಅರಿತುಕೊಂಡು ಆತ್ಮನಲ್ಲಿಯೇ ಅವುಗಳನ್ನು ಅಡಗಿಸು ವದು, ೧೧೫.

**೪೨. ಕಾರ್ಯಕರಣಾನಿ—**
ದೇಹವೂ ಇಂದ್ರಿಯಗಳೂ, ೨೪, ೨೫, ೫೩, ೫೮, ೬೯, ೭೨, ೮೭.

**೪೩. ಕಾರ್ಯಕರಣಸಙ್ಘಾತಃ—**
ದೇಹೇಂದ್ರಿಯಗಳ ಒಟ್ಟು ಗುಂಪು, ೨೫, ೫೪, ೭೪.

**೪೪. ಕ್ರಿಯಾಕಾರಕಫಲಮ್—**
ಕರ್ಮ, ಆದರ ಸಾಮಗ್ರಿ, ಆದರ ಫಲ- ಇವುಗಳ ರೂಪದಲ್ಲಿರುವ ಸಂಸ್ಕಾರ, ೧೦೩.

**೪೫. ಕ್ಷೇತ್ರಜ್ಞಃ—**
ಕ್ಷೇತ್ರವೆಂಬ ಅನಾತ್ಮವಾದ ದೇಹಾದಿಗಳ ಗುಂಪನ್ನು ಅರಿಯುವ ಆತ್ಮ, ಜೀವ, ೬೨, ೬೩.

**೪೬. ಗುಣಸಾಮ್ಯಮ್—**
ಸತ್ತ್ವ, ರಜಸ್ಸು, ತಮಸ್ಸು-ಎಂಬ ಮೂರು ಗುಣಗಳು ಸಮಪ್ರಧಾನ ವಾಗಿರುವ ಪ್ರಕೃತಿ, ಪ್ರಧಾನ, ೧೦೧.

**೪೭. ಚಿತ್ತಮ್—**
ಸಾಮಾನ್ಯವಾಗಿ ಅರಿಯುವ ವ್ಯಾಪಾರ, ಅಂತಃಕರಣದ ಒಂದು ವೃತ್ತಿ, ೭೨.

**೪೮. ಚಿನ್ಮಾತ್ರಃ—**
ಬರಿಯ ಜ್ಞಾನವಾಗಿರುವ ( ಆತ್ಮ), ೧೦೨, ೧೦೫, ೧೦೬.

**೪೯. ಜಲಸೂರ್ಯಕಃ—**
ನೀರಿನಲ್ಲಿ ಕಾಣುವ ಸೂರ್ಯಪ್ರತಿಬಿಂಬ, (ಜೀವರಿಗೆ ಉಪಮಾನ) ೭೩.

**೫೦. ಜೀವಘನಃ—**
ಎಲ್ಲ ಜೀವರುಗಳೂ ಒಟ್ಟುಗೂಡಿರುವ ಹಿರಣ್ಯಗರ್ಭ, ೮೩.

**೫೧. ಜ್ಞಾನಮ್—**
ಉಪಾಸನೆ, ೧೩, ೧೪, ೨೨; ಅರಿಯು ವಿಕೆ, ೫, ೮೧, ೮೩; ಜ್ಞಾನದ ತಿರುಳು, ೯೧, ೯೨, ೯೩, ೯೫.

**೫೨. ತನ್ಮಾತ್ರಾ—**
ಶಬ್ದವೇ ಮುಂತಾದ ಗುಣಗಳು ಒಂದೊಂದೇ ಇರುವ ರೂಪ, ೭೨.

**೫೩. ತಪಃ—**
ಇಂದ್ರಿಯಸಂಯಮ, ೧, ೩, ೧೪; ಆಲೋಚನೆ, ೫.

**೫೪. ತಾರ್ಕಿಕಃ—**
ಶ್ರುತಿಯನ್ನು ಹಿಡಿಯದೆ ಸ್ವತಂತ್ರತರ್ಕವನ್ನು ನಂಬಿರುವವನು, ೬೭, ೧೦೩, ೧೦೪.

**೫೫. ತೃತೀಯಾ ದ್ಯೌಃ—**
ಸುವರ್ಲೋಕ, ೧೩, ೩೬.

**೫೬. ದಕ್ಷಿಣಾಯನಃ, ಪಿತೃಯಾಣಃ—**
ಕರ್ಮಿಗಳು ಫಲವನ್ನು ಪಡೆಯುವದಕ್ಕೆ ಹೋಗಬೇಕಾಗಿರುವ ಮಾರ್ಗ, ೧೩.

**೫೭. ದೃಷ್ಟಂ ಫಲಮ್—**
ಈ ಲೋಕದಲ್ಲಿ ಕಾಣಬರುವ ಫಲ, ೨೧.

**೫೮. ನರಕಃ—**
ತಿರ್ಯಗ್ಜಂತುಗಳ ಜನ್ಮವೇ ಮುಂತಾದ ದುಃಖಸ್ಥಾನ, ೪೪.

**೫೯. ನಾಮರೂಪೇ—**
ಪ್ರಪಂಚವು ತೋರಿಕೊಳ್ಳುವ ಎರಡು ಬಗೆಗಳು, ೭೨, ೭೬, ೯೧, ೧೦೩, ೧೧೩, ೧೧೪.

**೬೦. ನಿರಾಬಾಧಮ್, ಅನಾಬಾಧಮ್—**
ಬಾಧಿತವಾಗದ, ಸಹಜವಾಗಿರುವ ಸುಖ, ಸ್ವರೂಪಸುಖ, ೫೩, ೬೮.

**೬೧. ನಿರ್ವಿಶೇಷಮ್—**
ಇಂಥದ್ದು, ಅಂಥದ್ದು–ಎಂಬ ವಿಶೇಷವು ಯಾವದೂ ಇಲ್ಲದ, ೯೦.

**೬೨. ಪರಂ ಶ್ರೇಯಃ—**
ಹೆಚ್ಚಿನ ಒಳ್ಳೆಯದು, ಮೋಕ್ಷ, ೮೭.

**೬೩. ಪರಂ ಬ್ರಹ್ಮ—**
ಹೆಚ್ಚಿನ ಬ್ರಹ್ಮ, ನಮ್ಮ ಆತ್ಮನೇ ಎಂದು ಅರಿತುಕೊಳ್ಳಬೇಕಾಗಿರುವ ಬ್ರಹ್ಮ, ೨, ೮೦.

**೬೪. ಪರಮಾತ್ಮಾ, ಪರ ಆತ್ಮಾ—**
ಎಲ್ಲರಿಗೂ ಆತ್ಮನಾಗಿರುವ ಬ್ರಹ್ಮ, ನಿಜವಾದ ಆತ್ಮ, ೫೧, ೭೦, ೭೪, ೮೩.

**೬೫. ಪರಮಾಣವಃ—**
ಜಗತ್ತಿಗೆ ಕಾರಣವೆಂದು ವೈಶೇಷಿಕರು ಹೇಳುವ ಪೃಥಿವ್ಯಾದಿ ಮುಂತಾದವುಗಳ ತೀರ ಸೂಕ್ಷ್ಮವಾದ ಅಂಶಗಳು, ೧೦೧.

**೬೬. ಪರಮಾರ್ಥವಸ್ತು—**
ನಿಜವಾಗಿಯೂ ಇರುವ ಆತ್ಮತತ್ತ್ವ, ೧೦೯.

**೬೭. ಪರಾಪರಬ್ರಹ್ಮಣೀ—**
ಹೆಚ್ಚಿನ ಬ್ರಹ್ಮವಾದ ಪರಮಾತ್ಮ ಮತ್ತು ಕಡಿಮೆಯ ಬ್ರಹ್ಮವಾದ ಹಿರಣ್ಯಗರ್ಭ, ೭೮.

**೬೮. ಪರಾ ವಿದ್ಯಾ—**
ಹೆಚ್ಚಿನ ವಿದ್ಯೆ, ಬ್ರಹ್ಮವಿದ್ಯೆ, ೫೧.

**೬೯. ಪುರುಷಃ—**
ಶರೀರ, ೩೯, ೫೩,; ಶರೀರವನ್ನು ತುಂಬಿಕೊಂಡಿರುವ ಜೀವ, ೭೪; ಆತ್ಮ, ೩೯, ೫೯, ೬೪, ೮೩, ೮೮, ೯೬, ೧೦೦, ೧೦೩, ೧೦೪, ೧೦೬, ೧೦೭, ೧೦೮, ೧೧೧, ೧೧೨, ೧೧೩, ೧೧೪, ೧೧೬.

**೭೦. ಪುರುಷಾರ್ಥಃ—**
ಮನುಷ್ಯನು ಬಯಸುವ ಭೋಗ, ಮೋಕ್ಷ, ೧೦೧.

**೭೧. ಪ್ರಜಾ—**
ಶರೀರ, ೪, ೫, ೨೩.

ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಸಂಖ್ಯೆ ೩೩.

ಶ್ರೀಶಾಂಕರಭಾಷ್ಯಸಮೇತ

ಗೌಡಪಾದಕಾರಿಕಾ ಸಹಿತ

# ಮಾಂಡೂಕ್ಯೋಪನಿಷತ್ತು

(ಉಪನಿಷತ್ತಿನ, ಕಾರಿಕೆಯ, ಮತ್ತು ಭಾಷ್ಯದ ಸಂಸ್ಕೃತಮೂಲ, ಅನುವಾದ ಟಿಪ್ಪಣಿ, ಸಾರ-ಮುಂತಾದವುಗಳೊಡನೆ)

ಬರೆದವರು :

ಅಧ್ಯಾತ್ಮಗ್ರಂಥಾವಳಿಯ ಸಂಪಾದಕ

**ಯಲ್ಲಂಬಳಸೆ ಸುಬ್ರಹ್ಮಣ್ಯಶರ್ಮ**

ಎರಡನೆಯ ಸಂಸ್ಕರಣ

ಅಧ್ಯಾತ್ಮಗ್ರಂಥಾವಳಿಯ ಕ್ರಮಾಂಕ ೬

ಅಧ್ಯಾತ್ಮಪ್ರಕಾಶಕಾರ್ಯಾಲಯ

ಹೊಳೆನರಸೀಪುರ

೧೯೪೬

ಮೊದಲನೆಯ ಸಂಸ್ಕರಣ ೧೯೨೦-೩೭

ಎರಡನೆಯ ಸಂಸ್ಕರಣ ೧೯೪೭

(೧೦೦೦ ಪ್ರತಿಗಳು)



ಮುದ್ರಣಕಾರರು :

ಆರ್. ಕೃಷ್ಣಶೆಟ್ಟಿ, ಪ್ರಿಂಟರ್,

ಶ್ರೀ ಶಾರದಾ ಎಲೆಕ್ಟ್ರಿಕ್ ಪ್ರೆಸ್, ಮೈಸೂರು.

# ಹೊಸಸಂಸ್ಕರಣದ ಮೊದಲ ಮಾತು

---

ಮಾಂಡೂಕ್ಯೋಪನಿಷತ್ತಿನ ಮತ್ತು ಕಾರಿಕೆಯ ಭಾಷ್ಯವನ್ನು ಈಗ ಸುಮಾರು ಇಪ್ಪತ್ತೇಳು ವರ್ಷಗಳ ಕೆಳಗೆ ಪ್ರಾರಂಭಿಸಿ ಬೇರೆಬೇರೆಯ ಕಾಲದ ಅಂತರದಿಂದ ಗ್ರಂಥವನ್ನು ಪೂರ ಪ್ರಕಟಿಸಲಾಗಿತ್ತು. ಆಗಮಪ್ರಕರಣಸಹಿತವಾದ ಉಪನಿಷತ್ತಿನ ಭಾಷ್ಯವನ್ನು **ಕೈಲಾಸವಾಸಿ ಮಾಗಾನಹಳ್ಳಿ ದೊಡ್ಡಬಸಪ್ಪನವರ** ಇಚ್ಛೆಯಂತೆ ಅವರು ನನ್ನ ಮೂಲಕ ಪ್ರಕಟಿಸಿದ್ದ **'ರಾಜಯೋಗದ'** ಪುಸ್ತಕಗಳ ಮಾರಾಟದ ಹಣದ ಸಹಾಯದಿಂದ ಮೊಟ್ಟಮೊದಲು ಹೊರಕ್ಕೆ ತಂದೆನು. ಅಲ್ಲಿಂದ ೧೯೩೩ ರಲ್ಲಿ ವೈತಥ್ಯಪ್ರಕರಣ, ೧೯೩೪ ರಲ್ಲಿ ಅದ್ವೈತಪ್ರಕರಣ, ೧೯೩೭ ರಲ್ಲಿ ಅಲಾತಶಾಂತಿ ಪ್ರಕರಣ–ಹೀಗೆ ಅಧ್ಯಾತ್ಮಪ್ರಕಾಶಪತ್ರಿಕೆಯಲ್ಲಿ ಪ್ರಕಟಿಸಿದೆನು. ಆ ಪತ್ರಿಕೆಯಿಂದ ತೆಗೆದಚ್ಚುಗಳ ರೂಪದಲ್ಲಿ ಈ ಗ್ರಂಥವು ಭಾಗಭಾಗವಾಗಿ ಹೊರಕ್ಕೆ ಬಂದಿತ್ತು. ಈಗ **ಅಧ್ಯಾತ್ಮಪ್ರಕಾಶಕಾರ್ಯಾಲಯದ ಪರಿಪಾಲಕರಾಗಿರುವ ನಮ್ಮನ್ನಾಳುವ ಮಹಾಪ್ರಭುಗಳ ಕೃಪಾಕಟಾಕ್ಷದ ಫಲವಾಗಿ** ಗ್ರಂಥವು ಒಂದೇ ಸಲಕ್ಕೆ ಸರ್ವಾಂಗ ಸುಂದರವಾದ ಸಂಪುಟದ ರೂಪದಲ್ಲಿ ಬಂದು ವಾಚಕರ ಕರಕಮಲವನ್ನು ಸೇರಿರುತ್ತದೆ.

ಗ್ರಂಥವನ್ನು ಶ್ರೀಜಯಚಾಮರಾಜೇಂದ್ರಗ್ರಂಥರತ್ನಮಾಲೆಗೆ ತಕ್ಕಂತೆ ಪರಿಷ್ಕರಿಸಿರುತ್ತೇನೆ. ಪೀಠಿಕೆಯನ್ನು ಹೊಸದಾಗಿಯೇ ಬರೆದಿರುತ್ತೇನೆ. ಇದನ್ನು ಅಚ್ಚಿಗೆ ಸಿದ್ಧಗೊಳಿಸುವದರಲ್ಲಿ **ಶ್ರೀಯುತ ಪಿ. ಎಚ್. ನರಸಿಂಹಯ್ಯನವರು, ಪ್ಲೀಡರ್, ಹೊಳೆನರಸೀಪುರ ಇವರ ಮತ್ತು ಅಧ್ಯಾತ್ಮವಿದ್ಯಾನಿಲಯದ ಉಪಾಧ್ಯಾಯರಾದ ಸಾಹಿತ್ಯವೇದಾಂತವಿದ್ವಾನ್ ಬ್ರ॥ ಶ್ರೀ॥ ಕೊ. ಕೃಷ್ಣ ಜೋಯಿಸರ ಸಹಾಯವು** ಬಹಳವಾಗಿ ಆಗಿರುತ್ತದೆ.

ಶರೀರಾರೋಗ್ಯವು ಸರಿಯಾಗಿಲ್ಲದ ನಿಮಿತ್ತದಿಂದಲೂ ಭಗವದ್ಗೀತಾಭಾಷ್ಯವು ಇದಕ್ಕಿಂತ ಮೊದಲೇ ಪ್ರಕಟವಾಗಬೇಕಾಗಿ ಬಂದ ನಿಮಿತ್ತದಿಂದಲೂ ಈ ಸಂಪುಟವು ಹೊರಕ್ಕೆ ಬರುವದು ಸ್ವಲ್ಪ ತಡವಾಗಿರುತ್ತದೆ. ಇದಕ್ಕಾಗಿ ಓದುಗರ ಕ್ಷಮೆಯನ್ನು ಬೇಡುತ್ತೇನೆ. ಅಚ್ಚಿನ ಮತ್ತು ಬರೆವಣಿಗೆಯ ಲೋಪದೋಷಗಳನ್ನು ತಿಳಿಸಿಕೊಟ್ಟು ಉಪಕಾರಮಾಡಬೇಕೆಂದು ವಿದ್ವಾಂಸರಾದ ವಾಚಕರನ್ನು ಪ್ರಾರ್ಥಿಸುತ್ತೇನೆ.

ಅಧ್ಯಾತ್ಮಕುಟೀರ,
ಸರ್ವಜಿತು, ಮಾಘ ಬಹುಳ ಷಷ್ಠಿ

ಯ. ಸು. ಶರ್ಮ.

# ಪೀಠಿಕೆ

---

## ಮಾಂಡೂಕ್ಯೋಪನಿಷತ್ತು

ಅಥರ್ವವೇದಕ್ಕೆ ಸೇರಿದ ಉಪನಿಷತ್ತುಗಳಲ್ಲಿ ಮುಂಡಕ, ಪ್ರಶ್ನ, ಮಾಂಡೂಕ್ಯ— ಈ ಮೂರಕ್ಕೆ ಮಾತ್ರ ಶ್ರೀಶಂಕರಾಚಾರ್ಯರವರು ಭಾಷ್ಯವನ್ನು ಬರೆದಿರುತ್ತಾರೆ. ಆ ಮೂರರಲ್ಲಿ—ಅಷ್ಟೇ ಅಲ್ಲ, ಆಚಾರ್ಯರು ಭಾಷ್ಯವನ್ನು ಬರೆಯುವದಕ್ಕೆ ಆರಿಸಿಕೊಂಡಿರುವ ಉಪನಿಷತ್ತುಗಳಲ್ಲೆಲ್ಲ—ಮಾಂಡೂಕ್ಯವು ತೀರ ಚಿಕ್ಕದಾಗಿರುತ್ತದೆ. ಆದರೂ ಇದು '**ಸರ್ವವೇದಾಂತಾರ್ಥಸಾರಸಂಗ್ರಹ**'ವಾಗಿರುವದೆಂದು ಆಚಾರ್ಯರೇ ವರ್ಣಿಸಿರುವ ಶ್ರೀಗೌಡಪಾದಾಚಾರ್ಯರವರ ಕಾರಿಕಾರೂಪವಾದ ವಿವರಣೆಯೂ ಇರುವದರಿಂದ ವೇದಾಂತದ ಇತಿಹಾಸದ ದೃಷ್ಟಿಯಿಂದ ಈ ಉಪನಿಷತ್ತಿಗೆ ಒಂದು ವಿಶೇಷಮಹತ್ತ್ವವು ಇರುತ್ತದೆ. ಈ ಉಪನಿಷತ್ತು ಅಥರ್ವವೇದದ ಯಾವ ಭಾಗದಲ್ಲಿದೆ ಎಂಬುವದನ್ನು ನಿರ್ಧರಿಸುವದಕ್ಕೆ ನಮಗೆ ಯಾವ ಆಧಾರವೂ ದೊರೆತಿಲ್ಲ, ಆಚಾರ್ಯರು ಆ ವಿಷಯಕ್ಕೆ ತಮ್ಮ ಭಾಷ್ಯದಲ್ಲಿ ಹೇಳಿರುವದೂ ಇಲ್ಲ. ಅವಸ್ಥಾತ್ರಯ ನಿರೂಪಣೆಯ ಮೂಲಕ ಪರಮಾರ್ಥವನ್ನು ನಿರ್ಧರಿಸಿ ತಿಳಿಸುವ ಪ್ರಕ್ರಿಯೆಯೊಂದೇ ಈ ಉಪನಿಷತ್ತಿನಲ್ಲಿ ಕಂಡುಬಂದಿರುವದರಿಂದ ಇದು ಆ ವೇದದ ಆರಣ್ಯಕದಲ್ಲಿರಬೇಕೆಂದು ಊಹಿಸುವದಕ್ಕೆ ಅವಕಾಶವಿದೆ.

## ಮಾಂಡೂಕ್ಯಕಾರಿಕೆಗಳ ಗ್ರಂಥಕರ್ತರ ಬಗ್ಗೆ ವಿಕಲ್ಪಗಳು

ಶ್ರೀಶಂಕರಾಚಾರ್ಯರು ಉಪನಿಷತ್ತಿಗೂ ಭಾಷ್ಯವನ್ನು ಬರೆದು ಕಾರಿಕೆಗಳಿಗೂ ವಿವರಣವನ್ನು ಬರೆದಿರುತ್ತಾರಾದರೂ ತಾವು ಉಪನಿಷತ್ತಿಗೆ ಸ್ವಪ್ರಧಾನವಾಗಿ ಭಾಷ್ಯವನ್ನು ಬರೆದಿದ್ದೇವೆಂದು ಹೇಳಿಕೊಂಡಿಲ್ಲ. ಉಪನಿಷತ್ತನ್ನು ವಿವರಿಸುವ ಕಾರಿಕೆಗಳಿಗೇ ಅವರು ಪ್ರಾಧಾನ್ಯವನ್ನು ಕೊಟ್ಟಿರುತ್ತಾರೆ. ಕಾರಿಕೆಗಳು ಪ್ರಕೃತದಲ್ಲಿ ಆಗಮ, ವೈತಥ್ಯ, ಅದ್ವೈತ, ಅಲಾತಶಾಂತಿ ಎಂಬ ನಾಲ್ಕು ಪ್ರಕರಣಗಳಾಗಿ ವಿಂಗಡಿಸಿಕೊಂಡಿರುತ್ತವೆ. ಒಂದು ಪ್ರಕರಣಕ್ಕಿಂತಲೂ ಮುಂದಿನ ಇನ್ನೊಂದು ಪ್ರಕರಣದಲ್ಲಿ ಹೆಚ್ಚುಹೆಚ್ಚು ಕಾರಿಕೆ (ಶ್ಲೋಕ)ಗಳಿರುತ್ತವೆ. ಇವುಗಳಲ್ಲಿ ಮೊದಲನೆಯದಾದ ಆಗಮಪ್ರಕರಣವು ಈಗ್ಗೆ ಉಪನಿಷತ್ತಿನ ನಡುನಡುವೆ ಭಾಗಭಾಗವಾಗಿ ಹೆಣೆದುಕೊಂಡಿರುವ ಇಪ್ಪತ್ತೊಂಬತ್ತು ಕಾರಿಕೆಗಳ ಗುಂಪಾಗಿರುತ್ತದೆ. ಮಿಕ್ಕ ಮೂರು ಪ್ರಕರಣಗಳೂ ಸ್ವತಂತ್ರವಾಗಿರುತ್ತವೆ. ತೀರ ದೊಡ್ಡದಾಗಿರುವ, ನೂರು ಕಾರಿಕೆಗಳ,

ಅಲಾತಶಾಂತಿಪ್ರಕರಣವು ಗ್ರಂಥದ ಕೊನೆಯಲ್ಲಿದ್ದು ಅದರ ಆದಿಯಲ್ಲಿಯೂ ಅಂತ್ಯದಲ್ಲಿಯೂ ಮಂಗಲಶ್ಲೋಕಗಳಿವೆ. ಹೀಗಿರುವದರಿಂದ ಉಪನಿಷತ್ತಿನ ವಿಷಯದಲ್ಲಿಯೂ, ಪ್ರಕರಣಗಳ ವಿಷಯದಲ್ಲಿಯೂ ಗ್ರಂಥಕರ್ತೃವಿಚಾರದಲ್ಲಿ ಬಗೆಬಗೆಯ ಅಭಿಪ್ರಾಯಗಳು ವಿದ್ವಾಂಸರುಗಳಲ್ಲಿ ಅಂಕುರಿಸಿರುತ್ತವೆ.

ಮೊದಲನೆಯದಾಗಿ ಈ ನಾಲ್ಕೂ ಶ್ರೀಶಂಕರಾಚಾರ್ಯರ ಪರಮಗುರುಗಳಾದ ಗೌಡಪಾದರು ಬರೆದ ಪ್ರಕರಣಗಳು ಎಂದು ಅನೇಕ ಅದ್ವೈತಿಗಳ ಮತವಿದೆ. ಎರಡನೆಯದಾಗಿ ಆಗಮಪ್ರಕರಣವೆಂಬುದು ಪೌರುಷೇಯವೇ ಅಲ್ಲವೆಂದೂ ಬ್ರಹ್ಮದೃಷ್ಟವಾದ ಮಂತ್ರಗಳನ್ನು ತಿಳಿವಳಿಕೆಯ ವ್ಯಾಖ್ಯಾರ್ಥವಾಗಿ ಉಪನಿಷತ್ತಿನಲ್ಲಿ ಉದಾಹರಿಸಿದೆಯೆಂದೂ ಮಾಂಡೂಕ್ಯೋಪನಿಷತ್ತು ಮತ್ತು ಕಾರಿಕೆ–ಎರಡೂ ಶ್ರುತಿಯೇ ಎಂದೂ ಮಧ್ವಾಚಾರ್ಯರು ಅಂಗೀಕರಿಸಿರುತ್ತಾರೆ. ಈ ನಾಲ್ಕು ಪ್ರಕರಣಗಳೂ ಮಾಂಡೂಕ್ಯವೂ ಸೇರಿದ ಒಟ್ಟೇ ಗೌಡಪಾದರ ಕೃತಿ ಎಂದು ಡಾಯ್ಸನ್ ಎಂಬ ಜರ್ಮನ್ ವಿದ್ವಾಂಸನ ಮತವಿದೆ. ಗೌಡಪಾದರ ಪ್ರಕರಣಗಳಲ್ಲಿ, ಅದರಲ್ಲಿಯೂ ನಾಲ್ಕನೆಯ ಪ್ರಕರಣದಲ್ಲಿ, ಬೌದ್ಧರ ಗ್ರಂಥದಲ್ಲಿ ಕಾಣಬರುವ ಅನೇಕ ಪ್ರಕ್ರಿಯೆಗಳು ಕಾಣಬರುತ್ತವೆ; ಗೌಡಪಾದರು ಅಶ್ವಘೋಷ, ನಾಗಾರ್ಜುನ, ಅಸಂಗ, ವಸುಬಂಧು-ಮುಂತಾದ ಪ್ರಸಿದ್ಧ ಬೌದ್ಧಾಚಾರ್ಯರುಗಳ ತರುವಾಯ ಬಂದವರಾದ್ದರಿಂದ ಅವರೂ ಪ್ರಾಯಶಃ ಒಬ್ಬ ಬೌದ್ಧರೆಂದೋ ಬುದ್ಧನ ಉಪದೇಶದಲ್ಲಿ ಗೌರವವುಳ್ಳ ಆಚಾರ್ಯರೆಂದೋ ಕಲ್ಪಿಸಬೇಕಾಗಿದೆ ಎಂದು ಪ್ರೊಫೆಸರ್ ಸುರೇಂದ್ರನಾಥ ದಾಸಗುಪ್ತ (Prof. S. N. Dasagupta M.A., Ph.D.) ಮುಂತಾದ ಆಧುನಿಕವಿದ್ವಾಂಸರು ಅಭಿಪ್ರಾಯಪಟ್ಟಿರುತ್ತಾರೆ. ಈ ನಾಲ್ಕು ವಿಪ್ರತಿಪನ್ನಮತಗಳಲ್ಲಿ ಕೊನೆಯ ಮೂರೂ ಕಲ್ಪನಾಮಾತ್ರವೆಂದು ನಮಗೆ ತೋರುತ್ತದೆ. ಈ ಅಭಿಪ್ರಾಯವನ್ನು ಸ್ಪಷ್ಟಪಡಿಸುವದಕ್ಕಾಗಿ ಈಗ ಒಂದೊಂದನ್ನೂ ಸ್ವಲ್ಪ ಸಮಾಲೋಚನೆ ಮಾಡುವೆವು.

## ಆಗಮಪ್ರಕರಣವು ಶ್ರುತಿಯೆಂಬುದು ಸರಿಯಲ್ಲ

ಆಗಮಪ್ರಕರಣದ ಕಾರಿಕೆಗಳೂ ಉಪನಿಷತ್ತಿನ ಭಾಗವೆಂಬುದಕ್ಕೆ ಮಧ್ವಾಚಾರ್ಯರು ಕೊಟ್ಟಿರುವ ಪ್ರಮಾಣವೇನು ? ಎಂಬುದನ್ನು ಮೊದಲು ಸಮಾಲೋಚನೆ ಮಾಡೋಣ. ಆ ಆಚಾರ್ಯರು ಉದಾಹರಿಸಿರುವ ಆಧಾರವು ಬ್ರಹ್ಮತರ್ಕವೆಂಬ ಗ್ರಂಥವೊಂದು, ಗರುಡಪುರಾಣವೊಂದು. ಬ್ರಹ್ಮತರ್ಕವೆಂಬ ಗ್ರಂಥವು ಈಗ ಸಿಕ್ಕುವದಿಲ್ಲ; ಆ ಗ್ರಂಥವನ್ನು ಮತ್ತೆ ಯಾವ ಆಚಾರ್ಯರೂ ಪ್ರಮಾಣವೆಂದು ಹೆಸರಿಸಿಯೂ ಇಲ್ಲ. ಪುರಾಣಗಳಲ್ಲಿ ಆಗಿಂದಾಗ್ಗೆ ಎಷ್ಟು ಹೊಸ ಶ್ಲೋಕಗಳಾದರೂ

ಸೇರುವ ಸಂಭವವಿರುವದರಿಂದ ಗರುಡಪುರಾಣವನ್ನು ಪ್ರಕೃತವಿಷಯಕ್ಕೆ ಪ್ರಮಾಣವಾಗಿ ಹಿಡಿಯುವ ಮುಂಚೆ ನಾವು ಮತ್ತೆ ಯಾರಾದರೂ ಈ ಕಾರಿಕೆಗಳನ್ನು ಉಪನಿಷತ್ತುಗಳೆಂದು ಎಣಿಸಿದಾರೆಯೆ? ಎಂಬುದನ್ನು ವಿಚಾರಿಸಬೇಕಾಗಿದೆ. ಆದರೆ ಮಧ್ವಾಚಾರ್ಯರಿಗಿಂತ ಹಿಂದೆ ಯಾರೊಬ್ಬರೂ ಹಾಗೆಂದು ಎಣಿಸಿದ್ದಕ್ಕೆ ಆಧಾರವಿರುವದಿಲ್ಲ. **ಶಂಕರಾಚಾರ್ಯರು** ತಾವು **ನಾಲ್ಕು ಪ್ರಕರಣಗಳಿಗೆ** ವ್ಯಾಖ್ಯಾನವನ್ನು ಬರೆಯುವೆವೆಂದು (೧, ೩) ಕಂಠೋಕ್ತವಾಗಿ ಹೇಳಿರುತ್ತಾರೆ; ಅವರ ಶಿಷ್ಯರಾದ **ಸುರೇಶ್ವರರು** ಆಗಮಪ್ರಕರಣದಿಂದ ಎರಡು ಕಾರಿಕೆಗಳನ್ನು ಗೌಡಪಾದರು ಬರೆದವು ಎಂದು ತಮ್ಮ **ನೈಷ್ಕರ್ಮ್ಯಸಿದ್ಧಿ** ಎಂಬ ವೇದಾಂತಪ್ರಕರಣದಲ್ಲಿ ಉದಾಹರಿಸಿರುತ್ತಾರೆ. ಮಧ್ವಾಚಾರ್ಯರಿಗಿಂತ ಈಚಿನ ಕೆಲವರು ಅದ್ವೈತವೇದಾಂತಿಗಳುಕೂಡ ಆಗಮಪ್ರಕರಣವನ್ನು ಶ್ರುತಿಯೆಂದು ಕರೆದಿರುವದುಂಟು; ಆದರೆ ಅವರು ಆ ತಮ್ಮ ಅಭಿಪ್ರಾಯಕ್ಕೆ ಯಾವ ಆಧಾರವನ್ನೂ ಕೊಟ್ಟಿರುವದಿಲ್ಲ. ಈ ವಿಷಯದಲ್ಲಿ **ರಾಮಾನುಜಾಚಾರ್ಯರ** ಅಭಿಪ್ರಾಯವೇನೋ ತಿಳಿಯುವಂತಿಲ್ಲ; ಅವರ ಅನುಯಾಯಿಗಳಾದ **ಕೂರನಾರಾಯಣರು** ಮಧ್ವಾಚಾರ್ಯರನ್ನೇ ಅನುಸರಿಸಿರುತ್ತಾರೆ. ಹೀಗಿರುವದರಿಂದ ಆಗಮಪ್ರಕರಣವು ಉಪನಿಷತ್ತೆಂಬುದಕ್ಕೆ ನಮಗೆ ನಂಬತಕ್ಕ ಪ್ರಮಾಣವೇನೂ ಈವರೆಗೆ ದೊರೆತಿಲ್ಲವೆಂದು ಹೇಳಬೇಕಾಗಿದೆ.

## ಮಾಂಡೂಕ್ಯೋಪನಿಷತ್ತು ಗೌಡಪಾದರ ಕೃತಿ ಎಂಬ ವಾದದಲ್ಲಿ ಹುರುಳಿಲ್ಲ

ಎರಡನೆಯದಾಗಿ ಮಾಂಡೂಕ್ಯೋಪನಿಷತ್ತನ್ನು ಶಂಕರಾಚಾರ್ಯರು ಉಪನಿಷತ್ತೆಂದು ಭಾವಿಸಿದ್ದರೆಂಬುದಕ್ಕೆ ಪ್ರಮಾಣವಿಲ್ಲವೆಂದೂ ಗೌಡಪಾದರೇ ಆ ಗ್ರಂಥಭಾಗವನ್ನು ಬರೆದಿರಬಹುದೆಂದೂ **ಡಾಯ್ಸನ್** ಎಂಬ ಪಾಶ್ಚಾತ್ಯವಿದ್ವಾಂಸನು ಊಹಿಸಿರುತ್ತಾನೆ. **"ವೇದಾಂತಾರ್ಥಸಾರಸಂಗ್ರಹಭೂತಮಿದಂ ಪ್ರಕರಣಚತುಷ್ಟಯಮ್ ಓಮಿತ್ಯೇತದಕ್ಷರಮ್ ಇತಿ ಆರಭ್ಯತೇ"** (೧) ಎಂಬ ಭಾಷ್ಯವಾಕ್ಯದಲ್ಲಿ ಮಾಂಡೂಕ್ಯವೂ ಪ್ರಕರಣಚತುಷ್ಟಯದಲ್ಲಿ ಸೇರಿದೆಯೆಂಬ ಸೂಚನೆ ಇದೆ; ಆಚಾರ್ಯರು ಮಾಂಡೂಕ್ಯವನ್ನು ಶ್ರುತಿಯೆಂದು ಎಲ್ಲಿಯೂ ಉದಾಹರಿಸಿಲ್ಲ—ಎಂಬ ಎರಡು ಯುಕ್ತಿಗಳೇ ಆತನ ಊಹೆಗೆ ಊರುಗೋಲು. ಆದರೆ ಮಾಂಡೂಕ್ಯವನ್ನು ಗೌಡಪಾದಕೃತಿಯೆಂದು ಆಚಾರ್ಯರು ಮತ್ತೆಲ್ಲಿಯೂ ಉದಾಹರಿಸಿರುವದು ಕಂಡುಬಂದಿರುವದಿಲ್ಲ. ಡಾಯ್ಸನ್ನನು ತೋರಿಸಿರುವ ವಾಕ್ಯದಲ್ಲಿ 'ಓಮಿತ್ಯೇತದಕ್ಷರಮ್ ಎಂಬ (ಉಪನಿಷತ್ತು) ಆದಿಯಾಗಿರುವ ಪ್ರಕರಣಚತುಷ್ಟಯವು' ಎಂದೂ ಅರ್ಥವನ್ನು ಮಾಡುವದಕ್ಕೆ ಬರುತ್ತದೆ. ಆಗಮಪ್ರಕರಣದ (೧–೧೬) ಒಂದು ಕಾರಿಕೆಯನ್ನೂ ಅದ್ವೈತಪ್ರಕರಣದ (೩–೧೫) ಒಂದು ಕಾರಿಕೆಯನ್ನೂ **ಸಂಪ್ರದಾಯವಿದರ**

ವಚನವೆಂದು (ಸೂ. ಭಾ. ೧-೪-೧೪, ೩-೧-೯) ಉದಾಹರಿಸಿರುತ್ತಾರೆ. " ಅತ್ರೈತೇ ಶ್ಲೋಕಾ ಭವನ್ತಿ " ಎಂದು ಉದಾಹರಿಸಿರುವ ಶ್ಲೋಕಗಳಂತೆ ಉಪನಿಷತ್ತನ್ನೂ ಗೌಡಪಾದರೇ ಬರೆದಿದ್ದರೆ ವ್ಯಾಖ್ಯೇಯಗದ್ಯಭಾಗವು ಸಂಕ್ಷಿಪ್ತವಾಗಿಯೂ, ವ್ಯಾಖ್ಯಾನ ರೂಪವಾಗಿರುವ ಪದ್ಯಭಾಗವು ವಿಸ್ತಾರವಾಗಿಯೂ ಇರುವದಕ್ಕೆ ಕಾರಣವೇನೆಂಬುದು ಗೊತ್ತಾಗುವಂತಿಲ್ಲ; ಗದ್ಯಭಾಗವನ್ನು ವಿಸ್ತರಿಸಿ ಅಲ್ಲಿ ಹೇಳಿದ್ದನ್ನೇ ಪದ್ಯದಲ್ಲಿ ಸಂಗ್ರಹಿಸುವ ಪದ್ಧತಿಯು ಸಂಸ್ಕೃತಗ್ರಂಥಕರ್ತೃಗಳಲ್ಲಿರುವಂತೆ ಅದಕ್ಕೆ ವಿಪರೀತ ವಾದ ಪದ್ಧತಿಯು ಕಂಡುಬರುವದಿಲ್ಲ[1]. ಇದೆಲ್ಲದರ ಜೊತೆಗೆ ಶಂಕರಾಚಾರ್ಯರ ಸಾಕ್ಷಾಚ್ಛಿಷ್ಯರಾದ ಸುರೇಶ್ವರರು ಮಾಂಡೂಕ್ಯವನ್ನು ಶ್ರುತಿ ಎಂದು ಕಂಠೋಕ್ತವಾಗಿ ಕರೆದಿರುವದು **ಬೃಹದಾರಣ್ಯಕವಾರ್ತಿಕ**ದಲ್ಲಿ (ಬೃ. ವಾ ೩-೮-೨೬) ಕಂಡುಬರುತ್ತದೆ. ಹೀಗಿರುವದರಿಂದ ಮಾಂಡೂಕ್ಯವು ಶ್ರುತಿ ಎಂದೂ ಆಗಮಾದಿಪ್ರಕರಣ ಚತುಷ್ಟಯವೂ ಒಬ್ಬ ಗ್ರಂಥಕರ್ತನ ಕೃತಿಯೆಂದೂ ಭಾವಿಸುವದಕ್ಕೆ ಯಾವ ಅಡ್ಡಿಯೂ ಕಾಣುವದಿಲ್ಲ.

## ಗೌಡಪಾದರು ಬೌದ್ಧರೆಂಬ ವಾದದ ಜೊಳ್ಳುತನ

ಮಾಂಡೂಕ್ಯೋಪನಿಷದ್ಭಾಷ್ಯಕ್ಕೂ ಕಾರಿಕೆಯ ವ್ಯಾಖ್ಯಾನಕ್ಕೂ ಟೀಕೆಯನ್ನು ಬರೆದಿರುವ **ಆನಂದಗಿರಿ** ಎಂಬಾತನು ತಾನು ಗೌಡಪಾದೀಯಭಾಷ್ಯಕ್ಕೆ ವ್ಯಾಖ್ಯಾನ ವನ್ನು ಬರೆದಿರುವರಾಗಿ (ಪು. ೧) ಹೇಳಿಕೊಂಡಿರುತ್ತಾನೆ. ಮಾಂಡೂಕ್ಯವು ಶ್ರುತಿ ಯೆಂದೂ (ಪು. ೪, ೮). ಪ್ರಕರಣಚತುಷ್ಟಯವು ನಾರಾಯಣಪ್ರಸಾದದಿಂದ ಗೌಡ ಪಾದಾಚಾರ್ಯರು ಸಂಪಾದಿಸಿದ ವಿದ್ಯೆಯ ಫಲವೆಂದೂ (ಪು. ೩, ೧೫೭)[2] ಹೇಳಿರುತ್ತಾನೆ. ಈ ಸಾಂಪ್ರದಾಯಿಕಕಥೆಯು ಆನಂದಗಿರಿಗಿಂತ ಪೂರ್ವದಲ್ಲಿಯೇ ಇದ್ದಿರಬೇಕೆಂಬುದು ಸ್ಪಷ್ಟವಾಗಿರುತ್ತದೆ. ಹೀಗಿದ್ದರೂ **ವ್ಯಾಲೆಸನ್** (Wallesen) ಎಂಬಾತನು ಅಲಾತಶಾಂತಿಪ್ರಕರಣದಲ್ಲಿ **ಭಾವವಿವೇಕ**ನೆಂಬ ಬೌದ್ಧನು ಬರೆದ **ತರ್ಕಜ್ವಾಲಾ** ಎಂಬ ಗ್ರಂಥದಲ್ಲಿ ಕಾಣುವ ಶ್ಲೋಕಗಳ ಛಾಯೆಯುಳ್ಳ ಹಲವು ಶ್ಲೋಕಗಳಿರುವದರಿಂದ ಗೌಡಪಾದನೆಂಬ ಹೆಸರಿನ ಒಬ್ಬ ಗ್ರಂಥಕರ್ತನಿದ್ದನೆಂಬುದೇ ಸಂಶಯಗ್ರಸ್ತವೆಂದು ಅಭಿಪ್ರಾಯಪಟ್ಟಿರುತ್ತಾನೆ. ಪ್ರೊಫೆಸರ್ ದಾಸಗುಪ್ತರವರು ಗೌಡಪಾದರಿಗೆ ಬೌದ್ಧರ ಪ್ರಕ್ರಿಯೆಯಲ್ಲಿ ಸಹಾನುಭೂತಿಯಿತ್ತೆಂದು ಅಭಿಪ್ರಾಯ ಪಟ್ಟಿರುವದನ್ನು ಆಗಲೆ ತಿಳಿಸಿರುತ್ತೇವೆ. ಸುರೇಶ್ವರರೇ ಮುಂತಾದವರು ಕಾರಿಕೆಗಳು

---

1. ಗದ್ಯವೂ ಆಗಮಪ್ರಕರಣವೂ ಉಪನಿಷತ್ತೇ ಎಂಬವರೂ ಇಲ್ಲಿ ಉದಾಹರಿಸಿರುವ ಶ್ಲೋಕಗಳು ಏತಕ್ಕೆ ಇಷ್ಟು ವಿವರವಾಗಿವೆ ಎಂಬುದಕ್ಕೆ ಕಾರಣವನ್ನು ಕೊಡುವದಕ್ಕೆ ಆಗುವಂತಿಲ್ಲ. ಏಕೆಂದರೆ ಉಪನಿಷತ್ತುಗಳ ಪದ್ಧತಿಯು ಇದಕ್ಕೆ ವಿಪರೀತವಾಗಿರುತ್ತದೆ.

2. ಇಲ್ಲಿ ತೋರಿಸಿರುವ ಪುಟಸಂಖ್ಯೆಗಳು ಪೂನಾದಲ್ಲಿ ಆನಂದಾಶ್ರಮಮುದ್ರಣಾಲಯದಲ್ಲಿ ಅಚ್ಚಾಗಿರುವ ಮಾಂಡೂಕ್ಯಭಾಷ್ಯಪುಸ್ತಕದವುಗಳು.

ಗೌಡಪಾದರ ಕೃತಿಯೇ ಎಂದು ಸ್ಪಷ್ಟವಾಗಿ ಹೇಳಿರುವದನ್ನು ಕಡೆಗಣಿಸುವದಕ್ಕೆ ಈ ಆಧುನಿಕ ವಿದ್ವಾಂಸರಿಗೆ ಯಾವ ಆಧಾರವಿದೆಯೋ ನಮಗೆ ತಿಳಿಯದು. ಶಂಕರಾಚಾರ್ಯರು ತಮ್ಮ ಭಾಷ್ಯದ ಕೊನೆಯಲ್ಲಿ ತಮ್ಮ 'ಪರಮಗುರು'ಗಳನ್ನು ಸ್ಮರಿಸಿರುವದನ್ನು ನಾವು ಅಲಕ್ಷಿಸುವಂತಿಲ್ಲ. ಕಾರಿಕಾಕಾರರಿಗೆ ಗೌಡಪಾದರೆಂಬ ಹೆಸರಿತ್ತೋ ಇಲ್ಲವೋ ಎಂಬ ಸಂಶಯವುಂಟಾದರೂ ಆಗಬಹುದು; ಏಕೆಂದರೆ ಅವರು ಗೌಡದೇಶದವರೆಂಬ ಕಾರಣದಿಂದಲೂ ಗೌಡಪಾದರೆಂಬ ಹೆಸರು ಪ್ರಸಿದ್ಧವಾಗಿರುವದಕ್ಕೆ ಸಾಕು. ಆದರೆ ಕಾರಿಕಾಕಾರರ ಮತಕ್ಕೂ ಬೌದ್ಧರ ಸಿದ್ಧಾಂತಕ್ಕೂ ಇರುವ ತಾರತಮ್ಯವು ಮಾತ್ರ ಅಸಡ್ಡೆಮಾಡುವಷ್ಟು ಅಸ್ಫುಟವಾಗಿಲ್ಲ. ಅಲಾತಶಾಂತಿಪ್ರಕರಣದಲ್ಲಿ ಗೌಡಪಾದರವರು ಬೌದ್ಧರ ಯುಕ್ತಿಗಳನ್ನೇ ಬಹಳವಾಗಿ ಉಪಯೋಗಿಸಿಕೊಂಡು ಮಿಕ್ಕವರ ಮತಗಳನ್ನು ಖಂಡಿಸಿರುವದರಿಂದಲೂ ಬೌದ್ಧಗ್ರಂಥಗಳಲ್ಲಿರುವ ಹಲವು ಪಾರಿಭಾಷಿಕ ಶಬ್ದಗಳನ್ನು ಉಪಯೋಗಿಸಿರುವದರಿಂದಲೂ ನಮ್ಮ ದೇಶದಲ್ಲಿಯೂ ಕೆಲವರು ಅವಿವೇಕಿಗಳು ಕಾರಿಕಾಕಾರರನ್ನು **ಪ್ರಚ್ಛನ್ನ ಬೌದ್ಧರು** ಎಂದು ಕರೆದಿರುತ್ತಾರೆ. ಆದ್ದರಿಂದ ಮಾಂಡೂಕ್ಯಕಾರಿಕೆಯ ಪ್ರಕ್ರಿಯೆಯಲ್ಲಿ ಬೌದ್ಧಮತದ ಸಾಂಕರ್ಯವಿದೆ ಎಂಬ ಶಂಕೆಯನ್ನು ತೊಲಗಿಸಿ ತತ್ತ್ವಜಿಜ್ಞಾಸುಗಳಿಗೆ ವೇದಾಂತದ ಅಸಾಧಾರಣ ಪ್ರಕ್ರಿಯೆಯನ್ನು ಮನಗಾಣಿಸುವದಕ್ಕಾಗಿ ಇಲ್ಲಿ ಇಡಿಯ ಗ್ರಂಥದ ವಿಷಯವನ್ನು ವಿಭಾಗಮಾಡಿ ಸಂಗ್ರಹವಾಗಿ ತಿಳಿಸುವೆವು.

## ಆಗಮಪ್ರಕರಣ

ಮಾಂಡೂಕ್ಯೋಪನಿಷತ್ತನ್ನು ವಿವರಿಸುವದಕ್ಕಾಗಿ ಸಾಂಪ್ರದಾಯಿಕಕ್ರಮವನ್ನನುಸರಿಸುವದರಿಂದ ಈ ಪ್ರಕರಣಕ್ಕೆ ಈ ಹೆಸರು ಬಂದಿರುತ್ತದೆ. ಈ ಪ್ರಕರಣದಲ್ಲಿ ಅವಸ್ಥಾತ್ರಯದ ನಿರೂಪಣೆಯಿದೆ. ಎಚ್ಚರದ ಆತ್ಮನು **ವಿಶ್ವನು,** ಎಂದರೆ ಇಡಿಯ ಸ್ಥೂಲಪ್ರಪಂಚವನ್ನೇ ಉಪಾಧಿಯಾಗುಳ್ಳ ಆತ್ಮನು; ಕನಸಿನ ಆತ್ಮನು **ತೈಜಸನು ಅಥವಾ ಹಿರಣ್ಯಗರ್ಭನು,** ಇಡಿಯ ಸೂಕ್ಷ್ಮಪ್ರಪಂಚವನ್ನೇ ಉಪಾಧಿಯಾಗುಳ್ಳವನು; ತನಿಸಿದ್ರೆಯ ಆತ್ಮನು **ಪ್ರಾಜ್ಞನು ಅಥವಾ ಅವ್ಯಾಕೃತನು,** ಜಗತ್ತಿಗೆಲ್ಲ ಕಾರಣವಾಗಿರುವಾತನು. ಹೀಗೆ ಒಬ್ಬ ಆತ್ಮನೇ ಮೂರು ಬಗೆಯಾಗಿ ತೋರುತ್ತಾನೆ (೧-೧). ಈ ಅವಸ್ಥೆಗಳಲ್ಲಿ ಒಂದೊಂದರಲ್ಲಿಯೂ ಜ್ಞೇಯರಾಶಿಯೆಲ್ಲ ಅಡಗಿರುವದರಿಂದ ಈ ವಿಶ್ವಾದಿಗಳು ಆತ್ಮನ ಒಂದೊಂದು ಪಾದವೆನಿಸಿರುವರು. ಆದರೆ ಆತ್ಮನ ಪರಮಾರ್ಥರೂಪವು ಈ ಮೂರಕ್ಕಿಂತಲೂ ಅತ್ಯಂತ ವಿಲಕ್ಷಣವಾಗಿರುತ್ತದೆ (೧-೧೦ ರಿಂದ ೧೫). ಈ ಮೂರೂ ಆತ್ಮನಲ್ಲಿ ಅನಾದಿಮಾಯೆಯಿಂದ ತೋರುತ್ತಿರುವ ಅಸತ್ಯವಾದ ರೂಪಗಳು; ಅವು ನಿಜವಾಗಿರುವದಿಲ್ಲ (೧-೧೬). ಈ ಆತ್ಮತತ್ತ್ವವು ವಾಚ್ಯವಾಚಕಭಾವರಹಿತವಾಗಿರುವದರಿಂದ ಇದನ್ನು ಓಂಕಾರವೆಂದೂ ಆತ್ಮನೆಂದೂ

ಕರೆಯುವರು. ಈ ಓಂಕಾರವು ಅಥವಾ ಆತ್ಮನು ಪ್ರಪಂಚೋಪಶಮನಾದ ಶಿವನೇ (೧-೨೪ರಿಂದ ೨೯) ಎಂಬುದು ಆಗಮಪ್ರಕರಣದ ಸಾರವು. ಇಲ್ಲಿರುವ ಅವಸ್ಥಾತ್ರಯ ಪ್ರಕ್ರಿಯೆಯನ್ನೇ ಅಲಾತಶಾಂತಿಪ್ರಕರಣದಲ್ಲಿ (೪-೮೭ರಿಂದ ೯೦) ಉಪಸಂಹಾರ ಮಾಡಿರುವದರಿಂದ ಈ ಎರಡು ಪ್ರಕರಣಗಳಿಗೂ ಪ್ರತಿಪಾದ್ಯವಿಷಯವು ಒಂದೇ ಎಂದು ಸಿದ್ಧವಾಗುತ್ತದೆ. **ಅವಸ್ಥಾತ್ರಯಗಳ ಮೂಲಕ ಆತ್ಮವಾದವನ್ನು ಸ್ಥಾಪಿಸುವ ಈ ಪ್ರಕ್ರಿಯೆಯು ಬೌದ್ಧರಿಗೆ ಸ್ವಲ್ಪವೂ ಒಪ್ಪಿಲ್ಲ.**

## ವೈತಥ್ಯಪ್ರಕರಣ

ಎಚ್ಚರಕನಸುಗಳೆಂಬ ಅವಸ್ಥೆಗಳೆರಡೂ ಎಲ್ಲಾ ಬಗೆಯಿಂದಲೂ ಸಮಾನವಾಗಿರುವವೆಂದು ಸಾಧಿಸಿದ ಬಳಿಕ (೨-೧ರಿಂದ ೧೦) ಆತ್ಮನಲ್ಲಿಯೇ ದ್ವೈತವೆಲ್ಲವೂ ಕಲ್ಪಿತವಾಗಿರುವದೆಂದು (೨-೧೧ರಿಂದ ೩೮) ತೋರಿಸಿಕೊಟ್ಟಿರುತ್ತದೆ. **ಆತ್ಮನು ಪ್ರಪಂಚಾಧ್ಯಾಸಕ್ಕೆ ಅಧಿಷ್ಠಾನವೆಂಬ ಈ ವಾದವೂ ಬೌದ್ಧರ ನೈರಾತ್ಮ್ಯವಾದಕ್ಕೆ ವಿರುದ್ಧವಾಗಿರುತ್ತದೆ.**

## ಅದ್ವೈತಪ್ರಕರಣ

ಈ ಪ್ರಕರಣದಲ್ಲಿ ಬ್ರಹ್ಮವು ಚೇತನಾಚೇತನರೂಪವಾಗಿ ಜನಿಸಿರುವದೆಂದೂ ಜೀವರು ಉಪಾಸನೆಯಿಂದ ಬ್ರಹ್ಮಸ್ವರೂಪವನ್ನು ಪಡೆಯುವರೆಂದೂ ವಾದಿಸುತ್ತಿದ್ದವರ ಜಾತಬ್ರಹ್ಮವಾದವನ್ನು ಖಂಡಿಸಿ ಶ್ರುತಿಯಲ್ಲಿ ಹೇಳಿರುವ ಸೃಷ್ಟಿಯು ಜೀವಪರಮಾತ್ಮರ ಐಕ್ಯವನ್ನು ತಿಳಿಸುವದಕ್ಕೆ ಉಪಾಯಮಾತ್ರವು ಎಂದು ಸಾಧಿಸಿರುತ್ತದೆ. (೩-೧ರಿಂದ ೨೭). ಬ್ರಹ್ಮವು ಮಾಯೆಯಿಂದ ಜಗದ್ರೂಪವಾಗಿ ಹುಟ್ಟಬಹುದು; ಆದರೆ ಅಸತ್ತು ನಿಜವಾಗಿಯಾಗಲಿ ಮಾಯೆಯಿಂದಲಾಗಲಿ ಹುಟ್ಟಲೇ ಆರದು ಎಂದು ಸತ್ಕಾರ್ಯರೂಪವಾದ ಸ್ವಮತವನ್ನು ಸ್ಪಷ್ಟಪಡಿಸಿದೆ (೩-೨೭, ೨೮). ಆತ್ಮನೇ ಸತ್ಯನೆಂಬುದನ್ನು ಅರಿತರೆ ಮನಸ್ಸು ಅಮನಸ್ಸಾಗುತ್ತದೆ ಎಂಬುದನ್ನು ತೋರಿಸಿಕೊಟ್ಟಿದೆ (೩-೨೯ರಿಂದ೩೯). ಮನೋನಿಗ್ರಹದಿಂದಲೂ ಈ ತತ್ತ್ವವನ್ನು ಮಧ್ಯಮಾಧಿಕಾರಿಗಳು ಕಂಡುಕೊಳ್ಳಬಹುದೆಂದು ಉಪದೇಶಿಸಿದೆ(೩-೪೦ರಿಂದ ೪೬). **ಹೀಗೆ ಶ್ರುತ್ಯರ್ಥವನ್ನು ವಿಚಾರಮಾಡಿ ಯುಕ್ತಿಯಿಂದ ಅದ್ವೈತವನ್ನು ಸ್ಥಾಪಿಸುವ, ಮತ್ತು ಅಸತ್ಕಾರ್ಯವಾದವನ್ನು ಸ್ಪಷ್ಟೋಕ್ತಿಯಿಂದ ತಿರಸ್ಕರಿಸಿ ಸದ್ವಿವರ್ತವಾದವನ್ನು ಅಂಗೀಕರಿಸುವ, ಈ ಪ್ರಕರಣವು ಯಾವ ಬೌದ್ಧನಿಗೂ ಒಪ್ಪಾಗಲಾರದು.**

# ಅಲಾತಶಾಂತಿಪ್ರಕರಣ

ಈ ಪ್ರಕರಣದಲ್ಲಿ ಜ್ಞಾತೃಜ್ಞೇಯಜ್ಞಾನಗಳ ಅಭೇದವನ್ನು ಉಪಕ್ರಮದಲ್ಲಿಯೂ, ಉಪಸಂಹಾರದಲ್ಲಿಯೂ (೪-೧, ೪-೯೯) ಮಂಗಳರೂಪವಾಗಿ ಹೇಳಿರುತ್ತದೆ. ದ್ವೈತಿಗಳು ಒಬ್ಬರಿಗೊಬ್ಬರು ವಿರುದ್ಧವಾಗಿ ವಾದಿಸುತ್ತಿರುವದರಿಂದಲೂ ಅವರಲ್ಲಿ ಯಾರೊಬ್ಬರ ಯುಕ್ತಿಯನ್ನೂ ಪ್ರತಿಪಕ್ಷದವರು ಒಪ್ಪುವ ಹಾಗಿರುವದಿಲ್ಲವಾದ್ದರಿಂದಲೂ ದ್ವೈತದರ್ಶನಗಳು ಮಿಥ್ಯೆ. ಪರಮಾರ್ಥವನ್ನು ಹೇಳುವ ಅದ್ವೈತದರ್ಶನವು ಯಾವದಕ್ಕೂ ವಿರುದ್ಧವಲ್ಲ (೩-೧೭, ೧೮) ಎಂದು ಅದ್ವೈತಪ್ರಕರಣದಲ್ಲಿ ಸೂತ್ರರೂಪವಾಗಿ ಹೇಳಿದ್ದದ್ದನ್ನು ಇಲ್ಲಿ ವಿಸ್ತಾರವಾಗಿ ವರ್ಣಿಸಿ ಅಜಾತಿವಾದವನ್ನು ಸ್ಥಾಪಿಸಿರುತ್ತದೆ (೪-೨ ರಿಂದ ೨೩). ಹೊರಗಿನ ವಿಷಯವು ಸತ್ಯವೆಂದು ಒಪ್ಪುವ ವೈಭಾಷಿಕಸೌತ್ರಾಂತಿಕರ ಮತವನ್ನು ಒಳಗಿನ ವಿಜ್ಞಾನವನ್ನು ಮಾತ್ರ ಒಪ್ಪುವ ವಿಜ್ಞಾನವಾದಿಗಳ ದೃಷ್ಟಿಯಿಂದ ಖಂಡಿಸಿ (೪-೨೪ ರಿಂದ ೨೭) ಅದೇ ಯುಕ್ತಿಯಿಂದ ವಿಜ್ಞಾನವಾದವನ್ನೂ ಖಂಡಿಸಿ (೪-೨೮) ಅಜಾತಿವಾದವನ್ನು ವಿಸ್ತಾರವಾಗಿ ಪ್ರತಿಪಾದಿಸಿರುತ್ತದೆ (೪-೨೯ ರಿಂದ ಮುಂದಕ್ಕೆ). **ಅವಿದ್ಯಾದಿಗಳು ಒಂದರಿಂದ ಒಂದು ಹುಟ್ಟುವವೆಂಬ ಬೌದ್ಧರ ಪ್ರತೀತ್ಯಸಮುತ್ಪಾದಕ್ಕೂ ಅದ್ವಿತೀಯಾತ್ಮನಿಗೆ ಹುಟ್ಟೆಂಬುದೇ ಪರಮಾರ್ಥವಾಗಿಲ್ಲ ಎಂಬ ಅಜಾತಿವಾದಕ್ಕೂ ಯಾವ ಸಂಬಂಧವನ್ನೂ ಹೇಳುವದಕ್ಕೆ ಯಾರಿಂದಲೂ ಆಗಲಾರದು.**

ಮಾಂಡೂಕ್ಯಕಾರಿಕೆಗೂ ಬೌದ್ಧಗ್ರಂಥಗಳಿಗೂ ಪ್ರಕ್ರಿಯಾಸಾಮ್ಯವನ್ನು ಕಂಡಿರುವ ಈಗಿನ ವಿಮರ್ಶಕರು ಕಾರಿಕೆಗೆ ಶಂಕರಾಚಾರ್ಯರು ಬರೆದಿರುವ ವ್ಯಾಖ್ಯಾನವನ್ನು ಲೆಕ್ಕಕ್ಕೆ ತೆಗೆದುಕೊಂಡಿರುವದಿಲ್ಲ. ಭಾಷ್ಯಕಾರರು ತಿಳಿದೋ ತಿಳಿಯದೆಯೋ ಕಾರಿಕೆಗೆ ಬೇರೊಂದು ತೆರನಾದ ಅರ್ಥವನ್ನೇಕೆ ಮಾಡಿರಬಾರದು ?—ಎಂದು ಯುಕ್ತಿಪ್ರಧಾನರಾದವರು ಶಂಕಿಸಬಹುದಷ್ಟೆ. ಅಂಥವರ ಶಂಕೆಯನ್ನು ತೊಲಗಿಸುವದಕ್ಕಾಗಿ ನಾವು ಭಾಷ್ಯವನ್ನು ಬಿಟ್ಟು ಬರಿಯ ಗೌಡಪಾದಕಾರಿಕೆಯ ವಿಮರ್ಶೆಯಿಂದಲೇ ಕಾರಿಕೆಗೂ ಬೌದ್ಧರಗ್ರಂಥಗಳಲ್ಲಿರುವ ಪ್ರಕ್ರಿಯೆಗೂ ಯಾವ ಸಂಬಂಧವೂ ಇಲ್ಲವೆಂದು ಮೇಲೆ ತೋರಿಸಿಕೊಟ್ಟಿರುತ್ತೇವೆ. ಭಾಷ್ಯಕಾರರ ಅಭಿಪ್ರಾಯವನ್ನು ಮನದಂದರಂತೂ ಕಾರಿಕೆಯು ವೇದಾಂತಪ್ರಸ್ಥಾನತ್ರಯದ ಪ್ರಕ್ರಿಯೆಯನ್ನೇ ಯುಕ್ತಿಯಿಂದಲೂ ಸಾಧಿಸಿರುತ್ತದೆ—ಎಂಬುದು ಸುಸ್ಪಷ್ಟವಾಗಿರುತ್ತದೆ. ಮಾಂಡೂಕ್ಯಕಾರಿಕೆಗಳಿಗೂ ಬೌದ್ಧಗ್ರಂಥಗಳಿಗೂ ಕೆಲಕೆಲವು ಕಡೆಗಳಲ್ಲಿ ಶಬ್ದಸಾಮ್ಯವು ಕಂಡುಬರುವದು ನಿಜ; ಆದರೆ ಆ ಶಬ್ದಗಳಿಗೆ ಅರ್ಥಸಾಮ್ಯವಿರುವದಿಲ್ಲ. ಬಾದರಾಯಣಸೂತ್ರದಲ್ಲಿ 'ಪ್ರಧಾನ', 'ಪ್ರತ್ಯಕ್ಷ', 'ಅನುಮಾನ' ಮುಂತಾದ ದರ್ಶನಾಂತರದ ಪಾರಿಭಾಷಿಕ ಶಬ್ದಗಳನ್ನು ವೇದಾಂತಕ್ಕೆ ಒಪ್ಪಾದ ರೀತಿಯಿಂದ ಪ್ರಯೋಗಿಸಿರುವಂತೆ ಗೌಡಪಾದರೂ

ಬೌದ್ಧರ ಶಬ್ದಗಳನ್ನು ವೇದಾಂತಕ್ಕೆ ಅನುಗುಣವಾದ ಬೇರೆಯ ಅರ್ಥದಲ್ಲಿಯೇ ಉಪಯೋಗಿಸಿರುತ್ತಾರೆ. ಕುತೂಹಲಿಗಳಾದ ವಾಚಕರ ಸಲುವಾಗಿ ಇಂಥ ಶಬ್ದಗಳನ್ನೂ ವಾಕ್ಯಗಳನ್ನೂ ಪರಿಶಿಷ್ಟದಲ್ಲಿ ಕೊಟ್ಟು ಈ ಅರ್ಥಭೇದವನ್ನು ತೋರಿಸಿದ್ದೇವೆ. ಈ ಪ್ರಕರಣದಲ್ಲಿ ಬೌದ್ಧರ ಯುಕ್ತಿಗಳಿಂದ ಮಿಕ್ಕ ವಾದಿಗಳ ಮತವನ್ನು ಖಂಡಿಸಿ ಬೌದ್ಧರನ್ನೂ ಆ ಯುಕ್ತಿಗೇ ಸಿಕ್ಕಿಸಿಕೊಂಡು ಖಂಡಿಸಿರುವದರಿಂದ ಈ ಸಂದರ್ಭದಲ್ಲಿ ಬೌದ್ಧರ ಯುಕ್ತಿಗಳೂ ಕೆಲವು ಕಾಣಬರುವದು ಸೋಜಿಗವಲ್ಲ. ಅಶ್ವಘೋಷ, ನಾಗಾರ್ಜುನ–ಮುಂತಾದ ಬೌದ್ಧರು ಗೌಡಪಾದರಿಗಿಂತ ಹಿಂದಿನವರೋ ಈಚಿನವರೋ ಎಂಬ ವಾದಗ್ರಸ್ತವಿಷಯವನ್ನು ನಾವು ಇಲ್ಲಿ ಚರ್ಚಿಸಬೇಕಾದದ್ದಿಲ್ಲ. ಗೌಡಪಾದರೇ ಆ ಬೌದ್ಧರಿಗಿಂತ ಈಚಿನವರೆಂದು ಹೇಳುವವರೂ ಮೇಲೆ ಹೇಳಿದ ಅಭಿಪ್ರಾಯಕ್ಕೆ ಒಪ್ಪಿಗೆಯನ್ನು ಕೊಡಬೇಕಾಗುತ್ತದೆ. ಏಕೆಂದರೆ ಪ್ರತಿಪಕ್ಷವನ್ನು ಖಂಡಿಸುವಾಗ ಅವರವರ ಪರಿಭಾಷೆಗಳನ್ನೂ ಯುಕ್ತಿಗಳನ್ನೂ ಬಳಸಿದ ಮಾತ್ರದಿಂದಲೇ ಆ ಪ್ರತಿಪಕ್ಷವನ್ನು ಒಪ್ಪಿದ ಹಾಗಾಗುವದೆಂದು ಯಾರೂ ಹೇಳುವದಕ್ಕೆ ಬರುವದಿಲ್ಲ.

## ಅಲಾತಶಾಂತಿಪ್ರಕರಣವು ಒಂದು ಸ್ವತಂತ್ರ ಗ್ರಂಥವೆ ?

ಈ ಪ್ರಕರಣದಲ್ಲಿ ಮೊದಲೂ ಕೊನೆಯಲ್ಲಿಯೂ ಮಂಗಲಶ್ಲೋಕಗಳಿರುವದು, ಬೌದ್ಧರ ವಚನಗಳನ್ನೂ ಯುಕ್ತಿಗಳನ್ನೂ ಹೇರಳವಾಗಿ ಉಪಯೋಗಿಸಿರುವದು–ಇಷ್ಟುಮಾತ್ರದಿಂದ ಇದು ಹಿಂದಿನ ಮೂರುಪ್ರಕರಣಗಳಿಗೆ ಸಂಬಂಧವಿಲ್ಲದ ಒಂದು ಬೇರೆಯ ಗ್ರಂಥವೆಂದು ಕೆಲವರು ಊಹಿಸುತ್ತಾರೆ. ಈ ವಾದದ ಪೊಳ್ಳುತನವೂ ಮೇಲೆ ಹೇಳಿರುವ ಯುಕ್ತಿಗಳಿಂದಲೇ ಸ್ಪಷ್ಟವಾಗುತ್ತದೆ. ಶಂಕರಾಚಾರ್ಯರವರ ಈ ಪ್ರಕರಣವನ್ನು 'ಶಾಸ್ತ್ರ'ವೆಂದು ಕರೆದಿರುತ್ತಾರೆ (೪–೧ ; ೪–೧೦೦). ಆದರೆ ಅಷ್ಟು ಮಾತ್ರದಿಂದ ಇದು ಬೇರೊಂದು ಗ್ರಂಥವೆಂದು ಹೇಳಲಾಗುವುದಿಲ್ಲ ; ಹಾಗೆ ಹೇಳಿದರೆ ನಾಲ್ಕು ಪ್ರಕರಣಗಳಿಗೂ ಭಾಷ್ಯವನ್ನು ಬರೆಯುವದಾಗಿ ಅವರೇ ಪ್ರಾರಂಭದಲ್ಲಿ ಮಾಡಿರುವ ಪ್ರತಿಜ್ಞೆಗೆ ವಿರುದ್ಧವಾಗುತ್ತದೆ. ಆದ್ದರಿಂದ ಗೀತೆಯ ಹದಿನೈದನೆಯ ಅಧ್ಯಾಯವನ್ನು ಗೀತಾಶಾಸ್ತ್ರದ ಸಾರವೆಂಬರ್ಥದಲ್ಲಿ 'ಶಾಸ್ತ್ರ'ವೆಂದು (ಗೀ. ೧೫-೨೦) ಕರೆದಿರುವಂತೆಯೇ ಇಲ್ಲಿಯೂ ಮಾಂಡೂಕ್ಯೋಪನಿಷದ್ರೂಪವಾದ ಶಾಸ್ತ್ರದ ಸಾರವನ್ನು ತಿಳಿಸುವ ಈ ಪ್ರಕರಣವನ್ನು ಭಾಷ್ಯಕಾರರು 'ಶಾಸ್ತ್ರ'ವೆಂದು ಕರೆದಿರುತ್ತಾರೆ–ಎಂದು ಭಾವಿಸಬೇಕಾಗಿದೆ. ಮಿಕ್ಕ ಮೂರು ಪ್ರಕರಣಗಳಲ್ಲಿರುವ ಅರ್ಥವನ್ನೇ ಈ ಪ್ರಕರಣದಲ್ಲಿ ಉಪಸಂಹಾರಮಾಡಿರುತ್ತದೆ ಎಂಬುದನ್ನು ನಾವು ಆಗಲೇ ತಿಳಿಸಿಕೊಟ್ಟಿರುವದರಿಂದ ಈ ವಿಚಾರವನ್ನು ಇಲ್ಲಿಗೇ ನಿಲ್ಲಿಸುವೆವು.

## ಬೌದ್ಧದರ್ಶನಕ್ಕೂ ಉಪನಿಷತ್ತೇ ಮೂಲವು

ಚೆನ್ನಾಗಿ ನೋಡಿದರೆ ಬೌದ್ಧಮತವು ಯುಕ್ತಿಯ ಬಲದಿಂದ ಪ್ರಸಾರವಾಗುವದಕ್ಕೂ ಉಪನಿಷತ್ತೇ ಪರಂಪರೆಯಿಂದ ಕಾರಣವಾಯಿತೆಂದು ಹೇಳಬೇಕಾಗುತ್ತದೆ. ಏಕೆಂದರೆ ಬೌದ್ಧರಲ್ಲಿ ಮೊದಮೊದಲು ಯುಕ್ತಿಪ್ರಧಾನವಾದ ಗ್ರಂಥಗಳು ಇರಲೇ ಇಲ್ಲ; 'ದ್ವಾದಶನಿದಾನ ಅಥವಾ ಭವಚಕ್ರ', 'ಶೀಲ', 'ಸಮಾಧಿ', 'ಪ್ರಜ್ಞಾ'—ಇವುಗಳನ್ನೇ ಅವರು ಮುಖ್ಯವಾಗಿ ಉಪದೇಶಿಸುತ್ತಿದ್ದರು. ಆತ್ಮನಿಲ್ಲವೆಂಬ ವಾದವೇ ಅವರ ಅಸಾಧಾರಣಮತ. ಆದರೂ ಕ್ರಿ. ಶ. ೧ನೆಯ ಶತಮಾನದಿಂದೀಚೆಗೆ ಪ್ರಪಂಚನಿರಾಕರಣಯುಕ್ತಿಯು ಅವರಲ್ಲಿ ಬಲವಾಯಿತು. ಇದಕ್ಕೆ ಕಾರಣವೇನೆಂದರೆ **ಅಶ್ವಘೋಷನೆಂಬ** ಬ್ರಾಹ್ಮಣನು ವಾದದಲ್ಲಿ ಜಿತನಾಗಿ ಬೌದ್ಧಮತಕ್ಕೆ ಸೇರಿದ ಬಳಿಕ ಅವನು **'ತಥಾತಾ'** ಎಂಬ ಹೊಸ ಸಿದ್ಧಾಂತವೊಂದನ್ನು ತೆಗೆದನು. ನಮ್ಮಲ್ಲಿ ಸಂಸಾರ್ಯಂಶವೊಂದು, 'ಭೂತತಥಾತಾ' (ಇದ್ದದ್ದು ಇದ್ದಂತೆಯೇ ಇರುವದು) ಎಂಬ ಅಂಶವೊಂದು—ಹೀಗೆ ಎರಡು ಅಂಶಗಳಿರುವವೆಂದೂ ಸಂಸಾರವು ಅಸತ್ಯವೆಂದೂ 'ತಥಾತಾ' ಎಂಬುದು ಸತ್ಯವೆಂದಾಗಲಿ ಅಸತ್ಯವೆಂದಾಗಲಿ ಹೇಳುವದಕ್ಕೆ ಬಾರದ ಸ್ವರೂಪವುಳ್ಳದ್ದೆಂದೂ ಅವನು ವಾದಿಸಿದನು. ಉಪನಿಷತ್ತಿನ ಕೂಟಸ್ಥನಿರ್ವಿಶೇಷಾತ್ಮವಾದಕ್ಕೆ ಇದು ಎಷ್ಟು ಹತ್ತಿರವಿರುವದೆಂಬುದನ್ನು ಹೇಳಬೇಕಾದದ್ದೇ ಇಲ್ಲ. ಅಶ್ವಘೋಷನ ತರುವಾಯ ಅವನ ವಾದವು ಬಲಪಡಲಿಲ್ಲ. **'ಲಂಕಾವತಾರ'**ವೇ ಮುಂತಾದ ಗ್ರಂಥಗಳಲ್ಲಿ **'ತಥಾಗತಗರ್ಭ'** ಎಂಬ ನಾಮಾಂತರದಿಂದ ಇದೇ ಅಭಿಪ್ರಾಯವನ್ನು ತಿಳಿಸಿದೆಯಾದರೂ ಆತ್ಮನುಂಟೆಂದು ನಂಬುವ ಅಜ್ಞರಿಗಾಗಿ ಈ ವಾದವನ್ನು ಮೊದಲನೆಯ ಭೂಮಿಕೆಯಾಗಿ ಉಪದೇಶಿಸಿದೆಯೆಂದೂ ಇದು ಪರಮಾರ್ಥವಲ್ಲವೆಂದೂ ಅಲ್ಲಿ ಸ್ಪಷ್ಟವಾಗಿ ಹೇಳಿಬಿಟ್ಟಿದೆ. ಇದು ಹಾಗಿರಲಿ. ಅಶ್ವಘೋಷನ ತರುವಾಯ ಬಂದ ವಾದಿಗಳೆಲ್ಲರೂ ಪ್ರಪಂಚನಿರಾಕರಣವಾದವನ್ನು ಬೆಳೆಯಿಸುತ್ತಾ ಹೋದರು. ನಾಗಾರ್ಜುನ, ಚಂದ್ರಕೀರ್ತಿ ಮೊದಲಾದವರು ಹೊಸಯುಕ್ತಿಗಳನ್ನು ಜೋಡಿಸಿ ಈ ವಾದಕ್ಕೆ ಬಲವನ್ನು ಕೊಟ್ಟರು. ಅಂತೂ **ಉಪನಿಷತ್ತಿ**ನಲ್ಲಿದ್ದ ಬ್ರಹ್ಮಸತ್ಯತ್ವವಾದ, ಜಗನ್ಮಿಥ್ಯಾತ್ವವಾದ—ಎಂಬ ಎರಡು ವಾದಗಳಲ್ಲಿ ಎರಡನೆಯದು ಬೌದ್ಧರಮೂಲಕವಾಗಿ ಪಕ್ವವಾಯಿತು. ಅವರು ಉಪನಿಷತ್ಪ್ರಮಾಣವನ್ನು ಇಟ್ಟುಕೊಳ್ಳಲಿಲ್ಲವಾದ್ದರಿಂದ ಬ್ರಹ್ಮಸತ್ಯತ್ವವನ್ನು ಪ್ರತಿಪಾದಿಸುವ ಪ್ರಧಾನವಾದಕ್ಕೆ ಅವರಲ್ಲಿ ಇಂಬು ದೊರೆಯದೆ ಹೋಯಿತು.

ಬೌದ್ಧರು ಪ್ರಪಂಚನಿರಾಕರಣವಾದದಲ್ಲಿ ನಿಪುಣರು. ಜಗತ್ತು ಸತ್ಯವೆಂದು ನಮ್ಮ ಅನುಭವದಲ್ಲಿರುವಾಗ ಅದನ್ನು ಇಲ್ಲವೆನ್ನಬಹುದೆ? ಎಂಬ ಶಂಕೆಗೆ ಜಡರು ಅನುಭವದಲ್ಲಿದೆ ಎನ್ನುವ ಜಗತ್ತಿನ ವಿಷಯಕ್ಕೆ ಬಗೆಬಗೆಯ ವಿಕಲ್ಪಗಳನ್ನು ಹಾಕಿ

ಯಾವದೊಂದು ವಿಕಲ್ಪವೂ ತರ್ಕದ ಹೊಡೆತಕ್ಕೆ ನಿಲ್ಲುವಂತಿಲ್ಲವೆಂದು ತೋರಿಸಿ ಕೊಡುವದೇ ಬೌದ್ಧರ ಮುಖ್ಯಯುಕ್ತಿ. ಈ ಯುಕ್ತಿಯನ್ನೇ ಶ್ರೀಗೌಡಪಾದಾಚಾರ್ಯರು ಅಲಾತಶಾಂತಿಯಲ್ಲಿ ಉಪಯೋಗಿಸಿಕೊಂಡು ಅದರಿಂದಲೇ ಬೌದ್ಧರ ಪ್ರಕ್ರಿಯೆಯನ್ನೂ ನಿರಾಕರಣಮಾಡಿ ದ್ವೈತವಾದವನ್ನೆಲ್ಲ ಖಂಡಿಸಿ ವೈದಿಕತರ್ಕದ ಮಹತ್ತ್ವವನ್ನು ತೋರಿಸಿಕೊಟ್ಟಿರುತ್ತಾರೆ. ಈ ಗುಟ್ಟನ್ನರಿಯದ ವಿಮರ್ಶಕಂಮನ್ಯರು ಗೌಡಪಾದರ ವೇದಾಂತದಲ್ಲಿ ಬೌದ್ಧಮತದ ಸಾಂಕರ್ಯವಿದೆ ಎಂದು ಭ್ರಮಿಸಿರುತ್ತಾರೆ.

## ಕಾರಿಕೆಯ ಮೇಲಿನ ಶಾಂಕರಭಾಷ್ಯ

ಗೌಡಪಾದರ ಕಾರಿಕೆಯು ಬಹು ಪ್ರಾಚೀನವಾಗಿರುವದರಿಂದ ಇದರ ಒಂದು ಭಾಗವನ್ನು ಉಪನಿಷತ್ತೆಂದೂ ಇನ್ನೊಂದು ಭಾಗವನ್ನು ಬೌದ್ಧರ ಪ್ರಕರಣವೆಂದೂ ಭ್ರಮಿಸುವಂತಾಗಿದೆ ಎಂದು ಆಗಲೇ ತಿಳಿಸಿದ್ದಾಗಿದೆಯಷ್ಟೆ. ಈ ಪ್ರಕರಣ ಚತುಷ್ಟಯಕ್ಕೆ ಶಂಕರಾಚಾರ್ಯರ ಭಾಷ್ಯವು ಇಲ್ಲದಿದ್ದರೆ ವೇದಾಂತಿಗಳೂ ಇದರ ನಿಜವನ್ನು ತಿಳಿಯುವದು ಕಷ್ಟವಾಗುತ್ತಿತ್ತೆಂಬುದು ನಿಶ್ಚಯ. ಏಕೆಂದರೆ ಶಂಕರರಿಗಿಂತ ಕೆಲವರು ಹಿಂದಿನವರು ವಸ್ತುತಂತ್ರವಾದ ಜ್ಞಾನವನ್ನೇ ಪ್ರಧಾನವಾಗಿ ಪ್ರತಿಪಾದಿಸುವ ಈ ಗ್ರಂಥಕ್ಕೂ ಉಪಾಸನಾಪರವಾಗಿ ವ್ಯಾಖ್ಯಾನಮಾಡುತ್ತಿದ್ದರೆಂಬುದಕ್ಕೆ ನಮಗೆ **ಬೃಹದಾರಣ್ಯಕಭಾಷ್ಯವಾರ್ತಿಕ**ದಲ್ಲಿ ಆಧಾರವು ಸಿಕ್ಕುತ್ತದೆ. ಆ ವಾರ್ತಿಕದಲ್ಲಿ ವೈತಥ್ಯಪ್ರಕರಣದ ೩೨ನೆಯ ಶ್ಲೋಕವನ್ನೂ, ಅದ್ವೈತಪ್ರಕರಣದ ೪೮ನೆಯ ಶ್ಲೋಕವನ್ನೂ ಜ್ಞಾನಾಭ್ಯಾಸಪರವಾಗಿ ಭಾವಿಸಿ ಉದಾಹರಿಸುತ್ತಿದ್ದವರ ಮತವನ್ನು (ಬೃ. ವಾ. ೪-೪-೮೮೭, ೮೮೮) ಖಂಡಿಸಿರುತ್ತದೆ. ಕಾರಿಕೆಯ ವೇದಾಂತದ ವಿಷಯಕ್ಕೆ ಈಗಲೂ ಅದ್ವೈತಿಗಳಲ್ಲಿಯೇ ಹಲವು ವಿಚಿತ್ರವಾದ ಮತಭೇದಗಳು ಕಂಡುಬರುತ್ತವೆ. ಈ ಕಾರಣದಿಂದ ಕಾರಿಕಾಭಾಷ್ಯದಲ್ಲಿರುವ ಕೆಲವು ಮುಖ್ಯ ವಿಚಾರಗಳನ್ನು ಇಲ್ಲಿ ವಾಚಕರ ಲಕ್ಷ್ಯಕ್ಕೆ ತರುವದು ಅವಶ್ಯವೆಂದು ನಮಗೆ ತೋರುತ್ತದೆ. ಕಾರಿಕೆಯಲ್ಲಿ ಅಡಗಿರುವ ಸಿದ್ಧಾಂತದ ತತ್ತ್ವವನ್ನು ಅರಿತುಕೊಳ್ಳಬೇಕೆಂಬ ಜಿಜ್ಞಾಸುಗಳಿಗೆ ಇದರಿಂದ ಪ್ರಯೋಜನವಾಗುವದೆಂದು ನಮ್ಮ ನಂಬಿಕೆ.

## ಅದ್ವೈತವು ಶಾಸ್ತ್ರಸಿದ್ಧವೋ, ತರ್ಕಸಿದ್ಧವೋ?

ಇಡಿಯ ಜಗತ್ತಿನ ತಿರುಳನ್ನು ವೇದಾಂತದಲ್ಲಿ ಬ್ರಹ್ಮವೆಂದು ಕರೆದಿರುತ್ತದೆ. ಬ್ರಹ್ಮವು ನಮ್ಮೆಲ್ಲರಿಗೂ ಆತ್ಮನಾಗಿರುತ್ತದೆ, ಅದು ಅದ್ವಿತೀಯವಾಗಿ ನಿರ್ವಿಶೇಷವಾಗಿರುತ್ತದೆ ಎಂಬುದು ವೇದಾಂತಸಿದ್ಧಾಂತವು. ಈ ಸಿದ್ಧಾಂತವು ಉಪನಿಷತ್ತುಗಳಿಂದಲೇ ತಿಳಿಯಬರುವದೆಂದೂ ಪ್ರತ್ಯಕ್ಷದಿಂದಲಾಗಲಿ ಅನುಮಾನದಿಂದಲಾಗಲಿ

ಅದನ್ನು ತಿಳಿಯುವದಕ್ಕೆ ಆಗುವದಿಲ್ಲವೆಂದೂ ಅವರು ಹೇಳುತ್ತಾರೆ. ಬ್ರಹ್ಮವು ಉಪನಿಷದ್ರೂಪವಾದ ಶಾಸ್ತ್ರವೊಂದರಿಂದಲೇ ತಿಳಿಯಬರತಕ್ಕದ್ದೆಂದು ತಿಳಿಸುವದಕ್ಕೆ 'ಔಪನಿಷದ' ಎಂಬ ವಿಶೇಷಣವನ್ನು ಶ್ರುತಿಯಲ್ಲಿ ಉಪಯೋಗಿಸಿರುತ್ತದೆ; 'ಶಾಸ್ತ್ರಯೋನಿ' ಎಂಬ ವಿಶೇಷಣವನ್ನು ಬ್ರಹ್ಮಸೂತ್ರದಲ್ಲಿ ಉಪಯೋಗಿಸಿರುತ್ತದೆ. ಇದೆಲ್ಲವೂ ತರ್ಕಪ್ರಧಾನರಾದ ಈಗಿನವರಿಗೆ ವಿರುದ್ಧವಾಗಿ ತೋರುತ್ತದೆ. ವೇದವನ್ನು ನಂಬುವವರಿಗೆ ಬ್ರಹ್ಮವು ಶಾಸ್ತ್ರೈಕವೇದ್ಯವಾಗಿರಬಹುದು; ಆದರೆ ವೇದ ಪ್ರಾಮಾಣ್ಯದಲ್ಲಿ ಶ್ರದ್ಧೆಯಿಲ್ಲದ ಬೌದ್ಧರೇ ಮುಂತಾದವರು ಹಾಗೆಂದು ಒಪ್ಪಿಯಾರೆ? ಇಲ್ಲ. ಈ ಕಾರಣದಿಂದ ಗೌಡಪಾದರು ವೇದಪ್ರಾಮಾಣ್ಯವನ್ನು ಹಿಡಿದು ಆಗಮ ಪ್ರಕರಣದಲ್ಲಿ ಪರಮಾರ್ಥವನ್ನು ತಿಳಿಸಿಕೊಟ್ಟು ಅದನ್ನು ನಂಬದವರಿಗಾಗಿ ಮಿಕ್ಕ ಮೂರು ಪ್ರಕರಣಗಳಲ್ಲಿ ಕೇವಲ ಯುಕ್ತಿಯಿಂದಲೇ ತಮ್ಮ ಸಿದ್ಧಾಂತವನ್ನು ಸ್ಥಾಪಿಸಿರುತ್ತಾರೆ, ಶಂಕರಾಚಾರ್ಯರೂ ಹಾಗೆಂದೇ ಬರೆದಿರುತ್ತಾರೆ—ಎಂಬುದು ಈ ತರ್ಕಪ್ರಿಯರ ಮತವು.

ಶಾಂಕರಭಾಷ್ಯವನ್ನು ಸರಿಯಾಗಿ ಪರಿಶೀಲಿಸದೆ ಇರುವದರಿಂದಲೂ ಪ್ರಮಾಣ ತರ್ಕಗಳ ಸ್ವಭಾವತಾರತಮ್ಯವನ್ನು ಅರಿತುಕೊಳ್ಳದೆ ಇರುವದರಿಂದಲೂ ಈ ವಿಚಿತ್ರಾಭಿಪ್ರಾಯವು ಹೊರಬಿದ್ದಿರುತ್ತದೆ ಎಂದು ನಮಗೆ ತೋರುತ್ತದೆ. ಏಕೆಂದರೆ ಶ್ರುತಿಯುಕ್ತಿಗಳೆರಡರಿಂದಲೂ ತಾವು ಅದ್ವೈತವನ್ನು ಸ್ಥಾಪಿಸುವದಾಗಿ ಶಂಕರಾ ಚಾರ್ಯರು ಬಾಯಿಬಿಟ್ಟು ಹೇಳಿರುವ ವಚನಗಳು ಕಾರಿಕಾಭಾಷ್ಯದಲ್ಲಿ ನಾಲ್ಕು ಪ್ರಕರಣಗಳಲ್ಲಿಯೂ ಸಿಕ್ಕುತ್ತವೆ. ಹೇಗೆಂದರೆ:

**(೧) ಪ್ರಥಮಂ ಪ್ರಕರಣಮ್ ಆಗಮಪ್ರಧಾನಮ್ (ಭಾ. ಭಾ. ೩).**

**(೨) ಆಗಮಮಾತ್ರಂ ತತ್। ತತ್ರ ಉಪಪತ್ತ್ಯಾಪಿ ದ್ವೈತಸ್ಯ ವೈತಥ್ಯಂ ಶಕ್ಯತೇ ಅವಧಾರಯಿತುಮ್ ಇತಿ ದ್ವಿತೀಯಂ ಪ್ರಕರಣಂ ಆರಭ್ಯತೇ (ಭಾ. ಭಾ. ೭೫).**

**(೩) ಅದ್ವೈತಂ ಕಿಮಾಗಮಮಾತ್ರೇಣ ಪ್ರತಿಪತ್ತವ್ಯಮ್, ಆಹೋಸ್ವಿತ್ ತರ್ಕೇಣಾಪಿ ಇತಿ? ಅತ ಆಹ—ಶಕ್ಯತೇ ತರ್ಕೇಣಾಪಿ ಜ್ಞಾತುಮ್। ತತ್ ಕಥಮ್ ಇತಿ ಅದ್ವೈತಪ್ರಕರಣಮ್ ಆರಭ್ಯತೇ (ಭಾ. ಭಾ. ೧೨೭).**

**(೪) ಶಾಸ್ತ್ರೋಪಪತ್ತಿಭ್ಯಾಮ್ ಅವಧಾರಿತತ್ವಾತ್ ಅದ್ವಯಾತ್ಮದರ್ಶನಂ ಸಮ್ಯಗ್ದರ್ಶನಮ್। ತದ್ಬಾಹ್ಯತ್ವಾತ್ ಮಿಥ್ಯಾದರ್ಶನಮ್ ಅನ್ಯತ್ (ಭಾ. ಭಾ. ೧೬೦).**

**(೫) ಓಙ್ಕಾರನಿರ್ಣಯದ್ವಾರೇಣ ಆಗಮತಃ ಪ್ರತಿಜ್ಞಾತಸ್ಯ ಅದ್ವೈತಸ್ಯ ಬಾಹ್ಯವಿಷಯಭೇದವೈತಥ್ಯಾಚ್ಚ ಸಿದ್ಧಸ್ಯ, ಪುನಃ ಅದ್ವೈತೇ ಶಾಸ್ತ್ರ ಯುಕ್ತಿಭ್ಯಾಂ ಸಾಕ್ಷಾತ್ ನಿರ್ಧಾರಿತಸ್ಯ "ಏತತ್ತದುತ್ತಮಂ ಸತ್ಯಮ್" (೩-೪೮) ಇತಿ ಉಪಸಂಹಾರಃ ಕೃತಃ ಅನ್ತೇ। ತಸ್ಯೈತಸ್ಯ ಆಗಮಾರ್ಥಸ್ಯ ಅದ್ವೈತದರ್ಶನಸ್ಯ ಪ್ರತಿಪಕ್ಷಭೂತಾಃ ದ್ವೈತಿನಃ ವೈನಾಶಿಕಾಶ್ಚ।............(ಭಾ. ಭಾ. ೨೧೨).**

ಇಲ್ಲಿ ಐದನೆಯ ವಾಕ್ಯದಲ್ಲಿ ಅದ್ವೈತದರ್ಶನವು 'ಆಗಮಾರ್ಥ'ವೆಂದೇ ಉಪಸಂಹಾರಮಾಡಿರುವದನ್ನು ನಾವು ಲಕ್ಷ್ಯದಲ್ಲಿಡಬೇಕು; ಏಕೆಂದರೆ ಅದ್ವೈತವನ್ನು ಯುಕ್ತಿಯಿಂದಲೂ ಸಾಧಿಸಿದ್ದರೂ ಅದಕ್ಕೆ ಮುಖ್ಯವಾಗಿ ಆಗಮವೇ ಪ್ರಮಾಣವೆಂಬುದು ಇದರಿಂದ ಸ್ಪಷ್ಟವಾಗುತ್ತದೆ. ಆಗಮಪ್ರಕರಣದಲ್ಲಿ ಮಾತ್ರವಲ್ಲದೆ ಮಿಕ್ಕ ಮೂರು ಪ್ರಕರಣಗಳಲ್ಲಿಯೂ (೨-೩೧, ೩-೧೧, ೩-೧೨, ೪-೯೦) ಉಪನಿಷತ್ತುಗಳನ್ನು ಉದಾಹರಿಸಿರುತ್ತದೆ. ತರ್ಕಪ್ರಧಾನವಾಗಿರುವ ಆ ಪ್ರಕರಣಗಳಲ್ಲಿ ಯುಕ್ತಿಗೆ ಹೆಚ್ಚಿನ ಸ್ಥಾನವಿರುವದೆಂಬುದು ನ್ಯಾಯವಾಗಿರುತ್ತದೆ.

ಶಾಸ್ತ್ರಪ್ರಮಾಣವನ್ನು ಹಿಡಿದು ವಾದಿಸಿದರೆ ಮಿಕ್ಕ ವಾದಿಗಳಿಗೆ ಸಿದ್ಧಾಂತವು ಒಪ್ಪಾಗುವದು ಹೇಗೆ? ಎಂದು ಆಕ್ಷೇಪಿಸಬಾರದು. ಏಕೆಂದರೆ ಶ್ರುತಿವಾಕ್ಯವನ್ನು ಪ್ರಮಾಣವೆಂದು ನಂಬುವ ಪ್ರಸಂಗವೇನೂ ಇಲ್ಲಿಲ್ಲ. ಕರ್ಮಕಾಂಡದಲ್ಲಿ ಈ ಪ್ರಸಕ್ತಿಯು ಬರುತ್ತದೆಯಾದರೂ ಜ್ಞಾನಕಾಂಡದ ವಸ್ತುಬೋಧಕವಾಕ್ಯಗಳು ವಸ್ತ್ವನುಸಾರಿಯಾದ ಜ್ಞಾನವನ್ನೇ ಉಂಟುಮಾಡುವದರಿಂದ ಅವನ್ನು ಯಾರೂ ಅಲ್ಲಗಳೆಯುವ ಹಾಗಿಲ್ಲ. ಹಾಗಿದ್ದರೆ ತರ್ಕವೇತಕ್ಕೆ? ಎಂದು ಕೇಳಬಹುದು. ಪ್ರಮಾಣದಿಂದುಂಟಾಗುವ ಅನುಭವವನ್ನು ತರ್ಕದಿಂದ ಶೋಧನೆಮಾಡಿಯೇ ಒಪ್ಪಬೇಕೆಂಬುದು ನೈಯಾಯಿಕರ ತತ್ತ್ವವು. ಆದ್ದರಿಂದ ಪ್ರತ್ಯಕ್ಷಾದಿಪ್ರಮಾಣಗಳಿಂದ ತಿಳಿದು ಬರುವದನ್ನು ತರ್ಕದಿಂದ ಪರೀಕ್ಷಿಸಿದ ಬಳಿಕವೇ ಒಪ್ಪುವಂತೆ ಆಗಮಪ್ರಮಾಣದಿಂದ ತಿಳಿದುಬಂದದ್ದನ್ನೂ ತರ್ಕದಿಂದ ಶೋಧನೆಮಾಡಿ ನಿರ್ಧರಿಸಬೇಕಾದದ್ದು ಯುಕ್ತವಾಗಿದೆ. ಶಾಸ್ತ್ರವು ಬೋಧಕವು, ತರ್ಕವು ಶೋಧಕವು. ಆದ್ದರಿಂದಲೇ ಆಚಾರ್ಯರು ಆಗಮೋಪಪತ್ತಿಗಳಿಂದ ಸಿದ್ಧವಾಗುವದೇ ಕೊನೆಗೂ ನಿಲ್ಲುವ ಪರಮಾರ್ಥವೆಂದು ತಮ್ಮ ಮಿಕ್ಕ ಭಾಷ್ಯಗಳಲ್ಲಿಯೂ ಬರೆದಿರುತ್ತಾರೆ.

## ಶಾಸ್ತ್ರವು ಪರಮಾರ್ಥವನ್ನು ತಿಳಿಸುವ ಬಗೆ

ಶಾಸ್ತ್ರವು ಆತ್ಮರೂಪವಾಗಿರುವ ಬ್ರಹ್ಮವನ್ನು ಹೇಗೆ ತಿಳಿಸುತ್ತದೆ? ಎಂಬ ಪ್ರಶ್ನೆಗೆ ಆಚಾರ್ಯರು ಕೊಟ್ಟಿರುವ ಉತ್ತರವು ವಿಮರ್ಶನೀಯವಾಗಿರುತ್ತದೆ.

ತಿಳಿಯದೆ ಇರುವದು. ಅನ್ಯಥಾಗ್ರಹಣಕ್ಕೆ (ತಪ್ಪಾಗಿ ತಿಳಿಯುವದಕ್ಕೆ) ಕಾರಣ ವಾಗಿರುತ್ತದೆ (೧-೧೫). ಸುಷುಪ್ತಿಯಲ್ಲಿ ಕಾರಣವು ಮಾತ್ರ ಇರುತ್ತದೆ, ಎಚ್ಚರ ಕನಸುಗಳಲ್ಲಿ ಕಾರ್ಯಕಾರಣಗಳೆರಡೂ ಇರುತ್ತವೆ; ಆದರೆ ಅವಸ್ಥಾರಹಿತನಾದ ತುರೀಯನಲ್ಲಿ, ಎಂದರೆ ಶುದ್ಧಾತ್ಮನಲ್ಲಿ ಇವೆರಡೂ ಇರುವದಿಲ್ಲ (೧-೧೧, ೧೪). ಈ ಎರಡೂ ಆತ್ಮನಲ್ಲಿವೆ ಎಂಬುದು ವಿಪರ್ಯಾಸವು, ಭ್ರಾಂತಿಯು (೧-೧೫)—ಎಂದು ಕಾರಿಕೆಯಲ್ಲಿಯೂ ಭಾಷ್ಯದಲ್ಲಿಯೂ ಸ್ಪಷ್ಟವಾಗಿ ಬರೆದಿರುತ್ತದೆ. ಆದರೂ ಇಷ್ಟು ನಿಃಸಂದಿಗ್ಧವಾಗಿರುವ ಉಕ್ತಿಗೆ ವಿರುದ್ಧವಾಗಿ ಈಚಿನ ವ್ಯಾಖ್ಯಾನಕಾರರು ಕಾರಣಾ ಜ್ಞಾನವೆಂದರೆ 'ಮೂಲಾವಿದ್ಯೆ' ಎಂಬ ಒಂದಾನೊಂದು ಆವರಣವಿಶೇಷವೆಂದು ಕಲ್ಪಿಸಿರುತ್ತಾರೆ. ಅಗ್ರಹಣವೆಂದರೆ ತತ್ತ್ವವನ್ನು ಅರಿಯದಿರುವದು: ಅದು ಜಾಗ್ರ ತ್ಸ್ವಪ್ನಗಳ ವಿಶೇಷಜ್ಞಾನಕ್ಕೆ ಕಾರಣವಾಗಿರುವದರಿಂದ ಸುಷುಪ್ತಿಯಲ್ಲಿ ಕಾರಣಾ ವಿದ್ಯೆ ಎನಿಸಿಕೊಳ್ಳುವದು. ತುರೀಯನೆಂಬ ಶುದ್ಧಾತ್ಮನಲ್ಲಿಯೂ ಈ ಅಗ್ರಹಣವುಂಟು: ಆದರೆ ಅದರಿಂದ ಅನ್ಯಥಾಜ್ಞಾನವೇನೂ ಆಗುವಂತಿಲ್ಲವಾದ್ದರಿಂದ ಅದು ಕಾರಣಾ ವಿದ್ಯೆಯಲ್ಲ (೧-೧೩) ಎಂದು ಹೇಳಿರುವದರಿಂದ ಈ ಮೂಲಾವಿದ್ಯಾವಾದಕ್ಕೆ ಕಾರಿಕೆ ಯಲ್ಲಿ ಎಳ್ಳಷ್ಟೂ ಎಡೆಯಿಲ್ಲವೆಂದು ಹೇಳಬೇಕಾಗಿದೆ.

ಇನ್ನು ಜಗತ್ತಿನ ನಾಮರೂಪಗಳ ತೋರಿಕೆಗೆ ಕಾರಣವೆಂದು ಕಲ್ಪಿಸಬೇಕಾಗುವ ಅವ್ಯಾಕೃತನಾಮರೂಪಬೀಜವನ್ನೇ ಮಾಯೆಯೆಂದೂ ಮೂಲಾವಿದ್ಯೆಯೆಂದೂ ಕರೆದಿರುವದು ಕೆಲವು ವ್ಯಾಖ್ಯಾನಗಳಲ್ಲಿ ಕಂಡುಬರುತ್ತದೆ. ಆದರೆ ಭಾಷ್ಯದಲ್ಲಿ ಕಂಡುಬರುವ 'ಅವಿದ್ಯಾಕೃತನಾಮರೂಪಮಾಯಾಸ್ವರೂಪೇಣ', 'ಅವಿದ್ಯಾಕೃತ ಮಾಯಾಬೀಜೋತ್ಪನ್ನಾನಾಮ್' ಎಂಬ ವಾಕ್ಯಗಳಲ್ಲಿ (ಭಾ. ಭಾ. ೭೯) ನಾಮ ರೂಪಗಳ ಬೀಜವಾದ ಮಾಯೆಯು ಅವಿದ್ಯಾಕೃತವಾಗಿರುವದೆಂದು ಹೇಳಿರುವದರಿಂದ ಮಾಯೆಯೇ ಅಧ್ಯಸ್ತವೆಂದೂ, ಆದ್ದರಿಂದ ಅದು ಅಧ್ಯಾಸಕ್ಕೆ ಕಾರಣವಾಗಿರುವ ಮೂಲಾವಿದ್ಯೆ ಎಂಬುದು ಭಾಷ್ಯಾನುಸಾರವಲ್ಲವೆಂದೂ, ಏರ್ಪಡುತ್ತದೆ. ಆದ್ದರಿಂದ ಹೀಗೂ ಕಾರಿಕಾಭಾಷ್ಯದಲ್ಲಿ ಮೂಲಾವಿದ್ಯಾವಾದಕ್ಕೆ ಅವಕಾಶವಿಲ್ಲವೆಂದು ನಿಶ್ಚಯ ವಾಗುತ್ತದೆ.

## ಅಜಾತಿವಾದ

ಆತ್ಮನು ಪರಮಾರ್ಥವಾಗಿಯೇ ಜನ್ಮಾದಿವಿಕಾರರಹಿತನಾಗಿರುತ್ತಾನೆ, ಪ್ರಪಂಚೋಪಶಮನಾಗಿರುತ್ತಾನೆ—ಎಂಬ ವಾದಕ್ಕೆ **ಅಜಾತಿವಾದ**ವೆಂದು ಹೆಸರು. ಮಾಂಡೂಕ್ಯದಲ್ಲಿ ಈ ವಾದವನ್ನೇ ತಾತ್ಪರ್ಯದಿಂದ ಹೇಳಿರುತ್ತದೆ. ಚೇತನಾ ಚೇತನರೂಪವಾದ ಪ್ರಪಂಚವು ಆತ್ಮನಲ್ಲಿ ನಮಗೆಲ್ಲರಿಗೂ ಕಾಣುತ್ತಿರುವದಲ್ಲ, ಇದಕ್ಕೇನು ಗತಿ ?—ಎಂಬ ಆಕ್ಷೇಪಕ್ಕೆ ನಮಗೆ ಕಾಣಿಸುತ್ತಿರುವ ಪ್ರಪಂಚವೆಲ್ಲವೂ

ಕನಸಿನಂತೆ ಮಿಥ್ಯೆಯಾಗಿರುತ್ತವೆ (ಭಾ. ಭಾ. ೯೦, ೯೧); ಪರಮಾರ್ಥವಾಗಿ ಇದೆಲ್ಲವೂ ಆತ್ಮನೇ ಆಗಿರುತ್ತದೆ (ಭಾ. ಭಾ. ೧೨೬)—ಎಂಬ ಪರಿಹಾರವನ್ನು **ವೈತಥ್ಯಪ್ರಕರಣ**ದಲ್ಲಿ ಹೇಳಿರುತ್ತದೆ. ಉಪನಿಷತ್ತಿನಲ್ಲಿ ತೈಜಸನಿಗೂ ವೈಶ್ವಾನರನಂತೆಯೇ ಸಪ್ತಾಂಗಗಳೂ ಏಕೋನವಿಂಶತಿಮುಖಗಳೂ ಇರುವವೆಂದು ಹೇಳಿರುವವನ್ನೇ ಈ ಪ್ರಕರಣದಲ್ಲಿ ವಿಸ್ತರಿಸಿ ಹೇಳಿರುತ್ತದೆ ಎಂದು ಭಾವಿಸಬಹುದು.

ಬ್ರಹ್ಮದಿಂದ ಜೀವರು ಉತ್ಪನ್ನರಾಗಿರುವರೆಂದೂ ಉಪಾಸನೆಯಿಂದ ಅವರು ಬ್ರಹ್ಮಸಾಯುಜ್ಯವನ್ನು ಪಡೆಯುವರೆಂದೂ ಬೇರೆಯ ಶ್ರುತಿಗಳಲ್ಲಿ ಹೇಳಿರುತ್ತದೆಯಲ್ಲ!—ಎಂಬ ಶಂಕೆಗೆ ಸಮಾಧಾನವನ್ನು **ಅದ್ವೈತಪ್ರಕರಣ**ದಲ್ಲಿ ಹೇಳಿರುತ್ತದೆ. ಆಕಾಶವು ಗಡಿಗೆಯೇ ಮುಂತಾದ ಉಪಾಧಿಗಳಿಂದ ಹುಟ್ಟುವಹಾಗೆ ತೋರುವಂತೆಯೇ, ಜೀವರೂ ಶರೀರಾದಿರೂಪವಾದ ಉಪಾಧಿಗಳ ವಶದಿಂದ ಹುಟ್ಟುವಹಾಗೆ ತೋರುತ್ತಾರೆ. ನಿಜವಾಗಿ ಆಕಾಶವೇ ಗಡಿಗೆ ಮುಂತಾದವುಗಳ ತಿರುಳೂ ಆಗಿರುವಂತೆ ಉಪಾಧಿಗಳೂ ಆತ್ಮನೇ (ಭಾ. ಭಾ. ೧೩೨) ಆಗಿರುತ್ತಾನೆ. ಶರೀರಾದಿಗಳು ತಮ್ಮ ರೂಪದಿಂದ ಕನಸಿನ ಶರೀರಗಳಂತೆ ಮಿಥ್ಯೆಯೇ (ಭಾ. ಭಾ. ೧೪೭) ಆಗಿರುವದರಿಂದ ಆತ್ಮನು ಅದ್ವಿತೀಯನು, ಅಜನು, ನಿಷ್ಪ್ರಪಂಚನು ಎಂಬುದಕ್ಕೆ ಯಾವ ಅಡ್ಡಿಯೂ ಇಲ್ಲ. ಶ್ರುತಿಗಳಲ್ಲಿ ಹೇಳಿರುವ ಸೃಷ್ಟಿಯು ಈ ಮಾಯಿಕಸೃಷ್ಟಿಯೇ. ಶ್ರುತಿಗೆ ಸೃಷ್ಟಿಯಲ್ಲಿ ಪರಮತಾತ್ಪರ್ಯವಿಲ್ಲ: ಅದು ಆತ್ಮನ ಏಕತ್ವವನ್ನು ತಿಳಿದುಕೊಳ್ಳುವದಕ್ಕೆ ಉಪಾಯವೇ ಹೊರತು ದ್ವೈತವು ಸತ್ಯವೆನ್ನುವದಕ್ಕಲ್ಲ (ಭಾ. ಭಾ. ೧೫೩, ೧೫೫, ೧೫೬) ಆದ್ದರಿಂದಲೇ ಶ್ರುತಿಯಲ್ಲಿ ಆತ್ಮೈಕತ್ವವನ್ನು ಹೊಗಳಿರುವದು, ನಾನಾತ್ವವನ್ನು ನಿಂದಿಸಿರುವದು, ಅಲ್ಲಗಳೆದಿರುವದು (ಭಾ. ಭಾ. ೧೫೧, ೧೬೨, ೧೬೩). ಶ್ರುತಿಯಲ್ಲಿ ಉಪಾಸನೆಯನ್ನೂ ಅದರಿಂದಾಗುವ ಬ್ರಹ್ಮಸಾಯುಜ್ಯವನ್ನೂ ಉಪದೇಶಿಸಿರುವದು ಪರಮಾರ್ಥವನ್ನು ಅರಿಯದ ಅವಿದ್ಯಾದೃಷ್ಟಿಯ ಅಧಿಕಾರಿಗಳಿಗಾಗಿ (ಭಾ. ಭಾ. ೧೫೯): ಆದ್ದರಿಂದ ಶ್ರುತಿಯು ತಾತ್ಪರ್ಯದಿಂದ ಹೇಳುವ ಅಜಾತಿವಾದಕ್ಕೆ ಯಾವ ಬಾಧಕವೂ ಇಲ್ಲ

ಸಾಂಖ್ಯರು, ಕಾಣಾದರು, ಜೈನರು, ಬೌದ್ಧರು—ಮುಂತಾದ ವಾದಿಗಳು ಯುಕ್ತಿಯಿಂದ ಪರಮಾರ್ಥವನ್ನು ನಿರೂಪಣಮಾಡಿರುತ್ತಾರಲ್ಲ! ಆತ್ಮನು ಅಜನೆಂದೂ ನಿಷ್ಪ್ರಪಂಚನೆಂದೂ ಹೇಳುವ ವೈದಿಕವಾದವು ಅವರ ದರ್ಶನಗಳಿಗೆ ವಿರುದ್ಧವಾಗುವದಿಲ್ಲವೆ ?—ಎಂದು ಒಂದು ಆಕ್ಷೇಪವು ಎದ್ದುಕೊಳ್ಳಬಹುದು. ಮಿಕ್ಕ ವಾದಿಗಳು ಕಾರ್ಯಕಾರಣವಾದವನ್ನು ಒಪ್ಪುತ್ತಾರೆಂಬುದು ನಿಜ. ಆದರೆ ಅವರು 'ಕಾರ್ಯವು ಕಾರಣದಿಂದ ಹೇಗೆ ಹುಟ್ಟುತ್ತದೆ ? ಕಾರ್ಯಕಾರಣಗಳ ಸ್ವರೂಪವೇನು ?'—ಎಂಬ ಬಗ್ಗೆ ಒಂದೇ ಮತದವರಾಗಿಲ್ಲ. ಒಬ್ಬರಿಗೊಬ್ಬರು ವಿರುದ್ಧವಾಗಿರುತ್ತಾರೆ. ಅವರು

ಒಬ್ಬರ ಮತದಲ್ಲಿ ಒಬ್ಬರು ಹೇಳುತ್ತಿರುವ ದೋಷವು ಅಪರಿಹರಣೀಯವಾಗಿ
ಇದರಿಂದಲೇ ಅಜಾತಿವಾದವು ಸರಿ ಎಂದು ಏರ್ಪಡುತ್ತದೆ. ಆದರೆ ದ್ವೈತವೆಲ್ಲ
ಮಾಯಿಕವಾಗಿ ಹುಟ್ಟುತ್ತದೆಯೇ ಹೊರತು ಹುಟ್ಟೆಂಬುದು ಪರಮಾರ್ಥವಲ್ಲ ಎ
ಅದ್ವೈತದರ್ಶನಕ್ಕೆ ಯಾವ ದ್ವೈತವೂ ವಿರುದ್ಧವಾಗುವಂತಿಲ್ಲ—ಎಂಬ ಪರಿಹಾ
ವನ್ನು ಅದ್ವೈತಪ್ರಕರಣದಲ್ಲಿ ಸಂಗ್ರಹವಾಗಿಯೂ (ಭಾ. ಭಾ. ೧೬೧, ೧೬೩
**ಅಲಾತಶಾಂತಿಪ್ರಕರಣದಲ್ಲಿ** ವಿಸ್ತಾರವಾಗಿಯೂ (ಭಾ. ಭಾ. ೨೧೬, ೨೨೧......
ತೋರಿಸಿರುತ್ತದೆ. ಈ ಕಾರಣಗಳಿಂದ ಅಜಾತಿವಾದವು ನಿರ್ದುಷ್ಟವಾದ ಸಿದ್ಧಾ
ನೆಂದು ಕಾರಿಕೆಯಲ್ಲಿಯೂ ಭಾಷ್ಯದಲ್ಲಿಯೂ ಸಿದ್ಧಾಂತಮಾಡಿರುತ್ತದೆ.

## ಪ್ರಾತಿಭಾಸಿಕವಸ್ತುಗಳ ತತ್ತ್ವ

ಅಜಾತಿವಾದದಲ್ಲಿ ಜೀವರೂ ಜಡವಸ್ತುಗಳೂ ಹುಟ್ಟಿಯೇ ಇಲ್ಲವೆಂಬು
ಪರಮಾರ್ಥ. ಅವು ಹುಟ್ಟಿರುವದೆಂಬುದು ಮಾಯಿಕ—ಎಂದು ಕಾರಿಕೆಯಲ್ಲಿಯ
ಭಾಷ್ಯದಲ್ಲಿಯೂ (೧—೧೬, ೧೭ : ೨—೨ : ೪—೧೯, ೨೪, ೨೭) ಹೇಳಿರುತ್ತಾರ
ಈ ವಾದವನ್ನು ಸ್ಪಷ್ಟಗೊಳಿಸುವದಕ್ಕಾಗಿ ರಜ್ಜುಸರ್ಪವೇ ಮುಂತಾದ ದೃಷ್ಟಾ
ಗಳನ್ನು **ಅವರು** ಕೊಟ್ಟಿರುತ್ತಾರೆ. ಇಲ್ಲಿ ಮಾಯೆ ಎಂದರೆ ಮೂಲಾವಿದ್ಯೆ ಎ
ಅರ್ಥವನ್ನು ಮಾಡುವ ವ್ಯಾಖ್ಯಾನಪ್ರಸ್ಥಾನವನ್ನು ಆಗಲೇ ತಿಳಿಸಿದ್ದಾಗಿದೆ.
ಪ್ರಸ್ಥಾನವನ್ನು ಅವಲಂಬಿಸಿರುವವರು ಲೋಕಸಿದ್ಧವಾಗಿರುವ ಈ ದೃಷ್ಟಾಂತಗಳನ
ಅನಿರ್ವಚನೀಯಪದಾರ್ಥೋತ್ಪತ್ತಿಯೆಂಬ ಹೊಸವಾದಕ್ಕೆ ಉಪಯೋಗಿಸಿಕೊಂ
ವಾದಗ್ರಸ್ತವಾಗಿ ಮಾಡಿಬಿಟ್ಟಿರುತ್ತಾರೆ. ಅವರು ಹೇಳುವದೇನೆಂದರೆ : " ಹಗ್ಗ
ಹಾವು ಮುಂತಾದ ಪ್ರಾತಿಭಾಸಿಕವಸ್ತುಗಳು **' ತೂಲಾವಿದ್ಯೆ '** ಅಥವಾ **' ಪಲ್ಲ
ವಿದ್ಯೆ '** ಎಂದು ಕರೆಯಲ್ಪಡುವ ಅವಿದ್ಯೆಯ ಪರಿಣಾಮವಾಗಿವೆ. ಈ ದೃಷ್ಟಾ
ದಿಂದಲೇ ಪ್ರಪಂಚವು ಮಾಯಿಕವಾಗಿದೆ, ಎಂದರೆ ಮೂಲಾವಿದ್ಯಾಪರಿಣಾಮವಾ
ಎಂಬುದು ಸಿದ್ಧವಾಗುತ್ತದೆ."

ಈ ಮತಕ್ಕೆ ಕಾರಿಕೆಯಲ್ಲಾಗಲಿ ಭಾಷ್ಯದಲ್ಲಾಗಲಿ ಎಳ್ಳಷ್ಟೂ ಬೆಂಬಲವಿ
ಎಲ್ಲ. ಇದು ಅಜಾತಿವಾದಕ್ಕೆ ವಿರುದ್ಧವೂ ಆಗಿರುತ್ತದೆ. ಕಾರಿಕೆಯಲ್ಲಿ " ಹಗ್ಗವ
ಹಗ್ಗವೆಂದು ತಿಳಿಯದ್ದರಿಂದ ಅದು ಹಾವೆಂದೂ ನೀರಿನ ಕೋಡಿ ಮುಂತಾದದ್ದೆಂ
ಜನರು ವಿಕಲ್ಪಿಸುವಂತೆ ಆತ್ಮನೂ ಬಗೆಬಗೆಯಾಗಿ ವಿಕಲ್ಪಿತನಾಗಿರುತ್ತಾನೆ. ಇ
ಹಾವೇ ಎಂದು ನಿಶ್ಚಯಿಸಿದಾಗ ಅದೊಂದೇ ಇರುವಂತೆ ನಿಶ್ಚಯದೃಷ್ಟಿಯಿಂದ ಆ
ನೊಬ್ಬನೇ ಇರುತ್ತಾನೆ " (೨-೧೭, ೧೮)ಎಂದು ಬರೆದಿದೆ. ಭಾಷ್ಯದಲ್ಲಿ " ಹಗ್ಗ
ಭ್ರಾಂತಿಬುದ್ಧಿ ಯಿಂದ ಕಲ್ಪಿತವಾದ ಹಾವು ನಿಜವಾಗಿ ಇದ್ದುಕೊಂಡಿದ್ದು ವಿವೇಕದಿ

ಹೋಗುವದಿಲ್ಲ " (ಭಾ. ಭಾ. ೫೫); "ಮನಸ್ಸಿನ ವಿಕಲ್ಪನೆಯಾಗಿರುವ ಹಗ್ಗದ ಹಾವು ಮುಂತಾದದ್ದು ಹಗ್ಗದಲ್ಲಿ ಅಡಗುವದೂ ಇಲ್ಲ, ಹುಟ್ಟುವದೂ ಇಲ್ಲ" (ಭಾ. ಭಾ. ೧೨೩). "ಅದೇ ಆಕಾಶದಿಂದ ಗಡಿಗೆಯೇ ಮುಂತಾದ ಗುಂಪುಗಳು ಹೇಗೆ ಹುಟ್ಟುವವೋ, ಹಾಗೆ ಆಕಾಶದಂತಿರುವ ಪರಮಾತ್ಮನಿಂದ ಪೃಥಿವಿಯೇ ಮುಂತಾದ ಭೂತಗಳ ಗುಂಪುಗಳೂ (ನಮ್ಮ) ಒಳಗಿನ ಕಾರ್ಯಕರಣರೂಪವಾದ (ಗುಂಪುಗಳೂ) ಹಗ್ಗದ ಹಾವಿನಂತೆ ವಿಕಲ್ಪಿತವಾಗಿ ಹುಟ್ಟುವವು" (ಭಾ. ಭಾ. ೧೩೨) ಎಂಬ ವಾಕ್ಯಗಳಿವೆ. ಈ ವಾಕ್ಯಗಳನ್ನು ನೋಡಿದರೆ ಕಾರಿಕಾಕಾರರ ಅಥವಾ ಭಾಷ್ಯಕಾರರ ಮನದಲ್ಲಿ ಪ್ರಾತಿಭಾಸಿಕದ ಉತ್ಪತ್ತಿಯ ಕಲ್ಪನೆಯು ಒಂದಿಷ್ಟೂ ಇರಲಿಲ್ಲವೆಂದು ಖಂಡಿತವಾಗಿ ಹೇಳಬಹುದಾಗುತ್ತದೆ. ಹಗ್ಗದ ಹಾವೇ ಮುಂತಾದವುಗಳು ಹಗ್ಗವೇ ಮುಂತಾದವುಗಳಲ್ಲಿ ಕಲ್ಪನೆಯ ಕಾಲಕ್ಕೆ ತೋರಿದರೂ ಅಲ್ಲಿ ನಿಜವಾಗಿ ಹುಟ್ಟಿರುವದಿಲ್ಲ; ಇದರಂತೆ ಆತ್ಮನಿಂದ ಜಗತ್ತು ಹುಟ್ಟಿರುವದೆಂದು ಹೇಳಿದರೂ ಅದು ಹಗ್ಗದ ಹಾವಿನಂತೆ ತೋರಿಕೆ ಎಂಬುದೇ ಶ್ರುತಿಯ ಅಭಿಪ್ರಾಯ. (೨-೩೧. ಭಾ. ಭಾ. ೧೧೦ : ೪-೪೨. ಭಾ. ಭಾ. ೨೮೭ : ೪-೪೯, ಭಾ. ಭಾ. ೨೯೭). ಆತ್ಮನು ಅಜನು ಎಂದು ಹೇಳುವದಾದರೂ ಪರಮಾರ್ಥದೃಷ್ಟಿಯಿಂದಲ್ಲ; ಏಕೆಂದರೆ ಜನ್ಮವುಳ್ಳ ಪದಾರ್ಥಗಳಿವೆ ಎಂಬ ಅವಿದ್ಯಾದೃಷ್ಟಿಯನ್ನು ಇಟ್ಟುಕೊಂಡೇ ವೇದಾಂತಿಗಳು ಆತ್ಮನು ಅಜನು, ಮಿಕ್ಕ ಪದಾರ್ಥಗಳಂತೆ ಜನ್ಮವುಳ್ಳವನಲ್ಲ ಎಂದು ಹೇಳುತ್ತಾರೆ. ಆದ್ದರಿಂದ ಪರಮಾರ್ಥದೃಷ್ಟಿಯಲ್ಲಿ ಆತ್ಮನು ಅಜನೂ ಅಲ್ಲ. ಅವನು ಯಾವದೊಂದು ಧರ್ಮವೂ ಇಲ್ಲದ ನಿರ್ವಿಶೇಷ ಚಿನ್ಮಾತ್ರನಾಗಿರುತ್ತಾನೆ (೪-೭೪, ಭಾ. ಭಾ. ೩೫೫)–ಎಂಬುದೇ ಕಾರಿಕೆಯಲ್ಲಿಯೂ, ಭಾಷ್ಯದಲ್ಲಿಯೂ ಸಾರಿರುವ ಅಜಾತಿವಾದದ ಸಂಗ್ರಹವು.

## ಮಾಯಾವಾದದ ಮೇಲಿನ ಆಕ್ಷೇಪ

ಕಾರಿಕೆಯಲ್ಲಿಯೂ ಭಾಷ್ಯದಲ್ಲಿಯೂ ಪ್ರಪಂಚವು ವಿತಥ, ಮಿಥ್ಯಾ, ಮಾಯಿಕ–ಎಂದು ಹೇಳಿರುವದು ದ್ವೈತಸತ್ಯತ್ವಬುದ್ಧಿಯಲ್ಲಿ ಮುಳುಗಿರುವವರಿಗೆ ನಂಬುವದಕ್ಕೆ ಕಷ್ಟವಾಗಿರುತ್ತದೆ. ಎಲ್ಲವೂ ಮಿಥ್ಯೆ ಎಂದಾದರೆ ಮಿಥ್ಯೆಯೆಂಬುದೂ ಮಿಥ್ಯೆಯಾಗಿ ಎಲ್ಲವೂ ಸತ್ಯವೇ ಎಂದಾಗುವದಿಲ್ಲವೆ?–ಎಂಬ ತರ್ಕವನ್ನು ಇಂಥ ದ್ವೈತಿಗಳು ಒಡ್ಡುತ್ತಲೇ ಬಂದಿರುತ್ತಾರೆ: ಎಲ್ಲವೂ ಮಿಥ್ಯೆಯೆಂದೊಪ್ಪಿದರೆ ತಾವು ಹೇಳುವ ಮೋಕ್ಷವೂ ಮಿಥ್ಯೆಯೆಂಬುದು ಅವರಿಗೆ ಏಕೆ ಹೊಳೆಯುವದಿಲ್ಲವೋ ದೇವರೇ ಬಲ್ಲನು. 'ಎಲ್ಲವೂ ಮಿಥ್ಯೆ, ಮಿಥ್ಯೆ ಎಂಬುದೂ ಮಿಥ್ಯೆ' ಎಂಬಿವು ಪರಸ್ಪರವಿರುದ್ಧವಾದ ವಿಕಲ್ಪಗಳಲ್ಲ ಎಂಬುದೂ ಅವರಿಗೆ ಅದೇಕೋ ಮನವರಿಕೆಯಾಗದೆ ಇರುತ್ತದೆ.

ಮಾಯಾವಾದದ ಮೇಲೆ ದ್ವೈತಿಗಳು ಹಾಕಿರುವ ಮತ್ತೊಂದು ಆಕ್ಷೇಪವುಂಟು. ಅದನ್ನು ಇತ್ತೀಚೆಗೆ **ಸರ್ ರಾಧಾಕೃಷ್ಣನ್ ರವರು** ಪುಷ್ಟಿಗೊಳಿಸಿ ಹೀಗೆಂದಿರುತ್ತಾರೆ:

"ಎಲ್ಲವೂ ಮಿಥ್ಯೆ ಎಂಬ ಅಭಿಪ್ರಾಯವು ಗೌಡಪಾದರ ಗ್ರಂಥದಲ್ಲೆಲ್ಲಿ ಹಾಸುಹೊಕ್ಕಾಗಿರುತ್ತದೆ. ಆದರೆ ಮಿಥ್ಯೆಯಾದ ಜೀವನು ಮಿಥ್ಯೆಯಾದ ಪ್ರಪಂಚದಲ್ಲಿರುವ ಮಿಥ್ಯಾಬಂಧವನ್ನು ತಪ್ಪಿಸಿಕೊಂಡು ಮಿಥ್ಯಾರೂಪವಾದ ಪರಮಪುರುಷಾರ್ಥವನ್ನು ಪಡೆದುಕೊಳ್ಳುವದಕ್ಕಾಗಿ ಸಾಧನಮಾಡುತ್ತಿರುವನೆಂದು ಹೇಳುವ ಶಾಸ್ತ್ರವು ತಾನೂ ಮಿಥ್ಯೆಯಾಗಿರಬಹುದು–ಎಂದು ಖಂಡನಾವ್ಯಸನಿಯೊಬ್ಬನು ಹೇಳಬಹುದು." ಈ ಖಂಡನೆಯು ಹೊಸದೇನೂ ಅಲ್ಲ. ಇದಕ್ಕೆ 'ಶಾಸ್ತ್ರಶಿಷ್ಯರೇ ಮುಂತಾದ ವಿಕಲ್ಪವು ಉಪದೇಶಕ್ಕಾಗಿ ಕಲ್ಪಿತವಾಗಿದೆಯೇ ಹೊರತು ಪರಮಾರ್ಥವಲ್ಲ' ಎಂದು ಗೌಡಪಾದರೂ ಭಾಷ್ಯಕಾರರೂ (ಕಾ. ೧-೧೮, ಭಾ. ಭಾ. ೫೭) ಉತ್ತರವನ್ನು ಹೇಳಿಯೂ ಇರುತ್ತಾರೆ.

ಆದರೆ ರಾಧಾಕೃಷ್ಣನ್‌ರವರು ಈ ಉತ್ತರವನ್ನು ಲಕ್ಷಿಸದೆ ತಮ್ಮದೇ ಆಗಿರುವ ಒಂದು ಸಿದ್ಧಾಂತವನ್ನು ಮಂಡಿಸಿ ಕಾರಿಕಾಭಾಷ್ಯಗಳ ಸಿದ್ಧಾಂತವನ್ನೇ ಟೀಕೆಗೆ ಗುರಿಮಾಡುವ ಮತ್ತೊಂದು ಅಭಿಪ್ರಾಯವನ್ನು ಹೊರಪಡಿಸಿರುತ್ತಾರೆ: "ನಿರ್ವಿಕಾರವಾದ ಪರಮಾರ್ಥವು ತನ್ನ ಸ್ವಭಾವವನ್ನು ಮಾರ್ಪಡಿಸದೆ ಜಗದ್ರೂಪವಾಗಿ ತೋರಿಕೊಳ್ಳುವದು ಹೇಗೆಂಬುದು ಒಂದು ಅಭೇದ್ಯರಹಸ್ಯವು ಎಂದು ಹೇಳುವ ವಾದಕ್ಕೂ ಇಡಿಯ ಪ್ರಪಂಚವೆಂಬುದು ಒಂದು ಮೃಗಮರೀಚಿಕೆ ಎಂದು ಅಲ್ಲಗಳೆಯುವ ವಾದಕ್ಕೂ ಬಹಳ ತಾರತಮ್ಯವಿದೆ." ಪರಮಾರ್ಥವು ಜಗದ್ರೂಪವಾಗಿ ತೋರಿಕೊಳ್ಳುವದು ಹೇಗೆಂಬುದು ಅಭೇದ್ಯರಹಸ್ಯವು ಎಂದು ಹೇಳುವ ಹೆಡ್ಡತನದ ವಾಕ್ಯವು ತತ್ತ್ವಶಾಸ್ತ್ರಕ್ಕೆ ಒಪ್ಪಾಗುವದೆಂದು ಕಾರಿಕಾಕಾರರಾಗಲಿ ಭಾಷ್ಯಕಾರರಾಗಲಿ ನಂಬಿರುವದಿಲ್ಲ: ಇಂಥ ಅಶಕ್ತಿಸೂಚಕವಾದ ಅಭಿಪ್ರಾಯವು ಪರಮಪುರುಷಾರ್ಥವನ್ನು ಬಯಸುವವರಿಗೆ ಯಾವ ಉಪಯೋಗಕ್ಕೂ ಒದಗುವದಿಲ್ಲವೆಂಬುದು ಸ್ಪಷ್ಟವಾಗಿದೆ. ಜಾಗ್ರತ್ಪ್ರಪಂಚವು ಎಚ್ಚರದಲ್ಲಿ ಮಾತ್ರ ಇರುವದೇ ಹೊರತು ಕನಸಿನಲ್ಲಾಗಲಿ ತನಿನಿದ್ರೆಯಲ್ಲಾಗಲಿ ಇರುವದಿಲ್ಲ ಎಂಬುದು ಎಲ್ಲರ ಅನುಭವದಲ್ಲಿದೆ. ಆತ್ಮನು ಮೂರು ಅವಸ್ಥೆಗಳಲ್ಲಿಯೂ ಮುಕ್ಕಾಗದೆ ತಾನಿದ್ದಂತೆಯೇ ಇರುತ್ತಾನೆಂಬುದೂ ಅನುಭವಗಮ್ಯವಾಗಿದೆ. ಈ ಎರಡನ್ನು ಬಿಟ್ಟರೆ ಮತ್ತೊಂದು ಪದಾರ್ಥವೇ ಇಲ್ಲದ್ದರಿಂದ ಜಗತ್ತು ಮಿಥ್ಯೆ, ಆತ್ಮನಲ್ಲಿ ಕಾಣುವ ಹುಸಿತೋರಿಕೆ. ಆತ್ಮನನ್ನೇ ಪೂರ್ಣದೃಷ್ಟಿಯಿಲ್ಲದವರು ಜಗತ್ತೆಂದು ವ್ಯವಹರಿಸುತ್ತಿದ್ದಾರೆಯೇ ಹೊರತು ಆತ್ಮನೇನೂ ಜಗದ್ರೂಪವಾಗಿ ಮಾರ್ಪಟ್ಟಿಲ್ಲ ಎಂಬ ಅನುಭವಾನುಸಾರಿಯಾದ ಸಿದ್ಧಾಂತವು ಏರ್ಪಡುತ್ತದೆ. ಈ ಉತ್ತಮವಾದ ಶ್ರೌತತರ್ಕವನ್ನು ಅರಗಿಸಿಕೊಳ್ಳಲಾರದವರು ಇದೊಂದು ಅಭೇದ್ಯರಹಸ್ಯ ಎಂದರೆ ವೇದಾಂತಿಗಳು ಈ ವಿಚಾರಶೂನ್ಯತೆಗೆ ಮರುಕವನ್ನು ತೋರಿಸಬಹುದೇ ಹೊರತು ಮತ್ತೇನು ಮಾಡಲಾಪರು?

ಮಾಯಾವಾದವನ್ನು ಅನುಸರಿಸಿದರೆ ವ್ಯವಹಾರದಲ್ಲಿ ಒದಗುವ ವಿರೋಧಾಭಾಸವೊಂದನ್ನು ಶ್ರೀರಾಧಾಕೃಷ್ಣನ್‌ರವರು ಹೀಗೆ ಪ್ರಕಟಿಸಿರುತ್ತಾರೆ: "ಜೀವನವೆಂಬ ಸ್ಪರ್ಧೆಯ ಆಟವನ್ನು ಆಡುವವರು ಈ ಆಟವೆಂಬುದು ಬರಿಯ ತೋರಿಕೆಯೆಂದೂ ಇಲ್ಲಿ ಸಿಕ್ಕುವ ಬಹುಮಾನಗಳು ಬರಿಯ ಸೊನ್ನೆಗಳೆಂದೂ ನಂಬಿ ಆಡುವದು ಎಂದಿಗೂ ಸಾಧ್ಯವಿಲ್ಲ", "ಯಾವ ಪದಾರ್ಥಗಳೂ ನಿಜವಾಗಿಲ್ಲ, ಯಾವ ಪದಾರ್ಥಕ್ಕೂ ಯಾವ ಬೆಲೆಯೂ ಇಲ್ಲ ಎಂದು ನಿತ್ಯವೂ ನುಡಿಯುತ್ತಲೇ ಅದೇ ಪದಾರ್ಥಗಳನ್ನಿಟ್ಟುಕೊಂಡು ವ್ಯವಹರಿಸುತ್ತಿರಬೇಕಾಗುವದೆಂಬದು ಈ ವಾದದಲ್ಲಿರುವ ಪರಮದೋಷವು." ಜಗತ್ತೆಲ್ಲವೂ ಸ್ಪರ್ಧೆಯೆಂಬುದೂ ಇಲ್ಲಿ ಬಹುಮಾನಗಳನ್ನು ಪಡೆಯುವದಕ್ಕಾಗಿ ನಾವು ಈ ಸ್ಪರ್ಧೆಯ ಆಟದಲ್ಲಿ ನಿರತರಾಗಿರುವೆವೆಂಬುದೂ ಪೈಪೋಟಿಯ ವ್ಯಾಪಾರವನ್ನು ಮುಂದುಮಾಡಿಕೊಂಡು ಹೊರಟಿರುವ ಅರ್ಥಶಾಸ್ತ್ರಪ್ರಧಾನವಾದ ಪಾಶ್ಚಾತ್ಯನಾಗರಿಕತೆಗೆ ಒಪ್ಪುವ ಮಾತಾದೀತೇ ಹೊರತು ಧರ್ಮಶಾಸ್ತ್ರಪ್ರಧಾನವಾದ ನಮ್ಮ ದೇಶದ ಸಂಸ್ಕೃತಿಗೆ ಎಂದಿಗೂ ಅನುಗುಣವೆನಿಸಲಾರದು. ವೇದೋಕ್ತವಾದ ಕಾಮ್ಯಕರ್ಮಗಳು ಸ್ವರ್ಗಾದಿಫಲವನ್ನು ಕೊಡುವವಾದರೂ ಅವುಕೂಡ 'ಅವರಕರ್ಮಗಳು' (ಕೀಳುಕರ್ಮಗಳು) ಎಂದು ಜರೆದು ಪರಮಪುರುಷಾರ್ಥವನ್ನು ಬಯಸುವ ವಿವೇಕಿಗಳಿಗಾಗಿ ಸಂಗವಿಲ್ಲದೆ ಫಲಾಸಕ್ತಿಯಿಲ್ಲದೆ ಮಾಡುವ ಕರ್ಮಯೋಗವನ್ನು ಉಪದೇಶಿಸಿರುವ ಭಗವದ್ಗೀತೆಯನ್ನು ಸ್ಮರಿಸಿಕೊಂಡರೆ ಸಾಕು, ಪ್ರಪಂಚದ ಆಟದಲ್ಲಿ ಸಿಕ್ಕುವ ಬಹುಮಾನಗಳ ಆಸೆ ಎಂಬ ಪಿಶಾಚಿಯು ದಿಕ್ಕುಗೆಟ್ಟು ಓಡುವದು. ಆಶೆಯಿರುವವರು ಬಹುಮಾನಗಳಿಗಾಗಿ ಕೆಲಸ ಮಾಡುವರೆಂಬುದು ಸ್ವಾಭಾವಿಕವೇ ಆಗಿದೆ; ಆದರೆ ಅವರನ್ನೇ ಬೆನ್ನು ಚಪ್ಪರಿಸಿ 'ಭಲೆ!' ಎನ್ನುವದು ಒಂದು ತತ್ತ್ವಶಾಸ್ತ್ರವೆನಿಸಲಾರದು. ಇನ್ನು ಪ್ರಪಂಚವು ಮಿಥ್ಯೆ ಎಂದರೆ 'ಯಾವ ಪದಾರ್ಥಗಳೂ ನಿಜವಾಗಿಲ್ಲ. ಯಾವ ಪದಾರ್ಥಕ್ಕೂ ಯಾವ ಬೆಲೆಯೂ ಇಲ್ಲ'-ಎಂಬರ್ಥವೆಂದು ಕಲ್ಪಿಸುವದು ಈ ವಾದಕ್ಕೆ ತೀರ ಅನ್ಯಾಯಮಾಡಿದಂತೆ. ಏಕೆಂದರೆ ಪದಾರ್ಥಗಳು ಮಿಥ್ಯೆ ಎಂದರೆ ಅವಕ್ಕೆ ಯಾವ ಬೆಲೆಯೂ ಇಲ್ಲವೆಂದು ಅಭಿಪ್ರಾಯವಲ್ಲ, ಅವೆಲ್ಲವೂ ನಿಜವಾಗಿ ಬ್ರಹ್ಮವೇ ಎಂದರ್ಥ. ನಾವು ಕಲ್ಪಿಸಿರುವ ತೋರಿಕೆಯ ಬೆಲೆಗಳು ಆ ಪರಮಾರ್ಥವಾದ ಬೆಲೆಗೆ ಹೋಲಿಸಿದರೆ ಸೊನ್ನೆಗಳೇ ಆಗಿರುವವು. ಎಲ್ಲವೂ ಬ್ರಹ್ಮವೇ ಎಂಬ ಅರಿವುಳ್ಳವರು ಯಾವ ವ್ಯವಹಾರವನ್ನು ಮಾಡುವದೂ ಅಸಾಧ್ಯವೆನ್ನುವವರು ಬರಿಯ ಗೌಡಪಾದರ ಸಿದ್ಧಾಂತವನ್ನಲ್ಲ, ಗೀತಾಚಾರ್ಯನಾದ ಶ್ರೀ ಭಗವಂತನ ಸಿದ್ಧಾಂತವನ್ನೇ ಖಂಡಿಸುವದಕ್ಕೆ ಹೊರಟಿರುತ್ತಾರೆನ್ನಬೇಕಾಗುತ್ತದೆ. ಭಗವದ್ಗೀತೆಯಲ್ಲಿರುವ "ಬ್ರಹ್ಮಾರ್ಪಣಂ ಬ್ರಹ್ಮಹವಿಃ" (ಗೀ. ೪-೨೪) ಎಂಬ ಶ್ಲೋಕವನ್ನೂ ಅದರ ಮೇಲೆ ಶಂಕರಾಚಾರ್ಯರು ಬರೆದಿರುವ ಭಾಷ್ಯವನ್ನೂ ಮನಮುಟ್ಟಿ ಓದಿದವರಿಗೆ ಇಲ್ಲಿ ನಾವು ಹೇಳಿರುವದರ ನಿಜವು ಮನದಟ್ಟಾಗುವದು. ಜ್ಞಾನಿಗಳು ಎಲ್ಲಾ ಕರ್ಮಗಳನ್ನೂ

ಮಾಡುತ್ತಿದ್ದರೂ ನಿಜವಾಗಿ ಯಾವ ಕರ್ಮವನ್ನೂ ಮಾಡುವದಿಲ್ಲ ಎಂಬ ಗೀತೋಪದೇಶವನ್ನು ಮನಸಂದವರಿಗೆ ಜ್ಞಾನಿಗಳು ಮಾಡುವ ವ್ಯವಹಾರದಿಂದ ಪ್ರಕೃತವಾದಕ್ಕೆ ಪರಮದೋಷವೊಂದು ಗಂಟುಬೀಳುವದೆಂಬ ತಪ್ಪು ತಿಳಿವಳಿಕೆಯೂ ಹಾರಿಹೋಗುವದು.

ಸರ್ ರಾಧಾಕೃಷ್ಣನ್‌ರವರು ಈ ವಾದದ ವಿಷಯಕ್ಕೆ ಹೇಳಿರುವ ಮತ್ತೊಂದು ವಾಕ್ಯವನ್ನು[1] ವಿಮರ್ಶಿಸಿ ಈ ವಿಷಯವನ್ನು ಉಪಸಂಹಾರಮಾಡುವೆವು. "ಪ್ರಪಂಚವೆಂಬುದು ಅಭೇದ್ಯರಹಸ್ಯವೂ ಅನಿರ್ವಚನೀಯವೂ ಆಗಿರಬಹುದು. ಆದರೆ ಇದರಿಂದ ಈ ಪ್ರಪಂಚವನ್ನೂ ತನ್ನೊಳಗೆ ಅಡಕಮಾಡಿಕೊಂಡಿರುವ, ಇದನ್ನು ಮಿಕ್ಕಿರುವ, ಮತ್ತೊಂದು ತತ್ತ್ವವು ಇರಬೇಕೆಂದು ನಿಶ್ಚಯವಾದೀತೇ ಹೊರತು ಜಗತ್ತೆಲ್ಲವೂ ಸ್ವಪ್ನಮಾತ್ರವೆಂದು ಎಂದಿಗೂ ಏರ್ಪಡುವದಿಲ್ಲ". ಪ್ರಪಂಚವು ಅಭೇದ್ಯರಹಸ್ಯವೆಂಬ ಮಾತಿನ ಜೊಳ್ಳುತನವನ್ನು ನಾವು ಆಗಲೇ ತೋರಿಸಿಕೊಟ್ಟಿರುತ್ತೇವೆ. ಜಗತ್ತು ಸ್ವಪ್ನಮಾತ್ರವೆಂಬುದನ್ನು ಅದು ಅಭೇದ್ಯರಹಸ್ಯವೆಂಬ ಹೇತುವಿನಿಂದ ಗೌಡಪಾದರಾಗಲಿ ಶಂಕರಾಚಾರ್ಯರಾಗಲಿ ತರ್ಕಿಸಿರುವದಿಲ್ಲ. ಸ್ವಪ್ನಕ್ಕೂ ಎಚ್ಚರಕ್ಕೂ ಯಾವ ವಿಧದಿಂದಲೂ ಯಾವ ತಾರತಮ್ಯವೂ ಇರುವದಿಲ್ಲವೆಂಬುದನ್ನು ಅವರು ಸರ್ವಾನುಭವಸಮ್ಮತವಾದ ಯುಕ್ತಿಯಿಂದ ವೈತಥ್ಯಪ್ರಕರಣದಲ್ಲಿ ಸಾಧಿಸಿರುತ್ತಾರೆ. ಗೌಡಪಾದರ ಮತದಲ್ಲಿ ದೋಷವನ್ನು ತೋರಿಸುವವರು ಅವರ ಯುಕ್ತಿಗಳಲ್ಲಿ ದೋಷವನ್ನು ತೋರಿಸಬೇಕು: ಸ್ವಪ್ನಕ್ಕಿಂತ ಜಾಗ್ರತ್ತಿನಲ್ಲಿ ಯಾವ ವಿಶೇಷವಿದೆ ಎಂಬುದನ್ನಾದರೂ ತೋರಿಸಬೇಕು. ಆ ಕೆಲಸವನ್ನು ಮಾಡದೆ ಆ ಮತವು ಒಪ್ಪತಕ್ಕದ್ದಲ್ಲ ಎಂದರೆ ಬರಿಯ ಉಕ್ತಿಮಾತ್ರವಾದೀತೇ ಹೊರತು ಸಿದ್ಧಾಂತದ ದೂಷಣೆಯಾಗಲಾರದು.

## ಸ್ವಪ್ನವಿಷಯಕ್ಕೆ ಗೌಡಪಾದರಿಗೂ ಭಾಷ್ಯಕಾರರಿಗೂ ವಿಮತಿಯಿಲ್ಲ

ಶ್ರೀ ಶಂಕರಾಚಾರ್ಯರವರು ಎಚ್ಚರಕ್ಕೂ ಕನಸಿಗೂ ವೈಧರ್ಮ್ಯವುಂಟೆಂದು ಬ್ರಹ್ಮಸೂತ್ರಭಾಷ್ಯ (೨-೨-೨೯)ದಲ್ಲಿ ಹೇಳಿರುವದರ ಬಲದಿಂದ ಅವರಿಗೂ ಗೌಡಪಾದರಿಗೂ ಅಭಿಪ್ರಾಯಭೇದವಿರುವದೆಂದು ಸರ್ ರಾಧಾಕೃಷ್ಣನ್ ಮುಂತಾದವರು ಕಲ್ಪಿಸಿರುತ್ತಾರೆ. **ಶ್ರೀ ಕೋಕಿಲೇಶ್ವರಶಾಸ್ತ್ರಿಗಳು** ವೈತಥ್ಯಪ್ರಕರಣದ ಭಾಷ್ಯವಾಕ್ಯಗಳನ್ನು ಕೂಡ ತಿರಿಚಿ ಅರ್ಥಮಾಡುವದರ ಮೂಲಕ ಶಂಕರಾಚಾರ್ಯರಿಗೆ ಜಾಗ್ರತ್ಸ್ವಪ್ನಭೇದವೇ ಸಮ್ಮತವೆಂದು ತೋರಿಸುವ ಸಾಹಸಕ್ಕೆ ಕೈಹಾಕಿರುತ್ತಾರೆ.

---

1. ಇಲ್ಲಿ ಕೊಟ್ಟಿರುವ ಶ್ರೀ ರಾಧಾಕೃಷ್ಣನ್‌ರವರ ಉಕ್ತಿಗಳು ಅವರ "Indian Philosophy" ಎಂಬ ಗ್ರಂಥದಿಂದ ತೆಗೆದುಕೊಂಡವುಗಳು.

ಆದರೆ ನಿಷ್ಪಕ್ಷಪಾತದೃಷ್ಟಿಯಿಂದ ನೋಡಿದರೆ ಈ ವಿಷಯದಲ್ಲಿ ಆ ಇಬ್ಬರು ಆಚಾರ್ಯರಿಗೂ ಯಾವ ಅಭಿಪ್ರಾಯತಾರತಮ್ಯವನ್ನೂ ತೋರಿಸಿಕೊಡುವದಕ್ಕೆ ಆಗುವದಿಲ್ಲ. ಶಂಕರಾಚಾರ್ಯರು ವೈತಥ್ಯಪ್ರಕರಣಭಾಷ್ಯದಲ್ಲಿ, ಅಥವಾ ಮತ್ತೆ ಯಾವ ಕಡೆಯಲ್ಲಾದರೂ, ಗೌಡಪಾದರ ಅಭಿಪ್ರಾಯವು ತಮಗೆ ಸಮ್ಮತವಿಲ್ಲವೆಂದು ಹೇಳಿರುವದಿಲ್ಲ. ಸೂತ್ರಭಾಷ್ಯದಲ್ಲಿ ಗೌಡಪಾದರನ್ನು "ವೇದಾಂತಾರ್ಥಸಂಪ್ರದಾಯವನ್ನು ಬಲ್ಲ ಆಚಾರ್ಯರು" (ಸೂ. ಭಾ. ೧-೪-೧೪, ೨-೧-೯) ಎಂದು ಗೌರವದಿಂದ ಕರೆದಿರುತ್ತಾರೆ. ಆದ್ದರಿಂದ ಸೂತ್ರಭಾಷ್ಯದಲ್ಲಿ ಕನಸಿಗೂ ಎಚ್ಚರಕ್ಕೂ ತಾರತಮ್ಯವಿರುವದೆಂದು ಹೇಳಿರುವದು ವ್ಯವಹಾರದೃಷ್ಟಿಯಿಂದಲೇ ಎಂದು ಹೇಳಬೇಕಾಗಿರುತ್ತದೆ. "ಅತೋ ವೈಶೇಷಿಕಮಿದಂ ಸಸ್ಯ್ಯೈ ಮಾಯಾಮಾತ್ರತ್ವಮ್ ಉದಿತಮ್" (ಸೂ. ಭಾ. ೩-೨-೪) ಎಂಬ ಭಾಷ್ಯದಲ್ಲಿ ಎಚ್ಚರವೂ ಕನಸಿನಂತೆ ಮಾಯಿಕವೇ ಆಗಿರುವದೆಂದು ಅವರೇ ಹೇಳಿರುವದು ಇದಕ್ಕೆ ಅನುಗುಣವಾಗಿಯೇ ಇರುತ್ತದೆ.

## ಅದ್ವೈತಪ್ರಕರಣದಲ್ಲಿ ಹೇಳಿರುವ ಮನೋನಿಗ್ರಹ

ಈ ವಿಷಯದಲ್ಲಿ ಈಗಿನ ವೇದಾಂತಿಗಳಲ್ಲಿ ಬೇರೆಬೇರೆಯ ಅಭಿಪ್ರಾಯಗಳು ಉಂಟಾಗಿರುತ್ತವೆ. ಆದ್ದರಿಂದ ಕಾರಿಕಾಕಾರರೂ ಭಾಷ್ಯಕಾರರೂ ಈ ಬಗ್ಗೆ ಏನು ಹೇಳಿರುವರೆಂಬುದನ್ನು ಸ್ವಲ್ಪ ವಿಮರ್ಶಿಸುವದು ಅವಶ್ಯವಾಗಿದೆ.

**(೧) "ಆತ್ಮಸತ್ಯಾನುಬೋಧದಿಂದ ಯಾವಾಗ ಸಂಕಲ್ಪಿಸುವದಿಲ್ಲವೋ ಆಗ ಮನಸ್ಸು ಅಮನಸ್ತೆಯನ್ನು ಹೊಂದುವದು" (ಕಾ. ೩-೩೨).**

**(೨) "ನಿಗ್ರಹವಾದ ನಿರ್ವಿಕಲ್ಪವಾದ ಮನಸ್ಸಿನ ಪ್ರಚಾರವನ್ನು ಅರಿತುಕೊಳ್ಳಬೇಕು. ಸುಷುಪ್ತಿಯಲ್ಲಿರುವ ಮನಸ್ಸಿನ ಪ್ರಚಾರವು ಬೇರೆಯಾಗಿರುವದು; ಏಕೆಂದರೆ ಅಲ್ಲಿ ಮನಸ್ಸು ಲಯವಾಗುತ್ತದೆ, ನಿಗ್ರಹವಾದಾಗ ಲಯವಾಗುವದಿಲ್ಲ" (ಕಾ. ೩-೩೪, ೩೫).**

ಮೇಲಿನ ಕಾರಿಕೆಗಳಲ್ಲಿ ಮನಸ್ಸನ್ನು ನಿಗ್ರಹಮಾಡಿದರೆ ಆಗುವ ಸಮಾಧಿಯನ್ನು ಪರಾಮರ್ಶಿಸಿದೆಯೆಂದೂ ಸುಷುಪ್ತಿಯಲ್ಲಿರುವ ಮೂಲಾವಿದ್ಯೆಯು ಸಮಾಧಿಯಲ್ಲಿರುವದಿಲ್ಲ ಎಂಬುದು ಕಾರಿಕೆಗಳ ಒಟ್ಟರ್ಥವೆಂದೂ ಕೆಲವರು ಭಾವಿಸಿರುತ್ತಾರೆ. ಮೂಲಾವಿದ್ಯಾವಾದವು ಕಾರಿಕೆಗೂ ಭಾಷ್ಯಕ್ಕೂ ಅಪರಿಚಿತವಾದದ್ದು ಎಂದು ನಾವು ಆಗಲೆ ತೋರಿಸಿಕೊಟ್ಟಿರುತ್ತೇವೆ. ಸುಷುಪ್ತಿಯಲ್ಲಿಯೂ ಸಮಾಧಿಯಲ್ಲಿರುವಂತೆ ಅದ್ವೈತಾತ್ಮಸ್ವರೂಪವೊಂದೇ ಇರುವದೆಂದು ಕಾರಿಕೆಯ ಭಾಷ್ಯದಲ್ಲಿಯೂ (ಭಾ. ಭಾ. ೧೨೩, ೧೬೩. ೧೮೪, ೨೬೧), ಗೀತಾಭಾಷ್ಯ (ಭಾ. ಭಾ. ೬೦೧), ಸೂತ್ರಭಾಷ್ಯ (೨-೧-೯, ೩-೨-೭)–ಇವುಗಳಲ್ಲಿಯೂ ಕಂಠೋಕ್ತವಾಗಿ ಹೇಳಿರುತ್ತದೆ.

ಇದೂ ಅಲ್ಲದೆ ಇದು ಜ್ಞಾನದ ಪ್ರಕರಣವಾದ್ದರಿಂದ **ವಿವೇಕದಿಂದ ಆತ್ಮಸತ್ಯವನ್ನರಿತುಕೊಂಡು ಚಿತ್ತನಿರೋಧವನ್ನು ಮಾಡಿಕೊಳ್ಳುವದನ್ನೇ ಇಲ್ಲಿ ನಿಗ್ರಹವೆಂಬ ಹೆಸರಿನಿಂದ ಕರೆದಿದೆ** ಎಂದು ತಿಳಿಯಬೇಕಾಗಿದೆ. ಆದ್ದರಿಂದ ಸುಷುಪ್ತಿಯಿಂದ ಎಚ್ಚತ್ತ ಬಳಿಕ ದ್ವೈತವು ಎಂದಿನಂತೆ ಸತ್ಯವಾಗಿ ತೋರುವ ಹಾಗೆ ದ್ವೈತವು ಜ್ಞಾನದಿಂದ ಬಾಧಿತವಾದ ಬಳಿಕ ಎಂದಿಗೂ ಸತ್ಯವಾಗಿ ತೋರಲಾರದು ಎಂಬುದೇ ಇಲ್ಲಿ ಹೇಳಿರುವ ತಾರತಮ್ಯವು. ಆಗಮಪ್ರಕರಣದಲ್ಲಿ ಪ್ರಾಜ್ಞತುರೀಯರಿಗೆ ಹೇಳಿರುವ ತಾರತಮ್ಯವನ್ನೇ ಇಲ್ಲಿ ಪ್ರಕಾರಾಂತರದಿಂದ ತಿಳಿಸಿದೆ ಎಂದು ತಿಳಿಯಬೇಕು.

ಇನ್ನು ಇದೇ ಪ್ರಕರಣದ ನಲವತ್ತನೆಯ ಕಾರಿಕೆಯಲ್ಲಿರುವ ವಿಷಯವನ್ನು ಪರಿಶೀಲಿಸೋಣ.

**(೩) " ಎಲ್ಲಾ ಯೋಗಿಗಳಿಗೂ ಅಭಯವೂ ದುಃಖಕ್ಷಯವೂ ಜ್ಞಾನವೂ ಅಕ್ಷಯವಾದ ಶಾಂತಿಯೂ ಮನಸ್ಸಿನ ನಿಗ್ರಹಕ್ಕೆ ಅಧೀನವಾಗಿರುತ್ತದೆ " (೩-೪೦).**

ಇಲ್ಲಿ ಹೇಳಿರುವ ಮನೋನಿಗ್ರಹದ ಸ್ವರೂಪವೇನು?- ಎಂಬುದು ವಿಚಾರಣೀಯವಾಗಿರುತ್ತದೆ. ಏಕೆಂದರೆ ಈ ನಿಗ್ರಹವನ್ನು ವಿವರಿಸುವಾಗ "ಲಯ, ವಿಕ್ಷೇಪ, ಕಷಾಯ, ಸುಖಾಸ್ವಾದ-ಎಂಬ ನಾಲ್ಕು ಎಡರುಗಳನ್ನು ದಾಟಿದರೆ ಮನಸ್ಸು ಬ್ರಹ್ಮವಾಗುತ್ತದೆ " ಎಂಬ ಅಭಿಪ್ರಾಯವು (ಕಾ. ೩--೪೨ ರಿಂದ ೪೬) ರಲ್ಲಿ ಕಂಡುಬರುತ್ತದೆ. ಇಲ್ಲಿ ನಿರ್ವಿಕಲ್ಪಸಮಾಧಿಯನ್ನು ಹೇಳಿದೆಯೆಂದೂ ಆ ಸಮಾಧಿಯನ್ನು ಅನುಭವಿಸಿ ಎಚ್ಚತ್ತವನಿಗೆ ಪ್ರಾರಬ್ಧ ಕರ್ಮವು ಸವೆಯುವವರೆಗೂ **ಅಜ್ಞಾನದ ಲೇಶ ಅಥವಾ ಸಂಸ್ಕಾರ** ಎಂಬ ಕಳಂಕವು ಇದ್ದುಕೊಂಡಿರುವದೆಂದೂ ಶರೀರವು ಬಿದ್ದ ಬಳಿಕ ಪ್ರಾಣವು ಬ್ರಹ್ಮದಲ್ಲಿ ಲಯವಾಗಲು **ವಿದೇಹಕೈವಲ್ಯ**ವೆಂಬ ಮುಖ್ಯಮುಕ್ತಿಯುಂಟಾಗುವದೆಂದೂ ಕೆಲವರು ವರ್ಣಿಸುತ್ತಾರೆ.

ಆದರೆ ಈ ವಾದಕ್ಕೆ ಕಾರಿಕೆಯಲ್ಲಾಗಲಿ ಕಾರಿಕಾಭಾಷ್ಯವಲ್ಲಾಗಲಿ ಪ್ರಸ್ಥಾನತ್ರಯದ ಮಿಕ್ಕ ಭಾಷ್ಯಗಳಲ್ಲಿಯೇ ಆಗಲಿ ಯಾವ ಆಧಾರವೂ ಇರುವದಿಲ್ಲ. ಜ್ಞಾನಯೋಗಕ್ಕೆ ಅಂತರಂಗಸಾಧನವಾಗಿ ಗೀತೆಯ ಆರನೆಯ ಅಧ್ಯಾಯದಲ್ಲಿ ಹೇಳಿರುವಂತೆಯೇ ಇಲ್ಲಿಯೂ **ಧ್ಯಾನಯೋಗ**ವನ್ನೇ ಮನೋನಿಗ್ರಹವೆಂಬ ಹೆಸರಿನಿಂದ ಉಪದೇಶಿಸಿರುತ್ತದೆ ಎಂದು ಭಾವಿಸಿದರೆ ಈ ಎರಡುಕಡೆಗಳಲ್ಲಿರುವ ಆಚಾರ್ಯರ ಅಭಿಪ್ರಾಯಕ್ಕೂ ಏಕವಾಕ್ಯತೆಯುಂಟಾಗುತ್ತದೆ. ಮಧ್ಯಮಾಧಿಕಾರಿಗಳಿಗೆ ಉಪದೇಶಿಸಿರುವ ಈ ಮನೋನಿಗ್ರಹವು ಪುರುಷತಂತ್ರವಾದ **ಉಪಾಸನೆಯಲ್ಲ ;** ಸೂಕ್ಷ್ಮದೃಷ್ಟಿಯಿಂದ ಪರೀಕ್ಷಿಸಿ ರತ್ನದ ತತ್ತ್ವವನ್ನು ನಿಶ್ಚಯಿಸುವಂತೆ ಮನಸ್ಸನ್ನು ವಿಷಯಚಿಂತೆಯಿಂದ ಚದರಿಸದೆ, ಆತ್ಮಚಿಂತೆಯಿಂದ ಜೋಸತ್ತು ಲಯವಾಗಗೊಳಿಸದೆ, ಈ

ಪರಿಶೀಲನೆಯ ಆನಂದದಿಂದಲೇ ತೃಪ್ತನೂ ಆಗದೆ, ಏಕಾಗ್ರತೆಯಿಂದ ಆತ್ಮಸ್ವರೂಪ ವನ್ನು ಚಿಂತಿಸುವದೇ ಮನೋನಿಗ್ರಹವೆಂಬ ಮಾತಿನಿಂದ ಇಲ್ಲಿ ಹೇಳಿರುವ ಸಾಧನವು. ಇದನ್ನು **ನಿದಿಧ್ಯಾಸನ**ವೆಂದೂ ಕರೆಯುತ್ತಾರೆ. ಅದ್ವೈತಪ್ರಕರಣವೇ ಉಪಾಸನಾ ಸಂದೆಯಿಂದ ಪ್ರಾರಂಭವಾಗಿರುವದರಿಂದಲೂ ಇಲ್ಲಿ ಉಪದೇಶಿಸಿರುವದು ಉಪಾಸನೆ ಗಿಂತ ಬೇರೆಯಾದ ನಿದಿಧ್ಯಾಸನವೆಂದು ಸಿದ್ಧವಾಗುತ್ತದೆ. ಈ ನಿದಿಧ್ಯಾಸನವನ್ನು ಉಪಾಸನೆಯೆಂದು ಕರೆಯುವದರಲ್ಲೇನೂ ದೋಷವಿಲ್ಲ ; ಏಕೆಂದರೆ ಜ್ಞಾನವನ್ನು ಕೂಡ ಉಪಾಸನೆ ಎಂಬ ಹೆಸರಿನಿಂದಲೂ ಕರೆದಿರುವದು ಶ್ರುತಿಸ್ಮೃತಿಗಳಲ್ಲಿ ಕಂಡು ಬರುತ್ತದೆ. ಆದರೆ ಲೋಕಾಂತರದಲ್ಲಿ ಬ್ರಹ್ಮಸಾಯುಜ್ಯವನ್ನು ಪಡೆಯುವದಕ್ಕೆ ಸಾಧನವಾಗಿರುವ ಉಪಾಸನೆಗೂ ಇಲ್ಲಿಯೇ ಆತ್ಮಸತ್ಯಾನುಬೋಧಕ್ಕೆ ಕಾರಣ ವಾಗಿರುವದೆಂದು ಹೇಳಿರುವ ಈ ಉಪಾಸನೆಗೂ ಇರುವ ತಾರತಮ್ಯವನ್ನು ಮಾತ್ರ ಕಡೆಗಣಿಸಬಾರದು. ಆದ್ದರಿಂದಲೇ ಭಾಷ್ಯಕಾರರು ಅದ್ವೈತಪ್ರಕರಣದ ಅರ್ಥವನ್ನು ಉಪಸಂಹಾರಮಾಡುವ ಸಂದರ್ಭದಲ್ಲಿ ಹೀಗೆಂದು ಬರೆದಿರುತ್ತಾರೆ :

"ಈ ಮನೋನಿಗ್ರಹಾದಿಗಳೂ ಮೃಲ್ಲೋಹಾದಿಗಳಂತೆ ಎಂದು ಹೇಳಿದ ಸೃಷ್ಟಿಯೂ, ಉಪಾಸನೆಯೂ ಪರಮಾರ್ಥವನ್ನು ತಿಳಿಯುವದಕ್ಕೆ ಉಪಾಯವೆಂದು ಹೇಳಿದೆಯೇ ಹೊರತು ಪರಮಾರ್ಥಸತ್ಯವೆಂದು ಹೇಳಿಲ್ಲ" (ಮಾ. ಭಾ. ೨೧೦).

## ಕಾರಿಕೆಯಲ್ಲಿಯೂ ಭಾಷ್ಯದಲ್ಲಿಯೂ ಕಾಣಬರುವ ದ್ವೈತಖಂಡನೆ

ಗೌಡಪಾದರೂ ಆಚಾರ್ಯರೂ ಇಲ್ಲಿ ವೈಶೇಷಿಕರು, ಸಾಂಖ್ಯರು, ಬೌದ್ಧರು, ಜೈನರು, ಮೀಮಾಂಸಕರು-ಮುಂತಾದವರ ಮತಗಳನ್ನು ಅಲ್ಲಲ್ಲಿ ಖಂಡಿಸಿರುತ್ತಾರೆ. ಈ ಖಂಡನೆಯ ಪ್ರಯೋಜನವೇನೆಂಬುವನ್ನು ವಿಚಾರಪೂರ್ವಕವಾಗಿ ಗೊತ್ತುಪಡಿಸ ಬೇಕಾಗಿದೆ. ಏಕೆಂದರೆ ಶೂನ್ಯವಾದಿಗಳೂ ಸಾಂಖ್ಯವೈಶೇಷಿಕಾದಿಗಳೂ ತಮ್ಮ ತಮ್ಮ ಮತವೊಂದೇ ಸರಿ ಎಂದು ತೋರಿಸುವದಕ್ಕಾಗಿ ಪರಮತವನ್ನು ಖಂಡಿಸಲೇ ಬೇಕಾ ಗಿರುವಂತೆ ಅದ್ವೈತಿಗಳಿಗೆ ಈ ಖಂಡನೆಯ ಆವಶ್ಯಕತೆಯಿರುವದಿಲ್ಲ. ದ್ವೈತಿಗಳಿಗೆ ದ್ವೈತವು ಪರಮಾರ್ಥಸತ್ಯವಾದ್ದರಿಂದ ತಮ್ಮ ಸಿದ್ಧಾಂತವನ್ನು ಸ್ಥಾಪಿಸಿದಮೇಲೂ ಅವರಿಗೆ ಪರಮತವು ದುಷ್ಟವೆಂದು ತೋರಿಸಬೇಕಾದದ್ದು ಉಳಿದುಕೊಂಡಿರುತ್ತದೆ. ಆದರೆ ಅದ್ವೈತಿಗಳ ದೃಷ್ಟಿಯಿಂದ ದ್ವೈತವೆಲ್ಲವೂ ಮಾಯಾಕಲ್ಪಿತವಾಗಿರುವದರಿಂದ ಆ ಕಲ್ಪಿತದ್ವೈತದಿಂದ ಅದ್ವೈತಕ್ಕೆ ಯಾವ ಹಾನಿಯೂ ಇಲ್ಲ (೩-೧೭, ೧೮) : ಆದ್ದರಿಂದ ಅದ್ವೈತವನ್ನು ಸ್ಥಾಪಿಸುವದರಿಂದಲೇ ದ್ವೈತವನ್ನು ಖಂಡಿಸಿದಂತೆ ಆಗಿಬಿಡುತ್ತದೆ. ಹೀಗಿದ್ದರೂ ದ್ವೈತವನ್ನು ಬೇರೆಯಾಗಿ ಖಂಡಿಸಿರುವದೇಕೆಂದರೆ

(೧) ದ್ವೈತಸಿದ್ಧಾಂತಗಳು ಪರಸ್ಪರವಿರುದ್ಧವಾಗಿರುವದರಿಂದ ದ್ವೈತಬುದ್ಧಿಯು ರಾಗದ್ವೇಷಾದಿಗಳಿಗೆ ಕಾರಣವಾಗಿರುವದೆಂದೂ (೩–೧೭, ಭಾ. ಭಾ. ೧೬೧) ಅದ್ವೈತವು ಸರ್ವಕಲ್ಪನೆಗಳಿಗೂ ಆಧಾರವಾಗಿರುವದರಿಂದ ಯಾವಾಗಲೂ ಶಿವ ಸ್ವರೂಪವಾಗಿರುವದೆಂದೂ (೨–೩೩. ಭಾ. ಭಾ. ೧೧೭) ಮುಮುಕ್ಷುಗಳಿಗೆ ತಿಳಿಸಿ ಕೊಡುವದಕ್ಕೆ; ದ್ವೈತಿಗಳು ವೇದವಿರುದ್ಧವಾದ ಕುದೃಷ್ಟಿಯನ್ನವಲಂಬಿಸಿರುವದ ರಿಂದ ಅವರ ದರ್ಶನಗಳು ಸರಿಯಾದ ವಿಚಾರಕ್ರಮದಿಂದ ಪರೀಕ್ಷಿಸಿದರೆ ಅಯುಕ್ತ ವೆಂದೇ ಸ್ಪಷ್ಟವಾಗುವದೆಂದು ತಿಳಿಸುವದಕ್ಕೆ (೩–೧೩, ಭಾ. ಭಾ. ೧೫೧). ಈ ಅಭಿಪ್ರಾಯವನ್ನು ಭಾಷ್ಯಕಾರರು ಈ ಕೆಳಗೆ ಉದಾಹರಿಸುವಂಥ ವಾಕ್ಯಗಳಲ್ಲಿ ಮತ್ತೆಮತ್ತೆ ಸೂಚಿಸಿರುತ್ತಾರೆ :—

**"ವಿಗತದೋಷೈರೇವ ಪಣ್ಡಿತೈರ್ವೇದಾನ್ತಾರ್ಥತತ್ಪರೈಃ ಸಂನ್ಯಾಸಿಭಿಃ ಅಯಮಾತ್ಮಾ ದ್ರಷ್ಟುಂ ಶಕ್ಯಃ, ನಾನ್ಯೈಃ ರಾಗಾದಿಕಲುಷಿತಚೇತೋಭಿಃ ಸ್ವಪಕ್ಷಪಾತಿದರ್ಶನೈಃ ತಾರ್ಕಿಕಾದಿಭಿಃ ಇತ್ಯಭಿಪ್ರಾಯಃ" (೨–೩೫, ಭಾ. ಭಾ. ೧೨೧).** "ಯಾವ ದೋಷಗಳೂ ಇಲ್ಲದ, ವೇದಾಂತಾರ್ಥದಲ್ಲಿಯೇ ತತ್ಪರರಾಗಿರುವ ಸಂನ್ಯಾಸಿಗಳಿಗೇ ಈ ಆತ್ಮನನ್ನು ಕಾಣುವದು ಶಕ್ಯವೇ ಹೊರತು ರಾಗವೇ ಮುಂತಾದ (ದೋಷಗಳಿಂದ) ಚಿತ್ತವು ಕದಡಿರುವ, ತಮಗೆ ಬೇಕಾಗಿರುವ ದರ್ಶನಗಳನ್ನೇ (ಇಟ್ಟುಕೊಂಡಿರುವ), ತಾರ್ಕಿಕರೇ ಮುಂತಾದವರಿಗೆ ಆಗಲಾರದು-ಎಂದು ಅಭಿಪ್ರಾಯ."

ಶಾಸ್ತ್ರೋಕ್ತವಾದ ಉಪಾಸನೆಗಳನ್ನು ನಿಂದಿಸಿರುವದು ಅಜಾತಿವಾದದ ಹೆಚ್ಚು ಗಾರಿಕೆಯನ್ನು ತಿಳಿಸುವದಕ್ಕೇ ಹೊರತು ಆ ಸಾಧನಗಳು ಸರ್ವಥಾ ಉಪಯೋಗ ವಿಲ್ಲವೆಂಬ ಭಾವದಿಂದಲ್ಲ. ಆದ್ದರಿಂದಲೇ ಮಂದಮಧ್ಯಮಾಧಿಕಾರಿಗಳಿಗೆ ಕರ್ಮ ವನ್ನೂ ಉಪಾಸನೆಯನ್ನೂ ಶ್ರುತಿಯು ಕನಿಕರದಿಂದ ವಿಧಿಸಿದೆ ಎಂದೂ (೩–೧೬), ಸ್ಥೂಲಬುದ್ಧಿಗಳಾದ ಶ್ರೋತ್ರಿಯರಿಗೆ ಕರ್ಮಾದಿಸಾಧನಗಳಿಗೆ ಅನುಕೂಲವಾಗಿರ ಲೆಂದು ಸೃಷ್ಟಿಯನ್ನು ಒಪ್ಪಿದೆ ಎಂದೂ (೪–೪೨) ಕಾರಿಕಾಕಾರರೂ ಭಾಷ್ಯಕಾರರೂ ಹೇಳಿರುತ್ತಾರೆ. ಈ ರೀತಿಯಲ್ಲಿ ನೋಡಿದರೆ ದ್ವೈತವು ವ್ಯಾವಹಾರಿಕಸತ್ಯ, ಅದ್ವೈತವು ಪರಮಾರ್ಥಸತ್ಯ—ಎಂಬುದೇ ಕಾರಿಕಾಕಾರರ ಮತ್ತು ಭಾಷ್ಯಕಾರರ ಸಿದ್ಧಾಂತವಾಗಿರುತ್ತದೆ.

ಈ ಪೀಠಿಕೆಯು ಈಗಾಗಲೇ ಬಲುದೊಡ್ಡದಾಗಿರುತ್ತದೆ. **"ಮಾಂಡೂಕ್ಯೋಪನ್ಯಾಸಮಂಜರಿ"** ಎಂಬ ಒಂದು ಪ್ರಬಂಧದಲ್ಲಿ ಗೌಡಪಾದಕಾರಿಕೆಯ ಗಡುಚಾದ ವಿಷಯಗಳನ್ನೆಲ್ಲ ಚರ್ಚಿಸುವೆನೆಂದು ಮೊದಲನೆಯ ಸಂಸ್ಕರಣದ

ಪೀಠಿಕೆಯಲ್ಲಿ ವಾಗ್ದಾನಪಿತ್ತಿದ್ದವಾದರೂ ಗ್ರಂಥವು ಅನೇಕಕಾರಣಗಳಿಂದ ಈವರೆಗೆ ಹೊರಕ್ಕೆ ಬಂದಿರುವದಿಲ್ಲ. ಸದ್ಯಕ್ಕೆ ಈ ಪೀಠಿಕೆಯಲ್ಲಿ ಪ್ರಸ್ತಾಪಿಸಿರುವ ಪ್ರಧಾನ ವಿಷಯಗಳಿಂದಲೇ ವಾಚಕರು ತೃಪ್ತರಾಗಿ ಆ ಗ್ರಂಥದ ಪ್ರಕಟನೆಯಲ್ಲಾಗಿರುವ ವಿಲಂಬವನ್ನು ಕ್ಷಮಿಸಬೇಕೆಂದು ಬೇಡುತ್ತೇವೆ. ಈ ಎರಡನೆಯ ಸಂಸ್ಕರಣವನ್ನು ಸ್ವಲ್ಪ ತಡವಾದರೂ ಮೊದಲಿಗಿಂತ ಅನೇಕಪ್ರಕಾರಗಳಿಂದ ತೃಪ್ತಿಕರವಾದ ರೂಪದಲ್ಲಿ ಪ್ರಕಾಶಗೊಳಿಸುವದಕ್ಕೆ ಅವಕಾಶವನ್ನು ಕಲ್ಪಿಸಿಕೊಟ್ಟಿರುವ ಪರಮೇಶ್ವರನನ್ನು ಭಕ್ತಿಯಿಂದ ನಮಸ್ಕರಿಸಿ ಈ ಪೀಠಿಕೆಯನ್ನು ಇಲ್ಲಿಗೆ ಮುಗಿಸುವೆವು.

**ಯ. ಸುಬ್ರಹ್ಮಣ್ಯಶರ್ಮ.**



# ವಿಷಯಾನುಕ್ರಮಣಿಕೆ

## ಭಾಷ್ಯಕಾರರ ಅವತರಣಿಕೆ



## ೧. ಉಪನಿಷತ್ತು



## ೧. ಕಾರಿಕೆ: ಆಗಮಪ್ರಕರಣ



## ೨. ಉಪನಿಷತ್ತು



## ಕಾರಿಕೆ: ಆಗಮಪ್ರಕರಣ

## ೩. ಉಪನಿಷತ್ತು



## ಕಾರಿಕೆ : ಆಗಮಪ್ರಕರಣ



## ೪. ಉಪನಿಷತ್ತು



## ಕಾರಿಕೆ : ಆಗಮಪ್ರಕರಣ



## ೨. ವೈತಥ್ಯಪ್ರಕರಣ



## ೩. ಅದ್ವೈತಪ್ರಕರಣ

ವ್ಯವಸ್ಥೆ (೧೩೪-೧೩೫)-ಆತ್ಮೈಕತ್ವವಿಷಯದಲ್ಲಿ ಸಾಂಖ್ಯರ ಆಕ್ಷೇಪಕ್ಕೆ ಪರಿಹಾರ (೧೩೬-೧೩೭)-ವೈಶೇಷಿಕಾದಿಗಳ ಖಂಡನೆ (೧೩೭-೧೩೮)-ಅವಿದ್ಯಾಕೃತವ್ಯವಹಾರಕ್ಕೆ ದೃಷ್ಟಾಂತ (೧೩೯-೧೪೨)-ಜೀವನ ಸಂಸಾರವು ಪರಮಾರ್ಥವಲ್ಲ (೧೪೩-೧೪೭)-ಆತ್ಮನಿಗೆ ಹುಟ್ಟು ಮುಂತಾದವಿಲ್ಲವೆಂಬುದಕ್ಕೆ ಶ್ರುತಿ (೧೪೮-೧೫೧)-ಶ್ರುತ್ಯುಕ್ತ ಜೀವಬ್ರಹ್ಮಭೇದಕ್ಕೆ ಗತಿ (೧೫೨-೧೫೪)-ಸೃಷ್ಟಿವಾಕ್ಯಗಳ ತಾತ್ಪರ್ಯ (೧೫೫-೧೫೭)-ಕರ್ಮೋಪಾಸನಾವಾಕ್ಯಗಳ ಗತಿ (೧೫೮-೧೫೯)-ರಾಗದ್ವೇಷಾದಿಗಳಿಗೆಡೆಯಿಲ್ಲದ್ದರಿಂದ ಅದ್ವೈತವೇ ಸರಿಯಾದ ದರ್ಶನ (೧೬೦-೧೬೫)-ಜಾತಬ್ರಹ್ಮವಾದದಲ್ಲಿ ದೋಷ (೧೬೬-೧೬೮)-ಅಜಾತಿವಾದದಲ್ಲಿ ಸೃಷ್ಟಿ ಶ್ರುತಿಯ ತಾತ್ಪರ್ಯ (೧೬೯-೧೭೪)-ಶ್ರುತಿಯಿಂದ ಅಜಬ್ರಹ್ಮಜ್ಞಾನವಾಗುವ ರೀತಿ (೧೭೫)-ಸದ್ವಸ್ತುವಿಗೆ ಮಾಯೆಯಿಂದ ಜನ್ಮವುಂಟು (೧೭೬-೧೭೯) ಜನ್ಮವು ಮಾಯಿಕವೆಂಬುದು ಹೇಗೆ? (೧೮೦-೧೮೨)-ದ್ವೈತವು ಮನೋಮಾತ್ರ (೧೮೩-೧೮೪)-ಜ್ಞಾನದಿಂದ ಮನಸ್ಸು ಅಮನಸ್ಸಾಗುವದು (೧೮೫-೧೮೬)-ಜ್ಞಾನದ ಸ್ವರೂಪ (೧೮೭-೧೮೮)-ಜ್ಞಾನದಿಂದ ನಿಗ್ರಹವಾದ ಮನಸ್ಸಿನ ಸ್ವರೂಪ (೧೮೯-೧೯೯)-ಮಧ್ಯಮಾಧಿಕಾರಿಗಳಿಗೆ ಮನೋನಿಗ್ರಹದಿಂದ ಪುರುಷಾರ್ಥ (೨೦೦-೨೦೮)-ಮನೋನಿಗ್ರಹದಿಂದ ಸಿದ್ಧವಾಗುವ ಸುಖ (೨೦೯)-ಪ್ರಕರಣದ ಉಪಸಂಹಾರ (೨೧೦-೨೧೧). ಪುಟ. ೧೪೬-೨೩೬.

## ೪. ಅಲಾತಶಾಂತಿಪ್ರಕರಣ

ಈ ಪ್ರಕರಣದ ಸಂಬಂಧ (೨೧೨)-ಮಂಗಲಾಚರಣೆ (೨೧೩-೨೧೪) ದ್ವೈತಿಗಳ ವಿವಾದದಿಂದ ಅಜಾತಿವಾದದ ಸಿದ್ಧಿ (೨೧೫-೨೨೧)-ಜಾತಿವಾದದಲ್ಲಿ ದೋಷ (೨೨೨-೨೨೫)-ಅಜಾತಿವಾದದ ಉಪಸಂಹಾರ (೨೨೬-೨೨೭)-ದ್ವೈತಿಗಳ ವಿವಾದದಿಂದ ಕಾರ್ಯಕಾರಣಭಾವದ ನಿರಾಸ (೨೨೮-೨೩೨)-ಧರ್ಮಾಧರ್ಮಗಳಿಗೂ ಶರೀರಕ್ಕೂ ಕಾರ್ಯಕಾರಣಭಾವವಿಲ್ಲ (೨೩೩-೨೪೮)-ಹೇತುಫಲಗಳ ಅಜಾತಿತ್ವಸಿದ್ಧಿ (೨೪೯-೨೫೫)-ಚಿತ್ತಕ್ಕಿಂತ ಬೇರೆಯಾದ ವಿಷಯವಿಲ್ಲ (೨೫೬-೨೬೫)-ಚಿತ್ತವು ಆತ್ಮನಿಗಿಂತ ಬೇರೆ ಇರಲಾರದು (೨೬೬-೨೬೭)-ಅಜಾತಿವಾದವೇ ಸರಿಯಾದದ್ದು (೨೬೮-೨೬೯)-ಸಂಸಾರಮೋಕ್ಷಗಳು ಪರಮಾರ್ಥವಾದರೆ ದೋಷ (೨೭೦-೨೭೧)-ಜಾಗ್ರತ್ಪದಾರ್ಥಗಳು ಮಿಥ್ಯೆ, ಆದ್ದರಿಂದಲೂ ಸಂಸಾರಮೋಕ್ಷಗಳಿಲ್ಲ (೨೭೨) ಕನಸಿನಂತೆ ಎಚ್ಚರವೂ ಮಿಥ್ಯೆ (೨೭೩-೨೭೬)-ಎಚ್ಚರಕನಸುಗಳಿಗೆ ಕಾರ್ಯಕಾರಣಭಾವವಿಲ್ಲ (೨೭೭-೨೮೬)-ವೇದಾಂತಿಗಳು ಜನ್ಮವುಂಟೆಂದು ಹೇಳುವದರ ಅಭಿಪ್ರಾಯ (೨೮೭-೨೮೮)-ವ್ಯವಹಾರಗೋಚರವಾದ ಮಾತ್ರಕ್ಕೆ ದ್ವೈತವು ಸತ್ಯವಾಗಲಾರದು (೨೮೯-೨೯೩)-ಅಜಾತವಸ್ತುವಿಗೆ ದೃಷ್ಟಾಂತ (೨೯೪-೩೦೦)-ಆತ್ಮನಲ್ಲಿ ಕಾರ್ಯಕಾರಣಭಾವವಿಲ್ಲವೆಂಬುದಕ್ಕೆ ಯುಕ್ತಿ (೩೦೧-೩೦೩)-ಹೇತುಫಲಾಭಿಮಾನವು ಹೋದರೆ ಮುಕ್ತಿ (೩೦೪-೩೦೭)-ಪರಮಾರ್ಥದೃಷ್ಟಿಯಲ್ಲಿ ನಿತ್ಯಾನಿತ್ಯವಿಭಾಗವಿಲ್ಲ (೩೦೮-೩೧೩)-ದ್ವೈತವೆಲ್ಲವೂ ಚಿತ್ತದ ಅಲುಗಾಟ (೩೧೪-೩೨೧)-ಶಾಸ್ತ್ರಾವಿರೋಧವೂ, ಅಜತ್ವವೂ, ಅವಿದ್ಯಕವೇ (೩೨೨-೩೨೫)-ಮಿಥ್ಯಾಭಿಮಾನದಿಂದ ಸಂಸಾರ ಜ್ಞಾನದಿಂದ ಮೋಕ್ಷ (೩೨೬-೩೪೨)-ಜ್ಞಾನದ ವ್ಯಾವಹಾರಿಕಪ್ರಯೋಜನ (೩೪೩-೩೪೪)-ವೇದಾಂತಪ್ರಕ್ರಿಯೆ (೩೪೫-೩೪೭)-ಆತ್ಮನು ಅವಸ್ಥಾರಹಿತನು (೩೪೮-೩೪೯)-ಉಪಸಂಹಾರ (೩೫೦-೩೬೬)-ಮಂಗಲ (೩೬೭-೩೬೮).

ಪುಟ. ೨೩೭-೩೭೨.

## ಮಾಂಡೂಕ್ಯಕಾರಿಕೆಯ ಸಾರ



## ಪರಿಶಿಷ್ಟ



## ತಿದ್ದುಪಡಿ

ಈ ಗ್ರಂಥದ ೨೫೬ ನೆಯ ಪುಟದಲ್ಲಿ (ಭಾಷ್ಯ) ಎಂಬ ಮಾತಿನ ಕೆಳಗೆ ಈ ವಿಷಯವನ್ನು ದಯವಿಟ್ಟು ಸೇರಿಸಿಕೊಂಡು ಓದಬೇಕು :

“ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್” (ಬೃ. ೪–೫–೧೫) ಇತಿ ಪರಮಾರ್ಥತೋ ದ್ವೈತಾಭಾವಃ ಶ್ರುತ್ಯಾ ಉಕ್ತಃ । ತಮ್ ಆಶ್ರಿತ್ಯ ಆಹ–

**(ಭಾಷ್ಯಾರ್ಥ)**

# ಸಂಕೇತಗಳ ವಿವರ

ಈ ಸಂಪುಟದಲ್ಲಿ ಮುಂಡಕ, ಪ್ರಶ್ನ—ಇವುಗಳ ಭಾಷ್ಯಗಳಲ್ಲಿ ಉಪಯೋಗಿಸಿರುವ ಸಂಕೇತಗಳನ್ನೇ ಉಪಯೋಗಿಸಿದೆ. ಆ ಸಂಕೇತಾಕ್ಷರಗಳನ್ನು ಈ ಪುಸ್ತಕಗಳಲ್ಲಿ ವಿವರಿಸಿರುತ್ತದೆ. ಇಲ್ಲಿ ಕೆಲವು ಅಕ್ಷರಸಂಕೇತಗಳನ್ನು ಮಾತ್ರ ಕೊಟ್ಟಿದೇವೆ.

| | |
|---|---|
| ಈ. ಮಾ. | ಈಶಾವಾಸ್ಯ, ಮಾಧ್ಯಂದಿನ ಪಾಠ. |
| ಗೌ. ಭಾಷ್ಯ. | ಗೌಡಪಾದರು ಸಾಂಖ್ಯಕಾರಿಕೆಗೆ ಬರೆದ ಭಾಷ್ಯ. |
| ನಾ. | ತೈತ್ತಿರೀಯೋಪನಿಷತ್ತು ನಾರಾಯಣಪನ್ನ. |
| ನ್ಯಾ. ಸೂ. | ನ್ಯಾಯಸೂತ್ರ, ಗೌತಮವಿರಚಿತ. |
| ಮಂ. | ಮಂತ್ರ. |
| ಯೋ. ಸೂ. | ಯೋಗಸೂತ್ರ. |
| ಸಾಂ. ಕಾ. | ಸಾಂಖ್ಯಕಾರಿಕಾ, ಈಶ್ವರಕೃಷ್ಣಕೃತ. |

ಉಪನಿಷತ್ತುಗಳನ್ನು ಮೊದಲನೆಯ ಅಕ್ಷರದಿಂದಲೂ ಭಾಷ್ಯಭಾಗವನ್ನು ಭಾ. ಭಾ. ಎಂಬ ಅಕ್ಷರಗಳಿಂದಲೂ ತಿಳಿಸಿದೆ.

|| ಓಂ ||

ಶ್ರೀಶಾಂಕರಭಾಷ್ಯಸಮೇತ

ಶ್ರೀಗೌಡಪಾದೀಯಕಾರಿಕಾಸಹಿತ

# ಮಾಂಡೂಕ್ಯೋಪನಿಷತ್ತು

## ಭಾಷ್ಯಕಾರರ ಅವತರಣಿಕೆ

### ಮಂಗಲ

ಪ್ರಜ್ಞಾನಾಂಶುಪ್ರತಾನೈಃ ಸ್ಥಿರಚರನಿಕರವ್ಯಾಪಿಭಿರ್ವ್ಯಾಪ್ಯ ಲೋಕಾನ್
ಭುಕ್ತ್ವಾ ಭೋಗಾನ್ ಸ್ಥವಿಷ್ಠಾನ್ ಪುನರಪಿ ಧಿಷಣೋದ್ಭಾಸಿತಾನ್ ಕಾಮಜನ್ಯಾನ್ ।
ಪೀತ್ವಾ ಸರ್ವಾನ್ ವಿಶೇಷಾನ್ ಸ್ವಪಿತಿ ಮಧುರಭುಙ್ ಮಾಯಯಾ ಭೋಜಯನ್ನೋ
ಮಾಯಾಸಙ್ಖ್ಯಾತುರೀಯಂ ಪರಮಮೃತಮಜಂ ಬ್ರಹ್ಮ ಯತ್ತನ್ನತೋಽಸ್ಮಿ || ೧ ||

೧. ಸ್ಥಾವರಜಂಗಮ (ಪ್ರಾಣಿಗಳ) ಸಮೂಹಗಳಲ್ಲಿ ಹಬ್ಬಿರುವ ಜ್ಞಾನರೂಪವಾದ (ತನ್ನ) ಕಿರಣಗಳ ಹರಡುವಿಕೆಯಿಂದ ಲೋಕಗಳನ್ನು ವ್ಯಾಪಿಸಿಕೊಂಡು ಅತ್ಯಂತಸ್ಥೂಲವಾದ ಭೋಗಗಳನ್ನು ಅನುಭವಿಸಿ, ಮತ್ತೂ ಒಮ್ಮೆ ಕಾಮದಿಂದ ಹುಟ್ಟಿದವುಗಳೂ ಬುದ್ಧಿಯು ತೋರಿಸಿಕೊಡತಕ್ಕವುಗಳೂ ಆದ (ಸೂಕ್ಷ್ಮಭೋಗಗಳನ್ನೂ ಅನುಭವಿಸಿ), ಎಲ್ಲಾ ವಿಶೇಷಗಳನ್ನೂ ಹೀರಿಕುಡಿದು ಸುಖವನ್ನು ಅನುಭವಿಸುತ್ತಾ ಮಾಯೆಯಿಂದ ನಮ್ಮಗಳಿಗೆ ಭೋಗವನ್ನುಂಟುಮಾಡಿಕೊಡುತ್ತಾ ನಿದ್ರಿಸುತ್ತಿರುವ (ಕಲ್ಪಿತವಾದ ಮೂರವಸ್ಥೆಗಳ) ಮಾಯಾಸಂಖ್ಯೆಗೆ ನಾಲ್ಕನೆಯದಾದ ಅಮೃತವೂ ಅಜವೂ ಆಗಿರುವ ಪರಬ್ರಹ್ಮವು ಯಾವದೋ ಅದನ್ನು ನಮಸ್ಕರಿಸುವೆನು.

ಯೋ ವಿಶ್ವಾತ್ಮಾ ವಿವಿಧವಿಷಯಾನ್ ಪ್ರಾಶ್ಯ ಭೋಗಾನ್ ಸ್ಥವಿಷ್ಠಾನ್
ಪಶ್ಚಾಚ್ಚಾನ್ಯಾನ್ ಸ್ವಮತಿವಿಭವಾನ್ ಜ್ಯೋತಿಷಾ ಸ್ವೇನ ಸೂಕ್ಷ್ಮಾನ್ ।
ಸರ್ವಾನೇತಾನ್ ಪುನರಪಿ ಶನೈಃ ಸ್ವಾತ್ಮನಿ ಸ್ಥಾಪಯಿತ್ವಾ
ಹಿತ್ವಾ ಸರ್ವಾನ್ ವಿಶೇಷಾನ್ ವಿಗತಗುಣಗಣಃ ಪಾತ್ವಸೌ ನಸ್ತುರೀಯಃ[1] || ೨ ||

---

1. ಈ ಪಾದದಲ್ಲಿ ವೃತ್ತದ ಲಕ್ಷಣವಿಲ್ಲವಲ್ಲ!–ಎಂಬ ಶಂಕೆಗೆ ಇದರಲ್ಲಿ ಗಾಥಾ ಲಕ್ಷಣವಿದೆ ಎಂಬ ಸಮಾಧಾನವನ್ನು ಆ॥ ವ್ಯಾಖ್ಯಾನಕಾರರು ಕೊಟ್ಟಿರುತ್ತಾರೆ.

೨. ಯಾವ ಸರ್ವಾತ್ಮನು ಬಗೆಬಗೆಯ[1] ವಿಷಯಗಳ ರೂಪದ ಸ್ಥೂಲತಮ ಭೋಗಗಳನ್ನು ಅನುಭವಿಸಿ,[2] ಬಳಿಕ ತನ್ನ ಮನಸ್ಸಿನಿಂದ ಹರಡಿಕೊಂಡಿರುವ[3] ಸೂಕ್ಷ್ಮವಾದ ಬೇರೆಯ (ಭೋಗಗಳನ್ನೂ ಅನುಭವಿಸಿ), ಅಮೇಲೆ ಮೆಲ್ಲಮೆಲ್ಲಗೆ ಈ ಭೋಗಗಳನ್ನೆಲ್ಲ ತನ್ನ ಸ್ವರೂಪದಲ್ಲಿಯೇ ಇಟ್ಟು, ವಿಶೇಷಗಳನ್ನೆಲ್ಲ ಬಿಟ್ಟು ಗುಣಸಮೂಹವಿಲ್ಲದವನಾಗುವನೋ ಆ ನಾಲ್ಕನೆಯ (ಆತ್ಮನು) ನಮ್ಮಗಳನ್ನು ಕಾಪಾಡಲಿ ![4]

## ಈ ಪ್ರಕರಣದ ಸಂಬಂಧ

(ಭಾಷ್ಯ)

೧. "ಓಮಿತ್ಯೇತದಕ್ಷರಮಿದಂ ಸರ್ವಂ ತಸ್ಯೋಪವ್ಯಾಖ್ಯಾನಮ್" । ವೇದಾನ್ತಾರ್ಥಸಾರಸಂಗ್ರಹಭೂತಮ್ ಇದಂ ಪ್ರಕರಣಚತುಷ್ಟಯಮ್ ಓಮಿತ್ಯೇತದಕ್ಷರಮ್ ಇತ್ಯಾದಿ ಆರಭ್ಯತೇ । ಅತ ಏವ ನ ಪೃಥಕ್ ಸಂಬನ್ಧಾಭಿಧೇಯಪ್ರಯೋಜನಾನಿ ವಕ್ತವ್ಯಾನಿ । ಯಾನ್ಯೇವ ತು ವೇದಾನ್ತೇ ಸಂಬನ್ಧಾಭಿಧೇಯಪ್ರಯೋಜನಾನಿ ತಾನ್ಯೇವೇಹ ಭವಿತುಮ್ ಅರ್ಹನ್ತಿ । ತಥಾಪಿ ಪ್ರಕರಣವ್ಯಾಚಿಖ್ಯಾಸುನಾ ಸಂಕ್ಷೇಪತಃ ವಕ್ತವ್ಯಾನಿ ॥[5]

(ಭಾಷ್ಯಾರ್ಥ)

"ಓಮಿತ್ಯೇತದಕ್ಷರಮಿದಂ ಸರ್ವಂ ತಸ್ಯೋಪವ್ಯಾಖ್ಯಾನಮ್ (ಎಂಬ ಗ್ರಂಥದ ಸಂಬಂಧವೇನೆಂದರೆ) : "ಓಮಿತ್ಯೇತದಕ್ಷರಮ್" ಎಂದು ಮುಂತಾಗಿರುವ ವೇದಾಂತಾರ್ಥದ ಸಾರದ ಸಂಗ್ರಹವಾಗಿರುವ[6] ಈ **ಪ್ರಕರಣಚತುಷ್ಟಯ**ವನ್ನು[7] ಆರಂಭಿ

---

1. "ವಿಧಿಜವಿಷಯಾನ್" ಎಂಬ ಪಾಠವನ್ನು ಸ್ವೀಕರಿಸಿ ಧರ್ಮಾಧರ್ಮಗಳಿಂದ ಆಗಿರುವ ವಿಷಯಗಳನ್ನು ಎಂದು ಟೀ॥ ವ್ಯಾಖ್ಯಾನದಲ್ಲಿ ಅರ್ಥಮಾಡಿರುತ್ತದೆ

2 'ಪ್ರಾಶ್ಯ' ಎಂಬ ಪಾಠಕ್ಕೆ ಹೊಂದಿ ಎಂದು ಅರ್ಥ.

3. "ಸ್ವಮತಿವಿಭವಾನ್" ಎಂಬ ಮಾತಿಗೆ ತನ್ನ ಮನೋಮಾತ್ರದಿಂದ ಎಂದರೆ-ವಾಸನೆಯಿಂದ ಹುಟ್ಟಿದ ಎಂದು ಆ॥ ವ್ಯಾಖ್ಯಾನದ ಅರ್ಥ. "ಕಾಮಜನ್ಮಾನ್" ಎಂಬ ಶಬ್ದದಿಂದಲೇ ಈ ಅಭಿಪ್ರಾಯವು ಹೊರಡುತ್ತದೆಯಾದ್ದರಿಂದ ಮನಸ್ಸೇ ವಿಷಯರೂಪವನ್ನೂ ಪಡೆಯುವದೆಂಬ ಅರ್ಥವನ್ನು ನಾವು ತೆಗೆದಿದ್ದೇವೆ.

4. ಇಲ್ಲಿರುವ ಎರಡು ಶ್ಲೋಕಗಳೂ ಒಂದೇ ಅಭಿಪ್ರಾಯದವು. ಇವುಗಳನ್ನು ರಚಿಸಿರುವವರ ಮತ್ತು ಇವುಗಳ ಪ್ರಯೋಜನದ ವಿಷಯಕ್ಕೆ ಪೀಠಿಕೆಯನ್ನು ನೋಡಿ.

5. "ವಕ್ತವ್ಯಾನೀತಿ ಮನ್ಯನ್ತೇ ವ್ಯಾಖ್ಯಾತಾರಃ" ಎಂಬ ವಾ॥ ಪಾಠವು ಬೇಕಿಲ್ಲ.

6. ವೇದಾಂತವೆಂದರೆ ಉಪನಿಷತ್ತು. ಅದರ ಅರ್ಥವೆಂದರೆ ಉಪಾಸನೆ, ಆತ್ಮಸ್ವರೂಪಜ್ಞಾನ-ಮುಂತಾದದ್ದು : ಅದರಲ್ಲಿ ಸಾರವೆಂದರೆ ಆತ್ಮಜ್ಞಾನವು. ಅದರ ಸಂಗ್ರಹವೆಂದರೆ ಸಂಕ್ಷೇಪಕಥನವು. ಆ॥ ವ್ಯಾಖ್ಯಾನದಲ್ಲಿ ಈ ಮಾತಿಗೆ ಬೇರೆಯ ರೀತಿಯಾಗಿ ಅರ್ಥವನ್ನು ಕಲ್ಪಿಸಿದೆ.

7. "ಓಮಿತ್ಯೇತದಕ್ಷರಮ್" ಎಂಬುದೇ ಮುಂತಾದ ಉಪನಿಷತ್ತನ್ನು ಆದಿಯಲ್ಲುಳ್ಳ ಪ್ರಕರಣಚತುಷ್ಟಯವನ್ನು ಎಂದರ್ಥ. ಇದರ ವಿಷಯಕ್ಕೆ ಪೀಠಿಕೆಯನ್ನು ನೋಡಿರಿ.

ಸಿರುತ್ತದೆ. ಆದ್ದರಿಂದಲೇ ಸಂಬಂಧ, ವಿಷಯ, ಪ್ರಯೋಜನ-ಇವುಗಳನ್ನು ಬೇರೆಯಾಗಿ ಹೇಳಬೇಕಾದದ್ದು ಇರುವದಿಲ್ಲ. (ಏಕೆಂದರೆ) ವೇದಾಂತದಲ್ಲಿ[1] ಯಾವವು ಸಂಬಂಧ, ವಿಷಯ, ಪ್ರಯೋಜನ-ಎನ್ನಿಸಿರುವವೋ ಅವೇ ಇಲ್ಲಿಯೂ (ಸಂಬಂಧಾದಿಗಳಾ) ಗಿರಬೇಕಾಗಿದೆ. ಹೀಗಿದ್ದರೂ **ಪ್ರಕರಣವನ್ನು ವ್ಯಾಖ್ಯಾನಮಾಡುವಾತನು**[2] (ಇವನ್ನು) ಸಂಕ್ಷೇಪವಾಗಿ ಹೇಳತಕ್ಕದ್ದು (ಅವಶ್ಯ).

## ವೇದಾಂತದ ಅನುಬಂಧಗಳು

(ಭಾಷ್ಯ)

೨. ತತ್ರ ಪ್ರಯೋಜನವತ್ಸಾಧನಾಭಿವ್ಯಞ್ಜಕತ್ವೇನ ಅಭಿಧೇಯಸಂಬದ್ಧಂ ಶಾಸ್ತ್ರಂ ಪಾರಮ್ಪರ್ಯೇಣ ವಿಶಿಷ್ಟಸಂಬನ್ಧಾಭಿಧೇಯಪ್ರಯೋಜನವತ್ ಭವತಿ । ಕಿಂ ಪುನಸ್ತತ್ ಪ್ರಯೋಜನಮ್ ಇತಿ ? ಉಚ್ಯತೇ । ರೋಗಾರ್ತಸ್ಯೇವ ರೋಗನಿವೃತ್ತೌ ಸ್ವಸ್ಥತಾ ತಥಾ ದುಃಖಾತ್ಮಕಸ್ಯ ಆತ್ಮನಃ ದ್ವೈತಪ್ರಪಞ್ಚೋಪಶಮೇ ಸ್ವಸ್ಥತಾ ಅದ್ವೈತಭಾವಃ ಪ್ರಯೋಜನಮ್ । ದ್ವೈತಪ್ರಪಞ್ಚಸ್ಯ ಅವಿದ್ಯಾಕೃತತ್ವಾತ್ ವಿದ್ಯಯಾ ತದುಪಶಮಃ ಸ್ಯಾತ್ ಇತಿ ಬ್ರಹ್ಮವಿದ್ಯಾಪ್ರಕಾಶನಾಯ ಅಸ್ಯ ಆರಮ್ಭಃ ಕ್ರಿಯತೇ । " ಯತ್ರ ಹಿ ದ್ವೈತಮಿವ ಭವತಿ " (ಬೃ. ೨-೪-೧೪, ೪-೫-೧೫) "ಯತ್ರ ವಾ ಅನ್ಯದಿವ ಸ್ಯಾತ್ ತತ್ರಾನ್ಯೋಽನ್ಯತ್ ಪಶ್ಯೇತ್........ .. ಅನ್ಯೋಽನ್ಯದ್ವಿಜಾನೀಯಾತ್" (ಬೃ. ೪-೩-೩೧), " ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್ ತತ್ ಕೇನ ಕಂ ಪಶ್ಯೇತ್... ....ಕೇನ ಕಂ ವಿಜಾನೀಯಾತ್ " (ಬೃ ೪-೫-೧೫) ಇತ್ಯಾದಿ ಶ್ರುತಿಭ್ಯಃ ಅಸ್ಯಾರ್ಥಸ್ಯ ಸಿದ್ಧಿಃ ॥

(ಭಾಷ್ಯಾರ್ಥ)

ಇಲ್ಲಿ ಪ್ರಯೋಜನವುಳ್ಳ ಸಾಧನವನ್ನು ತಿಳಿಸಿಕೊಡುವದರಿಂದ ಶಾಸ್ತ್ರಕ್ಕೆ ವಿಷಯದ ಸಂಬಂಧವಿರುವದರಿಂದ, ಪರಂಪರೆಯಿಂದ (ಅದಕ್ಕೆ) ಅಸಾಧಾರಣವಾದ ಸಂಬಂಧ, ವಿಷಯ, ಪ್ರಯೋಜನ[3]-ಇವುಗಳು ಇದ್ದಂತೆ ಆಯಿತು

(ಪ್ರಶ್ನೆ) :—ಹಾಗಾದರೆ ಆ ಪ್ರಯೋಜನವು ಯಾವದು ?

(ಉತ್ತರ) :—ಹೇಳುತ್ತೇನೆ, (ಕೇಳಿ). ರೋಗದಿಂದ ನರಳುತ್ತಿರುವವನಿಗೆ ರೋಗವು ತೊಲಗಲು ಹೇಗೆ ಸ್ವಸ್ಥತೆಯುಂಟಾಗುವದೆಂಬ (ಪ್ರಯೋಜನವಾಗು

---

1. ಉಪನಿಷತ್ತಿನಲ್ಲಿ.

2. ಆಚಾರ್ಯರು ಪ್ರಕರಣಕ್ಕೇ ತಾವು ವ್ಯಾಖ್ಯಾನಮಾಡುವೆವೆಂದೂ ಉಪನಿಷತ್ತಿನ ಅರ್ಥವು ಪ್ರಕರಣದಲ್ಲಿ ಅಡಗಿದೆಯೆಂದೂ ಇಲ್ಲಿ ಹೇಳಿಕೊಂಡಿದ್ದಾರೆ.

3. ಗ್ರಂಥವು ಯಾರಿಗೆ (ಅಧಿಕಾರಿ), ಇಲ್ಲಿ ಹೇಳಿರುವದೇನು (ವಿಷಯ), ಇದರಿಂದ ಆಗುವದೇನು (ಪ್ರಯೋಜನ), ಇದು ಯಾವದಕ್ಕೆ ಸಂಬಂಧಪಟ್ಟದ್ದು (ಸಂಬಂಧ)-ಎಂಬಿವು ಪ್ರತಿಯೊಂದು ಗ್ರಂಥಕ್ಕೂ ಇರಬೇಕು.

ವದೋ), ಹಾಗೆ ದುಃಖವನ್ನು ಅನುಭವಿಸುತ್ತಿರುವ ಆತ್ಮನಿಗೆ ದ್ವೈತಪ್ರಪಂಚವು ನಾಶವಾಗಲು ಅದ್ವೈತಭಾವವನ್ನು ಹೊಂದುವದೆಂಬ ಸ್ವಸ್ಥತೆಯು[1] ಪ್ರಯೋಜನವಾಗುವದು. ದ್ವೈತಪ್ರಪಂಚವು ಅವಿದ್ಯೆ (ತಪ್ಪುತಿಳಿವಳಿಕೆ) ಯಿಂದ ಆಗಿರುವದರಿಂದ ವಿದ್ಯೆಯಿಂದ ಅದರ ನಾಶವುಂಟಾಗುತ್ತದೆ. ಆದ್ದರಿಂದ ಬ್ರಹ್ಮವಿದ್ಯೆಯನ್ನು ತಿಳಿಸುವದಕ್ಕಾಗಿ ಈ (ಗ್ರಂಥ) ವನ್ನು ಪ್ರಾರಂಭಿಸಿರುತ್ತದೆ. "ಎಲ್ಲಿ ದ್ವೈತದಂತೆ ಇರುವದೋ" (ಬೃ. ೨-೪-೧೪, ೪-೫-೧೫), "ಎಲ್ಲಿ ಬೇರೊಂದು (ವಸ್ತು) ವಿದ್ದಂತಿರುವದೋ ಅಲ್ಲಿ ಒಬ್ಬನು ಮತ್ತೊಂದು (ವಸ್ತು) ವನ್ನು ಕಾಣುವನು...........ಒಬ್ಬನು ಮತ್ತೊಂದು (ವಸ್ತು) ವನ್ನು ಅರಿಯುವನು" (ಬೃ. ೪-೩-೩೧), "ಆದರೆ ಎಲ್ಲಿ ಇವನಿಗೆ ಎಲ್ಲವೂ ಆತ್ಮನೇ ಆಗಿಬಿಟ್ಟಿರುವದೋ ಅಲ್ಲಿ ಏತರಿಂದ ಯಾರನ್ನು ಕಂಡಾನು? ....ಏತರಿಂದ ಯಾರನ್ನು ಅರಿತಾನು?" (ಬೃ. ೪-೫-೧೫) ಮುಂತಾದ ಶ್ರುತಿಗಳಿಂದ[2] ಈ ವಿಷಯವು ಸಿದ್ಧವಾಗುತ್ತದೆ.

## ಪ್ರಕರಣದ ವಿಷಯಗಳ ವಿಂಗಡ

(ಭಾಷ್ಯ)

೩. ತತ್ರ ತಾವತ್ ಓಂಕಾರನಿರ್ಣಯಾಯ ಪ್ರಥಮಂ ಪ್ರಕರಣಮ್ ಆಗಮಪ್ರಧಾನಮ್ ಆತ್ಮತತ್ತ್ವಪ್ರತಿಪತ್ತ್ಯುಪಾಯಭೂತಮ್ । ಯಸ್ಯ ದ್ವೈತಪ್ರಪಞ್ಚಸ್ಯ ಉಪಶಮೇ ಅದ್ವೈತಪ್ರತಿಪತ್ತಿಃ ರಜ್ಜ್ವಾಮಿವ ಸರ್ಪಾದಿವಿಕಲ್ಪೋಪಶಮೇ ರಜ್ಜುತತ್ತ್ವಪ್ರತಿಪತ್ತಿಃ । ತಸ್ಯ ದ್ವೈತಸ್ಯ ಹೇತುತಃ ವೈತಥ್ಯಪ್ರತಿಪಾದನಾಯ ದ್ವಿತೀಯಂ ಪ್ರಕರಣಮ್ । ತಥಾ ಅದ್ವೈತಸ್ಯಾಪಿ ವೈತಥ್ಯಪ್ರಸಙ್ಗಪ್ರಾಪ್ತೌ ಯುಕ್ತಿತಃ ತಥಾತ್ವದರ್ಶನಾಯ ತೃತೀಯಂ ಪ್ರಕರಣಮ್ । ಅದ್ವೈತಸ್ಯ ತಥಾತ್ವಪ್ರತಿಪತ್ತಿಪ್ರತಿಪಕ್ಷಭೂತಾನಿ ಯಾನಿ ವಾದಾನ್ತರಾಣಿ ಅವೈದಿಕಾನಿ, ತೇಷಾಮ್ ಅನ್ಯೋನ್ಯವಿರೋಧಿತ್ವಾತ್ ಅತಥಾರ್ಥತ್ವೇನ ತದುಪಪತ್ತಿಭಿರೇವ ನಿರಾಕರಣಾಯ ಚತುರ್ಥಂ ಪ್ರಕರಣಮ್ ॥

(ಭಾಷ್ಯಾರ್ಥ)

ಇಲ್ಲಿ ಎಲ್ಲಕ್ಕೂ ಮೊದಲು ಓಂಕಾರವನ್ನು ನಿರ್ಣಯಿಸುವದಕ್ಕಾಗಿ **ಆಗಮಪ್ರಧಾನವಾದ**[3] ಒಂದನೆಯ ಪ್ರಕರಣವು (ಬಂದಿರುತ್ತದೆ. ಇದು) ಆತ್ಮತತ್ತ್ವ

---

1. ವೈದ್ಯಶಾಸ್ತ್ರದಂತೆ ನಮ್ಮ ದರ್ಶನವು ದುಃಖವನ್ನು ಪರಿಹರಿಸುವದೆಂದು ಬೌದ್ಧರು ಯೋಗಿಗಳು-ಮುಂತಾದವರೂ ಹೇಳುತ್ತಾರೆ. ಆದರೆ ಮುಕ್ತಿಯು ನಿತ್ಯಪ್ರಾಪ್ತವಾಗಿದೆ ಎಂಬ ಅದ್ವೈತದರ್ಶನಕ್ಕೆ ಈ ಹೋಲಿಕೆಯು ಹೊಂದುವಷ್ಟು ಪೂರ್ಣವಾಗಿ ಮಿಕ್ಕ ಯಾವ ದರ್ಶನಕ್ಕೂ ಹೊಂದುವದಿಲ್ಲ.

2. ಇಲ್ಲಿ ಮೊದಲನೆಯ ಎರಡು ಶ್ರುತಿಗಳು ಅವಿದ್ಯಾಕಲ್ಪಿತವಾದ ದ್ವೈತಪ್ರಪಂಚವು ಕಾಣುತ್ತಿರುವಾಗಲೇ ವ್ಯವಹಾರವಿರುವದೆಂಬುದನ್ನು ಹೇಳುವವು. ಆತ್ಮನೊಬ್ಬನೇ ಇರುವಾಗ ವ್ಯವಹಾರವಿಲ್ಲವೆಂದು ಮೂರನೆಯ ಶ್ರುತಿ ಹೇಳುತ್ತದೆ.

3. ಉಪದೇಶರೂಪವಾಗಿರುವ; ಇದರಲ್ಲಿ ಯುಕ್ತಿಯು ಇದ್ದರೂ ಮುಖ್ಯವಲ್ಲ.

ವನ್ನು ಅರಿತುಕೊಳ್ಳುವದಕ್ಕೆ ಉಪಾಯವಾಗಿರುತ್ತದೆ. ಹಗ್ಗದಲ್ಲಿ ಹಾವೇ ಮುಂತಾದ ತಪ್ಪುಕಲ್ಪನೆಗಳು ನೀಗಲು ಹಗ್ಗದ ನಿಜದ ಅರಿವು ಉಂಟಾಗುವಂತೆ ಯಾವ ದ್ವೈತ ಪ್ರಪಂಚವು ಇಲ್ಲವಾಗಲು ಅದ್ವೈತದ ಅರಿವು ಆಗುವದೋ, ಆ ದ್ವೈತವು ಹುಸಿ ಎಂಬುದನ್ನು ಯುಕ್ತಿಯಿಂದ ತೋರಿಸಿಕೊಡುವದಕ್ಕಾಗಿ ಎರಡನೆಯ ಪ್ರಕರಣವು (ಬಂದಿರುತ್ತದೆ). (ಹಾಗಾದರೆ) ಅದರಂತೆ ಅದ್ವೈತವೂ ಹುಸಿಯಾಗಬೇಕೆಂದು ಆಗ ಲಾಗಿ ಯುಕ್ತಿಯಿಂದ ಅದು ನಿಜವಾದದ್ದು ಎಂದು ತೋರಿಸುವದಕ್ಕಾಗಿ ಮೂರನೆಯ ಪ್ರಕರಣವು (ಬಂದಿರುತ್ತದೆ). ಅದ್ವೈತವು ಸತ್ಯವೆಂದು ತಿಳಿಯುವದಕ್ಕೆ ಅಡ್ಡಿಯಾ ಗಿರುವ ಅವೈದಿಕವಾದ ಬೇರೆಯ ವಾದಗಳಿರುವವಷ್ಟೆ, ಅವು ಒಂದಕ್ಕೊಂದು ವಿರುದ್ಧ ವಾಗಿರುವದರಿಂದ ಸರಿಯಲ್ಲ ಎಂದು ಅವುಗಳ ಯುಕ್ತಿಗಳಿಂದಲೇ (ಅವನ್ನು) ತಳ್ಳಿ ಹಾಕುವದಕ್ಕಾಗಿ ನಾಲ್ಕನೆಯ ಪ್ರಕರಣವು (ಬಂದಿರುತ್ತದೆ).

———

# ಉಪನಿಷತ್ತು

## ಓಂಕಾರನಿರ್ಣಯದಿಂದ ಆತ್ಮತತ್ತ್ವಜ್ಞಾನವಾಗುವ ರೀತಿ

(ಭಾಷ್ಯ)

೪. ಕಥಂ ಪುನಃ ಓಂಕಾರನಿರ್ಣಯಃ ಆತ್ಮತತ್ತ್ವಪ್ರತಿಪತ್ತ್ಯುಪಾಯತ್ವಂ ಪ್ರತಿಪದ್ಯತೇ ಇತಿ ? ಉಚ್ಯತೇ । " ಓಮಿತ್ಯೇತತ್ '' (ಕ. ೧-೨-೧೫), " ಏತದಾಲಮ್ಬನಮ್ ''(ಕ. ೧-೨-೧೭), " ಏತದ್ವೈ ಸತ್ಯಕಾಮ''[1] (ಪ್ರ. ೫-೨). " ಓಮಿತ್ಯಾತ್ಮಾನಂ ಯುಞ್ಜೀತ " (ನಾ. ೭೯), " ಓಮಿತಿ ಬ್ರಹ್ಮ " (ತೈ. ೧-೮), " ಓಂಕಾರ ಏವೇದಗ್ಂ ಸರ್ವಮ್ " (ಛಾ. ೨-೨೩-೩)-ಇತ್ಯಾದಿಶ್ರುತಿಭ್ಯಃ । ರಜ್ಜ್ವಾದಿರಿವ ಸರ್ಪಾದಿವಿಕಲ್ಪಸ್ಯ ಆಸ್ಪದಃ, ಅದ್ವಯ ಆತ್ಮಾ ಪರಮಾರ್ಥತಃ[2] ಸನ್ ಪ್ರಾಣಾದಿವಿಕಲ್ಪಸ್ಯ ಆಸ್ಪದೋ ಯಥಾ, ತಥಾ ಸರ್ವೋಽಪಿ ವಾಕ್ಪ್ರಪಞ್ಚಃ ಪ್ರಾಣಾದ್ಯಾತ್ಮವಿಕಲ್ಪವಿಷಯಃ ಓಂಕಾರ ಏವ । ಸ ಚ ಆತ್ಮಸ್ವರೂಪಮೇವ ತದಭಿಧಾಯಕತ್ವಾತ್ । ಓಂಕಾರವಿಕಾರಶಬ್ದಾಭಿಧೇಯಶ್ಚ ಸರ್ವಃ ಪ್ರಾಣಾದಿರಾತ್ಮವಿಕಲ್ಪಃ ಅಭಿಧಾನವ್ಯತಿರೇಕೇಣ ನಾಸ್ತಿ । " ವಾಚಾರಮ್ಭಣಂ ವಿಕಾರೋ ನಾಮಧೇಯಮ್ " (ಛಾಂ. ೬-೧-೪), " ತದಸ್ಯೇದಂ ವಾಚಾ ತನ್ತ್ಯಾ ನಾಮಭಿರ್ದಾಮಭಿಃ ಸರ್ವಂ ಸಿತಮ್ । ಸರ್ವಂ ಹೀದಂ ನಾಮನೀ ೩ " (ಐ. ಆ. ೨-೧-೬) ಇತ್ಯಾದಿಶ್ರುತಿಭ್ಯಃ । ಅತ ಆಹ–

(ಭಾಷ್ಯಾರ್ಥ)

(ಪ್ರಶ್ನೆ) :—ಓಂಕಾರನಿರ್ಣಯವು ಆತ್ಮತತ್ತ್ವವನ್ನು ಅರಿತುಕೊಳ್ಳುವದಕ್ಕೆ ಸಾಧನವಾಗುವದಾದರೂ ಹೇಗೆ ?

(ಉತ್ತರ) :-ಹೇಳುತ್ತೇವೆ, (ಕೇಳಿ). " ಇದೇ ಓಂ ಎಂಬುದು " (ಕ. ೧-೨-೧೫), " ಈ ಆಲಂಬನವೇ (ಶ್ರೇಷ್ಠವಾದದ್ದು) " (ಕ. ೧-೨-೧೭), "ಸತ್ಯಕಾಮನೆ, ಇದೇ ಪರಬ್ರಹ್ಮವು, ಮತ್ತು ಅಪರಬ್ರಹ್ಮವು" (ಪ್ರ. ೫-೨), " ಓಂ! ಎಂದು ಆತ್ಮನನ್ನು ಧ್ಯಾನಿಸಬೇಕು " (ನಾ. ೭೯), " ಓಂ! ಎಂಬುದು ಬ್ರಹ್ಮವು '' (ತೈ. ೧-೮), " ಇದೆಲ್ಲವೂ ಓಂಕಾರವೇ '' (ಛಾಂ. ೨-೨೩-೩)–ಮುಂತಾದ ಶ್ರುತಿಗಳು[3] ಇದಕ್ಕೆ ಪ್ರಮಾ

---

1. ವಾ॥ ಮೈ॥ ಗಳಲ್ಲಿ ವಾಕ್ಯವು ಪೂರ್ಣವಾಗಿದೆ.

2. "ಪರಮಾರ್ಥಃ ಸನ್" ಎಂಬ ಪಾಠಕ್ಕಿಂತ ಇದು ಮೇಲು ; "ಪರಮಾರ್ಥಸನ್" ಎಂದಿದ್ದರೆ ಮತ್ತೂ ಚೆನ್ನಾಗಿತ್ತು.

3. ಇಲ್ಲಿರುವ ಶ್ರುತಿಗಳು ಓಂಕಾರವು ಪರಬ್ರಹ್ಮವನ್ನು ಅರಿತುಕೊಳ್ಳುವದಕ್ಕೂ ಅಪರಬ್ರಹ್ಮವನ್ನು ಉಪಾಸನೆಮಾಡುವದಕ್ಕೂ ಉತ್ತಮವಾದ ಸಾಧನವೆಂದು ಹೇಳುತ್ತವೆ. ಪ್ರಕೃತದಲ್ಲಿ ಓಂಕಾರನಿರ್ಣಯವು ಪರಮಾತ್ಮತತ್ತ್ವವನ್ನು ಅರಿತುಕೊಳ್ಳುವ ಜ್ಞಾನಕ್ಕೇ ಸಾಧನವೆಂಬುದನ್ನು ತೋರಿಸಬೇಕಾಗಿದೆ.

ಣವು. ಪರಮಾರ್ಥವಾಗಿ ಸತ್ಯವಾಗಿರುವ ಆತ್ಮನು, ಹಾವೇ ಮುಂತಾದ ವಿಕಲ್ಪಗಳಿಗೆ ಆಧಾರವಾಗಿರುವ ಹಗ್ಗವೇ ಮುಂತಾದದ್ದರಂತೆ, ಪ್ರಾಣನೇ ಮುಂತಾದ[1] ವಿಕಲ್ಪಕ್ಕೆ ಹೇಗೆ ಆಧಾರವಾಗಿರುವನೋ ಹಾಗೆ ಪ್ರಾಣನೇ ಮುಂತಾದ ಆತ್ಮವಿಕಲ್ಪಗಳನ್ನು[2] ವಿಷಯಮಾಡಿಕೊಂಡಿರುವ ವಾಕ್ಪ್ರಪಂಚವೆಲ್ಲವೂ ಓಂಕಾರವೇ.[3] ಆ ಓಂಕಾರವು ಆತ್ಮಸ್ವರೂಪವೇ, ಏಕೆಂದರೆ ಅದರ ವಾಚಕವಾಗಿರುತ್ತದೆ. ಓಂಕಾರದ ಕಾರ್ಯವಾಗಿರುವ ಶಬ್ದಗಳಿಂದ[4] ಹೇಳಲ್ಪಡುವ ಪ್ರಾಣನೇ ಮುಂತಾದ ಆತ್ಮವಿಕಲ್ಪವು ಯಾವದೂ (ತನ್ನ) ಹೆಸರನ್ನು ಬಿಟ್ಟು ಇರುವದಿಲ್ಲ. "ಕಾರ್ಯವೆಂಬುದು ಮಾತಿನಿಂದ ಆಗಿರುವ ಹೆಸರೇ"[5] (ಛಾಂ. ೬-೧-೪), "ಆದ್ದರಿಂದ ಈತನ ವಾಕ್ಕೆಂಬ ಸರವಿಯಿಂದ ಹೆಸರುಗಳೆಂಬ ಕಣ್ಣಿಗಳಿಂದ ಇದೆಲ್ಲವೂ ಬಿಗಿಯಲ್ಪಟ್ಟಿರುವದು. ಇದೆಲ್ಲವೂ ಹೆಸರುಗಳಿಂದಲೇ (ವ್ಯವಹಾರಕ್ಕೆ) ತರಲ್ಪಡುವವಲ್ಲವೆ?"[6] (ಐ. ಆ. ೨-೧-೬) ಮುಂತಾದ ಶ್ರುತಿಗಳು ಇದಕ್ಕೆ ಪ್ರಮಾಣವು. ಆದ್ದರಿಂದ (ಉಪನಿಷತ್ತು) ಹೇಳುತ್ತದೆಯೇನೆಂದರೆ:—

## ಎಲ್ಲವೂ ಓಂಕಾರವೇ

**ಓಮಿತ್ಯೇತದಕ್ಷರಮಿದಗ್ಂ ಸರ್ವಂ ತಸ್ಯೋಪವ್ಯಾಖ್ಯಾನಂ**
**ಭೂತಂ ಭವದ್ಭವಿಷ್ಯದಿತಿ ಸರ್ವಮೋಂಕಾರ ಏವ ।**
**ಯಚ್ಚಾನ್ಯತ್ತ್ರಿಕಾಲಾತೀತಂ ತದಪ್ಯೋಂಕಾರ ಏವ ॥ ೧ ॥**

---

1. ಮುಂದೆ ಕಾರಿಕೆಯ ೨-೧೯ ರಿಂದ ೨೮ ರ ವರೆಗಿನ ಗ್ರಂಥದಲ್ಲಿ ಹೇಳಿರುವ-ಎಂದರ್ಥ.

2. ಆತ್ಮನಲ್ಲಿ ವಿಶೇಷವಾಗಿ ಕಲ್ಪಿಸಿರುವ ತೋರಿಕೆಯ ವಸ್ತುಗಳನ್ನು.

3. ಓಂಕಾರವು ಹೇಳುವದಕ್ಕಿಂತ ಬೇರೆ ಏನನ್ನೂ ಹೇಳವು. ಏಕೆಂದರೆ ಓಂಕಾರವು ಸರ್ವವಾಚಕವಾದ್ದರಿಂದ ಅದು ಹೇಳದ ವಸ್ತುವೇ ಮಿಕ್ಕ ವಾಚಕಗಳಿಗೆ ಉಳಿಯುವದಿಲ್ಲ.

4. ಓಂಕಾರವಾಚ್ಯನಾದ ಆತ್ಮನ ವಿಕಲ್ಪಗಳಾದ ಕಾರ್ಯಗಳನ್ನು ಹೇಳುವದರಿಂದ ಇವನ್ನು ಓಂಕಾರದ ಕಾರ್ಯವೆಂದಿದೆ.

5. ಗಡಿಗೆ ಎಂಬ ಹೆಸರೊಂದಲ್ಲದೆ ಮಣ್ಣಿಗಿಂತ ಬೇರೆಯಾದ ಗಡಿಗೆ ಎಂಬ ವಸ್ತು ವಿರುವದಿಲ್ಲ.

6. ಹಲವು ಹಸುಗಳನ್ನು ಒಂದು ಉದ್ದನೆಯ ಸರವಿಗೆ ಕಣ್ಣಿಗಳ ಮೂಲಕ ಕಟ್ಟಿಹಾಕುವಂತೆ ವಾಕ್ಸಾಮಾನ್ಯವೆಂಬ ಆಧಾರದ ಮೇಲೆ ವಿಶೇಷನಾಮಗಳ ಮೂಲಕ ಪದಾರ್ಥಗಳನ್ನು ಜನರು ವ್ಯವಹರಿಸುತ್ತಾರೆ--ಎಂದು ಶ್ರುತಿಯ ಅರ್ಥ. ಇಲ್ಲಿ ಓಂಕಾರವನ್ನೇ ವಾಕ್ಸಾಮಾನ್ಯವೆಂದು ಭಾವಿಸಬಹುದು.

೧. ಓಂ ಎಂಬೀ ಅಕ್ಷರವೇ ಇದೆಲ್ಲ. ಅದರ ಉಪವ್ಯಾಖ್ಯಾನವು: ಹಿಂದೆ ಆಗಿಹೋಗಿರುವದು, ಈಗ ಇರುವದು, ಮುಂದೆ ಆಗುವದು- ಇದೆಲ್ಲವೂ ಓಂಕಾರವೇ. ಮೂರು ಕಾಲವನ್ನೂ ಮೀರಿದ್ದು ಇನ್ನೂ ಯಾವದುಂಟೋ ಅದೂ ಓಂಕಾರವೇ.

(ಭಾಷ್ಯ)

೫. "ಓಮಿತ್ಯೇತದಕ್ಷರಮಿದಂ ಸರ್ವಮ್" ಇತಿ । ಯದಿದಂ ಅರ್ಥಜಾತಮ್ ಅಭಿಧೇಯಭೂತಂ ತಸ್ಯ ಅಭಿಧಾನಾವ್ಯತಿರೇಕಾತ್ ಅಭಿಧಾನಸ್ಯ ಚ ಓಂಕಾರಾವ್ಯತಿರೇಕಾತ್ ಓಂಕಾರ ಏವೇದಂ ಸರ್ವಮ್ । ಪರಂ ಚ ಬ್ರಹ್ಮ ಅಭಿಧಾನಾಭಿಧೇಯೋಪಾಯಪೂರ್ವಕಮೇವ ಗಮ್ಯತೇ[1] ಇತಿ ಓಂಕಾರ ಏವ । ತಸ್ಯ ಏತಸ್ಯ ಪರಾಪರಬ್ರಹ್ಮರೂಪಸ್ಯ ಅಕ್ಷರಸ್ಯ ಓಮ್ ಇತ್ಯೇತಸ್ಯ ಉಪವ್ಯಾಖ್ಯಾನಮ್ ಬ್ರಹ್ಮಪ್ರತಿಪತ್ತ್ಯುಪಾಯತ್ವಾತ್ ಬ್ರಹ್ಮಸಮೀಪತಯಾ ವಿಸ್ಪಷ್ಟಂ ಪ್ರಕಥನಮ್ ಉಪವ್ಯಾಖ್ಯಾನಮ್ । ಪ್ರಸ್ತುತಂ ವೇದಿತವ್ಯಮ್ ಇತಿ ವಾಕ್ಯಶೇಷಃ ॥

(ಭಾಷ್ಯಾರ್ಥ)

"ಓಂ ಎಂಬೀ ಅಕ್ಷರವೇ ಇದೆಲ್ಲ." ಅಭಿಧೇಯವಾಗಿರುವ (ಹೆಸರಿನಿಂದ ಹೇಳುವ) ಈ ಪದಾರ್ಥಸಮೂಹವಿದೆಯಲ್ಲ, ಇದು ಅಭಿಧಾನಕ್ಕಿಂತ ಬೇರೆಯಾಗಿಲ್ಲವಾದ್ದರಿಂದಲೂ, (ಆ) ಅಭಿಧಾನವು ಓಂಕಾರಕ್ಕಿಂತ ಬೇರೆಯಲ್ಲವಾದ್ದರಿಂದಲೂ ಇದೆಲ್ಲವೂ ಓಂಕಾರವೇ. ಪರಬ್ರಹ್ಮವೂ ಅಭಿಧಾನ, ಅಭಿಧೇಯ-ಎಂಬ ಸಾಧನದ ಮೂಲಕವಾಗಿಯೇ ತಿಳಿಯಬರುತ್ತದೆಯಾದ್ದರಿಂದ[2] ಓಂಕಾರವೇ. ಅಂಥ ಈ ಪರಾಪರಬ್ರಹ್ಮರೂಪವಾದ[3] ಓಂ ಎಂಬೀ ಅಕ್ಷರದ ಉಪವ್ಯಾಖ್ಯಾನವು, ಬ್ರಹ್ಮವನ್ನು ಅರಿತುಕೊಳ್ಳುವದಕ್ಕೆ ಸಾಧನವಾಗಿರುವದರಿಂದ ಬ್ರಹ್ಮಕ್ಕೆ (ಉಪ) ಸಮೀಪವಾಗಿದೆ ಎಂದು (ವಿ) ವಿಸ್ಪಷ್ಟವಾಗಿ (ಆಖ್ಯಾನಂ) ವಿವರಿಸಿ ಹೇಳುವದು,[4] "ಪ್ರಾರಂಭವಾಗಿದೆ ಎಂದು ತಿಳಿಯಬೇಕು" ಎಂದು (ಈ) ವಾಕ್ಯಕ್ಕೆ ಸೇರಿಸಿಕೊಳ್ಳಬೇಕು

---

1. "ಪೂರ್ವಕಮವಗಮ್ಯತೇ" ಪಾ॥

2. ಬ್ರಹ್ಮವು ಹೆಸರು, ಹೆಸರಿಸುವ ವಸ್ತು-ಎಂಬ ಸಾಧನದ ಮೂಲಕವಾಗಿಯೇ ತಿಳಿಯಬರುವದೆಂಬುದು ಹೇಗೆಂಬುದನ್ನು ಈ ಉಪನಿಷತ್ತಿನಲ್ಲಿ ತಿಳಿಸಿದೆ

3. ಪರಬ್ರಹ್ಮವನ್ನು ಬಿಟ್ಟು ಅದರಿಂದ ಆಗಿರುವ ವ್ಯಾಕೃತವೆಲ್ಲ ಅಪರಬ್ರಹ್ಮವೇ.

4. ಖ್ಯಾ-ಪ್ರಕಥನೇ ಎಂಬ ಧಾತುವಿನಿಂದ ವ್ಯಾಖ್ಯಾನಮ್ ಎಂಬ ರೂಪವಾಗಿದೆ ಎಂದು ಭಾವ. ತೈ. ಭಾ. ಭಾ. ೧೬ ನೋಡಿ.

(ಭಾಷ್ಯ)

೬. ಭೂತಂ ಭವತ್ ಭವಿಷ್ಯತ್ ಇತಿ ಕಾಲತ್ರಯಪರಿಚ್ಛೇದ್ಯಂ ಯತ್ ತದಪಿ ಓಂಕಾರ ಏವ ಉಕ್ತನ್ಯಾಯತಃ । ಯಚ್ಚ ಅನ್ಯತ್ ತ್ರಿಕಾಲಾತೀತಂ ಕಾರ್ಯಾಧಿಗಮ್ಯಂ ಕಾಲಾಪರಿಚ್ಛೇದ್ಯಮ್ ಅವ್ಯಾಕೃತಾದಿ ತದಪಿ ಓಂಕಾರ ಏವ ॥

(ಭಾಷ್ಯಾರ್ಥ)

ಹಿಂದೆ ಆಗಿರುವದು, ಈಗ ಇರುವದು, ಮುಂದೆ ಆಗುವದು-ಎಂದು ಕಾಲತ್ರಯಕ್ಕೆ ಕಟ್ಟುಬಿದ್ದಿರುವದಲ್ಲ, ಅದೆಲ್ಲವೂ ಓಂಕಾರವೇ, ಇದಕ್ಕೆ ಹಿಂದೆ ಹೇಳಿರುವ ಯುಕ್ತಿಯು[1] (ಇರುತ್ತವೆ). ಮತ್ತು (ಈ) ಮೂರು ಕಾಲವನ್ನೂ ಮೀರಿದ್ದು ಯಾವ (ಯಾವ) ದುಂಟೋ ಅದೂ, ಅಂಥ **ಅವ್ಯಾಕೃತವೇ**[2] ಮುಂತಾದದ್ದೂ, ಓಂಕಾರವೇ

## ಎಲ್ಲವೂ ಬ್ರಹ್ಮವೇ, ಬ್ರಹ್ಮವು ಆತ್ಮನೇ

(ಭಾಷ್ಯ)

೭. ಅಭಿಧಾನಾಭಿಧೇಯಯೋಃ ಏಕತ್ವೇಽಪಿ ಅಭಿಧಾನಪ್ರಾಧಾನ್ಯೇನ ನಿರ್ದೇಶಃ ಕೃತಃ "ಓಮಿತ್ಯೇತದಕ್ಷರಮಿದಂ ಸರ್ವಮ್" ಇತ್ಯಾದಿ । ಅಭಿಧಾನಪ್ರಾಧಾನ್ಯೇನ ನಿರ್ದಿಷ್ಟಸ್ಯ ಪುನರಭಿಧೇಯಪ್ರಾಧಾನ್ಯೇನ ನಿರ್ದೇಶಃ ಅಭಿಧಾನಾಭಿಧೇಯಯೋರೇಕತ್ವಪ್ರತಿಪತ್ತ್ಯರ್ಥಃ । ಇತರಥಾ ಹಿ ಅಭಿಧಾನತನ್ತ್ರಾ ಅಭಿಧೇಯಪ್ರತಿಪತ್ತಿಃ ಇತಿ ಅಭಿಧೇಯಸ್ಯ ಅಭಿಧಾನತ್ವಂ ಗೌಣಮ್ ಇತ್ಯಾಶಙ್ಕಾ ಸ್ಯಾತ್। ಏಕತ್ವಪ್ರತಿಪತ್ತೇಶ್ಚ ಪ್ರಯೋಜನಮ್ ಅಭಿಧಾನಾಭಿಧೇಯಯೋಃ ಏಕೇನೈವ ಪ್ರಯತ್ನೇನ ಯುಗಪತ್ ಪ್ರವಿಲಾಪಯನ್ ತದ್ವಿಲಕ್ಷಣಮ್ ಬ್ರಹ್ಮ ಪ್ರತಿಪದ್ಯೇತ ಇತಿ । ತಥಾ ಚ ವಕ್ಷ್ಯತಿ "ಪಾದಾ ಮಾತ್ರಾ ಮಾತ್ರಾಶ್ಚ ಪಾದಾಃ" (ಮಂ. ೮) ಇತಿ। ತದಾಹ—

(ಭಾಷ್ಯಾರ್ಥ)

ಅಭಿಧಾನ, ಅಭಿಧೇಯ–ಇವೆರಡೂ (ನಿಜವಾಗಿ) ಒಂದೇ ಆದರೂ ಅಭಿಧಾನಕ್ಕೆ ಮುಖ್ಯತ್ವವನ್ನು ಕೊಟ್ಟು "ಇದೆಲ್ಲವೂ ಓಂ ಎಂಬೀ ಅಕ್ಷರವೇ" ಎಂದು (ಹಿಂದಿನ ಮಂತ್ರದಲ್ಲಿ) ಹೇಳಿರುತ್ತದೆ. (ಹೀಗೆ) ಅಭಿಧಾನಕ್ಕೆ ಮುಖ್ಯತ್ವವನ್ನು ಕೊಟ್ಟು ಹೇಳಿದ್ದನ್ನು ಮತ್ತೊಮ್ಮೆ ಅಭಿಧೇಯಕ್ಕೆ ಮುಖ್ಯತ್ವವನ್ನು ಕೊಟ್ಟು (ಈಗ) ಹೇಳು

---

1. ಅಭಿಧಾನಗಳು ಓಂಕಾರಕ್ಕಿಂತ ಬೇರೆಯಲ್ಲ, ಅಭಿಧೇಯವಾದ ವಸ್ತು ಅಭಿಧಾನಕ್ಕಿಂತ ಬೇರೆಯಿಲ್ಲ–ಎಂಬ ಯುಕ್ತಿ.

2. ಕಾಲತ್ರಯವೂ ಅವ್ಯಾಕೃತದಿಂದಾಗಿರುವದರಿಂದ, ಅವ್ಯಾಕೃತವು (ಜಗದ್ಬೀಜವು) ಕಾಲವನ್ನು ಮೀರಿದೆ. ಮುಂತಾದದ್ದು ಎಂದರೆ ಹಿರಣ್ಯಗರ್ಭನನ್ನು ಗ್ರಹಿಸಬೇಕು.

ವದು ಅಭಿಧಾನ, ಅಭಿಧೇಯ-ಇವೆರಡೂ (ನಿಜವಾಗಿ) ಒಂದೇ[1] ಎಂದು ಅರಿತು ಕೊಳ್ಳುವದಕ್ಕಾಗಿ. ಹೀಗೆ ಹೇಳದೆ ಇದ್ದಿದ್ದರೆ ಅಭಿಧೇಯದ ಅರಿವು ಅಭಿಧಾನಕ್ಕೆ ಅಧೀನವಾಗಿರುವದೆಂಬ ಕಾರಣದಿಂದ ಅಭಿಧೇಯವನ್ನು ಅಭಿಧಾನವೆಂದಿರುವದು ಉಪಚಾರಕ್ಕೆ ಎಂದು ಆಶಂಕೆಯುಂಟಾಗುತ್ತಿತ್ತು.[2] (ಇವೆರಡೂ) ಒಂದೇ ಎಂದು ಅರಿತು ಕೊಳ್ಳುವದರ ಪ್ರಯೋಜನವೇನೆಂದರೆ **ಅಭಿದಾನ, ಅಭಿಧೇಯ-ಈ ಎರಡನ್ನೂ ಒಂದೇ ಪ್ರಯತ್ನದಿಂದ ಒಂದೇ ಸಲಕ್ಕೆ ಅಡಗಿಸಿಕೊಂಡು[3] ಅವುಗಳಿಂದ ವಿಲಕ್ಷಣವಾಗಿರುವ ಬ್ರಹ್ಮವನ್ನು ಅರಿತುಕೊಳ್ಳಬಹುದು.** ಆದ್ದರಿಂದಲೇ ಮುಂದೆ "ಪಾದಗಳು ಮಾತ್ರೆಗಳು, ಮಾತ್ರೆಗಳು ಪಾದಗಳು"[4] (ಮಂ. ೮.) ಎಂದು (ಶ್ರುತಿಯಲ್ಲಿ) ಹೇಳಿರುತ್ತದೆ. ಅದನ್ನು (ಮುಂದಿನ ಮಂತ್ರವು) ಹೇಳುತ್ತದೆ:—

**ಸರ್ವಗ್‌ಂ ಹ್ಯೇತದ್ಬ್ರಹ್ಮಾಯಮಾತ್ಮಾ ಬ್ರಹ್ಮ**
**ಸೋಽಯಮಾತ್ಮಾ ಚತುಷ್ಪಾತ್** ॥ ೨ ॥

೨. ಇದೆಲ್ಲವೂ ಬ್ರಹ್ಮವೇ. ಈ ಆತ್ಮನು ಬ್ರಹ್ಮ. ಆ ಈ ಆತ್ಮನು ನಾಲ್ಕು ಪಾದಗಳುಳ್ಳವನು.

(ಭಾಷ್ಯ)

೮. "ಸರ್ವಂ ಹ್ಯೇತದ್ಬ್ರಹ್ಮ" ಇತಿ । ಸರ್ವಂ ಯದುಕ್ತಮ್ ಓಂಕಾರ ಮಾತ್ರಮಿತಿ ತದೇತತ್ ಬ್ರಹ್ಮ । ತಚ್ಚ ಬ್ರಹ್ಮ ಪರೋಕ್ಷಾಭಿಹಿತಂ ಪ್ರತ್ಯಕ್ಷತಃ ವಿಶೇಷೇಣ ನಿರ್ದಿಶತಿ—"ಅಯಮಾತ್ಮಾ ಬ್ರಹ್ಮ" ಇತಿ । ಅಯಮ್ ಇತಿ ಚತುಷ್ಪಾತ್ತ್ವೇನ ಪ್ರವಿಭಜ್ಯಮಾನಂ ಪ್ರತ್ಯಗಾತ್ಮತಯಾ ಅಭಿನಯೇನ ನಿರ್ದಿಶತಿ[5] ॥

---

1. ಒಂದೇ ತತ್ತ್ವವು ಒಂದು ದೃಷ್ಟಿಯಿಂದ ಅಭಿಧಾನವಾದ ಓಂಕಾರವಾಗಿ ಇನ್ನೊಂದು ದೃಷ್ಟಿಯಿಂದ ಅಭಿಧೇಯವಾದ ಬ್ರಹ್ಮವಾಗಿ ತೋರುತ್ತದೆ-ಎಂದು ಅರಿಯುವದಕ್ಕಾಗಿ.

2. ಎಲ್ಲವೂ ಓಂಕಾರವೇ ಎಂದರೆ ಓಂಕಾರವಾಚ್ಯವೇ ಎಂದಿಷ್ಟೇ ಅರ್ಥವೇ ಹೊರತು ನಿಜವಾಗಿ ಓಂಕಾರವಲ್ಲ ಎಂದಾಗುತ್ತಿತ್ತು.

3. ಒಂದೇ ಹಗ್ಗವನ್ನು ಹಾವೆಂದು ಒಬ್ಬನೂ ನೆಲದ ಬಿರುಕೆಂದು ಒಬ್ಬನೂ ಭಾವಿಸಿರಬಹುದು. ಒಬ್ಬ ಚಂದ್ರನೇ ಕಣ್ಣಿನ ದೋಷದಿಂದ ಇಬ್ಬರಾಗಿ ತೋರಬಹುದು. ಹೀಗೆಯೇ ಒಂದೇ ಬ್ರಹ್ಮವು ಹೆಸರು, ಪದಾರ್ಥ-ಎಂಬ ಎರಡು ರೂಪದಿಂದ ತೋರುತ್ತಿರುವದು, ಬ್ರಹ್ಮವು ನಾಮರೂಪಗಳಿಲ್ಲದ್ದು-ಎಂದು ತಿಳಿಯುವದೇ ಇವೆರಡರ ಐಕ್ಯಜ್ಞಾನದ ಪ್ರಯೋಜನವು.

4. ಈ ಮಂತ್ರದ ವ್ಯಾಖ್ಯಾನದಲ್ಲಿ ಇದು ಸ್ಪಷ್ಟವಾಗುತ್ತದೆ.

5. "ಅಯಮಾತ್ಮೇತಿ" ಎಂದು ಅ॥ ಪಾಠದಲ್ಲಿ ಹೆಚ್ಚಾಗಿದೆ.

(ಭಾಷ್ಯಾರ್ಥ)

"ಇದೆಲ್ಲವೂ ಬ್ರಹ್ಮವು" ಎಲ್ಲವೂ ಎಂದರೆ ಓಂಕಾರವೇ ಎಂದು ಹೇಳಿತ್ತಲ್ಲ, ಆ ಇದು ಬ್ರಹ್ಮವು. ಪರೋಕ್ಷವಾಗಿ ಹೇಳಿರುವ ಆ ಬ್ರಹ್ಮವನ್ನು "ಈ ಆತ್ಮನು ಬ್ರಹ್ಮವು" ಎಂದು ಪ್ರತ್ಯಕ್ಷವಾಗಿ[1] ಗೊತ್ತಾಗಿ ತಿಳಿಸಿಕೊಟ್ಟಿರುತ್ತದೆ. ಈ (ಆತ್ಮನು) ನಾಲ್ಕು ಪಾದಗಳುಳ್ಳವನೆಂದು (ಮುಂದಿನ ವಾಕ್ಯಗಳಲ್ಲಿ) ವಿಂಗಡಿಸಿರುವ (ಆತ್ಮನು ನಮ್ಮ) ಒಳಗಿನ ಆತ್ಮನೇ ಎಂದು ಅಭಿನಯದಿಂದ ತೋರಿಸಿರುತ್ತದೆ.

## ಆತ್ಮನಿಗೆ ನಾಲ್ಕು ಪಾದಗಳು

(ಭಾಷ್ಯ)

೯. ಸೋಽಯಮ್ ಆತ್ಮಾ ಓಂಕಾರಾಭಿಧೇಯಃ ಪರಾಪರತ್ವೇನ ವ್ಯವಸ್ಥಿತಃ ಚತುಷ್ಪಾತ್ ಕಾರ್ಷಾಪಣವತ್ ನ ಗೌರಿವ[2] । ತ್ರಯಾಣಾಂ ವಿಶ್ವಾದೀನಾಂ ಪೂರ್ವಪೂರ್ವಪ್ರವಿಲಾಪನೇನ ತುರೀಯಸ್ಯ ಪ್ರತಿಪತ್ತಿಃ ಇತಿ ಕರಣಸಾಧನಃ ಪಾದಶಬ್ದಃ । ತುರೀಯಸ್ಯ ಪದ್ಯತೇ ಇತಿ ಕರ್ಮಸಾಧನಃ ಪಾದಶಬ್ದಃ ॥

(ಭಾಷ್ಯಾರ್ಥ)

ಓಂಕಾರಕ್ಕೆ ಅಭಿಧೇಯನಾಗಿರುವ, ಪರ (ಬ್ರಹ್ಮವೂ) ಅಪರಬ್ರಹ್ಮವೂ ಆಗಿರುವ ಆ ಈ ಆತ್ಮನು ನಾಲ್ಕು ಪಾದಗಳುಳ್ಳವನು; **ಕಾರ್ಷಾಪಣ**ದಂತೆ[3] (ನಾಲ್ಕು ಪಾದಗಳುಳ್ಳವನು), ಗೋವಿನಂತೆ (ನಾಲ್ಕು ಕಾಲುಗಳುಳ್ಳ) ವನಲ್ಲ.[4] (ಮುಂದಿನ ಮಂತ್ರಗಳಲ್ಲಿ ಹೇಳಿರುವ) **ವಿಶ್ವನೇ** ಮೊದಲಾದವರಲ್ಲಿ ಹಿಂದುಹಿಂದಿನದನ್ನು ಮುಂದುಮುಂದಿನ ಪಾದಗಳಲ್ಲಿ ಪ್ರವಿಲಯಮಾಡುವದರಿಂದ[5] **ತುರೀಯನ** ಅರಿವು ಆಗುತ್ತದೆ

---

1. ಬ್ರಹ್ಮವೆಂದು ಪರೋಕ್ಷವಾಗಿ ಹೇಳಿದ್ದನ್ನು ಈ ಆತ್ಮನು ಎಂದು ಪ್ರತ್ಯಕ್ಷವಾಗಿ ಹೇಳಿದೆ.

2. 'ಗೌರಿವೇತಿ' ಅ॥

3. ಕಾರ್ಷಾಪಣವೆಂಬುದು ಒಂದು ದೇಶದಲ್ಲಿ ಚಲಾವಣೆಯಲ್ಲಿದ್ದ ಹದಿನಾರು ಹಣಗಳ ಬೆಲೆಯ ಚಿನ್ನದ ನಾಣ್ಯವು. ಅದು ಬಹಳ ಬೆಲೆಯುಳ್ಳದ್ದಾದ್ದರಿಂದ ಅದನ್ನು ಎಲ್ಲರೂ ಬಳಸುವದಕ್ಕೆ ಆಗುತ್ತಿರಲಿಲ್ಲವಾದ್ದರಿಂದ ರೂಪಾಯಿಯನ್ನು ಪಾವಲಿಗಳಾಗಿ ವಿಂಗಡಿಸಿರುವಂತೆ ನಾಲ್ಕುಪಾದಗಳಾಗಿ ವಿಭಾಗಿಸಿಕೊಂಡು ವ್ಯವಹರಿಸುತ್ತಿದ್ದರು, ಹೀಗೆಯೇ ಆತ್ಮನನ್ನು ವಿಶ್ವನೇ ಮುಂತಾದ ರೀತಿಯಲ್ಲಿ ಜಾಗ್ರದಾದಿಗಳಲ್ಲಿ ವ್ಯವಹರಿಸುತ್ತಾರೆಂದು ಭಾವ. ಆದರೆ ವಿಶ್ವನೇ ಮೊದಲಾದವರು ಆತ್ಮನ ನಾಲ್ಕನೆಯ ಒಂದು ಭಾಗವೆಂದೇನೂ ಅಭಿಪ್ರಾಯವಿಲ್ಲ.

4. ಆತ್ಮನಿಗೆ ಗೋವಿನಂತೆ ಅವಯವಗಳಿಲ್ಲ.

5. ಒಂದನ್ನು ಮತ್ತೊಂದೆಂದೇ ಅರಿತು ಅದರಲ್ಲಿ ಅಡಕಮಾಡುವದರಿಂದ; ಈ ಪ್ರಕಾರವು ಮುಂದೆ ವಿಶದವಾಗುವದು.

ಯಾದ್ದರಿಂದ (ಅವುಗಳನ್ನು ಹೇಳುವ) ಪಾದಶಬ್ದವು ಕರಣಾರ್ಥದಲ್ಲಿ[1] ಬಂದಿರುತ್ತದೆ. ತುರೀಯನನ್ನು (ಹೇಳುವ) ಪಾದಶಬ್ದವು ("ಪದ್ಯತೇ ಇತಿ") ಪಡೆಯಲ್ಪಡುತ್ತಾನಾದ್ದರಿಂದ (ಪಾದವು) ಎಂದು ಕರ್ಮಾರ್ಥದಲ್ಲಿ ಬಂದಿರುತ್ತದೆ.

## ವೈಶ್ವಾನರನೆಂಬ ಮೊದಲನೆಯ ಪಾದ

(ಭಾಷ್ಯ)

೧೦. ಕಥಂ ಚತುಷ್ಪಾತ್ತ್ವಮ್ ಇತಿ? ಆಹ—

(ಭಾಷ್ಯಾರ್ಥ)

ನಾಲ್ಕುಪಾದಗಳುಳ್ಳವನೆಂಬುದು ಹೇಗೆ? ಎಂದರೆ (ಶ್ರುತಿ) ಹೇಳುತ್ತದೆ :—

**ಜಾಗರಿತಸ್ಥಾನೋ ಬಹಿಷ್ಪ್ರಜ್ಞಃ ಸಪ್ತಾಙ್ಗ ಏಕೋನವಿಂಶತಿಮುಖಃ ಸ್ಥೂಲಭುಗ್ ವೈಶ್ವಾನರಃ ಪ್ರಥಮಃ ಪಾದಃ ॥ ೩ ॥**

೩. ಎಚ್ಚರವೆಂಬ ಸ್ಥಾನವುಳ್ಳ, ಹೊರಗಿನ ಪ್ರಜ್ಞೆಯುಳ್ಳ, ಸಪ್ತಾಂಗನಾದ, ಹತ್ತೊಂಬತ್ತು ಮುಖಗಳ, ಸ್ಥೂಲಭೋಗಿಯಾದ, ವೈಶ್ವಾನರನು ಮೊದಲನೆಯ ಪಾದವು.

(ಭಾಷ್ಯ)

೧೧. ಜಾಗರಿತಂ ಸ್ಥಾನಮ್ ಅಸ್ಯ ಇತಿ ಜಾಗರಿತಸ್ಥಾನಃ । ಬಹಿಷ್ಪ್ರಜ್ಞೋ (ಬಹಿಃ)[2] ಸ್ವಾತ್ಮವ್ಯತಿರಿಕ್ತೇ ವಿಷಯೇ ಪ್ರಜ್ಞಾ ಯಸ್ಯ ಸಃ ಬಹಿಷ್ಪ್ರಜ್ಞಃ । ಬಹಿರ್ವಿಷಯಾ ಇವ ಪ್ರಜ್ಞಾ ಅವಿದ್ಯಾಕೃತಾ ಅವಭಾಸತೇ ಇತ್ಯರ್ಥಃ । ತಥಾ ಸಪ್ತ ಅಙ್ಗಾನಿ ಅಸ್ಯ । "ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಶ್ಚಕ್ಷುರ್ವಿಶ್ವರೂಪಃ ಪ್ರಾಣಃ ಪೃಥಗ್ವರ್ತ್ಮಾತ್ಮಾ ಸನ್ದೇಹೋ ಬಹುಲೋ ಬಸ್ತಿರೇವ ರಯಿಃ ಪೃಥಿವ್ಯೇವ ಪಾದೌ" (ಛಾಂ ೫-೧೮-೨) ಇತ್ಯಗ್ನಿಹೋತ್ರಕಲ್ಪನಾ

---

1. ತುರೀಯನು ನಿಜವಾದ ಆತ್ಮನು; ಅವನನ್ನು ಪಡೆಯುವದಕ್ಕೆ ವಿಶ್ವಾದಿಗಳು ಸಾಧನ. ಆದ್ದರಿಂದ ಪದ್ಯತೇ ಅನೇನ ಇತಿ ಪಾದಃ ಎಂದು ಕರಣಾರ್ಥದಲ್ಲಿ ಪಾದಶಬ್ದವು ಅವನಿಗೆ ಸಲ್ಲುತ್ತದೆ.

2. "ಬಹಿಷ್ಪ್ರಜ್ಞಃ" ಎಂಬ ಮಾತು ಬೇಕಿಲ್ಲ; ಬಹಿಃ ಎಂಬುದಕ್ಕೇ ಸ್ವಾತ್ಮವ್ಯತಿರಿಕ್ತೇ ವಿಷಯೇ ಎಂಬುದು ವ್ಯಾಖ್ಯಾನ.

ಶೇಷತ್ವೇನ[1] ಆಹವನೀಯೋಽಗ್ನಿಃ ಅಸ್ಯ ಮುಖತ್ವೇನೋಕ್ತಃ[2] ಇತ್ಯೇವಂ ಸಪ್ತ ಅಙ್ಗಾನಿ ಯಸ್ಯ ಸಃ ಸಪ್ತಾಙ್ಗಃ । ತಥಾ ಏಕೋನವಿಂಶತಿಃ ಮುಖಾನಿ ಅಸ್ಯ । ಬುದ್ಧೀನ್ದ್ರಿಯಾಣಿ ಕರ್ಮೇನ್ದ್ರಿಯಾಣಿ ಚ ದಶ । ವಾಯವಶ್ಚ ಪ್ರಾಣಾದಯಃ ಪಞ್ಚ । ಮನಃ, ಬುದ್ಧಿಃ; ಅಹಂಕಾರಃ, ಚಿತ್ತಮ್-ಇತಿ ಮುಖಾನೀವ ಮುಖಾನಿ ತಾನಿ । ಉಪಲಬ್ಧಿದ್ವಾರಾಣಿ ಇತ್ಯರ್ಥಃ । ಸ ಏವಂವಿಶಿಷ್ಟಃ ವೈಶ್ವಾನರಃ ಯಥೋಕ್ತೈಃ ದ್ವಾರೈಃ ಶಬ್ದಾದೀನ್ ಸ್ಥೂಲಾನ್ ವಿಷಯಾನ್ ಭುಙ್ಕ್ತೇ ಇತಿ ಸ್ಥೂಲಭುಕ್ । ವಿಶ್ವೇಷಾಂ ನರಾಣಾಮ್ ಅನೇಕಧಾ ನಯನಾತ್[3] ವೈಶ್ವಾನರಃ । ಯದ್ ವಾ ವಿಶ್ವಶ್ಚ ಅಸೌ ನರಶ್ಚ ಇತಿ ವಿಶ್ವಾನರಃ । ವಿಶ್ವಾನರ ಏವ ವೈಶ್ವಾನರಃ । ಸರ್ವಪಿಣ್ಡಾತ್ಮಾನನ್ಯತ್ವಾತ್। ಸ ಪ್ರಥಮಃ ಪಾದಃ । ಏತತ್ಪೂರ್ವಕತ್ವಾತ್ ಉತ್ತರಪಾದಾಧಿಗಮಸ್ಯ ಪ್ರಾಥಮ್ಯಮ್ ಅಸ್ಯ ॥

(ಭಾಷ್ಯಾರ್ಥ)

ಎಚ್ಚರವು ಇವನಿಗೆ ಸ್ಥಾನವಾಗಿರುವದರಿಂದ[4] ಇವನು ಜಾಗರಿತಸ್ಥಾನನೆನಿಸಿಕೊಂಡಿರುತ್ತಾನೆ. ಹೊರಗೆ ಎಂದರೆ ತನಗಿಂತ ಬೇರೆಯಾಗಿರುವ ವಿಷಯದಲ್ಲಿ ಅರಿವು ಉಳ್ಳವನಾದ್ದರಿಂದ ಇವನು ಬಹಿಷ್ಪ್ರಜ್ಞನು. ಅವಿದ್ಯೆಯಿಂದಾಗಿರುವ ಅರಿವು ಇವನಿಗೆ ಹೊರಗಡೆ ವಿಷಯಗಳನ್ನು (ಬೆಳಗುವಂತೆ) ತೋರುತ್ತಿರುವದು ಎಂದರ್ಥ. ಇದರಂತೆ ಇವನಿಗೆ ಏಳು ಅಂಗಗಳು. "ಆ ಈ ವೈಶ್ವಾನರನೆಂಬ ಆತ್ಮನಿಗೆ ಅಂತರಿಕ್ಷವೇ ತಲೆಯು. ನಾನಾರೂಪನಾದ ಸೂರ್ಯನು ಕಣ್ಣು, ಬೇರೆಬೇರೆ ದಿಕ್ಕುಗಳಲ್ಲಿ ಸಂಚರಿಸುವ ವಾಯುವು ಪ್ರಾಣವು, ವ್ಯಾಪಕವಾದ ಆಕಾಶವು ಸೊಂಟವು, ನೀರು ಮೂತ್ರಸ್ಥಾನವು, ಭೂಮಿಯು ಪಾದಗಳು" (ಛಾಂ. ೫-೧೮-೨) ಎಂದು (ಹೇಳಿದ ಬಳಿಕ ವೈಶ್ವಾನರೋಪಾಸಕನಿಗೆ ಭೋಜನವನ್ನು) ಅಗ್ನಿಹೋತ್ರವೆಂದು ಕಲ್ಪಿಸುವಾಗ ಆಹವನೀಯಾಗ್ನಿಯನ್ನು (ವೈಶ್ವಾನರನ) ಮುಖವೆಂದು ಹೇಳಿರುತ್ತದೆ.[5] ಹೀಗೆ

---

1. "ಅಗ್ನಿಹೋತ್ರಾಹುತಿಕಲ್ಪನಾಶೇಷತ್ವೇನ" ಎಂಬ ವಾ॥ ಪಾಠಕ್ಕಿಂತ ಇದು ಮೇಲು.

2. "ಅಗ್ನಿರ್ಮುಖತ್ವೇನ ಆಹವನೀಯ ಉಕ್ತಃ" ವಾ॥.

3. 'ಸುಖಾದಿನಯನಾತ್' ವಾ॥

4. ಅವಸ್ಥೆಯಾಗಿರುವದರಿಂದ.

5 ಉಪಾಸಕನು ಸರ್ವಾತ್ಮನಾಗಿ ಅನ್ನವನ್ನು ತಿನ್ನುತ್ತಾನೆ. ವೈಶ್ವಾನರವಿದ್ಯೆಗೆ ಅಂಗವಾದ ಪ್ರಾಣಾಗ್ನಿಹೋತ್ರವನ್ನು ಹೇಳುವದಕ್ಕೆ ಹೊರಟು ಅವನ ಎದೆಯೇ ವೇದಿ, ಲೋಮಗಳೇ ದರ್ಭೆಗಳು, ಹೃದಯವು ಗಾರ್ಹಪತ್ಯವು, ಮನಸ್ಸು ಅನ್ವಾಹಾರ್ಯಪಚನವು, ಆಸ್ಯವು ಆಹವನೀಯವು ಎಂದು ಶ್ರುತಿಯಲ್ಲಿ ಹೇಳಿದೆ.

ಏಳು ಅಂಗಗಳುಳ್ಳವನಾದ್ದರಿಂದ ಇವನು ಸಪ್ತಾಂಗನು.[1] ಇದರಂತೆ ಇವನಿಗೆ ಹತ್ತೊಂಬತ್ತು ಮುಖಗಳು. ಬುದ್ಧೀಂದ್ರಿಯಗಳೂ ಕರ್ಮೇಂದ್ರಿಯಗಳೂ (ಸೇರಿ) ಹತ್ತು; ಪ್ರಾಣವೇ ಮುಂತಾದ[2] (ವಾಯುಗಳು) ಐದು; ಮನಸ್ಸು, ಬುದ್ಧಿ, ಅಹಂಕಾರ, ಚಿತ್ತ[3]–ಈ (ಹತ್ತೊಂಬತ್ತು) ಮುಖಗಳಂತಿರುವದರಿಂದ ಮುಖಗಳು. ಅವು ಅರಿಯುವಿಕೆಗೆ ದ್ವಾರಗಳು ಎಂದರ್ಥ. ಈ ವಿಶೇಷಣಗಳಿಂದೊಡಗೂಡಿದ ಆ ವೈಶ್ವಾನರನು ಮೇಲೆ ಹೇಳಿದ ದ್ವಾರಗಳಿಂದ ಶಬ್ದಾದಿಗಳೆಂಬ ಸ್ಥೂಲವಿಷಯಗಳನ್ನು ಭೋಗಿಸುತ್ತಾನಾದ್ದರಿಂದ (ಅವನನ್ನು) "ಸ್ಥೂಲಭುಕ್" (ಎಂದಿದೆ). ವಿಶ್ವ (ಎಲ್ಲಾ) ನರರನ್ನೂ ಬೇರೆಬೇರೆಯ ಪ್ರಕಾರವಾಗಿ (ಫಲಭೋಗಕ್ಕೆ) ಕರೆದೊಯ್ಯುವದರಿಂದ[4] **ವೈಶ್ವಾನರನು.** ಅಥವಾ ವಿಶ್ವನೂ ನರನೂ (ಎಲ್ಲಾ ಜೀವರೂ) ಆಗಿರುವದರಿಂದ (ಇವನು) ವಿಶ್ವಾನರನು; ವಿಶ್ವಾನರನೇ **ವೈಶ್ವಾನರನು** (ಎಂದು ಸ್ವಾರ್ಥದಲ್ಲಿ ತದ್ಧಿತಪ್ರತ್ಯಯವು ಬಂದಿದೆ ಎಂದಾದರೂ ಈ ಶಬ್ದದ ವ್ಯುತ್ಪತ್ತಿಯನ್ನು ವಿವರಿಸಬಹುದು).[5] ಏಕೆಂದರೆ ಎಲ್ಲಾ ಶಾರೀರಾತ್ಮರೂ ತಾನೇ ಆಗಿರುತ್ತಾನೆ.

ಈತನು ಮೊದಲನೆಯ ಪಾದವು; ಮುಂದಿನ ಪಾದವನ್ನು ಅರಿತುಕೊಳ್ಳುವದಕ್ಕೆ ಇವನನ್ನು ಮೊದಲು ತಿಳಿಯಬೇಕಾಗುವದರಿಂದ ಇವನನ್ನು ಮೊದಲನೆಯವನು ಎಂದಿದೆ.[6]

---

1. ವೈಶ್ವಾನರವಿದ್ಯೆಯು ಉಪಾಸನೆಯಾದರೂ ಇಲ್ಲಿ ಹೇಳಿರುವ ಸಪ್ತಾಂಗತ್ವವು ವೈಶ್ವಾನರನ ಧರ್ಮವೇ ಆಗಿರುತ್ತದೆ. ಇದನ್ನು ಮುಂದೆ ಭಾಷ್ಯದಲ್ಲಿ ಸ್ಪಷ್ಟಪಡಿಸಿರುತ್ತದೆ

2. ಪ್ರಾಣ, ಅಪಾನ–ಮುಂತಾದ ವೃತ್ತಿಗಳಿಂದ ಆಧ್ಯಾತ್ಮವಾಯು ಐದು ಬಗೆ.

3. ಯೋಚಿಸುವದು (ಮನನ), ಅರಿತುಕೊಳ್ಳುವದು (ಬುದ್ಧಿ), ಅಭಿಮಾನಿಸುವದು (ಅಹಂಕಾರ), ಸಾಮಾನ್ಯವಾಗಿ ಅರಿಯುವದು (ಚೇತನ)–ಎಂಬ ವೃತ್ತಿಗಳಿಂದ ಅಂತಃಕರಣವು ನಾಲ್ಕು ಬಗೆ. ಸೂ. ಭಾ. ೨ ೪–೬೨.

4. ಅವರವರ ಪುಣ್ಯಪಾಪಗಳಿಗೆ ತಕ್ಕಂತೆ ಅವರವರನ್ನು ಫಲಭಾಗಿಗಳನ್ನಾಗಿ ಮಾಡುವದರಿಂದ ಎಂದರ್ಥ. ಛಾಂ. ಭಾ. ೫–೧೪–೧.

5. ಇಲ್ಲಿ ಕೊಟ್ಟಿರುವ ಎರಡರ್ಥಗಳಿಂದಲೂ ವಿಶ್ವ ಅಥವಾ ವೈಶ್ವಾನರ–ಎಂಬ ಶಬ್ದಗಳು ಸಮಷ್ಟಿಯಾದ ವೈಶ್ವಾನರ ಅಥವಾ ವಿರಾಟ್ಪುರುಷನನ್ನೇ ತಿಳಿಸುವವೆಂಬುದು ಸ್ಪಷ್ಟವಾಗಿದೆ. ವಿಶ್ವನೆಂದರೆ ಜಾಗ್ರದಭಿಮಾನಿಯಾದ ವ್ಯಷ್ಟಿಜೀವನೆಂದು ಅರ್ವಾಚೀನವೇದಾಂತಿಗಳು ಇಟ್ಟುಕೊಂಡಿರುವ ಪರಿಭಾಷೆಗೆ ಭಾಷ್ಯದ ಆಧಾರವು ಕಾಣುವದಿಲ್ಲ. ಪೀಠಿಕೆಯನ್ನು ನೋಡಿ.

6. ಇವನೇ ಮೊದಲು ಉಂಟಾದವನು ಎಂಬ ಅಭಿಪ್ರಾಯದಿಂದಲ್ಲ.

# ಆತ್ಮನ ಪಾದಗಳು ಸಮಷ್ಟ್ಯುಪಾಧಿಯಿಂದ ಕೂಡಿವೆ.

(ಭಾಷ್ಯ)

೧೨. ಕಥಮ್ "ಅಯಮಾತ್ಮಾ ಬ್ರಹ್ಮ" ಇತಿ ಪ್ರತ್ಯಗಾತ್ಮನಃ ಅಸ್ಯ ಚತುಷ್ಪಾತ್ತ್ವೇ ಪ್ರಕೃತೇ ದ್ಯುಲೋಕಾದೀನಾಂ ಮೂರ್ಧಾದ್ಯಙ್ಗತ್ವಮ್ ಇತಿ? । ನೈಷ ದೋಷಃ । ಸರ್ವಸ್ಯ ಪ್ರಪಞ್ಚಸ್ಯ ಸಾಧಿದೈವಿಕಸ್ಯ ಅನೇನ ಆತ್ಮನಾ ಚತುಷ್ಪಾತ್ತ್ವಸ್ಯ ವಿವಕ್ಷಿತತ್ವಾತ್ । ಏವಂ ಚ ಸತಿ ಸರ್ವಪ್ರಪಞ್ಚೋಪಶಮೇ ಅದ್ವೈತಸಿದ್ಧಿಃ । ಸರ್ವಭೂತಸ್ಥಶ್ಚ ಆತ್ಮಾ ಏಕೋ ದೃಷ್ಟಃ ಸ್ಯಾತ್ ಸರ್ವಭೂತಾನಿ ಚ ಆತ್ಮನಿ । "ಯಸ್ತು ಸರ್ವಾಣಿ ಭೂತಾನಿ" (ಈ. ೬) ಇತ್ಯಾದಿಶ್ರುತ್ಯರ್ಥಃ ಉಪಸಂಹೃತಶ್ಚ ಏವಂ ಸ್ಯಾತ್ । ಅನ್ಯಥಾ ಹಿ ಸ್ವದೇಹಪರಿಚ್ಛಿನ್ನ ಏವ ಪ್ರತ್ಯಗಾತ್ಮಾ ಸಾಙ್ಖ್ಯಾದಿಭಿರಿವ ದೃಷ್ಟಃ ಸ್ಯಾತ್ । ತಥಾ ಚ ಸತಿ ಅದ್ವೈತಮ್ ಇತಿ ಶ್ರುತಿಕೃತೋ ವಿಶೇಷೋ ನ ಸ್ಯಾತ್ । ಸಾಙ್ಖ್ಯಾದಿದರ್ಶನೇನ ಅವಿಶೇಷಾತ್ । ಇಷ್ಯತೇ ಚ ಸರ್ವೋಪನಿಷದಾಂ ಸರ್ವಾತ್ಮೈಕ್ಯಪ್ರತಿಪಾದಕತ್ವಮ್ । ಅತಃ ಯುಕ್ತಮೇವ ಅಸ್ಯ ಆಧ್ಯಾತ್ಮಿಕಸ್ಯ ಪಿಣ್ಡಾತ್ಮನಃ ದ್ಯುಲೋಕಾದ್ಯಙ್ಗತ್ವೇನ ವಿರಾಡಾತ್ಮನಾ ಆಧಿದೈವಿಕೇನ ಏಕತ್ವಮ್ ಅಭಿಪ್ರೇತ್ಯ ಸಪ್ತಾಙ್ಗತ್ವವಚನಮ್ । "ಮೂರ್ಧಾ ತೇ ವ್ಯಪತಿಷ್ಯತ್" (ಛಾಂ. ೫-೧೨-೨) ಇತ್ಯಾದಿಲಿಙ್ಗದರ್ಶನಾಚ್ಚ ॥

(ಭಾಷ್ಯಾರ್ಥ)

(ಆಕ್ಷೇಪ):—"ಈ ಆತ್ಮನು ಬ್ರಹ್ಮ" (ಮಂ. ೨) ಎಂದು **ಪ್ರತ್ಯಗಾತ್ಮನಿಗೆ**[1] ನಾಲ್ಕು ಪಾದಗಳಿರುವವೆಂಬುದು ಪ್ರಕೃತವಾಗಿರುವಲ್ಲಿ ಅಂತರಿಕ್ಷಲೋಕವೇ ಮುಂತಾದವು (ಇವನ) ತಲೆಯೇ ಮುಂತಾದ ಅವಯುವಗಳು ಎಂದು (ಹೇಳಿರುವದು) ಹೇಗೆ (ಸರಿ)?

(ಪರಿಹಾರ):—ಇದು ತಪ್ಪಲ್ಲ. ಅಧಿದೈವಿಕದೊಡಗೂಡಿರುವ[2] ಸರ್ವ ಪ್ರಪಂಚವೂ ಈ ಆತ್ಮನೊಡನೆ (ಸೇರಿ) ಆತ್ಮನ ನಾಲ್ಕುಪಾದಗಳು[3] ಎಂದು ಶ್ರುತಿಯ ಅಭಿಪ್ರಾಯ. ಹೀಗಾದರೆ ಪ್ರಪಂಚವೆಲ್ಲವೂ ಲಯವಾದರೆ[4] ಅದ್ವೈತವು

1. ನಮ್ಮೊಳಗಿನ, ನಮ್ಮ ಶರೀರದೊಳಗಿರುವ, ಆತ್ಮನು ಬ್ರಹ್ಮವು ಎಂಬುದು ಪ್ರಕೃತ. ಇವನಿಗೆ ದ್ಯುಲೋಕವು ತಲೆ ಎಂದು ಮುಂತಾಗಿ ಹೇಳಿದ್ದು ಹೇಗೆ ?–ಎಂದು ಆಕ್ಷೇಪ.

2. ಸೂರ್ಯ, ಚಂದ್ರ, ನಕ್ಷತ್ರ–ಮುಂತಾದ ದ್ಯುಲೋಕದ ವಿಷಯವಾದದ್ದು ಅಧಿದೈವಿಕ.

3. ಇಲ್ಲಿ ಕೊಟ್ಟಿರುವದು ವಾಕ್ಯದ ಒಟ್ಟರ್ಥ. ಈಗ ಇರುವಂತೆ ಅನ್ವಯಿಸಿದರೆ ಪ್ರಪಂಚಕ್ಕೇ ಚತುಷ್ಪಾತ್ತ್ವವನ್ನು ಹೇಳಿದಂತೆ ಆಗುವದೆಂದು ತೋರುತ್ತದೆ; ಇದನ್ನು ಹೇಗೆ ಅನ್ವಯಿಸಬೇಕೆಂಬುದನ್ನು ವಿದ್ವಾಂಸರು ನಿರ್ಣಯಿಸಬೇಕಾಗಿವೆ.

4. ಜ್ಞಾನದಿಂದ ಬಾಧಿತವಾದರೆ.

ಸಿದ್ಧವಾಗುವದು; ಸರ್ವಭೂತಗಳಲ್ಲಿಯೂ ಇರುವ ಒಬ್ಬ ಆತ್ಮನನ್ನೇ ಕಂಡುಕೊಂಡಂತೆಯೂ ಸರ್ವಭೂತಗಳನ್ನೂ ಆತ್ಮನಲ್ಲಿ ಕಂಡುಕೊಂಡಂತೆಯೂ ಆಗುವದು. ಹಾಗಾದರೆ "ಯಸ್ತು ಸರ್ವಾಣಿ ಭೂತಾನಿ" (ಯಾವನು ಸರ್ವಭೂತಗಳನ್ನೂ ಆತ್ಮನಲ್ಲಿಯೇ ಕಂಡುಕೊಳ್ಳುವನೋ, ಈ. ೬) ಎಂಬುದೇ ಮುಂತಾದ ಶ್ರುತಿಯ ಅರ್ಥವನ್ನು ಇಲ್ಲಿಯೂ ಸೇರಿಸಿಕೊಂಡಂತೆ ಆಗುವದು. ಹೀಗಲ್ಲದೆ ಹೋದರೆ ತನ್ನ ದೇಹದಳತೆಗೆ ಸಿಕ್ಕಿರುವ ಪ್ರತ್ಯಗಾತ್ಮನನ್ನೇ **ಸಾಂಖ್ಯಾದಿಗಳಂತೆ**[1] ಕಂಡುಕೊಂಡಂತೆ ಆಗುತ್ತದೆ; ಆ ಪಕ್ಷದಲ್ಲಿ ಅದ್ವೈತವೆಂದು ಶ್ರುತಿಯಲ್ಲಿ ಏರ್ಪಟ್ಟಿರುವ (ಸಿದ್ಧಾಂತ) ವಿಶೇಷವು ಇಲ್ಲದೆ ಹೋಗುವದು. ಏಕೆಂದರೆ ಆಗ (ಈ ಮತಕ್ಕೂ) ಸಾಂಖ್ಯರೇ ಮೊದಲಾದವರ (ಮತಕ್ಕೂ) ಹೆಚ್ಚುಕಡಿಮೆಯೇನೂ ಇರುವದಿಲ್ಲ[2]. **ಉಪನಿಷತ್ತುಗಳೆಲ್ಲವೂ ಎಲ್ಲರ ಆತ್ಮನೂ ಒಬ್ಬನೇ ಎಂದು ಹೇಳುವವೆಂಬುದು (ನಮಗೆಲ್ಲ) ಒಪ್ಪಿಗೆಯಾಗಿರುತ್ತದೆ**[3]. ಆದ್ದರಿಂದ ಆಧ್ಯಾತ್ಮಿಕನಾದ ಶರೀರಾತ್ಮನು ದ್ಯುಲೋಕಾದಿಯಾದ ಅವಯವಗಳುಳ್ಳವನೆಂದು ಆಧಿದೈವಿಕನಾದ **ವಿರಾಡಾತ್ಮನಿಗೂ** (ಇವನಿಗೂ) ಏಕತ್ವವನ್ನು (ಹೇಳುವ) ಅಭಿಪ್ರಾಯದಿಂದ (ಈ ಆತ್ಮನು) ಸಪ್ತಾಂಗವುಳ್ಳವನು. ಎಂದು ಹೇಳಿರುವದು ಸರಿಯೇ. "ನಿನ್ನ ತಲೆಯು ಬಿದ್ದು ಬಿಡುತ್ತಿತ್ತು" (ಛಾಂ ೫-೧೨-೨) ಎಂದು ಮುಂತಾದ **ಲಿಂಗ**ವಿರುವದು ಕಾಣಬರುವದರಿಂದಲೂ (ಇದು ಸರಿಯೇ ಆಗಿರುತ್ತದೆ)[1].

---

1. ಸಾಂಖ್ಯರೇ ಮೊದಲಾದವರು ಒಂದೊಂದು ದೇಹಕ್ಕೂ ಒಬ್ಬೊಬ್ಬ ಆತ್ಮನು ನಿಜವಾಗಿರುವನೆಂದು ಅಭಿಪ್ರಾಯಪಡುತ್ತಾರೆ.

2. ಪ್ರಪಂಚವು ನಮ್ಮ ಹೊರಗೆ ಇರುವದೆಂದೂ ನಾವು ಅದರಲ್ಲಿ ಎಚ್ಚರವೇ ಮುಂತಾದ ಅವಸ್ಥಾತ್ರಯವನ್ನು ಅನುಭವಿಸುತ್ತಿರುವೆವೆಂದೂ ಇಟ್ಟುಕೊಂಡು ಅವಸ್ಥಾತ್ರಯವನ್ನು ಪರೀಕ್ಷಿಸಿದರೆ ದೇಹಾದ್ವ್ಯತಿರಿಕ್ತನಾದ ಆತ್ಮನ ಸಿದ್ಧಿಯಾದರೂ ಆತ್ಮೈಕತ್ವವು ಸಿದ್ಧಿಸುವದಿಲ್ಲ.

3. ಆದ್ದರಿಂದ ಈ ಉಪನಿಷತ್ತಿನಲ್ಲಿಯೂ ಅದನ್ನೇ ಹೇಳಿದೆಯೆಂಬುದು ಯುಕ್ತ.

4. ಉಪಮನ್ಯುವಿನ ಮಗನಾದ ಪ್ರಾಚೀನಶಾಲನೆಂಬುವನು ದ್ಯುಲೋಕವನ್ನೇ ವೈಶ್ವಾನರನೆಂದು ಉಪಾಸನೆಮಾಡುತ್ತಿದ್ದನು. ಅಶ್ವಪತಿ ಎಂಬ ರಾಜನ ಬಳಿಯಲ್ಲಿ ಜಿಜ್ಞಾಸೆಮಾಡುತ್ತಿರುವಾಗ ಆ ಆಚಾರ್ಯನು ಇದು ವೈಶ್ವಾನರನ ತಲೆಯು; ಇದನ್ನೇ ಪೂರ್ಣವೈಶ್ವಾನರನೆಂದು ಉಪಾಸನೆಮಾಡುತ್ತಾ ಇದ್ದಿದ್ದರೆ, ಪೂರ್ಣವಿದ್ಯೆಯನ್ನು ನನ್ನಿಂದ ಕಲಿತುಕೊಳ್ಳದೆ ಇದ್ದಿದ್ದರೆ, ನಿನ್ನ ತಲೆಯು ಬಿದ್ದುಹೋಗುತ್ತಿತ್ತು–ಎಂದಿದಾನೆ. ಉಪಾಸಕನಿಗೂ ಉಪಾಸ್ಯವಾದ ವೈಶ್ವಾನರನಿಗೂ ಏಕತ್ವವನ್ನು ಹೇಳುವದು ಶ್ರುತಿಯ ಅಭಿಪ್ರಾಯವೆಂದು ಇದರಿಂದ ಸೂಚಿತವಾಗುತ್ತದೆ. ಇದರಂತೆ "ನೀನು ಕುರುಡನಾಗಿ ಬಿಡುತ್ತಿದ್ದೆ" ಛಾಂ. ೫–೧೩–೧) ಮುಂತಾದ ಲಿಂಗ (ಸೂಚನೆ) ಗಳೂ ಇದೇ ಪ್ರಕರಣದಲ್ಲಿ ಕಾಣಬರುತ್ತವೆ.

(ಭಾಷ್ಯ)

೧೩. ವಿರಾಜೈಕತ್ವಮ್ ಉಪಲಕ್ಷಣಾರ್ಥಂ ಹಿರಣ್ಯಗರ್ಭಾವ್ಯಾಕೃತಾತ್ಮನೋಃ। ಉಕ್ತಂ ಚೈತತ್ ಮಧುಬ್ರಾಹ್ಮಣೇ "ಯಶ್ಚಾಯಮಸ್ಯಾಂ ಪೃಥಿವ್ಯಾಂ ತೇಜೋಮಯೋಽಮೃತಮಯಃ ಪುರುಷೋ ಯಶ್ಚಾಯಮಧ್ಯಾತ್ಮಮ್" (ಬೃ. ೨-೫-೧) ಇತ್ಯಾದಿ। ಸುಷುಪ್ತಾವ್ಯಾಕೃತಯೋಸ್ತ್ವೇಕತ್ವಂ ಸಿದ್ಧಮೇವ ನಿರ್ವಿಶೇಷತ್ವಾತ್। ಏವಂ ಚ ಸತಿ ಏತತ್ ಸಿದ್ಧಂ ಭವಿಷ್ಯತಿ ಸರ್ವದ್ವೈತೋಪಶಮೋ ಚ ಅದ್ವೈತಮ್ ಇತಿ॥

(ಭಾಷ್ಯಾರ್ಥ)

(ಎಚ್ಚರದ ಆತ್ಮನೂ) ವಿರಾಡಾತ್ಮನೂ ಒಬ್ಬನೇ ಎಂದು ಹೇಳಿರುವದು ಹಿರಣ್ಯಗರ್ಭ, ಅವ್ಯಾಕೃತ- ಈ ಇಬ್ಬರೊಡನೆ (ಅಧ್ಯಾತ್ಮಾತ್ಮರ ಏಕತ್ವವನ್ನು ಹೇಳುವದಕ್ಕೆ) ಉಪಲಕ್ಷಣವು. ಈ (ಅಭಿಪ್ರಾಯ) ವನ್ನು[1] **ಮಧುಬ್ರಾಹ್ಮಣದಲ್ಲಿ "ಈ ಪೃಥ್ವಿಯಲ್ಲಿ ತೇಜೋಮಯನಾಗಿ,[2] ಅಮೃತಮಯನಾಗಿ[3] ಇರುವ ಯಾವ ಪುರುಷನಿರುವನೋ** ಮತ್ತು ಶರೀರದೊಳಗೆ ಯಾವ (ತೇಜೋಮಯನಾದ, ಅಮೃತಮಯನಾದ ಪುರುಷನು) ಇರುವನೋ (ಇವನೇ ಆ ಆತ್ಮನು)[4]" (ಬೃ ೨-೫-೧) ಎಂದು ಮುಂತಾಗಿ ಹೇಳಿರುತ್ತದೆ ಸುಷುಪ್ತಾತ್ಮನೂ ಅವ್ಯಾಕೃತಾತ್ಮನೂ ಒಬ್ಬನೇ ಎಂಬುದಂತೂ ಸಿದ್ಧವೇ ಆಗಿರುತ್ತದೆ, ಏಕೆಂದರೆ (ಇಬ್ಬರಲ್ಲಿಯೂ) ಯಾವ ವಿಶೇಷವೂ ಇರುವದಿಲ್ಲ. ಹೀಗಿರುವದರಿಂದ ದ್ವೈತವೆಲ್ಲವೂ ಹೋದರೆ[5] ಅದ್ವೈತವಾಗುವದು ಎಂಬುದು ಸಿದ್ಧವಾಗುವದು.

1. ಸೂಕ್ಷ್ಮಶರೀರಾಭಿಮಾನಿಯೂ ಹಿರಣ್ಯಗರ್ಭನೂ ಒಬ್ಬನೇ ಎಂಬದನ್ನು.

2. ಚಿದಾತ್ಮಪ್ರಕಾಶನಾಗಿ.

3. ಸಾವಿಲ್ಲದ ಸ್ವಭಾವದವನಾಗಿ.

4. ಪೃಥಿವಿ, ಶರೀರ-ಇವು ಪರಸ್ಪರವಾಗಿ ಉಪಕಾರಕವಾಗಿರುವದರಿಂದಲೂ, ಲಿಂಗಾತ್ಮನಾದ ಪುರುಷನು ಶರೀರದಲ್ಲಿಯೂ ಹೊರಗೆ ಪೃಥಿವಿಯಲ್ಲಿಯೂ ಇದ್ದು ಭೂತಗಳಿಗೆ ಉಪಕಾರಕನಾಗಿಯೂ ಉಪಕಾರ್ಯನಾಗಿಯೂ ಇರುವದರಿಂದಲೂ ಇವೆಲ್ಲ ಒಂದೇ ಕಾರಣವಾದ ಬ್ರಹ್ಮದಿಂದ ಆಗಿರುತ್ತವೆ-ಎಂಬುದು ಶ್ರುತ್ಯರ್ಥವು. ಹೀಗೆ ಮಿಕ್ಕ ಪರ್ಯಾಯಗಳಲ್ಲಿಯೂ ಈ ಬ್ರಾಹ್ಮಣದಲ್ಲಿ ಹೇಳಿರುತ್ತದೆ. ಬೃ. ಭಾ. ವನ್ನು ನೋಡಿ. ಅಧ್ಯಾತ್ಮನಾದ ಲಿಂಗಾತ್ಮನಿಗೂ ಅಧಿಭೂತಾಧಿದೈವನಾಗಿರುವ ಹಿರಣ್ಯಗರ್ಭನಿಗೂ ಐಕ್ಯವು ಇಲ್ಲಿ ಉಕ್ತವಾಗಿದೆ.

5. ಜ್ಞಾನದಿಂದ ಬಾಧಿತವಾದರೆ.

## ತೈಜಸನೆಂಬ ಎರಡನೆಯ ಪಾದ

**ಸ್ವಪ್ನಸ್ಥಾನೋಽನ್ತಃಪ್ರಜ್ಞಃ ಸಪ್ತಾಙ್ಗ ಏಕೋನವಿಂಶತಿಮುಖಃ ಪ್ರವಿವಿಕ್ತಭುಕ್ ತೈಜಸೋ ದ್ವಿತೀಯಃ ಪಾದಃ ॥ ೪ ॥**

೪. ಸ್ವಪ್ನಸ್ಥಾನನಾಗಿಯೂ, ಅನ್ತಃಪ್ರಜ್ಞನಾಗಿಯೂ ಸಪ್ತಾಂಗನಾಗಿಯೂ ಹತ್ತೊಂಬತ್ತುಮುಖವುಳ್ಳವನಾಗಿಯೂ ಪ್ರವಿವಿಕ್ತಭುಕ್ಕಾಗಿಯೂ ಇರುವ ತೈಜಸನು ಎರಡನೆಯ ಪಾದವು.

(ಭಾಷ್ಯ)

೧೪. ಸ್ವಪ್ನಃ ಸ್ಥಾನಮ್ ಅಸ್ಯ ತೈಜಸಸ್ಯ ಇತಿ[1] ಸ್ವಪ್ನಸ್ಥಾನಃ । ಜಾಗ್ರತ್ಪ್ರಜ್ಞಾ ಅನೇಕಸಾಧನಾ ಬಹಿರ್ವಿಷಯೇವ ಅವಭಾಸಮಾನಾ ಮನಃಸ್ಪನ್ದನಮಾತ್ರಾ ಸತೀ ತಥಾಭೂತಂ ಸಂಸ್ಕಾರಂ ಮನಸಿ ಆಧತ್ತೇ । ತನ್ಮನಃ ತಥಾ ಸಂಸ್ಕೃತಂ ಚಿತ್ರಿತ ಇವ ಪಟಃ ಬಾಹ್ಯಸಾಧನಾನಪೇಕ್ಷಮ್ ಅವಿದ್ಯಾಕಾಮಕರ್ಮಭಿಃ ಪ್ರೇರ್ಯಮಾಣಂ ಜಾಗ್ರದ್ವತ್ ಅವಭಾಸತೇ । ತಥಾ ಚೋಕ್ತಮ್ "ಅಸ್ಯ ಲೋಕಸ್ಯ ಸರ್ವಾವತೋ ಮಾತ್ರಾಮ್ ಅಪಾದಾಯ" (ಬೃ. ೪-೩-೯) ಇತಿ। ತಥಾ "ಪರೇ ದೇವೇ ಮನಸ್ಯೇಕೀ ಭವತಿ" (ಪ್ರ. ೪-೨) ಇತಿ ಪ್ರಸ್ತುತ್ಯ "ಅತ್ರೈಷ ದೇವಃ ಸ್ವಪ್ನೇ ಮಹಿಮಾನಮನುಭವತಿ" (ಪ್ರ. ೪-೫) ಇತಿ ಆಥರ್ವಣೇ । ಇನ್ದ್ರಿಯಾಪೇಕ್ಷಯಾ ಅನ್ತಃಸ್ಥತ್ವಾತ್ ಮನಸಃ ತದ್ವಾಸನಾರೂಪಾ ಚ ಸ್ವಪ್ನೇ ಪ್ರಜ್ಞಾ ಯಸ್ಯ[2] (?) ಇತಿ ಅನ್ತಃಪ್ರಜ್ಞಃ । ವಿಷಯಶೂನ್ಯಾಯಾಂ ಪ್ರಜ್ಞಾಯಾಂ ಕೇವಲಪ್ರಕಾಶಸ್ವರೂಪಾಯಾಂ ವಿಷಯಿತ್ವೇನ ಭವತಿ ಇತಿ ತೈಜಸಃ । ವಿಶ್ವಸ್ಯ ಸವಿಷಯತ್ವೇನ ಪ್ರಜ್ಞಾಯಾಃ ಸ್ಥೂಲಾಯಾಃ ಭೋಜ್ಯತ್ವಮ್ । ಇಹ ಪುನಃ ಕೇವಲಾ ವಾಸನಾಮಾತ್ರಾ ಪ್ರಜ್ಞಾ ಭೋಜ್ಯಾ ಇತಿ ಪ್ರವಿವಿಕ್ತೋ ಭೋಗಃ ಇತಿ[3] । ಸಮಾನಮ್ ಅನ್ಯತ್ । ದ್ವಿತೀಯಃ ಪಾದಃ ತೈಜಸಃ ॥

(ಭಾಷ್ಯಾರ್ಥ)

ತೈಜಸನಿಗೆ ಕನಸೇ ಸ್ಥಾನವಾದ್ದರಿಂದ ಇವನು ಸ್ವಪ್ನಸ್ಥಾನನು. ಎಚ್ಚರದ ಅರಿವು ಅನೇಕ ಸಾಧನಗಳಿಂದ[4] ಆಗುವದಾಗಿ ಹೊರಗೆ ವಿಷಯಗಳುಳ್ಳದ್ದಾಗಿರುವಂತೆ

---

1. ವಾ॥ ಕಾ॥ ಪಾಠದಲ್ಲಿ ಮಾತ್ರ ಇದೆ.

2. ಅಸ್ಯ ಎಂದಿರಬೇಕೆಂದು ತೋರುತ್ತದೆ ; ಅಚ್ಚಿನ ಪುಸ್ತಕಗಳಲ್ಲಿ ಯಸ್ಯ ಎಂದೇ ಇರುತ್ತದೆ.

3. ಇಲ್ಲಿ ಈ ಮಾತಿನ ಮುಂದೆ 'ಪ್ರವಿವಿಕ್ತಭುಕ್' ಎಂಬ ಮಾತು ಬಿಟ್ಟುಹೋಗಿರುವಂತೆ ಕಾಣುತ್ತದೆ.

4. ಚಕ್ಷುರಾದಿಯಾದ ಇಂದ್ರಿಯ, ಹೊರಗಿನ ಬೆಳಕು-ಮುಂತಾದದ್ದು.

ತೋರುವ[1] ಬರಿಯ ಮನಸ್ಸಿನ ಅಲುಗಾಟವು ಮಾತ್ರವಾಗಿದ್ದು[2] ಅಂಥ ಸಂಸ್ಕಾರವನ್ನೇ ಮನಸ್ಸಿನಲ್ಲಿ ಉಂಟುಮಾಡುತ್ತದೆ. ಆ ಮನಸ್ಸು ಹಾಗೆ ಸಂಸ್ಕಾರವನ್ನು ಹೊಂದಿ ಚಿತ್ರವನ್ನು ಬರೆದ ಬಟ್ಟೆಯಂತೆ ಹೊರಗಿನ ಸಾಧನಗಳನ್ನು ಬಯಸದೆಯೇ ಅವಿದ್ಯಾ ಕಾಮಕರ್ಮಗಳಿಂದ ಪ್ರೇರಿಸಲ್ಪಟ್ಟು ಎಚ್ಚರದಂತೆಯೇ ತೋರುವದು. ಆದ್ದರಿಂದಲೇ "ಈ ಸರ್ವವನ್ನೂ ಉಳ್ಳ[3] (ಜಾಗ್ರತ್ತೆಂಬ) ಲೋಕದ ಅಂಶವನ್ನು ತೆಗೆದುಕೊಂಡು (ಕನಸನ್ನು ಅನುಭವಿಸುತ್ತಾನೆ)" (ಬೃ. ೪-೩-೯) ಎಂದು ಶ್ರುತಿಯಲ್ಲಿ ಹೇಳಿರುತ್ತದೆ. ಇದರಂತೆ "ಅದೆಲ್ಲವೂ ಪರಮದೇವನಾದ ಮನಸ್ಸಿನಲ್ಲಿ ಒಂದಾಗಿಬಿಡುತ್ತದೆ"[4] (ಪ್ರ. ೪-೨) ಎಂದು ಪ್ರಾರಂಭಿಸಿ "ಇಲ್ಲಿ ಈ ದೇವನು ಮಹಿಮೆಯನ್ನು ಅನುಭವಿಸುತ್ತಾನೆ."[5] (ಪ್ರ. ೪-೫) ಎಂದು **ಆಥರ್ವಣದಲ್ಲಿ** (ಹೇಳಿರುತ್ತದೆ). ಮನಸ್ಸು ಇಂದ್ರಿಯಗಳಿಗಿಂತಲೂ ಒಳಗೆ ಇರುವದರಿಂದ ಅದರ ವಾಸನೆಯ ರೂಪದ ಪ್ರಜ್ಞೆಯು ಕನಸಿನಲ್ಲಿ ಇವನಿಗೆ ಆಗುವದೆಂಬ ಕಾರಣದಿಂದ[6] (ಇವನು) ಅಂತಃಪ್ರಜ್ಞನೆನಿಸಿರುವನು. ವಿಷಯವಿಲ್ಲದೆ ಕೇವಲ ಪ್ರಕಾಶಸ್ವರೂಪವಾದ ಪ್ರಜ್ಞೆಗೆ ವಿಷಯಿಯಾಗಿರುವದರಿಂದ ತೈಜಸನೆಂದು ಹೆಸರು. ವಿಶ್ವನ ಪ್ರಜ್ಞೆಗೆ ವಿಷಯವೂ ಇರುವದರಿಂದ[7] ಸ್ಥೂಲವಾಗಿರುವ (ಪ್ರಜ್ಞೆಯು ಅವನಿಗೆ) ಭೋಜ್ಯವಾಗಿರುತ್ತದೆ: ಆದರೆ ಇಲ್ಲಿ ಕೇವಲ ವಾಸನೆಯ ರೂಪವಾಗಿರುವ ಪ್ರಜ್ಞೆಯು ಭೋಜ್ಯವಾಗಿರುವದರಿಂದ ಭೋಗವು ಬೇರೆಯಾಗಿರುತ್ತದೆಯಾಗಿ (ಪ್ರವಿವಿಕ್ತಭುಕ್ ಎಂದು ಕರೆದಿದೆ). ಉಳಿದದ್ದು[8] (ಹಿಂದಿನ ಪಾದಕ್ಕೂ ಇದಕ್ಕೂ) ಸಮಾನವಾಗಿದೆ. ತೈಜಸನು ಎರಡನೆಯ ಪಾದವು.

---

1. ನಿಜವಾಗಿ ಅಲ್ಲಿಯೂ ವಿಷಯವಿಲ್ಲವೆಂದು ಭಾವ.

2. ಇಲ್ಲಿ ಎಲ್ಲವೂ ಮನಸ್ಸಿನ ಅಲುಗಾಟವೇ ಎಂದು ಹೇಳಿದ್ದರೂ ವಿಜ್ಞಾನವಾದ್ಧವಾಗುವದಿಲ್ಲ. ಟೀಕೆಯನ್ನು ನೋಡಿ.

3. ಸರ್ವಸಾಧನಸಂಪತ್ತೂ ಇರುವ ಜಾಗ್ರತ್ತಿನ ವಾಸನೆಯನ್ನು ತೆಗೆದುಕೊಂಡು.

4. ಇಂದ್ರಿಯಗಳು ವ್ಯಾಪಾರವನ್ನು ಬಿಟ್ಟುಬಿಡುವವು. ಮನಸ್ಸು ಒಂದೇ ಉಳಿಯುವದು ಎಂದರ್ಥ.

5. ವಿಷಯವಿಷಯಿಗಳೆರಡೂ ತಾನೇ ಆಗುವ ಹೆಚ್ಚುಗಾರಿಕೆಯನ್ನು ಮನಸ್ಸು ಪಡೆಯುತ್ತದೆ.

6. ಈ ಪ್ರಕರಣದಲ್ಲಿ ಕನಸು ಜಾಗ್ರತ್ತಿನ ವಾಸನೆ ಎಂಬ ಮತ್ತಿನ ವ್ಯಾವಹಾರಿಕದೃಷ್ಟಿಯನ್ನು ಅವಲಂಬಿಸಿರುತ್ತದೆ. ಕನಸ್ಸಿನಲ್ಲಿ ಕಾಣುವದು ಯಾವದೂ ಎಚ್ಚರದ ಕಾರ್ಯವಲ್ಲವೆಂಬುದನ್ನು ೪-೪೧ ರ ಭಾಷ್ಯದಲ್ಲಿ ಸ್ಪಷ್ಟಪಡಿಸಿದೆ.

7. ಇದೂ ವ್ಯಾವಹಾರಿಕದೃಷ್ಟಿಯಿಂದ, ನಿಜವಾಗಿ ವಿಷಯವಿಲ್ಲದಿದ್ದರೂ ವಿಷಯವಿರುವಂತೆ ತೋರುತ್ತದೆ-ಎಂದು ಈ ಭಾಷ್ಯಭಾಗದಲ್ಲಿಯೇ ಮೇಲೆ ಹೇಳಿದ್ದಾಗಿದೆ.

8. ಸಪ್ತಾಂಗನಾಗಿರುವದು ಮುಂತಾದದ್ದು.

## ಪ್ರಾಜ್ಞನೆಂಬ ಮೂರನೆಯ ಪಾದ

**ಯತ್ರ ಸುಪ್ತೋ ನ ಕಂಚನ ಕಾಮಂ ಕಾಮಯತೇ ನ ಕಂಚನ ಸ್ವಪ್ನಂ ಪಶ್ಯತಿ ತತ್ ಸುಷುಪ್ತಮ್। ಸುಷುಪ್ತಸ್ಥಾನ ಏಕೀಭೂತಃ ಪ್ರಜ್ಞಾನಘನ ಏವಾನನ್ದಮಯೋ ಹ್ಯಾನನ್ದಭುಕ್ ಚೇತೋಮುಖಃ ಪ್ರಾಜ್ಞಸ್ತೃತೀಯಃ ಪಾದಃ ॥ ೫ ॥**

೫. ಎಲ್ಲಿ ನಿದ್ರಿಸುತ್ತಿರುವವನು ಯಾವ ಕಾಮವನ್ನೂ ಬಯಸುವದಿಲ್ಲವೋ ಯಾವ ಕನಸನ್ನೂ ಕಾಣುವದಿಲ್ಲವೋ ಅದು ಸುಷುಪ್ತವು. ಸುಷುಪ್ತಸ್ಥಾನನೂ ಏಕೀಭೂತನೂ ಪ್ರಜ್ಞಾನಘನನೇ ಆದವನೂ ಆನಂದಮಯನೂ ಆನಂದಭೋಗಿಯೂ ಚೇತೋಮುಖನೂ ಆಗಿರುವ ಪ್ರಾಜ್ಞನು ಮೂರನೆಯ ಪಾದವು.

(ಭಾಷ್ಯ)

೧೫. ದರ್ಶನಾದರ್ಶನವೃತ್ತ್ಯೋಃ ತತ್ತ್ವಾಪ್ರತಿಬೋಧಲಕ್ಷಣಸ್ಯ ಸ್ವಾಪಸ್ಯ ತುಲ್ಯತ್ವಾತ್ ಸುಷುಪ್ತಗ್ರಹಣಾರ್ಥಂ "ಯತ್ರ ಸುಪ್ತಃ" ಇತ್ಯಾದಿವಿಶೇಷಣಮ್। ಅಥ ವಾ ತ್ರಿಷ್ವಪಿ ಸ್ಥಾನೇಷು ತತ್ತ್ವಾಪ್ರತಿಬೋಧಲಕ್ಷಣಃ ಸ್ವಾಪಃ ಅವಿಶಿಷ್ಟಃ ಇತಿ ಪೂರ್ವಾಭ್ಯಾಂ ಸುಷುಪ್ತಂ ವಿಭಜತೇ। ಯತ್ರ ಯಸ್ಮಿನ್ ಸ್ಥಾನೇ ಕಾಲೇ ವಾ ಸುಪ್ತಃ ನ ಕಂಚನ ಕಾಮಂ ಕಾಮಯತೇ ನ ಕಞ್ಚನ ಸ್ವಪ್ನಂ ಪಶ್ಯತಿ[1] । ನ ಹಿ ಸುಷುಪ್ತೇ ಪೂರ್ವಯೋರಿವ ಅನ್ಯಥಾಗ್ರಹಣಲಕ್ಷಣಂ ಸ್ವಪ್ನದರ್ಶನಂ ಕಾಮೋ ವಾ ಕಶ್ಚನ ವಿದ್ಯತೇ। (ತತ್ ಸುಷುಪ್ತಮ್)[2] ॥

(ಭಾಷ್ಯಾರ್ಥ)

ನೋಡುವದು, ನೋಡದೆ ಇರುವದು-ಎಂಬ ವೃತ್ತಿಗಳೆರಡರಲ್ಲಿಯೂ[3] ತತ್ತ್ವವನ್ನು ತಿಳಿಯದೆ ಇರುವದೆಂಬ ನಿದ್ರೆಯು[4] ಸಮಾನವಾಗಿರುವದರಿಂದ ಸುಷುಪ್ತ

---

1. ಈ ವಾ॥ ವ್ಯೆ॥ ಪಾಠವು ಉಪನಿಷತ್ತಿನ ಮೂಲಕ್ಕನುಗುಣವಾಗಿರುವದರಿಂದ ಇದನ್ನೇ ಅನುಸರಿಸಿದೆ.

2. ಈ ಎರಡು ಮಾತುಗಳು ಇಲ್ಲಿಯೋ ಅಥವಾ "ಪಶ್ಯತಿ" ಎಂಬ ಮಾತಾದ ಬಳಿಕವೋ ಇರಬೇಕಾಗಿದ್ದು ಬಿಟ್ಟುಹೋಗಿವೆ.

3. ದರ್ಶನವೃತ್ತಿ ಎಂದರೆ ಸ್ವಪ್ನವು; ಅದರ್ಶನವೃತ್ತಿ ಎಂದರೆ ತನಿನಿದ್ರೆ. ದರ್ಶನವೃತ್ತಿ ಎಂದರೆ ಎಚ್ಚರವೆಂಬ ವ್ಯಾಖ್ಯಾನವು ಸರಿಯಲ್ಲ. ಬೃ. ಭಾ. ೪-೩-೧೭, ಛಾಂ. ಭಾ. ೬-೪-೧ ನೋಡಿ. ವೃತ್ತಿ ಎಂದರೆ ಸ್ಥಾನವು, ಅವಸ್ಥೆ; ೨-೯ ನ್ನು ನೋಡಿ. ಕನಸಿನಲ್ಲಿಯೂ, ತನಿನಿದ್ರೆಯಲ್ಲಿಯೂ ಎಚ್ಚರದ ವಸ್ತುಗಳ ಅರಿವಿಲ್ಲ; ಆದರೆ ಕನಸಿನಲ್ಲಿ ಹುಸಿತೋರಿಕೆಗಳ ದರ್ಶನವಿದೆ.

4. ತತ್ತ್ವಾಪ್ರತಿಬೋಧವೆಂದರೆ ವ್ಯಾವಹಾರಿಕವಸ್ತುತತ್ತ್ವವನ್ನರಿಯದಿರುವದು ಎಂದು ಭಾವ.

ವನ್ನೇ ತಿಗೆದುಕೊಳ್ಳಬೇಕೆಂದು (ತಿಳಿಸುವದಕ್ಕೆ) "ಯತ್ರ ಸುಪ್ತಃ" (ಎಲ್ಲಿ ನಿದ್ರಿಸುವವನು) ಎಂದು ಮುಂತಾದ ವಿಶೇಷಣ(ವನ್ನು) ಕೊಟ್ಟಿರುತ್ತದೆ. ಅಥವಾ ಮೂರು **ಸ್ಥಾನಗಳಲ್ಲಿಯೂ ತತ್ತ್ವವನ್ನು ತಿಳಿಯದಿರುವದೆಂಬ ನಿದ್ರೆಯು**[1] ಸಮಾನವಾಗಿದೆಯಾದ್ದರಿಂದ ಮೊದಲನೆಯ ಎರಡು (ಸ್ಥಾನಗಳಿಂದ) ಸುಷುಪ್ತವನ್ನು ವಿಂಗಡಿಸಿ (ಶ್ರುತಿಯು) ಹೇಳುತ್ತಿದೆ :—

**ಎಲ್ಲಿ ಎಂದರೆ ಯಾವ ಸ್ಥಾನದಲ್ಲಿ ಅಥವಾ (ಯಾವ) ಕಾಲದಲ್ಲಿ ನಿದ್ರೆಮಾಡುತ್ತಿರುವವನು ಯಾವ ಕಾಮವನ್ನೂ ಬಯಸುವದಿಲ್ಲವೋ ಯಾವ ಕನಸನ್ನೂ ಕಾಣುವದಿಲ್ಲವೋ (ಅದು ಸುಷುಪ್ತವು ಎಂದರ್ಥ). ಏಕೆಂದರೆ ಸುಷುಪ್ತದಲ್ಲಿ ಮೊದಲನೆಯ ಎರಡು (ಅವಸ್ಥೆಗಳಲ್ಲಿರುವಂತೆ) ತಪ್ಪಾಗಿ ತಿಳಿಯುವದೆಂಬ ಕನಸು ಕಾಣುವದಾಗಲಿ ಬಯಕೆಯಾಗಲಿ ಯಾವದೂ ಇರುವದಿಲ್ಲ.**

(ಭಾಷ್ಯ)

೧೬. **ತದೇತತ್** ಸುಷುಪ್ತಂ ಸ್ಥಾನಮ್ ಅಸ್ಯ ಇತಿ ಸುಷುಪ್ತಸ್ಥಾನಃ । ಸ್ಥಾನದ್ವಯಪ್ರವಿಭಕ್ತಂ ಮನಃಸ್ಪನ್ದಿತಂ ದ್ವೈತಜಾತಂ ತಥಾರೂಪಾಪರಿತ್ಯಾಗೇನ ಅವಿವೇಕಾಪನ್ನಂ ನೈಶತಮೋಗ್ರಸ್ತಮಿವ ಅಹಃಪ್ರಪಞ್ಚಕಮ್[2] ಏಕೀಭೂತಮ್ ಇತ್ಯುಚ್ಯತೇ । ಅತ ಏವ ಸ್ವಪ್ನಜಾಗ್ರನ್ಮನಃಸ್ಪನ್ದನಾನಿ ಪ್ರಜ್ಞಾನಾನಿ ಘನೀಭೂತಾನೀವ । ಸೇಯಮ್ ಅವಸ್ಥಾ ಅವಿವೇಕರೂಪತ್ವಾತ್ ಪ್ರಜ್ಞಾನಘನಃ ಉಚ್ಯತೇ । ಯಥಾ ರಾತ್ರೌ ನೈಶೇನ ತಮಸಾ ಅವಿಭಜ್ಯಮಾನಂ ಸರ್ವಂ ಘನಮಿವ ತದ್ವತ್ ಪ್ರಜ್ಞಾನಘನ ಏವ । ಏವಶಬ್ದಾತ್ ನ ಜಾತ್ಯನ್ತರಮ್ ಪ್ರಜ್ಞಾನವ್ಯತಿರೇಕೇಣ ಅಸ್ತಿ ಇತ್ಯರ್ಥಃ । ಮನಸಃ ವಿಷಯವಿಷಯ್ಯಾಕಾರಸ್ಪನ್ದನಾಯಾಸದುಃಖಾಭಾವಾತ್ ಆನನ್ದಮಯಃ, ಆನನ್ದಪ್ರಾಯಃ, ನಾನನ್ದ ಏವ । ಅನಾತ್ಯನ್ತಿಕತ್ವಾತ್ । ಯಥಾ ಲೋಕೇ ನಿರಾಯಾಸಸ್ಥಿತಃ ಸುಖೀ ಆನನ್ದಭುಕ್ ಉಚ್ಯತೇ, ಅತ್ಯನ್ತಾನಾಯಾಸರೂಪಾ ಹಿ ಇಯಂ ಸ್ಥಿತಿಃ ಅನೇನ ಅನುಭೂಯತೇ ಇತಿ ಆನನ್ದಭುಕ್ । "ಏಷೋಽಸ್ಯ ಪರಮ ಆನನ್ದಃ" (ಬೃ. ೪-೩-೩೨) ಇತಿ ಶ್ರುತೇಃ । ಸ್ವಪ್ನಾದಿಪ್ರತಿಬೋಧಚೇತಃ[3] ಪ್ರತಿ ದ್ವಾರೀಭೂತತ್ವಾತ್ ಚೇತೋಮುಖಃ । ಬೋಧಲಕ್ಷಣಂ ವಾ ಚೇತಃ ದ್ವಾರಂ ಮುಖಮ್ ಅಸ್ಯ ಸ್ವಪ್ನಾದ್ಯಾಗಮನಂ ಪ್ರತಿ ಇತಿ ಚೇತೋಮುಖಃ ।

---

1. ಇಲ್ಲಿ ತತ್ತ್ವಾಪ್ರತಿಬೋಧವೆಂದರೆ ಪರಮಾರ್ಥವಾದ ಆತ್ಮತತ್ತ್ವವನ್ನು ತಿಳಿಯದಿರುವದು ; ಇದು ಮೂರು ಅವಸ್ಥೆಗಳಿಗೂ ಸಮಾನವಾದ ನಿದ್ರೆ.

2. "ಅಹಃ ಸಪ್ರಪಞ್ಚಕಮ್" ಅ||, "ಅಹಃ ಸಪ್ರಪಞ್ಚಮ್" ವಾ||–ಎಂಬ ಪಾಠಗಳಿಗಿಂತ ಈ ಪಾಠವೇ ಉತ್ತಮವೆಂದು ಕಲ್ಪಿಸಿದೆ.

3. "ಪ್ರತಿಬೋಧಂ ಚೇತಃ" ವಾ||

ಭೂತಭವಿಷ್ಯಜ್ಜ್ಞಾತೃತ್ವಂ ಸರ್ವವಿಷಯಜ್ಞಾತೃತ್ವಮ್ ಅಸ್ಯೈವ ಇತಿ ಪ್ರಾಜ್ಞಃ । ಸುಷುಪ್ತೋಽಪಿ ಹಿ ಭೂತಪೂರ್ವಗತ್ಯಾ ಪ್ರಾಜ್ಞ ಉಚ್ಯತೇ । ಅಥವಾ ಪ್ರಜ್ಞಪ್ತಿಮಾತ್ರಮ್ ಅಸ್ಯೈವ ಅಸಾಧಾರಣಂ ರೂಪಮ್ ಇತಿ ಪ್ರಾಜ್ಞಃ । ಇತರಯೋಃ ವಿಶಿಷ್ಟಮಪಿ ವಿಜ್ಞಾನಮ್ ಅಸ್ತಿ । ಸೋಽಯಂ ಪ್ರಾಜ್ಞಃ ತೃತೀಯಃ ಪಾದಃ ॥

(ಭಾಷ್ಯಾರ್ಥ)

ಅಂಥ ಈ ಸುಷುಪ್ತವೇ ಈತನಿಗೆ ಸ್ಥಾನವಾದ್ದರಿಂದ ಇವನು **ಸುಷುಪ್ತಸ್ಥಾನನು.** ಎರಡು ಸ್ಥಾನಗಳಾಗಿ ವಿಂಗಡವಾಗಿರುವ[1] ಮನಸ್ಸಿನ ಅಲುಗಾಟವಾದ ದ್ವೈತಸಮೂಹವು ಆ (ತನ್ನ) ರೂಪವನ್ನು ಬಿಡದೆ[2] ರಾತ್ರಿಯ ಕತ್ತಲೆಯಲ್ಲಿ ಸಿಕ್ಕಿಕೊಂಡಿರುವ ಹಗಲಿನ ಪ್ರಪಂಚದಂತೆ ಬಿಡಿಸಿ ಅರಿಯುವದಕ್ಕೆ ಆಗದಂತೆ ಆಗುವದರಿಂದ **ಏಕೀಭೂತ** ಒಂದಾಯಿತೆಂದು ಹೇಳಿಸಿಕೊಳ್ಳುತ್ತದೆ[3]. ಆದ್ದರಿಂದಲೇ ಕನಸು ಮತ್ತು ಎಚ್ಚರ–ಇವುಗಳಲ್ಲಿರುವ ಮನಸ್ಸಿನ ಅಲುಗಾಟಗಳಾದ ಅರಿವುಗಳು (ಒಂದು) ಗಟ್ಟಿಯಾದಂತೆ ಆಗಿಬಿಡುತ್ತವೆ. ಅಂಥ ಈ ಅವಸ್ಥೆಯು ಬಿಡಿಸಿ ಅರಿಯುವದಲ್ಲವಾದ್ದರಿಂದ ಪ್ರಜ್ಞಾನಘನ ಎಂದು ಹೇಳಲ್ಪಟ್ಟಿರುತ್ತದೆ[4] ಹೇಗೆ ರಾತ್ರಿಯಲ್ಲಿ ಕಗ್ಗತ್ತಲೆಯಲ್ಲಿ ಇಂಥಿಂಥದ್ದೆಂದು ಬಿಡಿಸಿ ಅರಿಯುವದಕ್ಕಾಗದೆ ಒಂದೇ ಗಟ್ಟಿಯಾದಂತೆ ಇರುವದೋ ಅದರಂತೆ (ಇವನು) **ಪ್ರಜ್ಞಾನಘನನೇ** ಆಗಿರುತ್ತಾನೆ. ಏವ (ಏ) ಎಂಬ ಶಬ್ದವಿರುವದರಿಂದ ಪ್ರಜ್ಞಾನವನ್ನು ಬಿಟ್ಟು ಮತ್ತೊಂದು ಜಾತಿಯ (ವಸ್ತು ಯಾವದೂ) ಇರುವದಿಲ್ಲ ಎಂದರ್ಥ[5]. ಮನಸ್ಸು ವಿಷಯವಿಷಯಿಗಳ ಆಕಾರವಾಗಿ ಅಲುಗಾಡುವ ಆಯಾಸದ ದುಃಖವು ಇಲ್ಲದಿರುವದರಿಂದ (ಇವನು) **ಆನಂದಮಯನು,**

---

1. ಕನಸು, ಎಚ್ಚರ–ಎಂದು ಮನಸ್ಸಿನ ಅಲುಗಾಟವು ಎರಡು ಬಗೆಯಾಗಿ ವಿಂಗಡವಾಗಿರುತ್ತದೆ. ಆದ್ದರಿಂದ ಅದರಿಂದ ತೋರುವ ದ್ವೈತವೂ ಎರಡು ಬಗೆಯಾಗಿರುತ್ತದೆ.

2. ಮತ್ತೆ ಎಚ್ಚರವಾಗುತ್ತಲೂ ತನ್ನ ರೂಪದಲ್ಲಿಯೇ ತೋರಿಕೊಳ್ಳುವದರಿಂದ ಸುಷುಪ್ತಿಯಲ್ಲಿಯೂ ತನ್ನ ರೂಪವನ್ನು ಬಿಡಲಿಲ್ಲವೆಂದು ಊಹಿಸಬೇಕು.

3. ಪ್ರಪಂಚವು ವಿಂಗಡವಾಗಿಯೇ ಇದ್ದರೂ ಕತ್ತಲೆಯಲ್ಲಿ ಒಂದಾಗಿ ಕಾಣುತ್ತದೆ; ಆದರೆ ತನಿನಿದ್ರೆಯಲ್ಲಿ ದ್ವೈತವು ವಿಂಗಡವಾಗಿಲ್ಲದಿದ್ದರೂ ವಿಂಗಡವಾಗಿ ತೋರುವ ಸ್ವಭಾವವನ್ನು ಬಿಟ್ಟಿರುವದಿಲ್ಲ. ಇದೆಲ್ಲವೂ ಅಜ್ಞರ ವ್ಯಾವಹಾರಿಕದೃಷ್ಟಿಯಿಂದ ಆಡಿದ ಮಾತು. ದ್ವೈತವು ಒಂದಾಗಿರುವದರಿಂದ ಪ್ರಾಜ್ಞನು ಏಕೀಭೂತನು ಎನಿಸುವನೆಂದು ಅಭಿಪ್ರಾಯ.

4. ದ್ವೈತದ ವಿಷಯಗಳು ಒಂದಾಗುವದರಿಂದ ಅವುಗಳ ಜ್ಞಾನಗಳೂ ಒಂದಾಗಿಬಿಡುತ್ತವೆ.

5. ಸುಷುಪ್ತಿಯಲ್ಲಿ ಆತ್ಮಚೈತನ್ಯವೊಂದು ಹೊರತು ಅದಕ್ಕಿಂತ ಬೇರೆಯಾದ ವಿಷಯವಾಗಲಿ, ಅದನ್ನು ಬೆಳಗುವ ಜ್ಞಾನವಾಗಲಿ ಬಿಡಿಯಾಗಿರುವದಿಲ್ಲ. ಆದ್ದರಿಂದಲೇ ಪ್ರಾಜ್ಞನು ಏಕೀಭೂತನು, ಪ್ರಜ್ಞಾನಘನನು (ಬೃ. ಭಾ. ೪–೩–೨೩).

ಆನಂದಪ್ರಚುರನಾಗಿರುವವನು (ಎಂದರ್ಥ). ಆನಂದಸ್ವರೂಪವೇ (ಎಂದರ್ಥವಲ್ಲ); ಏಕೆಂದರೆ ಕೊನೆಯವರೆಗೂ (ಈ ಆನಂದವು ಇರುವದಿಲ್ಲ)[1]. ಹೇಗೆ ಲೋಕದಲ್ಲಿ ಯಾವ ಆಯಾಸವೂ ಇಲ್ಲದ ಸುಖಿಯು "ಆನಂದಭುಕ್" (ಆನಂದಾನುಭವಿ) ಎನಿಸುವನೋ, (ಹಾಗೆಯೇ) ಸ್ವಲ್ಪವೂ ಆಯಾಸವಿಲ್ಲದ ಈ ಸ್ಥಿತಿಯನ್ನು ಇವನು ಅನುಭವಿಸುತ್ತಾನಾದ್ದರಿಂದ ಇವನು "**ಆನಂದಭುಕ್**" (ಆನಂದಾನುಭವಿ)[2]. "ಇದು ಇವನಿಗೆ ಪರಮಾನಂದವು" (ಬೃ. ೪-೩-೩೨) ಎಂಬ ಶ್ರುತಿ ಇದಕ್ಕೆ ಪ್ರಮಾಣವು[3]. ಕನಸು ಮುಂತಾದವುಗಳಲ್ಲಿರುವ[4] ಅರಿವೆಂಬ ಚೇತಸ್ಸಿಗೆ ದ್ವಾರವಾಗಿರುವದರಿಂದ **ಚೇತೋಮುಖನು**[5]. ಅಥವಾ ಅರಿವೆಂಬ ಚೇತಸ್ಸೇ ಇವನಿಗೆ ಕನಸು ಮುಂತಾದವುಗಳನ್ನು ಪಡೆಯುವದಕ್ಕೆ ದ್ವಾರವಾಗಿರುವದರಿಂದ (ಇವನು) **ಚೇತೋಮುಖನು**[6] (ಎಂದಾದರೂ ಅರ್ಥವನ್ನು ಮಾಡಬಹುದು). ಹಿಂದೆ ಆದದ್ದನ್ನೂ ಮುಂದೆ ಆಗುವದನ್ನೂ ಅರಿಯುವ ಸರ್ವವಿಷಯಗಳ ಜ್ಞಾತೃತ್ವವು ಈತನದೇ ಆಗಿರುವದರಿಂದ (ಇವನು) **ಪ್ರಾಜ್ಞನು**[7]. ಸುಷುಪ್ತಾತ್ಮನುಕೂಡ ಭೂತಪೂರ್ವಗತಿಯಿಂದ[8] ಪ್ರಾಜ್ಞನು ಎನಿಸಿರುತ್ತಾನೆ. ಅಥವಾ ಪ್ರಜ್ಞಪ್ತಿ[9] ಯೊಂದೇ (ಇರುವದು) ಇವನದೇ

---

1. ಆತ್ಮನು ಸುಷುಪ್ತಿಯಲ್ಲಿ ಏಕೀಭೂತನಾಗಿ ಪ್ರಜ್ಞಾನಘನನಾಗಿರುವದೂ ಅವನ ಸುಖದಂತೆ ಎಚ್ಚರವಾಗುತ್ತಲೂ ಕೊನೆಗಾಣುತ್ತದೆ.

2. ಸುಷುಪ್ತಿಯಲ್ಲಿ ಆತ್ಮನು ಆನಂದವನ್ನು ಅನುಭವಿಸುತ್ತಾನೆಂಬುದು ಉಪಚಾರದ ಮಾತು; ಏಕೆಂದರೆ ಆನಂದಕ್ಕಿಂತ ಬೇರೆಯಾದ ಅನುಭವವೇನೂ ಅಲ್ಲಿರುವದಿಲ್ಲ.

3. ಸುಷುಪ್ತಿಯಲ್ಲಿ ದೊರೆಯುವ ಆನಂದವೇ ವಿಜ್ಞಾನಮಯನಿಗೆ ದೊರೆಯುವ ಪರಮಾನಂದ ಎಂದು ಶ್ರುತಿಯ ಅರ್ಥ.

4. ಎಚ್ಚರಕನಸುಗಳಲ್ಲಿರುವ.

5. ಮರಹಿಲ್ಲದೆ ತಪ್ಪುತಿಳಿವಳಿಕೆಯುಂಟಾಗದು, ನಿದ್ರೆಯಿಲ್ಲದವನಿಗೆ ಎಚ್ಚರ ಕನಸುಗಳೂ ಆಗಲಾರವು. ಆದ್ದರಿಂದ ಪ್ರಾಜ್ಞನು ಎಚ್ಚರಕನಸುಗಳ ಅರಿವಿಗೆ ದ್ವಾರ.

6. ವಿಶೇಷರೂಪವಾದ ಅರಿವೆಂಬ ಚೇತಸ್ಸಿನ ಮೂಲಕ ಪ್ರಾಜ್ಞನು ಎಚ್ಚರ ಕನಸುಗಳನ್ನು ಪಡೆಯುತ್ತಾನೆ.

7. ಪ್ರಕರ್ಷೇಣ ಜಾನಾತಿ ಇತಿ ಪ್ರಜ್ಞಃ । ಪ್ರಜ್ಞ ಏವ ಪ್ರಾಜ್ಞಃ। ಕರ್ತ್ರರ್ಥದಲ್ಲಿ ಪ್ರಜ್ಞ ಎಂಬ ರೂಪವನ್ನುಪಯೋಗಿಸಿದೆ (ಪಾ. ಸೂ. ೩-೧-೧೩೫). ಚೆನ್ನಾಗಿ ಅರಿಯುವವನು, ಬಿಡಿಬಿಡಿಯಾಗಿ ವಿಷಯಗಳನ್ನು ಅರಿಯುವವನು ಎಂದರ್ಥ.

8. ಪೂರ್ವದಲ್ಲಿ ಎಂದರೆ ಎಚ್ಚರಕನಸುಗಳಲ್ಲಿ ಉಂಟಾಗಿದ್ದ ಜ್ಞಾತೃತ್ವವೆಂಬುದನ್ನು ಇಟ್ಟುಕೊಂಡು ಚೈತನ್ಯಮಾತ್ರನಾದ ಸುಷುಪ್ತನನ್ನೂ ಪ್ರಾಜ್ಞ ಎಂದಿದೆ ಎಂದರ್ಥ.

9. ಬರಿಯ ಚೈತನ್ಯವು.

ವಿಶೇಷರೂಪವು. ಆದ್ದರಿಂದ (ಇವನು) **ಪ್ರಾಜ್ಞನು**[1] (ಎಂದಾದರೂ ಅರ್ಥಮಾಡಬಹುದು); ಏಕೆಂದರೆ ಮಿಕ್ಕ ಇಬ್ಬರಿಗೂ ವಿಶೇಷರೂಪವಾದ ವಿಜ್ಞಾನವೂ[2] ಇರುತ್ತದೆ. ಇಂಥ ಈ ಪ್ರಾಜ್ಞನು ಮೂರನೆಯ ಪಾದವು.

**ಏಷ ಸರ್ವೇಶ್ವರ ಏಷ ಸರ್ವಜ್ಞ ಏಷೋಽನ್ತರ್ಯಾಮ್ಯೇಷ ಯೋನಿಃ ಸರ್ವಸ್ಯ ಪ್ರಭವಾಪ್ಯಯೌ ಹಿ ಭೂತಾನಾಮ್ ॥ ೬ ॥**

೬. ಈತನೇ ಸರ್ವೇಶ್ವರನು, ಈತನೇ ಸರ್ವಜ್ಞನು, ಈತನೇ ಅನ್ತರ್ಯಾಮಿಯು. ಈತನೇ ಎಲ್ಲಕ್ಕೂ ಕಾರಣನು, ಭೂತಗಳಿಗೆ ಉತ್ಪತ್ತಿ ಪ್ರಲಯಗಳು (ಈತನೇ).

**(ಭಾಷ್ಯ)**

೧೬. ಏಷ ಹಿ ಸ್ವರೂಪಾವಸ್ಥಃ ಸರ್ವೇಶ್ವರಃ। ಸಾಧಿದೈವಿಕಸ್ಯ ಭೇದಜಾತಸ್ಯ ಸರ್ವಸ್ಯ ಈಶಿತಾ ನೈತಸ್ಮಾತ್ ಜಾತ್ಯನ್ತರಭೂತಃ ಅನ್ಯೇಷಾಮಿವ। "ಪ್ರಾಣಬನ್ಧನಂ ಹಿ ಸೋಮ್ಯ ಮನಃ" (ಛಾಂ. ೬-೮-೨) ಇತಿ ಶ್ರುತೇಃ। ಅಯಮೇವ ಹಿ ಸರ್ವಸ್ಯ ಸರ್ವಭೇದಾವಸ್ಥೋ ಜ್ಞಾತಾ ಇತಿ ಏಷ ಸರ್ವಜ್ಞಃ। ಏಷಃ ಅನ್ತರ್ಯಾಮೀ ಅನ್ತರನುಪ್ರವಿಶ್ಯ ಸರ್ವೇಷಾಂ ಭೂತಾನಾಂ ನಿಯನ್ತಾಪಿ ಏಷ ಏವ। ಅತ ಏವ ಯಥೋಕ್ತಂ ಸಭೇದಂ ಜಗತ್ ಪ್ರಸೂಯತೇ ಇತಿ ಏಷ ಯೋನಿಃ ಸರ್ವಸ್ಯ। ಯತ ಏವಂ ಪ್ರಭವಶ್ಚ ಅಪ್ಯಯಶ್ಚ ಪ್ರಭವಾಪ್ಯಯೌ ಹಿ ಭೂತಾನಾಮ್ ಏಷ ಏವ॥

**(ಭಾಷ್ಯಾರ್ಥ)**

ಸ್ವರೂಪದಲ್ಲಿ ನಿಂತಿರುವ[3] ಈತನೇ **ಸರ್ವೇಶ್ವರನು.** ಅಧಿದೈವದಿಂದೊಡಗೂಡಿರುವ ಭೇದಸಮೂಹವೆಲ್ಲವನ್ನೂ[4] ಆಳುವಾತನು, ಇತರ ಮತಗಳಲ್ಲಿ (ತಿಳಿಸಿ)ರುವಂತೆ ಇವನಿಗಿಂತ ಬೇರೆಯ ಜಾತಿಯುವನಲ್ಲ[5]. "ಸೋಮ್ಯನೆ, ಮನಸ್ಸು ಪ್ರಾಣಕ್ಕೆ ಕಟ್ಟು

1. ಪ್ರಜ್ಞಾ, ಅಸ್ಯ ಅಸ್ತಿ ಇತಿ ಪ್ರಾಜ್ಞಃ (ಪಾ ಸೂ. ೫-೨-೧೦೧) ಬರಿಯರಿವಿನ ಸ್ವರೂಪವುಳ್ಳವನು.

2. ಬರಿಯರಿವಲ್ಲದೆ ಬಿಡಿಯ ಅರಿವೂ ಅವರಿಗೆ ಉಂಟು.

3. ತೈಜಸವಿಶ್ವರೂ ಸ್ವರೂಪದಲ್ಲಿ ನಿಂತಿರುತ್ತಾರಾದರೂ ಉಪಾಧಿಸಂಪರ್ಕದಿಂದ ಬೇರೆಯ ರೂಪದಲ್ಲಿರುವಂತೆ ಇರುವರು. ಆದ್ದರಿಂದ ಪ್ರಾಜ್ಞನೇ ಸ್ವರೂಪದಲ್ಲಿರುವವನು ಎಂದಿದೆ. ಸೂ. ಭಾ. ೩-೨-೮.

4. ಆಧ್ಯಾತ್ಮಿಕ, ಆಧಿಭೌತಿಕ, ಆಧಿದೈವಿಕ-ಎಂಬ ಭೇದವುಳ್ಳ ದ್ವೈತವನ್ನೆಲ್ಲ.

5. ಜೀವನಿಗಿಂತ ಈಶ್ವರನು ಬೇರೆಯ ಜಾತಿಯುವನು, ಅವನು ಜಗತ್ತಿಗಿಂತ ಬೇರೆಯಾಗಿರುತ್ತಾನೆ-ಎಂಬ ತಟಸ್ಥೇಶ್ವರವಾದದಲ್ಲಿ ಈಶ್ವರನಿಗೆ ಸೃಷ್ಟಿಮಾಡುವದಕ್ಕೆ ಸಾಮಗ್ರಿಯಿಲ್ಲದಿರುವದು, ಪರಿಚ್ಛಿನ್ನತ್ವ, ಅಸರ್ವಜ್ಞತ್ವ, ರಾಗದ್ವೇಷಾದಿಗಳು-ಮುಂತಾದ ದೋಷಗಳುಂಟು. ಸೂ. ಭಾ. ೨-೨-೩೭ರಿಂದ ೪೧ರ ವರೆಗೆ ಇರುವ ಭಾಷ್ಯಗ್ರಂಥವನ್ನು ನೋಡಿ.

ಬಿದ್ದಿರುತ್ತದೆಯಲ್ಲವೆ ? " (ಛಾಂ. ೬-೮-೧) ಎಂಬ ಶ್ರುತಿಯು[1] ಇದಕ್ಕೆ ಪ್ರಮಾಣವು. ಈತನೇ[2] ಎಲ್ಲಾ ಭೇದಾವಸ್ಥೆಗಳಲ್ಲಿಯೂ, ಎಲ್ಲವನ್ನೂ ಅರಿಯುವವನು[3] ; ಆದ್ದರಿಂದ ಇವನು **ಸರ್ವಜ್ಞನು. ಈತನೇ ಅಂತರ್ಯಾಮಿ,** ಎಂದರೆ ಎಲ್ಲಾ ಪ್ರಾಣಿಗಳನ್ನೂ ಒಳಹೊಕ್ಕು ಹಿಡಿತದಲ್ಲಿಟ್ಟುಕೊಂಡಿರುವವನೂ[4] ಈತನೇ. ಈತನಿಂದಲೇ ಮೇಲೆ ಹೇಳಿದ ಭೇದಸಹಿತವಾದ[5] ಜಗತ್ತು ಹುಟ್ಟುತ್ತದೆಯಾದ್ದರಿಂದ ಈತನೇ ಎಲ್ಲಕ್ಕೂ **ಯೋನಿಯು.** ಹೀಗಿರುವದರಿಂದ ಭೂತಗಳಿಗೆ ಪ್ರಭವಾಪ್ಯಯಗಳು ಎಂದರೆ ಉತ್ಪತ್ತಿಗೆ ಮೂಲವೂ ಪ್ರಲಯವಾಗುವ ನೆಲೆಯೂ (ಈತನೇ)[6].



1. ಸುಷುಪ್ತಿಯಲ್ಲಿ ಜೀವನು ಪರಮೇಶ್ವರಸ್ವರೂಪವನ್ನು ಪಡೆದು ಪರಮೇಶ್ವರನನ್ನೇ ಸೇರಿಕೊಂಡಿರುತ್ತಾನೆ ಎಂದು ಶ್ರುತಿಯ ಒಟ್ಟರ್ಥ. ಮುಂದೆ ಭಾಷ್ಯದಲ್ಲಿಯೇ ಇದು ಸ್ಪಷ್ಟವಾಗುವದು.

2. ಸ್ವರೂಪದಲ್ಲಿದ್ದುಕೊಂಡಿರುವ ಎಂಬ ವಿಶೇಷಣವನ್ನು ಇಲ್ಲಿರುವ ಎಲ್ಲಾ ವಿಶೇಷ್ಯಗಳಿಗೂ ಸೇರಿಸಿಕೊಳ್ಳಬೇಕು. ಇದರಿಂದ ಈಶ್ವರನು ನಮ್ಮಗಳಂತೆ ಒಬ್ಬ ವ್ಯಕ್ತಿ ಎಂಬ ತಪ್ಪು ತಿಳಿವಳಿಕೆಯು ಹೋಗುತ್ತದೆ.

3. ಭೇದಾವಸ್ಥೆಗಳೆಂದರೆ ಎಚ್ಚರಕನಸುಗಳು. ಬ್ರಹ್ಮಾದಿಸ್ತಂಬಪರ್ಯಂತವಾದ ಪ್ರಾಣಿಗಳಲ್ಲಿ ಜ್ಞಾತೃತ್ವಕ್ಕೆ ಈತನ ಸ್ವರೂಪಚೈತನ್ಯವೇ ಆಧಾರವು. ಆದ್ದರಿಂದ ಇವನು ಅರಿಯದೆ ಇರುವದೇ ಇಲ್ಲ.

4. ಪ್ರಾಣಿಗಳನ್ನು ಸೃಷ್ಟಿಸಿ ಅವರೊಳಗೆ ಹೊಕ್ಕಿರುತ್ತಾನೆಂದು (ಐ. ೧-೩-೧೨, ತೈ. ೨-೬-೬) ಶ್ರುತಿ ; ಅವನೇ ಎಲ್ಲರನ್ನೂ ಹಿಡಿತದಲ್ಲಿಟ್ಟುಕೊಂಡಿರುವ ಅಂತರ್ಯಾಮಿ ಎಂದೂ (ಬೃ. ೩-೭-೧೫) ಶ್ರುತಿ.

5. ಆಧ್ಯಾತ್ಮಿಕಾದಿಭೇದಸಹಿತವಾದ.

6. ಜಗತ್ತಿಗೆ ನಿಮಿತ್ತವೂ ಉಪಾದಾನವೂ ಈತನೇ. ಪರಮೇಶ್ವರನು ಬರಿಯ ನಿಮಿತ್ತಕಾರಣನಲ್ಲ ; ಏಕೆಂದರೆ ಜಗತ್ತೆಲ್ಲವೂ ಅವನಲ್ಲಿಯೇ ಸುಷುಪ್ತಿಪ್ರಲಯಗಳಲ್ಲಿ ಅಡಗಿ ಒಂದಾಗುತ್ತದೆ. ಸೂ. ಭಾ. ೧-೪-೨೩ ರಿಂದ ೨೭ರ ವರೆಗಿನ ಗ್ರಂಥದಲ್ಲಿ ಬ್ರಹ್ಮವು ಜಗತ್ತಿಗೆ ನಿಮಿತ್ತವೂ ಉಪಾದಾನವೂ ಆಗಿರುತ್ತದೆಯೆಂದು ನಿರ್ಣಯಿಸಿದೆ.

|| ಓಂ ||

# ಆಗಮಪ್ರಕರಣ

---

## ಕಾರಿಕಾಪ್ರಾರಂಭ

**ಅತ್ರೈತೇ ಶ್ಲೋಕಾ ಭವನ್ತಿ-**

(ಕಾರಿಕಾವಾಕ್ಯಾರ್ಥ)

ಇಲ್ಲಿ ಈ ಶ್ಲೋಕಗಳು ಬಂದಿರುತ್ತವೆ:—

(ಭಾಷ್ಯ)

೧೮. ಅತ್ರ ಏತಸ್ಮಿನ್ ಯಥೋಕ್ತೇ ಅರ್ಥೇ ಏತೇ ಶ್ಲೋಕಾ ಭವನ್ತಿ-

(ಭಾಷ್ಯಾರ್ಥ)

ಇಲ್ಲಿ ಎಂದರೆ ಹಿಂದೆ (ಶ್ರುತಿಯಲ್ಲಿ) ಹೇಳಿರುವ ಈ ಅರ್ಥವನ್ನು ತಿಳಿಸುವ ವಿಷಯದಲ್ಲಿ ಈ (ಮುಂದಿನ) ಶ್ಲೋಕಗಳು[1] ಬಂದಿರುತ್ತವೆ;—

### ವಿಶ್ವಾದಿಗಳು ಮೂವರಲ್ಲ, ಒಬ್ಬನೇ

**ಬಹಿಷ್ಪ್ರಜ್ಞೋ[2] ವಿಭುರ್ವಿಶ್ವೋ ಹ್ಯನ್ತಃಪ್ರಜ್ಞಸ್ತು ತೈಜಸಃ ।**
**ಘನಪ್ರಜ್ಞಸ್ತಥಾ ಪ್ರಾಜ್ಞ ಏಕ ಏವ ತ್ರಿಧಾ ಸ್ಮೃತಃ[3] ॥ ೧ ॥**

೧. ಹೊರಗಿನ (ವಿಷಯ)ಗಳ ಅರಿವುಳ್ಳ ವಿಭುವು ವಿಶ್ವನು; ಒಳಗಿನ ಅರಿವುಳ್ಳವನು ತೈಜಸನು; ಅದರಂತೆ ಗಟ್ಟಿಯಾದ ಅರಿವುಳ್ಳವನು ಪ್ರಾಜ್ಞನು. (ಹೀಗೆ) ಒಬ್ಬನೇ ಮೂರು ಬಗೆ ಎನಿಸಿರುತ್ತಾನೆ.

---

1. ಇಲ್ಲಿ ಆಗಮಪ್ರಕರಣವು ಮುಗಿಯುವವರೆಗಿನ ಶ್ಲೋಕಗಳೆಲ್ಲ ಉಪನಿಷತ್ತಿಗೇ ಸೇರಿದ ಮಂತ್ರಗಳೇ ಎಂಬ ಮತವನ್ನು ಪೀಠಿಕೆಯಲ್ಲಿ ವಿಮರ್ಶಿಸಿದೆ.

2. "ಬಹಿಃಪ್ರಜ್ಞಃ" ಎಂದೇ ಉಪನಿಷತ್ತಿನಲ್ಲಿಯೂ ಕಾರಿಕೆಯಲ್ಲಿಯೂ ವಾ|| ಕಾ|| ಮೈ|| ಪಾಠ.

3. 'ಮತಃ', 'ಸ್ಥಿತಃ' ಎಂದೂ ಪಾಠಾಂತರಗಳುಂಟು.

(ಭಾಷ್ಯ)

೧೯. ಪರ್ಯಾಯೇಣ ತ್ರಿಸ್ಥಾನತ್ವಾತ್ ಸೋಽಹಮ್ ಇತಿ ಸ್ಮೃತ್ಯಾ ಪ್ರತಿಸನ್ಧಾನಾಚ್ಚ ಸ್ಥಾನತ್ರಯವ್ಯತಿರಿಕ್ತತ್ವಮ್, ಏಕತ್ವಮ್, ಶುದ್ಧತ್ವಮ್, ಅಸಙ್ಗತ್ವಂ ಚ ಸಿದ್ಧಮ್ ಇತ್ಯಭಿಪ್ರಾಯಃ | ಮಹಾಮತ್ಸ್ಯಾದಿದೃಷ್ಟಾನ್ತಶ್ರುತೇಃ ||

(ಭಾಷ್ಯಾರ್ಥ)

ಒಂದಾಗುತ್ತಲೊಂದರಂತೆ[1] ಮೂರು ಅವಸ್ಥೆಗಳಲ್ಲಿಯೂ (ಇರುವ) ದರಿಂದಲೂ "ಅವನೇ ನಾನು" ಎಂದು ನೆನಪಿನಿಂದ ಗುರುತುಹಿಡಿದುಕೊಳ್ಳುವದರಿಂದಲೂ[2] ಆತ್ಮನು ಮೂರು ಸ್ಥಾನಗಳಿಗಿಂತಲೂ ಬೇರೆ ಎಂತಲೂ ಒಬ್ಬನೇ ಎಂತಲೂ ಶುದ್ಧನೆಂತಲೂ, ಅಸಂಗನೆಂತಲೂ ಸಿದ್ಧವಾಗುತ್ತದೆ ಎಂದು ಅಭಿಪ್ರಾಯ. ದೊಡ್ಡ ಮೀನು-ಮುಂತಾದ ದೃಷ್ಟಾಂತಗಳನ್ನು (ಕೊಟ್ಟಿರುವ) **ಶ್ರುತಿಯು**[3] ಇದಕ್ಕೆ ಪ್ರಮಾಣವು.

## ಎಚ್ಚರದಲ್ಲಿಯೇ ವಿಶ್ವಾದಿಗಳ ಅನುಭವ

(ಭಾಷ್ಯ)

೨೦. ಜಾಗರಿತಾವಸ್ಥಾಯಾಮೇವ ವಿಶ್ವಾದೀನಾಂ ತ್ರಯಾಣಾಮ್ ಅನುಭವಪ್ರದರ್ಶನಾರ್ಥೋಽಯಂ ಶ್ಲೋಕಃ—

(ಭಾಷ್ಯಾರ್ಥ)

ಎಚ್ಚರದ ಅವಸ್ಥೆಯಲ್ಲಿಯೇ ವಿಶ್ವನೇ ಮೊದಲಾದ ಮೂವರ ಅನುಭವವನ್ನು ತೋರಿಸುವುದಕ್ಕೆ ಈ (ಮುಂದಿನ) ಶ್ಲೋಕವು (ಬಂದಿದೆ) :—

---

1. ಅವಸ್ಥೆಗಳು ಕಾಲದಲ್ಲಿ ಒಂದಾಗುತ್ತಲೊಂದು ತೋರಿಕೊಳ್ಳುವವೆಂಬ ಅಭಿಪ್ರಾಯವೇನೂ ಸರಿಯಲ್ಲ ; ಏಕೆಂದರೆ ಅವಸ್ಥೆಗಳೊಳಗೆ ಕಾಲವು ತೋರುವದೇ ಹೊರತು ಕಾಲದಲ್ಲಿ ಅವಸ್ಥೆಗಳು ತೋರುವದಿಲ್ಲ. ಒಂದವಸ್ಥೆಯ ಅನುಭವವಿರುವಾಗ ಮಿಕ್ಕೆರಡೂ ಇರುವದೇ ಇಲ್ಲ-ಎಂಬುದು ಮಾತ್ರ ಇಲ್ಲಿ ವಿವಕ್ಷಿತ.

2. 'ಅವನು' ಎಂದು ಕಾಲದಲ್ಲಿ ಆ ದೇಶದಲ್ಲಿದ್ದವನನ್ನು ಈಗ ನೆನಪಿಸಿಕೊಳ್ಳುವದು ಸ್ಮೃತಿ. 'ಅವನೇ ಇವನು' ಎಂದು ಅಗ ಅಲ್ಲಿ ತೋರಿ, ನಡುವೆ ತೋರದೆ ಇದ್ದು, ಈಗ ಇಲ್ಲಿ ತೋರುವವನನ್ನು ಗುರುತಿಸಿ ಅರಿಯುವದು ಪ್ರತ್ಯಭಿಜ್ಞೆ. ಆತ್ಮನು ತೋರದೆ ಇರುವ ಕಾಲದೇಶಗಳೇ ಇಲ್ಲದ್ದರಿಂದ ಅವನು ಸ್ಮೃತಿಗಾಗಲಿ ಪ್ರತ್ಯಭಿಜ್ಞೆಗಾಗಲಿ ವಿಷಯನಲ್ಲವಾದರೂ 'ನಿದ್ರಿಸಿದ ನಾನೇ ಎಚ್ಚತ್ತಿರುವೆನು' ಎಂಬ ರೂಪದ ಅರಿವು ಆತ್ಮತತ್ತ್ವವನ್ನು ಗೊತ್ತುಪಡಿಸುವುದಕ್ಕೆ ಸಹಾಯಕವಾಗುತ್ತದೆ ಎಂಬುದರ ಮೇಲೆ ಅದನ್ನು ಸ್ಮರಣೆ ಎಂದೂ ಪ್ರತ್ಯಭಿಜ್ಞೆ ಎಂದೂ ಕರೆದಿದೆ.

3. ಬೃ. ೪-೩-೧೮, ೧೯ ರಲ್ಲಿ ಎರಡು ದಡಗಳನ್ನೂ ಮುಟ್ಟಿ ನದಿಯಲ್ಲಿ ಈಜಾಡುತ್ತಿರುವ ದೊಡ್ಡ ಮೀನಿನ ಹೋಲಿಕೆಯನ್ನು ಎಚ್ಚರಕನಸುಗಳನ್ನನುಭವಿಸುವ ಆತ್ಮನಿಗೂ ಆಕಾಶದಲ್ಲಿ ಹಾರಾಡಿ ವಿಶ್ರಾಂತಿಗಾಗಿ ಗೂಡನ್ನು ಸೇರುವ ಗಿಡುಗನ ಹೋಲಿಕೆಯನ್ನು ಸುಷುಪ್ತಿಗೆ ಹೋಗುವ ಆತ್ಮನಿಗೂ ಕೊಟ್ಟಿರುತ್ತದೆ.

**ದಕ್ಷಿಣಾಕ್ಷಿಮುಖೇ ವಿಶ್ವೋ ಮನಸ್ಯನ್ತಸ್ತು ತೈಜಸಃ ।**
**ಆಕಾಶೇ ಚ ಹೃದಿ ಪ್ರಾಜ್ಞಸ್ತ್ರಿಧಾ ದೇಹೇ ವ್ಯವಸ್ಥಿತಃ ॥ ೨ ॥**

೨. ಬಲಗಣ್ಣಿನ ದ್ವಾರದಲ್ಲಿ ವಿಶ್ವನು, ಮನಸ್ಸಿನ ಒಳಗಾದರೆ ತೈಜಸನು, ಹೃದಯದ ಆಕಾಶದಲ್ಲಿ ಪ್ರಾಜ್ಞನು. (ಹೀಗೆ) ದೇಹವಲ್ಲಿ ಮೂರು ಬಗೆಯಾಗಿ ಇದ್ದುಕೊಂಡಿರುವನು.

(ಭಾಷ್ಯ)

೨೧. ದಕ್ಷಿಣಮ್ ಅಕ್ಷ್ಯೇವ ಮುಖಂ ತಸ್ಮಿನ್ ಪ್ರಾಧಾನ್ಯೇನ ದ್ರಷ್ಟಾ **ಸ್ಥೂಲಾನಾಂ ವಿಶ್ವಃ ಅನುಭೂಯತೇ** । "ಇನ್ಧೋ ಹ ವೈ ನಾಮೈಷ ಯೋಽಯಂ ದಕ್ಷಿಣೇಽಕ್ಷನ್ ಪುರುಷಃ" (ಬೃ. ೪-೨-೨) ಇತಿ ಶ್ರುತೇಃ । ಇನ್ಧಃ ದೀಪ್ತಿಗುಣಃ **ವೈಶ್ವಾನರಃ ಆದಿತ್ಯಾನ್ತರ್ಗತೋ ವೈರಾಜ ಆತ್ಮಾ** ಚಕ್ಷುಷಿ ಚ ದ್ರಷ್ಟಾ ಏಕಃ । ನನ್ವನ್ಯೋ ಹಿರಣ್ಯಗರ್ಭಃ; ಕ್ಷೇತ್ರಜ್ಞೋ ದಕ್ಷಿಣೇಽಕ್ಷಣಿ ಅಕ್ಷ್ಣೋರ್ನಿಯನ್ತಾ ದ್ರಷ್ಟಾ ಚ ಅನ್ಯೋ ದೇಹಸ್ವಾಮೀ । ನ । ಸ್ವತೋ ಭೇದಾನಭ್ಯುಪಗಮಾತ್ । "ಏಕೋ ದೇವಃ ಸರ್ವಭೂತೇಷು ಗೂಢಃ" (ಶ್ವೇ. ೬-೧೧) ಇತಿ ಶ್ರುತೇಃ । "ಕ್ಷೇತ್ರಜ್ಞಂ ಚಾಪಿ ಮಾಂ ವಿದ್ಧಿ ಸರ್ವಕ್ಷೇತ್ರೇಷು ಭಾರತ" (ಗೀ. ೧೩-೨), "ಅವಿಭಕ್ತಂ ಚ ಭೂತೇಷು ವಿಭಕ್ತಮಿವ ಚ ಸ್ಥಿತಮ್" (ಗೀ. ೧೩-೧೬) ಇತಿ ಸ್ಮೃತೇಃ । ಸರ್ವೇಷು ಕರಣೇಷು ಅವಿಶೇಷೇಽಪಿ ದಕ್ಷಿಣಾಕ್ಷ್ಣ್ಯುಪಲಬ್ಧಿಪಾಟವದರ್ಶನಾತ್ ತತ್ರ ವಿಶೇಷೇಣ ನಿರ್ದೇಶೋ ವಿಶ್ವಸ್ಯ ॥

(ಭಾಷ್ಯಾರ್ಥ)

ಬಲಗಡೆಯ ಕಣ್ಣೆಂಬ ದ್ವಾರವಿದೆಯಲ್ಲ, ಅದರಲ್ಲಿ ಪ್ರಧಾನ[1]ವಾಗಿ ಸ್ಥೂಲ (ವಿಷಯ)ಗಳನ್ನು **ಕಾಣುವವನೆಂದು ವಿಶ್ವನ** ಅನುಭವವಾಗುತ್ತದೆ. "ಈ ಬಲದ ಕಣ್ಣಿನಲ್ಲಿರುವ ಪುರುಷನಿದಾನಲ್ಲ, ಇವನು **ಇಂಧ**ನೆಂಬ ಹೆಸರಿನವನು" (ಬೃ. ೪-೨-೨) ಎಂಬ ಶ್ರುತಿಯು ಇದಕ್ಕೆ ಪ್ರಮಾಣವು[2]. 'ಇಂಧನು' ಎಂದರೆ ಪ್ರಕಾಶಗುಣವುಳ್ಳ **ವೈಶ್ವಾನರನು,** ಆದಿತ್ಯಾಂತರ್ಗತನಾದ **ವಿರಾಡಾತ್ಮನು**; ಕಣ್ಣಿನಲ್ಲಿಯೂ ದ್ರಷ್ಟೃವಾಗಿರುವವನೂ (ಇವನೂ) ಒಬ್ಬನೇ (ಎಂದರ್ಥ.)

---

1. ಇಂದ್ರಿಯಗಳಲ್ಲಿಯೇ ಮುಖ್ಯವಾಗಿ ವಿಶ್ವನ ಅನುಭವವಾಗುತ್ತದೆ. ಬಲಗಣ್ಣನ್ನು ಇಂದ್ರಿಯಗಳಿಗೆ ಬದಲಾಗಿ ಹೇಳಿರುವದೇಕೆಂಬುದು ಮುಂದೆ ಸ್ಫುಟವಾಗುತ್ತದೆ.

2. ಹಿಂದೆ ಚಕ್ಷುಸ್ಸೇ ಬ್ರಹ್ಮವು-ಎಂದು ಹೇಳಿದ ಈ ಆದಿತ್ಯಾಂತರ್ಗತಪುರುಷನು ಬಲಗಣ್ಣಿನಲ್ಲಿರುತ್ತಾನಲ್ಲ, ಇವನಿಗೆ ಇಂಧ ಎಂದು ಹೆಸರು-ಎಂದು ಶ್ರುತಿಯ ಅರ್ಥ.

(ಆಕ್ಷೇಪ):—(ಸೂರ್ಯನಲ್ಲಿರುವ) ಹಿರಣ್ಯಗರ್ಭನೇ[1] ಬೇರೆ, ಬಲಗಣ್ಣಿನಲ್ಲಿದ್ದು ಎರಡು ಕಣ್ಣುಗಳನ್ನೂ ಹಿಡಿತದಲ್ಲಿಟ್ಟುಕೊಂಡಿರುವ ಕ್ಷೇತ್ರಜ್ಞನಾದ ದ್ರಷ್ಟೃವಾದ ದೇಹದೊಡೆಯನೇ ಬೇರೆ. ಅಲ್ಲವೆ?[2]

(ಸಮಾಧಾನ):—ಹಾಗಲ್ಲ. ಏಕೆಂದರೆ (ಆತ್ಮನಲ್ಲಿ) ಸ್ವತಃ[3] ಭೇದವನ್ನು (ನಾವು) ಒಪ್ಪುವದಿಲ್ಲ. "ಎಲ್ಲಾ ಭೂತಗಳಲ್ಲಿಯೂ ಅಡಗಿರುವ ದೇವನು ಒಬ್ಬನೇ" (ಶ್ವೇ. ೬-೧೧) ಎಂಬ **ಶ್ರುತಿಯೂ** "ಎಲೈ ಭರತವಂಶೋತ್ಪನ್ನನೆ, ಸರ್ವಕ್ಷೇತ್ರಗಳಲ್ಲಿಯೂ ಇರುವ ಕ್ಷೇತ್ರಜ್ಞನನ್ನು ನಾನೆಂದೇ ತಿಳಿ" (ಗೀ. ೧೩-೨) "ಭೂತಗಳಲ್ಲಿ ವಿಂಗಡವಾಗಿರುವದಿಲ್ಲವಾದರೂ ವಿಂಗಡವಾಗಿರುವಂತೆ ಇರುತ್ತದೆ" (ಗೀ. ೧೩-೧೬) ಎಂಬ **ಸ್ಮೃತಿಯೂ** ಇದಕ್ಕೆ ಪ್ರಮಾಣವು. (ವಿಶ್ವನಿರುವದು) ಎಲ್ಲಾ ಕರಣಗಳಿಗೂ ಸಮಾನವಾದರೂ, ಬಲಗಣ್ಣಿನಲ್ಲಿ ಅರಿವು ಚೆನ್ನಾಗಿರುವದು ಕಂಡುಬರುವದರಿಂದ[4] ಅಲ್ಲಿಯೇ ವಿಶ್ವನಿದ್ದಾನೆಂದು (ಕಾರಿಕೆಯಲ್ಲಿ) ಹೇಳಿದೆ.

(ಭಾಷ್ಯ)

೨೨. ದಕ್ಷಿಣಾಕ್ಷಿಗತೋ ರೂಪಂ ದೃಷ್ಟ್ವಾ ನಿಮೀಲಿತಾಕ್ಷಃ ತದೇವ ಸ್ಮರನ್ ಮನಸಿ ಅನ್ತಃ ಸ್ವಪ್ನೇ ಇವ ತದೇವ ವಾಸನಾರೂಪಾಭಿವ್ಯಕ್ತಂ ಪಶ್ಯತಿ। ಯಥಾ **ಅತ್ರ**[5] ತಥಾ ಸ್ವಪ್ನೇ। ಅತಃ ಮನಸ್ಯನ್ತಸ್ತು ತೈಜಸೋಽಪಿ ವಿಶ್ವ ಏವ। **ಆಕಾಶೇ** ಚ ಹೃದಿ ಸ್ಮರಣಾಖ್ಯವ್ಯಾಪಾರೋಪರಮೇ ಪ್ರಾಜ್ಞಃ ಏಕೀಭೂತೋ ಘನಪ್ರಜ್ಞ ಏವ ಭವತಿ। ಮನೋವ್ಯಾಪಾರಾಭಾವಾತ್। ದರ್ಶನಸ್ಮರಣೇ ಏವ ಹಿ ಮನಃಸ್ಪಂದಿತೇ। ತದಭಾವೇ ಹೃದ್ಯೇವ ಅವಿಶೇಷೇಣ ಪ್ರಾಣಾತ್ಮನಾ ಅವಸ್ಥಾನಮ್। "ಪ್ರಾಣೋ ಹ್ಯೇವೈತಾನ್ ಸರ್ವಾನ್ ಸಂವೃಙ್ಕ್ತೇ" (ಛಾಂ ೪-೩-೩) ಇತಿ

---

1. ಇಲ್ಲಿ ವಿರಾಡಾತ್ಮನಿಗೂ ಶರೀರಾತ್ಮನಿಗೂ ಏಕತ್ವವನ್ನು ಹೇಳುವದು ಪ್ರಕೃತವಾಗಿರುವದರಿಂದ ಹಿರಣ್ಯಗರ್ಭನೆಂದರೆ ವಿರಾಡಾತ್ಮನೆಂದೇ ಅರ್ಥ.

2. "ಸಪ್ತಾಂಗಃ" ಎಂಬ ಮಾತನ್ನು ವಿವರಿಸುವಾಗ ನಮ್ಮ ಪ್ರತ್ಯಗಾತ್ಮನಿಗೇ ಸಮಷ್ಟಿಸ್ಥೂಲವೆಲ್ಲವೂ ಉಪಾಧಿಯಾಗಿರುವದರಿಂದ ಇವನೇ ವೈಶ್ವಾನರನು ಎಂದು ಅಭೇದವನ್ನು ಹೇಳಿತ್ತು. ಉಪಾಧಿಯಮೂಲಕ ಹೇಳಿದ ಐಕ್ಯವನ್ನೇ ಉಪಹಿತದ ಐಕ್ಯವನ್ನು ಹೇಳಿ ಗಟ್ಟಿಗೊಳಿಸುವದಕ್ಕಾಗಿ ಮತ್ತೆ ಆಕ್ಷೇಪಿಸಿದೆ.

3. ಆತ್ಮನಲ್ಲಿ ಆತ್ಮರೂಪದಿಂದ ಯಾವ ಭೇದವೂ ಇಲ್ಲ. ಉಪಾಧಿಭೇದದಿಂದಲೇ ಭೇದ–ಎಂದು ಅರ್ಥ.

4. ಜನರಿಗೆ ಬಲಭಾಗವು ಬಲುಮಟ್ಟಿಗೆ ವೀರ್ಯವತ್ತರವಾಗಿರುತ್ತದೆ. ಆದ್ದರಿಂದ ಬಲಗಣ್ಣನ್ನೇ ಹೇಳಿದೆ. ಇದಕ್ಕೆ ಶ್ರುತಿಯ ಆಧಾರವೂ ಇದೆ.

5. 'ತತ್ರ' ಪಾ॥

ಶ್ರುತೇಃ । ತೈಜಸೋ ಹಿರಣ್ಯಗರ್ಭಃ ಮನಃಸ್ಥತ್ವಾತ್ । "ಲಿಙ್ಗಂ ಮನಃ" (ಬೃ. ೪-೪-೬), "ಮನೋಮಯೋಽಯಂ ಪುರುಷಃ" (ಬೃ. ೫-೬-೧) ಇತ್ಯಾದಿ ಶ್ರುತಿಭ್ಯಃ ||

(ಭಾಷ್ಯಾರ್ಥ)

ಬಲಗಣ್ಣಿನಲ್ಲಿರುವ (ವಿಶ್ವನು) ರೂಪವನ್ನು ನೋಡಿ ಕಣ್ಣುಮುಚ್ಚಿಕೊಂಡು[1] ಅದನ್ನೇ ನೆನಸಿಕೊಂಡು ಮನಸ್ಸಿನೊಳಗೇ, ಕನಸಿನಲ್ಲಿ ಕಾಣುವಂತೆ, ವಾಸನಾರೂಪ ದಿಂದ ತೋರಿಕೊಂಡ ಅದನ್ನೇ ಕಾಣುತ್ತಾನೆ. ಇಲ್ಲಿ ಹೇಗೋ ಕನಸಿನಲ್ಲಿಯೂ ಹಾಗೆಯೇ[2]. ಆದ್ದರಿಂದ ಮನಸ್ಸಿನೊಳಗಿರುವ **ತೈಜಸನೂ ವಿಶ್ವನೇ.** ಮತ್ತು ಹೃದಯದಲ್ಲಿರುವ ಆಕಾಶದಲ್ಲಿ ಸ್ಮೃತಿ ಎಂಬ ವ್ಯಾಪಾರವು ನಿಲ್ಲಲಾಗಿ, ಪ್ರಾಜ್ಞನು; ಏಕೀಭೂತನಾಗಿ ಘನಪ್ರಜ್ಞನೇ ಆಗುತ್ತಾನೆ. ಏಕೆಂದರೆ ಮನಸ್ಸಿನ (ಯಾವ) ವ್ಯಾಪಾರವೂ ಇರುವದಿಲ್ಲ. ದರ್ಶನ, ಸ್ಮರಣ[3]-ಎಂಬೆರಡೇ ಅಲ್ಲವೆ, **ಮನಸ್ಸಿನ ವ್ಯಾಪಾರಗಳು?** ಅವುಗಳಿಲ್ಲವಾದರೆ ಯಾವ ವಿಶೇಷವೂ ಇಲ್ಲದೆ ಹೃದಯದಲ್ಲಿಯೇ ಪ್ರಾಣರೂಪದಿಂದಲೇ[4] ನಿಲ್ಲಬೇಕು. "ಈ (ಇಂದ್ರಿಯ) ಕಾರ್ಯಗಳನ್ನೆಲ್ಲ ಪ್ರಾಣನೇ[5] ತನ್ನಲ್ಲಿ ಅಡಗಿಸಿಕೊಳ್ಳುತ್ತಾನೆ." (ಛಾಂ. ೪-೩-೩) ಎಂಬ ಶ್ರುತಿ ಇದಕ್ಕೆ ಪ್ರಮಾಣ ವಾಗಿದೆ. (ಇಲ್ಲಿ) ತೈಜಸನೆಂದರೆ ಹಿರಣ್ಯಗರ್ಭನು[6] ಏಕೆಂದರೆ (ಅವನು) ಮನಸಿ

1. ಇಂದ್ರಿಯಗಳ ವ್ಯಾಪಾರವನ್ನೆಲ್ಲ ಬಿಟ್ಟು ಎಂಬರ್ಥ; ಏಕೆಂದರೆ ಬಲಗಣ್ಣು ಇಂದ್ರಿಯವೆಂಬರ್ಥದಲ್ಲಿಯೇ ಇಲ್ಲಿ ಪ್ರಯುಕ್ತವಾಗಿದೆ.

2. ಮನಸ್ಸಿನಲ್ಲಿ ಸುಮ್ಮನೆ ನೆನಸಿಕೊಂಡರೆ ವಿಷಯವು ಎದುರಿಗಿರುವದಿಲ್ಲ, ಕನಸಿನಲ್ಲಿರುತ್ತದೆ. ಆದ್ದರಿಂದ ಇವೆರಡಕ್ಕೂ ಹೆಚ್ಚುಕಡಿಮೆ ಇದೆ. ಆದರೂ ಎಚ್ಚರದ ವಾಸನೆಯಿಂದ ಕನಸಾಗುವದು-ಎಂಬ ವ್ಯವಹಾರದೃಷ್ಟಿಯನ್ನಿಟ್ಟುಕೊಂಡು ಈ ಹೋಲಿಕೆಯನ್ನು ಹೇಳಿದೆ.

3. ಅನುಭವಿಸುವದನ್ನು ಬಿಟ್ಟು ಮಿಕ್ಕ ಮನಸ್ಸಿನ ವ್ಯಾಪಾರವನ್ನೆಲ್ಲ ಇಲ್ಲಿ ಸ್ಮರಣ ಎಂಬ ಮಾತಿನಿಂದ ತಿಳಿಯಬೇಕು.

4. ಪ್ರಾಜ್ಞನೆಂಬ ಕಾರಣಾತ್ಮನ ರೂಪದಿಂದಲೇ.

5. ಶ್ರುತಿಯಲ್ಲಿ ಮುಖ್ಯಪ್ರಾಣನಲ್ಲಿಯೇ ವಾಗಾದಿಗಳ ಲಯವನ್ನು ಹೇಳಿದೆಯಾದರೂ ಪ್ರಾಣೋಪಲಕ್ಷಿತನಾದ ಆತ್ಮನೇ ಸರ್ವವೂ ಲಯವಾಗುವ ಸ್ಥಾನವೆಂಬುದೂ ಆ ಶ್ರುತಿಯಲ್ಲಿ ಅಡಕವಾಗಿದೆ ಎಂಬ ದೃಷ್ಟಿಯಿಂದ ಇಲ್ಲಿ ಅದನ್ನು ಉದಾಹರಿಸಿದೆ.

6. ಹಿಂದೆ ವಿಶ್ವನೆಂದರೆ ವಿರಾಟ್ಪುರುಷನನ್ನು ಗ್ರಹಿಸಿದಂತೆ ಇಲ್ಲಿಯೂ ಸಮಷ್ಟ್ಯಭಿಮಾನಿಯನ್ನೇ ಗ್ರಹಿಸಬೇಕೆಂದು ಭಾವ.

ನಲ್ಲಿರುತ್ತಾನೆ. "(ಇವನ) ಲಿಂಗವಾದ ಮನಸ್ಸು (ಎಲ್ಲಿ ಆಸಕ್ತವಾಗಿರುವುದೋ ಅದನ್ನೇ ಕರ್ಮದೊಡನೆ ಪಡೆಯುತ್ತಾನೆ.)[1] " (ಬೃ. ೪-೪-೬), "ಈ ಪುರುಷನು ಮನೋಮಯನು " (ಬೃ. ೫-೬-೧)[2] ಮುಂತಾದ ಶ್ರುತಿಗಳು ಇದಕ್ಕೆ ಪ್ರಮಾಣವು.

## ಪ್ರಾಜ್ಞನೂ ಅವ್ಯಾಕೃತನೂ ಒಬ್ಬನೇ

(ಭಾಷ್ಯ)

೨೩. ನನು ವ್ಯಾಕೃತಃ ಪ್ರಾಣಃ । ಸುಷುಪ್ತೇ ತದಾತ್ಮಕಾನಿ ಕರಣಾನಿ ಭವನ್ತಿ । ಕಥಮ್ ಅವ್ಯಾಕೃತತಾ? ನೈಷ ದೋಷಃ । ಅವ್ಯಾಕೃತಸ್ಯ ದೇಶಕಾಲ ವಿಶೇಷಾಭಾವಾತ್ । ಯದ್ಯಪಿ ಪ್ರಾಣಾಭಿಮಾನೇ ಸತಿ ವ್ಯಾಕೃತತೈವ ಪ್ರಾಣಸ್ಯ, ತಥಾಪಿ ಪಿಣ್ಡಪರಿಚ್ಛಿನ್ನವಿಶೇಷಾಭಿಮಾನನಿರೋಧಃ ಪ್ರಾಣೇ ಭವತಿ ಇತ್ಯವ್ಯಾಕೃತ ಏವ ಪ್ರಾಣಃ ಸುಷುಪ್ತೇ ಪರಿಚ್ಛಿನ್ನಾಭಿಮಾನವತಾಮ್ । ಯಥಾ ಪ್ರಾಣಲಯೇ ಪರಿಚ್ಛಿನ್ನಾಭಿಮಾನಿನಾಂ ಪ್ರಾಣಃ ಅವ್ಯಾಕೃತಃ, ತಥಾ ಪ್ರಾಣಾಭಿಮಾನಿನೋಽಪಿ ಅವಿಶೇಷಾಪತ್ತ್ತೌ ಅವ್ಯಾಕೃತತಾ ಸಮಾನಾ । ಪ್ರಸವಬೀಜಾತ್ಮಕತ್ವಂ ಚ । ತದಧ್ಯಕ್ಷಶ್ಚ । ತೇನ ಏಕತ್ವಮ್ ಇತಿ ಪೂರ್ವೋಕ್ತಂ ವಿಶೇಷಣಂ ಏಕೀಭೂತಃ ಪ್ರಜ್ಞಾನಘನಃ ಇತ್ಯಾದ್ಯುಪಪನ್ನಮ್ ತಸ್ಮಿನ್ । ಉಕ್ತಹೇತುತ್ವಾಚ್ಚ[3] ॥

(ಭಾಷ್ಯಾರ್ಥ)

(ಆಕ್ಷೇಪ):—ಪ್ರಾಣವು ವ್ಯಾಕೃತವಾಗಿರುತ್ತವೆ. ಸುಷುಪ್ತಿಯಲ್ಲಿ ಕರಣಗಳು ಅದರ ಸ್ವರೂಪವನ್ನು (ಪಡೆದವು)ಗಳಾಗಿರುತ್ತವೆ. ಹೀಗಿರುವಲ್ಲಿ (ಅದು) ಅವ್ಯಾಕೃತವೆಂಬುದು ಹೇಗೆ?[4]

(ಸಮಾಧಾನ):—ಇದರಲ್ಲಿ ತಪ್ಪೇನೂ ಇಲ್ಲ. ಏಕೆಂದರೆ ಅವ್ಯಾಕೃತಕ್ಕೆ ದೇಶಕಾಲಗಳ ವಿಶೇಷವಿರುವದಿಲ್ಲ[5]. ಪ್ರಾಣದಲ್ಲಿ ಅಭಿಮಾನವಿರುವಾಗ ಪ್ರಾಣವು

---

1. ಮನಸ್ಸು ಲಿಂಗಶರೀರದಲ್ಲಿ ಮುಖ್ಯವಾಗಿರುವುದರಿಂದಲೂ, ಆತ್ಮನನ್ನು ತಿಳಿಯುವುದಕ್ಕೆ ಲಿಂಗ (ಗುರುತು) ಆಗಿರುವದರಿಂದಲೂ, ಅದನ್ನು ಲಿಂಗವೆಂದಿದೆ. ಜೀವನು ಮನಉಪಾಧಿಕನೆಂಬುದಕ್ಕೆ ಶ್ರುತಿಯನ್ನು ಉದಾಹರಿಸಿದೆ.

2. ಹಿರಣ್ಯಗರ್ಭನಿಗೆ ಸಮಷ್ಟಿಮನಸ್ಸು ಉಪಾಧಿಯೆಂಬುದಕ್ಕೆ ಶ್ರುತಿ.

3. ತಸ್ಮಿನ್ ಆದಬಳಿಕ ಏತಸ್ಮಿನ್ ಎಂದು ವಾ॥ ಕಾ॥ ಮೈ॥

4. ಮತ್ತೊಬ್ಬನು ನಿದ್ರಿಸುತ್ತಿರುವಾಗ ಅವನ ಪ್ರಾಣವು ವ್ಯಾಕೃತವಾಗಿರುತ್ತದೆ ಎಂಬ ದೃಷ್ಟಿಯಿಂದ ಆಕ್ಷೇಪವನ್ನು ಮಾಡಿದೆ. ವ್ಯಾಕೃತವೆಂದರೆ ನಾಮರೂಪಗಳಿಂದ ಬಿಡಿಯಾಗಿರುವದು.

5. ಹಾಗೆಯೇ ಸುಷುಪ್ತನಿಗೂ ವಿಶೇಷವಿರುವದಿಲ್ಲ. ಸುಷುಪ್ತನ ದೃಷ್ಟಿಯಿಂದ ಹೇಳಿದ ಸಮಾಧಾನವಿದು.

ವ್ಯಾಕೃತವಾಗಿಯೇ ಇರುವದು ನಿಜ. ಆದರೆ ಪರಿಚ್ಛಿನ್ನವಾದ (ಶರೀರದ) ಅಭಿಮಾನ ವಿರುವವರಿಗೆ ತನಿನಿದ್ರೆಯಲ್ಲಿ ಶರೀರಪರಿಚ್ಛಿನ್ನವಾದ ವಸ್ತುವಿಶೇಷವಿದೆಂಬ ಅಭಿಮಾನವು ಹೋಗಿಬಿಟ್ಟಿರುವದರಿಂದ[1] ಪ್ರಾಣವು ಅವ್ಯಾಕೃತವಾಗಿಯೇ ಇರುತ್ತದೆ. ಪರಿಚ್ಛಿನ್ನವಾದ (ಶರೀರದಲ್ಲಿ) ಅಭಿಮಾನವಿರುವವರಿಗೆ ಪ್ರಾಣವು ಲಯವಾದರೆ[2] ಹೇಗೆ ಪ್ರಾಣವು ಅವ್ಯಾಕೃತವಾಗುವದೋ ಹಾಗೆಯೇ ಪ್ರಾಣದ ಅಭಿಮಾನವಿರುವವರಿಗೆ (ಸುಷುಪ್ತಿಯಲ್ಲಿ ಅದು) ಸಾಮಾನ್ಯಾಕಾರವನ್ನು ತಳೆಯುವಾಗಲೂ ಅವ್ಯಾಕೃತ ವಾಗಿರುವದೆಂಬುದು ಸಮಾನವಾಗಿರುತ್ತದೆ. (ಮತ್ತೆ) ಹುಟ್ಟುವದಕ್ಕೆ ಕಾರಣ ವಾಗಿರುವ ರೂಪದಲ್ಲಿರುವದೆಂಬುದೂ (ಸಮಾನವಾಗಿರುತ್ತದೆ). ಅದರ[3] ಅಧ್ಯಕ್ಷನಾದ (ಆತ್ಮನು) ಒಬ್ಬನಾಗಿಯೂ ಅವ್ಯಾಕೃತಾವಸ್ಥೆಯಲ್ಲಿರುವವನಾಗಿಯೂ ಇರುತ್ತಾನೆ.[4] ಪರಿಚ್ಛಿನ್ನವಾದ (ಶರೀರಗಳಲ್ಲಿ) ಅಭಿಮಾನವುಳ್ಳ ಅಧ್ಯಕ್ಷರಾದವರೆಲ್ಲರೂ ಅವನಲ್ಲಿ ಒಂದಾಗಿರುತ್ತಾರೆ[5]. ಆದ್ದರಿಂದ[6] (ಅವನು) ಏಕೀಭೂತನು, ಪ್ರಜ್ಞಾನಘನನು- ಮುಂತಾದ ಹಿಂದೆ ಹೇಳಿದ ವಿಶೇಷಣವು[7] ಅವನಿಗೆ ಹೊಂದುತ್ತದೆ. ಮೇಲೆ ಹೇಳಿದ ಕಾರಣವಿರುವದರಿಂದಲೂ[8] (ಹೊಂದುತ್ತದೆ.)

---

1. ಪ್ರಾಣವು ಶರೀರದಲ್ಲಿಯೇ ಕೆಲಸಮಾಡುತ್ತಿರುವದೆಂಬ ಅರಿವು ಇಲ್ಲದಿರುವದರಿಂದ.

2. ಪ್ರಲಯವಾದರೆ ಎಂದರ್ಥ. ಸತ್ತರೆ ಎಂಬ ಆ॥ ವ್ಯಾಖ್ಯಾನವು ಅಪ್ರಕೃತ ವಿಚಾರ. ಆ ಪಕ್ಷದಲ್ಲಿ ದೃಷ್ಟಾಂತವು ಪರೋಕ್ಷವಾಗಿರುವದೆಂಬ ಅಸಿಷ್ಟವೂ ಉಂಟು.

3. ಸುಷುಪ್ತಿಯ.

4. ಆದ್ದರಿಂದ ಒಬ್ಬನಾಗಿ ಅವ್ಯಾಕೃತಾವಸ್ಥೆಯಲ್ಲಿರುವ ಈಶ್ವರನೂ ಅವನೂ ಒಂದೆನ್ನಬಹುದು.

5. ಆದ್ದರಿಂದಲೂ ಸುಷುಪ್ತನೂ ಅವ್ಯಾಕೃತಾತ್ಮನೂ ಒಬ್ಬನೇ.

6. ಸುಷುಪ್ತಾತ್ಮನೂ ಅವ್ಯಾಕೃತಾತ್ಮನೂ ಒಬ್ಬನೇ ಆಗಿರುವದರಿಂದಲೂ ಅದ್ವಿತೀಯ ನಾಗಿರುವದರಿಂದಲೂ,

7. ಆನಂದಮಯನು, ಸರ್ವೇಶ್ವರನು, ಸರ್ವಜ್ಞನು-ಎಂದು ಮುಂತಾಗಿ ಸುಷುಪ್ತಾತ್ಮನಿಗೆ ಮಂತ್ರದಲ್ಲಿ ಕೊಟ್ಟಿರುವ ವಿಶೇಷಣವು.

8. ದೇಶಕಾಲಗಳ ವಿಶೇಷವಿರುವದಿಲ್ಲವೆಂಬ ಹೇತುವಿರುವದರಿಂದಲೂ ಈ ವಿಶೇಷಣವು ಒಪ್ಪುತ್ತದೆ ಎಂದು ಅರ್ಥ. ಅಧ್ಯಾತ್ಮ, ಅಧಿದೈವ–ಎರಡೂ ಒಂದೆಂದು ಹೇಳಿರುವ ಯುಕ್ತಿಯು ಇರುವದರಿಂದಲೂ–ಎಂಬ ಆ॥ ವ್ಯಾಖ್ಯಾನವು ಸರಿಯಲ್ಲ. ಏಕೆಂದರೆ ವಿಶ್ವ ತೈಜಸರ ಪಕ್ಷದಲ್ಲಿರುವಂತೆ ಇಲ್ಲಿ ಅಧ್ಯಾತ್ಮಾಧಿದೈವಗಳಾಗಲಿ ವ್ಯಷ್ಟಿಸಮಷ್ಟಿಗಳಾಗಲಿ ಇರುವದಿಲ್ಲ.

# ಅವ್ಯಾಕೃತನಿಗೆ ಪ್ರಾಣನೆಂಬ ಹೆಸರು ಹೇಗೆ ?

(ಭಾಷ್ಯ)

೨೪. ಕಥಂ ಪ್ರಾಣಶಬ್ದತ್ವಮ್ ಅವ್ಯಾಕೃತಸ್ಯ? "ಪ್ರಾಣಬನ್ಧನಂ ಹಿ ಸೋಮ್ಯ ಮನಃ" (ಛಾಂ. ೬-೮-೧) ಇತಿ ಶ್ರುತೇಃ। ನನು ತತ್ರ "ಸದೇವ ಸೋಮ್ಯ" (ಛಾಂ. ೬-೨-೧) ಇತಿ ಪ್ರಕೃತಂ ಸದ್ಬ್ರಹ್ಮ ಪ್ರಾಣಶಬ್ದವಾಚ್ಯಮ್। ನೈಷ ದೋಷಃ। ಬೀಜಾತ್ಮಕತ್ವಾಭ್ಯುಪಗಮಾತ್ ಸತಃ। ಯದ್ಯಪಿ ಸದ್ಬ್ರಹ್ಮ ಪ್ರಾಣಶಬ್ದವಾಚ್ಯಂ ತತ್ರ ತಥಾಪಿ ಜೀವಪ್ರಸವಬೀಜಾತ್ಮಕತ್ವಮ್ ಅಪರಿತ್ಯಜ್ಯೈವ ಪ್ರಾಣಶಬ್ದತ್ವಂ ಸತಃ ಸಚ್ಛಬ್ದವಾಚ್ಯತಾ ಚ। ಯದಿ ಹಿ ನಿರ್ಬೀಜರೂಪಂ ವಿವಕ್ಷಿತಂ ಬ್ರಹ್ಮ ಅಭವಿಷ್ಯತ್ "ನೇತಿ ನೇತಿ" (ಬೃ. ೪-೪-೨೨) "ಯತೋ ವಾಚೋ ನಿವರ್ತನ್ತೇ" (ತೈ. ೨-೯) "ಅನ್ಯದೇವ ತದ್ವಿದಿತಾದಥೋ ಅವಿದಿತಾತ್" (ಕೇ. ೧-೩) ಇತಿ ಅವಕ್ಷ್ಯತ್। "ನ ಸತ್ತನ್ನಾಸದುಚ್ಯತೇ" (ಗೀ ೧೩-೧೨) ಇತಿ ಸ್ಮೃತೇಃ। ನಿರ್ಬೀಜತಯೈವ ಚೇತ್ ಸತಿ ಲೀನಾನಾಂ[1] ಸಂಪನ್ನಾನಾಂ ಸುಷುಪ್ತಪ್ರಲಯಯೋಃ ಪುನರುತ್ಥಾನಾನುಪಪತ್ತಿಃ ಸ್ಯಾತ್। ಮುಕ್ತಾನಾಂ ಚ ಪುನರುತ್ಪತ್ತಿಪ್ರಸಙ್ಗಃ। ಬೀಜಾಭಾವಾವಿಶೇಷಾತ್। ಜ್ಞಾನದಾಹ್ಯಬೀಜಾಭಾವೇ ಚ ಜ್ಞಾನಾನರ್ಥಕ್ಯ ಪ್ರಸಙ್ಗಃ। ತಸ್ಮಾತ್ ಸಬೀಜತ್ವಾಭ್ಯುಪಗಮೇನೈವ ಸತಃ ಪ್ರಾಣತ್ವವ್ಯಪದೇಶಃ ಸರ್ವ ಶ್ರುತಿಷು ಚ ಕಾರಣತ್ವವ್ಯಪದೇಶಃ ॥

(ಭಾಷ್ಯಾರ್ಥ)

(ಆಕ್ಷೇಪ) :—ಅವ್ಯಾಕೃತಾತ್ಮನಿಗೆ ಪ್ರಾಣ ಎಂಬ ಹೆಸರು ಕೊಟ್ಟದ್ದು ಹೇಗೆ (ಸರಿ)[2] ?

(ಪರಿಹಾರ) : —"ಪ್ರಾಣಬನ್ಧನಂ ಹಿ ಸೋಮ್ಯ ಮನಃ" (ಸೋಮ್ಯನೆ, ಮನಸ್ಸು ಪ್ರಾಣಕ್ಕೆ ಕಟ್ಟುಬಿದ್ದಿರುತ್ತದೆಯಲ್ಲವೆ ? (ಛಾಂ. ೬-೮-೧) ಎಂಬ ಶ್ರುತಿಯು[3] ಇದಕ್ಕೆ ಆಧಾರವು.

---

1. 'ಪ್ರಲೀನಾನಾಂ' ವಾ॥ ಕಾ॥ ಗೋ॥ ಪಾಠದಲ್ಲಿ ಈ ಮಾತು ಬಿಟ್ಟುಹೋಗಿದೆ.

2. ಮಾಂಡೂಕ್ಯಕಾರಿಕಾಕಾರರು ಈ ಪ್ರಕರಣದ ೬ನೆಯ ಕಾರಿಕೆಯಲ್ಲಿ ಅವ್ಯಾಕೃತಾತ್ಮನನ್ನು "ಪ್ರಾಣ" ಎಂಬ ಹೆಸರಿನಿಂದ ಕರೆದಿದ್ದಾರೆ. ಪ್ರಾಣವು ವ್ಯಾಕೃತವಾದ್ದರಿಂದ ಅದು ಸರಿಯಲ್ಲವೆಂದು ಆಕ್ಷೇಪಿಸಿ ಅದಕ್ಕೆ ಉತ್ತರವಾಗಿ ಹಿಂದೆ ಪ್ರಾಣವು ಸುಷುಪ್ತಿಯಲ್ಲಿ ಅವ್ಯಾಕೃತವೇ ಎಂದು ಹೇಳಲಾಗಿತ್ತು. ಈಗ ಪ್ರಾಣನೆಂದು ಕರೆಯುವದಕ್ಕೆ ಶ್ರುತಿಯಲ್ಲಿ ಆಧಾರವಿಲ್ಲವೆಂದು ಆಕ್ಷೇಪಿಸಿ ಸಮಾಧಾನವನ್ನು ಹೇಳುತ್ತಾರೆ.

3. ಈ ಶ್ರುತಿಯಲ್ಲಿ ಮನಸ್ಸೆಂಬ ಉಪಾಧಿಯ 'ಜೀವನನ್ನು ಮನಸ್ಸೆಂದೂ ಪ್ರಾಣೋಪಲಕ್ಷಿತವಾದ ಕಾರಣಬ್ರಹ್ಮವನ್ನು ಪ್ರಾಣವೆಂದೂ ಕರೆದಿದೆ. ಜೀವನು ಈ ಬ್ರಹ್ಮವನ್ನು ಆಶ್ರಯಿಸಿಕೊಂಡೇ ಇರುತ್ತಾನೆಂದು ವಾಕ್ಯದ ಅರ್ಥ.

(ಆಕ್ಷೇಪ):—ಆ ಶ್ರುತಿಯಲ್ಲಿ "ಸೋಮ್ಯನೆ, ಇದು ಮೊದಲು ಸತ್ತೇ ಆಗಿತ್ತು" (ಛಾಂ. ೬-೨-೧) ಎಂದು ಪ್ರಕೃತವಾಗಿರುವ ಸತ್ತೆಂಬ ಬ್ರಹ್ಮವನ್ನಲ್ಲವೆ[1], ಪ್ರಾಣಶಬ್ದದಿಂದ ಕರೆದಿರುವದು ?

(ಪರಿಹಾರ):—ಇದೇನೂ ತಪ್ಪಲ್ಲ. ಏಕೆಂದರೆ ಸತ್ತು ಬೀಜಾತ್ಮಕವಾಗಿರುತ್ತದೆ ಎಂದು (ಅಲ್ಲಿ) ಒಪ್ಪಿರುತ್ತದೆ. ಆ (ಶ್ರುತಿಯಲ್ಲಿ) ಸತ್ತೆಂಬ ಬ್ರಹ್ಮವನ್ನೇ ಪ್ರಾಣಶಬ್ದದಿಂದ ಕರೆದಿದೆಯೆಂಬುದು ನಿಜ ; ಆದರೂ ಜೀವನು ಹುಟ್ಟುವ ಬೀಜರೂಪವನ್ನು ಬಿಡದೆಯೇ[2] ಸತ್ತನ್ನು ಪ್ರಾಣವೆಂದು ಕರೆದಿದೆ. (ಅದನ್ನು) ಸತ್ತೆಂಬ ಹೆಸರಿನಿಂದ ಕರೆದಿರುವದೂ ಹಾಗೆಯೇ[3]. ನಿರ್ಬೀಜರೂಪವಾದ[4] ಬ್ರಹ್ಮವನ್ನು ಹೇಳಬೇಕೆಂಬ ಅಭಿಪ್ರಾಯವು(ಶ್ರುತಿ)ಗಿದ್ದರೆ "ಇದಲ್ಲ, ಇದಲ್ಲ" (ಬೃ. ೪-೪-೨೨), "ಯಾವದರಿಂದ ವಾಕ್ಕುಗಳು ಹಿಂದಿರುಗುತ್ತವೆಯೋ" (ತೈ. ೨-೯), "ಅದು ತಿಳಿದದ್ದಕ್ಕಿಂತಲೂ ಬೇರೆಯೇ, ಮತ್ತು ತಿಳಿಯದ್ದಕ್ಕಿಂತಲೂ ಬೇರೆಯೇ"[5] (ಕೇ. ೧-೩) ಎಂದು ಹೇಳುತ್ತಿತ್ತು. "ಅದು ಸತ್ತೂ ಅಲ್ಲ, ಅಸತ್ತೆಂದೂ ಹೇಳಲ್ಪಡುವದಲ್ಲ."[6] (ಗೀ. ೧೩-೨) ಎಂದು ಸ್ಮೃತಿಯೂ ಇದೆ. ನಿರ್ಬೀಜವಾಗಿಯೇ (ಇರುವ ಬ್ರಹ್ಮವನ್ನು ಹೇಳಿದ್ದರೆ) ತನಿನಿದ್ರೆಯಲ್ಲಿಯೂ, ಪ್ರಲಯದಲ್ಲಿಯೂ[7] ಸತ್ತಿನಲ್ಲಿ ಲಯವಾಗಿ ಒಂದಾದವರು[8] ಮತ್ತೆ (ಅಲ್ಲಿಂದ) ಏಳಬಾರದಾಗುವದು, ಅಥವಾ ಮುಕ್ತರಾದವರೂ ಮತ್ತೆ ಹುಟ್ಟಬಹುದಾಗುವದು ; ಏಕೆಂದರೆ ಬೀಜವಿಲ್ಲವೆಂಬುದು[9] (ಇಬ್ಬರಿಗೂ) ಸಮಾನವಾಗಿರುತ್ತದೆ.

---

1. ತನಗೆರಡನೆಯದಿಲ್ಲದ ಒಂದೇ ಒಂದಾಗಿದ್ದ ಬ್ರಹ್ಮವನ್ನೇ ಸತ್ತೆಂದೂ ಪ್ರಾಣನೆಂದೂ ಶ್ರುತಿಯಲ್ಲಿ ಕರೆದಿದೆ; ಅದನ್ನು ಅವ್ಯಾಕೃತಾತ್ಮನೆಂದು ಕರೆದದ್ದು ಹೇಗೆ ?–ಎಂದು ಆಕ್ಷೇಪ.

2. ಜಗತ್ತನ್ನು ಸೃಷ್ಟಿಸಿ ಜೀವರೂಪದಿಂದ ಸತ್ತು ಸೃಷ್ಟವಾದ ದೇಹಗಳಲ್ಲಿ ಪ್ರವೇಶಿಸಿತು (ಛಾಂ. ಭಾ. ೬–೩–೩) ಎಂದು ಈ ಶ್ರುತಿಯಲ್ಲಿದೆ.

3. ನಿರುಪಾಧಿಕವಾದ ಬ್ರಹ್ಮವು ಆತ್ಮಾದಿಶಬ್ದಗಳಿಂದಲೂ ವಾಚ್ಯವಲ್ಲ. ಛಾಂ. ಭಾ. ೭–೧–೩.

4. ಕಾರಣತ್ವವೆಂಬ ಧರ್ಮವಿಲ್ಲದ.

5. ತಿಳಿದದ್ದು ಎಂದರೆ ವ್ಯಾಕೃತ, ತಿಳಿಯದ್ದು ಎಂದರೆ ಅವ್ಯಾಕೃತ.

6. ಸತ್ತೆಂದರೆ ವ್ಯಾಕೃತ, ಅಸತ್ತೆಂದರೆ ಅವ್ಯಾಕೃತ.

7. ಮರಣದಲ್ಲಿಯೂ ಹೀಗೆಯೇ ಕಾರಣಬ್ರಹ್ಮದಲ್ಲಿ ಲಯವಾಗುತ್ತದೆ (ಛಾಂ. ಭಾ. ೬–೯–೨.)

8. ಮಡಕೆ, ಕುಡಿಕೆ–ಮುಂತಾದವು ಮಣ್ಣಾಗುವಂತೆ ಕಾರಣಬ್ರಹ್ಮಸ್ವರೂಪವನ್ನು ಪಡೆದವರು ಎಂದರ್ಥ.

9. ಅಜ್ಞಾನಕಲ್ಪಿತವಾದ ಕಾರಣತ್ವವಿಲ್ಲವೆಂಬುದು.

ಜ್ಞಾನದಿಂದ ಸುಟ್ಟುಹಾಕಬೇಕಾದ ಬೀಜವೇ ಇಲ್ಲದಿದ್ದರೆ ಜ್ಞಾನವೇ[1] ವ್ಯರ್ಥವಾದೀತು. ಆದ್ದರಿಂದ ಬೀಜತ್ವದಿಂದ ಕೂಡಿರುವದೆಂದು ಇಟ್ಟುಕೊಂಡೇ ಸತ್ತಿಗೆ (ಶ್ರುತಿಯಲ್ಲಿ) ಪ್ರಾಣನೆಂಬ ಹೆಸರನ್ನು ಕೊಟ್ಟಿದೆ; ಎಲ್ಲಾ ಶ್ರುತಿಗಳಲ್ಲಿಯೂ (ಬ್ರಹ್ಮವು ಜಗತ್ತಿಗೆ) ಕಾರಣವೆಂದು ಹೇಳಿರುವದು ಹೀಗೆಯೇ[2].

## ಶುದ್ಧಬ್ರಹ್ಮವನ್ನು ಶ್ರುತಿಯಲ್ಲಿಯೂ ಕಾರಿಕೆಯಲ್ಲಿಯೂ ಹೇಳಿದೆ

### (ಭಾಷ್ಯ)

೨೫. ಅತ ಏವ "ಅಕ್ಷರಾತ್ ಪರತಃ ಪರಃ" (ಮುಂ. ೨-೧-೨) "ಸಬಾಹ್ಯಾಭ್ಯನ್ತರೋ ಹ್ಯಜಃ" (ಮುಂ. ೨-೧-೨) "ಯತೋ ವಾಚೋ ನಿವರ್ತನ್ತೇ" (ತೈ. ೨-೯) "ನೇತಿ ನೇತಿ" (ಬೃ. ೨-೩-೬). ಇತ್ಯಾದಿ ಸಬೀಜವತ್ತ್ವಾಪನಯನೇನ[3] ವ್ಯಪದೇಶಃ । ತಾಮ್ ಅಬೀಜಾವಸ್ಥಾಂ ತಸ್ಯೈವ ಪ್ರಾಜ್ಞಶಬ್ದವಾಚ್ಯಸ್ಯ ತುರೀಯತ್ವೇನ ದೇಹಾದಿಸಮ್ಬನ್ಧರಹಿತಾಂ ಪಾರಮಾರ್ಥಿಕೀಂ ಪೃಥಗ್ ವಕ್ಷ್ಯತಿ ॥

### (ಭಾಷ್ಯಾರ್ಥ)

ಆದ್ದರಿಂದಲೇ "ಹೆಚ್ಚಿನ ಅಕ್ಷರಕ್ಕಿಂತಲೂ ಹೆಚ್ಚಿನವನು"[4] (ಮುಂ. ೨-೧-೨) "ಒಳಗೂ ಹೊರಗೂ ಜನ್ಮವಿಲ್ಲದವನು"[5] (ಮುಂ. ೨-೧-೨) "ಯಾವದನ್ನು ತಿಳಿಸಲಾರದೆ ವಾಕ್ಯಗಳು ಹಿಂದಿರುಗುತ್ತವೆಯೋ"[6] (ತೈ. ೨-೯), "ಇದಲ್ಲ ಇದಲ್ಲ"[7]

---

1. ಕಾರಣತ್ವವು ಅಜ್ಞಾನಕಲ್ಪಿತವಲ್ಲವೆಂದೂ ಕಾರಣಕಾರ್ಯರೂಪಗಳೆರಡೂ ಸತ್ಯವೇ ಎಂದೂ ಹೇಳುವ ಭರ್ತೃಪ್ರಪಂಚಾದಿಗಳ ಮತವನ್ನು ಇಲ್ಲಿ ಖಂಡಿಸಿದೆ. "ಅನಾದ್ಯನಿರ್ವಾಚ್ಯವಾದ ಅಜ್ಞಾನವು ಸಂಸಾರಕಾರಣವೆಂದು ಇಲ್ಲಿ ಸಾಧಿಸಿರುತ್ತದೆ" ಎಂಬ ಆ॥ ವ್ಯಾಖ್ಯಾನವು ಭಾಷ್ಯಾಕ್ಷರಕ್ಕೆ ಅನನುಗುಣವಾಗಿಯೂ, ಭಾಷ್ಯಬಹಿರ್ಭೂತವಾದ ಪ್ರಸ್ಥಾನವನ್ನು ಬಲಾತ್ಕಾರದಿಂದ ಎಳೆತಂದಿರುವದೂ ಆಗಿದೆ. ಪೀಠಿಕೆಯನ್ನು ನೋಡಿ.

2. ಏಕೆಂದರೆ ಸೃಷ್ಟಿಯು ಪರಮಾರ್ಥವಲ್ಲ.

3. "ಬೀಜತ್ವಾಪನಯನೇನ" ವಾ॥

4. ಕಾರ್ಯಪ್ರಪಂಚಕ್ಕೆಲ್ಲ ಕಾರಣವಾಗಿರುವದರಿಂದ ಹೆಚ್ಚಿನದಾಗಿರುವ ಅಕ್ಷರವೆಂಬ ಅವ್ಯಾಕೃತಕ್ಕಿಂತಲೂ ಹೆಚ್ಚಿನವನು-ಎಂದು ಶ್ರುತಿಗೆ ಅರ್ಥ.

5. ಒಳಗೆ ಎಂದರೆ ತನ್ನ ಸ್ವರೂಪದಿಂದಲೇ ಆಗಲಿ, ಹೊರಗೆ ಎಂದರೆ ಹೊರಗಿನ ನಿಮಿತ್ತದಿಂದಲೇ ಆಗಲಿ ಜನ್ಮವಿಲ್ಲದವನು ಎಂದು ಶ್ರುತ್ಯರ್ಥ. ಜನ್ಮವಿಲ್ಲದವನು ಎಂದದ್ದರಿಂದ ಸಬೀಜತ್ವವನ್ನು ಅಲ್ಲಗಳೆದಂತಾಯಿತು.

6. ಬೀಜತ್ವವಿದ್ದರೆ ಜಗತ್ಕಾರಣವೆಂಬ ಮಾತಿನಿಂದ ಬ್ರಹ್ಮವನ್ನು ತಿಳಿಸಬಹುದಾಗುತ್ತಿತ್ತು.

7. ಮೂರ್ತ, ಅಮೂರ್ತ, ಅವುಗಳ ವಾಸನೆ-ಯಾವದೂ ಇಲ್ಲದ್ದು ಎಂದದ್ದರಿಂದ ಬ್ರಹ್ಮದಲ್ಲಿ ಕಾರಣತ್ವವನ್ನೂ ಅಲ್ಲಗಳೆದಂತೆ ಆಯಿತು.

(ಬೃ. ೨-೩-೬) ಎಂದು ಮುಂತಾಗಿ (ಶ್ರುತಿಯಲ್ಲಿ ಬ್ರಹ್ಮದ) ಸಬೀಜತ್ವವನ್ನು ತೆಗೆದು ಹಾಕಿ[1] ಹೇಳಿರುತ್ತದೆ. **ದೇಹವೇ ಮುಂತಾದವುಗಳ ಸಂಬಂಧವಿಲ್ಲದ[2] ಪಾರಮಾರ್ಥಿಕವಾದ ಆ ನಿರ್ಬೀಜವಾದ ಅವಸ್ಥೆಯನ್ನು[3] ಪ್ರಾಜ್ಞಶಬ್ದ ವಾಚ್ಯನಾದ ಅದೇ (ಆತ್ಮನಿಗೇ) ಬೇರೆಯಾಗಿ ತುರೀಯನೆಂದು ಮುಂದೆ[4] ಹೇಳಿರುತ್ತದೆ.**

## ಎಚ್ಚರದಲ್ಲಿಯೇ ಪ್ರಾಜ್ಞನ ಅನುಭವವೂ ಇದೆ

**(ಭಾಷ್ಯ)**

೨೬. ಬೀಜಾವಸ್ಥಾಪಿ "ನ ಕಿಂಚಿದವೇದಿಷಮ್" ಇತಿ ಉತ್ಥಿತಸ್ಯ ಪ್ರತ್ಯಯದರ್ಶನಾತ್ ದೇಹೇ ಅನುಭೂಯತ ಏವ ಇತಿ "ತ್ರಿಧಾ ದೇಹೇ ವ್ಯವಸ್ಥಿತಃ" ಇತ್ಯುಚ್ಯತೇ ||

**(ಭಾಷ್ಯಾರ್ಥ)**

ಬೀಜಾವಸ್ಥೆಯೂ "ನನಗೆ ಏನೂ ತಿಳಿಯಬರಲಿಲ್ಲ" ಎಂದು ಎಚ್ಚತ್ತವನಿಗೆ ಪ್ರತ್ಯಯವುಂಟಾಗುವದರಿಂದ ದೇಹದಲ್ಲಿ ಅನುಭವಕ್ಕೆ ಬಂದೇ ಬರುತ್ತದೆ[5]. ಆದ್ದರಿಂದ "ದೇಹದಲ್ಲಿ ಮೂರು ಬಗೆಯಾಗಿ ಇದ್ದುಕೊಂಡಿರುವನು." ಎಂದು (ಕಾರಿಕೆಯಲ್ಲಿ) ಹೇಳಿರುತ್ತದೆ.

---

1. ಅಜ್ಞರ ದೃಷ್ಟಿಯಿಂದ ಒಪ್ಪಿಕೊಂಡಿದ್ದ ಕಾರಣತ್ವವೆಂಬ ಆಧ್ಯಾರೋಪವನ್ನು ಅಲ್ಲಗಳೆದು ಎಂದರ್ಥ.

2. ಪ್ರಾಜ್ಞನಿಗೂ ದೇಹಾದಿಗಳ ಸಂಬಂಧವಿಲ್ಲವಾದರೂ ಅಜ್ಞರು 'ದೇಹಸಹಿತವಾಗಿ ಮಲಗಿಕೊಂಡು ನಿದ್ರಿಸಿದೆನು' ಎಂದು ಕಲ್ಪಿಸುತ್ತಾರೆ. ಆ ದೃಷ್ಟಿಯಿಂದ ಪ್ರಾಜ್ಞನಿಗೆ ದೇಹಾದಿಗಳ ಸಂಬಂಧವುಂಟು.

3. ಮಿಕ್ಕ ಮೂರೂ ಅಜ್ಞಾನಕಲ್ಪಿತವಾದ ಅವಸ್ಥೆಗಳು; ತುರೀಯವು ಆತ್ಮನು ಸ್ವರೂಪದಲ್ಲಿರುವ ಪಾರಮಾರ್ಥಿಕವಾದ ಅವಸ್ಥೆ. ಇದನ್ನು ಅವಸ್ಥೆಯೆಂದು ಕರೆದಿರುವದು ಅಜ್ಞಾನಿಗಳು ಕಲ್ಪಿಸಿರುವ ಅವಸ್ಥಾದೃಷ್ಟಿಯಿಂದ. "ಬ್ರಹ್ಮಾತ್ಮಭಾವಸ್ಯ ಅನವಸ್ಥಾವಿಶೇಷನಿಬನ್ಧನತ್ವಾತ್" ಎಂದು ಸೂ. ಭಾ. ೨-೧-೧೪ ರಲ್ಲಿ ಬರೆದಿರುವದನ್ನು ನೋಡಿ.

4. ಉಪನಿಷತ್ತಿನ ೭ನೆಯ ಮಂತ್ರದಲ್ಲಿಯೂ ಅದರ ಮೇಲೆ ಬರೆದಿರುವ ಕಾರಿಕೆಗಳಲ್ಲಿಯೂ.

5. ಸುಷುಪ್ತಿಯ ಪ್ರತ್ಯಯವು ಉಂಟಾಗುವ ಮುಂಚೆ ಆ ಅವಸ್ಥೆಯ ಅನುಭವವನ್ನು ತಂದುಕೊಳ್ಳಲೇ ಬೇಕು. ಇದರಂತೆ ಕನಸಿನ ಪ್ರತ್ಯಯವನ್ನೂ ಅರಿಯಬೇಕು. ಕಾರಿಕೆಯಲ್ಲಿ 'ದೇಹೇ' ಎಂದರೆ ಎಚ್ಚರದ ದೇಹದಲ್ಲಿ, ಎಚ್ಚರದವಸ್ಥೆಯಲ್ಲಿ, ಎಂದರ್ಥ

## ಭೋಕ್ತೃ ಒಬ್ಬನೇ, ಭೋಜ್ಯವೂ ಒಂದೇ

**ವಿಶ್ವೋ ಹಿ ಸ್ಥೂಲಭುಙ್ನಿತ್ಯಂ ತೈಜಸಃ ಪ್ರವಿವಿಕ್ತಭುಕ್ ।**
**ಆನನ್ದಭುಕ್ತಥಾ ಪ್ರಾಜ್ಞಸ್ತ್ರಿಧಾ ಭೋಗಂ ನಿಬೋಧತ ॥ ೩ ॥**
**ಸ್ಥೂಲಂ ತರ್ಪಯತೇ ವಿಶ್ವಂ ಪ್ರವಿವಿಕ್ತಂ ತು ತೈಜಸಮ್ ।**
**ಆನನ್ದಶ್ಚ ತಥಾ ಪ್ರಾಜ್ಞಂ ತ್ರಿಧಾ ತೃಪ್ತಿಂ ನಿಬೋಧತ ॥ ೪ ॥**

೩-೪. ವಿಶ್ವನು ನಿತ್ಯವಾಗಿ ಸ್ಥೂಲಭೋಗಿಯೇ ಆಗಿರುವನು; ತೈಜಸನು ಪ್ರವಿವಿಕ್ತಭೋಗಿಯು, ಪ್ರಾಜ್ಞನು ಆನಂದಭೋಗಿಯು. ಹೀಗೆ ಭೋಗವು ಮೂರು ಬಗೆಯೆಂದು ತಿಳಿಯಿರಿ. ಸ್ಥೂಲವು ವಿಶ್ವನಿಗೆ ತೃಪ್ತಿಯನ್ನು ಉಂಟುಮಾಡುವದು; ಪ್ರವಿವಿಕ್ತವಾದದ್ದು ತೈಜಸನಿಗೆ ತೃಪ್ತಿಯನ್ನುಂಟುಮಾಡುವದು. ಆನಂದವು ಪ್ರಾಜ್ಞನಿಗೆ ತೃಪ್ತಿಯನ್ನುಂಟುಮಾಡುವದು. ಹೀಗೆ ತೃಪ್ತಿಯು ಮೂರು ಬಗೆ ಎಂದು ತಿಳಿಯಿರಿ.

(ಭಾಷ್ಯ)

೨೭. ಉಕ್ತಾರ್ಥೌ[1] ಶ್ಲೋಕೌ ॥

(ಭಾಷ್ಯಾರ್ಥ)

ಇವೆರಡೂ ಶ್ಲೋಕಗಳಿಗೆ ಹಿಂದೆ[2] ಅರ್ಥವನ್ನು ಹೇಳಿರುತ್ತದೆ.

**ತ್ರಿಷು ಧಾಮಸು ಯದ್ಭೋಜ್ಯಂ[3] ಭೋಕ್ತಾ ಯಶ್ಚ ಪ್ರಕೀರ್ತಿತಃ ।**
**ವೇದೈತದುಭಯಂ ಯಸ್ತು ಸ ಭುಞ್ಜಾನೋ ನ ಲಿಪ್ಯತೇ ॥ ೫ ॥**

೫. ಮೂರು ಸ್ಥಲಗಳಲ್ಲಿಯೂ ಯಾವದು ಭೋಜ್ಯವೋ ಮತ್ತು ಯಾವನು ಭೋಕ್ತೃವೆನಿಸಿರುವನೋ ಇವೆರಡನ್ನೂ ಯಾವನು ಅರಿತುಕೊಳ್ಳುತ್ತಾನೋ ಅವನು ಭೋಗಿಸಿದರೂ ಲೇಪವನ್ನು ಹೊಂದುವದಿಲ್ಲ.

(ಭಾಷ್ಯ)

೨೮. ತ್ರಿಷು ಧಾಮಸು ಯತ್[4] ಜಾಗ್ರದಾದಿಷು ಸ್ಥೂಲಪ್ರವಿವಿಕ್ತಾನನ್ದಾಖ್ಯಂ ಭೋಜ್ಯಮ್ ಏಕಂ ತ್ರಿಧಾಭೂತಂ । ಯಶ್ಚ ವಿಶ್ವತೈಜಸಪ್ರಾಜ್ಞಾಖ್ಯೋ

---

1. 'ಅರ್ಥೌ ಹಿ' ಪಾ॥
2. ಉಪನಿಷತ್ತಿನ ಭಾಷ್ಯದಲ್ಲಿ.
3. "ಭೋಗ್ಯಮ್" ಎಂದು ಪಾಠಾಂತರ.
4. ಈ ಮಾತು ಕೈಬಿಟ್ಟುಹೋಗಿದೆ.

ಭೋಕ್ತಾ ಏಕಃ 'ಸೋಽಹಮ್' ಇತ್ಯೇಕತ್ವೇನ ಪ್ರತಿಸನ್ಧಾನಾತ್ ದ್ರಷ್ಟೃತ್ವಾವಿಶೇಷಾಚ್ಚ ಪ್ರಕೀರ್ತಿತಃ । ಯೋ ವೇದ ಏತದುಭಯಂ ಭೋಜ್ಯಭೋಕ್ತೃತಯಾ ಅನೇಕಧಾ ಭಿನ್ನಂ ಸಃ ಭುಞ್ಜಾನಃ ನ ಲಿಪ್ಯತೇ । ಭೋಜ್ಯಸ್ಯ ಸರ್ವಸ್ಯ ಏಕಸ್ಯ ಭೋಕ್ತುಃ ಭೋಜ್ಯತ್ವಾತ್ । ನ ಹಿ ಯಸ್ಯ ಯೋ ವಿಷಯಃ ಸ ತೇನ ಹೀಯತೇ ವರ್ಧತೇ ವಾ । ನ ಹಿ ಅಗ್ನಿಃ ಸ್ವವಿಷಯಂ ದಗ್ಧ್ವಾ ಕಾಷ್ಠಾದಿ । ತದ್ವತ್ ॥

(ಭಾಷ್ಯಾರ್ಥ)

ಮೂರು ಸ್ಥಲಗಳಲ್ಲಿಯೂ ಎಂದರೆ ಎಚ್ಚರ ಮುಂತಾದ (ಮೂರು ಅವಸ್ಥೆಗಳಲ್ಲಿಯೂ) ಸ್ಥೂಲ, ಪ್ರವಿವಿಕ್ತ, ಆನಂದ-ಎಂದು ಮೂರು ಬಗೆಯಾಗಿರುವ ಒಂದೇ ಭೋಜ್ಯವಿದೆಯಲ್ಲ (ಅದು) ; ಮತ್ತು ವಿಶ್ವ, ತೈಜಸ, ಪ್ರಾಜ್ಞ-ಎಂಬ (ಮೂರು ಬಗೆಯಾಗಿರುವ) ಭೋಕ್ತನು ಒಬ್ಬನೇ ಇರುವನಲ್ಲ-'ಅವನೇ ನಾನು' ಎಂದು ಒಬ್ಬನನ್ನೇ ಪ್ರತ್ಯಭಿಜ್ಞೆಯಿಂದ ಅರಿಯುವದರಿಂದಲೂ (ಎಲ್ಲರೂ) ಸಮಾನವಾಗಿ ದ್ರಷ್ಟೃವೇ ಆಗಿರುವದರಿಂದಲೂ (ಒಬ್ಬನೇ ಆಗಿರುವನೆಂದು ಗೊತ್ತಾಗುವದಲ್ಲ)-(ಅವನು), ಈ ಎರಡನ್ನೂ ಭೋಕ್ತೃಗಳೆಂದೂ ಭೋಜ್ಯಗಳೆಂದೂ ಹಲವು ಬಗೆಯಾಗಿ ಭಿನ್ನವಾಗಿರುವ (ಈ ಎರಡನ್ನೂ) ಯಾವನು ಅರಿತುಕೊಳ್ಳುತ್ತಾನೋ ಅವನು ಅನುಭವಿಸಿದರೂ ಲಿಪ್ತನಾಗುವದಿಲ್ಲ. ಏಕೆಂದರೆ ಭೋಜ್ಯವೆಲ್ಲವೂ ಒಬ್ಬ ಭೋಕ್ತೃವಿಗೇ ಭೋಜ್ಯವಾಗಿರುತ್ತದೆ[1]. ಯಾವನಿಗೆ ಯಾವದು ವಿಷಯುವೋ ಆವನು ಅದರಿಂದ ಕುಂದುವದೂ ಇಲ್ಲ, ಹೆಚ್ಚುವದೂ ಇಲ್ಲ. ಉದಾಹರಣೆಗೆ ಬೆಂಕಿಯು ತನ್ನ ವಿಷಯವಾದ ಕಟ್ಟಿಗೆಯೇ ಮುಂತಾದದ್ದನ್ನು ಸುಟ್ಟರೆ (ಅದರಿಂದ ಹೆಚ್ಚುವದಾಗಲಿ ಕುಂದುವದಾಗಲಿ ಇರುವದಿಲ್ಲ). ಅದರಂತೆಯೇ (ಇದನ್ನು ತಿಳಿಯಬೇಕು)[2].

---

1. ಒಬ್ಬನೇ ಆತ್ಮನು ವಿಶ್ವತೈಜಸಪ್ರಾಜ್ಞರಾಗಿ ಕಾಣುತ್ತಿರುವನೆಂದು ಅರಿತುಕೊಂಡರೆ ಆ ದೃಷ್ಟಿಯಿಂದ ವಿಶ್ವತ್ವಾದಿಗಳು ಆತ್ಮನ ಸ್ವಭಾವವಲ್ಲವೆಂದಾಗುವದರಿಂದ ವಿಶ್ವಾದಿಗಳ ಭೋಗಗಳೂ ಆತ್ಮನಿಗೆ ನಿಜವಾಗಿಲ್ಲವೆಂದೇ ಏರ್ಪಡುತ್ತದೆ. ಈ ಯುಕ್ತಿಯನ್ನು ಕೈಬಿಟ್ಟೇ ವಿಷಯವಾದ ಭೋಜ್ಯದಿಂದ ವಿಷಯಿಯಾದ ಭೋಕ್ತೃವಿಗೆ ಲೇಪವಿಲ್ಲವೆಂದು ಇಲ್ಲಿ ವಾದಿಸಿರುತ್ತದೆ.

2. ಬೆಂಕಿಯು ಕಟ್ಟಿಗೆಯ ಸಂಬಂಧದಿಂದ ಮಾರ್ಪಟ್ಟಂತೆ ತೋರಿದರೂ ಬಿಸಿ ಬೆಳಕುಗಳ ಸ್ವಭಾವದಿಂದಲೇ ಮೊದಲಿನಂತೆಯೇ ಇರುವಂತೆ ಆತ್ಮನು ಮಾರ್ಪಡುವದಿಲ್ಲ- ಎಂದು ಅಭಿಪ್ರಾಯ. ಭೋಕ್ತೃವು ಒಬ್ಬನೇ ಆದರೆ ಭೋಜ್ಯಾಭೋಜ್ಯವಿಭಾಗವೂ, ಇಲ್ಲವಾದ್ದರಿಂದ ಭೋಜ್ಯಕೃತದೋಷವಿಲ್ಲ-ಎಂದೂ ವ್ಯಾವಹಾರಿಕದೃಷ್ಟಿಯಿಂದ ಯುಕ್ತಿಯನ್ನು ಕೊಡಬಹುದು.

## ಪ್ರಾಣಾತ್ಮನಿಂದ ಸೃಷ್ಟಿ, ಸತ್ಕಾರ್ಯವಾದ

**ಪ್ರಭವಃ ಸರ್ವಭಾವಾನಾಂ ಸತಾಮಿತಿ ವಿನಿಶ್ಚಯಃ ।**
**ಸರ್ವಂ ಜನಯತಿ ಪ್ರಾಣಶ್ಚೇತೋಽಂಶೂನ್ ಪುರುಷಃ ಪೃಥಕ್ ॥ ೬ ॥**

೬. ಸತ್ತಾಗಿರುವ ಸರ್ವಭಾವಗಳಿಗೇ ಉತ್ಪತ್ತಿಯು ಎಂದು ನಿಶ್ಚಯವು. ಪ್ರಾಣನೆಂಬ ಪುರುಷನು ಎಲ್ಲವನ್ನೂ ಹುಟ್ಟಿಸುತ್ತಾನೆ, ಚೇತಸ್ಸಿನ ಕಿರಣಗಳನ್ನೂ ಬೇರೆಯಾಗಿ (ಹುಟ್ಟಿಸುತ್ತಾನೆ).

(ಭಾಷ್ಯ)

೫೯. ಸತಾಂ ವಿದ್ಯಮಾನಾನಾಂ ಸ್ವೇನ ಅವಿದ್ಯಾಕೃತನಾಮರೂಪಮಾಯಾಸ್ವರೂಪೇಣ ಸರ್ವಭಾವಾನಾಂ ವಿಶ್ವತೈಜಸಪ್ರಾಜ್ಞಭೇದಾನಾಂ ಪ್ರಭವಃ ಉತ್ಪತ್ತಿಃ[1] । ವಕ್ಷ್ಯತಿ ಚ–"ವನ್ಧ್ಯಾಪುತ್ರೋ ನ ತತ್ತ್ವೇನ ಮಾಯಯಾ ವಾಪಿ ಜಾಯತೇ" (ಕಾ. ೩-೨೮) ಇತಿ । ಯದಿ ಹಿ ಅಸತಾಮೇವ ಜನ್ಮ ಸ್ಯಾತ್ ಬ್ರಹ್ಮಣಃ ಅವ್ಯವಹಾರ್ಯಸ್ಯ ಗ್ರಹಣದ್ವಾರಾಭಾವಾತ್ ಅಸತ್ತ್ವಪ್ರಸಙ್ಗಃ । ದೃಷ್ಟಂ ಚ ರಜ್ಜುಸರ್ಪಾದೀನಾಮ್ ಅವಿದ್ಯಾಕೃತಮಾಯಾಬೀಜೋತ್ಪನ್ನಾನಾಂ ರಜ್ಜ್ವಾದ್ಯಾತ್ಮನಾ ಸತ್ತ್ವಮ್ । ನ ಹಿ ನಿರಾಸ್ಪದಾ ರಜ್ಜುಸರ್ಪಮೃಗತೃಷ್ಣಿಕಾದಯಃ ಕ್ವಚಿತ್ ಉಪಲಭ್ಯನ್ತೇ ಕೇನಚಿತ್ । ಯಥಾ ರಜ್ಜ್ವಾಂ ಪ್ರಾಕ್ ಸರ್ಪೋತ್ಪತ್ತೇಃ ರಜ್ಜ್ವಾತ್ಮನಾ ಸರ್ಪಃ ಸನ್ನೇವ ಆಸೀತ್, ಏವಂ ಸರ್ವಭಾವಾನಾಮ್ ಉತ್ಪತ್ತೇಃ ಪ್ರಾಕ್ ಪ್ರಾಣಬೀಜಾತ್ಮನೈವ ಸತ್ತ್ವಮ್ । ಇತ್ಯತಃ ಶ್ರುತಿರಪಿ ವಕ್ತಿ–"ಬ್ರಹ್ಮೈವೇದಮ್" (ಮುಂ. ೨-೨-೧೧), "ಆತ್ಮೈವೇದಮಗ್ರ ಆಸೀತ್"[2] (ಬೃ. ೧-೪-೧) ಇತಿ ॥

(ಭಾಷ್ಯಾರ್ಥ)

ಸತ್ತಾಗಿರುವ ಎಂದರೆ ಇದ್ದೇ ಇರುವ ಸರ್ವಭಾವಗಳಿಗೂ ಎಂದರೆ ವಿಶ್ವ, ತೈಜಸ, ಪ್ರಾಜ್ಞ-ಎಂದು ಭಿನ್ನಭಿನ್ನವಾಗಿರುವ (ಎಲ್ಲಾ ಜೀವರುಗಳಿಗೂ) ಪ್ರಭವವು ಎಂದರೆ ಉತ್ಪತ್ತಿಯು (ಎಂದು ನಿಶ್ಚಯವು). "ವಂಧ್ಯಾಪುತ್ರನು ತತ್ತ್ವದಿಂದಲಾಗಲಿ, ಮಾಯೆಯಿಂದಲಾಗಲಿ ಹುಟ್ಟುವದಿಲ್ಲ" (೩-೨೮) ಎಂದು ಮುಂದೆ (ಕಾರಿಕಾಕಾರರು) ಹೇಳಿಯೂ ಇರುತ್ತಾರೆ. **ಅಸತ್ತಾದ (ವಿಶ್ವಾದಿಗಳೇ) ಹುಟ್ಟುವದಾಗಿದ್ದರೆ ಯಾವ ವ್ಯವಹಾರಕ್ಕೂ ಸಿಕ್ಕದ ಬ್ರಹ್ಮವನ್ನು ಅರಿಯುವದಕ್ಕೆ ದ್ವಾರವೇ**

---

1. "ಇತಿ ವಿನಿಶ್ಚಯಃ" ಎಂಬ ಮಾತುಗಳನ್ನು ಭಾಷ್ಯದಲ್ಲಿ ಬಿಟ್ಟುಬಿಟ್ಟಿದೆ.

2. ಈ ಶ್ರುತಿಯ ವಿಷಯಕ್ಕೆ ಅನುವಾದವನ್ನೂ ಟಿಪ್ಪಣಿಯನ್ನೂ ನೋಡಿ.

**ಇಲ್ಲದೆ (ಅದು) ಇಲ್ಲವೆಂದೇ ಆಗಬೇಕಾಗುವದು[1]. ಹಗ್ಗದ ಹಾವೇ ಮುಂತಾದ ಅವಿದ್ಯಾಕೃತಮಾಯಾಬೀಜದಿಂದ ಹುಟ್ಟಿದ[2] (ಪದಾರ್ಥಗಳು)** ಹಗ್ಗವೇ ಮುಂತಾದ ರೂಪದಿಂದ (ಇರುವದು) ಕಂಡುಬರುತ್ತಲೂ ಇದೆ. ಹಗ್ಗದ ಹಾವು, ಬಿಸಿಲುಕುದುರೆ-ಮುಂತಾದವುಗಳು ಯಾವ **ಆಸ್ಪದವೂ**[3] ಇಲ್ಲದೆ ಇರುವ ದನ್ನು ಯಾರೂ ಕಂಡದ್ದಿಲ್ಲ. ಹಗ್ಗದಲ್ಲಿ ಹಾವು ಹುಟ್ಟುವ ಮುಂಚೆ ಹಾವು ಹಗ್ಗದ ರೂಪದಿಂದ ಸತ್ತಾಗಿಯೇ ಹೇಗೆ ಇದ್ದುಕೊಂಡಿರುವದೋ, ಹಾಗೆಯೇ ಎಲ್ಲಾ ಭಾವ ಗಳೂ ಹುಟ್ಟುವ ಮೊದಲು ಪ್ರಾಣನೆಂಬ ಬೀಜರೂಪದಿಂದಲೇ ಸತ್ತಾಗಿರುವವು. ಆದ್ದ ರಿಂದಲೇ **ಶ್ರುತಿಯೂ** "ಇದು ಬ್ರಹ್ಮವೇ" (ಮುಂ. ೨-೨-೧೧) ಇದು ಮೊದಲು ಆತ್ಮನೇ ಆಗಿತ್ತು"[4] (ಬೃ. ೧-೪-೧?) ಎಂದು ಹೇಳುತ್ತಿದೆ.

(ಭಾಷ್ಯ)

೩೦. ಸರ್ವಂ ಜನಯತಿ ಪ್ರಾಣಃ । **ಚೇತೋಂಶೂನ್** ಅಂಶವ ಇವ ರವೇಃ **ಚಿದಾತ್ಮಕಸ್ಯ** ಪುರುಷಸ್ಯ **ಚೇತೋರೂಪಾ** (ಅಂಶವಃ ?) ಜಲಾರ್ಕಸಮಾಃ ಪ್ರಾಜ್ಞ ತೈಜಸವಿಶ್ವಭೇದೇನ ದೇವಮನುಷ್ಯತಿರ್ಯಗಾದಿ[5] ದೇಹಭೇದೇಷು ವಿಭಾವ್ಯಮಾನಾಃ **ಚೇತೋಂಶವಃ** ಯೇ, ತಾನ್ ಪುರುಷಃ ಪೃಥಕ್ ವಿಷಯಭಾವವಿಲಕ್ಷಣಾನ್

---

1. **ಕಾರ್ಯವು** ಮೊದಲೂ ಈಗಲೂ ಅಸತ್ತೇ ಎಂಬ ಶೂನ್ಯವಾದಿಗಳ ಮತವನ್ನು ಹಿಂದಿನ ವಾಕ್ಯದಲ್ಲಿಯೇ ತಿರಸ್ಕರಿಸಿದ್ದಾಯಿತು. ಮೊದಲು ಅಸತ್ತಾಗಿರುವ ಕಾರ್ಯವು ಈಗ ಸತ್ತಾಗಿ ಉಂಟಾಗಿದೆ ಎಂಬ ವೈಶೇಷಿಕರ ಮತದಲ್ಲಿ ಬ್ರಹ್ಮವು ಸ್ವತಃ ಅವ್ಯವಹಾರ್ಯವಾಗಿರು ವದರಿಂದಲೂ, ಈಗ ಇರುವ ಕಾರ್ಯಕ್ಕೂ ಬ್ರಹ್ಮಕ್ಕೂ ಯಾವ ಸಂಬಂಧವೂ ಇಲ್ಲದ್ದ ರಿಂದಲೂ, ಬ್ರಹ್ಮವನ್ನು ತಿಳಿಯುವದಕ್ಕೆ ಶ್ರುತಿಯು ಜ್ಞಾನೋಪದೇಶವನ್ನು ಮಾಡಿದ್ದು ವ್ಯರ್ಥವಾಗುವದು–ಎಂದು ಈಗ ಹೇಳಿದೆ (ಗೀ. ಭಾ. ೧೮–೪೮ ನೋಡಿ).

2. "ಅವಿದ್ಯೆಯಿಂದ ಎಂದರೆ ಅನಿರ್ವಾಚ್ಯವಾದ ಅನಾದ್ಯಜ್ಞಾನದಿಂದ ಕೃತವಾಗಿ ರುವ ಮತ್ತು ಮಾಯಾಬೀಜದಿಂದ ಹುಟ್ಟಿರುವ" ಎಂಬ ಆ॥ ವ್ಯಾಖ್ಯಾನವು ದೃಷ್ಟಾಂತವನ್ನೇ ವಾದಗ್ರಸ್ತವನ್ನಾಗಿ ಮಾಡುವದರಿಂದ ಒಪ್ಪತಕ್ಕದ್ದಲ್ಲ. ಹಗ್ಗದಲ್ಲಿ ತಪ್ಪುತಿಳಿವಳಿಕೆಯಿಂದ ಕಲ್ಪಿತವಾದ ಹಾವಿನ ಅವಯವಗಳಿರುವವೆಂದು ಛಾಂ. ಭಾ. ೬–೨–೨ ರಲ್ಲಿ ಹೇಳಿರುವದನ್ನು ನೋಡಿರಿ.

3. ಈಗಿನ ವೇದಾಂತಿಗಳು ಇದನ್ನು ಅಧಿಷ್ಠಾನವೆನ್ನುವರು.

4. ಈ ಶ್ರುತಿಯು ಪ್ರಜಾಪತಿವಾಕ್ಯವೆಂದು ಬೃಹದಾರಣ್ಯಕಭಾಷ್ಯದಲ್ಲಿದೆ. ಆದ್ದ ರಿಂದ "ಆತ್ಮಾ ವಾ ಇದಮೇಕ ಏವಾಗ್ರ ಆಸೀತ್" ಎಂಬ ಐತರೇಯಶ್ರುತಿಯನ್ನು ಲೇಖಕರು ಹೀಗೆ ತಪ್ಪಾಗಿ ಬರೆದುಕೊಂಡಿದ್ದಾರೆಂದೋ ಅಥವಾ ಭಾಷ್ಯದಲ್ಲಿ ಶ್ರುತ್ಯರ್ಥವು ಮಾತ್ರ ಇದೆಯೆಂದೋ ಕಲ್ಪಿಸಬೇಕು.

5. ವಾ॥ ಕಾ॥ ಪಾಠ; ಆ॥ ಪಾಠದಲ್ಲಿ "ಮನುಷ್ಯ" ಇಲ್ಲ.

ಅಗ್ನಿಸ್ಫುಲಿಙ್ಗವತ್ ಸಲಕ್ಷಣಾನ್ ಜಲಾರ್ಕವಚ್ಚ ಜೀವಲಕ್ಷಣಾಂಸ್ತು ಇತರಾನ್ ಸರ್ವಭಾವಾನ್ ಪ್ರಾಣಃ ಬೀಜಾತ್ಮಾ ಜನಯತಿ। "ಯಥೋರ್ಣನಾಭಿಃ....ಯಥಾಗ್ನೇಃ ಕ್ಷುದ್ರಾ ವಿಸ್ಫುಲಿಙ್ಗಾಃ (ಬೃ. ೨-೧-೨೦) ಇತ್ಯಾದಿಶ್ರುತೇಃ ॥[1]

(ಭಾಷ್ಯಾರ್ಥ)

" ಪ್ರಾಣನೆಂಬ (ಪುರುಷನು) ಎಲ್ಲವನ್ನೂ ಹುಟ್ಟಿಸುತ್ತಾನೆ." ಚೇತೋಂಶುಗಳನ್ನು-ಎಂದರೆ ಸೂರ್ಯನ ಕಿರಣಗಳಂತೆ 'ಚಿದ್ರೂಪನಾಗಿರುವ ಪುರುಷನ ಚೈತನ್ಯರೂಪವಾದ ಕಿರಣಗಳು, ಪ್ರಾಜ್ಞ,[2] ತೈಜಸ, ವಿಶ್ವ-ಎಂಬ ಭೇದದಿಂದ ದೇವತೆಗಳು, ಮನುಷ್ಯರು, ಪಶುಗಳು-ಮುಂತಾದ ಬೇರೆಬೇರೆಯ ದೇಹಗಳಲ್ಲಿ ತಿಳಿಯಬರುವ ನೀರಿನಲ್ಲಿ ಕಾಣುವ ಸೂರ್ಯಪ್ರತಿಬಿಂಬಗಳಂತಿರುವ ಚೈತನ್ಯದ ಕಿರಣಗಳಿರುವವಲ್ಲ, ಅವನ್ನು-ಬೇರೆಯಾಗಿ ಎಂದರೆ ವಿಷಯರೂಪವಾದ ಭಾವಗಳಿಗಿಂತ ವಿಲಕ್ಷಣವಾಗಿ ಬೆಂಕಿಯ ಕಿಡಿಗಳಂತೆಯೂ, ನೀರಿನ ಸೂರ್ಯಪ್ರತಿಬಿಂಬಗಳಂತೆಯೂ[3] ತನ್ನ ಸ್ವಭಾವದವರೇ ಆಗಿರುವ ಜೀವರೂಪವಾಗಿರುವ (ಭಾವಗಳನ್ನೂ) ಮಿಕ್ಕ ಎಲ್ಲಾ ಭಾವಗಳನ್ನೂ ಪ್ರಾಣನು ಎಂದರೆ ಜೀವಾತ್ಮನು ಹುಟ್ಟಿಸುತ್ತಾನೆ. " ಜೇಡರ ಹುಳು ಹೇಗೆ (ನೂಲಿನಿಂದ ಮುಂದಕ್ಕೆ ಬರುತ್ತದೆಯೋ)....ಬೆಂಕಿಯಿಂದ ಸಣ್ಣ ಕಿಡಿಗಳು (ಹೇಗೆ ಹೊರಟು ಬರುವವೋ) " (ಬೃ. ೨-೧-೨೦)-ಮುಂತಾದ ಶ್ರುತಿಯು[4] ಇದಕ್ಕೆ ಪ್ರಮಾಣವು.

1 ಮೊದಲನೆಯ ಶ್ರುತಿಯ ಭಾಗವು ಮುಂ. ೧-೧-೭ ರಲ್ಲಿಯೂ ಇದೆ; ಆದರೆ ಇವೆರಡೂ ಬೃಹದಾರಣ್ಯಕವಚನದಲ್ಲಿಯೇ ಇರುವದರಿಂದಲೂ " ಶ್ರುತೇಃ " ಎಂದು ಏಕವಚನವಿರುವದರಿಂದಲೂ ಒಂದೇ ವಾಕ್ಯವೆಂದು ಕಲ್ಪಿಸಲಾಗಿದೆ.

2. ಪ್ರಾಜ್ಞನಲ್ಲಿ ವಿಶೇಷವಿಲ್ಲದಿರುವದರಿಂದಲೂ, ಪ್ರಾಜ್ಞನೇ ಪ್ರಾಣನಾಗಿರುವದರಿಂದಲೂ ಇಲ್ಲಿ ತೈಜಸವಿಶ್ವರೆಂದಿಷ್ಟೇ ಇದ್ದರೆ ಸಾಲದೆ ?-ಎಂದು ಶಂಕಿಸಬೇಕಾದದ್ದಿಲ್ಲ. ಏಕೆಂದರೆ ಆಯಾ ಜೀವನ ದೃಷ್ಟಿಯಿಂದ ಅವನವನ ಸುಷುಪ್ತಿಯು ಬೇರೆಯೇ ಆಗಿರುತ್ತದೆ.

3. ಜೀವರುಗಳು ಬ್ರಹ್ಮವೇ ಅಲ್ಲ, ಬ್ರಹ್ಮಕ್ಕಿಂತ ತೀರ ಭಿನ್ನರೂ ಅಲ್ಲ, ಜಲಾರ್ಕಗಳಂತೆ ಆಭಾಸಮಾತ್ರರಾಗಿರುತ್ತಾರೆಂದು ಸೂ. ಭಾ. ೨-೩-೫೦ ರಲ್ಲಿ ಹೇಳಿದೆ.

4. ಈ ಬೀಜಾತ್ಮನಿಂದ ಪ್ರಾಣಗಳು, ಲೋಕಗಳು, ದೇವತೆಗಳು, ಭೂತಗಳು-ಹುಟ್ಟುತ್ತವೆ ಎಂದು ಶ್ರುತಿಯ ಅರ್ಥ. ಮಾಧ್ಯಂದಿನಪಾಠದಲ್ಲಿ ಆತ್ಮರುಗಳೂ (ವಿಶ್ವಾದಿಗಳೂ) ಹುಟ್ಟುತ್ತಾರೆಂದಿದೆ.

## ಸೃಷ್ಟಿ ಪರಮಾರ್ಥವಲ್ಲ

**ವಿಭೂತಿಂ ಪ್ರಸವಂ ತ್ವನ್ಯೇ ಮನ್ಯನ್ತೇ ಸೃಷ್ಟಿಚಿನ್ತಕಾಃ।**
**ಸ್ವಪ್ನಮಾಯಾಸರೂಪೇತಿ ಸೃಷ್ಟಿರನ್ಯೈರ್ವಿಕಲ್ಪಿತಾ ॥ ೭ ॥**

೭. ಕೆಲವರು ಸೃಷ್ಟಿಚಿಂತಕರು ಸೃಷ್ಟಿಯು ವಿಭೂತಿ ಎಂದು ಬಗೆಯುವರು. ಅದು ಸ್ವಪ್ನಮಾಯಾಸರೂಪವೆಂದು ಮತ್ತೆ ಕೆಲವರು ವಿಕಲ್ಪಿಸಿರುವರು.

**(ಭಾಷ್ಯ)**

೩೧. ವಿಭೂತಿಃ ವಿಸ್ತಾರಃ ಈಶ್ವರಸ್ಯ ಸೃಷ್ಟಿಃ ಇತಿ ಸೃಷ್ಟಿಚಿನ್ತಕಾಃ ಮನ್ಯನ್ತೇ। ನ ತು ಪರಮಾರ್ಥಚಿನ್ತಕಾನಾಂ ಸೃಷ್ಟೌ ಆದರಃ ಇತ್ಯರ್ಥಃ। "ಇನ್ದ್ರೋ ಮಾಯಾಭಿಃ ಪುರುರೂಪ ಈಯತೇ" (ಬೃ. ೨-೫-೧೯) ಇತಿ ಶ್ರುತೇಃ। ನ ಹಿ ಮಾಯಾವಿನಂ ಸೂತ್ರಮ್ ಆಕಾಶೇ ನಿಕ್ಷಿಪ್ಯ ತೇನ ಸಾಯುಧಮ್ ಆರುಹ್ಯ ಚಕ್ಷುರ್ಗೋಚರತಾಮ್ ಅತೀತ್ಯ ಯುದ್ಧೇನ ಖಣ್ಡಶಶ್ಛಿನ್ನಂ ಪತಿತಂ ಪುನರುತ್ಥಿತಂ ಚ ಪಶ್ಯತಾಂ ತತ್ಕೃತಮಾಯಾ[1]ಸತತ್ತ್ವಚಿನ್ತಾಯಾಮ್ ಆದರಃ ಭವತಿ। ತಥೈವ ಅಯಂ ಮಾಯಾವಿನಃ ಸೂತ್ರಪ್ರಸಾರಣಸಮಃ ಸುಷುಪ್ತಸ್ವಪ್ನಾದಿವಿಕಾಸಃ। ತದಾರೂಢಮಾಯಾವಿಸಮಶ್ಚ ತತ್ಸ್ಥಃ ಪ್ರಾಜ್ಞತೈಜಸಾದಿಃ। ಸೂತ್ರತದಾರೂಢಾಭ್ಯಾಮ್ ಅನ್ಯಃ ಪರಮಾರ್ಥಮಾಯಾವೀ ಸ ಏವ ಭೂಮಿಷ್ಠಃ ಮಾಯಾಚ್ಛನ್ನಃ ಅದೃಶ್ಯಮಾನ ಏವ ಸ್ಥಿತಃ ಯಥಾ, ತಥಾ ತುರೀಯಾಖ್ಯಂ ಪರಮಾರ್ಥತತ್ತ್ವಮ್। ಅತಃ ತಚ್ಚಿನ್ತಾಯಾಮೇವ ಆದರೋ ಮುಮುಕ್ಷೂಣಾಮ್ ಆರ್ಯಾಣಾಂ ನ ನಿಷ್ಪ್ರಯೋಜನಾಯಾಂ ಸೃಷ್ಟೌ ಆದರಃ ಇತ್ಯತಃ ಸೃಷ್ಟಿಚಿನ್ತಕಾನಾಮೇವ ಏತೇ ವಿಕಲ್ಪಾ ಇತ್ಯಾಹ[2]। ಸ್ವಪ್ನಮಾಯಾಸರೂಪೇತಿ। ಸ್ವಪ್ನಸರೂಪಾ[3] ಮಾಯಾಸರೂಪಾ ಚ ಇತಿ ॥

---

1. "ಮಾಯಾದಿ" ಎಂಬ ಪಾಠದಲ್ಲಿ 'ಆದಿ' ಹೆಚ್ಚು.

2. 'ಇತ್ಯತ ಆಹ' ಎಂಬ ಬೇರೆಯ ಪಾಠವನ್ನು ಕೆಲವರು ತೆಗೆದುಕೊಂಡಿದ್ದಾರೆ ಅದೂ ಆಗಬಹುದು. ಆದರೆ ಟೀಕೆಯು ಈ ಪಾಠವು ಟೀಕೆಯ ಮುಂದಿನ ವಾಕ್ಯದ ಅಭಿಪ್ರಾಯಕ್ಕೆ ವಿರುದ್ಧವಾಗಿದೆ.

3. 'ಸ್ವಪ್ನರೂಪಾ' ಎಂಬುದು 'ಸ್ವಪ್ನಸರೂಪಾ' ಎಂಬುದರ ಬದಲು ಬಿದ್ದಿದೆ ಎಂದು ತೋರುವದು.

(ಭಾಷ್ಯಾರ್ಥ)

ಸೃಷ್ಟಿಯು ಈಶ್ವರನ ವಿಭೂತಿಯು ಎಂದರೆ ವಿಸ್ತಾರವು[1]-ಎಂದು ಕೆಲವರು ಸೃಷ್ಟಿಚಿಂತಕರು ಬಗೆಯುವರು ; ಇಷ್ಟೇ ಹೊರತು ಪರಮಾರ್ಥಚಿಂತಕರಿಗೆ ಸೃಷ್ಟಿಯಲ್ಲಿ ಆದರವಿಲ್ಲ[2] ಎಂದರ್ಥ. "ಇಂದ್ರನು ಮಾಯೆಗಳಿಂದ ಬಹುರೂಪನಾಗಿ ಕಾಣುತ್ತಾನೆ" (ಬೃ. ೨-೫-೧೯) ಎಂಬ ಶ್ರುತಿ ಇದಕ್ಕೆ ಪ್ರಮಾಣವು. ಆಕಾಶದಲ್ಲಿ ನೂಲೇಣಿಯನ್ನು ಹಾಕಿ, ಆಯುಧಗಳೊಡನೆ ಅದನ್ನು ಹತ್ತಿ, ಕಣ್ಣಿಗೆ ಕಾಣದಂತಾಗಿ (ಅಲ್ಲಿ) ಯುದ್ಧದಲ್ಲಿ ತುಂಡುತುಂಡಾಗಿ ಕತ್ತರಿಸಿಕೊಂಡು ಬಿದ್ದು ಮತ್ತೆ ಏಳುವ ಮಾಯಾವಿಯನ್ನು ನೋಡುವವರಿಗೆ ಆತನು ಮಾಡಿದ ಮಾಯೆಯ ನಿಜವನ್ನು ವಿಚಾರಿಸಿ (ಅರಿತುಕೊಳ್ಳು) ವದರಲ್ಲಿ ಆದರವೇನೂ ಉಂಟಾಗುವದಿಲ್ಲವಷ್ಟೆ[3]. ಹಾಗೆಯೇ ತನಿನಿದ್ರೆ, ಕನಸು-ಮುಂತಾದ (ರೂಪದಿಂದ) ಹರಡಿಕೊಂಡಿರುವ (ಈ ಜಗತ್ತು) ಮಾಯಾವಿಯು ನೂಲೇಣಿಯನ್ನು ಹಾಕಿದಂತೆ ಇರುವದು. ಅದರಲ್ಲಿರುವ ಪ್ರಾಜ್ಞ, ತೈಜಸ-ಮೊದಲಾದವರು ಆ (ನೂಲೇಣಿಯನ್ನು) ಹತ್ತಿದ ಮಾಯಾವಿಗಳಂತೆ. ನೂಲೇಣಿ ಅದನ್ನೇರಿದ ಮಾಯಾವಿ-ಈ ಎರಡಕ್ಕೂ ಬೇರೆಯಾಗಿ ನಿಜವಾದ ಮಾಯಾವಿಯು ಮಾಯೆಯಿಂದ ತನ್ನನ್ನು ಮರೆಮಾಡಿಕೊಂಡು ತಾನೇ (ಯಾರಿಗೂ) ಕಾಣಿಸದೆ ನೆಲದ ಮೇಲೆ ಹೇಗೆ ಇದ್ದುಕೊಂಡಿರುವನೋ ಅದರಂತೆ ಪರಮಾರ್ಥವಾದ ತುರೀಯವು (ಇರುವದು)[4]. ಆದ್ದರಿಂದ ಆರ್ಯರಾದ ಮುಮುಕ್ಷುಗಳಿಗೆ ಅದರ ವಿಚಾರದಲ್ಲಿಯೇ ಆದರವಿರುವದೇ ಹೊರತು ನಿಷ್ಪ್ರಯೋಜನವಾದ[5] ಸೃಷ್ಟಿಯಲ್ಲಿ ಆದರವಿರುವದಿಲ್ಲ

---

1. ಈಶ್ವರನೇ ಸೃಷ್ಟಿಯ ರೂಪದಲ್ಲಿ ಹರಡಿಕೊಂಡಿರುತ್ತಾನೆ. ಈ ಕಾರಿಕೆಯ ವಿಷಯವಾಗಿ ಪೀಠಿಕೆಯನ್ನು ನೋಡಿ.

2. ಏಕೆಂದರೆ ಸೃಷ್ಟಿಯು ಪರಮಾರ್ಥವಲ್ಲ ; ಆತ್ಮನೇ ಪರಮಾರ್ಥ. ಈಶ್ವರನಾದ ಆತ್ಮನೊಬ್ಬನೇ ಅವಿದ್ಯಾಕೃತವಾದ ತಪ್ಪುತಿಳಿವಳಿಕೆಗಳಿಂದ ಬೇರೆಬೇರೆಯಾಗಿ ಕಾಣಿಸುತ್ತಿರುವನು-ಎಂಬರ್ಥದ ಬೃಹದಾರಣ್ಯಕಶ್ರುತಿಯನ್ನು ಇದಕ್ಕೆ ಆಧಾರವಾಗಿ ಉದಾಹರಿಸಿದೆ.

3. ಮಾಯೆಯು ಎಂದರೆ ಮಾಯಾವಿಯು ಸೃಷ್ಟಿಸಿದ ಹುಸಿತೋರಿಕೆಯ ಪದಾರ್ಥವು ಏತರಿಂದಾಗಿದೆ, ಎಲ್ಲಿಂದ ಬರುತ್ತದೆ, ಎಲ್ಲಿಗೆ ಹೋಗುತ್ತದೆ,- ಎಂದು ಮುಂತಾಗಿ ವಿಚಾರಿಸುವ ಗೋಜಿಗೆ ಹೋಗುವದಿಲ್ಲ. ಅದೆಲ್ಲ ಮಾಯೆ ಎಂದು ಉದಾಸೀನರಾಗಿರುತ್ತಾರೆ.

4. ತುರೀಯವೊಂದೇ ಅವಸ್ಥೆಗಳಾಗಿಯೂ, ಪ್ರಾಜ್ಞಾದಿಗಳಾಗಿಯೂ ಅವಿದ್ಯೆಯಿಂದ ತೋರುತ್ತಿರುವದು. ಈ ಮಾಯಾವಿಯ ದೃಷ್ಟಾಂತವನ್ನು ಸೂ. ಭಾ. ೧-೧-೧೭. ಛಾ. ಭಾ. ೬-೭ ಇವುಗಳಲ್ಲಿಯೂ ಕೊಟ್ಟಿದೆ.

5. ಸೃಷ್ಟಿಗೆ ಫಲವನ್ನು ಎಲ್ಲಿಯೂ ಹೇಳಿಲ್ಲವಾದ್ದರಿಂದ ಅದರಲ್ಲಿ ಶ್ರುತಿಗೆ ತಾತ್ಪರ್ಯವಿಲ್ಲ.

ಆದ್ದರಿಂದ ಸೃಷ್ಟಿಚಿಂತಕರವೇ ಈ ವಿಕಲ್ಪಗಳು ಎಂದು[1] ಹೇಳಿದೆ. "ಸ್ವಪ್ನಮಾಯಾ ಸರೂಪವೆಂದು" ಎಂದರೆ ಕನಸಿಗೆ ಸಮಾನವಾದ ರೂಪವುಳ್ಳದ್ದು, ಮಾಯೆಗೆ ಸಮಾನವಾದ ರೂಪವುಳ್ಳದ್ದು[2] (ಎಂದರ್ಥ.)

**ಇಚ್ಛಾಮಾತ್ರಂ ಪ್ರಭೋಃ ಸೃಷ್ಟಿರಿತಿ ಸೃಷ್ಟೌ ವಿನಿಶ್ಚಿತಾಃ ।**
**ಕಾಲಾತ್ ಪ್ರಸೂತಿಂ ಭೂತಾನಾಂ ಮನ್ಯನ್ತೇ ಕಾಲಚಿನ್ತಕಾಃ ॥ ೮ ॥**

೮. ಸೃಷ್ಟಿಯು ಪ್ರಭುವಿನ ಇಚ್ಛಾಮಾತ್ರವು ಎಂದು ಸೃಷ್ಟಿಯಲ್ಲಿ ನಿಶ್ಚಯಬುದ್ಧಿಯುಳ್ಳವರೆನ್ನುವರು. ಕಾಲಚಿಂತಕರು ಭೂತಗಳ ಸೃಷ್ಟಿಯು ಕಾಲದಿಂದ ಎಂದು ಬಗೆಯುವರು.

(ಭಾಷ್ಯ)

೩೨. ಇಚ್ಛಾಮಾತ್ರಂ ಪ್ರಭೋಃ ಸತ್ಯಸಙ್ಕಲ್ಪತ್ವಾತ್ । ಸೃಷ್ಟಿಃ ಘಟಾದಿಃ ಸಙ್ಕಲ್ಪನಾಮಾತ್ರಂ ನ ಸಙ್ಕಲ್ಪನಾತಿರಿಕ್ತಮ್ । ಕಾಲಾದೇವ ಸೃಷ್ಟಿರಿತಿ ಕೇಚಿತ್ ॥

(ಭಾಷ್ಯಾರ್ಥ)

ಪ್ರಭುವು ಸತ್ಯಸಂಕಲ್ಪನಾದ್ದರಿಂದ ಇಚ್ಛಾಮಾತ್ರವು. ಸೃಷ್ಟಿಯು ಎಂದರೆ ಘಟವೇ ಮುಂತಾದದ್ದು ಬರಿಯ ಸಂಕಲ್ಪವೇ, ಸಂಕಲ್ಪಕ್ಕಿಂತ ಬೇರೆಯಿಲ್ಲ[3] (ಎಂದು ಕೆಲವರು). ಕಾಲದಿಂದಲೇ ಸೃಷ್ಟಿಯೆಂದು ಕೆಲವರು.[4].

---

1. 'ಇತ್ಯತಃ' ಎಂಬ ಪಾದಕ್ಕೆ 'ಎಂಬ ಕಾರಣದಿಂದ' ಎಂದು ಅರ್ಥ. ಈ ಪಾಠದಲ್ಲಿ "ಸ್ವಪ್ನಮಾಯಾಸರೂಪಾ" ಎಂಬುದು ಸಿದ್ಧಾಂತವೆಂಬುದು ಸ್ಪಷ್ಟವಾಗಿದೆ.

2. ಕನಸಿನ ಪದಾರ್ಥಗಳೂ ಮಾಯೆಯೂ ಸತ್ಯವೆಂಬವರ ಮತವನ್ನು ಉತ್ತರಾರ್ಧದಲ್ಲಿ ಹೇಳಿದೆ-ಎಂಬುದು ಆ॥ ಟೀಕಾಕಾರನ ಮತ; ಆದರೆ ಇಲ್ಲಿಯೇ ಆಚಾರ್ಯರು ಮಾಯಾದೃಷ್ಟಾಂತವನ್ನು ಉದಾಹರಿಸಿರುವದರಿಂದಲೂ ವೈತಥ್ಯಪ್ರಕರಣದಲ್ಲಿ (೨-೩೧) ಕಾರಿಕೆಯಲ್ಲಿಯೇ ಈ ಎರಡು ಮತಗಳೂ ವೈದಿಕವೆಂದು ಹೇಳಿರುವದರಿಂದಲೂ ಟೀಕೆಯನ್ನು ಒಪ್ಪಬೇಕಾದದ್ದಿಲ್ಲ. 'ಏತೇ ವಿಕಲ್ಪಾಃ' ಎಂಬ ಬಹುವಚನಪ್ರಯೋಗವನ್ನು ಮುಂದಿನ ಕಾರಿಕೆಯ ಇಚ್ಛೆ, ಕಾಲ-ಎಂಬ ಪಕ್ಷಗಳನ್ನು ಸೇರಿಸಿ ಹೊಂದಿಸಬೇಕು.

3. ಇದಕ್ಕೆ ಈಶ್ವರನ ಸಂಕಲ್ಪಕ್ಕಿಂತ ಬೇರೆಯ ಉಪಾದಾನವಿಲ್ಲ ಎಂದರ್ಥ.

4. ವಸ್ತುಗಳ ಸೃಷ್ಟಿಸ್ಥಿತಿಲಯಗಳು ಕಾಲದಲ್ಲಿಯೇ ಆಗುವದು ಕಂಡಿದೆ. ಆದರೆ ಕಾಲದ ಜನ್ಮನಾಶಗಳನ್ನು ಕಲ್ಪಿಸುವದಕ್ಕೂ ಆಗುವದಿಲ್ಲ. ಆದ್ದರಿಂದ ಕಾಲವೇ ಜಗತ್ಕಾರಣವು ಎಂದರ್ಥ.

**ಭೋಗಾರ್ಥಂ ಸೃಷ್ಟಿರಿತ್ಯನ್ಯೇ ಕ್ರೀಡಾರ್ಥಮಿತಿ ಚಾಪರೇ ।**
**ದೇವಸ್ಯೈಷ ಸ್ವಭಾವೋಽಯಮಾಪ್ತಕಾಮಸ್ಯ ಕಾ ಸ್ಪೃಹಾ ॥ ೯ ॥**

೯. ಭೋಗಕ್ಕಾಗಿ ಸೃಷ್ಟಿಯಾಗಿರುವದೆಂದು ಕೆಲವರು ; ಕ್ರೀಡೆಗಾಗಿ ಎಂದು ಕೆಲವರು ; ಆ ಇದು ದೇವನ ಸ್ವಭಾವವು ; ಆಪ್ತಕಾಮನಿಗೆ ಇಚ್ಛೆಯೇನು ?

(ಭಾಷ್ಯ)

೩೩. ಭೋಗಾರ್ಥಂ ಕ್ರೀಡಾರ್ಥಮ್ ಇತಿ ಚ ಅನ್ಯೇ ಸೃಷ್ಟಿಂ ಮನ್ಯನ್ತೇ। ಅನಯೋಃ ಪಕ್ಷಯೋಃ ದೂಷಣಮ್ ದೇವಸ್ಯೈಷ ಸ್ವಭಾವೋಽಯಮ್ ಇತಿ। ದೇವಸ್ಯ ಸ್ವಭಾವಪಕ್ಷಮ್ ಆಶ್ರಿತ್ಯ ಸರ್ವೇಷಾಂ ವಾ ಪಕ್ಷಾಣಾಮ್ "ಆಪ್ತಕಾಮಸ್ಯ ಕಾ ಸ್ಪೃಹಾ" ಇತಿ। ನ ಹಿ ರಜ್ಜ್ವಾದೀನಾಮ್ ಅವಿದ್ಯಾಸ್ವಭಾವವ್ಯತಿರೇಕೇಣ ಸರ್ಪಾದ್ಯಾಭಾಸತ್ವೇ ಕಾರಣಂ ಶಕ್ಯಂ ವಕ್ತುಮ್ ॥

(ಭಾಷ್ಯಾರ್ಥ)

ಸೃಷ್ಟಿಯು (ಈಶ್ವರನ) ಭೋಗಕ್ಕಾಗಿ (ಆದದ್ದೆಂದೂ) ಆಟಕ್ಕಾಗಿ ಆದದ್ದೆಂದೂ ಕೆಲವರು ಬಗೆಯುವರು. ಈ ಎರಡು ಪಕ್ಷಗಳಲ್ಲಿಯೂ ದೋಷವನ್ನು ಹೇಳುವದಕ್ಕೆ "ಇದು ದೇವನ ಸ್ವಭಾವವು" ಎಂದಿದೆ. ಅಥವಾ ದೇವನ ಸ್ವಭಾವವಿದೆಂಬ ಪಕ್ಷವನ್ನು ಆಶ್ರಯಿಸಿ[1] (ಮೇಲೆ ಹೇಳಿರುವ ಮಿಕ್ಕ) ಎಲ್ಲಾ ಪಕ್ಷಗಳನ್ನೂ "ಆಪ್ತಕಾಮನಿಗೆ ಇಚ್ಛೆಯೇನು ?"-ಎಂದು ಖಂಡಿಸಿದೆ (ಎಂದಾದರೂ ತಿಳಿಯಬಹುದು) **ಹಗ್ಗವೇ ಮುಂತಾದವುಗಳು ಹಾವು ಮುಂತಾದ ರೂಪದಲ್ಲಿ ತೋರುವದಕ್ಕೆ ಅವಿದ್ಯಾಸ್ವಭಾವವನ್ನು ಬಿಟ್ಟರೆ[2] (ಬೇರೆ ಯಾವ) ಕಾರಣವನ್ನೂ ಹೇಳುವದಕ್ಕೆ ಆಗುವದೇ ಇಲ್ಲ.**

---

1. ಶ್ವೇತಾಶ್ವತರೋಪನಿಷತ್ತಿನಲ್ಲಿ (೬–೧) ಪ್ರಪಂಚವು ಸ್ವಭಾವದಿಂದಲೇ ಸೃಷ್ಟವಾಗುತ್ತದೆ–ಎಂಬ ಪಕ್ಷವನ್ನು ನಿರಾಕರಿಸಿದೆ, ಸೃಷ್ಟೃವಿನ ಸ್ವಭಾವದ ಪಕ್ಷವನ್ನಲ್ಲ. ಹೀಗೆಯೇ ಬ್ರ. ಸೂ. ೨–೧–೩೩ರಲ್ಲಿ ಪ್ರಯೋಜನವನ್ನೇನೂ ಬಯಸದೆ ಸೃಷ್ಟಿಸುವದು ಈಶ್ವರನ ಸ್ವಭಾವವೆಂದಿದೆಯಾದ್ದರಿಂದ ಈ ಕಾರಿಕೆಗೂ ಅದಕ್ಕೂ ವಿರೋಧವಿಲ್ಲ.

2. ಅವಿದ್ಯೆಯನ್ನೇ ಇಲ್ಲಿ ಸ್ವಭಾವವೆಂದಿರುವದರಿಂದ ಈಶ್ವರನಿಗೆ ಸೃಷ್ಟಿಮಾಡುವದೇ ಸ್ವಭಾವವಾದರೆ ಯಾವಾಗಲೂ ಏಕೆ ಸೃಷ್ಟಿಸುವದಿಲ್ಲ ?–ಎಂಬ ಶಂಕೆಗೆ ಅವಕಾಶವಿಲ್ಲ.

# ೨. ಉಪನಿಷತ್ತು

## ತುರೀಯಮಂತ್ರದ ಅವತರಣಿಕೆ

(ಭಾಷ್ಯ)

೩೪. ಚತುರ್ಥಃ ಪಾದಃ ಕ್ರಮಪ್ರಾಪ್ತೋ ವಕ್ತವ್ಯಃ ಇತ್ಯಾಹ–"ನಾನ್ತಃ ,ಜ್ಞಮ್" ಇತ್ಯಾದಿನಾ । ಸರ್ವಶಬ್ದಪ್ರವೃತ್ತಿನಿಮಿತ್ತಶೂನ್ಯತ್ವಾತ್ ತಸ್ಯ ಶಬ್ದಾನಭಿ ೀಯತ್ವಮ್ ಇತಿ ವಿಶೇಷಪ್ರತಿಷೇಧೇನೈವ[1] ತುರೀಯಂ ನಿರ್ದಿದಿಕ್ಷತಿ ॥

(ಭಾಷ್ಯಾರ್ಥ)

ಸರದಿಯಪ್ರಕಾರ ಬಂದೊದಗಿರುವ ನಾಲ್ಕನೆಯ[2] ಪಾದವನ್ನು ಹೇಳಬೇಕೆಂದು ನಾನ್ತಃಪ್ರಜ್ಞಮ್ ಎಂದು ಮುಂತಾದ (ವಾಕ್ಯ) ದಿಂದ (ಮಂತ್ರವು) ಹೇಳುತ್ತದೆ. ಾತುಗಳು (ತಿಳಿಸುವದಕ್ಕೆ) ಹೊರಡುವ ನಿಮಿತ್ತವು ಯಾವದೂ ಅದರಲ್ಲಿಲ್ಲದ್ದರಿಂದ ದು ಶಬ್ದದಿಂದ ಹೇಳುವದಕ್ಕೆ ತಕ್ಕದ್ದಲ್ಲವೆಂಬ (ಕಾರಣದಿಂದ)[3] ಇಂಥಿಂಥದ್ದು ಲ್ಲವೆಂದು ತಿಳಿಸುವದರಿಂದಲೇ ತುರೀಯವನ್ನು ತಿಳಿಸುವದಕ್ಕೆ ಪ್ರಯತ್ನ ಾಡಿರುತ್ತದೆ.

## ತುರೀಯವು ನಿರ್ವಿಶೇಷವಾದರೂ ಶೂನ್ಯವಲ್ಲ

(ಭಾಷ್ಯ)

೩೫. ಶೂನ್ಯಮೇವ ತರ್ಹಿ ತತ್ । ನ ಮಿಥ್ಯಾವಿಕಲ್ಪಸ್ಯ ನಿರ್ನಿಮಿತ್ತತ್ವಾನು ಪತ್ತೇಃ । ನ ಹಿ ರಜತಸರ್ಪಪುರುಷಮೃಗತೃಷ್ಣಿಕಾದಿವಿಕಲ್ಪಾಃ ಶುಕ್ತಿಕಾರಜ್ಜು ್ಥಾಣೂಷರಾದಿವ್ಯತಿರೇಕೇಣ ಅವಸ್ತ್ವಾಸ್ಪದಾಃ ಶಕ್ಯಾಃ ಕಲ್ಪಯಿತುಮ್ । ಏವಂ ರ್ಹಿ ಪ್ರಾಣಾದಿಸರ್ವವಿಕಲ್ಪಾಸ್ಪದತ್ವಾತ್ ತುರೀಯಸ್ಯ ಶಬ್ದವಾಚ್ಯತ್ವಮ್ ಇತಿ ನ ತಿಷೇಧೈಃ ಪ್ರತ್ಯಾಯ್ಯತ್ವಮ್ ಉದಕಾದ್ಯಾಧಾರಸ್ಯೇವ[4] ಘಟಾದೇಃ । ನ । ್ರಾಣಾದಿವಿಕಲ್ಪಸ್ಯ ಅಸತ್ತ್ವಾತ್ ಶುಕ್ತಿಕಾದಿಷ್ವಿವ ರಜತಾದೇಃ । ನ ಹಿ ಸದಸತೋಃ ಂಬನ್ಧಃ ಶಬ್ದಪ್ರವೃತ್ತಿನಿಮಿತ್ತಭಾಕ್ । ಅವಸ್ತುತ್ವಾತ್ । ನಾಪಿ ಪ್ರಮಾಣಾನ್ತರ

---

1. ಇಲ್ಲಿ ಮುದ್ರಿತಪುಸ್ತಕಗಳಲ್ಲಿ ಚ ಎಂದು ಹೆಚ್ಚಾಗಿದೆ.

2. ವಿಶ್ವ, ತೈಜಸ, ಪ್ರಾಜ್ಞ–ಎಂಬ ಮೂರು ಪಾದಗಳನ್ನು ಹೇಳಿದ್ದಾಯಿತು. ಗ ನಾಲ್ಕನೆಯ ಪಾದವನ್ನು ಹೇಳಬೇಕಾಗಿದೆ.

3. ಇಂಥದ್ದು ಎಂದು ವಿಶ್ವಾದಿಗಳನ್ನು ಆಯಾ ಅವಸ್ಥೆ, ಸ್ವಭಾವ-ಮುಂತಾದ ಶೇಷಗಳಿಂದ ತಿಳಿಸಿತ್ತು; ತುರೀಯವನ್ನು ಹಾಗೆ ಹೇಳುವದಕ್ಕೆ ಬೇಕಾದ ಸಂಬಂಧ ತಿ–ಮುಂತಾದ ಯಾವದೂ ಅದರಲ್ಲಿಲ್ಲ. ಇದು ಮುಂದೆ ಭಾಷ್ಯದಲ್ಲಿ ವಿಶದವಾಗುವದು.

4. "ಉದಕಾಧಾರಾದೇಃ" ಎಂಬ ಪಾಠಕ್ಕಿಂತ ಇದು ಉತ್ತಮ.

ವಿಷಯತ್ವಂ ಸ್ವರೂಪೇಣ[1] । ಆತ್ಮನೋ ನಿರುಪಾಧಿಕತ್ವಾತ್ । ಗವಾದಿವತ್ ನಾಪಿ ಜಾತಿಮತ್ತ್ವಮ್ । ಅದ್ವಿತೀಯತ್ವೇನ ಸಾಮಾನ್ಯವಿಶೇಷಾಭಾವಾತ್ । ನಾಪಿ ಕ್ರಿಯಾವತ್ತ್ವಂ ಪಾಚಕಾದಿವತ್ । ಅವಿಕ್ರಿಯತ್ವಾತ್ । ನಾಪಿ ಗುಣವತ್ತ್ವಂ ನೀಲಾದಿವತ್ । ನಿರ್ಗುಣತ್ವಾತ್ । ಅತೋ ನಾಭಿಧಾನೇನ ನಿರ್ದೇಶಮರ್ಹತಿ ॥

(ಭಾಷ್ಯಾರ್ಥ)

(ಆಕ್ಷೇಪ) :—ಹಾಗಾದರೆ ಅದು ಶೂನ್ಯವೆಂದೇ ಆಯಿತಲ್ಲ ?

(ಪರಿಹಾರ) :—ಹಾಗಲ್ಲ. ಏಕೆಂದರೆ ಹುಸಿಯಾದ **ವಿಕಲ್ಪವು**[2] ನಿಮಿತ್ತ[3] ವಿಲ್ಲದೆ ಇರಲಾರದು. ಬೆಳ್ಳಿ, ಹಾವು, ಮನುಷ್ಯ, ಬಿಸಿಲುಕುದುರೆಯ (ನೀರು) ಮುಂತಾದ ವಿಕಲ್ಪಗಳು ಕಪ್ಪೆಯಚಿಪ್ಪು, ಹಗ್ಗ, ಮೋಟುಮರ, ಮರುಭೂಮಿ-ಮುಂತಾದವುಗಳಿಲ್ಲದೆ ಯಾವ ವಸ್ತುವೂ **ಆಸ್ಪದ**ವಾಗಿಲ್ಲದೆ ಇರುವವೆಂದು ಕಲ್ಪಿಸುವದಕ್ಕೆ ಆಗುವದಿಲ್ಲವಷ್ಟೆ.

(ಆಕ್ಷೇಪ) :—ಹಾಗಾದರೆ ಪ್ರಾಣನೇ ಮುಂತಾದ ಎಲ್ಲಾ ವಿಕಲ್ಪಗಳಿಗೂ ಆಸ್ಪದವಾಗಿರುವದರಿಂದ ತುರೀಯನನ್ನು ಶಬ್ದದಿಂದ ಹೇಳಬಹುದು (ಎಂದಾಯಿತು). ಆದ್ದರಿಂದ ನೀರು ಮುಂತಾದದ್ದಕ್ಕೆ ಆಧಾರವಾಗಿರುವ ಘಟಾದಿಗಳಂತೆ (ಶಬ್ದವಾಚ್ಯವಾಗಿರುವ ತುರೀಯನನ್ನು ವಿಶೇಷಗಳನ್ನು) ಅಲ್ಲಗಳೆಯುವದರಿಂದಲೇ ತಿಳಿಸಬೇಕೆಂಬುದೇನೂ ಇರುವದಿಲ್ಲ[4].

(ಪರಿಹಾರ) :—ಹಾಗಲ್ಲ. ಏಕೆಂದರೆ ಕಪ್ಪೆಯಚಿಪ್ಪು ಮುಂತಾದದ್ದರಲ್ಲಿ (ತೋರುವ) ಬೆಳ್ಳಿಮುಂತಾದವುಗಳಂತೆ ಪ್ರಾಣನೇ ಮುಂತಾದ ವಿಕಲ್ಪವು ಅಸತ್ತಾಗಿರುತ್ತದೆ. ಸತ್ತು ಮತ್ತು ಅಸತ್ತು-ಇವುಗಳ ಸಂಬಂಧವು ಶಬ್ದಪ್ರವೃತ್ತಿಗೆ ಬೇಕಾದ ನಿಮಿತ್ತವುಳ್ಳದ್ದಲ್ಲ; ಏಕೆಂದರೆ ಅದು (ನಿಜವಾದ) ವಸ್ತುವಲ್ಲ[5]. (ತುರೀಯನು)

---

1. ಇದಾದಮೇಲೆ "ಗವಾದಿವತ್" ಎಂಬ ಮಾತು ಅಚ್ಚಿನ ಪುಸ್ತಕಗಳಲ್ಲಿದೆ. ಅದನ್ನು ಬೇಕಿಲ್ಲವೆಂದು ಬಿಟ್ಟುಬಿಟ್ಟಿದೆ.

2. ವಸ್ತುಶೂನ್ಯವಾದ ಬರಿಯ ತೋರಿಕೆಯು.

3. ನಿಮಿತ್ತ, ಆಸ್ಪದ-ಎಂಬ ಮಾತುಗಳನ್ನು ಆರೋಪಿತ ವಸ್ತುವಿಗೆ ಎಡೆಯಾಗಿರುವ ಅಧಿಷ್ಠಾನ ಎಂಬರ್ಥದಲ್ಲಿ ಭಾಷ್ಯಕಾರರು ಉಪಯೋಗಿಸಿರುತ್ತಾರೆ.

4. ನೀರಿನ ಆಧಾರವನ್ನು ಆಧಾರವಾಗಿದೆ ಎಂದು ಸಂಬಂಧದಿಂದಲೂ ಗಡಿಗೆ ಎಂಬ ಮಾತಿನಿಂದಲೂ ತಿಳಿಸಬಹುದು. ಇದರಂತೆ ತುರೀಯುವನ್ನು ಅನಾತ್ಮದ ಸಂಬಂಧದಿಂದಲೂ ಅದನ್ನು ತಿಳಿಸುವ ವಾಚಕಶಬ್ದದಿಂದಲೂ ತಿಳಿಸಬಹುದಲ್ಲ !-ಎಂದು ಭಾವ.

5. ಅದೂ ವಿಕಲ್ಪವೇ ಆಗಿರುತ್ತದೆ.

ತನ್ನ ರೂಪದಿಂದ ಪ್ರಮಾಣಾಂತರಕ್ಕೆ[1] ವಿಷಯನೂ ಅಲ್ಲ. ಏಕೆಂದರೆ ಆತ್ಮನಲ್ಲಿ ಯಾವ **ಉಪಾಧಿಯೂ**[2] ಇರುವದಿಲ್ಲ. ಗೋವು ಮುಂತಾದವುಗಳಂತೆ (ಅವನಲ್ಲಿರುವ) **ಜಾತಿಯೂ** (ನಿಮಿತ್ತವಲ್ಲ); ಏಕೆಂದರೆ (ಅವನು) ಅದ್ವಿತೀಯನಾಗಿರುವದರಿಂದ (ಅವನಲ್ಲಿ) **ಸಾಮಾನ್ಯವಿಶೇಷಗಳು**[3] ಇರುವದಿಲ್ಲ. ಅಡಿಗೆಯವನೇ ಮುಂತಾದವರಂತೆ **ಕ್ರಿಯೆಯಿ**ರುವದೂ (ಶಬ್ದಕ್ಕೆ ನಿಮಿತ್ತವಲ್ಲ); ಏಕೆಂದರೆ (ತುರೀಯನು) **ವಿಕಾರ**ರಹಿತನಾಗಿರುತ್ತಾನೆ[4]. ಕರಿಯ (ನೈದಿಲೆ) ಮುಂತಾದವುಗಳಂತೆ **ಗುಣ**ದಿಂದ ಕೂಡಿರುವದೂ (ನಿಮಿತ್ತ) ವಾಗಲಾರದು ; ಏಕೆಂದರೆ ಅವನು ನಿರ್ಗುಣನಾಗಿರುತ್ತಾನೆ. ಆದ್ದರಿಂದ ಮಾತಿನಿಂದ ತಿಳಿಸುವದಕ್ಕೆ ತಕ್ಕವನಲ್ಲ[5].

## ತುರೀಯವು ನಿಷ್ಪ್ರಯೋಜನವಸ್ತುವಲ್ಲ

(ಭಾಷ್ಯ)

೩೬. ಶಶವಿಷಾಣಾದಿಸಮತ್ವಾತ್ ನಿರರ್ಥಕತ್ವಂ ತರ್ಹಿ । ನ । ಆತ್ಮತ್ವಾವಗಮೇ ತುರೀಯಸ್ಯ ಅನಾತ್ಮತೃಷ್ಣಾವ್ಯಾವೃತ್ತಿಹೇತುತ್ವಾತ್ ಶುಕ್ತಿಕಾವಗಮೇ ಇವ ರಜತತೃಷ್ಣಾಯಾಃ । ನ ಹಿ ತುರೀಯಸ್ಯ ಆತ್ಮತ್ವಾವಗಮೇ ಸತಿ ಅವಿದ್ಯಾತೃಷ್ಣಾದಿದೋಷಾಣಾಂ ಸಂಭವಃ ಅಸ್ತಿ । ನ ಚ ತುರೀಯಸ್ಯ ಆತ್ಮತ್ವಾನವಗಮೇ ಕಾರಣಮ್ ಅಸ್ತಿ । ಸರ್ವೋಪನಿಷದಾಂ ತಾದರ್ಥ್ಯೇನ ಉಪಕ್ಷಯಾತ್ । "ತತ್ತ್ವಮಸಿ" (ಛಾಂ. ೬-೮-೭), "ಅಯಮಾತ್ಮಾ ಬ್ರಹ್ಮ" (ಬೃ. ೨-೫-೧೯), "ತತ್ಸತ್ಯಂ ಸ ಆತ್ಮಾ" (ಛಾ. ೬-೮-೭), "ಯತ್ಸಾಕ್ಷಾದಪರೋಕ್ಷಾದ್ ಬ್ರಹ್ಮ" (ಬೃ. ೩-೪-೧), "ಸ ಬಾಹ್ಯಾಭ್ಯನ್ತರೋ ಹ್ಯಜಃ" (ಮುಂ. ೨-೧-೨), "ಆತ್ಮೈವೇದಗ್ಂ ಸರ್ವಮ್" (ಛಾಂ. ೮-೨೫-೨) ಇತ್ಯಾದೀನಾಮ್ ॥

---

1. ನಿಷೇಧಪ್ರಮಾಣವನ್ನು ಬಿಟ್ಟರೆ ಪ್ರತ್ಯಕ್ಷಾದಿಗಳಿಂದ ತಿಳಿಸುವದಕ್ಕೆ ಆಗಲಾರದು.

2. ಉಪಾಧಿಯೆಂದರೆ ಪ್ರಮಾಣಾಂತರಕ್ಕೆ ವಿಷಯವಾಗುವ ರೂಪಾದಿಗಳು, ಲಿಂಗಾದಿಗಳು. ಬ್ರಹ್ಮವು ಪ್ರಮಾಣಾಂತರ ವಿಷಯವಲ್ಲವೆಂಬದಕ್ಕೆ ಸೂ. ಭಾ. ೨-೧-೬ ನೋಡಿ.

3. ಗೋವೆಂಬ ವ್ಯಕ್ತಿಯಲ್ಲಿ ಗೋತ್ವವೆಂಬ ಸಾಮಾನ್ಯವಿರುತ್ತದೆ. ಸಾಮಾನ್ಯಕ್ಕೇ ಜಾತಿ ಎಂಬ ಮತ್ತೊಂದು ಹೆಸರು.

4. ವಿಕಾರವುಳ್ಳ ಅಡಿಗೆಯವನಲ್ಲಿ ಅಡುವದೆಂಬ ಕ್ರಿಯೆಯುಂಟಾಗಬಹುದು. ನಿರ್ವಿಕಾರವಾದ ಬ್ರಹ್ಮದಲ್ಲಿ ಆಗಲಾರದು.

5. ಈ ಅರ್ಥದ ಭಾಷ್ಯವು ಕೇ. ಭಾ. ೧-೩. ಗೀ. ಭಾ. ೧೩-೧೨. ತೈ. ಭಾ. ೨-೧. (ಛಾ. ಭಾ. ೧೦೭) ಇವುಗಳಲ್ಲಿದೆ.

(ಭಾಷ್ಯಾರ್ಥ)

(ಆಕ್ಷೇಪ):—ಹಾಗಾದರೆ ಮೊಲದ ಕೊಂಬು ಮುಂತಾದವುಗಳಂತೆ (ತುರೀಯನು) ನಿಷ್ಪ್ರಯೋಜನವೆಂದಾಯಿತು.

(ಪರಿಹಾರ):ಹಾಗಲ್ಲ (ಇದು) ಕಪ್ಪೆಯಚಿಪ್ಪು ಎಂದು ನಿಶ್ಚಯಿಸಿಕೊಂಡರೆ ಬೆಳ್ಳಿಯ ಆಸೆ ಹೋಗಿಬಿಡುವಂತೆ (ಇವನು) ಆತ್ಮನೇ ಎಂದು ತುರೀಯನನ್ನು ನಿಶ್ಚಯಿಸಿಕೊಂಡರೆ ಅನಾತ್ಮದ ಆಸೆಯು ಹೋಗುವದಕ್ಕೆ ಕಾರಣವಾಗುತ್ತಾನೆ. **ತುರೀಯನು ಆತ್ಮನೆಂದು ನಿಶ್ಚಯಿಸಿದರೆ ಅವಿದ್ಯೆ, ಕಾಮ ಮುಂತಾದ ದೋಷಗಳು ಇರುವಹಾಗಿಲ್ಲವಷ್ಟೆ[1] ತುರೀಯನು ಆತ್ಮನೆಂದು ನಿಶ್ಚಯ ವಾಗುವದಿಲ್ಲವೆಂಬುದಕ್ಕೆ ಕಾರಣವೂ ಇಲ್ಲ; ಏಕೆಂದರೆ ಎಲ್ಲಾ ಉಪನಿಷತ್ತು ಗಳೂ ಅದನ್ನು ಹೇಳುವದರಲ್ಲಿಯೇ ಕೊನೆಗೊಂಡಿರುತ್ತವೆ[2].** "ಅದೇ ನೀನಾಗಿರುವೆ" (ಛಾಂ. ೬-೮-೭), "ಈ ಆತ್ಮನು ಬ್ರಹ್ಮವು" (ಬೃ. ೨-೫-೧೯), "ಅದು ಸತ್ಯವು, ಅವನೇ ಆತ್ಮನು"[3] (ಛಾಂ. ೬-೮-೭) "ಯಾವದು ಸಾಕ್ಷಾತ್ತಾಗಿ ಅಪರೋಕ್ಷವಾಗಿರುವ ಬ್ರಹ್ಮವೋ, ಯಾವನು ಸರ್ವಾಂತರನಾದ ಆತ್ಮನೋ" (ಬೃ. ೩-೪-೧) "ಅವನು ಒಳಗೂ ಹೊರಗೂ ಅಜನು" (ಮುಂ. ೨-೧-೨) "ಇದೆಲ್ಲವೂ ಆತ್ಮನೇ" (ಛಾಂ. ೭-೨೫-೨) ಮುಂತಾದವುಗಳೆಲ್ಲವೂ[4] ಇದನ್ನೇ ಹೇಳುವದಕ್ಕೆ ಹೊರಟಿವೆ.

---

1. ತುರೀಯನನ್ನು ಅನಾತ್ಮವೆಂದು ತಪ್ಪಾಗಿ ತಿಳಿದುಕೊಂಡಿರುವದೇ ಅವಿದ್ಯೆ; ಈ ಅವಿದ್ಯೆಯಿಂದ ಅನಾತ್ಮದ ವಿಷಯದಲ್ಲಿ ಕಾಮವೂ ಆ ಕಾಮದಿಂದ ಕರ್ಮವೂ ಆಗಿರುತ್ತದೆ. ತುರೀಯನು ಅದ್ವಿತೀಯನಾದ ಆತ್ಮನು ಎಂದು ನಿಶ್ಚಯವಾದರೆ ಇವು ಇರಲಾರವು.

2. ಸೂ. ಭಾ. ೧-೧-೪, ಗೀ. ಭಾ. ೨-೨೦ (ಭಾ. ಭಾ. ೪೦) ಇವುಗಳಲ್ಲಿ ಬ್ರಹ್ಮವು ಶಾಸ್ತ್ರಪ್ರಮಾಣಕವೆಂಬುದನ್ನು ತಿಳಿಸಿದೆ. ಈ ಉಪನಿಷತ್ತಿನಂತೆಯೇ ಎಲ್ಲಾ ಉಪನಿಷತ್ತುಗಳೂ ಆತ್ಮೈಕತ್ವವನ್ನು ತಿಳಿಸುವದರಿಂದ ವಿರುದ್ಧಾರ್ಥಬೋಧಕತ್ವವಿಲ್ಲ ಎಂದು ಸೂ. ಭಾ. ೩-೩-೧ರ ಅವತರಣಿಕೆಯನ್ನು ನೋಡಿ.

3. ಸ ಆತ್ಮಾ ಎಂಬ ಮಾತು ಪ್ರಕೃತಮಂತ್ರದಲ್ಲಿಯೇ ಇದೆ. ಇದೇ ಅರ್ಥವನ್ನು ಶ್ರುತ್ಯಂತರದಲ್ಲಿ ಹೇಳಿದೆ ಎಂದು ತಿಳಿಸುವದಕ್ಕೆ ಇಲ್ಲಿ ಛಾಂದೋಗ್ಯವನ್ನು ಉದಾಹರಿಸಿದೆ.

4. ಒಳಗುಹೊರಗುಗಳು ಜೀವಾತ್ಮನಿಗೆ ಮಾತ್ರ ಸಂಭವಿಸುತ್ತವೆ. ಅಪ್ರಾಣ ಅಮನ-ಎಂಬ ವಿಶೇಷಣಗಳು ಪ್ರಾಣಮನಸ್ಸುಗಳ ಸಂಬಂಧವನ್ನು ಅಲ್ಲಗಳೆಯುವದರಿಂದ ಜೀವನಿಗೇ ಹೊಂದುತ್ತವೆ. ಆದ್ದರಿಂದ ಈ ಶ್ರುತಿಯಲ್ಲಿ ಬ್ರಹ್ಮಾತ್ಮೈಕ್ಯವನ್ನೇ ಹೇಳಿದೆ ಎಂದು ಭಾವ.

# ತುರೀಯನು ಅಂತಃಪ್ರಜ್ಞಾದಿಗಳಿಗಿಂತ ಬೇರೆ ಎಂದಿರುವದರ ಪ್ರಯೋಜನ

(ಭಾಷ್ಯ)

೩೭. ಸೋಽಯಮ್ ಆತ್ಮಾ ಪರಮಾರ್ಥಾಪರಮಾರ್ಥರೂಪಃ ಚತುಷ್ಪಾತ್ ಇತ್ಯುಕ್ತಃ । ತಸ್ಯ ಅಪರಮಾರ್ಥರೂಪಮ್ ಅವಿದ್ಯಾಕೃತಂ ರಜ್ಜುಸರ್ಪಾದಿಸಮಮ್ ಉಕ್ತಂ ಪಾದತ್ರಯಲಕ್ಷಣಂ ಬೀಜಾಙ್ಕುರಸ್ಥಾನೀಯಮ್ । ಅಥ ಇದಾನೀಮ್ ಅಬೀಜಾತ್ಮಕಂ ಪರಮಾರ್ಥಸ್ವರೂಪಂ ರಜ್ಜುಸ್ಥಾನೀಯಂ ಸರ್ಪಾದಿಸ್ಥಾನೀಯೋಕ್ತ ಸ್ಥಾನತ್ರಯನಿರಾಕರಣೇನ ಆಹ–" ನಾನ್ತಃಪ್ರಜ್ಞಮ್ " ಇತ್ಯಾದಿ ॥

(ಭಾಷ್ಯಾರ್ಥ)

ಅಂಥ ಈ ಆತ್ಮನು ನಿಜವಾದ ಮತ್ತು ನಿಜವಲ್ಲದ ರೂಪಗಳಿಂದ ಕೂಡಿರುವದರಿಂದ ಚತುಷ್ಪಾದನು ಎಂದು ಹೇಳಿರುತ್ತದೆಯಷ್ಟೆ[1]. ಅವನಿಗೆ ಅವಿದ್ಯಾಕೃತವಾದ ಹಗ್ಗದ ಹಾವೇ ಮುಂತಾದವುಗಳಂತೆ ಇರುವ ಬೀಜವೊಳಕೆಗಳ ಸ್ಥಾನದಲ್ಲಿರುವ ಪಾದತ್ರಯವೆಂಬ ನಿಜವಲ್ಲದ ರೂಪವನ್ನು ಹೇಳಿದ್ದಾಯಿತು. ಇನ್ನು ಈಗ ಬೀಜರೂಪವಲ್ಲದ[2] ಹಗ್ಗದಂತಿರುವ ನಿಜವಾದ ರೂಪವನ್ನು ಹಾವೇ ಮುಂತಾದವುಗಳಂತಿರುವ ಮೇಲೆ ಹೇಳಿದ ಮೂರುಸ್ಥಾನಗಳನ್ನೂ ಅಲ್ಲಗಳೆಯುವಮೂಲಕವಾಗಿ " ನಾನ್ತಃಪ್ರಜ್ಞಮ್ " ಎಂದು ಮುಂತಾದ ವಾಕ್ಯದಿಂದ (ಶ್ರುತಿಯು) ತಿಳಿಸುತ್ತದೆ.

(ಭಾಷ್ಯ)

೩೮. ನನು ಆತ್ಮನಃ ಚತುಷ್ಪಾತ್ತ್ವಂ ಪ್ರತಿಜ್ಞಾಯ ಪಾದತ್ರಯಕಥನೇನೈವ ಚತುರ್ಥಸ್ಯ ಅನ್ತಃಪ್ರಜ್ಞಾದಿಭ್ಯೋಽನ್ಯತ್ವೇ ಸಿದ್ಧೇ " ನಾನ್ತಃಪ್ರಜ್ಞಮ್ " ಇತ್ಯಾದಿ ಪ್ರತಿಷೇಧಃ ಅನರ್ಥಕಃ । ನ । ಸರ್ಪಾದಿವಿಕಲ್ಪಪ್ರತಿಷೇಧೇನೈವ ರಜ್ಜುಸ್ವರೂಪಪ್ರತಿಪತ್ತಿವತ್ ತ್ರ್ಯವಸ್ಥಸ್ಯೈವ ಆತ್ಮನಃ ತುರೀಯತ್ವೇನ ಪ್ರತಿಪಿಪಾದಯಿಷಿತತ್ವಾತ್ । ' ತತ್ತ್ವಮಸಿ " ಇತಿವತ್ । ಯದಿ ಹಿ ತ್ರ್ಯವಸ್ಥಾತ್ಮವಿಲಕ್ಷಣಂ ತುರೀಯಮ್ ಅನ್ಯತ್, ತತ್ಪ್ರತಿಪತ್ತಿದ್ವಾರಾಭಾವಾತ್ ಶಾಸ್ತ್ರೋಪದೇಶಾನರ್ಥಕ್ಯಂ ಶೂನ್ಯತಾಪತ್ತಿರ್ವಾ ॥

---

1. ಆತ್ಮನು ಪರಮಾರ್ಥಾಪರಮಾರ್ಥರೂಪಗಳುಳ್ಳವನೆಂಬ ವಾಕ್ಯವು ಶ್ರುತಿಯಲ್ಲಿಲ್ಲ. ಆದರೂ ಪ್ರಕೃತಮಂತ್ರದಿಂದ ಇದು ಏರ್ಪಡುತ್ತದೆ ಎಂದು ಭಾವ.

2. ಪ್ರಾಜ್ಞನಿಗೆ ಅಬೀಜಾವಸ್ಥೆಯನ್ನು ಮುಂದೆ ಹೇಳಲಾಗುತ್ತದೆ ಎಂದು ೨ನೆಯ ಕಾರಿಕೆಯ ಭಾಷ್ಯದ ಕೊನೆಯಲ್ಲಿ ಹೇಳಿದ್ದನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು.

(ಭಾಷ್ಯಾರ್ಥ)

(ಆಕ್ಷೇಪ) :—ಆತ್ಮನಿಗೆ ನಾಲ್ಕುಪಾದಗಳಿವೆ ಎಂದು ಹೇಳಿ ಮೂರು ಪಾದಗಳನ್ನು ಹೇಳಿದ್ದರಿಂದಲೇ ನಾಲ್ಕನೆಯದು ಅಂತಃಪ್ರಜ್ಞಾದಿಗಳಿಗಿಂತ ಬೇರೆ ಎಂದು ಸಿದ್ಧವಾಗಿರುವಾಗ (ಮತ್ತೆ) 'ನಾನ್ತಃಪ್ರಜ್ಞಮ್' (ಅಂತಃಪ್ರಜ್ಞನಲ್ಲದ) ಎಂದು ಮುಂತಾಗಿರುವ ಪ್ರತಿಷೇಧವು ವ್ಯರ್ಥವಲ್ಲವೆ ?

(ಪರಿಹಾರ) :—ಹಾಗಲ್ಲ. ಏಕೆಂದರೆ **ಹಾವು ಮುಂತಾದ ವಿಕಲ್ಪಗಳನ್ನು ಅಲ್ಲಗಳೆಯುವದರಿಂದಲೇ ಹಗ್ಗದ ಸ್ವರೂಪದ ಅರಿವನ್ನು (ಮಾಡಿಕೊಡುವಂತೆ) ಮೂರವಸ್ಥೆಗಳ ಆತ್ಮನನ್ನೇ "ನೀನು ಅದಾಗಿರುತ್ತೀಯೆ"[1] (ಛಾಂ. ೬-೮-೭) ಎಂಬಂತೆ ತುರೀಯನೆಂದು ಹೇಳುವದಕ್ಕೆ ಹೊರಟಿರುತ್ತದೆ[2]. ತುರೀಯವು ಮೂರವಸ್ಥೆಯ ಆತ್ಮನಿಗಿಂತ ಬೇರೆಯ ಸ್ವಭಾವದ್ದಾಗಿದ್ದರೆ[3] ಅದನ್ನು ಅರಿಯುವದಕ್ಕೆ ದ್ವಾರವೇ ಇಲ್ಲದ್ದರಿಂದ ಶಾಸ್ತ್ರವನ್ನು ಉಪದೇಶಮಾಡಿರುವದು ವ್ಯರ್ಥವಾಗುತ್ತಿತ್ತು. ಅಥವಾ (ತುರೀಯವು) ಶೂನ್ಯವೆಂದಾಗುತ್ತಿತ್ತು[4].**

## ಪ್ರತಿಷೇಧವಾಕ್ಯದ ಪ್ರಾಮಾಣ್ಯ

(ಭಾಷ್ಯ)

೨೯. ರಜ್ಜ್ವಾಮಿವ ಸರ್ಪಾದಿಭಿಃ ವಿಕಲ್ಪ್ಯಮಾನಾ ಸ್ಥಾನತ್ರಯೇಽಪಿ ಆತ್ಮಾ ಏಕ ಏವ ಅನ್ತಃಪ್ರಜ್ಞಾದಿತ್ವೇನ ವಿಕಲ್ಪ್ಯತೇ ಯದಾ, ತದಾ ಅನ್ತಃಪ್ರಜ್ಞಾದಿತ್ವಪ್ರತಿಷೇಧವಿಜ್ಞಾನಪ್ರಮಾಣಸಮಕಾಲಮೇವ ಆತ್ಮನಿ ಅನರ್ಥಪ್ರಪಞ್ಚನಿವೃತ್ತಿಲಕ್ಷಣಫಲಂ ಪರಿಸಮಾಪ್ತಮ್ ಇತಿ ತುರೀಯಾಧಿಗಮೇ ಪ್ರಮಾಣಾನ್ತರಂ ಸಾಧನಾನ್ತರಂ ವಾ ನ ಮೃಗ್ಯಮ್ । ರಜ್ಜುಸರ್ಪವಿವೇಕಸಮಕಾಲೇ ಇವ ರಜ್ಜ್ವಾಂ ಸರ್ಪನಿವೃತ್ತಿ

---

1. ಇಲ್ಲಿ ಸಂಸಾರಿತ್ವವನ್ನು ತ್ವಂ (ನೀನು ಎಂಬ) ಪದದಿಂದ ಹೇಳಿ ಅದನ್ನು ಅಲ್ಲಗಳೆದು ತತ್ (ಅದು ಎಂಬ ಪದದಿಂದ) ಬ್ರಹ್ಮಸ್ವರೂಪವನ್ನು ತಿಳಿಸಿರುತ್ತದೆ—ಎಂದು ಭಾವ. ವ್ಯಾಖ್ಯಾನದಲ್ಲಿ ಈ ವಾಕ್ಯವು ವಿಧಿಮುಖವಾದ ಉಪದೇಶವೆಂದಿರುವದು ಬಾಧಸಾಮಾನಾಧಿಕರಣ್ಯವನ್ನು ಇಟ್ಟುಕೊಳ್ಳದೆ ಆಡಿದ ಮಾತು. ಪ್ರಕೃತಕ್ಕೆ ನಮ್ಮ ವಿವರಣೆಯೇ ಹೆಚ್ಚು ಹೊಂದುತ್ತದೆ.

2. ವಿಶ್ವಾದಿಗಳ ವಿಶ್ವತ್ವಾದಿಯನ್ನು ಕಳೆದರೆ ಉಳಿಯುವದೇ ತುರೀಯವು ಎಂದು ಭಾವ.

3. ಒಂದೊಂದು ಅವಸ್ಥೆಯಲ್ಲಿರುವ ಆತ್ಮನೇ ಪರಮಾರ್ಥವಾಗಿ ತುರೀಯವಲ್ಲದಿದ್ದರೆ.

4. ಶಾಸ್ತ್ರವು ಅಬೋಧಕವೆಂದೋ ವಿಪರೀತಬೋಧಕವೆಂದೋ ಆಗಿ ಅಪ್ರಮಾಣವಾಗುತ್ತಿತ್ತು ಎಂದು ಭಾವ.

ಫಲೇ ಸತಿ ರಜ್ಜ್ವಧಿಗಮಸ್ಯ । ಯೇಷಾಂ ಪುನಃ ತಮೋಽಪನಯವ್ಯತಿರೇಕೇಣ ಘಟಾಧಿಗಮೇ ಪ್ರಮಾಣಂ ವ್ಯಾಪ್ರಿಯತೇ ತೇಷಾಂ ಛೇದ್ಯಾವಯವಸಂಬನ್ಧವಿಯೋಗ ವ್ಯತಿರೇಕೇಣ ಅನ್ಯತರಾವಯವೇಽಪಿ ಛಿದಿರ್ವ್ಯಾಪ್ರಿಯತೇ ಇತಿ ಉಕ್ತಂ ಸ್ಯಾತ್। ಯದಾ ಪುನಃ ಘಟತಮಸೋರ್ವಿವೇಕಕರಣೇ ಪ್ರವೃತ್ತಂ ಪ್ರಮಾಣಮ್ ಅನುಪಾದಿತ್ಸಿತತಮೋನಿವೃತ್ತಿಫಲಾವಸಾನಂ ಛಿದಿರಿವ ಛೇದ್ಯಾವಯವಸಂಬನ್ಧವಿವೇಕಕರಣೇ[1] ಪ್ರವೃತ್ತಾ ತದವಯವದ್ವೈಧೀಭಾವಫಲಾವಸಾನಾ ತದಾ ನಾನ್ತರೀಯಕಂ ಘಟವಿಜ್ಞಾನಮ್ ನ ತತ್[2] ಪ್ರಮಾಣಫಲಮ್ । ನ ಚ ತದ್ವತ್ ಅತ್ರಾಪಿ[3] ಆತ್ಮನ್ಯಧ್ಯಾರೋಪಿತಾನ್ತಃಪ್ರಜ್ಞತ್ವಾದಿವಿವೇಕಕರಣೇ ಪ್ರವೃತ್ತಸ್ಯ ಪ್ರತಿಷೇಧವಿಜ್ಞಾನಪ್ರಮಾಣಸ್ಯ ಅನುಪಾದಿತ್ಸಿತಾನ್ತಃಪ್ರಜ್ಞತ್ವಾದಿನಿವೃತ್ತಿವ್ಯತಿರೇಕೇಣ ತುರಿಯೇ ವ್ಯಾಪಾರೋಪಪತ್ತಿಃ। ಅನ್ತಃಪ್ರಜ್ಞತ್ವಾದಿನಿವೃತ್ತಿಸಮಕಾಲಮೇವ ಪ್ರಮಾತೃತ್ವಾದಿಭೇದನಿವೃತ್ತೇಃ । ತಥಾ ಚ ವಕ್ಷ್ಯತಿ-"ಜ್ಞಾತೇ ದ್ವೈತಂ ನ ವಿದ್ಯತೇ" (೧-೧೮) ಇತಿ। ಜ್ಞಾನಸ್ಯ ದ್ವೈತನಿವೃತ್ತಿಕ್ಷಣವ್ಯತಿರೇಕೇಣ ಕ್ಷಣಾನ್ತರಾನವಸ್ಥಾನಾತ್। ಅವಸ್ಥಾನೇ ಚ ಅನವಸ್ಥಾಪ್ರಸಙ್ಗಾತ್ ದ್ವೈತಾನಿವೃತ್ತಿಃ। ತಸ್ಮಾತ್ ಪ್ರತಿಷೇಧವಿಜ್ಞಾನಪ್ರಮಾಣವ್ಯಾಪಾರಸಮಕಾಲಮೇವ ಆತ್ಮನ್ಯಧ್ಯಾರೋಪಿತಾನ್ತಃಪ್ರಜ್ಞತ್ವಾದ್ಯನರ್ಥನಿವೃತ್ತಿರಿತಿ ಸಿದ್ಧಮ್ ॥

(ಭಾಷ್ಯಾರ್ಥ)

**ಹಾವು ಮುಂತಾದವುಗಳ ರೂಪದಿಂದ ವಿಕಲ್ಪಿಸಿರುವ ಹಗ್ಗದಂತೆ ಮೂರು ಅವಸ್ಥೆಯಲ್ಲಿಯೂ ಒಬ್ಬನೇ ಆತ್ಮನು ಅಂತಃಪ್ರಜ್ಞನು ಎಂದು ಮುಂತಾಗಿ ವಿಕಲ್ಪಿಸಿರುತ್ತದೆ. ಎಂದು ಯಾವಾಗ (ಒಪ್ಪುತ್ತೇವೋ) ಆಗ ಅನ್ತಃಪ್ರಜ್ಞತ್ವವೇ ಮುಂತಾದವನ್ನು ಅಲ್ಲಗಳೆಯುವ ವಿಜ್ಞಾನವೆಂಬ ಪ್ರಮಾಣವುಂಟಾದ ಸಮಕಾಲದಲ್ಲಿಯೇ ಆತ್ಮನಲ್ಲಿ ಅನರ್ಥಗಳ ಪ್ರಪಂಚವು ತೊಲಗುವದೆಂಬ ಫಲವು ಆಗಿಬಿಡುವದು. ಆದ್ದರಿಂದ ತುರೀಯನನ್ನು ಅರಿತುಕೊಳ್ಳುವದಕ್ಕೆ ಇನ್ನೊಂದು ಪ್ರಮಾಣವನ್ನಾಗಲಿ ಇನ್ನೊಂದು**

---

1. "ವಿಭೇದಕರಣೇ" ಎಂದು ಪಾಠಾಂತರ.

2. ಈ ಮಾತು ವಾ॥ ಪಾಠದಲ್ಲಿಲ್ಲ.

3. "ತದ್ವದಪಿ" ಎಂದೇ ಬಹಳ ಪುಸ್ತಕಗಳಲ್ಲಿದೆ; ಅತ್ರಾಪಿ ಎಂಬ ಪಾಠವು ಸ್ಪಷ್ಟವಾದ ಅರ್ಥವನ್ನು ಕೊಡುತ್ತದೆ.

ಸಾಧನವನ್ನಾಗಲಿ ಹುಡುಕಬೇಕಾದದ್ದಿರುವದಿಲ್ಲ[1]. ಹಗ್ಗ, ಹಾವು-ಇವುಗಳನ್ನು ವಿಂಗಡಿಸಿ ಅರಿಯುವ[2] ಸಮಕಾಲದಲ್ಲಿಯೇ ಹಗ್ಗದಲ್ಲಿ ಹಾವು ಹೋಗುವದೆಂಬ ಫಲವು ಆಗಿಬಿಡುವದರಿಂದ ಹಗ್ಗವನ್ನು ಅರಿಯುವದಕ್ಕೆ (ಬೇರೊಂದು ಹೇಗೆ ಬೇಕಾಗುವದಿಲ್ಲವೋ ಹಾಗೆಯೇ ಇದು).

ಆದರೆ ಯಾರ (ಮತದಲ್ಲಿ) ಅಜ್ಞಾನವನ್ನು ಕಳೆಯುವದೇ ಅಲ್ಲದೆ ಘಟವನ್ನು ಅರಿಯುವದರಲ್ಲಿಯೂ, ಪ್ರಮಾಣವು ವ್ಯಾಪಾರಮಾಡಬೇಕಾಗಿರುವದೋ[3] ಅವರು ಕಡಿಯುವ (ವಸ್ತುವಿನ) ಅವಯವಗಳ ಸಂಬಂಧವನ್ನು ತಪ್ಪಿಸುವದೇ ಅಲ್ಲದೆ (ಆದರ) ಒಂದೊಂದು ಅವಯವದಲ್ಲಿಯೂ ಕಡಿಯೋಣ (ವೆಂಬ ಕ್ರಿಯೆಯು) ಕೆಲಸ ಮಾಡುತ್ತದೆ ಎಂದು ಹೇಳಿದಂತೆ ಆಗುವದು. ಹಾಗಲ್ಲದೆ ಗಡಿಗೆ, ಅಜ್ಞಾನ-ಇವೆರಡನ್ನೂ ವಿಂಗಡಿಸುವದಕ್ಕೆ[4] ಹೊರಟಿರುವ ಪ್ರಮಾಣವು-ಕಡಿಯಬೇಕಾದ (ವಸ್ತುವಿನ) ಅವಯವಗಳ ಸಂಬಂಧವನ್ನು ತಪ್ಪಿಸುವದಕ್ಕೆ ಹೊರಟಿದ್ದ ಕಡಿಯೋಣ (ವೆಂಬ ಕ್ರಿಯೆಯು) ಆ (ವಸ್ತುವಿನ) ಅವಯವಗಳನ್ನು ಎರಡು ಪಾಲು ಮಾಡುವದೆಂಬ ಫಲದಲ್ಲಿ ಕೊನೆಗಾಣುವಂತೆ-ಬೇಕಿಲ್ಲದ ಅಜ್ಞಾನವನ್ನು ಕಳೆಯುವದೆಂಬ ಫಲದಲ್ಲಿಯೇ ಕೊನೆಗಾಣುವದೆಂದು ಯಾವಾಗ (ಒಪ್ಪುವೆವೋ), ಆಗ ಘಟದ ಅರಿವು (ಅಜ್ಞಾನವು ಹೋದ ಒಡನೆ) ತಾನೇ ಆಗಿಬಿಡುವದು; ಅದು ಪ್ರಮಾಣದ ಫಲವಲ್ಲ[5]. ಅದರಂತೆಯೇ ಇಲ್ಲಿಯೂ ಆತ್ಮನಲ್ಲಿ ಕಲ್ಪಿಸಿರುವ ಅಂತಃಪ್ರಜ್ಞತ್ವವೇ ಮುಂತಾದದ್ದನ್ನು ಬಿಡಿಸುವದಕ್ಕೆ ಹೊರಟಿರುವ ಪ್ರತಿಷೇಧವಿಜ್ಞಾನವೆಂಬ ಪ್ರಮಾಣವು

---

1. ಆತ್ಮನನ್ನು ತಿಳಿಸುವ ವೇದಾಂತವಾಕ್ಯವು ಸ್ವತಃ ಪ್ರಮಾಣವಲ್ಲವೆಂದೂ ಆ ವಾಕ್ಯದಿಂದ ಉಂಟಾಗಬೇಕಾದ ಮತ್ತೊಂದು ಜ್ಞಾನವೇ ಆತ್ಮಸಾಕ್ಷಾತ್ಕಾರವನ್ನುಂಟುಮಾಡುವ ಪ್ರಮಾಣವೆಂದೂ ಕೆಲವರು ವೇದಾಂತಿಗಳು ಅನ್ನುತ್ತಿದ್ದರು. ವಾಕ್ಯಜನ್ಯಜ್ಞಾನವನ್ನು ಮತ್ತೆ ಮತ್ತೆ ಬಿಡಿಸುವದರಿಂದಲೇ ಅಜ್ಞಾನವು ದೂರ ತೊಲಗುವದರಿಂದ ಪ್ರಸಂಖ್ಯಾನವೆಂಬ ಸಾಧನವು ಅವಶ್ಯವೆಂದು ಮತ್ತೆ ಕೆಲವರು ಹೇಳುತ್ತಿದ್ದರು. ಅವರಿಬ್ಬರ ಮತವನ್ನೂ ಇಲ್ಲಿ ಖಂಡಿಸಿದೆ.

2. ಹಾವು ಅಸತ್ಯವೆಂದೂ ಹಗ್ಗವೊಂದೇ ಸತ್ಯವೆಂದೂ ಅರಿಯುವದೇ ಈ ವಿವೇಕವು ಗೀ. ಭಾ. ೧೩-೨೬ ರಲ್ಲಿ ಹೇಳಿರುವ ಕ್ಷೇತ್ರಕ್ಷೇತ್ರಜ್ಞವಿವೇಕವನ್ನೂ ಗೀ. ಭಾ. ೨-೧೬ ರಲ್ಲಿ ವರ್ಣಿಸಿರುವ ಸದಸದ್ವಿವೇಕಜ್ಞಾನವನ್ನೂ ನೋಡಿರಿ.

3. ಗಡಿಗೆಯನ್ನು ಅರಿಯುವದೆಂದರೆ ಅದರ ಅಜ್ಞಾನವನ್ನು ಕಳೆಯುವದೇ ಅಲ್ಲದೆ ಅದರಲ್ಲಿ ಜ್ಞಾತತ್ವವನ್ನುಂಟುಮಾಡುವದೆಂಬುದೂ ಬೇರೆ ಇದೆ ಎಂಬ ಮೀಮಾಂಸಕರ ಖಂಡನೆ ಇದು.

4. ಅಜ್ಞಾನವನ್ನು ಕಳೆದು ಗಡಿಗೆಯನ್ನು ಉಳಿಸುವದಕ್ಕೆ.

5. ಕತ್ತಲೆಯನ್ನು ಕಳೆದ ಬಳಿಕ ಗಡಿಗೆಯನ್ನು ತೋರಿಸಿಕೊಡುವದೆಂಬ ವ್ಯಾಪಾರವು ಬೇರೆಯಾಗಿ ದೀಪಕ್ಕೆ ಇರುವದಿಲ್ಲ. ಇದರಂತೆಯೇ ಪ್ರಮಾಣವ್ಯಾಪಾರವನ್ನೂ ತಿಳಿಯಬೇಕು.

**ಬೇಕಿಲ್ಲದ ಅಂತಃಪ್ರಜ್ಞತ್ವವೇ ಮುಂತಾದದ್ದರ ನಿವೃತ್ತಿಯೇ ಅಲ್ಲದೆ ತುರೀಯವಿಷಯದಲ್ಲಿಯೂ ಕೆಲಸವನ್ನಾಡುತ್ತದೆ ಎಂಬುದು ಯುಕ್ತವಾಗುವದಿಲ್ಲ. ಏಕೆಂದರೆ ಅಂತಃಪ್ರಜ್ಞತ್ವಾದಿಗಳು ತೊಲಗುವ ಸಮಕಾಲದಲ್ಲಿಯೇ ಪ್ರಮಾತೃತ್ವವೇ ಮುಂತಾದ ಭೇದವು ಹೋಗಿಬಿಡುತ್ತದೆ[1].** ಆದ್ದರಿಂದಲೇ ಮುಂದೆ "(ತತ್ತ್ವವನ್ನು) ಅರಿತ ಬಳಿಕ ದ್ವೈತವು ಇರುವದಿಲ್ಲ." (ಕಾ. ೧-೧೮) ಎಂದು (ಕಾರಿಕಾಕಾರರು) ಹೇಳಿರುತ್ತಾರೆ. ಜ್ಞಾನವು ದ್ವೈತನಿವೃತ್ತಿಯಾದ ಕ್ಷಣವನ್ನು ಬಿಟ್ಟು ಇನ್ನೊಂದು ಕ್ಷಣವೂ ನಿಲ್ಲುವಂತಿಲ್ಲ[2]. ನಿಲ್ಲುತ್ತದೆ ಎಂದರೆ ಅನವಸ್ಥಾದೋಷವು ಉಂಟಾಗಬೇಕಾಗುವದರಿಂದ[3] ದ್ವೈತವೇ ಹೋಗುವದಿಲ್ಲವೆಂದಾಗುವದು. ಆದ್ದರಿಂದ ಪ್ರತಿಷೇಧವಿಜ್ಞಾನವೆಂಬ ಪ್ರಮಾಣವು ಕೆಲಸಮಾಡುವ ಸಮಕಾಲದಲ್ಲಿಯೇ ಆತ್ಮನಲ್ಲಿ ಹುಟ್ಟುಗಟ್ಟಿರುವ ಅಂತಃಪ್ರಜ್ಞತ್ವವೇ ಮುಂತಾದ ಅನರ್ಥವು ಹೋಗಿಬಿಡುವದು ಎಂದು ಸಿದ್ಧವಾಯಿತು.

**ನಾನ್ತಃಪ್ರಜ್ಞಂ ನ ಬಹಿಷ್ಪ್ರಜ್ಞಂ ನೋಭಯತಃಪ್ರಜ್ಞಂ ನ ಪ್ರಜ್ಞಾನಘನಂ ನ ಪ್ರಜ್ಞಂ ನಾಪ್ರಜ್ಞಮ್ । ಅದೃಷ್ಟ[4]ಮವ್ಯವಹಾರ್ಯಮಗ್ರಾಹ್ಯಮಲಕ್ಷಣಮಚಿನ್ತ್ಯಮವ್ಯಪದೇಶ್ಯಮೇಕಾತ್ಮಪ್ರತ್ಯಯಸಾರಂ ಪ್ರಪಞ್ಚೋಪಶಮಂ ಶಾನ್ತಂ ಶಿವಮದ್ವೈತಂ ಚತುರ್ಥಂ ಮನ್ಯನ್ತೇ ಸ ಆತ್ಮಾ ಸ ವಿಜ್ಞೇಯಃ ॥ ೭ ॥**

೭. ಅಂತಃಪ್ರಜ್ಞನಲ್ಲದ, ಬಹಿಷ್ಪ್ರಜ್ಞನಲ್ಲದ, ಎರಡೂ ಪ್ರಜ್ಞೆಗಳುಳ್ಳವನಲ್ಲದ, ಪ್ರಜ್ಞಾನಘನನಲ್ಲದ, ಪ್ರಜ್ಞನಲ್ಲದ, ಅಪ್ರಜ್ಞನಲ್ಲದ, ಕಾಣಲ್ಪಡದ, ವ್ಯವಹಾರಕ್ಕೆ ಸಿಕ್ಕದ, ಹಿಡಿಯುವದಕ್ಕೆ ಆಗದ, ಹೆಗ್ಗುರುತಿಲ್ಲದ, ಜೋಡಿಸುವದಕ್ಕಾಗದ, ಹೇಳುವದಕ್ಕೆ ಬರದ, ಏಕಾತ್ಮಪ್ರತ್ಯಯಸಾರನಾದ, ಪ್ರಪಂಚವು ನಾಶವಾಗಿರುವ, ಶಾಂತನಾದ, ಶಿವನಾದ, ಅದ್ವೈತನನ್ನು ನಾಲ್ಕನೆಯವನೆಂದು ತಿಳಿಯುವರು. ಅವನು ಆತ್ಮನು, ಅವನನ್ನು ಅರಿತುಕೊಳ್ಳಬೇಕು.

---

1. ಇಂದ್ರಿಯಾದಿಪ್ರಮಾಣಗಳನ್ನು ಉಪಯೋಗಿಸುವವನೇ ಪ್ರಮಾತೃ. ಇಂದ್ರಿಯಾದಿಗಳು ವಿಶ್ವಾದಿಗಳಿಗೆ ಮಾತ್ರ ಇವೆ. ಆದ್ದರಿಂದ ವಿಶ್ವತ್ವಾದಿಗಳು ಹೋದ ಬಳಿಕವೂ ಪ್ರಮಾತೃ, ಪ್ರಮಾಣ, ಪ್ರಮೇಯ-ಎಂಬ ದ್ವೈತವು ಇರಲಾರದು.

2. ಏಕೆಂದರೆ ಜ್ಞಾನವು ಜ್ಞಾತೃತ್ವವನ್ನು ಆಶ್ರಯಿಸಿಕೊಂಡಿರುತ್ತದೆ. ಜ್ಞಾತ್ರಾದಿದ್ವೈತವು ಹೋದರೆ ಜ್ಞಾನವು ತಾನೊಂದೇ ಉಳಿಯಲಾರದು.

3. ಉಳಿದರೆ ಅದನ್ನು ಕಳೆಯಲು ಮತ್ತೊಂದು ಜ್ಞಾನವೂ, ಅದನ್ನು ಕಳೆಯುವದಕ್ಕೆ ಮತ್ತೊಂದು ಜ್ಞಾನವೂ, ಬೇಕಾಗುವದು, ಇತ್ಯಾದಿ. ಜ್ಞಾನಕ್ಕೆ ಜ್ಞಾತ್ರಾದಿಭೇದವೂ ಬೇಕಾದದ್ದರಿಂದ ದ್ವೈತನಿವೃತ್ತಿಯೂ ಆಗಲೇ ಆರದು.

4. "ಅದೃಶ್ಯಮ್" ಎಂದು ವಾ॥ ಕಾ॥

(ಭಾಷ್ಯ)

೪೦. ನಾನ್ತಃಪ್ರಜ್ಞಮ್ ಇತಿ ತೈಜಸಪ್ರತಿಷೇಧಃ । ನ ಬಹಿಷ್ಪ್ರಜ್ಞಮ್ ಇತಿ ವಿಶ್ವಪ್ರತಿಷೇಧಃ । ನೋಭಯತಃಪ್ರಜ್ಞಮ್ ಇತಿ ಜಾಗ್ರತ್ಸ್ವಪ್ನಯೋಃ ಅನ್ತರಾಲಾವಸ್ಥಾಪ್ರತಿಷೇಧಃ । ನ ಪ್ರಜ್ಞಾನಘನಮ್ ಇತಿ ಸುಷುಪ್ತಾವಸ್ಥಾಪ್ರತಿಷೇಧಃ । ಬೀಜಭಾವಾವಿವೇಕರೂಪತ್ವಾತ್ । ನ ಪ್ರಜ್ಞಮ್ ಇತಿ ಯುಗಪತ್ ಸರ್ವವಿಷಯಪ್ರಜ್ಞಾತೃತ್ವಪ್ರತಿಷೇಧಃ । ನಾಪ್ರಜ್ಞಮ್ ಇತಿ ಅಚೈತನ್ಯಪ್ರತಿಷೇಧಃ ॥

(ಭಾಷ್ಯಾರ್ಥ)

ಅಂತಃಪ್ರಜ್ಞನಲ್ಲದ ಎಂದು ತೈಜಸನನ್ನು ಅಲ್ಲಗಳೆದಿದೆ. ಬಹಿಷ್ಪ್ರಜ್ಞನಲ್ಲದ ಎಂದು ವಿಶ್ವನನ್ನು ಅಲ್ಲಗಳೆದಿದೆ. ಎರಡೂ ಪ್ರಜ್ಞೆಗಳುಳ್ಳವನಲ್ಲ ಎಂದು ಎಚ್ಚರಕನಸುಗಳ ನಡುವಿನ ಅವಸ್ಥೆಯನ್ನು[1] ಅಲ್ಲಗಳೆದಿದೆ. ಪ್ರಜ್ಞಾನಘನನಲ್ಲದ ಎಂದು ಸುಷುಪ್ತಾವಸ್ಥೆಯನ್ನು ಅಲ್ಲಗಳೆದಿದೆ; ಏಕೆಂದರೆ ಬೀಜರೂಪವಾಗಿರುವ ಅವಿವೇಕಸ್ವರೂಪವಾಗಿರುವದೇ[2] (ನಿದ್ರೆಯಾಗಿರುತ್ತದೆ). ಪ್ರಜ್ಞನಲ್ಲದ ಎಂದು ಯಾವ ವಿಷಯದ ಪ್ರಜ್ಞಾತೃತ್ವವೂ[3] ಇಲ್ಲವೆಂದು ಒಟ್ಟಿಗೆ ಅಲ್ಲಗಳೆದಿದೆ. ಅಪ್ರಜ್ಞನಲ್ಲದ ಎಂದು ಚೈತನ್ಯವಲ್ಲವೆಂಬುದನ್ನು ಅಲ್ಲಗಳೆದಿದೆ.

(ಭಾಷ್ಯ)

೪೧. ಕಥಂ ಪುನಃ ಅನ್ತಃಪ್ರಜ್ಞತ್ವಾದೀನಾಮ್ ಆತ್ಮನಿ ಗಮ್ಯಮಾನಾನಾಂ ರಜ್ಜ್ವಾದೌ ಸರ್ಪಾದಿವತ್ ಪ್ರತಿಷೇಧಾತ್ ಅಸತ್ತ್ವಂ ಗಮ್ಯತೇ ಇತಿ? ಉಚ್ಯತೇ । ಜ್ಞಸ್ವರೂಪಾವಿಶೇಷೇಽಪಿ ಇತರೇತರವ್ಯಭಿಚಾರಾತ್[4] ರಜ್ಜ್ವಾದಾವಿವ ಸರ್ಪಧಾರಾದಿವಿಕಲ್ಪಭೇದವತ್ । ಸರ್ವತ್ರ ಅವ್ಯಭಿಚಾರಾತ್ ಜ್ಞಸ್ವರೂಪಸ್ಯ ಸತ್ಯತ್ವಮ್ । ಸುಷುಪ್ತೇ ವ್ಯಭಿಚರತಿ ಇತಿ ಚೇತ್ । ನ । ಸುಷುಪ್ತಸ್ಯ ಅನುಭೂಯಮಾನತ್ವಾತ್ । 'ನ ಹಿ ವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇ" (ಬೃ. ೪-೩-೩೦) ಇತಿ ಶ್ರುತೇಃ ॥

---

1. ಇಲ್ಲಿ ಅವಸ್ಥೆಯು ಆತ್ಮನ ಧರ್ಮವಲ್ಲವೆಂದು ಹೇಳಿದೆ ಎಂದು ಅರ್ಥವನ್ನು ಮಾಡಬೇಕು; ಮುಂದಿನ ವಾಕ್ಯದಲ್ಲಿಯೂ ಹೀಗೆಯೇ.

2. ವಿವೇಕಾಭಾವವೇ.

3. ಜ್ಞಾತೃತ್ವವೆಂಬುದು ತಪ್ಪುತಿಳಿವಳಿಕೆಯ ಫಲ; ಆತ್ಮನು ಜ್ಞಾನಸ್ವರೂಪನೇ.

4. 'ಅಸತ್ಯತ್ವಂ' ಎಂದು ಈ ಮಾತಿನ ಮುಂದೆ ಹೆಚ್ಚಾಗಿ ವಾ॥

(ಭಾಷ್ಯ)

(ಆಕ್ಷೇಪ):—ಅಂತಃಪ್ರಜ್ಞತ್ವಾದಿಗಳು ಆತ್ಮನಲ್ಲಿ ಕಾಣಬರುತ್ತಿರುವಲ್ಲಿ ಹಗ್ಗವೇ ಮುಂತಾದದ್ದರಲ್ಲಿ ಹಾವು ಮುಂತಾದವುಗಳನ್ನು (ಅಲ್ಲಗಳೆಯುವಂತೆ) ಅಲ್ಲಗಳೆಯುವದರಿಂದ(ಲೇ ಅವು) ನಿಜವಾಗಿಲ್ಲವೆಂದು ನಿಶ್ಚಯಿಸುವದು ಹೇಗೆ?[1]

(ಭಾಷ್ಯಾರ್ಥ)

(ಪರಿಹಾರ):—(ಇದಕ್ಕೆ) ಹೇಳುತ್ತೇವೆ. ಚೈತನ್ಯರೂಪವು ಸಮಾನವಾಗಿದ್ದರೂ ಹಗ್ಗವೇ ಮುಂತಾದದ್ದರಲ್ಲಿ ಹಾವು, (ಉದಕ) ಧಾರೆ-ಮುಂತಾದ ಬೇರೆ ಬೇರೆಯ ವಿಕಲ್ಪಗಳಂತೆ (ಈ ಅಂತಃಪ್ರಜ್ಞತ್ವಾದಿಗಳು) ಒಂದನ್ನೊಂದು ಬಿಟ್ಟು ಹೋಗುತ್ತವೆ[2]. ಆದ್ದರಿಂದ (ಅವು ಅಸತ್ಯ); ಚೈತನ್ಯಸ್ವರೂಪವು ಎಲ್ಲಿಯೂ ತಪ್ಪುವದಿಲ್ಲವಾದ್ದರಿಂದ (ಅದು) ಸತ್ಯ.

(ಆಕ್ಷೇಪ):—ತನಿನಿದ್ರೆಯಲ್ಲಿ (ಚೈತನ್ಯವೂ) ತಪ್ಪಿಹೋಗುವದಿಲ್ಲವೆ?

(ಪರಿಹಾರ):—ಇಲ್ಲ. ಏಕೆಂದರೆ ತನಿನಿದ್ರೆಯು (ಕೂಡ) ಅನುಭವಕ್ಕೆ ಬರುತ್ತದೆ.[3] "ಅರಿಯುವಾತನ ಅರಿವಿಗೆ ಲೋಪವು ಇರುವದಿಲ್ಲ" (ಬೃ. ೪-೩-೩೦) ಎಂಬ ಶ್ರುತಿ ಇದಕ್ಕೆ ಪ್ರಮಾಣವು.

(ಭಾಷ್ಯ)

೪೨. ಅತ ಏವ ಅದೃಷ್ಟಮ್[4] । ಯಸ್ಮಾತ್ ಅದೃಷ್ಟಮ್[4] ತಸ್ಮಾತ್ ಅವ್ಯವಹಾರ್ಯಮ್ । ಅಗ್ರಾಹ್ಯಂ ಕರ್ಮೇನ್ದ್ರಿಯೈಃ । ಅಲಕ್ಷಣಮ್ ಅಲಿಙ್ಗಮ್ ಇತ್ಯೇತತ್ । ಅನನುಮೇಯಮ್ ಇತ್ಯರ್ಥಃ । ಅತ ಏವ ಅಚಿನ್ತ್ಯಮ್ । ಅತ ಏವ ಅವ್ಯಪದೇಶ್ಯಂ ಶಬ್ದೈಃ । ಏಕಾತ್ಮಪ್ರತ್ಯಯಸಾರಂ ಜಾಗ್ರದಾದಿಸ್ಥಾನೇಷು ಏಕ ಏವ[5] ಅಯಮ್ ಆತ್ಮಾ ಇತಿ ಅವ್ಯಭಿಚಾರೀ ಯಃ ಪ್ರತ್ಯಯಃ ತೇನ ಅನುಸರಣೀಯಮ್ ।

---

1. ಆತ್ಮನಲ್ಲಿ ಈ ಧರ್ಮಗಳು ಕಾಣುತ್ತಲೇ ಇರುವವಲ್ಲ! ಅವುಗಳು ಹಾವು ಮುಂತಾದವುಗಳಂತೆ ಸುಳ್ಳೆಂದು ಯಾವಾಗ ತೋರುತ್ತವೆ?-ಎಂದು ಆಕ್ಷೇಪ.

2. ಹಗ್ಗವು ಯಾವಾಗಲೂ ಹಗ್ಗವೇ ಆಗಿರುವಲ್ಲಿ ಹಾವು ಮುಂತಾದವುಗಳು ಒಂದೊಂದು ಕಾಲದಲ್ಲಿ ಮಾತ್ರ ತೋರುತ್ತವೆ; ಆಗ ಮಿಕ್ಕ ನೀರಿನ ಕೋಡಿಯೇ ಮುಂತಾದವು ಕಾಣಿಸುವದಿಲ್ಲ. ಇದರಂತೆಯೇ ಅಂತಃಪ್ರಜ್ಞಾದಿಗಳಲ್ಲಿ ಒಂದು ತೋರುವಾಗ ಮಿಕ್ಕವು ಯಾವವೂ ತೋರುವದಿಲ್ಲ. ಆದ್ದರಿಂದ ಅವು ಅಸತ್ಯ.

3. ಅನುಭವವೇ ಚೈತನ್ಯವಾದ್ದರಿಂದ ಅದಕ್ಕೆ ಅಭಾವವಿಲ್ಲವೆಂದಾಯಿತು.

4. ಎರಡೂ ವಾಕ್ಯಗಳಲ್ಲಿಯೂ "ಅದೃಶ್ಯಮ್" ಎಂದೇ ವಾ॥ ಕಾ॥ ಪಾಠ.

5. ಆ॥ ಪಾಠದಲ್ಲಿಲ್ಲ.

ಅಥವಾ ಏಕಃ ಆತ್ಮಪ್ರತ್ಯಯಃ ಸಾರಃ[1] ಪ್ರಮಾಣಂ ಯಸ್ಯ ತುರೀಯಸ್ಯ ಅಧಿಗಮೇ ತತ್ ತುರೀಯಮ್ ಏಕಾತ್ಮಪ್ರತ್ಯಯಸಾರಮ್ "ಆತ್ಮೇತ್ಯೇವೋಪಾಸೀತ" (ಬೃ. ೧-೪-೭) ಇತಿ ಶ್ರುತೇಃ । ಅನ್ತಃಪ್ರಜ್ಞತ್ವಾದಿಸ್ಥಾನಿಧರ್ಮಪ್ರತಿಷೇಧಃ ಕೃತಃ । ಪ್ರಪಞ್ಚೋಪಶಮಮ್ ಇತಿ ಜಾಗ್ರದಾದಿಸ್ಥಾನಧರ್ಮಾಭಾವಃ ಉಚ್ಯತೇ । ಅತ ಏವ ಶಾನ್ತಂ[2] ಶಿವಮ್ । ಯತಃ ಅದ್ವೈತಮ್ ಭೇದವಿಕಲ್ಪರಹಿತಮ್ । ಚತುರ್ಥಂ ತುರೀಯಂ ಮನ್ಯನ್ತೇ । ಪ್ರತೀಯಮಾನಪಾದತ್ರಯರೂಪವೈಲಕ್ಷಣ್ಯಾತ್ । ಸ ಆತ್ಮಾ ಸ ವಿಜ್ಞೇಯಃ ಇತಿ । ಪ್ರತೀಯಮಾನಸರ್ಪಭೂಚ್ಛಿದ್ರದಣ್ಡಾದಿವ್ಯತಿರಿಕ್ತಾ[3] ಯಥಾ ರಜ್ಜುಃ ತಥಾ 'ತತ್ತ್ವಮಸಿ' ಇತ್ಯಾದಿವಾಕ್ಯಾರ್ಥಃ ಆತ್ಮಾ "ಅದೃಷ್ಟೋ ದ್ರಷ್ಟಾ" (ಬೃ. ೩-೭-೨೩)." ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇ" (ಬೃ ೪-೩-೨೩) ಇತ್ಯಾದಿಭಿರುಕ್ತೋ ಯಃ ಸ 'ವಿಜ್ಞೇಯಃ' ಇತಿ ಭೂತಪೂರ್ವಗತ್ಯಾ । ಜ್ಞಾತೇ ದ್ವೈತಾಭಾವಃ ॥

(ಭಾಷ್ಯಾರ್ಥ)

ಆದ್ದರಿಂದಲೇ[4] (ಅದು) ಕಾಣಲ್ಪಡದ್ದು. ಕಾಣಬರುವದಲ್ಲವಾದ್ದರಿಂದಲೇ ವ್ಯವಹಾರಕ್ಕೆ ಸಿಕ್ಕದ್ದು, ಕರ್ಮೇಂದ್ರಿಯಗಳಿಂದ ಹಿಡಿಯುವದಕ್ಕೆ ಆಗದ್ದು; ಹೆಗ್ಗುರುತಿಲ್ಲದ್ದು, ಎಂದರೆ ಲಿಂಗವಿಲ್ಲದ್ದು,[5] **ಅನುಮಾನ** (ಪ್ರಮಾಣ) ದಿಂದ ಅರಿಯುವದಕ್ಕಾಗದ್ದು ಎಂದರ್ಥ. ಆದ್ದರಿಂದಲೇ[6] ಯೋಚಿಸುವದಕ್ಕಾಗದ್ದು; ಆದ್ದರಿಂದಲೇ[7] ಶಬ್ದಗಳಿಂದ ಹೇಳುವದಕ್ಕೆ ಬಾರದ್ದು. **ಏಕಾತ್ಮಪ್ರತ್ಯಯಸಾರವಾದದ್ದು; ಎಚ್ಚರವೇ ಮುಂತಾದ ಅವಸ್ಥೆಗಳಲ್ಲಿ ಈ ಆತ್ಮನು ಒಬ್ಬನೇ**

---

1. 'ಸಾರಮ್' ಆ॥

2. "ಶಾನ್ತಮ್ ಅವಿಕ್ರಿಯಮ್" ವಾ॥

3. "ಸರ್ಪದಣ್ಡಭೂಚ್ಛಿದ್ರಾದಿವ್ಯತಿರಿಕ್ತಾ" ವಾ॥

4. ಯಾವ ವಿಶೇಷವೂ ಇಲ್ಲದೆ ನಿಷೇಧಗಮ್ಯವಾಗಿರುವದರಿಂದಲೇ.

5. ಹೊಗೆ ಎಂಬ ಲಿಂಗದಿಂದ ಎಂದರೆ ಹೆಗ್ಗುರುತಿನಿಂದ ಬೆಂಕಿಯಿದೆ ಎಂದು ನಿಶ್ಚಯಿಸುವ ರೀತಿಯ ಪ್ರಮಾಣವು ಅನುಮಾನವು; ಆದರೆ ಆತ್ಮನಿಗೆ ಯಾವ ಲಿಂಗವೂ ಇಲ್ಲವಾದ್ದರಿಂದ ಆವನು ಅನುಮಾನಗಮ್ಯನಲ್ಲ.

6. ಪ್ರತ್ಯಕ್ಷಕ್ಕಾಗಲಿ, ಅನುಮಾನಕ್ಕಾಗಲಿ, ಗೋಚರವಲ್ಲದ್ದರಿಂದಲೇ.

7. ಮನಸ್ಸಿಗೆ ವಿಷಯವಲ್ಲದ್ದರಿಂದಲೇ.

**ಎಂಬ ತಪ್ಪದೆ ಇರುತ್ತಿರುವ ಪ್ರತ್ಯಯವುಂಟಲ್ಲ, ಅದರಿಂದ ಅನುಸರಿಸಿ (ತಿಳಿಯ) ಬೇಕಾದದ್ದು[1]. ಅಥವಾ ಆತ್ಮನೆಂಬ ಪ್ರತ್ಯಯವೊಂದೇ ಯಾವ ತುರೀಯವನ್ನು ಅರಿಯುವದಕ್ಕೆ ಸಾರವೋ ಎಂದರೆ ಪ್ರಮಾಣವೋ ಆ ತುರೀಯವು ಏಕಾತ್ಮಪ್ರತ್ಯಯಸಾರವು (ಎಂದಾದರೂ ಅರ್ಥವನ್ನು ಮಾಡಬಹುದು).** "ಆತ್ಮನೆಂದೇ ಅರಿತುಕೊಳ್ಳಬೇಕು" (ಬೃ. ೧-೪-೭) ಎಂಬ ಶ್ರುತಿ ಇದಕ್ಕೆ ಪ್ರಮಾಣವು[2]. ಅಂತಃಪ್ರಜ್ಞತ್ವವೇ ಮುಂತಾದ ಸ್ಥಾನಿಧರ್ಮಗಳನ್ನು[3] (ಹಿಂದೆ) ಅಲ್ಲಗಳೆದದ್ದಾಯಿತು. ಪ್ರಪಂಚೋಪಶಮವಾದ (ಪ್ರಪಂಚವು ನಾಶವಾಗಿರುವ) ಎಂಬ (ವಿಶೇಷಣದಿಂದ) ಎಚ್ಚರವೇ ಮುಂತಾದ ಸ್ಥಾನಧರ್ಮಗಳು ಇಲ್ಲವೆಂದು (ಈಗ) ಹೇಳಿರುತ್ತದೆ[4]. ಆದ್ದರಿಂದಲೇ[5] (ಇದು) ಶಾಂತವೂ ಶಿವವೂ ಆಗಿರುತ್ತದೆ; ಏಕೆಂದರೆ (ಇದು) ಅದ್ವೈತವು, ಭೇದಗಳೆಂಬ ವಿಕಲ್ಪಗಳು ಇಲ್ಲದ್ದು. **ಚತುರ್ಥನೆಂದು, ನಾಲ್ಕನೆಯವನೆಂದು (ಬಲ್ಲವರು) ಭಾವಿಸುವರು. ಏಕೆಂದರೆ (ಈ ಆತ್ಮನು) ತೋರುತ್ತಿರುವ ಮೂರು ಪಾದಗಳಿಗಿಂತ ಬೇರೆಯ ಸ್ವರೂಪದವನಾಗಿರುತ್ತಾನೆ[6].**

---

1. ಏಕಾತ್ಮ, ಒಬ್ಬನೇ ಆತ್ಮನು–ಎಂಬ ಪ್ರತ್ಯಯದಿಂದ ಸಾರ ಅನುಸರಿಸಿ ಅರಿತುಕೊಳ್ಳತಕ್ಕವನು–ಎಂದು ವಿಶೇಷಣಕ್ಕೆ ಅರ್ಥವನ್ನು ಮಾಡಿರುತ್ತದೆ. ಒಂದೊಂದು ಅವಸ್ಥೆಗೆ ಒಬ್ಬೊಬ್ಬ ಆತ್ಮನಿರಲಾರನಾದ್ದರಿಂದ ಒಂದೇ ರೂಪದಿಂದ ಇರುವ ಚೈತನ್ಯವೇ ಆತ್ಮನು ಎಂದರಿಯಬೇಕು ಎಂದು ಭಾವ.

2. ಏಕ ಎಂದರೆ ಮುಖ್ಯವಾದ, ಅಥವಾ ಕೇವಲವಾದ, ಆತ್ಮಪ್ರತ್ಯಯವೇ, ಸಾರವು ಎಂದರೆ ತುರೀಯನನ್ನರಿಯುವ ಪ್ರಮಾಣವು–ಎಂದು ವಿಶೇಷಣಕ್ಕೆ ಅರ್ಥವನ್ನು ಕಲ್ಪಿಸಿರುತ್ತದೆ. ನಾನು ಎಂದುಕೊಳ್ಳುವದಕ್ಕೆ ಅರ್ಹವಾದದ್ದು ಆತ್ಮವು ಎಂದು ಆತ್ಮಪ್ರತ್ಯಯದಿಂದಲೇ ತುರೀಯನನ್ನು ಅರಿತುಕೊಳ್ಳಬೇಕು ಎಂದರ್ಥ. ಅಚಿಂತ್ಯ, ಅವ್ಯಪದೇಶ್ಯ–ಎಂಬ ವಿಶೇಷಣಗಳಿಂದ ಆತ್ಮನೆಂಬ ಪ್ರತ್ಯಯಶಬ್ದಗಳೂ ಆತ್ಮಸ್ವರೂಪವನ್ನು ತಿಳಿಸಲಾರವೆಂದು ಸಿದ್ಧವಾಗಿದ್ದರೂ ಆ ಸ್ವರೂಪವನ್ನು ತಿಳಿದುಕೊಳ್ಳುವದಕ್ಕೆ ಈ ಪ್ರತ್ಯಯವೊಂದೇ ಸಾಧಕವಾಗಿರುತ್ತದೆ ಎಂದು ಭಾವ.

3. ಅವಸ್ಥಾವಂತರ, ವಿಶ್ವ ಮೊದಲಾದವರ, ಧರ್ಮಗಳನ್ನು.

4. ಅವಸ್ಥೆಗಳು ಇದ್ದೂ ಅವುಗಳ ಸೋಂಕು ಆತ್ಮನಿಗಿಲ್ಲವೆಂದೂ ಸ್ಥಾನಿಧರ್ಮನಿಷೇಧದಿಂದ ಭಾವಿಸಬಹುದು; ಆದ್ದರಿಂದ ಈಗ ಸ್ಥಾನಗಳೇ, ಅವಸ್ಥೆಗಳೇ, ಇಲ್ಲವೆಂದು ಹೇಳಿದೆ ಎಂದರ್ಥ.

5. ಸ್ಥಾನಿಧರ್ಮವಾಗಲಿ, ಸ್ಥಾನಧರ್ಮವಾಗಲಿ, ಇಲ್ಲದೆ ನಿಷ್ಪ್ರಪಂಚವಾಗಿರುವದರಿಂದಲೇ.

6. ವಿಶ್ವಾದಿಗಳ ಸ್ವಭಾವಕ್ಕಿಂತ ಬೇರೆಯ ಸ್ವಭಾವದವನು ಎಂದು ತಿಳಿಸುವದಕ್ಕೇ ನಾಲ್ಕನೆಯವನು ಎಂದು ಕರೆದಿದೆ. ನಾಲ್ಕನೆಯವನೆಂಬ ಸಂಖ್ಯಾವಿಶಿಷ್ಟತ್ವವುಳ್ಳವನೆಂಬ ಅಭಿಪ್ರಾಯದಿಂದಲ್ಲ.

"ಅವನೇ ಆತ್ಮನು, ಅವನನ್ನೇ ಅರಿತುಕೊಳ್ಳಬೇಕು" ಎಂದರೆ ಕಾಣುವ ಹಾವು, ನೆಲದ ಬಿರುಕು, ಕೋಲು-ಮುಂತಾದವುಗಳಿಗಿಂತ ಬೇರೆಯಾದ ಹಗ್ಗವನ್ನು ಹೇಗೆ[1] (ಅರಿಯುವರೋ) ಹಾಗೆ "ಅದೇ ನೀನಾಗಿರುವೆ" (ಛಾಂ.) ಮುಂತಾದ ವಾಕ್ಯಗಳ ಅರ್ಥವಾಗಿರುವ "ಕಾಣಲ್ಪಡದೆ ಕಾಣುವವನಾದ" (ಬೃ. ೩-೭-೨೩). "ನೋಡುವಾತನ ನೋಟಕ್ಕೆ ಲೋಪವೇ ಇಲ್ಲ" (ಬೃ. ೪-೩-೨೩) ಎಂದು ಮುಂತಾಗಿರುವ (ಶ್ರುತಿವಚನಗಳಿಂದ) ಉಕ್ತನಾಗಿರುವನಲ್ಲ, ಅವನನ್ನು "ತಿಳಿದುಕೊಳ್ಳಬೇಕು" ಎಂಬುದು ಭೂತಪೂರ್ವಗತಿಯಿಂದ[2]; ತಿಳಿದುಕೊಂಡಮೇಲೆ ದ್ವೈತವಿರುವದಿಲ್ಲ[3].



1. ಅದರ ಅವಿಕಲ್ಪಿತವಾದ ವಿಲಕ್ಷಣಸ್ವರೂಪವನ್ನು ಕಲ್ಪಿತವಾದದ್ದನ್ನೆಲ್ಲ ಅಲ್ಲಗಳೆಯುವ ಪ್ರಮಾಣದಿಂದ ಹೇಗೆ ಅರಿತಿರುವರೋ ಎಂದರ್ಥ.

2. ಅರಿತುಕೊಳ್ಳುವದಕ್ಕಿಂತ ಮೊದಲಿನ ಅವಿದ್ಯಾಸ್ಥಿತಿಯಿಂದ ಎಂದರ್ಥ

3. ಅರಿತುಕೊಂಡ ಬಳಿಕವೂ ಉಪಾಸನೆಮಾಡುವದೇ ಮುಂತಾದ ವಿಭಾಗವು ಉಳಿದಿರುವದಿಲ್ಲ ಎಂದರ್ಥ.

# ಕಾ ರಿ ಕೆ

---

## ತುರೀಯ ಸ್ವರೂಪ

(ಕಾರಿಕಾವಾಕ್ಯ)

ಅತ್ರೈತೇ ಶ್ಲೋಕಾ ಭವನ್ತಿ-

(ಕಾರಿಕಾವಾಕ್ಯಾರ್ಥ)

ಈ ವಿಷಯದಲ್ಲಿ (ಮುಂದಿನ) ಶ್ಲೋಕಗಳು ಆಗಿರುತ್ತವೆ-

**ನಿವೃತ್ತೇಃ ಸರ್ವದುಃಖಾನಾಮೀಶಾನಃ ಪ್ರಭುರವ್ಯಯಃ ।**
**ಅದ್ವೈತಃ ಸರ್ವಭಾವಾನಾಂ ದೇವಸ್ತುರ್ಯೋ ವಿಭುಃ ಸ್ಮೃತಃ ॥ ೧೦ ॥**

೧೦. ತುರ್ಯನು ಸರ್ವದುಃಖಗಳ ನಿವೃತ್ತಿಗೆ ಈಶಾನನು, ಪ್ರಭು, ಅವ್ಯಯನು, ಸರ್ವಭಾವಗಳಿಗೂ ಅದ್ವೈತನು, ದೇವನು, ವಿಭು ಎನಿಸಿರುವನು.

(ಭಾಷ್ಯ)

೪೩. ಪ್ರಾಜ್ಞತೈಜಸವಿಶ್ವಲಕ್ಷಣಾನಾಂ[1] ಸರ್ವದುಃಖಾನಾಂ ನಿವೃತ್ತೇಃ ಈಶಾನಃ ತುರೀಯ ಆತ್ಮಾ । ಈಶಾನಃ ಇತ್ಯಸ್ಯ ವ್ಯಾಖ್ಯಾ ಪ್ರಭುಃ ಇತಿ । ದುಃಖನಿವೃತ್ತಿಂ ಪ್ರತಿ ಪ್ರಭವತಿ[2] ಇತ್ಯರ್ಥಃ । ತದ್ವಿಜ್ಞಾನನಿಮಿತ್ತತ್ವಾತ್ ದುಃಖನಿವೃತ್ತೇಃ । ಅವ್ಯಯಃ ನ ವ್ಯೇತಿ । ಸ್ವರೂಪಾತ್ ನ ವ್ಯಭಿಚರತಿ ಇತಿ ಯಾವತ್[3] । ಕುತಃ ? ಯಸ್ಮಾತ್ ಅದ್ವೈತಃ ಸರ್ವಭಾವಾನಾಮ್[4] । ರಜ್ಜುಸರ್ಪವತ್ ಮೃಷಾತ್ವಾತ್ । ಸ ಏಷ ದೇವಃ ದ್ಯೋತನಾತ್ । ತುರ್ಯಃ[5] ಚತುರ್ಥಃ ವಿಭುಃ ವ್ಯಾಪೀ ಸ್ಮೃತಃ ॥

---

1. “ಅತ್ರೈತೇ ಶ್ಲೋಕಾ ಭವನ್ತಿ” ಎಂಬ ವಾಕ್ಯವು ಈ ವಾಕ್ಯದ ಹಿಂದೆ ವಾ॥ ದಲ್ಲಿದೆ.

2. ‘ಪ್ರಭುರ್ಭವತಿ’ ಎಂಬ ಪಾಠಕ್ಕಿಂತ ಮೂರು ಕೋಶಗಳಲ್ಲಿರುವ ಈ ಪಾಠವು ಮೇಲು.

3. ‘ನ ವ್ಯಭಿಚರತಿ ನ ವ್ಯೇತಿ ಇತ್ಯೇತತ್’ ವಾ॥

4. ಇದರ ಮುಂದೆ “ಸರ್ಪಾದೀನಾಂ ರಜ್ಜುಃ ಅಸ್ತಿತಾ ಸತ್ತಾ ಚ । ಏವಂ ತುರೀಯಃ । “ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇ” ಇತಿ ಶ್ರುತೇಃ । ಅತಃ” ಎಂದು ಹೆಚ್ಚಾಗಿ ವಾ॥

5. “ತುರೀಯಃ” ಎಂಬ ಪಾಠಕ್ಕಿಂತ ಈ ವಾ॥ ಪಾಠವು ಮೇಲು.

(ಭಾಷ್ಯಾರ್ಥ)

ಪ್ರಾಜ್ಞ, ತೈಜಸ, ವಿಶ್ವ-ಎಂಬ ಸರ್ವದುಃಖಗಳ[1] ನಿವೃತ್ತಿಗೆ ಈಶಾನನು ತುರೀಯನಾದ ಆತ್ಮನು. "ಈಶಾನನು" ಎಂಬ ಈ (ಮಾತಿ)ಗೇ ಪ್ರಭುವು ಎಂಬುದು ವ್ಯಾಖ್ಯಾನವು. ದುಃಖನಿವೃತ್ತಿಯ ವಿಷಯಕ್ಕೆ ಶಕ್ತನಾಗಿರುತ್ತಾನೆ ಎಂದರ್ಥ. ಏಕೆಂದರೆ ಆ (ತುರೀಯನನ್ನು) ಅರಿತುಕೊಳ್ಳುವದರಿಂದಲೇ ದುಃಖವು ತೊಲಗುತ್ತದೆ[2]. ಅವ್ಯಯನು ಎಂದರೆ ಸವೆಯುವದಿಲ್ಲ, ಸ್ವರೂಪವನ್ನು ಬಿಟ್ಟು ಹೋಗುವದಿಲ್ಲ -ಎಂದು ಅಭಿಪ್ರಾಯ. ಇದು ಹೇಗೆ?[3] ಎಂದರೆ (ಇವನು) ಸರ್ವಭಾವಗಳಿಗೂ ಅದ್ವೈತನಾಗಿರುವದರಿಂದ[4]. ಏಕೆಂದರೆ (ಆ ಭಾವಗಳು) ಹಗ್ಗದ ಹಾವಿನಂತೆ ಹುಸಿತೋರಿಕೆಯಾಗಿರುತ್ತವೆ. ಅಂಥ ಈ ದೇವನು (ಚೈತನ್ಯರೂಪವಾಗಿ) ಹೊಳೆಯುತ್ತಿರುವದರಿಂದ[5] (ದೇವನೆನಿಸಿರುವ) ತುರ್ಯನು ನಾಲ್ಕನೆಯವನು, ವಿಭು ವ್ಯಾಪಿಯು, ಎನಿಸಿರುವನು[6].

## ವಿಶ್ವಾದಿಗಳಿಗೂ ತುರೀಯನಿಗೂ ತಾರತಮ್ಯ

(ಭಾಷ್ಯ)

೪೪. ವಿಶ್ವಾದೀನಾಂ ಸಾಮಾನ್ಯವಿಶೇಷಭಾವೋ ನಿರೂಪ್ಯತೇ ತುರ್ಯಯಾಥಾತ್ಮ್ಯಾವಧಾರಣಾರ್ಥಮ್ ||

(ಭಾಷ್ಯಾರ್ಥ)

ತುರ್ಯನ ನಿಜವಾದ ಸ್ವರೂಪವನ್ನು ಗೊತ್ತುಪಡಿಸುವದಕ್ಕಾಗಿ ವಿಶ್ವನೇ ಮೊದಲಾದವರಲ್ಲಿ ಸಾಮಾನ್ಯವಿಶೇಷಭಾವವನ್ನು[7] ಈಗ ತಿಳಿಸಲಾಗುತ್ತದೆ:-

---

1. ವಿಶ್ವತೈಜಸರು ದ್ವಿತೀಯವಸ್ತುವಿನ ಅನುಭವರೂಪವಾದ ದುಃಖವುಳ್ಳವರಾದ್ದರಿಂದ ದುಃಖರೂಪರು; ಪ್ರಾಜ್ಞನು ಆ ದುಃಖಕ್ಕೆ ಬೀಜನಾಗಿರುವದರಿಂದ ದುಃಖರೂಪನು.

2. ದುಃಖವು ಭ್ರಾಂತಿಸಿದ್ಧವಾಗಿರುವದರಿಂದ ಜ್ಞಾನಮಾತ್ರದಿಂದ ಹೋಗಿಬಿಡುತ್ತದೆ.

3. ಆತ್ಮನು ದುಃಖರಹಿತನು, ಅವನ ಜ್ಞಾನದಿಂದ ದುಃಖವು ಹೋಗುತ್ತದೆ; ಅವನು ಏತರಿಂತಲೂ ಸವೆಯುವದಿಲ್ಲ-ಎಂಬುದು ಹೇಗೆ?

4. ಮಿಕ್ಕ ವಿಶ್ವಾದಿರೂಪಗಳಿದ್ದರೂ ತನಗೆರಡನೆಯದಿಲ್ಲದವನೇ ಆಗಿರುವದರಿಂದ.

5. ಮತ್ತೊಂದರ ಬಯಕೆಯಿಲ್ಲದೆ ತಾನೇ ಹೊಳೆಯುತ್ತಿರುವದರಿಂದ.

6. ಕಾಲಾಕಾಶಾದಿಗಳ ಕಟ್ಟಿಗೂ ಒಳಪಡದೆ ಇರುವ ಅನಂತನು.

7. ಸಾಮಾನ್ಯವೆಂದರೆ ಸಮಾನವಾಗಿ ಎಲ್ಲಕ್ಕೂ ಇರುವದು; ವಿಶೇಷವೆಂದರೆ ಒಂದರಲ್ಲಿ ಮಾತ್ರವೇ ಇರುವ ಧರ್ಮವು.

**ಕಾರ್ಯಕಾರಣಬದ್ಧೌ ತಾವಿಷ್ಯೇತೇ ವಿಶ್ವತೈಜಸೌ ।**
**ಪ್ರಾಜ್ಞಃ ಕಾರಣಬದ್ಧಸ್ತು ದ್ವೌ ತೌ ತುರ್ಯೇ ನ ಸಿಧ್ಯತಃ ॥ ೧೧ ॥**

೧೧. ಆ ವಿಶ್ವತೈಜಸರುಗಳು ಕಾರ್ಯಕಾರಣಬದ್ಧರೆನಿಸಿಕೊಂಡಿರುತ್ತಾರೆ. ಆದರೆ ಪ್ರಾಜ್ಞನು ಕಾರಣಬದ್ಧನು. ಇವೆರಡೂ ತುರ್ಯನಲ್ಲಿ ಸಿದ್ಧಿಸುವದಿಲ್ಲ.

(ಭಾಷ್ಯ)

೪೫. ಕಾರ್ಯಂ ಕ್ರಿಯತೇ ಇತಿ ಫಲಭಾವಃ । ಕಾರಣಂ ಕರೋತಿ ಇತಿ ಬೀಜಭಾವಃ । ತತ್ತ್ವಾಗ್ರಹಣಾನ್ಯಥಾಗ್ರಹಣಾಭ್ಯಾಂ ಬೀಜಫಲಭಾವಾಭ್ಯಾಂ ತೌ ಯಥೋಕ್ತೌ ವಿಶ್ವತೈಜಸೌ ಬದ್ಧೌ ಸಂಗೃಹೀತೌ ಇಷ್ಯೇತೇ । ಪ್ರಾಜ್ಞಸ್ತು ಬೀಜಭಾವೇನೈವ ಬದ್ಧಃ । ತತ್ತ್ವಾಪ್ರತಿಬೋಧಮಾತ್ರಮೇವ ಹಿ ಬೀಜಂ ಪ್ರಾಜ್ಞತ್ವೇ ನಿಮಿತ್ತಮ್ । ತತಃ ದ್ವೌ ತೌ ಬೀಜಫಲಭಾವೌ ತತ್ತ್ವಾಗ್ರಹಣಾನ್ಯಥಾಗ್ರಹಣೇ ತುರ್ಯೇ ನ ಸಿಧ್ಯತಃ । ನ ವಿದ್ಯೇತೇ । ನ ಸಂಭವತಃ ಇತ್ಯರ್ಥಃ ॥

(ಭಾಷ್ಯಾರ್ಥ)

ಕಾರ್ಯವು ಎಂದರೆ-ಮಾಡಲ್ಪಡುವದಾಗಿರುವದು, ಫಲತ್ವವು ; ಕಾರಣವೆಂದರೆ ಮಾಡುವದು, ಬೀಜತ್ವವು. ತತ್ತ್ವವನ್ನು ಅರಿಯದಿರುವದು, ಬೇರೆಯಾಗಿ ತಿಳಿದುಕೊಂಡಿರುವದು-ಎಂಬ ಬೀಜಫಲರೂಪಗಳಿಂದ ಆ ಹಿಂದೆ ಹೇಳಿದ ವಿಶ್ವತೈಜಸರುಗಳು ಕಟ್ಟುಬಿದ್ದವರು, ಸಿಕ್ಕಿಬಿದ್ದಿರುವವರು ಎನಿಸಿರುತ್ತಾರೆ. **ಪ್ರಾಜ್ಞನು (ಬರಿಯ) ಬೀಜರೂಪ (ವೊಂದ)ರಿಂದಲೇ[1] ಕಟ್ಟುವಡೆದಿರುತ್ತಾನೆ; ಏಕೆಂದರೆ ತತ್ತ್ವವನ್ನು ಅರಿಯದಿರುವದೆಂಬ ಬೀಜವೊಂದೇ ಪ್ರಾಜ್ಞನಾಗಿರುವದಕ್ಕೆ ನಿಮಿತ್ತವಾಗಿರುತ್ತದೆ.**[2] ಆದ್ದರಿಂದ ಅವೆರಡೂ ಎಂದರೆ (ಆ) ಬೀಜಫಲಭಾವಗಳೆರಡೂ, ತತ್ತ್ವವನ್ನರಿಯದಿರುವದು, ಬೇರೆಯಾಗಿ ತಿಳಿದುಕೊಂಡಿರುವದು- (ಎಂಬಿವು) ತುರ್ಯನಲ್ಲಿ ಸಿದ್ಧಿಸುವದಿಲ್ಲ ; ಇರುವದಿಲ್ಲ. (ಅವುಗಳು) ಇರುವ ಹಾಗಿಲ್ಲ ಎಂದರ್ಥ.

---

1. ಪರಮಾರ್ಥವಾದ ಆತ್ಮಸ್ವರೂಪವನ್ನು, ತುರೀಯನನ್ನು.

2. ತತ್ತ್ವವನ್ನರಿಯನೆಂಬುದನ್ನು ಬಿಟ್ಟರೆ ಪ್ರಾಜ್ಞನಿಗೂ ತುರ್ಯನಿಗೂ ಮತ್ತೇನೂ ಭೇದವಿಲ್ಲ. ಇದು ಮುಂದಿನ ಕಾರಿಕೆಯಲ್ಲಿ ಸ್ಪಷ್ಟವಾಗುತ್ತದೆ. ತತ್ತ್ವವನ್ನರಿಯದಿರುವದಲ್ಲದೆ ಮತ್ತೊಂದು ಕಾರಣಾವಿದ್ಯೆಯಿರುವದೆಂಬ ಪ್ರಕ್ರಿಯೆಗೆ ಕಾರಿಕೆಯಲ್ಲಾಗಲಿ ಭಾಷ್ಯದಲ್ಲಾಗಲಿ ಆಧಾರವಿಲ್ಲ. ಪೀಠಿಕೆಯನ್ನು ನೋಡಿ.

# ಪ್ರಾಜ್ಞನಿಗೂ ತುರ್ಯನಿಗೂ ತಾರತಮ್ಯ

(ಭಾಷ್ಯ)

೪೬. ಕಥಂ ಪುನಃ ಕಾರಣಬದ್ಧತ್ವಂ ಪ್ರಾಜ್ಞಸ್ಯ? ತುರೀಯೇ ವಾ ತತ್ತ್ವಾಗ್ರಹಣಾನ್ಯಥಾಗ್ರಹಣಲಕ್ಷಣೌ ಬನ್ಧೌ ನ ಸಿಧ್ಯತಃ ಇತಿ? ಯಸ್ಮಾತ್-

(ಭಾಷ್ಯಾರ್ಥ)

(ಪ್ರಶ್ನೆ) :—ಪ್ರಾಜ್ಞನು ಕಾರಣಕ್ಕೆ ಕಟ್ಟುಬಿದ್ದಿರುತ್ತಾನೆಂಬುದು ಹೇಗೆ? ತುರೀಯನಲ್ಲಿ ತತ್ತ್ವವನ್ನು ಅರಿಯದಿರುವದು, ಬೇರೆಯಾಗಿ ಅರಿತುಕೊಳ್ಳುವದು-ಎಂಬ ಬಂಧಗಳು ಇರುವದಿಲ್ಲವೆಂಬುದಾದರೂ ಹೇಗೆ?

(ಉತ್ತರ) :—ಹೇಗೆಂದರೆ :—

**ನಾತ್ಮಾನಂ ನ ಪರಾಂಶ್ಚೈವ ನ ಸತ್ಯಂ ನಾಪಿ ಚಾನೃತಮ್ ।**
**ಪ್ರಾಜ್ಞಃ ಕಿಂಚನ ಸಂವೇತ್ತಿ ತುರ್ಯಂ ತತ್ ಸರ್ವದೃಕ್ಸದಾ॥ ೧೨ ॥**

೧೨. ಪ್ರಾಜ್ಞನು ತನ್ನನ್ನಾಗಲಿ ಮತ್ತೊಬ್ಬರನ್ನಾಗಲಿ, ಸತ್ಯವನ್ನಾಗಲಿ ಅನೃತವನ್ನಾಗಲಿ, ಯಾವದನ್ನೂ ಅರಿಯನು. (ಆದರೆ) ಆ ತುರ್ಯವು ಯಾವಾಗಲೂ ಸರ್ವದೃಕ್ಕಾಗಿರುವದು.

(ಭಾಷ್ಯ)

೪೭. ಆತ್ಮಾನಮ್[1] ವಿಲಕ್ಷಣಮ್ ಅವಿದ್ಯಾಬೀಜಪ್ರಸೂತಂ[2] ಬಾಹ್ಯಂ ದ್ವೈತಂ ಪ್ರಾಜ್ಞಃ ನ ಕಿಂಚನ ಸಂವೇತ್ತಿ ಯಥಾ ವಿಶ್ವತೈಜಸೌ। ತತಶ್ಚ ಅಸೌ ತತ್ತ್ವಾಗ್ರಹಣೇನ ತಮಸಾ ಅನ್ಯಥಾಗ್ರಹಣಬೀಜಭೂತೇನ ಬದ್ಧೋ ಭವತಿ। ಯಸ್ಮಾತ್ ತುರೀಯಂ ತತ್ ಸರ್ವದೃಕ್ ಸದಾ। ತುರೀಯಾದನ್ಯಸ್ಯ ಅಭಾವಾತ್ ಸರ್ವದಾ ಸದ್ಧೈವ ಭವತಿ[3] ಸರ್ವಂ ಚ ತತ್ ದೃಕ್ಚ ಇತಿ ಸರ್ವದೃಕ್। ತಸ್ಮಾತ್ ನ ತತ್ತ್ವಾಗ್ರಹಣಲಕ್ಷಣಂ ಬೀಜಮ್। ತತ್ರ ತತ್ಪ್ರಸೂತಸ್ಯ ಅನ್ಯಥಾಗ್ರಹಣಸ್ಯಾಪಿ ಅತ ಏವ ಅಭಾವಃ। ನ ಹಿ ಸವಿತರಿ ಸದಾಪ್ರಕಾಶಾತ್ಮಕೇ ತದ್ವಿರುದ್ಧಮ್ ಅಪ್ರಕಾಶನಮ್ ಅನ್ಯಥಾಪ್ರಕಾಶನಂ ವಾ ಸಂಭವತಿ। ನ ಹಿ "ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇ" (ಬೃ. ೪-೩-೨೩) ಇತಿ ಶ್ರುತೇಃ। ಅಥವಾ ಜಾಗ್ರತ್ಸ್ವಪ್ನಯೋಃ ಸರ್ವ

---

1. 'ಆತ್ಮವಿಲಕ್ಷಣಮ್' ಎಂದು ಆ॥ ಮೈ॥. ಇಲ್ಲಿ "ನಾತ್ಮಾನಂ ನ ಪರಾನ್ ನ ಸತ್ಯಮ್ ಆತ್ಮಾನಂ ನಾನೃತಮ್ ಆತ್ಮವಿಲಕ್ಷಣಮ್ ಅವಿದ್ಯಾಬೀಜಪ್ರಸೂತಮ್" ಎಂದಿದ್ದು ಗ್ರಂಥವು ತ್ರುಟಿತವಾಗಿದೆಯೋ ಭಾಷ್ಯವಿರುವದೇ ಇಷ್ಟೋ ತಿಳಿಯದು.

2. ಇದರ ಮುಂದೆ "ವೇದ್ಯಂ" ಎಂದು ಹೆಚ್ಚಾಗಿ ವಾ॥ ಕಾ॥

3. "ಸದ್ಧೈವ ಇತಿ" ಆ॥; "ಸದ್ಧೈವ ಇತಿ ಭವತಿ" ಕಾ॥

ಭೂತಾವಸ್ಥಃ ಸರ್ವವಸ್ತುದೃಗಾಭಾಸಃ ತುರೀಯ ಏವ ಇತಿ ಸರ್ವದೃಕ್ ಸದಾ। "ನಾನ್ಯದತೋಽಸ್ತಿ ದ್ರಷ್ಟೃ" (ಬೃ. ೩-೮-೧೧) ಇತಿ ಶ್ರುತೇಃ ॥

(ಭಾಷ್ಯಾರ್ಥ)

ತಕ್ಷನ್ನಾಗಲಿ, (ಮತ್ತೊಬ್ಬರನ್ನಾಗಲಿ ಸತ್ಯವನ್ನಾಗಲಿ ಅನೃತವನ್ನಾಗಲಿ)[1] ವಿಲಕ್ಷಣವಾದ ಅವಿದ್ಯಾಬೀಜದಿಂದ ಹುಟ್ಟಿರುವ ಹೊರಗಿನ ದ್ವೈತವನ್ನಾಗಲಿ ವಿಶ್ವತೈಜಸರುಗಳು (ಅರಿಯು)ವಂತೆ ಪ್ರಾಜ್ಞನು ಸ್ವಲ್ಪವೂ ಅರಿಯುವದಿಲ್ಲ. ಆದ್ದರಿಂದಲೇ ಇವನು ತತ್ತ್ವವನ್ನು ಅರಿಯದೆ ಇರುವದೆಂಬ ಅನ್ಯಥಾಗ್ರಹಣಕ್ಕೆ ಬೀಜವಾಗಿರುವ ತಮಸ್ಸಿನಿಂದ ಕಟ್ಟುವಡೆದಿರುತ್ತಾನೆ. (ತುರ್ಯದಲ್ಲಿ ಈ ಎರಡು ಬಂಧಗಳೂ ಇರುವದಿಲ್ಲ). ಹೇಗೆಂದರೆ ಆ ತುರ್ಯವು ಯಾವಾಗಲೂ ಸರ್ವದೃಕ್ಕಾಗಿರುವದು. **ತುರೀಯಕ್ಕಿಂತ ಬೇರೆಯಾದದ್ದು ಇಲ್ಲದಿರುವದರಿಂದ[2] ಯಾವಾಗಲೂ ಎಂದೆಂದಿಗೂ ಅದು ಸರ್ವವೂ ದೃಕ್ಕೂ ಆಗಿರುತ್ತದೆಯಾಗಿ ಸರ್ವದೃಕ್ಕಾಗಿರುತ್ತದೆ. ಆದ್ದರಿಂದ ತತ್ತ್ವವನ್ನು ಅರಿಯದೆ ಇರುವದೆಂಬ ಬೀಜವು (ಅದರಲ್ಲಿ) ಇರುವದಿಲ್ಲ. ಅದರಲ್ಲಿ ಆ (ತತ್ತ್ವಾಗ್ರಹಣ)ದಿಂದ ಹುಟ್ಟುವ ಅನ್ಯಥಾಗ್ರಹಣವೂ ಆದ್ದರಿಂದಲೇ ಇರುವದಿಲ್ಲ.** ಯಾವಾಗಲೂ ಬೆಳಕಿನ ಸ್ವರೂಪವೇ ಆಗಿರುವ ಸೂರ್ಯನಲ್ಲಿ ಆ (ಬೆಳಕಿಗೆ) ವಿರುದ್ಧವಾದ ಬೆಳಗದಿರುವಿಕೆಯಾಗಲಿ ಬೇರೆಯ ಬಗೆಯಿಂದ (ತಪ್ಪಾಗಿ) ಬೆಳಗುವದೆಂಬುದಾಗಲಿ ಇರಲಾರದಷ್ಟೆ. "ನೋಡುವಾತನ ನೋಟಕ್ಕೆ ಲೋಪವಿರುವದೇ ಇಲ್ಲ" (ಬೃ. ೪-೩-೨೩) ಎಂಬ ಶ್ರುತಿ ಇದಕ್ಕೆ ಪ್ರಮಾಣವು. ಅಥವಾ **ಜಾಗ್ರತ್ಸ್ವಪ್ನಗಳಲ್ಲಿ ಎಲ್ಲಾ ಪ್ರಾಣಿಗಳಲ್ಲಿಯೂ ಇದ್ದುಕೊಂಡು ಎಲ್ಲಾ ವಸ್ತುಗಳನ್ನೂ ನೋಡುವಂತೆ ತೋರುತ್ತಿರುವವನು ತುರೀಯನೇ. ಆದ್ದರಿಂದ ಅವನು ಯಾವಾಗಲೂ ಸರ್ವದೃಕ್ಕಾಗಿರುವನು ಎಂದಿದೆ**[3] (ಎಂದಾದರೂ ಅರ್ಥವನ್ನು ಮಾಡಬಹುದು). "ಈ (ಅಕ್ಷರಕ್ಕಿಂತ) ಬೇರೆಯಾದ ನೋಡುವ (ತತ್ತ್ವವು) ಇರುವದಿಲ್ಲ." (ಬೃ. ೩-೮-೧೧)[4] ಎಂಬ ಶ್ರುತಿಯು ಇದಕ್ಕೆ ಸಾಧನವು.

---

1. ಇಷ್ಟು ಭಾಗವು ಭಾಷ್ಯಕ್ಕೆ ಅವಶ್ಯ.

2. ಹೊರಗೆ ತೋರುವ ವಸ್ತುವೆಲ್ಲವೂ ತುರೀಯದಲ್ಲಿ ಕಲ್ಪಿತವಾಗಿರುವದರಿಂದ ಪರಮಾರ್ಥವಾಗಿ ಅದೊಂದೇ ಎಲ್ಲವೂ ಆಗಿರುತ್ತದೆ ಎಂದರ್ಥ.

3. ವಿಶ್ವ, ತೈಜಸ–ಎಂಬ ರೂಪಗಳಿಂದ ಬಾಹ್ಯವಸ್ತುಗಳನ್ನು ನೋಡುತ್ತಿರುವಂತೆ ಕಾಣುವವನೂ ನಿಜವಾಗಿ ತುರೀಯನೇ, ತುರೀಯನಾದ ಆತ್ಮನನ್ನೇ ನಾವು ವಿಶ್ವನೆಂದೂ, ತೈಜಸನೆಂದೂ ವ್ಯವಹರಿಸುತ್ತಿರುವೆವು ಎಂದರ್ಥ.

4. ಅಕ್ಷರವೆಂಬ ಬ್ರಹ್ಮವೇ ಚೈತನ್ಯವಾಗಿರುವದರಿಂದ ದ್ರಷ್ಟೃ-ನೋಡತಕ್ಕದ್ದು. ಅದಕ್ಕಿಂತ ಬೇರೆಯಾಗಿ ನೋಡುವವರೆಂಬ ಜೀವರುಗಳು ಸ್ವತಂತ್ರವಾಗಿರುವದಿಲ್ಲ ಎಂದು ಶ್ರುತಿಯ ಅರ್ಥ.

(ಭಾಷ್ಯ)

೪೮. ನಿಮಿತ್ತಾನ್ತರಪ್ರಾಪ್ತಾಶಙ್ಕಾನಿವೃತ್ತ್ಯರ್ಥಃ ಅಯಂ ಶ್ಲೋಕಃ । ಕಥಂ ದ್ವೈತಾಗ್ರಹಣಸ್ಯ ತುಲ್ಯತ್ವಾತ್ ಕಾರಣಬದ್ಧತ್ವಂ ಪ್ರಾಜ್ಞಸ್ಯೈವ ನ ತುರೀಯಸ್ಯ ?- ಇತಿ ಪ್ರಾಪ್ತಾ ಆಶಙ್ಕಾ ನಿವರ್ತ್ಯತೇ । ಯಸ್ಮಾತ್ ॥

(ಭಾಷ್ಯಾರ್ಥ)

ಬೇರೆ ಒಂದು ಕಾರಣದಿಂದ ಬರಬಹುದಾದ ಸಂಶಯವನ್ನು ತೊಲಗಿಸುವದಕ್ಕಾಗಿ ಈ ಶ್ಲೋಕವು (ಬಂದಿರುತ್ತದೆ). ದ್ವೈತವನ್ನು ಅರಿಯದೆ ಇರುವದೆಂಬುದು (ಇಬ್ಬರಿಗೂ) ಸಮಾನವಾಗಿರುವದರಿಂದ ಪ್ರಾಜ್ಞನುಮಟ್ಟಿಗೆ ಕಾರಣಬದ್ಧನಾಗಿರುತ್ತಾನೆ, ತುರೀಯನು (ಬದ್ಧ)ನಾಗಿಲ್ಲ ಎಂಬುದು ಹೇಗೆ ?-ಎಂದು ಆಶಂಕೆಯು ಬಂದೊದಗುತ್ತದೆ. (ಅದನ್ನು) ಪರಿಹರಿಸುತ್ತಾರೆ. ಏಕೆಂದರೆ:—

**ದ್ವೈತಸ್ಯಾಗ್ರಹಣಂ ತುಲ್ಯಮುಭಯೋಃ ಪ್ರಾಜ್ಞತುರ್ಯಯೋಃ ।**
**ಬೀಜನಿದ್ರಾಯುತಃ ಪ್ರಾಜ್ಞಃ ಸಾ ಚ ತುರ್ಯೇ ನ ವಿದ್ಯತೇ ॥ ೧೩ ॥**

೧೩. ದ್ವೈತವನ್ನು ಅರಿಯದಿರುವದು ಪ್ರಾಜ್ಞ, ತುರ್ಯ–ಇಬ್ಬರಿಗೂ ಸಮಾನವಾಗಿರುತ್ತದೆ. ಪ್ರಾಜ್ಞನು ಬೀಜನಿದ್ರಾಯುತನು, ಆದರೆ ಅದು ತುರ್ಯನಲ್ಲಿ ಇರುವದಿಲ್ಲ.

(ಭಾಷ್ಯ)

೪೯ ಬೀಜನಿದ್ರಾಯುತಃ । ತತ್ತ್ವಾಪ್ರತಿಬೋಧೋ ನಿದ್ರಾ । ಸೈವ ಚ ವಿಶೇಷಪ್ರತಿಬೋಧಪ್ರಸವಸ್ಯ ಬೀಜಮ್ । ಸಾ ಬೀಜನಿದ್ರಾ । ತಯಾ ಯುತಃ ಪ್ರಾಜ್ಞಃ । ಸದಾ ಸರ್ವದೃಕ್ಸ್ವಭಾವತ್ವಾತ್ ತತ್ತ್ವಾಪ್ರತಿಬೋಧಲಕ್ಷಣಾ ಬೀಜನಿದ್ರಾ ತುರ್ಯೇ ನ ವಿದ್ಯತೇ । ಅತಃ ನ ಕಾರಣಬನ್ಧಸ್ತಸ್ಮಿನ್ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಬೀಜನಿದ್ರೆಯಿಂದ ಕೂಡಿದವನು (ಪ್ರಾಜ್ಞನು). **ತತ್ತ್ವವನ್ನು ಅರಿಯದಿರುವದು ನಿದ್ರೆಯು ; ಅದೇ ಬಿಡಿಯ ಅರಿವು ಉಂಟಾಗುವದಕ್ಕೆ ಬೀಜವು**[1]. ಅದೇ ಬೀಜನಿದ್ರೆ. ಪ್ರಾಜ್ಞನು ಆ (ಬೀಜನಿದ್ರೆಯಿಂದ) ಕೂಡಿರುತ್ತಾನೆ. **ಯಾವಾಗಲೂ ನೋಡುವ ಸ್ವಭಾವದನಾಗಿರುವದರಿಂದ ತುರೀಯನಲ್ಲಿ (ಆ.**

---

1. ತತ್ತ್ವವನ್ನು ಅರಿಯದೆ ಇರುವದಲ್ಲದೆ ಮತ್ತೊಂದು ಅಜ್ಞಾನವನ್ನು ಕಾರಿಕೆಯಲ್ಲಾಗಲಿ ಭಾಷ್ಯದಲ್ಲಾಗಲಿ ಒಪ್ಪಿಲ್ಲ; ಪೀಠಿಕೆಯನ್ನು ನೋಡಿ.

**ಬೀಜನಿದ್ರೆಯೂ ಇರುವದಿಲ್ಲ[1].** ಆದ್ದರಿಂದ ಅವನಲ್ಲಿ ಕಾರಣಬಂಧವು ಇರುವದಿಲ್ಲ ಎಂದು ಅಭಿಪ್ರಾಯ.

**ಸ್ವಪ್ನನಿದ್ರಾಯುತಾವಾದ್ಯೌ ಪ್ರಾಜ್ಞಸ್ತ್ವಸ್ವಪ್ನನಿದ್ರಯಾ ।**
**ನ ನಿದ್ರಾಂ ನೈವ ಚ ಸ್ವಪ್ನಂ ತುರ್ಯೇ ಪಶ್ಯನ್ತಿ ನಿಶ್ಚಿತಾಃ ॥ ೧೪ ॥**

೧೪. ಮೊದಲನೆಯ ಇಬ್ಬರು ಕನಸುನಿದ್ರೆಗಳಿಂದ ಕೂಡಿದವರು ; ಆದರೆ ಪ್ರಾಜ್ಞನು ಕನಸಿಲ್ಲದ ನಿದ್ರೆಯಿಂದ (ಕೂಡಿರುವನು). ನಿಶ್ಚಯವುಳ್ಳವರಿಗೆ ತುರ್ಯನಲ್ಲಿ ನಿದ್ರೆಯಾಗಲಿ ಕನಸಾಗಲಿ ಕಾಣಿಸುವದಿಲ್ಲ.

(ಭಾಷ್ಯ)

೫೦. ಸ್ವಪ್ನಃ ಅನ್ಯಥಾಗ್ರಹಣಮ್ ಸರ್ಪ ಇವ ರಜ್ಜ್ವಾಮ್ । ನಿದ್ರಾ ಉಕ್ತಾ ತತ್ತ್ವಾಪ್ರತಿಬೋಧಲಕ್ಷಣಂ ತಮಃ ಇತಿ । ತಾಭ್ಯಾಂ ಸ್ವಪ್ನನಿದ್ರಾಭ್ಯಾಂ ಯುತೌ[2] (ಆದ್ಯೌ)[3] ವಿಶ್ವತೈಜಸೌ । ಅತಃ ತೌ ಕಾರ್ಯಕಾರಣಬದ್ಧೌ ಇತ್ಯುಕ್ತೌ । ಪ್ರಾಜ್ಞಸ್ತು ಸ್ವಪ್ನವರ್ಜಿತಯಾ ಕೇವಲಯೈವ ನಿದ್ರಯಾ ಯುತಃ ಇತಿ ಕಾರಣಬದ್ಧಃ ಇತ್ಯುಕ್ತಮ್ । ನ ಉಭಯಂ ಪಶ್ಯನ್ತಿ ತುರೀಯೇ ನಿಶ್ಚಿತಾಃ ಬ್ರಹ್ಮವಿದಃ । ವಿರುದ್ಧತ್ವಾತ್ ಸವಿತರಿ ಇವ ತಮಃ । ಅತಃ ನ ಕಾರ್ಯಕಾರಣಬದ್ಧಃ ಇತ್ಯುಕ್ತಸ್ತುರೀಯಃ ॥

(ಭಾಷ್ಯಾರ್ಥ)

ಕನಸೆಂದರೆ ಹಗ್ಗದಲ್ಲಿ ಹಾವನ್ನು (ಕಾಣುವಂತೆ)[4] ಬೇರೆಯಾಗಿಯೇ ಅರಿಯುವದು. ನಿದ್ರೆಯೆಂದರೆ ತತ್ತ್ವವನ್ನು ಅರಿಯದ್ದೆಂಬ ತಮಸ್ಸು ಎಂದು ಹಿಂದೆ ಹೇಳಿರುವದು. (ಮೊದಲನೆಯವರಾದ) ವಿಶ್ವತೈಜಸರಿಬ್ಬರೂ ಆ ಕನಸುನಿದ್ರೆಗಳಿಂದ ಕೂಡಿರುತ್ತಾರೆ. ಆದ್ದರಿಂದ ಅವರು ಕಾರ್ಯಕಾರಣಬದ್ಧರಾಗಿರುತ್ತಾರೆ ಎಂದು ಹೇಳಲಾಯಿತು. ಆದರೆ ಪ್ರಾಜ್ಞನು ಕನಸಿಲ್ಲದ ಬರಿಯ ನಿದ್ರೆಯಿಂದಲೇ ಕೂಡಿರುತ್ತಾನೆ;

---

1. ತುರೀಯಾತ್ಮನು ನಿತ್ಯಪ್ರಕಾಶನಾದ್ದರಿಂದ ತನ್ನನ್ನು ತಾನು ಅರಿಯಲಿಲ್ಲವೆಂಬ ನಿದ್ರೆಯಿಲ್ಲ; ಸೂರ್ಯನು ಸೂರ್ಯನಿಗೆ ಮರೆ ಎಂಬುದು ಹೇಗೆ ಅಸಂಭವವೋ ಹಾಗೆ ಅದ್ವಿತೀಯನಾದ್ದರಿಂದ ಅವನೂ ದ್ವೈತವನ್ನು ಕಾಣನು ಎಂದು ಹೇಳಿದ್ದು ಸೂರ್ಯನು ಕತ್ತಲೆಯನ್ನು ಕಾಣನು ಎಂಬಂತೆ.

2. " ಯುಕ್ತೌ " ಅ॥

3. " ಇತ್ಯರ್ಥಃ " ಎಂದು ಹೆಚ್ಚಾಗಿ ವಾ॥

4. " ಸರ್ಪ ಇವ " ಎಂಬುದನ್ನು " ಸರ್ಪದರ್ಶನಮಿವ " ಎಂಬರ್ಥದಲ್ಲಿ ತೆಗೆದುಕೊಳ್ಳಬೇಕು.

ಆದ್ದರಿಂದ (ಅವನು) ಕಾರಣಕ್ಕೆ ಕಟ್ಟುಬಿದ್ದಿರುತ್ತಾನೆಂದು ಹೇಳಿರುತ್ತದೆ. ನಿಶ್ಚಯವುಳ್ಳವರಿಗೆ, ಬ್ರಹ್ಮಜ್ಞಾನಿಗಳಿಗೆ, ತುರೀಯನಲ್ಲಿ (ಈ) ಎರಡೂ ಕಾಣಿಸುವದಿಲ್ಲ; ಏಕೆಂದರೆ ಸೂರ್ಯನಲ್ಲಿ ಕತ್ತಲೆ (ಇರುವದು) ಹೇಗೋ ಹಾಗೆ (ಇವು ತುರೀಯನಲ್ಲಿರುವದು) ವಿರುದ್ಧವಾಗಿರುತ್ತದೆ. ಆದ್ದರಿಂದ ತುರೀಯನು ಕಾರ್ಯಕ್ಕಾಗಲಿ, ಕಾರಣಕ್ಕಾಗಲಿ ಕಟ್ಟುಬಿದ್ದಿಲ್ಲವೆಂದು ಹೇಳಲಾಗಿದೆ.

## ತುರೀಯನ ಜ್ಞಾನ

(ಭಾಷ್ಯ)

೫೧. ಕದಾ ತುರೀಯೋ ನಿಶ್ಚಿತೋ ಭವತಿ ಇತಿ ? ಉಚ್ಯತೇ–

(ಭಾಷ್ಯಾರ್ಥ)

ಯಾವಾಗ ತುರೀಯನ ವಿಷಯದಲ್ಲಿ ನಿಶ್ಚಯವುಳ್ಳವನಾಗುವನು ? ಎಂದರೆ (ಈ ಶ್ಲೋಕದಲ್ಲಿ) ಹೇಳಲಾಗುತ್ತದೆ.

**ಅನ್ಯಥಾ ಗೃಹ್ಣತಃ ಸ್ವಪ್ನೋ ನಿದ್ರಾ ತತ್ತ್ವಮಜಾನತಃ ।**
**ವಿಪರ್ಯಾಸೇ ತಯೋಃ ಕ್ಷೀಣೇ ತುರೀಯಂ ಪದಮಶ್ನುತೇ ॥ ೧೫ ॥**

೧೫. ಬೇರೆಯಾಗಿ ಅರಿತುಕೊಳ್ಳುವವನಿಗೆ ಕನಸು; ತತ್ತ್ವವನ್ನು ಅರಿತುಕೊಳ್ಳದೆ ಇರುವದು ನಿದ್ರೆ. ಇವೆರಡರ ತಪ್ಪುಕಲ್ಪನೆಯು ನಾಶವಾದರೆ ತುರೀಯಸ್ಥಾನವನ್ನು ಪಡೆದುಕೊಳ್ಳುತ್ತಾನೆ.

(ಭಾಷ್ಯ)

೫೨. ಸ್ವಪ್ನಜಾಗರಿತಯೋಃ ಅನ್ಯಥಾ ರಜ್ಜ್ವಾಂ ಸರ್ಪಮಿವ[1] ಗೃಹ್ಣತಃ ಸ್ವಪ್ನಃ ಭವತಿ । ನಿದ್ರಾ ತತ್ತ್ವಮ್ ಅಜಾನತಃ ತಿಸೃಷು ಅವಸ್ಥಾಸು ತುಲ್ಯಾ । ಸ್ವಪ್ನನಿದ್ರಯೋಃ ತುಲ್ಯತ್ವಾತ್ ವಿಶ್ವತೈಜಸಯೋಃ ಏಕರಾಶಿತ್ವಮ್ । ಅನ್ಯಥಾಗ್ರಹಣಪ್ರಾಧಾನ್ಯಾಚ್ಚ ಗುಣಭೂತಾ ನಿದ್ರಾ ಇತಿ ತಸ್ಮಿನ್ ವಿಪರ್ಯಾಸಃ ಸ್ವಪ್ನಃ । ತೃತೀಯೇ ತು ಸ್ಥಾನೇ ತತ್ತ್ವಾಜ್ಞಾನಲಕ್ಷಣಃ,[2] ನಿದ್ರೈವ ಕೇವಲಾ, ವಿಪರ್ಯಾಸಃ ಅತಃ ತಯೋಃ ಕಾರ್ಯಕಾರಣಸ್ಥಾನಯೋಃ ಅನ್ಯಥಾಗ್ರಹಣಾಗ್ರಹಣಲಕ್ಷಣ ವಿಪರ್ಯಾಸೇ[3] ಕಾರ್ಯಕಾರಣಬನ್ಧರೂಪೇ ಪರಮಾರ್ಥತತ್ತ್ವಪ್ರತಿಬೋಧತಃ

1. "ಸರ್ಪ ಇವ" ಅ॥ ಕಾ॥ "ಸರ್ಪವತ್" ವಾ॥
2. "ತತ್ತ್ವಾಗ್ರಹಣಲಕ್ಷಣಾ" ವಾ॥
3. "ಅನ್ಯಥಾಗ್ರಹಣತತ್ತ್ವಾಗ್ರಹಣ......." ವಾ॥

ಣೇ ತುರೀಯಂ ಪದಮ್ ಅಶ್ನುತೇ । ತದಾ ಉಭಯಲಕ್ಷಣಂ ಬನ್ಧನಂ[1] ತತ್ರ ಪಶ್ಯನ್ ತುರೀಯೇ ನಿಶ್ಚಿತೋ ಭವತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಕನಸು, ಎಚ್ಚರ-ಇವುಗಳಲ್ಲಿ ಹಗ್ಗದಲ್ಲಿ ಹಾವನ್ನು ಕಾಣುವಂತೆ ತತ್ತ್ವವನ್ನು ೕರೆಯ ರೂಪದಿಂದ ಅರಿಯುತ್ತಿರುವವನಿಗೆ ಕನಸಾಗಿರುತ್ತದೆ. ತತ್ತ್ವವನ್ನು ಯದವನಿಗೆ ನಿದ್ರೆಯಾ (ಗಿರುತ್ತದೆ. ಆದು) ಮೂರು ಅವಸ್ಥೆಗಳಲ್ಲಿಯೂ ಸಮ ಗಿರುತ್ತದೆ. ಕನಸುನಿದ್ರೆಗಳು (ಇಬ್ಬರಿಗೂ) ಸಮಾನವಾಗಿರುವದರಿಂದ ಸ್ವತೈಜಸರಿಬ್ಬರನ್ನೂ ಒಂದು ರಾಶಿ(ಯಾಗಿ ಮಾಡಿ ಹೇಳಿದೆ)[2] ಮತ್ತು (ಅವರಿಗೆ) ರೆಯಾಗಿ ತಿಳಿಯುವದೆಂಬುದೇ ಮುಖ್ಯವಾಗಿರುವದರಿಂದ ನಿದ್ರೆಯು ಮುಖ್ಯವಾಗಿರುತ್ತದೆಯಾಗಿ ಆ (ರಾಶಿಯಲ್ಲಿ) ಕನಸೇ ತಪ್ಪು ಕಲ್ಪನೆ. ಆದರೆ ಮೂರ ಯ (ನಿದ್ರೆ ಎಂಬ) ಅವಸ್ಥೆಯಲ್ಲಿ ತತ್ತ್ವವನ್ನು ಅರಿಯದಿರುವದೆಂಬ ನಿದ್ರೆಯೊಂದೇ ಪ್ಪುಕಲ್ಪನೆ. ಆದ್ದರಿಂದ **ಆ ಕಾರ್ಯಕಾರಣಸ್ಥಾನಗಳಲ್ಲಿರುವ[3] ಬೇರೆಯಾಗಿ ರಿಯುವದು, ತತ್ತ್ವವನ್ನು ಅರಿಯದಿರುವದು-ಎಂಬ ತಪ್ಪುಕಲ್ಪನೆಯು ರಮಾರ್ಥವಾದ ತತ್ತ್ವವನ್ನು ತಿಳಿದುಕೊಳ್ಳುವದರಿಂದ ಹೋದರೆ ತುರೀಯ ಸ್ಥಾನವನ್ನು ಪಡೆದುಕೊಳ್ಳುತ್ತಾನೆ. ಆಗ (ಈ) ಎರಡು ವಿಧವಾದ ಬಂಧ ನ್ನೂ ಅದರಲ್ಲಿ ಕಾಣದೆ ತುರೀಯನಲ್ಲಿ ನಿಶ್ಚಯವುಳ್ಳವನಾಗುತ್ತಾನೆ ಂದರ್ಥ.[4].**

**ಅನಾದಿಮಾಯಯಾ ಸುಪ್ತೋ ಯದಾ ಜೀವಃ ಪ್ರಬುಧ್ಯತೇ ।**
**ಅಜಮನಿದ್ರಮಸ್ವಪ್ನಮದ್ವೈತಂ ಬುಧ್ಯತೇ ತದಾ ॥ ೧೬ ॥**

೧೬. ಅನಾದಿಮಾಯೆಯಿಂದ ನಿದ್ರೆಮಾಡುತ್ತಿರುವ ಜೀವನು ಯಾವಾಗ ಎಚ್ಚರುವನೋ ಆಗ ಅಜನೂ ಅನಿದ್ರನೂ ಅಸ್ವಪ್ನನೂ (ಆಗಿರುವ) ದ್ವೈತನನ್ನು ಅರಿತುಕೊಳ್ಳುವನು.

---

1. "ಬನ್ಧರೂಪಮ್" ಅ॥ ಅ॥

2. ತಪ್ಪಾಗಿ ದ್ವೈತವನ್ನು ಅರಿಯುವದೆಂಬ ಕಾರ್ಯಾಜ್ಞಾನದ ಸ್ಥಾನ, ಸರಿಯಾಗಿ ದ್ವೈತವನ್ನು ಅರಿಯದಿರುವದೆಂಬ ಕಾರಣಾಜ್ಞಾನದ ಸ್ಥಾನ-ಎಂಬ ಎರಡೇ ಅವಸ್ಥೆಗಳನ್ನು ಟ್ಟುಕೊಂಡರೆ ಸಾಕಾಗಿದೆ ಎಂದರ್ಥ.

3. ನಿದ್ರೆಯು ಎಚ್ಚರಕನಸುಗಳಿಗೆ ಕಾರಣವೆಂದಾಗಲಿ ಅವು ನಿದ್ರೆಯ ಕಾರ್ಯ ದಾಗಲಿ ಅರ್ಥವನ್ನು ಮಾಡಬಾರದು. ಕಾರ್ಯವೆಂದರೆ ತಪ್ಪುತಿಳಿವಳಿಕೆ, ಕಾರಣ ದರೆ ಸರಿಯಾಗಿ ತಿಳಿದಿರುವದು. ಈ ಅಜ್ಞಾನಗಳಿರುವ ಅವಸ್ಥೆಗಳಾದ್ದರಿಂದ ಇವನ್ನು ರ್ಯಕಾರಣಸ್ಥಾನಗಳೆಂದು ಕರೆದಿದೆ.

4. ಜ್ಞಾನವೇ ತುರೀಯನ ಪ್ರಾಪ್ತಿ. ಸ್ವರ್ಗಾದಿಗಳಂತೆ ಈ ಪ್ರಾಪ್ತಿಗೆ ಎಲ್ಲಿಗೂ ಹೋಗಬೇಕಾದದ್ದಿಲ್ಲ-ಎಂದು ಭಾವ.

(ಭಾಷ್ಯ)

೫೩. ಯೋಽಯಂ ಸಂಸಾರೀ ಜೀವಃ ಸಃ ಉಭಯಲಕ್ಷಣೇನ-ತತ್ತ್ವಾಪ್ರತಿಬೋಧರೂಪೇಣ ಬೀಜಾತ್ಮನಾ ಅನ್ಯಥಾಗ್ರಹಣಲಕ್ಷಣೇನ ಚ ಅನಾದಿಕಾಲಪ್ರವೃತ್ತೇನ ಮಾಯಾಲಕ್ಷಣೇನ ಸ್ವಾಪೇನ[1] ಮಮ ಅಯಂ ಪಿತಾ, ಪುತ್ರೋಽಯಮ್, ನಪ್ತಾ, ಕ್ಷೇತ್ರಮ್, ಗೃಹಮ್, ಪಶವಃ, ಅಹಮ್ ಏಷಾಂ ಸ್ವಾಮೀ, ಸುಖೀ, ದುಃಖೀ, ಕ್ಷಯಿತೋಽಹಮ್ ಅನೇನ ವರ್ಧಿತಶ್ಚ ಅನೇನ ಇತಿ ಏವಂಪ್ರಕಾರಾನ್ ಸ್ವಪ್ನಾನ್ ಸ್ಥಾನದ್ವಯೇಽಪಿ ಪಶ್ಯನ್ ಸುಪ್ತಃ, ಯದಾ ವೇದಾನ್ತಾರ್ಥತತ್ತ್ವಾಭಿಜ್ಞೇನ ಪರಮಕಾರುಣಿಕೇನ ಗುರುಣಾ "ನಾಸಿ ಏವಂ ತ್ವಂ ಹೇತುಫಲಾತ್ಮಕಃ ಕಿಂತು ತತ್ ತ್ವಮಸಿ" ಇತಿ ಪ್ರತಿಬೋಧ್ಯಮಾನಃ[2], ತದಾ ಏವಂ ಪ್ರತಿಬುಧ್ಯತೇ। ಕಥಮ್? ನಾಸ್ಮಿನ್ ಬಾಹ್ಯಮ್ ಆಭ್ಯನ್ತರಂ ವಾ ಜನ್ಮಾದಿಭಾವವಿಕಾರಃ ಅಸ್ತಿ। ಅತಃ ಅಜಮ್ 'ಸಬಾಹ್ಯಾಭ್ಯನ್ತರೋ ಹ್ಯಜಃ' (ಮುಂ. ೨-೧-೨) ಇತಿ ಶ್ರುತೇಃ[3]। ಸರ್ವಭಾವವಿಕಾರವರ್ಜಿತಮ್ ಇತ್ಯರ್ಥಃ। ಯಸ್ಮಾತ್ ಜನ್ಮಾದಿಕಾರಣಭೂತಂ ನ ಅಸ್ಮಿನ್ ಅವಿದ್ಯಾತಮೋಬೀಜಂ ನಿದ್ರಾ ವಿದ್ಯತೇ ಇತಿ ಅನಿದ್ರಮ್। ಅನಿದ್ರಂ ಹಿ ತತ್ ತುರೀಯಮ್। ಅತ ಏವ ಅಸ್ವಪ್ನಮ್। ತನ್ನಿಮಿತ್ತತ್ವಾತ್ ಅನ್ಯಥಾಗ್ರಹಣಸ್ಯ। ಯಸ್ಮಾಚ್ಚ ಅನಿದ್ರಮ್ ಅಸ್ವಪ್ನಮ್ ತಸ್ಮಾತ್ ಅಜಮ್ ಅದ್ವೈತಂ ತುರೀಯಮ್ ಆತ್ಮಾನಂ ಬುಧ್ಯತೇ ತದಾ ॥

(ಭಾಷ್ಯಾರ್ಥ)

ಈ ಸಂಸಾರಿಯಾದ ಜೀವನಿದಾನಲ್ಲ, ಇವನು **ತತ್ತ್ವವನ್ನು ಅರಿಯದ್ದೆಂಬ ರೂಪದ ಬೀಜರೂಪವಾದ (ನಿದ್ರೆ), ತಪ್ಪಾಗಿ ತಿಳಿಯುವದೆಂಬ (ನಿದ್ರೆ)- ಈ ಎರಡು ಬಗೆಯ ಅನಾದಿಕಾಲದಿಂದ ಸಾಗಿಬಂದಿರುವ ಮಾಯಾರೂಪವಾದ[4] ನಿದ್ರೆಯಿಂದ** "ಇವನು ನನ್ನ ತಂದೆ, ಇವನು ಮಗನು, (ಇವನು) ಮೊಮ್ಮಗನು, (ಇದು) ಹೊಲವು, ಮನೆ, (ಇವು) ದನಕರುಗಳು, ನಾನು ಇವುಗಳ ಒಡೆಯನು, ಸುಖಿಯಾಗಿರುವೆನು, ದುಃಖಿಯಾಗಿರುವೆನು, ಇವನಿಂದ ನಾನು

---

1. 'ಸ್ವಪ್ನೇನ' ಅ॥; ಮೈ॥ ಕಾ॥ ಪಾಠದಲ್ಲಿ ಈ ಮಾತೇ ಇಲ್ಲ.

2. ಇಲ್ಲಿ 'ಯದಾ' ಎಂಬ ಮಾತು ಅ॥ ಮೈ॥ ಗಳಲ್ಲಿ ಹೆಚ್ಚಾಗಿದೆ; ಮೊದಲಿರುವ ಯದಾ ದೂರವಾಯಿತೆಂದು ಮತ್ತೆ ಸಂಬಂಧವನ್ನು ತೋರಿಸುವದಕ್ಕೆ ಪ್ರಯೋಗಿಸಿದೆ. ಎಂದು ಭಾವಿಸಬೇಕು.

3. 'ಸಬಾಹ್ಯಾಭ್ಯನ್ತರಸರ್ವವಿಕಾರವರ್ಜಿತಮ್ ಇತ್ಯರ್ಥಃ' ಅ॥ ಮೈ॥

4. ಆತ್ಮನಿಗೆ ತತ್ತ್ವವನ್ನು ಅರಿಯದ್ದೆಂಬ ಅಜ್ಞಾನನಿದ್ರೆಯು ಅನಾದಿಕಾಲದಿಂದ ಇದ್ದುಕೊಂಡಿದ್ದರೂ ಅದು ಅವನ ಸ್ವರೂಪಕ್ಕೆ ಸೇರಿರುವ ಧರ್ಮವಲ್ಲ, ಬರಿಯ ಮಾಯೆ, ಹುಸಿತೋರಿಕೆ.

ಹಾಳಾದೆನು, ಇವನಿಂದ ಬಾಳಿದೆನು"-ಎಂದೀ ಪರಿಯಾದ ಕನಸುಗಳನ್ನು ಎರಡು ಅವಸ್ಥೆಗಳಲ್ಲಿಯೂ[1] ಕಾಣುತ್ತಾ ನಿದ್ರೆಮಾಡುತ್ತಿದ್ದವನು, ಯಾವಾಗ ವೇದಾಂತಗಳ ಅರ್ಥದ ನಿಜವನ್ನು ತಿಳಿದಿರುವ ಪರಮಕಾರುಣಿಕನಾದ ಗುರುವು "ನೀನು ಹೀಗೆ ಹೇತುಫಲರೂಪನಾಗಿರುವದಿಲ್ಲ. ಮತ್ತೇನೆಂದರೆ ಅದೇ ನೀನಾಗಿರುವೆ" ಎಂದು ಎಚ್ಚರಿಸುವನೋ ಆಗ ಹೀಗೆಂದು ಅರಿತುಕೊಳ್ಳುವನು. ಹೇಗೆ? ಎಂದರೆ: ಈ (ಆತ್ಮನಲ್ಲಿ) ಹೊರಗಾಗಲಿ ಒಳಗಾಗಲಿ ಜನ್ಮವೆಂಬ[2] ಭಾವವಿಕಾರವು ಇರುವದಿಲ್ಲ; ಆದ್ದರಿಂದ (ಈತನು) ಅಜನು. "ಒಳಗೂ ಹೊರಗೂ ಹುಟ್ಟಿಲ್ಲದವನು" (ಮುಂ. ೨-೧-೨) ಎಂಬ ಶ್ರುತಿಯು ಇದಕ್ಕೆ ಪ್ರಮಾಣವು. ಯಾವ ಭಾವವಿಕಾರಗಳೂ ಇಲ್ಲದವನು ಎಂದರ್ಥ[3]. ಏಕೆಂದರೆ ಹುಟ್ಟು ಮುಂತಾದದ್ದಕ್ಕೆ ಕಾರಣವಾಗಿರುವ ಅವಿದ್ಯೆ ಎಂಬ ಮಬ್ಬಿನ ಬೀಜವಾದ ನಿದ್ರೆಯು ಇವನಲ್ಲಿರುವದಿಲ್ಲ[4]; ಆದ್ದರಿಂದ ಇದು ಅನಿದ್ರವು. ಆ ತುರೀಯವು (ಯಾವ) ನಿದ್ರೆಯೂ ಇಲ್ಲದ್ದಷ್ಟೆ. ಅದ್ದರಿಂದಲೇ ಅದು ಅಸ್ವಪ್ನವು; ಏಕೆಂದರೆ ಆ (ನಿದ್ರೆಯೇ) ಅನ್ಯಥಾಗ್ರಹಣವೆಂಬ (ಕನಸಿಗೆ) ಕಾರಣವು. (ಹೀಗೆ) ನಿದ್ರೆಯಿಲ್ಲದೆ ಕನಸಿಲ್ಲದೆ ಇರುವದರಿಂದ ಆತನು ಹುಟ್ಟಿಲ್ಲದ ಅದ್ವೈತನೂ (ಆಗಿರುತ್ತಾನೆ. ಅಂಥ ಅದ್ವೈತನಾದ) ತುರೀಯನನ್ನು (ತನ್ನ) ಆತ್ಮನೆಂದು ಆಗ ಅರಿತುಕೊಳ್ಳುತ್ತಾನೆ.

## ದ್ವೈತವು ನಿಜವಾಗಿರುವದೂ ಇಲ್ಲ, ಹೋಗುವದೂ ಇಲ್ಲ

(ಭಾಷ್ಯ)

೫೪. ಪ್ರಪಞ್ಚನಿವೃತ್ತ್ಯಾ ಚೇತ್ ಪ್ರತಿಬುಧ್ಯತೇ, ಅನಿವೃತ್ತೇ ಪ್ರಪಞ್ಚೇ ಕಥಮ್ ಅದ್ವೈತಮ್ ಇತಿ? ಉಚ್ಯತೇ—

---

1. ಎಚ್ಚರಿನಲ್ಲಾಗಲಿ ಕನಸಿನಲ್ಲಾಗಲಿ ದ್ವೈತವನ್ನು ಕಾಣುವದೆಂಬುದು ಅನ್ಯಥಾಜ್ಞಾನರೂಪವಾದ ಕನಸೇ.

2. ಜನ್ಮಾದಿ ಎಂದು ಮೂಲದಲ್ಲಿದೆಯಾದರೂ 'ಆದಿ' ಎಂಬ ಮಾತನ್ನು ಬರೆದವರು ಹೆಚ್ಚಾಗಿ ಸೇರಿಸಿಕೊಂಡಿರುವರೆಂದು ಕಾಣುತ್ತದೆ.

3. ಆತ್ಮನಿಗೆ ಜನ್ಮವಿಲ್ಲವೆಂದು ಹೇಳಿರುವದು ಇರುವದು, ಬೆಳೆಯುವದು, ಮಾರ್ಪಡುವದು, ಕುಂದುವದು, ಸಾಯುವದು-ಎಂಬ ವಿಕಾರಗಳೂ ಇಲ್ಲವೆಂದು ಹೇಳುವದಕ್ಕೆ ಎಂದು ಅಭಿಪ್ರಾಯ. ಮುಂ. ಭಾ. ಭಾ. ೫೩; ಗೀ. ಭಾ. ಭಾ. ೬೪.

4. ಅನ್ಯಥಾಜ್ಞಾನವು ಜನ್ಮಾದಿಗಳಿಗೆ ಕಾರಣ; ಅಜ್ಞಾನನಿದ್ರೆಯು ಅನ್ಯಥಾಜ್ಞಾನಕ್ಕೆ ಕಾರಣ.

(ಭಾಷ್ಯಾರ್ಥ)

(ಆಕ್ಷೇಪ) ;—ಪ್ರಪಂಚವು ತೊಲಗುವದರಿಂದ ಅರಿತುಕೊಳ್ಳತಕ್ಕದ್ದಾದರೆ, ಪ್ರಪಂಚವು ಹೋಗದೆ ಇರುವಾಗ ಅದ್ವೈತವು ಹೇಗೆ ?[1]

(ಪರಿಹಾರ) :—ಹೇಳುತ್ತೇವೆ :—

**ಪ್ರಪಞ್ಚೋ ಯದಿ ವಿದ್ಯೇತ ನಿವರ್ತೇತ ನ ಸಂಶಯಃ ।**
**ಮಾಯಾಮಾತ್ರಮಿದಂ ದ್ವೈತಮದ್ವೈತಂ ಪರಮಾರ್ಥತಃ ॥ ೧೭ ॥**

೧೭. ಪ್ರಪಂಚವು ಇರುವದಾದರೆ ಹೋದೀತು, ಸಂಶಯವಿಲ್ಲ. ಈ ದ್ವೈತವು ಮಾಯಾಮಾತ್ರವು, ಪರಮಾರ್ಥವಾಗಿ ಅದ್ವೈತವು.

(ಭಾಷ್ಯ)

೫೫. ಸತ್ಯಮ್ ಏವಂ ಸ್ಯಾತ್ ಪ್ರಪಞ್ಚೋ ಯದಿ ವಿದ್ಯೇತ । ರಜ್ಜ್ವಾಂ ಸರ್ಪ ಇವ ಕಲ್ಪಿತತ್ವಾತ್ ನ ತು ಸ ವಿದ್ಯತೇ । ವಿದ್ಯಮಾನಶ್ಚೇತ್ ನಿವರ್ತೇತ ನ ಸಂಶಯಃ । ನ ಹಿ ರಜ್ಜ್ವಾಂ ಭ್ರಾನ್ತಿಬುದ್ಧ್ಯಾ ಕಲ್ಪಿತಃ ಸರ್ಪಃ ವಿದ್ಯಮಾನಃ ಸನ್ ವಿವೇಕತೋ ನಿವೃತ್ತಃ । ನ ಚ[2] ಮಾಯಾ ಮಾಯಾವಿನಾ ಪ್ರಯುಕ್ತಾ ತದ್ದರ್ಶಿನಾಂ ಚಕ್ಷುರ್ಬನ್ಧಾಪಗಮೇ ವಿದ್ಯಮಾನಾ ಸತೀ ನಿವೃತ್ತಾ । ತಥಾ ಇದಂ ಪ್ರಪಞ್ಚಾಖ್ಯಂ ಮಾಯಾಮಾತ್ರಂ ದ್ವೈತಮ್ । ರಜ್ಜುವತ್ ಮಾಯಾವಿವಚ್ಚ ಅದ್ವೈತಂ ಪರಮಾರ್ಥತಃ । ತಸ್ಮಾತ್ ನ ಕಶ್ಚಿತ್ ಪ್ರಪಞ್ಚಃ ಪ್ರವೃತ್ತಃ ನಿವೃತ್ತೋ ವಾ ಅಸ್ತಿ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ನಿಜ, ಪ್ರಪಂಚವು ಇರುವದಾದರೆ ಹೀಗೆ ಆದೀತು[3]. ಆದರೆ ಹಗ್ಗದಲ್ಲಿ ಹಾವಿನಂತೆ ಅದು ಕಲ್ಪಿತವಾಗಿರುವದರಿಂದ ಅದು ಇರುವದಿಲ್ಲ[4]. ಇರುವದಾದರೆ

---

1. ಮಾಯಾನಿದ್ರೆಯು ಹೋಗಬೇಕು ಎಂದದ್ದರಿಂದ ಪ್ರಪಂಚವು ತೊಲಗಿದ ಬಳಿಕ ಅದ್ವೈತಜ್ಞಾನವಾಗುತ್ತದೆ ಎಂದು ಪೂರ್ವಪಕ್ಷಿ ಭಾವಿಸಿರುತ್ತಾನೆ.

2. 'ನೈವ' ಆ॥ ಕಾ॥ ಮೈ॥

3. ಪ್ರಪಂಚವು ಇರುವಾಗ ಅದ್ವೈತವೆಂಬುದು ಹೊಂದುವದಿಲ್ಲ ಎಂಬ ಆಕ್ಷೇಪವು ಯುಕ್ತವಾದೀತು ಎಂದು ಭಾವ. ಕಾರಣಾಧೀನವಾಗಿ ಪ್ರಪಂಚವು ಇರುವಾಗ ಅದು ಲಯವಾದರೂ ಕಾರಣವಿದ್ದರೆ ನಿವೃತ್ತಿಯು ತೀರ ಆಯಿತೆಂದು ಹೇಳಲಾಗುವದಿಲ್ಲ ಎಂಬ ಶಂಕೆಯು ಹುಟ್ಟುತ್ತಿತ್ತು-ಎಂದು ಆ॥ ವ್ಯಾಖ್ಯಾನದಲ್ಲಿ ಕಲ್ಪಿಸಿರುವ ಶ್ಲೋಕಾರ್ಥವು ಸರಿಯಲ್ಲ.

4. ಅದು ತೋರುತ್ತಿದ್ದರೂ ನಿಜವಾಗಿಲ್ಲ; ಆದ್ದರಿಂದ ಅದ್ವೈತಕ್ಕೆ ಹಾನಿಯಿಲ್ಲ.

ಹೋದೀತು, (ಇದಕ್ಕೆ) ಸಂಶಯವಿಲ್ಲ[1]. ಹಗ್ಗದಲ್ಲಿ ಭ್ರಾಂತಿಬುದ್ಧಿಯಿಂದ ಕಲ್ಪಿತವಾಗಿರುವ ಹಾವು[2] (ನಿಜವಾಗಿ) ಇದ್ದುಕೊಂಡು ವಿವೇಕದಿಂದ ಹೋಗುವದಿಲ್ಲವಷ್ಟೆ. (ಹಾಗೆಯೇ) ಮಾಯಾವಿಯು ಹಾಕಿದ ಮಾಯೆಯು ಅದನ್ನು ನೋಡುತ್ತಿರುವವರ ಕಣ್ಣುಕಟ್ಟುಹೋಗುತ್ತಲೂ (ಮೊದಲು) ಇದ್ದದ್ದು (ಆಗ) ಹೋಗುವದೂ ಇಲ್ಲ: ಅದರಂತೆಯೇ ಈ **ಪ್ರಪಂಚವೆಂಬ ದ್ವೈತವು ಬರಿಯ ಮಾಯೆ; (ದೃಷ್ಟಾಂತದ) ಹಗ್ಗದಂತೆಯೂ ಮಾಯಾವಿಯಂತೆಯೂ ನಿಜವಾಗಿ ಅದ್ವೈತವೇ (ಇರುವದು.)** ಆದ್ದರಿಂದ ಯಾವ ಪ್ರಪಂಚವೂ ಬಂದದ್ದೂ ಇಲ್ಲ, ಹೋದದ್ದೂ ಇಲ್ಲ-[3] ಎಂದು ಅಭಿಪ್ರಾಯವು.

(ಭಾಷ್ಯ)

೫೬. ನನು ಶಾಸ್ತಾ ಶಾಸ್ತ್ರಂ ಶಿಷ್ಯಃ ಇತಿ ಅಯಂ ವಿಕಲ್ಪಃ ಕಥಂ ನಿವೃತ್ತಃ ಇತಿ? ಉಚ್ಯತೇ—

(ಭಾಷ್ಯಾರ್ಥ)

(ಆಕ್ಷೇಪ) :—ಗುರು, ಶಾಸ್ತ್ರ, ಶಿಷ್ಯ-ಎಂಬ ಈ ವಿಕಲ್ಪವಾದರೂ ಹೇಗೆ ಹೋಗುವದು?

(ಪರಿಹಾರ) :—ಹೇಳುತ್ತೇವೆ.

**ವಿಕಲ್ಪೋ ವಿನಿವರ್ತೇತ ಕಲ್ಪಿತೋ ಯದಿ ಕೇನಚಿತ್ ।**
**ಉಪದೇಶಾದಯಂವಾದೋ ಜ್ಞಾತೇ ದ್ವೈತಂ ನ ವಿದ್ಯತೇ ॥ ೧೮ ॥**

೧೮. ವಿಕಲ್ಪವು ಯಾರಿಂದಲಾದರೂ ಕಲ್ಪಿತವಾಗಿದ್ದಿದ್ದರೆ ಹೋಗಬಹುದಾಗಿತ್ತು. ಉಪದೇಶಕ್ಕಾಗಿ ಈ ವಾದವು, ತಿಳಿದರೆ ದ್ವೈತವಿರುವದಿಲ್ಲ.

(ಭಾಷ್ಯ)

೫೭. ವಿಕಲ್ಪಃ ವಿನಿವರ್ತೇತ ಯದಿ ಕೇನಚಿತ್ ಕಲ್ಪಿತಃ ಸ್ಯಾತ್ । ಯಥಾ ಅಯಂ ಪ್ರಪಞ್ಚಃ ಮಾಯಾರಜ್ಜುಸರ್ಪವತ್, ತಥಾ ಅಯಂ ಶಿಷ್ಯಾದಿಭೇದವಿಕಲ್ಪೋಽಪಿ ಪ್ರಾಕ್ ಪ್ರತಿಬೋಧಾದೇವ ಉಪದೇಶನಿಮಿತ್ತಃ । ಅತಃ ಉಪದೇಶಾತ್

---

1. ಇರುವದು ಹೋಗಬೇಕು-ಎಂಬುದು ಇಲ್ಲಿ ವಿವಕ್ಷಿತವಲ್ಲ; ದ್ವೈತವು ನಿಜವಾಗಿದ್ದರೆ ಅದು ಹೋಗದೆ ಅದ್ವೈತವು ಹೇಗೆ ಎಂದು ಶಂಕಿಸಬಹುದಾಗಿತ್ತು ಎಂದು ಭಾವ.

2. ಹಗ್ಗದ ಹಾವೇ ಮುಂತಾದ ತೋರಿಕೆಗಳು ಅವಿದ್ಯಾಪರಿಣಾಮವಾಗಿ ತತ್ಕಾಲಕ್ಕೆ ಹುಟ್ಟುವವು ಎಂಬ ಈಚಿನ ಕೆಲವರು ವೇದಾಂತಿಗಳ ಪ್ರಕ್ರಿಯೆಯು ಭಾಷ್ಯದಲ್ಲಿ ಕಾಣುವದಿಲ್ಲ.

3. ಅದ್ವೈತವನ್ನು ಅರಿತುಕೊಳ್ಳುವದೇ ಪ್ರಪಂಚನಿವೃತ್ತಿ.

ಅಯಂ ವಾದಃ ಶಿಷ್ಯಃ ಶಾಸ್ತಾ ಶಾಸ್ತ್ರಮ್ ಇತಿ । ಉಪದೇಶಕಾರ್ಯೇ ತು ಜ್ಞಾನೇ ನಿರ್ವೃತ್ತೇ ಜ್ಞಾತೇ ಪರಮಾರ್ಥತತ್ತ್ವೇ ದ್ವೈತಂ ನ ವಿದ್ಯತೇ ॥

(ಭಾಷ್ಯಾರ್ಥ)

ಯಾರಾದರೂ[1] ಕಲ್ಪಿಸಿದ್ದಾದರೆ ವಿಕಲ್ಪವು ಹೋದೀತು[2]. ಹೇಗೆ ಈ ಪ್ರಪಂಚವು ಮಾಯೆಯಂತೆಯೂ, ಹಗ್ಗದ ಹಾವಿನಂತೆಯೂ (ಭ್ರಾಂತಿಯಾಗಿರುವದೋ) ಹಾಗೆಯೇ ಶಿಷ್ಯನೇ ಮುಂತಾದ ಭೇದ (ರೂಪವಾದ) ವಿಕಲ್ಪವೂ ಜ್ಞಾನವಾಗುವ ಮೊದಲೇ ಉಪದೇಶವೆಂಬ ಕಾರಣದಿಂದ (ಆಗಿರುತ್ತದೆ)[3]. ಆದ್ದರಿಂದ ಶಿಷ್ಯ, ಗುರು, ಶಾಸ್ತ್ರ-ಎಂಬ ಈ ವಾದವೂ ಉಪದೇಶಕ್ಕಾಗಿ. ಆದರೆ ಉಪದೇಶದ ಫಲವಾದ ಜ್ಞಾನವು ಉಂಟಾದರೆ, ಪರಮಾರ್ಥತತ್ತ್ವವನ್ನು ಅರಿತುಕೊಂಡರೆ, ದ್ವೈತವು ಇರುವದಿಲ್ಲ[4].



1. 'ಯಾವದಾದರೂ (ಕಾರಣವು)' ಎಂದೂ ಕನ್ನಡಿಸಬಹುದು. ವಿಕಲ್ಪವೆಂಬುದು ನಿಜವಾಗಿ ಯಾವದಾದರೂ ಕಾರಣದಿಂದ ಆಗಿದ್ದಿದ್ದರೆ ಆ ಕಾರಣವಿರುವವರೆಗೆ ಹೋಗುವದಿಲ್ಲ; ಅದು ಹೋಗದೆ ಅದ್ವೈತವು ಹೇಗೆ ಎಂದು ಶಂಕಿಸಬಹುದು.

2. ಇಲ್ಲಿಯೂ ವಿಕಲ್ಪವು ನಿಜವಾಗಿಲ್ಲ ಎಂಬ ಅಭಿಪ್ರಾಯವೇ ಹೊರತು ಅದು ಹೋಗುವದೆಂಬುದೇನೂ ವಿವಕ್ಷಿತವಲ್ಲ.

3. ಶಿಷ್ಯಾದಿಭೇದವೂ ಪ್ರಪಂಚದಲ್ಲಿಯೇ ಸೇರಿರುತ್ತದೆ; ಅದರಂತೆಯೇ ಹುಸಿ ತೋರಿಕೆಯೇ ಆಗಿರುತ್ತದೆ.

4. ಶಾಸ್ತ್ರಾದಿಭೇದವು ಅಪರಮಾರ್ಥವು, ಅದ್ವೈತವೇ ಪರಮಾರ್ಥ-ಎಂದು ಅರಿತುಕೊಳ್ಳುವದೇ ಜ್ಞಾನವು. ಈ ಜ್ಞಾನವಾದಾಗ ಜ್ಞಾನಾಜ್ಞಾನಾದಿವಿಕಲ್ಪವೂ ಅಪರಮಾರ್ಥವಾಗಿ ಬಿಡುತ್ತದೆ.

# ೩. ಉಪನಿಷತ್ತು

## ಆತ್ಮನ ಪಾದಗಳಿಗೂ ಓಂಕಾರದ ಮಾತ್ರೆಗಳಿಗೂ ತಾದಾತ್ಮ್ಯ

**ಸೋಽಯಮಾತ್ಮಾಧ್ಯಕ್ಷರಮೋಙ್ಕಾರೋಽಧಿಮಾತ್ರಂ ಪಾದಾ ಮಾತ್ರಾ ಮಾತ್ರಾಶ್ಚ ಪಾದಾ ಅಕಾರ ಉಕಾರೋ ಮಕಾರ ಇತಿ ॥ ೮ ॥**

೮. ಆ ಈ ಆತ್ಮನು ಅಧ್ಯಕ್ಷರವಾಗಿ (ನೋಡಿದರೆ) ಅಧಿಮಾತ್ರವಾದ ಓಂಕಾರವು. ಪಾದಗಳು ಮಾತ್ರೆಗಳು, ಮತ್ತು ಮಾತ್ರೆಗಳು ಪಾದಗಳು. ಅಕಾರ, ಉಕಾರ, ಮಕಾರ–ಎಂಬಿವು (ಮಾತ್ರೆಗಳು.)

(ಭಾಷ್ಯ)

೫೮. ಅಭಿಧೇಯಪ್ರಾಧಾನ್ಯೇನ[1] ಓಂಕಾರಃ ಚತುಷ್ಪಾತ್ ಆತ್ಮಾ ಇತಿ ವ್ಯಾಖ್ಯಾತೋ ಯಃ, ಸೋಽಯಮ್ ಆತ್ಮಾ ಅಧ್ಯಕ್ಷರಮ್ ಅಕ್ಷರಮ್ ಅಧಿಕೃತ್ಯ ಅಭಿಧಾನಪ್ರಾಧಾನ್ಯೇನ ವರ್ಣ್ಯಮಾನಃ ಅಧ್ಯಕ್ಷರಮ್ । ಕಿಂ ಪುನಸ್ತತ್ ಅಕ್ಷರಮ್ ಇತಿ? ಆಹ-ಓಂಕಾರಃ । ಸೋಽಯಮ್ ಓಂಕಾರಃ ಪಾದಶಃ ಪ್ರವಿಭಜ್ಯಮಾನಃ ಅಧಿಮಾತ್ರಂ ಮಾತ್ರಾಮ್ ಅಧಿಕೃತ್ಯ ವರ್ತತೇ ಇತಿ ಅಧಿಮಾತ್ರಮ್ । ಕಥಮ್? ಅಕಾರ ಉಕಾರೋ ಮಕಾರಃ ಇತಿ ॥[2]

(ಭಾಷ್ಯಾರ್ಥ)

ಅಭಿಧೇಯವನ್ನು ಮುಖ್ಯವಾಗಿಟ್ಟುಕೊಂಡು ಓಂಕಾರವು ನಾಲ್ಕು ಪಾದಗಳುಳ್ಳ ಆತ್ಮನು ಎಂದು ಯಾವನನ್ನು (ಹಿಂದೆ) ವಿವರಿಸಿತ್ತೋ[3] ಆ ಈ ಆತ್ಮನು ಅಧ್ಯಕ್ಷರವಾಗಿ-ಅಕ್ಷರವನ್ನು ಅಧಿಕರಿಸಿ[4] ಅಭಿಧಾನವನ್ನು ಮುಖ್ಯವಾಗಿಟ್ಟುಕೊಂಡು

1. "ಅಭಿಧೇಯಪ್ರಧಾನಃ" ಅ॥ ಶಾ॥ ಮ್ಯೆ॥

2. ಇಲ್ಲಿ 'ಮಾತ್ರಾಶ್ಚ ಪಾದಾಃ' ಎಂಬ ಉಪನಿಷದ್ವಾಕ್ಯದ ಭಾಷ್ಯವು ಬಿಟ್ಟಿದೆ; ಅಥವಾ ಎರಡನೆಯ ಮಂತ್ರದ ಭಾಷ್ಯದಲ್ಲಿ ಇದರ ಅರ್ಥವನ್ನು ಹೇಳಿರುವದರಿಂದ ಸ್ಪಷ್ಟವೆಂದು ಉಪೇಕ್ಷೆಮಾಡಿರುತ್ತದೆ.

3. ಪರಬ್ರಹ್ಮವು ಅಭಿಧಾನಾಭಿಧೇಯವಿಭಾಗರಹಿತವಾದ ಓಂಕಾರವೆಂದು ಸಂಬಂಧಭಾಷ್ಯದಲ್ಲಿ ಹೇಳಿತ್ತಷ್ಟೆ; ಅದನ್ನು ಅರಿಯುವದಕ್ಕೆ ಸಾಧನವಾಗಿ ಅಭಿಧೇಯವನ್ನು ಮುಖ್ಯವಾಗಿಟ್ಟುಕೊಂಡು ಹೇಳಿದ ಆತ್ಮನನ್ನೇ ಈಗ ಅಭಿಧಾನಪ್ರಧಾನವಾಗಿ ವರ್ಣಿಸುತ್ತದೆ.

4. ಆಶ್ರಯಿಸಿಕೊಂಡು.

ವರ್ಣಿಸುವದರಿಂದ ಅಧ್ಯಕ್ಷರವು (ಎಂದರ್ಥ.) ಆ ಅಕ್ಷರವು ಯಾವದು? ಎಂದರೆ (ಶ್ರುತಿ) ಹೇಳುತ್ತದೆ: ಓಂಕಾರವು. ಆ ಈ[1] ಓಂಕಾರವು ಪಾದಪಾದವಾಗಿ ವಿಂಗಡಿಸಿದರೆ (ಇಲ್ಲಿ)ಅಧಿಮಾತ್ರವು[2]-ಮಾತ್ರೆಯನ್ನು ಅಧಿಕರಿಸಿ ಇರುತ್ತೆಯಾದ್ದರಿಂದ ಅಧಿಮಾತ್ರವು[2]. ಹೇಗೆಂದರೆ ಆತ್ಮನಿಗೆ ಪಾದಗಳು ಯಾವವೋ ಅವೇ ಓಂಕಾರಕ್ಕೆ ಪಾದಗಳು[3]. ಅವು ಯಾವವು? ಎಂದರೆ ಅಕಾರ, ಉಕಾರ, ಮಕಾರ (ಇವೇ.)

## ವೈಶ್ವಾನರನಿಗೂ ಅಕಾರಕ್ಕೂ ತಾದಾತ್ಮ್ಯ

(ಭಾಷ್ಯ)

೫೯. ತತ್ರ ವಿಶೇಷನಿಯಮಃ ಕ್ರಿಯತೇ—

(ಭಾಷ್ಯಾರ್ಥ)

ಇವುಗಳಲ್ಲಿ (ಇದು ಇಂಥದ್ದೆಂದು) ವಿಶೇಷವನ್ನು[4] (ಈಗ ಶ್ರುತಿಯಲ್ಲಿ) ಗೊತ್ತುಪಡಿಸಲಾಗುತ್ತದೆ:—

**ಜಾಗರಿತಸ್ಥಾನೋ ವೈಶ್ವಾನರೋಽಕಾರಃ ಪ್ರಥಮಾ ಮಾತ್ರಾಽಽಪ್ತೇರಾದಿಮತ್ತ್ವಾದ್ವಾಽಽಪ್ನೋತಿ ಹ ವೈ ಸರ್ವಾನ್ ಕಾಮಾನಾದಿಶ್ಚ ಭವತಿ ಯ ಏವಂ ವೇದ ॥ ೯ ॥**

೯. ಎಚ್ಚರವೆಂಬ ಅವಸ್ಥೆಯಲ್ಲಿರುವ ವೈಶ್ವಾನರನು ಅಕಾರವೆಂಬ ಪ್ರಥಮಮಾತ್ರೆಯು; ಆಪ್ತಿಯಿಂದ ಅಥವಾ ಆದಿಮತ್ತ್ವದಿಂದ (ಹೀಗೆಂದು ತಿಳಿಯಬೇಕು.) ಯಾವನು ಹೀಗೆಂದು ತಿಳಿಯುವನೋ ಅವನು ಎಲ್ಲಾ ಕಾಮಗಳನ್ನೂ ಪಡೆದುಕೊಳ್ಳುವನು, ಆದಿಯೂ ಆಗುವನು.

---

1. ಆ ಎಂದರೆ ಅಭಿಧೇಯ (ವಸ್ತು) ಪ್ರಧಾನವಾಗಿ ವರ್ಣಿಸಿದ ಎಂದರ್ಥ; ಈ ಎಂದರೆ ಅಭಿಧಾನ (ಹೆಸರಿಸುವ ಶಬ್ದ) ಪ್ರಧಾನವಾಗಿ ಈಗ ವರ್ಣಿಸುವ ಎಂದರ್ಥ. ಒಂದೇ ತತ್ತ್ವವನ್ನೇ ಹೀಗೆ ಎರಡು ಬಗೆಯಿಂದ ಹೇಳಿರುತ್ತದೆ.

2. ಹಿಂದೆ ವಿಶ್ವತೈಜಸಪ್ರಾಜ್ಞರೆಂಬ ಪಾದಗಳಾಗಿ ವಿಂಗಡಿಸಿದ್ದ ತತ್ತ್ವವನ್ನೇ ಈಗ ಅಕಾರ, ಉಕಾರ, ಮಕಾರಗಳೆಂಬ ಮಾತ್ರೆಗಳಾಗಿ ವಿಂಗಡಿಸಿ ಹೇಳಲಾಗುತ್ತದೆ ಎಂದರ್ಥ.

3. ಹಿಂದಿನ ಗ್ರಂಥಭಾಗದಲ್ಲಿ ಉತ್ತಮಮಧ್ಯಮಾಧಿಕಾರಿಗಳಿಗಾಗಿ ಅಧ್ಯಾರೋಪಾಪವಾದಗಳಿಂದ ಪರಮಾರ್ಥತತ್ತ್ವವನ್ನು ಹೇಳಿದೆಯೆಂದೂ ಈಗ ಅಧಮಾಧಿಕಾರಿಗಳಿಗೆ ಉಪಾಸನೆಯನ್ನು ಹೇಳುವದಕ್ಕಾಗಿ ಓಂಕಾರ ಮಾತ್ರಾದಿಗಳನ್ನು ಹೇಳಿದೆಯೆಂದೂ ಆ॥ ವ್ಯಾಖ್ಯಾನದಲ್ಲಿದೆ. ಆ ವ್ಯಾಖ್ಯಾನವು ಶ್ರುತಿಯ ಉಪಕ್ರಮೋಪಸಂಹಾರಗಳಿಗೂ ಅಭಿಧಾನಾಭಿಧೇಯಗಳಿಗೆ ತತ್ತ್ವದ್ವಾರದಿಂದ ಮುಖ್ಯೈಕ್ಯವನ್ನು ಹೇಳುವ ಭಾಷ್ಯಕ್ಕೂ ವಿರುದ್ಧ. ಪೀಠಿಕೆಯನ್ನು ನೋಡಿ.

4. ಇಂಥ ಪಾದವು ಇಂಥ ಮಾತ್ರೆ ಎಂಬ ವಿಶೇಷವನ್ನು.

(ಭಾಷ್ಯ)

೭೦. ಜಾಗರಿತಸ್ಥಾನಃ ವೈಶ್ವಾನರಃ ಯಃ ಸಃ ಓಂಕಾರಸ್ಯ ಅಕಾರಃ ಪ್ರಥಮಾ ಮಾತ್ರಾ । ಕೇನ ಸಾಮಾನ್ಯೇನ ಇತಿ ? ಆಹ-ಆಪ್ತೇಃ । ಆಪ್ತಿಃ ವ್ಯಾಪ್ತಿಃ । ಅಕಾರೇಣ ಸರ್ವಾ ವಾಗ್ ವ್ಯಾಪ್ತಾ । "ಅಕಾರೋ ವೈ ಸರ್ವಾ ವಾಕ್" (ಐ. ಆ. ೨-೩-೧೯) ಇತಿ ಶ್ರುತೇಃ । ತಥಾ ವೈಶ್ವಾನರೇಣ ಜಗತ್ "ತಸ್ಯ ಹ ವಾ ಏತಸ್ಯಾತ್ಮನೋ ವೈಶ್ವಾನರಸ್ಯ ಮೂರ್ಧೈವ ಸುತೇಜಾಃ" (ಛಾಂ. ೫-೧೮-೨) ಇತ್ಯಾದಿಶ್ರುತೇಃ । ಅಭಿಧಾನಾಭಿಧೇಯಯೋಃ ಏಕತ್ವಂ ಚ ಅವೋಚಾಮ । ಆದಿಃ ಅಸ್ಯ ವಿದ್ಯತೇ ಇತಿ ಆದಿಮತ್ । ಯಥೈವ ಆದಿಮತ್ ಅಕಾರಾಖ್ಯಮ್ ಅಕ್ಷರಮ್, ತಥಾ[1] ವೈಶ್ವಾನರಃ । ತಸ್ಮಾತ್ ವಾ ಸಾಮಾನ್ಯಾತ್ ಅಕಾರತ್ವಂ ವೈಶ್ವಾನರಸ್ಯ । ತದೇಕತ್ವವಿದಃ ಫಲಮ್ ಆಹ-ಆಪ್ನೋತಿ ಹ ವೈ ಸರ್ವಾನ್ ಕಾಮಾನ್ ಆದಿಃ ಪ್ರಥಮಶ್ಚ ಭವತಿ ಮಹತಾಮ್ ಯ ಏವಂ ವೇದ ಯಥೋಕ್ತಮ್ ಏಕತ್ವಂ ವೇದ ಇತ್ಯರ್ಥಃ ॥

(ಭಾಷ್ಯಾರ್ಥ)

ಎಚ್ಚರವೆಂಬ ಅವಸ್ಥೆಯಲ್ಲಿರುವ ವೈಶ್ವಾನರನಿರುವನಲ್ಲ, ಅವನು ಓಂಕಾರದ ಮೊದಲನೆಯ ಮಾತ್ರೆಯಾದ ಅಕಾರವು[2]. ಯಾವ ಹೋಲಿಕೆಯಿಂದ?[3] ಎಂದರೆ (ಶ್ರುತಿ) ಹೇಳುತ್ತದೆ: ಆಪ್ತಿಯಿಂದ; ಆಪ್ತಿ ಎಂದರೆ ವ್ಯಾಪ್ತಿಯು (ಅದರಿಂದ ಎಂದರ್ಥ.) ಅಕಾರದಿಂದ ವಾಕ್ಕೆಲ್ಲವೂ ವ್ಯಾಪ್ತವಾಗಿರುತ್ತದೆ. "ಅಕಾರವೇ ಎಲ್ಲಾ ವಾಕ್ಕೂ ಆಗಿರುವದು"[4] (ಐ. ಆ. ೨-೩-೧೯) ಎಂಬ ಶ್ರುತಿ ಇದಕ್ಕೆ ಪ್ರಮಾಣವು. ಇದರಂತೆ ವೈಶ್ವಾನರನಿಂದ ಜಗತ್ತು (ಎಲ್ಲವೂ ವ್ಯಾಪ್ತವಾಗಿರುತ್ತದೆ). "ಆ ಈ ವೈಶ್ವಾನರನೆಂಬ ಆತ್ಮನಿರುವನಲ್ಲ, ಇವನಿಗೆ ಸುತೇಜವೇ ತಲೆ" (ಛಾಂ. ೫-೧೮-೨) ಮುಂತಾದ ಶ್ರುತಿಯು ಇದಕ್ಕೆ ಪ್ರಮಾಣವು. ಅಭಿಧಾನ, ಅಭಿಧೇಯ-ಇವೆರಡಕ್ಕೂ ಐಕ್ಯವಿದೆಯೆಂದೂ (ಹಿಂದೆ) ಹೇಳಿರುತ್ತೇವೆ[5]. ಇದಕ್ಕೆ ಆದಿ[6]ಯಿರುತ್ತದೆಯಾದ್ದ

---

1. 'ತಥೈವ' ಅ॥ ಕಾ॥

2. ವೈಶ್ವಾನರನೆಂಬ ಮೊದಲನೆಯ ಪಾದದ ವಿಷಯಕ್ಕೆ ಹೇಳಿದ್ದೆಲ್ಲವನ್ನೂ ಅಧ್ಯಕ್ಷರವಾಗಿರುವ ಓಂಕಾರದ ಮೊದಲನೆಯ ಮಾತ್ರೆಯಾದ ಅಕಾರಕ್ಕೆ ಅನ್ವಯಿಸಿಕೊಳ್ಳಬೇಕು.

3. ವೈಶ್ವಾನರನು ಅಕಾರವೆಂದು ಹೇಳುವದರಲ್ಲಿ ಇವೆರಡಕ್ಕೂ ಯಾವ ಹೋಲಿಕೆ ಇದೆ ?-ಎಂದು ಪ್ರಶ್ನೆ. ಈ ಪ್ರಶ್ನೆಯು ಉಪಾಸಕರಿಗೂ ಪ್ರಯೋಜನವಾಗುತ್ತದೆ

4. ಅಕಾರವು ಸ್ಥಾನಕರಣಧರ್ಮಗಳಿಂದ ಸ್ಪರ್ಶಗಳಾಗಿಯೂ ಊಷ್ಮಗಳಾಗಿಯೂ ತೋರಿಕೊಂಡು ಬೇರೆಬೇರೆಯ ರೂಪವನ್ನು ಹೊಂದುತ್ತದೆ ಎಂದರ್ಥ.

5. ಆದ್ದರಿಂದ ಬರಿಯ ಹೋಲಿಕೆಯಿಂದಲೇ ಪರಮಾರ್ಥತತ್ತ್ವರೂಪದಿಂದ ಇವೆರಡಕ್ಕೂ ಮುಖ್ಯೈಕತ್ವವೇ ಇದೆ ಎಂದು ತಿಳಿಯಬೇಕು ಎಂದು ಭಾವ.

6. ಆದಿತ್ವವು.

ರಿಂದ (ಇದು) ಆದಿಮತ್ತು (ಎನಿಸಿರುತ್ತದೆ)[1] ; ಅಕಾರವೆಂಬ ಅಕ್ಷರವು ಹೇಗೆ ಆದಿತ್ವವುಳ್ಳದ್ದೋ ಇದರಂತೆಯೇ ವೈಶ್ವಾನರನೂ (ಆದಿಮಂತನಾಗಿರುತ್ತಾನೆ)[2]. ಆ ಹೋಲಿಕೆಯಿಂದಲಾದರೂ ವೈಶ್ವಾನರನು ಅಕಾರವು (ಎಂದು ತಿಳಿಯಬೇಕು.)

ಇವು ಒಂದೇ ಎಂದು ತಿಳಿಯುವಾತನಿಗೆ (ಶ್ರುತಿಯು) ಫಲವನ್ನು ಹೇಳುತ್ತದೆ: (ಆತನು) ಕಾಮಗಳೆಲ್ಲವನ್ನೂ ಪಡೆದುಕೊಳ್ಳುತ್ತಾನೆ; ದೊಡ್ಡವರಿಗೆ ಅವನು ಆದಿ ಎಂದರೆ ಮೊದಲನೆಯವನೂ ಆಗುವನು. ಯಾವನು ಹೀಗೆ ಮೇಲೆ ಹೇಳಿದಂತೆ (ವೈಶ್ವಾನರನಿಗೂ ಅಕಾರಕ್ಕೂ) ಏಕತ್ವವನ್ನು ತಿಳಿದುಕೊಳ್ಳುವನೋ (ಅವನಿಗೆ ಈ ಫಲವು ಆಗುವದು)[3] ಎಂದರ್ಥ.

## ತೈಜಸನಿಗೂ ಉಕಾರಕ್ಕೂ ತಾದಾತ್ಮ್ಯ

**ಸ್ವಪ್ನಸ್ಥಾನಸ್ತೈಜಸ ಉಕಾರೋ ದ್ವಿತೀಯಾ ಮಾತ್ರೋತ್ಕರ್ಷಾ**
**ದುಭಯತ್ವಾದ್ವೋತ್ಕರ್ಷತಿ ಹ ವೈ ಜ್ಞಾನಸನ್ತತಿಂ ಸಮಾನಶ್ಚ**
**ಭವತಿ ನಾಸ್ಯಾಬ್ರಹ್ಮವಿತ್ ಕುಲೇ ಭವತಿ ಯ ಏವಂ ವೇದ ॥ ೧೦ ॥**

೧೦. ಕನಸೆಂಬ ಅವಸ್ಥೆಯಲ್ಲಿರುವ ತೈಜಸನು ಉಕಾರವೆಂಬ ಎರಡನೆಯ ಮಾತ್ರೆ. ಉತ್ಕರ್ಷದಿಂದ ಅಥವಾ ಉಭಯತ್ವದಿಂದ (ಹೀಗೆಂದು ತಿಳಿಯಬೇಕು.) ಯಾವನು ಹೀಗೆಂದು ತಿಳಿಯುವನೋ (ಅವನು) ಜ್ಞಾನಸಂತತಿಯನ್ನು ಹೆಚ್ಚಿಸಿಕೊಳ್ಳುವನು, ಸಮಾನನೂ ಆಗುವನು, ಅವನ ಕುಲದಲ್ಲಿ ಬ್ರಹ್ಮವನ್ನರಿಯದವನು ಹುಟ್ಟುವದಿಲ್ಲ.

(ಭಾಷ್ಯ)

೬೧! ಸ್ವಪ್ನಸ್ಥಾನಃ ತೈಜಸಃ ಯಃ ಸ ಓಂಕಾರಸ್ಯ ಉಕಾರಃ ದ್ವಿತೀಯಾ ಮಾತ್ರಾ । ಕೇನ ಸಾಮಾನ್ಯೇನ ಇತಿ? ಆಹ-ಉತ್ಕರ್ಷಾತ್ । ಅಕಾರಾತ್ ಉತ್ಕೃಷ್ಟ ಇವ ಹಿ ಉಕಾರಃ । ತಥಾ ತೈಜಸೋ ವಿಶ್ವಾತ್ । ಉಭಯತ್ವಾದ್ ವಾ । ಅಕಾರಮಕಾರಯೋಃ ಮಧ್ಯಸ್ಥಃ ಉಕಾರಃ । ತಥಾ ವಿಶ್ವಪ್ರಾಜ್ಞಯೋಃ ಮಧ್ಯೇ

1. ಮೂರು ಮಾತ್ರೆಗಳಲ್ಲಿ ಅಕಾರವು ಮೊದಲನೆಯದು.

2. ತತ್ತ್ವವನ್ನು ತಿಳಿದುಕೊಳ್ಳುವ ಕ್ರಮದಲ್ಲಿ ಮೊದಲು ವೈಶ್ವಾನರನನ್ನು ತಿಳಿದುಕೊಳ್ಳಬೇಕು.

3. ಇಲ್ಲಿ ಅಕಾರವೈಶ್ವಾನರರ ಐಕ್ಯವನ್ನು ಹೊಗಳಿ ಫಲವನ್ನು ಹೇಳಿರುವದು ಓಂಕಾರವೂ ಆತ್ಮನೂ ಒಂದೇ ಎಂಬ ಮುಖ್ಯಜ್ಞಾನವನ್ನು ಹೊಗಳುವದಕ್ಕೆ. ಹೋಲಿಕೆಯಿಂದ ಅಕಾರವೈಶ್ವಾನರರನ್ನು ಒಂದೆಂದು ಉಪಾಸನೆಮಾಡುವವರು ಓಂಕಾರೋಪಾಸನೆಯನ್ನು ಮಾಡಿ ಬ್ರಹ್ಮವನ್ನು ಕ್ರಮಕ್ರಮವಾಗಿ ಪಡೆಯಬಹುದು ಎಂಬುದೂ ಅವಾಂತರ ವಾಕ್ಯದ ಅರ್ಥವಾಗಬಹುದು.

ತೈಜಸಃ। ಅತಃ ಉಭಯಭಾಕ್ತ್ವಸಾಮಾನ್ಯಾತ್। ವಿದ್ವತ್ಫಲಮ್ ಉಚ್ಯತೇ। ಉತ್ಕರ್ಷತಿ ಹ ವೈ ಜ್ಞಾನಸನ್ತತಿಂ ವರ್ಧಯತಿ ಇತ್ಯರ್ಥಃ। ಸಮಾನಃ ತುಲ್ಯಶ್ಚ ಮಿತ್ರಪಕ್ಷಸ್ಯೇವ ಶತ್ರುಪಕ್ಷಾಣಾಮಪಿ ಅಪ್ರದ್ವೇಷ್ಯೋ ಭವತಿ। ಅಬ್ರಹ್ಮವಿತ್[1] ಅಸ್ಯ ಕುಲೇ ನ ಭವತಿ ಯ ಏವಂ ವೇದ ॥

(ಭಾಷ್ಯಾರ್ಥ)

ಕನಸೆಂಬ ಅವಸ್ಥೆಯಲ್ಲಿರುವ ತೈಜಸನಿರುವನಲ್ಲ, ಅವನು ಓಂಕಾರದ ಎರಡನೆಯ ಮಾತ್ರೆಯಾದ ಉಕಾರವು. ಯಾವ ಹೋಲಿಕೆ (ಇರುವದ) ರಿಂದ ?- ಎಂದರೆ (ಶ್ರುತಿಯು) ಹೇಳುತ್ತದೆ: ಉತ್ಕರ್ಷದಿಂದ. ಉಕಾರವು ಅಕಾರದಿಂದ ಉತ್ಕೃಷ್ಟವಾಗಿರುವಂತೆ[2] (ಇದೆ)ಯಲ್ಲವೆ? ಹಾಗೆಯೇ ತೈಜಸನು ವಿಶ್ವದಿಂದ (ಉತ್ಕೃಷ್ಟನಾದಂತೆ ಇರುವನು)[3]. ಅಥವಾ ಉಭಯ (ಸಮಾನವಾಗಿರುವದರಿಂದ) ಎಂದಾದರೂ (ಹೇಳಬಹುದು), ಅಕಾರಮಕಾರಗಳೆರಡಕ್ಕೂ ಉಕಾರವು ಮಧ್ಯಸ್ಥವಾಗಿರುತ್ತದೆ[4]. ಹಾಗೆಯೇ ವಿಶ್ವಪ್ರಾಜ್ಞರಿಬ್ಬರಿಗೂ ತೈಜಸನು (ಮಧ್ಯಸ್ಥನಾಗಿರುತ್ತಾನೆ). ಆದ್ದರಿಂದ ಉಭಯ (ಸಂಬಂಧವನ್ನು) ಪಡೆದಿರುವದೆಂಬ ಹೋಲಿಕೆಯಿಂದ (ತೈಜಸನು ಉಕಾರವು)[5].

(ಇದನ್ನು) ತಿಳಿದವನಿಗೆ ಫಲವನ್ನು (ಶ್ರುತಿ) ಹೇಳುತ್ತದೆ: ಯಾವನು ಹೀಗೆಂದು[6] ತಿಳಿಯುತ್ತಾನೋ (ಅವನು) ಜ್ಞಾನಸಂತತಿಯನ್ನು ಅರಿವಿನ ಪ್ರವಾಹವನ್ನು ಉತ್ಕರ್ಷಗೊಳಿಸಿಕೊಳ್ಳುತ್ತಾನೆ ಎಂದರ್ಥ[7]. ಸಮಾನನೂ[8] ತುಲ್ಯನೂ,

---

1. 'ಅಬ್ರಹ್ಮವಿಚ್ಚ' ವಾ॥

2. ಎಳೆದುಕೊಂಡಿರುವಂತೆ; ಉಕಾರದ ಉಚ್ಚಾರಣೆಯನ್ನು ಮಾಡುವಾಗ ಕಂಠದಲ್ಲಿ ಹುಟ್ಟುವ ಅಕಾರವನ್ನು ಎಳೆದುಕೊಂಡು ತುಟಿಯ ಮೂಲಕ ಉಚ್ಚರಿಸಿದಂತೆ ಕಾಣುತ್ತದೆ.

3. ಏಕೆಂದರೆ ತೈಜಸನ ಅನುಭವಗಳು ವಿಶ್ವನ ಅನುಭವಗಳ ವಾಸನೆಗಳನ್ನು ಎಳೆದುಕೊಂಡು ಉಂಟಾಗಿರುವಂತೆ ತೋರುತ್ತವೆ.

4. ಮಕಾರವು ತುಟಿಯನ್ನು ಪೂರ ಮುಚ್ಚಿ ಉಚ್ಚಾರಣೆಮಾಡತಕ್ಕದ್ದು; ಅಕಾರವು ಪೂರ ಬಾಯಿತೆರೆದು ಉಚ್ಚಾರಣೆಮಾಡತಕ್ಕದ್ದು. ಉಕಾರದ ಉಚ್ಚಾರಣೆಯಲ್ಲಿ ಎರಡರ ಸಂಬಂಧವೂ ಒಂದಿಸ್ಸಿದೆ.

5. ಆದಿ, ಆಪ್ತಿ–ಎಂಬ ಮಾತುಗಳಲ್ಲಿ ಆಕಾರದ ಸಂಬಂಧವಿರುವಂತೆ ಉತ್ಕರ್ಷ, ಉಭಯತ್ವ–ಇವುಗಳಲ್ಲಿ ಉಕಾರಸಂಬಂಧವಿರುವದನ್ನು ಲಕ್ಷಿಸಬೇಕು.

6. ಉತ್ಕರ್ಷ, ಉಭಯತ್ವ–ಎಂಬ ಹೋಲಿಕೆಗಳಿಂದ ತೈಜಸನು ಉಕಾರವೆಂದು.

7. ಅವನ ಜ್ಞಾನಕ್ಕೆ ವಿಚ್ಛೇದವು ಬರುವದಿಲ್ಲ, ಅದು ಹೆಚ್ಚುತ್ತಲೇ ಇರುತ್ತದೆ.

8. ಎರಡು ಪಕ್ಷದವರಿಗೂ ಬೇಕಾಗುವದೆಂಬ ಉಭಯತ್ವವುಳ್ಳವನು.

ಮಿತ್ರಪಕ್ಷಕ್ಕೆ ಹೇಗೋ ಹಾಗೆ ಶತ್ರುಪಕ್ಷಕ್ಕೂ ದ್ವೇಷಪಾತ್ರನಲ್ಲದವನೂ, ಆಗುತ್ತಾನೆ. ಅವನ ಕುಲದಲ್ಲಿ ಬ್ರಹ್ಮವನ್ನು ಅರಿಯದವನು[1] ಇರುವದಿಲ್ಲ.

## ಪ್ರಾಜ್ಞನಿಗೂ ಮಕಾರಕ್ಕೂ ತಾದಾತ್ಮ್ಯ

**ಸುಷುಪ್ತಸ್ಥಾನಃ ಪ್ರಾಜ್ಞೋ ಮಕಾರಸ್ತೃತೀಯಾ ಮಾತ್ರಾ ಮಿತೇರಪೀತೇರ್ವಾ ಮಿನೋತಿ ಹ ವಾ ಇದಗ್ಂ ಸರ್ವ ಮಪೀತಿಶ್ಚ ಭವತಿ ಯ ಏವಂ ವೇದ ॥ ೧೧ ॥**

೧೧. ತನಿನಿದ್ರೆಯೆಂಬ ಅವಸ್ಥೆಯಲ್ಲಿರುವ ಪ್ರಾಜ್ಞನು ಮಕಾರವೆಂಬ ಮೂರನೆಯ ಮಾತ್ರೆ. ಮಿತಿಯಿಂದ, ಅಥವಾ ಅಪೀತಿಯಿಂದ (ಹೀಗೆಂದು ತಿಳಿಯಬೇಕು.) ಯಾವನು ಹೀಗೆಂದು ತಿಳಿಯುವನೋ ಅವನು ಇದನ್ನೆಲ್ಲವನ್ನೂ ನಿಜವಾಗಿ ಅಳೆಯುವನು, ಮತ್ತು ಅಪೀತಿಯಾಗುವನು.

(ಭಾಷ್ಯ)

೬೨. ಸುಷುಪ್ತಸ್ಥಾನಃ ಪ್ರಾಜ್ಞಃ ಯಃ ಸ ಓಂಕಾರಸ್ಯ ಮಕಾರಃ ತೃತೀಯಾ ಮಾತ್ರಾ । ಕೇನ ಸಾಮಾನ್ಯೇನ ಇತಿ? ಆಹ-ಸಾಮಾನ್ಯಮಿದಮತ್ರ । ಮಿತೇಃ। ಮಿತಿಃ ಮಾನಮ್ । ಮೀಯೇತೇ ಇವ ಹಿ ವಿಶ್ವತೈಜಸೌ ಪ್ರಾಜ್ಞೇನ ಪ್ರಲಯೋತ್ಪತ್ತ್ಯೋಃ ಪ್ರವೇಶನಿರ್ಗಮಾಭ್ಯಾಂ ಪ್ರಸ್ಥೇನೇವ ಯವಾಃ। ತಥಾ ಓಂಕಾರಸಮಾಪ್ತೌ ಪುನಃ ಪ್ರಯೋಗೇ ಚ ಪ್ರವಿಶ್ಯ ನಿರ್ಗಚ್ಛತ ಇವ ಅಕಾರೋಕಾರೌ ಮಕಾರೇ। ಅಪೀತೇರ್ವಾ । ಅಪೀತಿಃ ಅಪ್ಯಯಃ, ಏಕೀಭಾವಃ । ಓಂಕಾರೋಚ್ಚಾರಣೇ[2] ಅನ್ತ್ಯೇ ಅಕ್ಷರೇ ಏಕೀಭೂತಾವಿವ ಅಕಾರೋಕಾರೌ । ತಥಾ ವಿಶ್ವತೇಜಸೌ ಸುಷುಪ್ತಕಾಲೇ ಪ್ರಾಜ್ಞೇ। ಅತೋ ವಾ ಸಾಮಾನ್ಯಾತ್ ಏಕತ್ವಂ ಪ್ರಾಜ್ಞಮಕಾರಯೋಃ । ವಿದ್ವತ್ಫಲಮಾಹ । ಮಿನೋತಿ ಹ ವೈ ಇದಂ ಸರ್ವಮ್ । ಜಗದ್ಯಾಥಾತ್ಮ್ಯಂ ಜಾನಾತಿ ಇತ್ಯರ್ಥಃ । ಅಪೀತಿಶ್ಚ ?[3] ಜಗತ್ಕಾರಣಾತ್ಮಾ ಚ ಭವತಿ ಇತ್ಯರ್ಥಃ । ಅತ್ರ ಅವಾನ್ತರಫಲವಚನಂ ಪ್ರಧಾನಸಾಧನಸ್ತುತ್ಯರ್ಥಮ್ ॥

(ಭಾಷ್ಯಾರ್ಥ)

ತನಿನಿದ್ರೆ ಎಂಬ ಅವಸ್ಥೆಯಲ್ಲಿರುವ ಪ್ರಾಜ್ಞನಿದಾನಲ್ಲ, ಅವನು ಓಂಕಾರದ ಮೂರನೆಯ ಮಾತ್ರೆಯಾದ ಮಕಾರವು, ಯಾವ ಹೋಲಿಕೆ (ಯಿರುವದ) ರಿಂದ ? ಎಂದರೆ (ಶ್ರುತಿಯು) ಹೇಳುತ್ತದೆ: ಇದು ಇಲ್ಲಿ ಹೋಲಿಕೆ. ಮಿತಿಯಿಂದ ; ಮಿತಿ

1. ಇಲ್ಲಿ ತೈಜಸನ ವಿಚಾರವಾದ್ದರಿಂದ ಬ್ರಹ್ಮವೆಂದರೆ ಹಿರಣ್ಯಗರ್ಭನೆಂದು ಅರ್ಥ.

2. ಇಲ್ಲಿ ' ಹಿ ' ಎಂದು ಹೆಚ್ಚಾಗಿ ವಾ॥

3. ' ಭವತಿ ' ಎಂಬ ಮಾತು ಬಿಟ್ಟುಹೋಗಿದೆ.

ಯೆಂದರೆ ಮಾನವು (ಅಳೆಯುವದು.)[1] ವಿಶ್ವತೈಜಸರುಗಳು ಅಡಗುವಾಗಲೂ ಹುಟ್ಟುವಾಗಲೂ ಒಳಕ್ಕೆ ಹೋಗುವದು, ಹೊರಕ್ಕೆ ಬರುವದು-ಇವುಗಳಿಂದ ಬಳ್ಳ ದಿಂದ ಜವೆಯಕಾಳು (ಅಳೆಯಲ್ಪಡುವಂತೆ) ಪ್ರಾಜ್ಞನಿಂದ ಅಳೆಯಲ್ಪಟ್ಟವರಂತೆ (ಆಗುತ್ತಿರುತ್ತಾರೆ). ಹೀಗೆಯೇ ಓಂಕಾರವು ಮುಗಿಯುವಾಗಲೂ ಮತ್ತೆ (ಅದನ್ನು) ಉಚ್ಚರಿಸುವಾಗಲೂ ಅಕಾರ, ಉಕಾರ-ಇವುಗಳು ಮಕಾರದಲ್ಲಿ ಹೊಕ್ಕು ಹೊರಕ್ಕೆ ಬಂದಂತೆ (ಆಗುತ್ತಿರುವವು). ಅಥವಾ ಅಪೀತಿಯಿಂದ (ಪ್ರಾಜ್ಞನು ಮಕಾರವು ಎಂದು ಹೇಳಬಹುದು.) ಅಪೀತಿ ಎಂದರೆ ಲಯವು, ಒಂದಾಗುವದು[3]. ಓಂಕಾರ ವನ್ನು ಉಚ್ಚರಿಸುವಾಗ ಕೊನೆಯ (ಮಕಾರವೆಂಬ) ಅಕ್ಷರದಲ್ಲಿ ಅಕಾರ, ಉಕಾರ-(ಇವು)ಗಳು ಒಂದಾದಂತೆ (ಆಗುವವು)[3]. ಇದರಂತೆ ವಿಶ್ವತೈಜಸರುಗಳೂ ತನಿ ನಿದ್ರೆಯಕಾಲದಲ್ಲಿ ಪ್ರಾಜ್ಞನಲ್ಲಿ (ಒಂದಾದಂತೆ ಆಗುವರು)[4]. ಈ ಹೋಲಿಕೆಯಿಂದ ಲಾದರೂ ಪ್ರಾಜ್ಞಮಕಾರಗಳು ಒಂದು.

(ಇದನ್ನು) ತಿಳಿದುಕೊಂಡವನಿಗೆ (ಆಗುವ) ಫಲವನ್ನು (ಶ್ರುತಿಯು) ಹೇಳು ತ್ತದೆ: ಇದೆಲ್ಲವನ್ನೂ ನಿಜವಾಗಿ ಅಳೆಯುತ್ತಾನೆ. ಜಗತ್ತಿನ ನಿಜವನ್ನು ಅರಿತು ಕೊಳ್ಳುತ್ತಾನೆ, . ಮತ್ತು ಅಪೀತಿಯೂ (ಆಗುವನು); ಜಗತ್ಕಾರಣವಾದ—(ಬ್ರಹ್ಮದ) ಸ್ವರೂಪವುಳ್ಳವನಾಗುವನು ಎಂದರ್ಥ. ಇಲ್ಲಿ ಒಳಫಲಗಳನ್ನು ಹೇಳಿರು ವದು, ಪ್ರಧಾನವಾದ ಸಾಧನವನ್ನು ಹೊಗಳುವದಕ್ಕೆ[5].



---

1. ಮಾಙ್-ಮಾನೇ ಎಂಬ ಧಾತುವನ್ನು ಇಲ್ಲಿ ಸೂಚಿಸಿದೆ.

2. ತನಿನಿದ್ರೆಯಲ್ಲಿ ವಿಶ್ವತೈಜಸರು ಹೊಕ್ಕು ಹೊರಕ್ಕೆ ಬಂದಂತೆ ಆಗುವ ಅನುಭವವು ಓಮ್! ಓಮ್! ಎಂದು ಉಚ್ಚರಿಸುವಾಗ ಅಕಾರೋಕಾರಗಳು ಮಕಾರದಲ್ಲಿ ಹೊಕ್ಕು ಹೊರಕ್ಕೆ ಬಂದಂತೆ ತೋರುವ ಅನುಭವಕ್ಕೆ ಸಮಾನ.

3. ಮೀಙ್-ಹಿಂಸಾಯಾಮ್ ಎಂಬ ಧಾತು, ಮೀ-ಗತೌ ಎಂಬ ಧಾತು-ಇವುಗ ಳೆರಡರಲ್ಲಿ ಒಂದು ಸೂಚಿತವಾಗಿದೆ. ಗತಿ ಎಂದರೆ ಹೋಗಿಸೇರು ಎಂಬರ್ಥವಾಗಬಹು ದಾದ್ದರಿಂದ ಎರಡನೆಯದನ್ನೇ ತೆಗೆದುಕೊಳ್ಳಬಹುದೆಂದು ಕಾಣುತ್ತದೆ. ಇಲ್ಲಿ ಕೊಟ್ಟಿರುವ ಮಾ, ಮೀ-ಎಂಬ ಧಾತುಗಳಲ್ಲಿ ಮಕಾರಸಂಬಂಧವಿರುವದನ್ನು ಲಕ್ಷಿಸಬೇಕು.

4. ಮತ್ತೆ ಹೊರಕ್ಕೆ ಬರುವದರಿಂದ ಪೂರ್ತಿಯಾಗಿ ಒಂದಾಗಲಿಲ್ಲ, ಆದ್ದರಿಂದ ಒಂದಾದಂತೆ ಎಂದಿದೆ.

5. ಮುಖ್ಯವಾದ ಸಾಧನವು ಓಂಕಾರದ ತತ್ತ್ವಜ್ಞಾನವು; ಅದನ್ನು ೧೨ನೆಯ ಮಂತ್ರದಲ್ಲಿ ಹೇಳಲಾಗುವದು. ಒಂದೊಂದು ಮಾತ್ರೆಯ ಜ್ಞಾನಕ್ಕೇ ಈ ಫಲವಿರುವಾಗ ಓಂಕಾರದ ಪೂರ್ಣಜ್ಞಾನದ ವಿಷಯಕ್ಕೆ ಹೇಳುವದೇನು ?-ಎಂದರ್ಥ.

# ಕಾರಿಕೆ

---

## ಓಂಕಾರದ ಮೂರು ಮಾತ್ರೆಗಳು

(ಕಾರಿಕಾವಾಕ್ಯ)

**ಅತ್ರೈತೇ ಶ್ಲೋಕಾ ಭವನ್ತಿ—**

(ಕಾರಿಕಾವಾಕ್ಯಾರ್ಥ)

ಈ (ವಿಷಯ) ದಲ್ಲಿ ಈ ಶ್ಲೋಕಗಳು ಬಂದಿರುತ್ತವೆ:—

**ವಿಶ್ವಸ್ಯಾತ್ವವಿವಕ್ಷಾಯಾಮಾದಿಸಾಮಾನ್ಯಮುತ್ಕಟಮ್ ।**
**ಮಾತ್ರಾಸಂಪ್ರತಿಪತ್ತೌ ಸ್ಯಾದಾಪ್ತಿಸಾಮಾನ್ಯಮೇವ ಚ ॥ ೧೯ ॥**

೧೯. ವಿಶ್ವನಿಗೆ ಅತ್ವವನ್ನು ಹೇಳುವ ಇಚ್ಛೆಯಿರುವಲ್ಲಿ, ಮಾತ್ರೆಯೆಂದು ಇಟ್ಟುಕೊಳ್ಳುವಾಗ, ಆದಿತ್ವಸಾಮಾನ್ಯವು ಉತ್ಕಟ(ವಾಗಿರುತ್ತದೆ), ಆಪ್ತಿಸಾಮಾನ್ಯವೂ (ಉತ್ಕಟವಾಗಿರುತ್ತದೆ.)

(ಭಾಷ್ಯ)

೭೩. ವಿಶ್ವಸ್ಯ ಅತ್ವಮ್ ಅಕಾರಮಾತ್ರತ್ವಂ ಯದಾ ವಿವಕ್ಷ್ಯತೇ ತದಾ ಆದಿತ್ವಸಾಮಾನ್ಯಮ್ ಉಕ್ತನ್ಯಾಯೇನ ಉತ್ಕಟಮ್ । ಉದ್ಭೂತಂ ದೃಶ್ಯತೇ ಇತ್ಯರ್ಥಃ । ಅತ್ವವಿವಕ್ಷಾಯಾಮ್ ಇತ್ಯಸ್ಯ ವ್ಯಾಖ್ಯಾನಮ್ ಮಾತ್ರಾಸಂಪ್ರತಿಪತ್ತೌ ಇತಿ । ವಿಶ್ವಸ್ಯ ಅಕಾರಮಾತ್ರತ್ವಂ ಯದಾ ಸಂಪ್ರತಿಪದ್ಯತೇ ಇತ್ಯರ್ಥಃ । ಆಪ್ತಿಸಾಮಾನ್ಯಮೇವ ಚ । 'ಉತ್ಕಟಮ್' ಇತಿ ಅನುವರ್ತತೇ । ಚಶಬ್ದಾತ್ ॥

(ಭಾಷ್ಯಾರ್ಥ)

ವಿಶ್ವನಿಗೆ ಅತ್ವವನ್ನು (ಅವನು) ಅಕಾರ(ವೆಂಬ) ಮಾತ್ರೆ ಎಂಬುದನ್ನು ಯಾವಾಗ ಹೇಳಬಯಸುವೆವೋ ಆಗ ಆದಿತ್ವವು ಎಂಬ ಸಾಮಾನ್ಯವು ಹಿಂದೆ ಹೇಳಿರುವ ರೀತಿಯಿಂದ ಉತ್ಕಟ(ವಾಗಿರುತ್ತದೆ), ಎದ್ದು ಕಾಣುತ್ತದೆ ಎಂದರ್ಥ. 'ಅತ್ವವನ್ನು ಹೇಳುವ ಇಚ್ಛೆಯಿರುವಲ್ಲಿ' ಎಂಬುದಕ್ಕೆ 'ಮಾತ್ರೆಯೆಂದು ಇಟ್ಟುಕೊಳ್ಳುವಾಗ' ಎಂಬುದು ವ್ಯಾಖ್ಯಾನವು. "ವಿಶ್ವನನ್ನು ಅಕಾರವೆಂಬ ಮಾತ್ರೆಯೆಂದು ಯಾವಾಗ ಇಟ್ಟುಕೊಳ್ಳುವೆವೋ (ಆಗ)" ಎಂದರ್ಥ. ಆಪ್ತಿಸಾಮಾನ್ಯವೂ 'ಉತ್ಕಟ' (ವಾಗಿರುತ್ತದೆ)–ಎಂದು (ಇಲ್ಲಿಯೇ) ಸೇರಿಕೊಳ್ಳುತ್ತದೆ; ಏಕೆಂದರೆ (ಇಲ್ಲಿ) ಚ (ಊ) ಎಂಬ ಮಾತು ಇದೆ.

**ತೈಜಸಸ್ಯೋತ್ವವಿಜ್ಞಾನೇ ಉತ್ಕರ್ಷೋ ದೃಶ್ಯತೇ ಸ್ಫುಟಮ್ ।**
**ಮಾತ್ರಾಸಂಪ್ರತಿಪತ್ತೌ ಸ್ಯಾದುಭಯತ್ವಂ ತಥಾವಿಧಮ್ ॥ ೨೦ ॥**

೨೦. ತೈಜಸನನ್ನು ಉತ್ವವೆಂದು ಅರಿಯುವಲ್ಲಿ, ಮಾತ್ರೆಯೆಂದು ಇಟ್ಟುಕೊಳ್ಳುವಾಗ, ಉತ್ಕರ್ಷವು ಸ್ಫುಟವಾಗಿ ಕಾಣುತ್ತದೆ; ಉಭಯತ್ವವೂ ಹಾಗೆಯೇ.

(ಭಾಷ್ಯ)

೬೪. ತೈಜಸಸ್ಯ ಉತ್ವವಿಜ್ಞಾನೇ ಉಕಾರತ್ವವಿವಕ್ಷಾಯಾಮ್ ಉತ್ಕರ್ಷಃ ದೃಶ್ಯತೇ ಸ್ಫುಟಮ್ ಸ್ಪಷ್ಟಮ್[1] ಇತ್ಯರ್ಥಃ । ಉಭಯತ್ವಂ ಚ ಸ್ಫುಟಮೇವ ಇತಿ । ಪೂರ್ವವತ್ ಸರ್ವಮ್ ॥

(ಭಾಷ್ಯಾರ್ಥ)

ತೈಜಸನನ್ನು ಉತ್ವವೆಂದು ಅರಿಯುವಲ್ಲಿ (ಅವನು) ಉಕಾರವೆಂದು ಹೇಳುವ ಇಚ್ಛೆಯಿರುವಲ್ಲಿ ಉತ್ಕರ್ಷವು ಸ್ಫುಟವಾಗಿ ಎಂದರೆ ಸ್ಪಷ್ಟವಾಗಿ ಕಾಣುತ್ತದೆ ಎಂದರ್ಥ. ಉಭಯತ್ವವೂ ಸ್ಫುಟವಾಗಿಯೇ (ಕಾಣುತ್ತದೆ). ಎಲ್ಲವನ್ನೂ ಹಿಂದಿನ (ಶ್ಲೋಕ)ದಂತೆಯೇ (ಅರ್ಥಮಾಡಿಕೊಳ್ಳಬೇಕು).

**ಮಕಾರಭಾವೇ ಪ್ರಾಜ್ಞಸ್ಯ ಮಾನಸಾಮಾನ್ಯಮುತ್ಕಟಮ್ ।**
**ಮಾತ್ರಾಸಂಪ್ರತಿಪತ್ತೌ ತು ಲಯಸಾಮಾನ್ಯಮೇವ ಚ ॥ ೨೧ ॥**

೨೧. ಪ್ರಾಜ್ಞನು ಮಕಾರವಾಗುವಲ್ಲಿ, (ಅವನು) ಮಾತ್ರೆಯೆಂದು ಇಟ್ಟುಕೊಳ್ಳುವಲ್ಲಿಯಾದರೋ, ಮಾನ ಎಂಬ ಹೋಲಿಕೆಯು ಉತ್ಕಟವಾಗಿರುವದು, ಲಯವೆಂಬ ಹೋಲಿಕೆಯೂ (ಉತ್ಕಟವಾಗಿರುವದು).

(ಭಾಷ್ಯ)

೬೫. ಮಕಾರತ್ವೇ ಪ್ರಾಜ್ಞಸ್ಯ ಮಿತಿಲಯೌ ಉತ್ಕೃಷ್ಟೇ[2] ಸಾಮಾನ್ಯೇ ಇತ್ಯರ್ಥಃ ॥

(ಭಾಷ್ಯಾರ್ಥ)

ಪ್ರಾಜ್ಞನಿಗೆ ಮಕಾರಸ್ವರೂಪ(ವನ್ನು ಹೇಳು)ವಲ್ಲಿ ಮಿತಿ, ಲಯ-ಎಂಬ ಹೋಲಿಕೆಗಳು ಉತ್ಕೃಷ್ಟವಾಗಿರುವವು-ಎಂದರ್ಥ.[3]

---

1. 'ಸ್ಪಷ್ಟಃ' ಅ॥

2. ಇಲ್ಲಿ 'ಉತ್ಕಟೇ' ಎಂದಿದ್ದು ಬರೆದವರು ಹೀಗೆ ಮಾರ್ಪಡಿಸಿಕೊಂಡಿರಬೇಕೆಂದು ತೋರುತ್ತದೆ.

3. ಉಪನಿಷತ್ತಿನ ಭಾಷ್ಯದಲ್ಲಿ ವಿವರಿಸಿರುವದರಿಂದ ಇಲ್ಲಿ ಪ್ರತಿಪದದ ಅರ್ಥವನ್ನೂ ಬೇರೆಯಾಗಿ ಕೊಟ್ಟಿಲ್ಲ.

## ಪಾದಮಾತ್ರೆಗಳ ಹೋಲಿಕೆಯ ಜ್ಞಾನಕ್ಕೆ ಫಲ

**ತ್ರಿಷು ಧಾಮಸು ಯಸ್ತುಲ್ಯಂ[1] ಸಾಮಾನ್ಯಂ ವೇತ್ತಿ ನಿಶ್ಚಿತಃ ।**
**ಸ ಪೂಜ್ಯಃ ಸರ್ವಭೂತಾನಾಂ ವನ್ದ್ಯಶ್ಚೈವ ಮಹಾಮುನಿಃ ॥ ೨೨ ॥**

೨೨. ಮೂರು ಸ್ಥಲಗಳಲ್ಲಿಯೂ ಯಾವನು ಸಮಾನವಾಗಿರುವ ಹೋಲಿಕೆಯನ್ನು ನಿಶ್ಚಿತವಾಗಿ ತಿಳಿದುಕೊಂಡಿರುವನೋ ಅವನು ಸರ್ವಭೂತಗಳಿಗೂ ಪೂಜ್ಯನು, ಮತ್ತು ಈ ಮಹಾಮುನಿಯೇ ವಂದ್ಯನು.[2]

(ಭಾಷ್ಯ)

೬೬. ಯಥೋಕ್ತಸ್ಥಾನತ್ರಯೇ ಯಃ[3] ತುಲ್ಯಮ್ ಉಕ್ತಂ ಸಾಮಾನ್ಯಂ ವೇತ್ತಿ ಏವಮೇವ ಏತತ್ ಇತಿ ನಿಶ್ಚಿತಃ ಸನ್ ಸಃ ಪೂಜ್ಯಃ ವನ್ದ್ಯಶ್ಚ ಬ್ರಹ್ಮವಿತ್ ಲೋಕೇ ಭವತಿ ॥

(ಭಾಷ್ಯಾರ್ಥ)

ಮೇಲೆ ಹೇಳಿದ ಅವಸ್ಥಾತ್ರಯದಲ್ಲಿಯೂ (ಎರಡಕ್ಕೂ) ಸಮಾನವಾಗಿರುವ[4] (ನಾವು) ಹೇಳಿರುವ ಹೋಲಿಕೆಯನ್ನು ಹೀಗೆಯೇ ಸರಿ ಎಂದು ನಿಶ್ಚಯವನ್ನು ಮಾಡಿಕೊಂಡವನಾಗಿ ಯಾವನು ಅರಿತುಕೊಂಡಿರುವನೋ ಆ ಬ್ರಹ್ಮಜ್ಞಾನಿಯು ಲೋಕದಲ್ಲಿ ಪೂಜ್ಯನೂ ನಮಸ್ಕಾರಕ್ಕೆ ಅರ್ಹನೂ ಆಗಿರುವನು.[5]

**ಅಕಾರೋ ನಯತೇ ವಿಶ್ವಮುಕಾರಶ್ಚಾಪಿ ತೈಜಸಮ್ ।**
**ಮಕಾರಶ್ಚ ಪುನಃ ಪ್ರಾಜ್ಞಂ ನಾಮಾತ್ರೇ ವಿದ್ಯತೇ ಗತಿಃ ॥ ೨೩ ॥**

೨೩. ಅಕಾರವು ವಿಶ್ವನಲ್ಲಿಗೆ ಒಯ್ಯುತ್ತದೆ; ಉಕಾರವೂ ತೈಜಸನಲ್ಲಿಗೆ ಒಯ್ಯುವದು; ಮತ್ತು ಮಕಾರವಾದರೋ ಪ್ರಾಜ್ಞನಲ್ಲಿಗೆ ಒಯ್ಯುವದು. ಅಮಾತ್ರದಲ್ಲಿ ಗತಿಯಿರುವದಿಲ್ಲ.

---

1. 'ಯತ್ತುಲ್ಯಂ' ಆ॥ ಮ್ಯೆ॥

2. ಈತನೇ ಮಹಾಮುನಿಯು ಎಂದು ಕನ್ನಡಿಸುವದಕ್ಕಿಂತ ಹೀಗೆ ಕನ್ನಡಿಸುವದು ಒಳ್ಳೆಯದು; ಏಕೆಂದರೆ ಇಂಥ ಮಹಾಮನನವುಳ್ಳವನಾದ್ದರಿಂದ ಪೂಜ್ಯನೂ ವಂದ್ಯನೂ ಆಗಿರುತ್ತಾನೆ ಎಂದು ಈ ಜ್ಞಾನವನ್ನು ಹೊಗಳಿದಂತಾಗುತ್ತದೆ.

3. ಆ॥ ಮ್ಯೆ॥ ಗಳಲ್ಲಿಲ್ಲ; ಮುಂದೆ 'ನಿಶ್ಚಿತಃ ಯಃ' ಎಂದಿದೆ.

4. ಪಾದಗಳಿಗೂ ಮಾತ್ರೆಗಳಿಗೂ ಇರುವ.

5. ಏಕೆಂದರೆ ಈ ಜ್ಞಾನದಿಂದ ಪರಮಾರ್ಥಸ್ವರೂಪವಾದ ಬ್ರಹ್ಮರೂಪವಾದ ಓಂಕಾರವನ್ನು ತಿಳಿದುಕೊಳ್ಳುತ್ತಾನೆ.

(ಭಾಷ್ಯ)

೬೭. ಯಥೋಕ್ತೈಃ ಸಾಮಾನ್ಯೈಃ ಆತ್ಮಪಾದಾನಾಂ ಮಾತ್ರಾಭಿಃ ಸಹ ಏಕತ್ವಂ ಕೃತ್ವಾ ಯಥೋಕ್ತೋಙ್ಕಾರಂ ಪ್ರತಿಪದ್ಯ ಯೋ ಧ್ಯಾಯತಿ[1] ತಮ್ ಅಕಾರಃ ನಯತೇ ವಿಶ್ವಂ ಪ್ರಾಪಯತಿ। ಅಕಾರಾಲಮ್ಬನಮ್ ಓಂಕಾರಂ ವಿದ್ವಾನ್ ವೈಶ್ವಾನರೋ ಭವತಿ ಇತ್ಯರ್ಥಃ। ತಥಾ ಉಕಾರಃ ತೈಜಸಮ್। ಮಕಾರಶ್ಚಾಪಿ ಪುನಃ ಪ್ರಾಜ್ಞಮ್। ಚಶಬ್ದಾತ್ 'ನಯತೇ' ಇತಿ ಅನುವರ್ತತೇ। ಕ್ಷೀಣೇ ತು ಮಕಾರೇ ಬೀಜಭಾವಕ್ಷಯಾತ್ ಅಮಾತ್ರೇ ಓಂಕಾರೇ ಗತಿಃ ನ ವಿದ್ಯತೇ ಕ್ವಚಿತ್ ಇತ್ಯರ್ಥಃ॥

(ಭಾಷ್ಯಾರ್ಥ)

ಹಿಂದೆ ಹೇಳಿರುವ ಹೋಲಿಕೆಗಳಿಂದ ಆತ್ಮನ ಪಾದಗಳನ್ನು ಮಾತ್ರೆಗಳೊಡನೆ ಒಂದುಗೂಡಿಸಿಕೊಂಡು[2] ಹಿಂದೆ ಹೇಳಿರುವ ಓಂಕಾರವನ್ನು ಅರಿತುಕೊಂಡು[3] ಯಾವನು ಧ್ಯಾನಮಾಡುವನೋ, ಅವನನ್ನು ಅಕಾರವು ವಿಶ್ವನಲ್ಲಿಗೆ ಒಯ್ಯುತ್ತದೆ, ವಿಶ್ವವನ್ನು ಸೇರಿಸುತ್ತದೆ; **ಅಕಾರಾಲಂಬನವಾಗಿ ಓಂಕಾರವನ್ನು ಅರಿತುಕೊಂಡವನು ವೈಶ್ವಾನರನಾಗುತ್ತಾನೆ ಎಂದರ್ಥ.**[4] ಇದರಂತೆ ಉಕಾರವು ತೈಜಸನಲ್ಲಿಗೆ ಒಯ್ಯುತ್ತದೆ; ಮತ್ತು ಮಕಾರವಾದರೋ ಪ್ರಾಜ್ಞನಲ್ಲಿಗೆ ಸೇರಿಸುತ್ತದೆ. (ಇಲ್ಲಿ) ಚ (ಊ ಎಂಬ) ಶಬ್ದವು ಇರುವದರಿಂದ 'ನಯತೇ' (ಒಯ್ಯುತ್ತದೆ) ಎಂಬ (ಮಾತು ಇಲ್ಲಿಗೂ) ಸೇರಿಕೊಳ್ಳುತ್ತದೆ. ಆದರೆ ಮಕಾರವು ಇಲ್ಲವಾದರೆ ಬೀಜರೂಪವು ಹೋಗಿಬಿಡುವದರಿಂದ[5] ಅಮಾತ್ರವಾದ ಓಂಕಾರದಲ್ಲಿ ಎಲ್ಲಿಗೂ ಹೋಗಬೇಕಾದದ್ದು ಇರುವದಿಲ್ಲ ಎಂದರ್ಥ.



---

1. 'ಪ್ರತಿಪದ್ಯತೇ ಯೋ ಧ್ಯಾಯೀ' ಎಂಬ ವಾ॥ ಪಾಠಕ್ಕಿಂತ ಈ ಆ॥ ಕಾ॥ ಪಾಠವೇ ಉತ್ತಮ.

2. ಅಕಾರವು ವಾಚಕ, ವಿಶ್ವನು ವಾಚ್ಯ–ಎಂಬ ಭೇದವಿಲ್ಲ. ವಾಚ್ಯವಾಚಕರೂಪವಾಗಿರುವದೆಲ್ಲವೂ ವಿಶ್ವನು ಅಥವಾ ಅಕಾರವು ಎಂದು ಯಾವನು ಅರಿತುಕೊಳ್ಳುವನೋ ಅವನಿಗೆ ವಿಶ್ವನೆಂಬ ಪಾದವೂ ಅಕಾರವೂ ಒಂದಾಗಿರುವವು. ಉಕಾರಮಕಾರಗಳನ್ನೂ ಹೀಗೆಯೇ ಅರಿಯಬೇಕು.

3. ವಾಚ್ಯವಾಚಕಭೇದರಹಿತವಾಗಿರುವ ಪರಮಾರ್ಥತತ್ತ್ವವೆಂಬ ಓಂಕಾರವೇ ಇದು ಎಂದರಿತು ಎಂದರ್ಥ.

4. ಅಕಾರವೇ ಓಂಕಾರವು, ತತ್ತ್ವವು–ಎಂದರಿತವನು, ವೈಶ್ವಾನರನಾಗುತ್ತಾನೆ. "ಅಕಾರಪ್ರಧಾನವಾಗಿರುವ ಓಂಕಾರವು" ಎಂಬ ಆ॥ ವ್ಯಾಖ್ಯಾನವು ಸರಿಯಲ್ಲ.

5. ತೈಜಸನನ್ನು ಅಥವಾ ಉಕಾರವನ್ನು ಅರಿತಾಗ ವಿಶ್ವ ಅಥವಾ ಅಕಾರವು ಇರುವದಿಲ್ಲ; ಹೀಗೆ ಪ್ರಾಜ್ಞನನ್ನು ಅಥವಾ ಮಕಾರವನ್ನು ಅರಿತಾಗ ತೈಜಸ ಅಥವಾ ಉಕಾರವು ಇರುವದಿಲ್ಲ; ನಿಜವಾದ ಓಂಕಾರವನ್ನು ಅಥವಾ ತುರೀಯಾತ್ಮನನ್ನು ಅರಿತಾಗ ಮಕಾರವೂ ಇಲ್ಲ, ಮತ್ತೆಲ್ಲಿಗೂ ಹೋಗುವದೂ ಇಲ್ಲ, ಎಂದರೆ ಇನ್ನೊಂದು ಅರಿಯತಕ್ಕದ್ದೂ ಇರುವದಿಲ್ಲ.

# ೪. ಉಪನಿಷತ್ತು

## ಅಮಾತ್ರವಾದ ಓಂಕಾರ

**ಅಮಾತ್ರಶ್ಚತುರ್ಥೋಽವ್ಯವಹಾರ್ಯಃ ಪ್ರಪಞ್ಚೋಪಶಮಃ**
**ಶಿವೋಽದ್ವೈತ ಏವಮೋಙ್ಕಾರ ಆತ್ಮೈವ ಸಂವಿಶತ್ಯಾತ್ಮನಾ**
**ತ್ಮಾನಂ ಯ ಏವಂ ವೇದ ಯ ಏವಂ ವೇದ ॥ ೧೨ ॥**

೧೨. ಅಮಾತ್ರವಾದ ಚತುರ್ಥವು ಅವ್ಯವಹಾರ್ಯವಾದ, ಪ್ರಪಂಚೋಪಶಮವಾದ, ಶಿವವಾದ, ಅದ್ವೈತವು. ಹೀಗೆ ಓಂಕಾರವು ಆತ್ಮನೇ. ಯಾವನು ಹೀಗೆಂದು ಅರಿಯುವನೋ ಅವನು ತನ್ನಿಂದ ತನ್ನನ್ನು ಸೇರುವನು; ಯಾವನು ಹೀಗೆಂದು ಅರಿಯುವನೋ (ಅವನು ತನ್ನಿಂದ ತನ್ನನ್ನು ಸೇರುವನು).

(ಭಾಷ್ಯ)

೬೮. ಅಮಾತ್ರಃ ಮಾತ್ರಾಃ ಯಸ್ಯ ನ ಸನ್ತಿ ಸಃ ಅಮಾತ್ರಃ ಚತುರ್ಥಃ ತುರೀಯಃ ಆತ್ಮೈವ ಕೇವಲಃ ಅಭಿಧಾನಾಭಿಧೇಯರೂಪಯೋಃ ವಾಙ್ಮನಸಯೋಃ ಕ್ಷೀಣತ್ವಾತ್ ಅವ್ಯವಹಾರ್ಯಃ । ಪ್ರಪಞ್ಚೋಪಶಮಃ ಶಿವಃ ಅದ್ವೈತಃ ಸಂವೃತ್ತಃ । ಏವಂ ಯಥೋಕ್ತವಿಜ್ಞಾನವತಾ ಪ್ರಯುಕ್ತಃ ಓಂಕಾರಃ ತ್ರಿಮಾತ್ರಃ ತ್ರಿಪಾದಃ ಆತ್ಮೈವ । ಸಂವಿಶತಿ ಆತ್ಮನಾ ಸ್ವೇನೈವ ಸ್ವಂ ಪಾರಮಾರ್ಥಿಕಮ್ ಆತ್ಮಾನಂ ಯ ಏವಂ ವೇದ । ಪರಮಾರ್ಥದರ್ಶೀ ಬ್ರಹ್ಮವಿತ್[1] ತೃತೀಯಂ ಬೀಜಭಾವಂ ದಗ್ಧ್ವಾ ಆತ್ಮಾನಂ ಪ್ರವಿಷ್ಟಃ ಇತಿ ನ ಪುನಃ ಜಾಯತೇ । ತುರೀಯಸ್ಯ ಅಬೀಜತ್ವಾತ್ । ನ ಹಿ ರಜ್ಜುಸರ್ಪಯೋಃ ವಿವೇಕೇ ರಜ್ಜ್ವಾಂ ಪ್ರವಿಷ್ಟಃ ಸರ್ಪಃ ಬುದ್ಧಿಸಂಸ್ಕಾರಾತ್ ಪುನಃ ಪೂರ್ವವತ್ ತದ್ವಿವೇಕಿನಾಮ್ ಉತ್ಥಾಸ್ಯತಿ । ಮನ್ದಮಧ್ಯಮಧಿಯಾಂ ತು ಪ್ರತಿಪನ್ನಸಾಧಕಭಾವಾನಾಂ ಸನ್ಮಾರ್ಗಗಾಮಿನಾಂ ಸಂನ್ಯಾಸಿನಾಂ ಮಾತ್ರಾಣಾಂ ಪಾದಾನಾಂ ಚ ಕ್ಲೃಪ್ತಸಾಮಾನ್ಯವಿದಾಂ ಯಥಾವತ್ ಉಪಾಸ್ಯಮಾನಃ ಓಙ್ಕಾರಃ ಬ್ರಹ್ಮಪ್ರತಿಪತ್ತಯೇ ಆಲಮ್ಬನೀಭವತಿ । ತಥಾ ಚ ವಕ್ಷ್ಯತಿ "ಆಶ್ರಮಾಸ್ತ್ರಿವಿಧಾಃ"[2] (೩-೧೬) ಇತ್ಯಾದಿ ॥

---

1. 'ಪರಮಾರ್ಥದರ್ಶಿನಾಂ ಬ್ರಹ್ಮವಿದಾಮ್' ಆ॥ ಮೈ॥ "ಪರಮಾರ್ಥದರ್ಶನಾತ್ ಬ್ರಹ್ಮವಿತ್" ವಾ॥ ಕಾ॥ ಎಂಬ ಪಾಠಗಳಿಗಿಂತ ಈ ಪಾಠವು ಮೇಲು.

2. "ಆಶ್ರಮಾಸ್ತ್ರಿವಿಧಾ ಹೀನ" ಇತ್ಯಾದಿ ಆ॥ ಕಾ॥; ಇಲ್ಲಿ 'ಹೀನಾ' ಎಂಬುದು ತಪ್ಪೇ.

(ಭಾಷ್ಯಾರ್ಥ)

ಅಮಾತ್ರವಾದ ಮಾತ್ರೆಗಳು ಯಾವದಕ್ಕೆ ಇಲ್ಲವೋ ಆ ಅಮಾತ್ರವಾದ ಓಂಕಾರವು[1] ಚತುರ್ಥವು, ನಾಲ್ಕನೆಯವನಾದ ಬರಿಯ ಆತ್ಮನೇ[2]. (ಅದು) ಅಭಿಧಾನ, ಅಭಿಧೇಯ-ಇವುಗಳ ರೂಪದಲ್ಲಿರುವ ವಾಕ್ಕು, ಮನಸ್ಸು-(ಈ) ಎರಡೂ ನಾಶವಾಗಿ ಬಿಟ್ಟಿರುವದರಿಂದ[3] ಅವ್ಯವಹಾರ್ಯ, ಪ್ರಪಂಚೋಪಶಮವಾದ,[4] ಶಿವನಾದ, ಅದ್ವೈತನಾದ (ಆತ್ಮನೇ) ಆಗಿ ಬಿಟ್ಟಿರುವದು. ಹೀಗೆ ಮೇಲೆ ಹೇಳಿರುವ ಅರಿವನ್ನುಳ್ಳಾತನು ಉಚ್ಚರಿಸಿದ ಓಂಕಾರವು ಮೂರು ಮಾತ್ರೆಗಳೂ ಮೂರು ಪಾದಗಳೂ ಇರುವ(ದಾ)ದರೂ) ಆತ್ಮನೇ[5]. ಯಾವನು ಹೀಗೆಂದು ತಿಳಿಯುವನೋ (ಅವನು) 'ಆತ್ಮನಾ' ಎಂದರೆ ತನ್ನಿಂದಲೇ 'ಆತ್ಮಾನಂ' ಎಂದರೆ ಪಾರಮಾರ್ಥಿಕವಾಗಿರುವ ತನ್ನ ಸ್ವರೂಪವನ್ನೇ ಚೆನ್ನಾಗಿ ಸೇರಿಕೊಳ್ಳುವನು. **ಪರಮಾರ್ಥವನ್ನು ಕಂಡುಕೊಂಡಿರುವ ಬ್ರಹ್ಮಜ್ಞಾನಿಯು ಮೂರನೆಯದಾದ ಬೀಜರೂಪವನ್ನು ಸುಟ್ಟು ಆತ್ಮ (ಸ್ವರೂಪವನ್ನು) ಪ್ರವೇಶಿಸಿರುವದರಿಂದ ಮತ್ತೆ ಹುಟ್ಟುವದಿಲ್ಲ. ಏಕೆಂದರೆ ತುರೀಯದಲ್ಲಿ ಬೀಜವು ಇರುವದಿಲ್ಲ**[6]. ಹಗ್ಗಹಾವುಗಳನ್ನು ವಿಂಗಡಿಸಿ ಅರಿತುಕೊಳ್ಳಲಾಗಿ ಹಗ್ಗದಲ್ಲಿ ಹೊಕ್ಕ ಹಾವು[7] ಬುದ್ಧಿಯ ಸಂಸ್ಕಾರದಿಂದ ಮತ್ತೂ ಮೊದಲಿನಂತೆ, ಅವುಗಳನ್ನು ವಿಂಗಡಿಸಿ ಅರಿತವರಿಗೆ ಹುಟ್ಟಿಕೊಳ್ಳುವದಿಲ್ಲವಷ್ಟೆ[8]. ಆದರೆ ಸಾಧಕಭಾವವನ್ನು ಹೊಂದಿ ಸನ್ಮಾರ್ಗದಲ್ಲಿ ನಡೆಯುವ ಅಲ್ಪಬುದ್ಧಿಯವರಿಗೂ ನಡುತರದ ಬುದ್ಧಿಯವರಿಗೂ[9] ಮಾತ್ರೆಗಳಿಗೂ ಪಾದಗಳಿಗೂ (ಹಿಂದೆ) ಕಲ್ಪಿಸಿರುವ ಹೋಲಿಕೆಯನ್ನು ಅರಿತು ಅದರಂತೆ ಓಂಕಾರವನ್ನು ಉಪಾಸನೆ ಮಾಡಿದರೆ (ಅದು) ಬ್ರಹ್ಮವನ್ನು ಪಡೆಯುವದಕ್ಕೆ ಆಲಂಬನವಾಗುತ್ತದೆ. ಆದ್ದರಿಂದಲೇ ಮುಂದೆ "ಆಶ್ರಮ (ದಲ್ಲಿರು)ವವರು ಮೂರು ಬಗೆ" (೩-೧೬) ಎಂದು ಮುಂತಾಗಿ (ಕಾರಿಕೆಯಲ್ಲಿ) ಹೇಳಿರುತ್ತಾರೆ.

---

1. ಓಂಕಾರವೆಂದರೆ ಪರಮಾರ್ಥತತ್ತ್ವವು; ಇದು ಶಬ್ದವಲ್ಲವಾದ್ದರಿಂದ ಇದಕ್ಕೆ ಮಾತ್ರೆಗಳಿರುವದಿಲ್ಲ.

2. ಹಿಂದೆ ಆತ್ಮನ ನಾಲ್ಕನೆಯ ಪಾದವೆಂದು ಹೇಳಿದ ಸ್ವರೂಪವೇ.

3. ಜ್ಞಾನದಿಂದ ಹುಸಿತೋರಿಕೆಯಾಗಿ ಅವುಗಳ ತಿರುಳು ಓಂಕಾರವೇ ಆಗಿಬಿಟ್ಟಿರುವದರಿಂದ.

4. 'ಅಮಾತ್ರಃ' ಎಂದು ವಿಶ್ವಾದಿವಾಚಕಗಳನ್ನು ಅಲ್ಲಗಳೆದಿರುವಂತೆ ಪ್ರಪಂಚೋಪಶಮಃ ಎಂದು ಅವಸ್ಥಾವಾಚಕಗಳನ್ನು ಅಲ್ಲಗಳೆದಿದೆ.

5. ಮಾತ್ರೆಗಳೂ ಪಾದಗಳೂ ಒಂದಾಗಿ ಪರಮಾರ್ಥವಾದ ಓಂಕಾರವೆಂಬ ತತ್ತ್ವವೇ ಆಗಿವೆ.

6. ಸುಷುಪ್ತಾತ್ಮನಲ್ಲಿರುವಂತೆ ಕಾರಣತ್ವವು ಇರುವುದಿಲ್ಲ.

7. ಹಗ್ಗವೆಂದು ನಿಶ್ಚಿತವಾಗಿ ತಿಳಿದುಬಂದ ತೋರಿಕೆಯ ಹಾವು.

8. ಹಾವಿನಂತೆ ತೋರಿದರೂ ನಿಜವಾಗಿ ಹಗ್ಗವೇ ಎಂಬ ನಿಶ್ಚಯವೇ ಇರುವದಲ್ಲವೆ?

9. ಮಂದಬುದ್ಧಿಯವರಿಗೆ ಪ್ರತೀಕವಾಗಿ ಮಧ್ಯಮಬುದ್ಧಿಯವರಿಗೆ ವಾಚಕವಾಗಿ ಉಪಾಸ್ಯವೆಂದು ತಿಳಿಯಬೇಕು. ಗೀ. ಭಾ. ೮-೧೩, ಭಾ. ಭಾ. ೫೦೮ ನೋಡಿ.

*

# ಕಾರಿಕೆ

---

## ಪರಮಾರ್ಥವಾದ ಓಂಕಾರ

(ಕಾರಿಕಾವಾಕ್ಯ)

**ಅತ್ರೈತೇ ಶ್ಲೋಕಾ ಭವನ್ತಿ—**

(ಕಾರಿಕಾವಾಕ್ಯಾರ್ಥ)

ಇಲ್ಲಿ ಈ ಶ್ಲೋಕಗಳು ಬಂದಿರುತ್ತವೆ.

**ಓಙ್ಕಾರಂ ಪಾದಶೋ ವಿದ್ಯಾತ್ ಪಾದಾ ಮಾತ್ರಾ ನ ಸಂಶಯಃ ।**
**ಓಙ್ಕಾರಂ ಪಾದಶೋ ಜ್ಞಾತ್ವಾ ನ ಕಿಂಚಿದಪಿ ಚಿನ್ತಯೇತ್ ॥**

೨೪. ಓಂಕಾರವನ್ನು ಪಾದ (ಪಾದ)ವಾಗಿ ಅರಿತುಕೊಳ್ಳಬೇಕು. ಪಾದಗಳೇ ಮಾತ್ರೆಗಳು, ಸಂಶಯವಿಲ್ಲ. ಓಂಕಾರವನ್ನು ಪಾದ (ಪಾದ) ವಾಗಿ ಅರಿತುಕೊಂಡು ಏನನ್ನೂ ಚಿಂತಿಸದಿರಬೇಕು.

(ಭಾಷ್ಯ)

೬೯. ಪೂರ್ವವತ್ ಅತ್ರ ಏತೇ ಶ್ಲೋಕಾ ಭವನ್ತಿ[1] । ಯಥೋಕ್ತೈಃ ಸಾಮಾನ್ಯೈಃ ಪಾದಾ ಏವ ಮಾತ್ರಾಃ ಮಾತ್ರಾಶ್ಚ ಪಾದಾಃ । ತಸ್ಮಾತ್ ಓಂಕಾರಂ ಪಾದಶಃ ವಿದ್ಯಾತ್ ಇತ್ಯರ್ಥಃ । ಏವಮ್ ಓಂಕಾರೇ ಜ್ಞಾತೇ ದೃಷ್ಟಾರ್ಥಮ್ ಅದೃಷ್ಟಾರ್ಥಂ ವಾ ನ ಕಿಂಚಿತ್[2] ಪ್ರಯೋಜನಂ ಚಿನ್ತಯೇತ್ ಕೃತಾರ್ಥತ್ವಾತ್ ಇತ್ಯರ್ಥಃ ॥

(ಭಾಷ್ಯಾರ್ಥ)

ಮೊದಲಿನಂತೆ ಈ (ವಿಷಯದಲ್ಲಿ) ಈ (ಮುಂದಿನ) ಶ್ಲೋಕಗಳು ಬಂದಿರುತ್ತವೆ. ಹಿಂದೆ ಹೇಳಿದ ಹೋಲಿಕೆಗಳಿರುವದರಿಂದ ಪಾದಗಳೇ ಮಾತ್ರೆಗಳು, ಮತ್ತು ಮಾತ್ರೆಗಳು ಪಾದಗಳು. ಆದ್ದರಿಂದ ಓಂಕಾರವನ್ನು ಪಾದ (ಪಾದ) ವಾಗಿ ಅರಿತುಕೊಳ್ಳಬೇಕು ಎಂದರ್ಥ. ಹೀಗೆ ಓಂಕಾರವನ್ನು ಅರಿತುಕೊಂಡಮೇಲೆ ದೃಷ್ಟಪ್ರಯೋ

---

1. 'ಭಾಷ್ಯದಲ್ಲಿ ಅತ್ರೈತೇ...... ಭವನ್ತಿ' ಎಂಬ ವಾಕ್ಯವು ಆ॥ ದಲ್ಲಿ ಬಿಟ್ಟಿದೆ; ಕಾ॥ ದಲ್ಲಿ "ಪೂರ್ವವತ್" ಬಿಟ್ಟಿದೆ.

2. 'ಕಿಂಚಿದಪಿ' ಕಾ॥ ಪಾ॥

ಜನವನ್ನಾಗಲಿ, ಅದೃಷ್ಟಪ್ರಯೋಜನವನ್ನಾಗಲಿ ಯಾವದನ್ನೂ ಯೋಚಿಸದೆ ಇರಬೇಕು. ಏಕೆಂದರೆ ಕೃತಾರ್ಥನಾಗಿರುತ್ತಾನೆ ಎಂದರ್ಥ.[1]

**ಯುಞ್ಜೀತ ಪ್ರಣವೇ ಚೇತಃ ಪ್ರಣವೋ ಬ್ರಹ್ಮ ನಿರ್ಭಯಮ್ ।**
**ಪ್ರಣವೇ ನಿತ್ಯಯುಕ್ತಸ್ಯ ನ ಭಯಂ ವಿದ್ಯತೇ ಕ್ವಚಿತ್ ॥ ೨೫ ॥**

೨೫. ಪ್ರಣವದಲ್ಲಿ ಚೇತಸ್ಸನ್ನು ಯೋಜಿಸಬೇಕು. ಪ್ರಣವವು ನಿರ್ಭಯವಾದ ಬ್ರಹ್ಮವು. ಪ್ರಣವದಲ್ಲಿ ನಿತ್ಯಯುಕ್ತನಾಗಿರುವವನಿಗೆ ಎತ್ತಲೂ ಭಯವಿಲ್ಲ.

(ಭಾಷ್ಯ)

೭೦. ಯುಞ್ಜೀತ ಸಮಾದಧ್ಯಾತ್ ಯಥಾವ್ಯಾಖ್ಯಾತೇ ಪರಮಾರ್ಥರೂಪೇ ಪ್ರಣವೇ ಚೇತಃ ಮನಃ । ಯಸ್ಮಾತ್ ಪ್ರಣವಃ ಬ್ರಹ್ಮ ನಿರ್ಭಯಮ್ । ನ ಹಿ ತತ್ರ ಸದಾಯುಕ್ತಸ್ಯ ಭಯಂ ವಿದ್ಯತೇ ಕ್ವಚಿತ್ । "ವಿದ್ವಾನ್ ನ ಬಿಭೇತಿ ಕುತಶ್ಚನ" (ತೈ. ೨-೯) ಇತಿ ಶ್ರುತೇಃ ॥

(ಭಾಷ್ಯಾರ್ಥ)

ಮೇಲೆ ವಿವರಿಸಿರುವ ಪರಮಾರ್ಥರೂಪವಾದ ಓಂಕಾರದಲ್ಲಿ ಚೇತಸ್ಸನ್ನು ಮನಸ್ಸನ್ನು ಯೋಜಿಸಬೇಕು, ಸಮಾಧಾನಗೊಳಿಸಬೇಕು. ಏಕೆಂದರೆ ಪ್ರಣವವು ನಿರ್ಭಯವಾದ ಬ್ರಹ್ಮವು. ಅದರಲ್ಲಿ ಯಾವಾಗಲೂ (ಮನಸ್ಸನ್ನು) ನಿಲ್ಲಿಸಿಕೊಂಡವರಿಗೆ[2] ಎತ್ತಲೂ ಅಂಜಿಕೆಯು ಇರುವದೇ ಇಲ್ಲ. "ಅರಿತುಕೊಂಡಾತನು ಏತಕ್ಕೂ ಅಂಜುವದಿಲ್ಲ" (ತೈ. ೨-೯) ಎಂಬ ಶ್ರುತಿ ಇದಕ್ಕೆ ಪ್ರಮಾಣವು.

**ಪ್ರಣವೋ ಹ್ಯಪರಂ ಬ್ರಹ್ಮ ಪ್ರಣವಶ್ಚ ಪರಂ ಸ್ಮೃತಃ ।**
**ಅಪೂರ್ವೋಽನನ್ತರೋಽಬಾಹ್ಯೋಽನಪರಃ ಪ್ರಣವೋಽವ್ಯಯಃ ॥ ೨೬ ॥**

೨೬. ಪ್ರಣವವೇ ಕಡಿಮೆಯ ಬ್ರಹ್ಮವು, ಮತ್ತು ಪ್ರಣವವೇ ಹೆಚ್ಚಿನ ಬ್ರಹ್ಮವು. ಪ್ರಣವವು ಹಿಂದಿಲ್ಲದ್ದು, ಒಳಗಿಲ್ಲದ್ದು, ಹೊರಗಿಲ್ಲದ್ದು, ಮುಂದಿಲ್ಲದ್ದು, ಅವ್ಯಯವಾದದ್ದು.

---

1. ಯಾವದನ್ನೂ ಯೋಚಿಸದೆ ಇರಬೇಕು ಎಂದು ವಿಧಿಯಲ್ಲ. ಪರಮಾರ್ಥತತ್ತ್ವವಾದ ಪ್ರಣವವನ್ನು ಅರಿತರೆ ಮತ್ತೆ ಯಾವದರ ಬಯಕೆಯೂ ಇರುವದಿಲ್ಲ. ಆದ್ದರಿಂದ ಅರಿತುಕೊಳ್ಳಬೇಕು ಎಂದರ್ಥ.

2. ಜ್ಞಾನದಿಂದ ಅದರ ಸ್ವರೂಪವನ್ನೇ ಹೊಂದಿ ನಿಂತವರಿಗೆ.

(ಭಾಷ್ಯ)

೭೧. ಪರಾಪರೇ ಬ್ರಹ್ಮಣೀ ಪ್ರಣವಃ । ಪರಮಾರ್ಥತಃ ಕ್ಷೀಣೇಷು ಮಾತ್ರಾ ಪಾದೇಷು ಪರ ಏವ ಆತ್ಮಾ ಬ್ರಹ್ಮ ಇತಿ ನ ಪೂರ್ವಂ ಕಾರಣಮ್ ಅಸ್ಯ ವಿದ್ಯತೇ ಇತಿ ಅಪೂರ್ವಃ । ನಾಸ್ಯ ಅನ್ತರಂ ಭಿನ್ನಜಾತೀಯಂ ಕಿಂಚಿತ್ ವಿದ್ಯತೇ ಇತಿ ಅನನ್ತರಃ । ತಥಾ ಬಾಹ್ಯಮ್ ಅನ್ಯತ್ ನ ವಿದ್ಯತೇ ಇತಿ ಅಬಾಹ್ಯಃ । ಅಪರಂ ಕಾರ್ಯಮ್ ಅಸ್ಯ ನ ವಿದ್ಯತೇ ಇತಿ ಅನಪರಃ । ಸಬಾಹ್ಯಾಭ್ಯನ್ತರೋ ಹ್ಯಜಃ ಸೈನ್ಧವಘನವತ್ ಪ್ರಜ್ಞಾನಘನಃ ಇತ್ಯರ್ಥಃ ॥

(ಭಾಷ್ಯಾರ್ಥ)

ಹೆಚ್ಚಿನ ಮತ್ತು ಕಡಿಮೆಯ ಬ್ರಹ್ಮಗಳು ಪ್ರಣವವೇ.[1] ನಿಜವಾಗಿ (ನೋಡಿದರೆ) ಮಾತ್ರೆಗಳೂ ಪಾದಗಳೂ ಇಲ್ಲವಾಗಲು (ಪ್ರಣವವು) ಪರಮಾತ್ಮನಾದ ಬ್ರಹ್ಮವೇ ಆಗಿರುವದರಿಂದ ಇದಕ್ಕೆ ಪೂರ್ವವು ಎಂದರೆ ಕಾರಣವು ಇರುವದಿಲ್ಲವಾಗಿ ಅಪೂರ್ವವು. ಇದಕ್ಕೆ ಅಂತರವು ಎಂದರೆ ಬೇರೆಯ ಜಾತಿಯದು (ಯಾವದೂ ಒಳಗೆ) ಇರುವದಿಲ್ಲ; ಆದ್ದರಿಂದ ಇದು ಅನಂತರವು. ಹೀಗೆಯೇ ಹೊರಗೆ ಮತ್ತೊಂದು ಇಲ್ಲದ್ದರಿಂದ ಅಬಾಹ್ಯವಾದದ್ದು. ಅಪರವು ಎಂದರೆ (ಇದರ ಮುಂದೆ ಇರಬೇಕಾದ) ಕಾರ್ಯವು ಇದಕ್ಕೆ ಇರುವದಿಲ್ಲವಾಗಿ ಅನಪರವು[2]. (ಇದು) "ಹೊರಗೂ ಒಳಗೂ ಹುಟ್ಟಿಲ್ಲದೆ[3] "ಉಪ್ಪಿನ ಹರಳಿನಂತೆ ಅರಿವಿನ ಗಟ್ಟಿಯಾಗಿರುವದು"[4] ಎಂದು ಅರ್ಥ.

**ಸರ್ವಸ್ಯ ಪ್ರಣವೋ ಹ್ಯಾದಿರ್ಮಧ್ಯಮನ್ತಸ್ತಥೈವ ಚ ।**
**ಏವಂ ಹಿ ಪ್ರಣವಂ ಜ್ಞಾತ್ವಾ ವ್ಯಶ್ನುತೇ ತದನನ್ತರಮ್ ॥ ೨೭ ॥**

೨೭. ಎಲ್ಲಕ್ಕೂ ಪ್ರಣವವೇ ಮೊದಲು, ನಡುವೆ, ಮತ್ತು ಕೊನೆ. ಹೀಗೆಂದೇ ಪ್ರಣವವನ್ನು ಅರಿತುಕೊಂಡರೆ ತದನಂತರವೇ ಪಡೆಯುಕೊಳ್ಳುತ್ತಾನೆ.

1. ಉಪಾಧಿಯಿಂದ ಅಪರಬ್ರಹ್ಮ, ಉಪಾಧಿಯಿಲ್ಲದೆ ಪರಬ್ರಹ್ಮ. ಪ್ರಣವದ ಮೂಲಕ ಉಪಾಸನೆಮಾಡಿ ಅಥವಾ ವಿಚಾರಮಾಡಿ ತಿಳಿಯುವ ತತ್ತ್ವವಾದ್ದರಿಂದ ಅದನ್ನೂ ಪ್ರಣವವೆಂದಿದೆ.

2. ಬೃ. ೨-೫-೧೯ ಕಾರ್ಯಕಾರಣಭಾವವು ಇಲ್ಲದ್ದರಿಂದ ಬ್ರಹ್ಮವು ಪ್ರಣವಶಬ್ದವಾಚ್ಯವಲ್ಲ; ಪ್ರಣವವೆಂದಿಟ್ಟುಕೊಂಡದ್ದರ ಪರಮಾರ್ಥರೂಪವಾದ್ದರಿಂದ ಅದನ್ನೂ ಪ್ರಣವವೆಂದು ಕರೆದಿರುತ್ತದೆ, ಅಷ್ಟೆ.

3. ಮುಂ. ೨-೧-೨.

4. ಬೃ. ೪-೫-೧೩.

(ಭಾಷ್ಯ)

೭೨. ಆದಿಮಧ್ಯಾನ್ತಾಃ ಉತ್ಪತ್ತಿಸ್ಥಿತಿಪ್ರಲಯಾಃ ಸರ್ವಸ್ಯ ಪ್ರಣವ[1] ಏವ । ಮಾಯಾಹಸ್ತಿರಜ್ಜುಸರ್ಪಮೃಗತೃಷ್ಣಿಕಾಸ್ವಪ್ನಾದಿವತ್ ಉತ್ಪದ್ಯಮಾನಸ್ಯ ವಿಯದಾದಿ ಪ್ರಪಞ್ಚಸ್ಯ ಯಥಾ ಮಾಯಾವ್ಯಾದಯಃ । ಏವಂ ಹಿ ಪ್ರಣವಮ್ ಆತ್ಮಾನಂ ಮಾಯಾ ವ್ಯಾದಿಸ್ಥಾನೀಯಂ ಜ್ಞಾತ್ವಾ ತತ್ಕ್ಷಣಾದೇವ ತದಾತ್ಮಭಾವಂ ವ್ಯಶ್ನುತೇ ಇತ್ಯರ್ಥಃ ॥

(ಭಾಷ್ಯಾರ್ಥ)

ಮಾಯೆಯ ಆನೆ, ಹಗ್ಗದ ಹಾವು, ಬಿಸಿಲುಕುದುರೆ, ಕನಸು-ಮುಂತಾದವುಗಳಂತೆ ಹುಟ್ಟುತ್ತಿರುವ[2] ಆಕಾಶಾದಿಪ್ರಪಂಚಕ್ಕೆ ಮಾಯಾವಿ ಮೊದಲಾದವರಂತೆ[3] ಪ್ರಣವವೇ ಮೊದಲುನಡುವೆಕೊನೆಗಳು, ಎಂದರೆ ಹುಟ್ಟು, ಇರವು, ನಾಶ-ಇವುಗಳು. ಹೀಗೆಂದು ಪ್ರಣವವನ್ನು ಮಾಯಾವಿಯೇ ಮೊದಲಾದವರಂತೆ ಇರುವ ಆತ್ಮನನ್ನು ಅರಿತುಕೊಂಡರೆ ಆ ಕ್ಷಣದಲ್ಲಿಯೇ[4] ಅದರ ಸ್ವರೂಪವನ್ನು ಹೊಂದಿಬಿಡುತ್ತಾನೆ ಎಂದರ್ಥ.

**ಪ್ರಣವಂ ಹೀಶ್ವರಂ ವಿದ್ಯಾತ್ ಸರ್ವಸ್ಯ ಹೃದಯೇ ಸ್ಥಿತಮ್ ।**
**ಸರ್ವವ್ಯಾಪಿನಮೋಙ್ಕಾರಂ ಮತ್ವಾ ಧೀರೋ ನ ಶೋಚತಿ ॥ ೨೮ ॥**

೨೮. ಪ್ರಣವವನ್ನು ಪ್ರತಿಯೊಬ್ಬನ ಹೃದಯದಲ್ಲಿಯೂ ಇರುವ ಈಶ್ವರನೆಂದು ತಿಳಿಯಬೇಕು. ಸರ್ವವ್ಯಾಪಿಯಾದ ಓಂಕಾರವನ್ನು ಅರಿತುಕೊಂಡ ಧೀರನು ಶೋಕಿಸುವದಿಲ್ಲ.

(ಭಾಷ್ಯ)

೭೩. ಸರ್ವಸ್ಯ ಪ್ರಾಣಿಜಾತಸ್ಯ ಸ್ಮೃತಿಪ್ರತ್ಯಯಾಸ್ಪದೇ ಹೃದಯೇ ಸ್ಥಿತಮ್ ಈಶ್ವರಂ ಪ್ರಣವಂ ವಿದ್ಯಾತ್ । ಸರ್ವವ್ಯಾಪಿನಂ ವ್ಯೋಮವತ್ ಓಂಕಾರಮ್ ಆತ್ಮಾನಮ್ ಅಸಂಸಾರಿಣಮ್ ಧೀರಃ[5] ಬುದ್ಧಿಮಾನ್[6] ಮತ್ವಾ ಜ್ಞಾತ್ವಾ[7] ನ ಶೋಚತಿ । ಶೋಕನಿಮಿತ್ತಾನುಪಪತ್ತೇಃ । "ತರತಿ ಶೋಕಮಾತ್ಮವಿತ್" (ಛಾಂ. ೭-೧-೩) ಇತ್ಯಾದಿಶ್ರುತಿಭ್ಯಃ ॥

---

1. ಆ॥ ಪಾಠದಲ್ಲಿಲ್ಲ.
2. ಹುಟ್ಟುವಂತೆ ತೋರುವ, ಹುಸಿ ತೋರಿಕೆಯಾದ.
3. ಹಗ್ಗ, ಮರುಭೂಮಿ, ಕನಸನ್ನು ಕಾಣುವವ-ಇವರಂತೆ.
4. ಅರಿತ ಕ್ಷಣದಲ್ಲಿಯೇ, ಕಾಲಾಂತರದಲ್ಲಿ ಅಲ್ಲ.
5. 'ಧೀಮಾನ್' ಎಂದು ವಾ॥ ದಲ್ಲಿ ಹೆಚ್ಚು.
6. ಇದಾದ ಬಳಿಕ 'ಅತ್ಮತತ್ತ್ವಮ್' ಎಂದು ಹೆಚ್ಚಾಗಿ ವಾ॥ ಕಾ॥
7. ಈ ಮಾತು ವಾ॥ ದಲ್ಲಿದೆ.

(ಭಾಷ್ಯಾರ್ಥ)

ಪ್ರಾಣಿಸಮೂಹಕ್ಕೆಲ್ಲ ನೆನಪು, ಅರಿವು-ಇವುಗಳಿಗೆ ಆಧಾರವಾಗಿರುವ ಹೃದಯದಲ್ಲಿರುವ[1] ಈಶ್ವರನೇ ಪ್ರಣವ ಎಂದು ಅರಿಯಬೇಕು. ಆಕಾಶದಂತೆ ಎಲ್ಲವನ್ನೂ ವ್ಯಾಪಿಸಿಕೊಂಡು ಇರುವ ಓಂಕಾರವನ್ನು ಎಂದರೆ ಸಂಸಾರಿಯಲ್ಲದ ಆತ್ಮನನ್ನು ಅರಿತುಕೊಂಡರೆ, ಮನವರಿಕೆಮಾಡಿಕೊಂಡರೆ (ಆ) ಧೀರನು ಬುದ್ಧಿವಂತನು ಶೋಕಿಸುವದಿಲ್ಲ, ಏಕೆಂದರೆ ಶೋಕನಿಮಿತ್ತವು (ಆಗ) ಇರುವದಿಲ್ಲ. "ಆತ್ಮನನ್ನು ಅರಿತುಕೊಂಡವನು ಶೋಕವನ್ನು ದಾಟುತ್ತಾನೆ" (ಛಾಂ. ೭-೧-೩) ಮುಂತಾದ ಶ್ರುತಿಗಳು ಇದಕ್ಕೆ ಪ್ರಮಾಣವು

**ಅಮಾತ್ರೋಽನನ್ತಮಾತ್ರಶ್ಚ ದ್ವೈತಸ್ಯೋಪಶಮಃ ಶಿವಃ ।**
**ಓಂಙ್ಕಾರೋ ವಿದಿತೋ ಯೇನ ಸ ಮುನಿರ್ನೇತರೋ ಜನಃ ॥ ೨೯ ॥**

೨೯. ಅಮಾತ್ರವಾದ, ಅನಂತಮಾತ್ರವಾದ ದ್ವೈತದ ಉಪಶಮವಾದ, ಶಿವವಾದ ಓಂಕಾರವು ಯಾವನಿಂದ ಅರಿಯಲ್ಪಟ್ಟಿರುವದೋ ಅವನೇ ಮುನಿಯು, ಮಿಕ್ಕ ಜನವಲ್ಲ.

(ಭಾಷ್ಯ)

೭೪. ಅಮಾತ್ರಃ ತುರೀಯಃ ಓಂಕಾರಃ । ಮೀಯತೇ ಅನಯಾ ಇತಿ ಮಾತ್ರಾ ಪರಿಚ್ಛಿತ್ತಿಃ । ಸಾ ಅನನ್ತಾ ಯಸ್ಯ ಸಃ ಅನನ್ತಮಾತ್ರಃ । ನ ಏತಾವತ್ತ್ವಮ್ ಅಸ್ಯ ಪರಿಚ್ಛೇತ್ತುಂ ಶಕ್ಯತೇ ಇತ್ಯರ್ಥಃ । ಸರ್ವದ್ವೈತೋಪಶಮತ್ವಾದೇವ[2] ಶಿವಃ ಓಂಕಾರಃ ಯಥಾವ್ಯಾಖ್ಯಾತಃ ವಿದಿತಃ ಯೇನ ಸಃ ಪರಮಾರ್ಥತತ್ತ್ವಸ್ಯ ಮನನಾತ್ ಮುನಿಃ । ನೇತರೋ ಜನಃ ಶಾಸ್ತ್ರವಿದಪಿ ಇತ್ಯರ್ಥಃ ॥

(ಭಾಷ್ಯಾರ್ಥ)

ಮಾತ್ರೆಗಳಿಲ್ಲದ, ತುರೀಯನಾದ ಓಂಕಾರವು.[3] ಇದರಿಂದ ಅಳೆಯುತ್ತಾರೆ. ಆದ್ದರಿಂದ ಮಾತ್ರೆ ; ಎಂದರೆ (ಇಷ್ಟೆಂಬ) ಅಳತೆ ; ಅದು ಯಾವದಕ್ಕೆ ಕೊನೆಯಿಲ್ಲದೆ ಇರುವದೋ[4] ಅದು ಅನಂತಮಾತ್ರವು. ಅದನ್ನು ಇಷ್ಟೆಂದು ಗೊತ್ತುಪಡಿಸುವದಕ್ಕೆ

---

1. ಬುದ್ಧಿಗೆ ಸಾಕ್ಷಿಯಾಗಿರುವ. ಕೇ. ಭಾ. ೨-೪, ಛಾ. ಭಾ. ೫.೨.
2. ಇದರ ಹಿಂದೆ 'ದ್ವೈತಸ್ಯ ಉಪಶಮಃ' ಎಂಬ ಮಾತುಗಳು ಬಿಟ್ಟಿರಬೇಕೆಂದು ಕಾಣುತ್ತದೆ.
3. ಪರಮಾರ್ಥತತ್ತ್ವವು.
4. ಯಾವ ತತ್ತ್ವಕ್ಕೆ ದೇಶಕಾಲಗಳ ಕಟ್ಟು ಇಲ್ಲವೋ ಎಂದರ್ಥ.

ಆಗುವಹಾಗಿಲ್ಲ ಎಂದರ್ಥ. (ದ್ವೈತದ ಉಪಶಮವು ಅಭಾವವು).[1] ಯಾವ ದ್ವೈತವೂ ಇಲ್ಲದಿರುವದರಿಂದಲೇ ಶಿವ (ರೂಪವು). ಮೇಲೆ ವಿವರಿಸಿದಂಥ ಓಂಕಾರವು ಯಾವನಿಂದ ಅರಿಯಲ್ಪಟ್ಟಿರುವದೋ ಆವನು ಪರಮಾರ್ಥತತ್ತ್ವವನ್ನು ಮನನಮಾಡಿಕೊಂಡಿರುವದರಿಂದ ಮುನಿಯು; ಮಿಕ್ಕ ಮನುಷ್ಯನು ಶಾಸ್ತ್ರವನ್ನು ಬಲ್ಲವನಾದರೂ (ಮುನಿ) ಯಲ್ಲ[2] ಎಂದು ಅರ್ಥ.



1. ಈ ಅರ್ಥದ ಮಾತು ಭಾಷ್ಯದಲ್ಲಿರಬೇಕು.

2. ಮುಖ್ಯಾರ್ಥದಲ್ಲಿ ಮುನಿಯಲ್ಲ. ಬೃ. ೩-೫-೧ ರ ಮುನಿಃ ಎಂಬುದರ ಭಾಷ್ಯವನ್ನು ನೋಡಿ.

# ೨. ವೈತಥ್ಯಪ್ರಕರಣ

## ಈ ಪ್ರಕರಣದ ಸಂಬಂಧ

(ಭಾಷ್ಯ)

೭೫. ಓಂ[1] "ಜ್ಞಾತೇ ದ್ವೈತಂ ನ ವಿದ್ಯತೇ" (೧-೧೮) ಇತ್ಯುಕ್ತಮ್ । ಏಕಮೇವಾದ್ವಿತೀಯಮ್" (ಛಾಂ. ೬-೨-೧) ಇತ್ಯಾದಿಶ್ರುತಿಭ್ಯಃ । ಆಗಮಮಾತ್ರಂ ತತ್ । ತತ್ರ ಉಪಪತ್ತ್ಯಾಪಿ ದ್ವೈತಸ್ಯ ವೈತಥ್ಯಂ ಶಕ್ಯತೇ ಅವಧಾರಯಿತುಮ್ ಇತಿ ದ್ವಿತೀಯಂ ಪ್ರಕರಣಮ್ ಆರಭ್ಯತೇ । ವೈತಥ್ಯಮ್ ಇತ್ಯಾದಿನಾ–

(ಭಾಷ್ಯಾರ್ಥ)

ಓಂ! "ಅರಿತುಕೊಂಡರೆ ದ್ವೈತವಿರುವದಿಲ್ಲ" (೧-೧೮) ಎಂದು ಹಿಂದೆ ಹೇಳಿರುತ್ತವೆ. (ತನಗೆ) ಎರಡನೆಯದಿಲ್ಲದ ಒಂದೇ (ಆದ ಸತ್ತೇ ಆಗಿತ್ತು ಮೊದಲು, ಇದು) (ಛಾಂ. ೬-೨-೧) ಮುಂತಾದ ಶ್ರುತಿಗಳ ಪ್ರಮಾಣದಿಂದ (ಹೀಗೆಂದು ಹೇಳಿತ್ತು). ಅದು ಬರಿಯ ಆಗಮವು[2]. ಇಲ್ಲಿ[3] ಯುಕ್ತಿಯಿಂದಲೂ ದ್ವೈತವು ಸಟೆಯೆಂಬುದನ್ನು ಗೊತ್ತುಪಡಿಸುವದಕ್ಕೆ ಆಗುತ್ತದೆ[4]. ಎಂದು (ತಿಳಿಸುವದಕ್ಕಾಗಿ) 'ವೈತಥ್ಯಂ' ಮುಂತಾದ (ಈ) ಎರಡನೆಯ ಪ್ರಕರಣವನ್ನು ಆರಂಭಿಸಿರುತ್ತದೆ.

## ಕನಸಿನ ಪದಾರ್ಥಗಳು ಹುಸಿತೋರಿಕೆ

**ವೈತಥ್ಯಂ ಸರ್ವಭಾವಾನಾಂ ಸ್ವಪ್ನ ಆಹುರ್ಮನೀಷಿಣಃ ।**
**ಅನ್ತಃಸ್ಥಾನಾತ್ತು ಭಾವಾನಾಂ ಸಂವೃತತ್ವೇನ ಹೇತುನಾ ॥ ೧ ॥**

೧. ಪಂಡಿತರು, ಕನಸಿನಲ್ಲಿರುವ ಎಲ್ಲಾ ಭಾವಗಳಿಗೂ ವೈತಥ್ಯವನ್ನು ಹೇಳುವರು. ಭಾವಗಳು ಒಳಗೆ ಸಂವೃತವಾಗಿರುವವೆಂಬ ಕಾರಣದಿಂದ (ಹಾಗೆಂದು ಹೇಳುವರು).

---

1. ಓಂ! ಎಂಬ ಮಾತು ಪಾ॥ ಪಾಠವಲ್ಲಿಲ್ಲ. ಆದರೆ ಆಚಾರ್ಯರು ಮಂಗಲಕ್ಕಾಗಿಯೂ ಓಂಕಾರವನ್ನು ವಿವರಿಸುವ ಮಾಂಡೂಕ್ಯದ ಅಂಗವಾದ ವಿಚಾರವಿದೆಂಬುದನ್ನು ನೆನಪುಕೊಡುವದಕ್ಕಾಗಿಯೂ ಓಂಕಾರವನ್ನು ಉಪಯೋಗಿಸಿರಬೇಕೆಂದು ತೋರುತ್ತದೆ.

2. ಶ್ರುತ್ಯರ್ಥವನ್ನು ತಿಳಿಸುವ ಉಪದೇಶವು.

3. ಈ ಆತ್ಮವಿಚಾರದಲ್ಲಿ.

4. ಶ್ರುತ್ಯರ್ಥವನ್ನು ದೃಢಪಡಿಸುವದಕ್ಕೆ ಬೇಕಾಗುವ ಯುಕ್ತಿಯಿಂದ, ಸ್ವತಂತ್ರ ಯುಕ್ತಿಯಿಂದಲ್ಲ. ಪೀಠಿಕೆಯನ್ನು ನೋಡಿ.

(ಭಾಷ್ಯ)

೭೬. ವಿತಥಸ್ಯ ಭಾವಃ ವೈತಥ್ಯಮ್ । ಅಸತ್ಯತ್ವಮ್ ಇತ್ಯರ್ಥಃ । ಕಸ್ಯ ? ಸರ್ವೇಷಾಂ ಬಾಹ್ಯಾಧ್ಯಾತ್ಮಿಕಾನಾಂ ಭಾವಾನಾಂ ಪದಾರ್ಥಾನಾಂ ಸ್ವಪ್ನೇ ಉಪಲಭ್ಯಮಾನಾನಾಮ್ । ಆಹುಃ ಕಥಯನ್ತಿ, ಮನೀಷಿಣಃ ಪ್ರಮಾಣಕುಶಲಾಃ । ವೈತಥ್ಯೇ ಹೇತುಮಾಹ–ಅನ್ತಃಸ್ಥಾನಾತ್ । ಅನ್ತಃ ಶರೀರಸ್ಯ ಮಧ್ಯೇ ಸ್ಥಾನಂ ಯೇಷಾಮ್ । ತತ್ರ ಹಿ ಭಾವಾಃ ಉಪಲಭ್ಯನ್ತೇ ಪರ್ವತಹಸ್ತ್ಯಾದಯಃ ನ ಬಹಿಃ ಶರೀರಾತ್ । ತಸ್ಮಾತ್ ತೇ ವಿತಥಾ ಭವಿತುಮ್ ಅರ್ಹನ್ತಿ । ನನು ಅಪವರಕಾದ್ಯನ್ತರುಪಲಭ್ಯಮಾನೈಃ ಘಟಾದಿಭಿಃ ಅನೈಕಾನ್ತಿಕೋ ಹೇತುಃ ಇತ್ಯಾಶಙ್ಕ್ಯ ಆಹ-ಸಂವೃತತ್ವೇನ ಹೇತುನಾ ಇತಿ । ಅನ್ತಃ ಸಂವೃತೇ ಸ್ಥಾನಾತ್ ಇತ್ಯರ್ಥಃ । ನ ಹಿ ಅನ್ತಃ ಸಂವೃತೇ ದೇಹಾನ್ತರ್ನಾಡೀಷು ಪರ್ವತಹಸ್ತ್ಯಾದೀನಾಂ ಸಂಭವಃ ಅಸ್ತಿ । ನ ಹಿ ದೇಹೇ ಪರ್ವತಃ ಅಸ್ತಿ ॥

(ಭಾಷ್ಯಾರ್ಥ)

ವಿತಥದ (ಹಾಗಿಲ್ಲದ್ದರ) ಭಾವವು ವೈತಥ್ಯವು; ಅಸತ್ಯವಾಗಿರುವದು[1] ಎಂದರ್ಥ. ಯಾವದಕ್ಕೆ (ವೈತಥ್ಯವನ್ನು ಹೇಳುವರು)? ಎಂದರೆ ಸರ್ವಭಾವಗಳಿಗೂ ಹೊರಗಿನ ಮತ್ತು ನಮ್ಮೊಳಗಿನ ಕನಸಿನಲ್ಲಿ ಕಾಣುವ (ಎಲ್ಲಾ) ಪದಾರ್ಥಗಳಿಗೂ (ವೈತಥ್ಯವನ್ನು) ಹೇಳುತ್ತಾರೆ, ಮನೀಷಿಗಳು ಎಂದರೆ ಪ್ರಮಾಣವನ್ನು (ಸರಿಯಾಗಿ ಅರಿತಿರುವ) ಜಾಣರು[2] ತಿಳಿಸುತ್ತಾರೆ. (ಅವುಗಳ) ವೈತಥ್ಯಕ್ಕೆ ಕಾರಣವನ್ನು ಹೇಳುತ್ತಾರೆ: ಒಳಗೆ ಇರುವದರಿಂದ; ಒಳಗೆ ಎಂದರೆ ಶರೀರದ ಒಳಗಡೆಯಲ್ಲಿ ಇರವು ಯಾವ (ಪದಾರ್ಥ) ಗಳಿಗೆ ಇರುವವೋ (ಆ ಭಾವಗಳು ಅಂತಃಸ್ಥಾನಗಳು). ಪರ್ವತ, ಆನೆ–ಮುಂತಾದ ಭಾವಗಳು ಅಲ್ಲಿಯೇ ತೋರುವವೇ ಹೊರತು ಶರೀರದ ಹೊರಗೆ (ತೋರುವ)ದಿಲ್ಲ. ಆದ್ದರಿಂದ ಅವು ವಿತಥವಾಗಿರಬೇಕು. ಕೋಣೆಯೇ ಮುಂತಾದವುಗಳ ಒಳಗೆ ತೋರಿಬರುವ ಗಡಿಗೆಯೇ ಮುಂತಾದವುಗಳು (ಸತ್ಯವಾಗಿರುವದರಿಂದ

1. ವಿತಥ, ಅಸತ್ಯ, ಮಿಥ್ಯಾ–ಎಂಬ ಮಾತುಗಳಿಗೆ ಒಂದೇ ಅರ್ಥ; ಹುಸಿತೋರಿಕೆ, ನಿಜವಾಗಿ ಇಲ್ಲದೆ ತೋರುವ ಪದಾರ್ಥ–ಎಂದು ಈ ಶಬ್ದಗಳಿಗೆ ಅರ್ಥವೇ ಹೊರತು ಅತ್ಯಂತವಾಗಿ ಇಲ್ಲದ, ಎಂದರೆ ತೋರಿಕೊಳ್ಳುವದೂ ಇಲ್ಲದ ಬಂಜೆಯ ಮಗ, ಮೊಲದ ಕೊಂಬು–ಮುಂತಾದವುಗಳಂಥವೆಂದಲ್ಲ.

2. ಪ್ರತ್ಯಕ್ಷ, ಅನುಮಾನ, ಉಪಮಾನ, ಅರ್ಥಾಪತ್ತಿ, ಅನುಪಲಬ್ಧಿ, ಆಗಮ–ಎಂಬಿವು ಪ್ರಮಾಣಗಳು; ಚಾರ್ವಾಕರು ಮೊದಲನೆಯದನ್ನೂ, ವೈಶೇಷಿಕರು ಮೊದಲನೆಯ ಎರಡನ್ನೂ, ನೈಯಾಯಿಕರು ಮೊದಲನೆಯ ಮೂರು ಕೊನೆಯದೊಂದು–ಹೀಗೆ ನಾಲ್ಕನ್ನೂ, ಸಾಂಖ್ಯರು ಮೊದಲನೆಯದು ಎರಡು ಕೊನೆಯದೊಂದು–ಹೀಗೆ ಮೂರನ್ನೂ ಮೀಮಾಂಸಕರು ಎಲ್ಲವನ್ನೂ ಒಪ್ಪುತ್ತಿದ್ದರು. ಇಲ್ಲಿ ಮುಖ್ಯವಾಗಿ ಅನುಮಾನಪ್ರಮಾಣವನ್ನೇ ತೆಗೆದುಕೊಳ್ಳಬೇಕು.

ಅವು)ಗಳಿಗೆ (ಅನ್ವಯಿಸಿದರೆ) ಹೇತುವು **ಅನೈಕಾಂತಿಕವಾಗುವದಿಲ್ಲವೆ?**[1] ಎಂದು ಶಂಕಿಸಿದರೆ (ಅದಕ್ಕೆ) ಹೇಳುತ್ತಾರೆ: ಸಂವೃತವಾಗಿರುವ ಕಾರಣದಿಂದ ಎಂದರೆ ಒಳಗಡೆ ಸಂವೃತವಾಗಿರುವಲ್ಲಿ ಇರುವದರಿಂದ ಎಂದರ್ಥ. ಒಳಗಡೆಯಲ್ಲಿ ಇಕ್ಕಟ್ಟಾಗಿರುವ ದೇಹದೊಳಗಿನ ನಾಡಿಗಳಲ್ಲಿ[3] ಪರ್ವತ, ಆನೆ ಮುಂತಾದವು (ಇರುವ ಸಂಭವವೇ) ಇಲ್ಲ; ಶರೀರದಲ್ಲಿಯೇ ಪರ್ವತವಿರುವದಿಲ್ಲ[4].

(ಭಾಷ್ಯ)

೭೭. ಸ್ವಪ್ನದೃಶ್ಯಾನಾಂ ಭಾವಾನಾಮ್ ಅನ್ತಃ ಸಂವೃತೇ[5] ಸ್ಥಾನಮ್ ಇತ್ಯೇತತ್ ಅಸಿದ್ಧಮ್ । ಯಸ್ಮಾತ್ ಪ್ರಾಚ್ಯೇಷು ಸುಪ್ತಃ । ಉದಕ್ಷು ಸ್ವಪ್ನಾನ್ ಪಶ್ಯನ್ ಇವ ದೃಶ್ಯತೇ ಇತ್ಯೇತತ್ ಆಶಙ್ಕ್ಯ ಆಹ

(ಭಾಷ್ಯಾರ್ಥ)

(ಆಕ್ಷೇಪ):-ಕನಸಿನಲ್ಲಿ ಕಾಣುವ, ಭಾವಗಳು ಒಳಗೆ ಸಂವೃತವಾದ(ಕಡೆ)ಯಲ್ಲಿ ಇರುವವೆಂಬುದು **ಅಸಿದ್ಧ**[6]. ಏಕೆಂದರೆ ಪೂರ್ವ (ದೇಶ)ದಲ್ಲಿ ನಿದ್ರಿಸಿದವನಿಗೆ ಉತ್ತರ (ದೇಶ)ದಲ್ಲಿ ಕನಸುಗಳನ್ನು ಕಂಡಂತೆ ತೋರಿಬರುತ್ತದೆ.

1. ಸಾಧ್ಯವು ಇಲ್ಲದೆಡೆಯಲ್ಲಿಯೂ ಇರುವ ಹೇತು ಅನೈಕಾಂತಿಕವು; ಪ್ರಕೃತದಲ್ಲಿ ಸಾಧ್ಯವು ವೈತಥ್ಯ, ಅದಿಲ್ಲದ ಸತ್ಯತ್ವವಿರುವ ಗಡಿಗೆಯೇ ಮುಂತಾದವುಗಳಲ್ಲಿಯೂ ಅಂತಃ ಸ್ಥಾನತ್ವ (ಒಳಗೆ ಇರುವದು) ಎಂಬ ಹೇತುವಿದೆ. ಆದ್ದರಿಂದ ಇದು ಅನೈಕಾಂತಿಕವಾದ ನಿಶ್ಚಿತವಾಗಿ ಸಾಧ್ಯದಲ್ಲಿಯೇ ಇರುವವೆಂಬ ನಿಯಮವಿಲ್ಲದ, ಹೇತು-ಎಂದು ಭಾವ.

2. ಇಕ್ಕಟ್ಟಾದ ಸ್ಥಲದಲ್ಲಿ ಎಂದರ್ಥ. ಒಳಗಡೆ ಇರುವದೆಲ್ಲ ಹುಸಿಯೆಂದು ನಮ್ಮ ಅಭಿಪ್ರಾಯವಲ್ಲ; ತಾನಿರುವದಕ್ಕೆ ತಕ್ಕಷ್ಟು ದೇಶವಿಲ್ಲದೆಡೆಯಲ್ಲಿ ಇರುವಂತೆ ತೋರುವದೆಲ್ಲ ಹುಸಿಯೆನ್ನುತ್ತೇವೆ. ಈ ಹೇತು ಅನೈಕಾಂತಿಕವಲ್ಲ ಎಂದು ಅಭಿಪ್ರಾಯ.

3. ಕನಸು ನಾಡಿಗಳಲ್ಲಿರುವ ಜೀವನಿಗೆ ತೋರುವದೆಂದು ಶ್ರುತಿಪ್ರಸಿದ್ಧಿ ಬೃ. ೪-೩-೨೦.

4. ಇನ್ನು ಅದಕ್ಕಿಂತಲೂ ಇಕ್ಕಟ್ಟಾದ ನಾಡಿಯಲ್ಲಿ ಎಲ್ಲಿ ಬಂತು?

5. 'ಸಂವೃತಸ್ಥಾನಮ್' ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

6. ಒಳಗಿರುವದೆಂಬುದೇ ಸುಳ್ಳು ಎಂದಭಿಪ್ರಾಯ. ಹೇತುವೇ ಇಲ್ಲ, ಸಾಧ್ಯವೆಲ್ಲಿ ಬಂತು?-ಎಂದು ಆಕ್ಷೇಪ. ಬೆಟ್ಟದಲ್ಲಿ ಬೆಂಕಿಯಿರಬೇಕು ಏಕೆಂದರೆ ಅಲ್ಲಿ ಹೊಗೆಯಿದೆ-ಎಂಬಲ್ಲಿ ಬೆಟ್ಟವು ಪಕ್ಷವು, ಬೆಂಕಿಯು ಸಾಧ್ಯವು, ಹೊಗೆಯೆಂಬುದು ಹೇತು. ಹೀಗೆ ಹೇತುವಿನಿಂದ ಸಾಧ್ಯವನ್ನು ಗೊತ್ತುಪಡಿಸುವದು ಅನುಮಾನವು ಪ್ರಕೃತದಲ್ಲಿ 'ಕನಸಿನ ಭಾವಗಳು ವಿತಥ; ಏಕೆಂದರೆ ಅವು ಒಳಗೆ ಇಕ್ಕಟ್ಟಾದ ಸ್ಥಲದಲ್ಲಿವೆ' ಎಂಬ ಅನುಮಾನವನ್ನು ಹೊಡೆದುಹಾಕುವದಕ್ಕೆ ಪೂರ್ವಪಕ್ಷಿಯು ಹೇತುವಿದ್ದರೂ ಸಾಧ್ಯವಿರಬೇಕಾಗಿಲ್ಲ ಎಂದು ಮೊದಲು ಆಕ್ಷೇಪಿಸಿದ್ದನು, ಈಗ ಹೇತುವೇ ಇಲ್ಲ ಎಂದಿರುತ್ತಾನೆ.

ಈ ಆಕ್ಷೇಪವನ್ನು ಒಡ್ಡಿದರೆ (ಸಮಾಧಾನವನ್ನು) ಹೇಳುತ್ತಾರೆ:—

**ಅದೀರ್ಘತ್ವಾಚ್ಚ ಕಾಲಸ್ಯ ಗತ್ವಾ ದೇಶಾನ್ನ ಪಶ್ಯತಿ ।**
**ಪ್ರತಿಬುದ್ಧಶ್ಚ ವೈ ಸರ್ವಸ್ತಸ್ಮಿನ್ ದೇಶೇ ನ ವಿದ್ಯತೇ ॥ ೨ ॥**

೨. ಕಾಲವು ಹೆಚ್ಚಾಗಿಲ್ಲದ್ದರಿಂದ ದೇಶಗಳಿಗೆ ಹೋಗಿ ನೋಡುವನೆಂಬುದಿಲ್ಲ. ಮತ್ತು ಎಚ್ಚತ್ತವನು ಯಾವನೂ ಆ ದೇಶದಲ್ಲಿ ಇರುವದೂ ಇಲ್ಲ.

(ಭಾಷ್ಯ)

೭೮. ನ ದೇಹಾತ್ ಬಹಿಃ ದೇಶಾನ್ತರಂ ಗತ್ವಾ ಸ್ವಪ್ನಾನ್ ಪಶ್ಯತಿ। ಯಸ್ಮಾತ್ ಸುಪ್ತಮಾತ್ರ ಏವ ದೇಹದೇಶಾತ್ ಯೋಜನಶತಾನ್ತರಿತೇ ಮಾಸಮಾತ್ರ ಪ್ರಾಪ್ಯೇ ದೇಶೇ ಸ್ವಪ್ನಾನ್ ಪಶ್ಯನ್ನಿವ ದೃಶ್ಯತೇ। ನ ಚ ತದ್ದೇಶಪ್ರಾಪ್ತೇಃ ಆಗಮನಸ್ಯ ಚ ದೀರ್ಘಃ ಕಾಲಃ ಅಸ್ತಿ। ಅತಃ ಅದೀರ್ಘತ್ವಾಚ್ಚ ಕಾಲಸ್ಯ ನ ಸ್ವಪ್ನದೃಕ್ ದೇಶಾನ್ತರಂ ಗಚ್ಛತಿ। ಕಿಂ ಚ ಪ್ರತಿಬುದ್ಧಶ್ಚ ವೈ ಸರ್ವಃ ಸ್ವಪ್ನದೃಕ್ ಸ್ವಪ್ನದರ್ಶನ ದೇಶೇ ನ ವಿದ್ಯತೇ। ಯದಿ ಚ ಸ್ವಪ್ನೇ ದೇಶಾನ್ತರಂ ಗಚ್ಛೇತ್ ಯಸ್ಮಿನ್ ದೇಶೇ ಸ್ವಪ್ನಾನ್ ಪಶ್ಯೇತ್ ತತ್ರೈವ ಪ್ರತಿಬುಧ್ಯೇತ। ನ ಚ ಏತತ ಅಸ್ತಿ। ರಾತ್ರೌ ಸುಪ್ತಃ ಅಹನೀವ ಭಾವಾನ್ ಪಶ್ಯತಿ। ಬಹುಭಿಃ ಸಙ್ಗತೋ ಭವತಿ। ಯೈಶ್ಚ ಸಙ್ಗತಃ[1] ತೈಃ[2] ಗೃಹ್ಯೇತ। ನ ಚ ಗೃಹ್ಯತೇ। ಗೃಹೀತಶ್ಚೇತ್ 'ತ್ವಾಮ್ ಅದ್ಯ ತತ್ರ ಉಪಲಬ್ಧವನ್ತೋ ವಯಮ್' ಇತಿ ಬ್ರೂಯುಃ। ನ ಚ ಏತತ್ ಅಸ್ತಿ, ತಸ್ಮಾತ್ ನ ದೇಶಾನ್ತರಂ ಗಚ್ಛತಿ ಸ್ವಪ್ನೇ ॥

(ಭಾಷ್ಯಾರ್ಥ)

ಶರೀರದಿಂದ ಹೊರಗೆ (ಇರುವ) ಮತ್ತೊಂದು ಸ್ಥಲಕ್ಕೆ ಹೋಗಿ ಕನಸುಗಳನ್ನು ಕಾಣುವದಿಲ್ಲ. ಏಕೆಂದರೆ ನಿದ್ರಿಸಿದನೋ ಇಲ್ಲವೋ, ಶರೀರವಿರುವ ಸ್ಥಲದಿಂದ ನೂರು ಯೋಜನಗಳ ದೂರವಿರುವ ತಿಂಗಳು (ನಡೆದ)ರೇ ಸಿಕ್ಕುವ ಸ್ಥಲದಲ್ಲಿ ಕನಸುಗಳನ್ನು ಕಂಡಂತೆ[3] ತೋರಿಬರುತ್ತದೆ. ಆದರೆ ಆ ಸ್ಥಲವನ್ನು ಸೇರುವದಕ್ಕೂ (ಮತ್ತೆ) ಬರುವದಕ್ಕೂ (ತಕ್ಕಷ್ಟು) ದೀರ್ಘವಾದ ಕಾಲವು ಇರುವದಿಲ್ಲ. ಆದ್ದರಿಂದ ಕಾಲವು ದೀರ್ಘವಾಗಿಲ್ಲದ್ದರಿಂದ ಸ್ವಪ್ನವನ್ನು ನೋಡುವಾತನು ಮತ್ತೊಂದು ಸ್ಥಲಕ್ಕೆ ಹೋಗಿರುವ

---

1. "ಬಹುಭಿಃ ಸಙ್ಗತಃ ಯೈಶ್ಚ ಸಙ್ಗತೋ ಭವತಿ" ಆ॥

2. "ಸ ತೈಃ" ವಾ॥

3. ಇಲ್ಲಿ ಕಾಣುವದು ಸಟಿಯೆಂಬುದೇನೂ ಮುಖ್ಯವಲ್ಲ, ಕಾಣುವ ವಸ್ತುಗಳು ಮಿಥ್ಯೆಯೆಂಬುದನ್ನು ಸೂಚಿಸುವದಕ್ಕೆ 'ಕಂಡಂತೆ' ಎಂದು ಅಂತೆ ಶಬ್ದವನ್ನು ಪ್ರಯೋಗಿಸಿದೆ. ಆಕ್ಷೇಪದಲ್ಲಿ ಸಿದ್ಧಾಂತಿಯ ದೃಷ್ಟಿಯನ್ನು ಅವಲಂಬಿಸಿಯೇ "ಅಂತೆ" ಎಂದಿದೆ.

ದಿಲ್ಲ(ವೆಂದಾಯಿತು)[1] ಮತ್ತು ಕನಸುಕಾಣುವ ಯಾವನೂ ಎಚ್ಚತ್ತ (ಬಳಿಕ) ಆ ಸ್ಥಲದಲ್ಲಿ ಇರುವದೂ ಇಲ್ಲ. ಆದರೆ ಕನಸಿನಲ್ಲಿ ಬೇರೆ ಸ್ಥಲಕ್ಕೆ ಹೋಗಿದ್ದರೆ ಯಾವ ಸ್ಥಲದಲ್ಲಿ ಕನಸುಗಳನ್ನು ಕಾಣುವನೋ ಅಲ್ಲಿಯೇ ಎಚ್ಚರಬೇಕಾಗಿತ್ತು–ಇದು (ಹೀಗಿ) ಲ್ಲವೂ ಇಲ್ಲ.[2] ರಾತ್ರಿಯಲ್ಲಿ ನಿದ್ರಿಸಿದವನು ಹಗಲು ಹೊತ್ತಿನಲ್ಲಿ ಭಾವಗಳನ್ನು ಕಂಡಂತೆ ಆಗುವದು; (ಆಗ) ಅನೇಕರೊಡನೆ ಸೇರಿರುತ್ತಾನೆ (ಆಗ) ಯಾರೊಡನೆ ಸೇರಿದ್ದನೋ ಅವರಿಗೆ (ಆವನು ಅಲ್ಲಿಗೆ ಬಂದದ್ದು) ತಿಳಿದಿರಬೇಕು; ಆದರೆ ತಿಳಿದಿರುವದಿಲ್ಲ. (ಹಾಗೆ) ತಿಳಿದಿದ್ದರೆ "ನಿನ್ನನ್ನು ನಾವು ಇಂದು ಅಲ್ಲಿ ಕಂಡೆವು" ಎಂದು ಹೇಳಬೇಕಾಗಿತ್ತು ಇದು (ಹೀಗೂ) ಇಲ್ಲ. ಆದ್ದರಿಂದ ಸ್ವಪ್ನದಲ್ಲಿ ಮತ್ತೊಂದು ಸ್ಥಲಕ್ಕೆ ಹೋಗಿರುವ ದಿಲ್ಲ (ಎಂದು ನಿಶ್ಚಯವಾಗುತ್ತದೆ).

(ಭಾಷ್ಯ)

೬೯. ಇತಶ್ಚ ಸ್ವಪ್ನದೃಶ್ಯಾ ಭಾವಾ ವಿತಥಾಃ । ಯತಃ —

(ಭಾಷ್ಯಾರ್ಥ)

ಕನಸಿನಲ್ಲಿ ಕಾಣುವ ಭಾವಗಳು ಈ (ಕಾರಣ)ದಿಂದಲೂ ವಿತಥವಾಗಿರುತ್ತವೆ. ಏಕೆಂದರೆ:

**ಅಭಾವಶ್ಚ ರಥಾದೀನಾಂ ಶ್ರೂಯತೇ ನ್ಯಾಯಪೂರ್ವಕಮ್ ।**
**ವೈತಥ್ಯಂ ತೇನ ವೈ ಪ್ರಾಪ್ತಂ ಸ್ವಪ್ನ ಆಹುಃ ಪ್ರಕಾಶಿತಮ್ ॥ ೩ ॥**

೩ (ಕನಸಿನ) ರಥಾದಿಗಳು ಇಲ್ಲವೆಂದೂ ನ್ಯಾಯಪೂರ್ವಕವಾಗಿ ಶ್ರುತಿಯಲ್ಲಿ (ಹೇಳಿಯೂ ಇರುತ್ತದೆ). ಅದರಿಂದ ಸ್ವಪ್ನದಲ್ಲಿ ಪ್ರಾಪ್ತವಾದ ವೈತಥ್ಯವನ್ನು ಪ್ರಕಾಶಮಾಡಿರುತ್ತದೆ ಎಂದು ಹೇಳುವರು.

---

1. ನಿಜವಾಗಿ ಮತ್ತೊಂದು ಸ್ಥಲಕ್ಕೆ ಹೋಗಿರಬೇಕು. ಸ್ವಪ್ನದ ಪದಾರ್ಥಗಳೂ ಎಚ್ಚರದ ಪದಾರ್ಥಗಳಂತೆ ನಿಜವಾದವುಗಳಾದರೆ ಅವು ಲೋಕಾಂತರಕ್ಕೆ ಸೇರಿದವು ಎಂದು ಪೂರ್ವಪಕ್ಷಿಯ ಭಾವ. ಈ ಅಭಿಪ್ರಾಯವನ್ನು ಸೂ. ಭಾ. ೩-೨-೩ ರಲ್ಲಿಯೂ ಹೀಗೆಯೇ ಖಂಡಿಸಿದೆ.

2 ಎಚ್ಚರದವಸ್ಥೆಯಲ್ಲಿ ಕಾಣುವ ಕಾಶಿಗೆ ಹೋಗಿದ್ದಂತೆ ಕಾಣುವ ಕನಸಿನ ಕಾಶಿಯು ಅದೇ ಕಾಶಿಯಲ್ಲ; ಹೀಗೆಯೇ ಅಲ್ಲಿರುವ ಕಾಲವು ಎಚ್ಚರದ ಕಾಲವಲ್ಲ; ಜನರು ಎಚ್ಚರದ ಜನರಲ್ಲ. ಆದ್ದರಿಂದ ಇವನ್ನು ಕಂಡಂತೆ ಆದದ್ದು ಭ್ರಾಂತಿಯೇ. ಬೇರೆಯ ಕಾಶಿ ಮುಂತಾದವು ಕನಸಿನಲ್ಲಿ ನಿಜವಾಗಿರುವವೆನ್ನುವದಕ್ಕೆ ಯಾವ ಪ್ರಮಾಣವೂ ಇಲ್ಲ-ಎಂದು ಭಾವ.

(ಭಾಷ್ಯ)

೮೦. ಅಭಾವಶ್ಚ[1] ರಥಾದೀನಾಂ ಸ್ವಪ್ನದೃಶ್ಯಾನಾಂ ಶ್ರೂಯತೇ ನ್ಯಾಯಪೂರ್ವಕಂ ಯುಕ್ತಿತಃ ಶ್ರುತೌ "ನ ತತ್ರ ರಥಾಃ" (ಬೃ-೪-೩-೧೦) ಇತ್ಯತ್ರ । ತೇನ ಅನ್ತಃಸ್ಥಾನಸಂವೃತತ್ವಾದಿಹೇತುನಾ[2] ಪ್ರಾಪ್ತಂ ವೈತಥ್ಯಂ ತದನುವಾದಿನ್ಯಾ ಶ್ರುತ್ಯಾ ಸ್ವಪ್ನೇ ಸ್ವಯಂಜ್ಯೋತಿಷ್ಟ್ವಪ್ರತಿಪಾದನಪರಯಾ ಪ್ರಕಾಶಿತಮ್ ಆಹುಃ ಬ್ರಹ್ಮವಿದಃ ॥

(ಭಾಷ್ಯಾರ್ಥ)

"ಅಲ್ಲಿ ರಥಗಳಿರುವದಿಲ್ಲ" (ಬೃ. ೪-೩-೧೦) ಎಂಬಲ್ಲಿ ಕನಸಿನಲ್ಲಿ ಕಾಣುವ ರಥ ಮುಂತಾದವು ಇಲ್ಲವೆಂದು ನ್ಯಾಯಪೂರ್ವಕವಾಗಿ[3] ಯುಕ್ತಿಯಿಂದ ಶ್ರುತಿಯಲ್ಲಿ ಹೇಳಿಯೂ ಇರುತ್ತದೆ. ಆದರಿಂದ ಒಳಗೆ ಇಕ್ಕಟ್ಟಾದ ಸ್ಥಲದಲ್ಲಿರುವದೇ ಮುಂತಾದ ಹೇತುವಿನಿಂದ ಸಿದ್ಧವಾಗಿರುವ ವೈತಥ್ಯವನ್ನು, ಅದನ್ನು ಅನುವಾದಮಾಡಿಕೊಂಡು[4] ಕನಸಿನಲ್ಲಿ (ಆತ್ಮನು) ಸ್ವಯಂಜ್ಯೋತಿಯಾಗಿರುವನೆಂಬುದನ್ನು ತಾತ್ಪರ್ಯದಿಂದ ತಿಳಿಸುವದಕ್ಕೆ ಬಂದಿರುವ ಶ್ರುತಿಯು[5] (ಇದನ್ನು) ಪ್ರಕಾಶಪಡಿಸಿರುತ್ತದೆ ಎಂದು ಬ್ರಹ್ಮಜ್ಞಾನಿಗಳು[6] ಹೇಳುವರು.

---

1. "ಅಭಾವಶ್ಚೈವ" ಎಂದು ಮುದ್ರಿತಪಾಠಕ್ಕಿಂತ ಇದೇ ಮೇಲು.

2. "ದೇಹಾನ್ತಃಸ್ಥಾನ......." ಆ॥

3. "ಅಲ್ಲಿ ಗಾಡಿಗಳಿರುವದಿಲ್ಲ, ಗಾಡಿಗೆ ಕಟ್ಟುವ ಕುದುರೆ ಮುಂತಾದ ಪ್ರಾಣಿಗಳಿರುವದಿಲ್ಲ. ದಾರಿಗಳೂ ಇರುವದಿಲ್ಲ; ಆದರೂ ಗಾಡಿಗಳನ್ನೂ, ಕುದುರೆಗಳನ್ನೂ, ದಾರಿಗಳನ್ನೂ, ಸೃಷ್ಟಿಮಾಡಿಕೊಳ್ಳುತ್ತಾನೆ" ಎಂಬ ಶ್ರುತಿಯಲ್ಲಿ ಕನಸಿನಲ್ಲಿಯೇ ಸೃಷ್ಟವಾಗುವದರಿಂದ ಗಾಡಿಗಳು ಮುಂತಾದವು ನಿಜವಾಗಿ ಇರುವದಿಲ್ಲ ಎಂದು ಯುಕ್ತಿಯನ್ನು ಹೇಳಿದೆ. ಗಾಡಿ ಮುಂತಾದವು ನಿಜವಾಗಿದ್ದರೆ ಸೃಷ್ಟಿಸುತ್ತಾನೆ ಎಂಬ ಯುಕ್ತಿಯು ಹೊಂದುತ್ತಿರಲಿಲ್ಲ.

4. ಹೊಸ ವಿಷಯವನ್ನು ತಿಳಿಸುವದು ಪ್ರತಿಪಾದನೆ, ತಿಳಿದ ವಿಷಯವನ್ನು ಪ್ರತಿಪಾದನೆಗೆಂದು ಹೇಳಿಕೊಳ್ಳುವದು ಅನುವಾದ. ಇಲ್ಲಿ ಯುಕ್ತಿಸಿದ್ಧವಾದ ವೈತಥ್ಯವನ್ನೇ ಶ್ರುತಿಯು ಅನುವಾದಮಾಡಿಕೊಂಡಿದೆ.

5. ಸ್ವಯಂಜ್ಯೋತಿಷ್ಟ್ವವನ್ನು-ಆತ್ಮನು ಮತ್ತೊಂದರ ನೆರವನ್ನು ಕೋರದೆ ತಾನೇ ಬೆಳಗುವನೆಂಬುದನ್ನು-ಪ್ರತಿಪಾದನೆಮಾಡುವದಕ್ಕೆ ಶ್ರುತಿಯು ಕನಸಿನಲ್ಲಿ ಕಾಣುವ ಭಾವಗಳೆಲ್ಲವೂ ಮಿಥ್ಯೆಯೆಂದು ಅನುವಾದಮಾಡಿಕೊಂಡಿದೆ. ಕನಸಿನಲ್ಲಿರುವ ಸೂರ್ಯಚಂದ್ರಾದಿಗಳು ಯಾರೂ ಇಲ್ಲವಾದರೂ ಹುಸಿತೋರಿಕೆಯಾದ ಎಲ್ಲವನ್ನೂ ಜ್ಞಾನಪ್ರಕಾಶದಿಂದಲೇ ಬೆಳಗಿತೋರಿಸುತ್ತಾನೆ; ಆದ್ದರಿಂದ ಆವನು ಸ್ವಯಂಪ್ರಕಾಶನು-ಎಂದು ತಿಳಿಸುವದಕೆ ಅನುವಾದವು ಅವಶ್ಯವಾಗಿದೆ. ಕನಸಿನ ವಸ್ತುಗಳು ಸತ್ಯವಾದರೆ ಈ ಶ್ರುತಿಯು ಅಪ್ರಮಾಣವಾಗಬೇಕಾಗುತ್ತದೆ.

6. ವೇದಾರ್ಥವನ್ನು ಬಲ್ಲವರು.

## ಎಚ್ಚರದ ಭಾವಗಳು ಕನಸಿನವುಗಳಂತೆ ಹುಸಿಯೇ

**ಅನ್ತಃಸ್ಥಾನಾತ್ತು ಭೇದಾನಾಂ ತಸ್ಮಾಜ್ಜಾಗರಿತೇ ಸ್ಮೃತಮ್ ।**
**ಯಥಾ ತತ್ರ ತಥಾ ಸ್ವಪ್ನೇ ಸಂವೃತತ್ವೇನ ಭಿದ್ಯತೇ　　॥ ೪ ॥**

೪. ಆದ್ದರಿಂದ ಎಚ್ಚರದಲ್ಲಿರುವ ಭೇದಗಳಿಗೂ (ವೈತಥ್ಯವನ್ನು) ಹೇಳುವರು. ಅಲ್ಲಿ ಕನಸಿನಲ್ಲಿ ಹೇಗೋ ಇಲ್ಲಿಯೂ ಹಾಗೆಯೇ. (ಕನಸಿನ ಭಾವಗಳು) ಒಳಗೆ ಇಕ್ಕಟ್ಟಿನಲ್ಲಿರುವದರಿಂದ (ಕನಸು) ಭಿನ್ನವಾಗಿರುತ್ತದೆ.

(ಭಾಷ್ಯ)

೮೧. ಜಾಗ್ರದ್ದೃಶ್ಯಾನಾಂ ಭಾವಾನಾಂ ವೈತಥ್ಯಮ್ ಇತಿ ಪ್ರತಿಜ್ಞಾ । ದೃಶ್ಯತ್ವಾತ್ ಇತಿ ಹೇತುಃ । ಸ್ವಪ್ನದೃಶ್ಯಭಾವವತ್ ಇತಿ ದೃಷ್ಟಾನ್ತಃ । ಯಥಾ ತತ್ರ ಸ್ವಪ್ನೇ ದೃಶ್ಯಾನಾಂ ಭಾವಾನಾಂ ವೈತಥ್ಯಂ ತಥಾ ಜಾಗರಿತೇಽಪಿ ದೃಶ್ಯತ್ವಮ್ ಅವಿಶಿಷ್ಟಮ್ ಇತಿ ಹೇತೂಪನಯಃ । ತಸ್ಮಾತ್ ಜಾಗರಿತೇಽಪಿ ವೈತಥ್ಯಂ ಸ್ಮೃತಮ್ ಇತಿ ನಿಗಮನಮ್ । ಅನ್ತಃಸ್ಥಾನಾತ್ ಸಂವೃತತ್ವೇನ ಚ ಸ್ವಪ್ನದೃಶ್ಯಾನಾಂ ಭಾವಾನಾಂ ಜಾಗ್ರದ್ದೃಶ್ಯೇಭ್ಯೋ ಭೇದಃ । ದೃಶ್ಯತ್ವಮ್ ಅಸತ್ಯತ್ವಂ ಚ ಅವಿಶಿಷ್ಟಮ್ ಉಭಯತ್ರ ॥

(ಭಾಷ್ಯಾರ್ಥ)

ಎಚ್ಚರದಲ್ಲಿ ಕಾಣುವ ಭಾವಗಳಿಗೆ ವೈತಥ್ಯ (ವಿದೆ) ಎಂಬುದು **ಪ್ರತಿಜ್ಞೆಯು**[1] ಏಕೆಂದರೆ (ಅವು) ದೃಶ್ಯವಾಗಿವೆ ಎಂಬುದು **ಹೇತು**. ಕನಸಿನಲ್ಲಿ ಕಾಣುವ ಭಾವಗಳಂತೆಯೇ (ಅವು ದೃಶ್ಯವಾಗಿವೆ) ಎಂಬುದು **ದೃಷ್ಟಾಂತವು.** ಅಲ್ಲಿ ಕನಸಿನಲ್ಲಿ ಕಾಣಬರುವ ಭಾವಗಳಿಗೆ ಹೇಗೆ ವೈತಥ್ಯ (ವಿದೆಯೋ)[2] ಹಾಗೆಯೇ ಎಚ್ಚರದಲ್ಲಿಯೂ ದೃಶ್ಯತ್ವವು

1. ಎಚ್ಚರದಲ್ಲಿರುವ ಭಾವಗಳು ಮಿಥ್ಯೆಯೆಂಬುದನ್ನು ತಾರ್ಕಿಕರು ಒಪ್ಪುವದಿಲ್ಲ; ಆದರೆ ಕನಸಿನ ಭಾವಗಳು ಮಿಥ್ಯೆಯೆಂದು ಅವರು ಒಪ್ಪಿರುತ್ತಾರೆ. ಅವುಗಳನ್ನೂ ಸತ್ಯವೆನ್ನುವವರ ಪಕ್ಷವನ್ನು ಖಂಡಿಸಿಯೂ ಆಗಿದೆ. ಆದ್ದರಿಂದ ತಾರ್ಕಿಕರಿಗೆ ಒಪ್ಪಾದ ನ್ಯಾಯವೆಂಬ ಐದು ಅವಯವಗಳ ವಾಕ್ಯವನ್ನು ಪ್ರಯೋಗಿಸಿ ಅನುಮಾನಪ್ರಮಾಣದಿಂದ ಎಚ್ಚರದ ಮಿಥ್ಯಾತ್ವವನ್ನು ಸಾಧಿಸುತ್ತಾರೆ. ಸಾಧ್ಯವಾದದ್ದನ್ನು ಅದರ ಧರ್ಮಿಯಾದ ಪಕ್ಷದಲ್ಲಿರುವದೆಂದು ತಿಳಿಸುವದು ಪ್ರತಿಜ್ಞೆ. ದೃಷ್ಟಾಂತದಂತೆಯೇ ಪಕ್ಷದಲ್ಲಿಯೂ ಇರುವ ಸಮಾನಧರ್ಮವನ್ನು ಹೇಳಿ ಅದರಿಂದ ಸಾಧ್ಯವನ್ನು ಸಾಧಿಸುವದಕ್ಕೆ ಹೇಳುವ ವಾಕ್ಯವು ಹೇತು. ಸಾಧನವಿದ್ದರೆ ಸಾಧ್ಯವೂ ಇರುತ್ತದೆ ಎಂದು ಒಪ್ಪಿಸುವದಕ್ಕೆ ಕೊಡುವ ಹೋಲಿಕೆಯು ದೃಷ್ಟಾಂತವು. ದೃಷ್ಟಾಂತದಲ್ಲಿ ಹೇಗೆ ಸಾಧಕಧರ್ಮವಿದೆಯೋ ಪಕ್ಷದಲ್ಲಿಯೂ ಹಾಗೆಯೇ ಇದೆ ಎಂದು ಹೇಳುವದು ಉಪನಯವು. ಹೇತುವಿರುವದರಿಂದ ಪ್ರತಿಜ್ಞೆಯು ಸರಿ ಎಂದು ನಿಶ್ಚಯಿಸುವದು ನಿಗಮನವು. ಈ ಅವಯವಗಳ ವಿಚಾರದ ವಿವರವನ್ನು ತರ್ಕಶಾಸ್ತ್ರದಿಂದ ತಿಳಿಯಬೇಕು.

2. ಇಲ್ಲಿ ದೃಶ್ಯತ್ವವೇ ಸಾಧನವಾದ್ದರಿಂದ "ಯಥಾ ತತ್ರ ಸ್ವಪ್ನಭಾವಾನಾಂ ದೃಶ್ಯತ್ವಂ ತಥಾ ಜಾಗರಿತಭಾವಾನಾಮಪಿ" ಎಂದಿದ್ದರೆ ಸಾಕಾಗಿದೆ.

ಸಮಾನ (ವಾಗಿರುತ್ತದೆ) ಎಂಬುದು ಹೇತುವಿನ **ಉಪನಯವು.** ಆದ್ದರಿಂದ ಎಚ್ಚರದಲ್ಲಿಯೂ (ಭಾವಗಳಿಗೆ) ವೈತಥ್ಯ (ವುಂಟು)-ಎಂದು ಹೇಳುವರು ಎಂಬುದು **ನಿಗಮನವು.** ಒಳಗೆ ಇರುವದರಿಂದಲೂ ಇಕ್ಕಟ್ಟಾದ (ಸ್ಥಲದಲ್ಲಿರು) ವದರಿಂದಲೂ ಕನಸಿನಲ್ಲಿ ಕಾಣಬರುವ ಭಾವಗಳು ಎಚ್ಚರದಲ್ಲಿ ಕಾಣಬರುವ (ಭಾವ) ಗಳಿಗಿಂತ ಬೇರೆ (ಯಾಗಿರುತ್ತದೆ).[1] ದೃಶ್ಯವಾಗಿರುವದೂ ಅಸತ್ಯವಾಗಿರುವದೂ ಎರಡಕ್ಕೂ ಸಮಾನವು.

## ಕನಸಿಗೂ ಎಚ್ಚರಕ್ಕೂ ಭೇದವಿಲ್ಲ

**ಸ್ವಪ್ನಜಾಗರಿತಸ್ಥಾನೇ ಹ್ಯೇಕಮಾಹುರ್ಮನೀಷಿಣಃ ।**
**ಭೇದಾನಾಂ ಹಿ ಸಮತ್ವೇನ ಪ್ರಸಿದ್ಧೇನೈವ ಹೇತುನಾ ॥ ೫ ॥**

೫. ಕನಸು ಎಚ್ಚರ–ಎಂಬ ಸ್ಥಾನಗಳು (ಅವುಗಳಲ್ಲಿರುವ) ಭೇದಗಳು ಪ್ರಸಿದ್ಧವೇ ಆಗಿರುವ ಹೇತುವಿನಿಂದ ಸಮವಾಗಿರುವದರಿಂದ (ಎರಡೂ) ಒಂದೇ ಎಂದು ತಿಳಿದವರು ಹೇಳುತ್ತಾರೆ.

(ಭಾಷ್ಯ)

೮೨. ಪ್ರಸಿದ್ಧೇನೈವ ಭೇದಾನಾಂ ಗ್ರಾಹ್ಯತ್ವೇನ[2] ಹೇತುನಾ ಸಮತ್ವೇನ ಸ್ವಪ್ನಜಾಗರಿತಸ್ಥಾನಯೋಃ ಏಕತ್ವಮ್ ಆಹುಃ ವಿವೇಕಿನಃ ಇತಿ ಪೂರ್ವಪ್ರಮಾಣಸಿದ್ಧಸ್ಯೈವ ಫಲಮ್ ॥

(ಭಾಷ್ಯಾರ್ಥ)

ಪ್ರಸಿದ್ಧವೇ ಆಗಿರುವ, ಭೇದಗಳು ಅರಿಯಲ್ಪಡತಕ್ಕವುಗಳಾಗಿರುವವೆಂಬ ಹೇತುವಿನಿಂದ ಸಮವಾಗಿರುವದರಿಂದ[3] ಕನಸು ಎಚ್ಚರ–ಎಂಬ ಎರಡು ಸ್ಥಾನಗಳೂ ಒಂದೇ ಎಂದು ವಿವೇಕಿಗಳು ಹೇಳುತ್ತಾರೆ. ಹೀಗೆಂಬುದು ಹಿಂದಿನ ಪ್ರಮಾಣದಿಂದ ಸಿದ್ಧವಾಗಿರುವ (ವೈತಥ್ಯದ್ದೇ) ಫಲವು[4].

1. ಎಚ್ಚರದ ಶರೀರವನ್ನು ಮನಸಿನಲ್ಲಿಟ್ಟುಕೊಂಡು ಒಳಗೆ ಹೊರಗೆ ಎಂಬ ಮಾತುಗಳನ್ನು ಆಡಿರುತ್ತದೆ.

2. "ಗ್ರಾಹ್ಯಗ್ರಾಹಕತ್ವೇನ" ಎಂಬ ಪಾಠಕ್ಕಿಂತ ಈ॥ ಪಾ॥ ಪಾಠವು ಉತ್ತಮ.

3. ಎಚ್ಚರಕನಸುಗಳೆರಡರಲ್ಲಿರುವ ಭಾವಗಳೂ ದೃಶ್ಯ (ಅರಿಯಲ್ಪಡತಕ್ಕವು)ಗಳಾಗಿವೆ. ಆದ್ದರಿಂದ ಅವುಗಳಲ್ಲಿ ವೈತಥ್ಯಕ್ಕೆ ಬೇಕಾದ ಹೇತು ಸಮಾನವಾಗಿದೆ.

4. ಹಿಂದಿನ ಪ್ರಮಾಣವು ಅನುಮಾನವು: ಅದರಿಂದ ಸಿದ್ಧವಾಗಿರುವದು ವೈತಥ್ಯವು: ಅದರ ಫಲವೆಂದರೆ ಎಚ್ಚರ, ಕನಸು–ಎಂಬ ಎರಡೂ ಬೇರೆಬೇರೆಯ ಪ್ರಕಾರದ ಅವಸ್ಥೆಗಳಲ್ಲವೆಂಬುದು. ಆದ್ದರಿಂದಲೇ ಆಗಮಪ್ರಕರಣದಲ್ಲಿ ಈ ಎರಡನ್ನೂ ಸ್ವಪ್ನ ಎಂದು ಕರೆದಿದೆ.

(ಭಾಷ್ಯ)

೮೩. ಇತಶ್ಚ ವೈತಥ್ಯಂ ಜಾಗ್ರದ್ದೃಶ್ಯಾನಾಂ ಭೇದಾನಾಮ್ । ಆದ್ಯನ್ತಯೋಃ ಅಭಾವಾತ್ ।

(ಭಾಷ್ಯಾರ್ಥ)

ಎಚ್ಚರದಲ್ಲಿ ಕಾಣಬರುವ ಬೇರೆ ಬೇರೆಯ (ವಸ್ತು) ಗಳು ವಿತಥವೆಂಬುದಕ್ಕೆ ಇದೂ ಒಂದು ಕಾರಣವು. (ಅದೇನೆಂದರೆ ಅವುಗಳು) ಮೊದಲುಕೊನೆಗಳಲ್ಲಿ ಇಲ್ಲ ದಿರುವದಿಲ್ಲವಾದ್ದರಿಂದ (ಎಂಬುದು. ಅದು ಹೇಗೆಂದರೆ):—

**ಆದಾವನ್ತೇ ಚ ಯನ್ನಾಸ್ತಿ ವರ್ತಮಾನೇಽಪಿ ತತ್ತಥಾ ।**
**ವಿತಥೈಃ ಸದೃಶಾಃ ಸನ್ತೋಽವಿತಥಾ ಇವ ಲಕ್ಷಿತಾಃ ॥ ೬ ॥**

೬. ಮೊದಲೂ ಕೊನೆಯಲ್ಲಿಯೂ ಯಾವದು ಇಲ್ಲವೋ ಅದು ಈಗಲೂ ಹಾಗೆಯೇ. ವಿತಥಗಳಿಗೆ ಸಮಾನವಾಗಿದ್ದುಕೊಂಡು ಅವಿತಥ ವಾಗಿರುವಂತೆ ಕಾಣುತ್ತಿರುವವು.

(ಭಾಷ್ಯ)

೮೪. ಯತ್ ಆದೌ ಅನ್ತೇ ಚ ನಾಸ್ತಿ ವಸ್ತು ಮೃಗತೃಷ್ಣಿಕಾದಿ ತತ್ ಮಧ್ಯೇಽಪಿ ನಾಸ್ತಿ ಇತಿ ನಿಶ್ಚಿತಂ ಲೋಕೇ । ತಥಾ ಇಮೇ ಜಾಗ್ರದ್ದೃಶ್ಯಾ ಭೇದಾಃ ಆದ್ಯನ್ತಯೋಃ ಅಭಾವಾತ್ ವಿತಥೈರೇವ ಮೃಗತೃಷ್ಣಿಕಾದಿಭಿಃ ಸದೃಶತ್ವಾತ್ ವಿತಥಾ ಏವ । ತಥಾಪಿ ಅವಿತಥಾ ಇವ ಲಕ್ಷಿತಾ ಮೂಢೈಃ ಅನಾತ್ಮವಿದ್ಭಿಃ ॥

(ಭಾಷ್ಯಾರ್ಥ)

ಯಾವದು ಬಿಸಿಲುಕುದುರೆಯೇ ಮುಂತಾದ ವಸ್ತುವು ಮೊದಲೂ ಕೊನೆ ಯಲ್ಲಿಯೂ ಇರುವದಿಲ್ಲವೋ ಅದು ನಡುವಣ ಕಾಲದಲ್ಲಿಯೂ ಇರುವದಿಲ್ಲವೆಂದು ಲೋಕದಲ್ಲಿ ಗೊತ್ತಾಗಿರುತ್ತದೆ. ಈ ಎಚ್ಚರದಲ್ಲಿ ಕಾಣುವ ಭೇದಗಳು ಹಾಗೆಯೇ ಮೊದಲೂ ಕೊನೆಯಲ್ಲಿಯೂ ಇಲ್ಲದ್ದರಿಂದ ವಿತಥವೇ ಆಗಿರುವ ಬಿಸಿಲುಕುದುರೆಯೇ ಮುಂತಾದವುಗಳಿಗೆ ಸಮಾನವಾಗಿಯೇ ಇರುವದರಿಂದ (ಇವೂ) ಸುಳ್ಳೇ ಆದರೂ ಆತ್ಮ ವನ್ನರಿತುಕೊಳ್ಳದ ಇರುವ ಮೂಢರಿಗೆ ಅವು ವಿತಥವಲ್ಲದಂತೆ ಕಾಣುತ್ತಿರುವವು.

(ಭಾಷ್ಯ)

೮೫. ಸ್ವಪ್ನದೃಶ್ಯವತ್ ಜಾಗರಿತದೃಶ್ಯಾನಾಮಪಿ ಅಸತ್ತ್ವಮ್ ಇತಿ ಯತ್ ಉಕ್ತಮ್, ತತ್ ಅಯುಕ್ತಮ್ । ಯಸ್ಮಾತ್ ಜಾಗ್ರದ್ದೃಶ್ಯಾಃ ಅನ್ನಪಾನವಾಹನಾ ದಯಃ ಕ್ಷುತ್ಪಿಪಾಸಾದಿನಿವೃತ್ತಿಂ ಕುರ್ವನ್ತಃ ಗಮನಾಗಮನಾದಿಕಾರ್ಯಂ ಚ ಸಪ್ರ ಯೋಜನಾ ದೃಷ್ಟಾಃ । ನ ತು ಸ್ವಪ್ನದೃಶ್ಯಾನಾಂ ತತ್ ಅಸ್ತಿ । ತಸ್ಮಾತ್ ಸ್ವಪ್ನ ದೃಶ್ಯವತ್ ಜಾಗ್ರದ್ದೃಶ್ಯಾನಾಮ್ ಅಸತ್ತ್ವಂ ಮನೋರಥಮಾತ್ರಮ್ ಇತಿ । ತನ್ನ । ಕಸ್ಮಾತ್ ?

(ಭಾಷ್ಯಾರ್ಥ)

(ಆಕ್ಷೇಪ):—ಕನಸಿನ ದೃಶ್ಯಗಳಂತೆ ಎಚ್ಚರದ ದೃಶ್ಯಗಳೂ ಅಸತ್ತಾ(ಗಿವೆ) ಎಂದು ಹೇಳಿದಿರಲ್ಲ, ಅದು ಸರಿಯಲ್ಲ. ಏಕೆಂದರೆ ಎಚ್ಚರದ ದೃಶ್ಯಗಳಾದ ಅನ್ನ, ಪಾನ, ವಾಹನ-ಮುಂತಾದವು ಹಸಿವು, ಬಾಯಾರಿಕೆ-ಮುಂತಾದವನ್ನು ತೊಲಗಿಸುತ್ತಲೂ ಹೋಗುವದು, ಬರುವದು-ಮುಂತಾದ ಕೆಲಸವನ್ನು (ಮಾಡುತ್ತಲೂ) ಸಪ್ರಯೋಜನ ವಾಗಿರುವದು ಕಂಡುಬಂದಿದೆ. ಆದರೆ ಕನಸಿನ ದೃಶ್ಯಗಳಿಗೆ ಅದು ಇಲ್ಲ. ಆದ್ದರಿಂದ ಕನಸಿನ ದೃಶ್ಯಗಳಂತೆ ಎಚ್ಚರದ ದೃಶ್ಯಗಳೂ ಅಸತ್ತೆಂಬುದು ಬರಿಯ ಮನಸ್ಸಿನ ಕಲ್ಪನೆ.

(ಸಮಾಧಾನ);—ಹಾಗಲ್ಲ.

(ಆಕ್ಷೇಪ):—ಅದೇಕೆ?

**ಸಪ್ರಯೋಜನತಾ ತೇಷಾಂ ಸ್ವಪ್ನೇ ವಿಪ್ರತಿಪದ್ಯತೇ ।**
**ತಸ್ಮಾದಾದ್ಯನ್ತವತ್ತ್ವೇನ ಮಿಥ್ಯೈವ ಖಲು ತೇ ಸ್ಮೃತಾಃ ॥ ೭ ॥**

೭. ಅವುಗಳಿಗೆ (ಇರುವ) ಸಪ್ರಯೋಜನತ್ವವು ಕನಸಿನಲ್ಲಿ ವಿರುದ್ಧ ವಾದ ಅಭಿಪ್ರಾಯಕ್ಕೀಡಾಗುತ್ತದೆ. ಆದ್ದರಿಂದ ಆದ್ಯಂತಗಳಿರುವದರಿಂದ ಅವು ಮಿಥ್ಯೆಯೇ ಎನಿಸುವವು.

(ಭಾಷ್ಯ)

೮೬. ಯಸ್ಮಾತ್ ಸಪ್ರಯೋಜನತಾ ದೃಷ್ಟಾ ಯಾ[1] ಅನ್ನಪಾನಾದೀನಾಂ ಸಾ ಸ್ವಪ್ನೇ ವಿಪ್ರತಿಪದ್ಯತೇ। ಜಾಗರಿತೇ ಹಿ ಭುಕ್ತ್ವಾ ಪೀತ್ವಾ ಚ ತೃಪ್ತಃ ವಿನಿವರ್ತಿತ ತೃಟ್ ಸುಪ್ತಮಾತ್ರ ಏವ ಕ್ಷುತ್ಪಿಪಾಸಾದ್ಯಾರ್ತಮ್ ಅಹೋರಾತ್ರೋಪೋಷಿತಮ್[2] ಅಭುಕ್ತವನ್ತಮ್ ಆತ್ಮಾನಂ ಮನ್ಯತೇ। ಯಥಾ ಸ್ವಪ್ನೇ ಭುಕ್ತ್ವಾ ಪೀತ್ವಾ ಚ ತೃಪ್ತೋತ್ಥಿತಃ[3] ತಥಾ। ತಸ್ಮಾತ್ ಜಾಗ್ರದ್ದೃಶ್ಯಾನಾಂ ಸ್ವಪ್ನೇ ವಿಪ್ರತಿಪತ್ತಿಃ ದೃಷ್ಟಾ। ಅತಃ ಮನ್ಯಾಮಹೇ ತೇಷಾಮಪಿ ಅಸತ್ತ್ವಂ ಸ್ವಪ್ನದೃಶ್ಯವತ್ ಅನಾಶಙ್ಕನೀಯಮ್ ಇತಿ। ತಸ್ಮಾತ್ ಆದ್ಯನ್ತವತ್ತ್ವಮ್ ಉಭಯತ್ರ ಸಮಾನಮ್ ಇತಿ ಮಿಥ್ಯೈವ ಖಲು ತೇ ಸ್ಮೃತಾಃ॥

---

1. "ಯಾ ದೃಷ್ಟಾ" ಪಾ॥

2. "ಅಹೋರಾತ್ರೋಷಿತಮ್" ಆ॥

3. "ಅತೃಪ್ತೋತ್ಥಿತಃ" ಎಂಬ ಮುದ್ರಿತಪಾಠವನ್ನು ಹೀಗೆ ತಿದ್ದಿಕೊಂಡಿದೆ

(ಭಾಷ್ಯಾರ್ಥ)

ಏಕೆಂದರೆ ಅನ್ನ, ಪಾನ-ಮುಂತಾದವುಗಳಿಗೆ ಯಾವ ಸಪ್ರಯೋಜನತ್ವವು (ಎಚ್ಚರದಲ್ಲಿ) ಕಂಡು(ಬರುವ)ದೋ ಅದು ಕನಸಿನಲ್ಲಿ ವಿರುದ್ಧವಾದ ಅಭಿಪ್ರಾಯಕ್ಕೀಡಾಗುತ್ತದೆ. ಹೇಗೆಂದರೆ, ಎಚ್ಚರದಲ್ಲಿ ಉಂಡು (ನೀರು) ಕುಡಿದು ತೃಪ್ತನಾಗಿ ಬಾಯಾರಿಕೆಯನ್ನು ಹಿಂಗಿಸಿಕೊಂಡವನು ನಿದ್ರೆಹೋದನೋ ಇಲ್ಲವೋ, ಹಸಿವು ಬಾಯಾರಿಕೆಗಳಿಂದ ತಾನು ಸಂಕಟಪಡುತ್ತಿರುವಂತೆಯೂ ಹಗಲೂರಾತ್ರೆ ಉಪವಾಸ ಮಾಡಿ ಏನೂ ತಿನ್ನದೆ(ಕುಡಿಯದೆ) ಇರುವಂತೆಯೂ ಭಾವಿಸಿಕೊಳ್ಳುತ್ತಾನೆ. ಕನಸಿನಲ್ಲಿ ಉಂಡು (ನೀರು) ಕುಡಿದು ತೃಪ್ತಿಹೊಂದಿ ಎಚ್ಚತ್ತವನು ಹೇಗೆ (ಅತೃಪ್ತನಾಗಿಯೇ ನೀರಡಿಕೆಯಿಂದೊಡಗೂಡಿಯೇ ಇರುವನೋ) ಹಾಗೆಯೇ (ಇದು). ಆದ್ದರಿಂದ ಎಚ್ಚರದ ದೃಶ್ಯಗಳ ವಿಷಯಕ್ಕೆ ಕನಸಿನಲ್ಲಿ ವಿರುದ್ಧಾಭಿಪ್ರಾಯ(ವಾಗುವದು) ಕಂಡಿರುತ್ತದೆ. ಆದ್ದರಿಂದ ಕನಸಿನ ದೃಶ್ಯಗಳಂತೆಯೇ ಅವುಗಳೂ ಅಸತ್ತಾಗಿರುವವೆಂಬುದಕ್ಕೆ (ಯಾವ) ಶಂಕೆಯನ್ನೂ ಎತ್ತುವಹಾಗಿಲ್ಲವೆಂದು ನಮ್ಮ ಮತವು. ಆದ್ದರಿಂದ[1] ಮೊದಲುಕೊನೆಗಳಿರುವವೆಂಬುದು ಎರಡರಲ್ಲಿಯೂ ಸಮಾನವಾಗಿರುವದರಿಂದ ಅವು ಮಿಥ್ಯೆಯೇ ಎಂದೆನಿಸುವವು.

(ಭಾಷ್ಯ)

೮೭ ಸ್ವಪ್ನಜಾಗ್ರದ್ಭೇದಯೋಃ ಸಮತ್ವಾತ್ ಜಾಗ್ರದ್ಭೇದಾನಾಮ್ ಅಸತ್ತ್ವಮ್ ಇತಿ ಯದುಕ್ತಂ ತತ್ ಅಸತ್ । ಕಸ್ಮಾತ್ ? ದೃಷ್ಟಾನ್ತಸ್ಯ ಅಸಿದ್ಧತ್ವಾತ್ । ಕಥಮ್ । ನ ಹಿ ಜಾಗ್ರದ್ದೃಷ್ಟಾ ಏವ ಏತೇ[2] ಭೇದಾಃ ಸ್ವಪ್ನೇ ದೃಶ್ಯನ್ತೇ ।

---

1. ನಿಷ್ಪ್ರಯೋಜನತ್ವವು ಸ್ವಪ್ನದೃಶ್ಯಗಳಿಗಿರುವದರಿಂದ ಅವು ಮಿಥ್ಯೆಯಾಗಲಿ ; ಆದರೆ ಜಾಗ್ರದ್ದೃಶ್ಯಗಳಿಗೆ ಅದಿಲ್ಲದ್ದರಿಂದ ಅವು ಮಿಥ್ಯೆಯಲ್ಲ-ಎಂದು ಆಕ್ಷೇಪಕನು ಹಿಂದೆ ಹೇಳಿದ ಅನುಮಾನದಲ್ಲಿ ದೋಷವನ್ನು ತೋರಿಸಿದ್ದಾನೆ.

ಸಾಧ್ಯವ್ಯಾಪಕನಾಗಿ ಸಾಧನವ್ಯಾಪಕವಲ್ಲದೆ ಹೋದದ್ದು ಉಪಾಧಿ ಎನಿಸುವದು ; ಸೋಪಾಧಿಕವಾದ ಅನುಮಾನವು ಸರಿಯಾದ ಅನುಮಾನವಲ್ಲ-ಎಂದು ತಾರ್ಕಿಕರ ಮತ. ಪ್ರಕೃತದಲ್ಲಿ ಸಾಧ್ಯವು ಮಿಥ್ಯಾತ್ವ, ಸಾಧನವು ಆದ್ಯಂತವತ್ತ್ವ. ನಿಷ್ಪ್ರಯೋಜನತ್ತ್ವವು ಸಾಧ್ಯವಾದ ಮಿಥ್ಯಾತ್ವವಿರುವ ಸ್ವಪ್ನಾದಿಗಳಲ್ಲೆಲ್ಲ ಕಂಡಿದೆಯಾಗಿ ಸಾಧ್ಯವ್ಯಾಪಕ ; ಆದರೆ ಸಾಧನವಾದ ಆದ್ಯಂತವತ್ತ್ವವಿರುವ ಜಾಗ್ರದ್ದೃಶ್ಯಗಳಲ್ಲಿ ನಿಷ್ಪ್ರಯೋಜನತ್ತ್ವವಿಲ್ಲವಾಗಿ ಅದು ಸಾಧನವ್ಯಾಪಕವಲ್ಲ. ಹೀಗೆ ನಿಷ್ಪ್ರಯೋಜನತ್ವವೆಂಬ ಉಪಾಧಿಯಿರುವದರಿಂದ ಅನುಮಾನವು ಸರಿಯಲ್ಲ ಎಂದು ಆಕ್ಷೇಪಕನ ಅಭಿಪ್ರಾಯ. ಜಾಗ್ರದ್ದೃಶ್ಯಗಳ ಸಪ್ರಯೋಜನತ್ತ್ವವು ಕನಸಿನಲ್ಲಿ ತಪ್ಪುವದರಿಂದ ಆ ದೃಶ್ಯಗಳಲ್ಲಿಯೂ ನಿಷ್ಪ್ರಯೋಜನತ್ತ್ವವಿದೆ. ಆದ್ದರಿಂದ ನಿಷ್ಪ್ರಯೋಜನತ್ತ್ವವು ಸಾಧನವ್ಯಾಪಕವೂ ಆಗಿದೆ. ಆದಕಾರಣ ಅನುಮಾನವು ಸೋಪಾಧಿಕವಲ್ಲ, ಸರಿಯಾದ ಅನುಮಾನವೇ-ಎಂಬುದು ಸಮಾಧಾನವು.

2. "ನ ಹಿ ಜಾಗ್ರದ್ದೃಶ್ಯಾ ಏವ ತೇ" ಪಾ॥ ಕಾ॥

ಕಿಂ ತರ್ಹಿ? ಅಪೂರ್ವಂ ಸ್ವಪ್ನೇ ಪಶ್ಯತಿ। ಚತುರ್ದನ್ತಗಜಮ್[1] ಆರೂಢಮ್, ಅಷ್ಟಭುಜಮ್ ಆತ್ಮಾನಂ ಮನ್ಯತೇ[2]। ಅನ್ಯದಪಿ ಏವಂಪ್ರಕಾರಮ್ ಅಪೂರ್ವಂ ಪಶ್ಯತಿ ಸ್ವಪ್ನೇ। ತತ್ ನಾನ್ಯೇನ ಅಸತಾ ಸಮಮ್ ಇತಿ ಸದೇವ। ಅತೋ ದೃಷ್ಟಾನ್ತೋಽಸಿದ್ಧಃ। ತಸ್ಮಾತ್ ಸ್ವಪ್ನವತ್ ಜಾಗರಿತಸ್ಯ ಅಸತ್ತ್ವಮ್ ಇತಿ ಅಯುಕ್ತಮ್। ತನ್ನ। ಸ್ವಪ್ನೇ ದೃಷ್ಟಮ್ ಅಪೂರ್ವಂ ಯತ್ ಮನ್ಯಸೇ ನ ತತ್ ಸ್ವತಃಸಿದ್ಧಮ್। ಕಿಂ ತರ್ಹಿ?

(ಭಾಷ್ಯಾರ್ಥ)

(ಆಕ್ಷೇಪ) :—ಕನಸು, ಎಚ್ಚರ–(ಇವುಗಳಲ್ಲಿರುವ) ಬೇರೆಬೇರೆಯ (ಪದಾರ್ಥ) ಗಳು (ಒಂದೇ) ಸಮವಾಗಿರುವದರಿಂದ ಎಚ್ಚರದ ಭೇದಗಳು[3] ಅಸತ್ತಾಗಿರುತ್ತವೆ-ಎಂದು ಹೇಳಿತ್ತಲ್ಲ, ಅದು ಸರಿಯಲ್ಲ. ಏಕೆ? ಎಂದರೆ ದೃಷ್ಟಾಂತವೇ ಸಿದ್ಧವಾಗುವದಿಲ್ಲವಾದ್ದರಿಂದ. (ಅದು) ಹೇಗೆ? ಎಂದರೆ ಎಚ್ಚರದಲ್ಲಿ ಕಂಡ ಈ ಭೇದಗಳನ್ನೇ ಕನಸಿನಲ್ಲಿ (ಮನುಷ್ಯನು) ಕಾಣುವದಿಲ್ಲ, ಮತ್ತೇನೆಂದರೆ ಅಪೂರ್ವವಾದದ್ದನ್ನೂ ಕನಸಿನಲ್ಲಿ ಕಾಣುತ್ತಾನೆ. ನಾಲ್ಕುದಂತದ ಆನೆಯಮೇಲೆ ತಾನು ಹತ್ತಿ (ಕುಳಿತಿ)ರುವಂತೆಯೂ (ತನಗೆ) ಎಂಟುಭುಜಗಳಿರುವಂತೆಯೂ ಎಣಿಸುತ್ತಾನೆ. (ಇನ್ನೂ) ಬೇರೆಯ ಈ ಬಗೆಯ ಅಪೂರ್ವವನ್ನೂ ಕನಸಿನಲ್ಲಿ ಕಾಣುತ್ತಾನೆ. ಅದು ಬೇರೆ ಅಸತ್ತಾದ (ವಸ್ತುವಿಗೆ) ಸಮನಲ್ಲವಾದ್ದರಿಂದ ಸತ್ತೇ. ಆದ್ದರಿಂದ ದೃಷ್ಟಾಂತವು ಸಿದ್ಧವಾಗಲಿಲ್ಲ. ಆದ್ದರಿಂದ ಕನಸಿನಂತೆ ಎಚ್ಚರವು ಅಸತ್ತು ಎಂಬುದು ಸರಿಯಲ್ಲ.

(ಪರಿಹಾರ) :—ಇದು (ಸರಿ) ಯಲ್ಲ. ಕನಸಿನಲ್ಲಿ ಕಂಡದ್ದು ಅಪೂರ್ವವು ಎಂದು ಭಾವಿಸಿರುವೆಯಲ್ಲ, ಅದು ತಾನೇ ಇರುವದಲ್ಲ. ಮತ್ತೇನೆಂದರೆ:—

**ಅಪೂರ್ವಂ ಸ್ಥಾನಿಧರ್ಮೋ ಹಿ ಯಥಾ ಸ್ವರ್ಗನಿವಾಸಿನಾಮ್।**
**ತಾನಯಂ ಪ್ರೇಕ್ಷತೇ ಗತ್ವಾ ಯಥೈವೇಹ ಸುಶಿಕ್ಷಿತಃ ॥ ೮ ॥**

೮. ಅಪೂರ್ವವು ಸ್ಥಾನಿಧರ್ಮವೇ; ಸ್ವರ್ಗನಿವಾಸಿಗಳಿಗೆ ಹೇಗೆ (ಅಪೂರ್ವಧರ್ಮವಿರುವದೋ ಹಾಗೆ). ಇಲ್ಲಿ ಸುಶಿಕ್ಷಿತನಾದವನು ಹೇಗೋ (ಹಾಗೆ) ಇವನು ಅವುಗಳನ್ನು (ಅಲ್ಲಿಗೆ) ಹೋಗಿ ಕಾಣುತ್ತಾನೆ.

---

1. "ಚತುರ್ದನ್ತಂ ಗಜಮ್" ವಾ॥

2. ಕಾ॥ ದಲ್ಲಿಲ್ಲ.

3. ಭೇದ, ದೃಶ್ಯ, ಭಾವ–ಇವು ಪರ್ಯಾಯಶಬ್ದಗಳು; ವಿತಥ, ಅಸತ್, ಮಿಥ್ಯಾ–ಇವೂ ಪರ್ಯಾಯಗಳು.

(ಭಾಷ್ಯ)

೮೮. ಅಪೂರ್ವಂ ಸ್ಥಾನಿಧರ್ಮೋ ಹಿ ಸ್ಥಾನಿನಃ ದ್ರಷ್ಟುರೇವ ಹಿ ಸ್ವಪ್ನಸ್ಥಾನ ವತಃ ಧರ್ಮಃ । ಯಥಾ ಸ್ವರ್ಗನಿವಾಸಿನಾಮ್ ಇನ್ದ್ರಾದೀನಾಂ ಸಹಸ್ರಾಕ್ಷತ್ವಾದಿ ತಥಾ ಸ್ವಪ್ನದೃಶಃ ಅಪೂರ್ವೋಽಯಂ ಧರ್ಮಃ । ನ ಸ್ವತಃಸಿದ್ಧಃ ದ್ರಷ್ಟುಃ ಸ್ವರೂಪ ವತ್ । ತಾನ್ ಏವಂಪ್ರಕಾರಾನ್ ಅಪೂರ್ವಾನ್ ಸ್ವಚಿತ್ತವಿಕಲ್ಪಾನ್ ಅಯಂ ಸ್ಥಾನೀ[1] ಸ್ವಪ್ನದೃಕ್ ಸ್ವಪ್ನಸ್ಥಾನಂ ಗತ್ವಾ ಪ್ರೇಕ್ಷತೇ । ಯಥೈವ ಇಹಲೋಕೇ ಸುಶಿಕ್ಷಿತಃ ಸುಶಿಕ್ಷಿತದೇಶಾನ್ತರಮಾರ್ಗಃ[2] ತೇನ ಮಾರ್ಗೇಣ ದೇಶಾನ್ತರಂ ಗತ್ವಾ ತಾನ್ ಪದಾರ್ಥಾನ್ ಪಶ್ಯತಿ, ತದ್ವತ್ । ತಸ್ಮಾತ್ ಯಥಾ ಸ್ಥಾನಿಧರ್ಮಾಣಾಂ ರಜ್ಜುಸರ್ಪಮೃಗತೃಷ್ಣಿಕಾದೀನಾಮ್ ಅಸತ್ತ್ವಮ್, ತಥಾ ಸ್ವಪ್ನದೃಶ್ಯಾನಾಮಪಿ[3] ಅಪೂರ್ವಾಣಾಂ ಸ್ಥಾನಿಧರ್ಮತ್ವಮೇವ ಇತಿ ಅಸತ್ತ್ವಮ್ । ಅತಃ ನ ಸ್ವಪ್ನ ದೃಷ್ಟಾನ್ತಸ್ಯ ಅಸಿದ್ಧತ್ವಮ್ ॥

(ಭಾಷ್ಯಾರ್ಥ)

ಅಪೂರ್ವವಾದದ್ದು ಸ್ಥಾನಿಧರ್ಮವೇ, ಸ್ಥಾನಿಯಾದ ಕನಸೆಂಬ ಸ್ಥಾನವುಳ್ಳ ನೋಡುವಾತನದ್ದೇ ಧರ್ಮವು.[4] ಹೇಗೆ ಸ್ವರ್ಗದಲ್ಲಿರುವ ಇಂದ್ರಾದಿಗಳಿಗೆ ಸಾವಿರ ಕಣ್ಣಿರುವದು ಮುಂತಾದ (ಆಯಾ ಸ್ಥಾನಗಳದ್ದೇ ಧರ್ಮವೋ) ಹಾಗೆ ಕನಸನ್ನು ಕಾಣುವಾತನಿಗೆ ಇದು ಅಪೂರ್ವವಾಗಿ ಉಂಟಾಗುವ ಧರ್ಮವು,[5] ನೋಡುವಾತನ ಸ್ವರೂಪದಂತೆ ತಾನೇ ಇದ್ದುಕೊಂಡಿರುವದಲ್ಲ.[6] ಅವನ್ನು ಈ ಬಗೆಯ ಅಪೂರ್ವ ಗಳನ್ನು ತನ್ನ ಚಿತ್ತದ ವಿಕಲ್ಪಗಳನ್ನು[7] ಈ ಕನಸುಕಾಣುವ ಸ್ಥಾನಿಯು ಕನಸೆಂಬ

1. " ಸ್ಥಾನೀ ಯಃ " ಸಾ॥ ಕಾ॥

2. " ಸುಶಿಕ್ಷಿತೋ ದೇಶಾನ್ತರಮಾರ್ಗಃ " ಅ॥, " ಸುಶಿಕ್ಷಿತದೇಶಾನ್ತರಮಾರ್ಗಃ " ಸಾ॥

3. " ಅಪಿ " ಎಂಬುದು ಅ॥ ಮೈ॥ ಗಳಲ್ಲಿಲ್ಲ.

4. ತಾನೇ ಯಾವಾಗಲೂ ಹಾಗೆಯೇ ಅಲ್ಲಿ ಇದ್ದುಕೊಂಡಿರುವದಲ್ಲ.

5. ಕರ್ಮದ ಫಲವಾಗಿ ಇಂದ್ರನಾಗುವವನಿಗೇ ಹೊಸದಾಗಿ ಸಾವಿರಕಣ್ಣುಗಳುಂಟಾ ಗುವಂತೆ ಕನಸುಕಾಣುವಾಗ ಅದೇ ಜೀವನಿಗೇ ಹೊಸದಾಗಿ ಉಂಟಾಗುವ ಧರ್ಮವು.

6. ಆತ್ಮಸ್ವರೂಪವಾದ ಚೈತನ್ಯವು ಸ್ವತಃಸಿದ್ಧವಾದದ್ದು, ಮತ್ತೊಂದು ಉಪಾಧಿ ಯಿಂದ ಬಂದಿರುವ ಧರ್ಮವಲ್ಲ; ಆದರೆ ಎಂಟುಭುಜಗಳೇ ಮುಂತಾದದ್ದು ಸ್ವಪ್ನಸ್ಥಾನ ವೆಂಬ ಉಪಾಧಿಯಿಂದ ಬಂದದ್ದು. ಆದ್ದರಿಂದ ಸತ್ಯವಾಗಲಾರದು.

7. ಚಿತ್ತವು ಹಾಗೆ ಕಲ್ಪಿಸಿಕೊಂಡಿರುವದೇ ಹೊರತು ನಿಜವಾಗಿ ಎಂಟು ಭುಜಗಳಾ ಗಿರುವದಿಲ್ಲ.

ಸ್ಥಾನವನ್ನು ಹೊಂದಿಕಾಣುತ್ತಾನೆ.[1] ಹೇಗೆ ಇಲ್ಲಿ (ಈ) ಲೋಕದಲ್ಲಿ ಸುಶಿಕ್ಷಿತನಾದವನು ಮತ್ತೊಂದು ದೇಶಕ್ಕೆ ಹೋಗುವ ದಾರಿಯನ್ನು (ಮತ್ತೊಬ್ಬರಿಂದ) ಚೆನ್ನಾಗಿ ತಿಳಿದುಕೊಂಡವನು ಆ ದಾರಿಯಿಂದ (ಆ) ಬೇರೆಯ ಸ್ಥಲಕ್ಕೆ ಹೋಗಿ ಅಲ್ಲಿರುವ ಪದಾರ್ಥಗಳನ್ನು ಕಾಣುತ್ತಾನೋ ಹಾಗೆಯೇ (ಇದು).[2] ಆದ್ದರಿಂದ ಹೇಗೆ ಸ್ಥಾನಿಧರ್ಮಗಳಾಗಿರುವ ಹಗ್ಗದ ಹಾವು, ಬಿಸಿಲುಕುದುರೆ-ಮುಂತಾದವುಗಳು ಅಸತ್ತಾಗಿರುವವೋ ಹಾಗೆಯೇ ಕನಸಿನಲ್ಲಿ ಕಾಣುವ ಅಪೂರ್ವ (ದೃಶ್ಯ) ಗಳೂ ಸ್ಥಾನಿಧರ್ಮವೇ ಆಗಿರುವದರಿಂದ ಅಸತ್ತಾಗಿರುತ್ತವೆ. ಆದ್ದರಿಂದ ಸ್ವಪ್ನದ ದೃಷ್ಟಾಂತವು ಅಸಿದ್ಧವಲ್ಲ.[3]

(ಭಾಷ್ಯ)

೮೯. ಅಪೂರ್ವತ್ವಾಶಙ್ಕಾಂ ನಿರಾಕೃತ್ಯ ಸ್ವಪ್ನದೃಷ್ಟಾನ್ತಸ್ಯ ಪುನಃ ಸ್ವಪ್ನತುಲ್ಯತಾಂ ಜಾಗ್ರದ್ಭೇದಾನಾಂ ಪ್ರಪಞ್ಚಯನ್ ಆಹ—

(ಭಾಷ್ಯಾರ್ಥ)

ಅಪೂರ್ವವಾದ (ದೃಶ್ಯಗಳನ್ನು ಕಾಣುವೆವೆಂಬ) ಆಶಂಕೆಯನ್ನು ಸ್ವಪ್ನ ದೃಷ್ಟಾಂತದಲ್ಲಿ ಪರಿಹರಿಸಿ ಎಚ್ಚರದ ಭೇದಗಳು ಕನಸಿನ (ಭೇದ)ಗಳಿಗೆ ಸಮಾನವೇ ಆಗಿರುವವೆಂಬುದನ್ನು ವಿವರಿಸುವದಕ್ಕಾಗಿ ಮುತ್ತೂ ಹೇಳುತ್ತಾರೆ:—

**ಸ್ವಪ್ನವೃತ್ತಾವಪಿ ತ್ವನ್ತಶ್ಚೇತಸಾ ಕಲ್ಪಿತಂ ತ್ವಸತ್ ।**
**ಬಹಿಶ್ಚೇತೋ ಗೃಹೀತಂ ಸದ್ದೃಷ್ಟಂ ವೈತಥ್ಯಮೇತಯೋಃ ॥ ೯ ॥**

೯. ಸ್ವಪ್ನವೃತ್ತಿಯಲ್ಲಿಯೂ ಒಳಗೆ ಚಿತ್ತದಿಂದ ಕಲ್ಪಿತವಾದದ್ದಾದರೆ ಅಸತ್ತು, ಹೊರಗೆ ಚಿತ್ತದಿಂದ ಗ್ರಹಿಸಲ್ಪಟ್ಟದ್ದು ಸತ್ತು. ಇವೆರಡಕ್ಕೂ ವೈತಥ್ಯವು ಕಂಡಿದೆ.

---

1. ಹಗ್ಗದಲ್ಲಿ ಹಾವನ್ನು ಭ್ರಾಂತಿಯ ಅವಸ್ಥೆಯಲ್ಲಿ ಹೇಗೆ ಕಾಣುವರೋ ಹಾಗೆ ಈ ವಿಕಲ್ಪಗಳನ್ನೂ ಮಿಥ್ಯಾವಾಸನಾವಶದಿಂದ ಕನಸಿನಲ್ಲಿ ತಪ್ಪಾಗಿ ಕಲ್ಪಿಸಿಕೊಂಡು ಕಾಣುತ್ತಾರೆ. ಆದ್ದರಿಂದ ಇವೂ ಅಸತ್ಯವೇ.

2. ದೃಷ್ಟಾಂತದಲ್ಲಿ ಬೇರೆಯ ಸ್ಥಲದಲ್ಲಿ ನಿಜವಾಗಿರುವ ದೃಶ್ಯಗಳನ್ನು ಅಲ್ಲಿಗೆ ಹೋದವನು ಕಾಣುತ್ತಾನಾದರೂ ಅವು ನಿಜವಾಗಿರುವವೆಂಬ ಅಂಶವು ದೃಷ್ಟಾಂತದಲ್ಲಿ ವಿವಕ್ಷಿತವಲ್ಲ. ಹೊಸದಾಗಿ ಕಾಣುವ ದೃಶ್ಯಗಳಂತೆ ಈ ವಿಕಲ್ಪಗಳೂ ಹೊಸದಾಗಿ ಕಾಣುತ್ತವೆ, ಸ್ವಾಭಾವಿಕವಾದ ಧರ್ಮಗಳಲ್ಲ—ಎಂಬುದು ವಿವಕ್ಷಿತ

3. ಹೊಸದಾಗಿ ಕಾಣುವನೆಂಬ ಕಾರಣದಿಂದ ಸ್ವಪ್ನದೃಶ್ಯಗಳು ಸತ್ಯವಾಗುವದಿಲ್ಲ ತಾನೇ ಕಲ್ಪಿಸಿಕೊಂಡವುಗಳಾದದ್ದರಿಂದ ಅಸತ್ಯವೇ ಆಗಿವೆ. ಆದ್ದರಿಂದ ಸ್ವಪ್ನವು ಅಸತ್ಯವೇ ಎಂದು ಭಾವ.

(ಭಾಷ್ಯ)

೯೦. ಸ್ವಪ್ನವೃತ್ತಾವಪಿ ಸ್ವಪ್ನಸ್ಥಾನೇ ಅಪಿ ಅನ್ತಃ ಚೇತಸಾ (ಕಲ್ಪಿತಂ ತು)[1] ಮನೋರಥಸಙ್ಕಲ್ಪಿತಮ್ ಅಸತ್ । ಸಙ್ಕಲ್ಪಾನನ್ತರಸಮಕಾಲಮೇವ ಅದರ್ಶನಾತ್। ತತ್ರೈವ ಸ್ವಪ್ನೇ ಬಹಿಃ ಚೇತಸಾ ಗೃಹೀತಂ ಚಕ್ಷುರಾದಿದ್ವಾರೇಣ ಉಪಲಬ್ಧಂ ಘಟಾದಿ ಸತ್ । ಇತ್ಯೇವಮ್ ಅಸತ್ಯಮಿತಿ ನಿಶ್ಚಿತೇಽಪಿ ಸದಸದ್ವಿಭಾಗೋ ದೃಷ್ಟಃ । ಉಭಯೋರಪಿ ಅನ್ತರ್ಬಹಿಶ್ಚೇತಃಕಲ್ಪಿತಯೋಃ ವೈತಥ್ಯಮೇವ ದೃಷ್ಟಮ್ ॥

(ಭಾಷ್ಯಾರ್ಥ)

ಸ್ವಪ್ನವೃತ್ತಿಯಲ್ಲಿಯೂ[2] ಕನಸೆಂಬ ಸ್ಥಾನದಲ್ಲಿಯೂ ಒಳಗೆ ಚಿತ್ತದಿಂದ (ಕಲ್ಪಿತವಾದದ್ದಾದ) ಮನೋರಥ (ಮಾತ್ರದಿಂದ) ಸಂಕಲ್ಪಿತವಾದದ್ದು ಅಸತ್ತು; ಏಕೆಂದರೆ ಸಂಕಲ್ಪಿಸಿದ ಬಳಿಕವಿರುವಕಾಲದಲ್ಲಿಯೇ (ಅದು) ಕಾಣದೆ ಹೋಗುತ್ತದೆ. ಅದೇ ಕನಸಿನಲ್ಲಿ ಹೊರಗೆ ಚಿತ್ತದಿಂದ ಗ್ರಹಿಸಲ್ಪಟ್ಟದ್ದು ಎಂದರೆ ಚಕ್ಷುರಿಂದ್ರಿಯವೇ ಮುಂತಾದವುಗಳ ಮೂಲಕ ಕಂಡ ಗಡಿಗೆಯೇ ಮುಂತಾದದ್ದು ಸತ್ತು. ಹೀಗೆಂದು ಅಸತ್ಯವೆಂದು ನಿಶ್ಚಯವಾಗಿರುವ (ಕನಸಿನಲ್ಲಿ)ಯೂ ಸತ್ತು, ಅಸತ್ತು-ಎಂಬ ವಿಂಗಡವು ಕಂಡುಬರುತ್ತದೆ. (ಆದರೂ) ಒಳಗೆ, ಹೊರಗೆ-ಚಿತ್ತಕಲ್ಪಿತವಾಗಿರುವ ಎರಡಕ್ಕೂ ವೈತಥ್ಯವೇ ಕಂಡುಬಂದಿದೆ.

**ಜಾಗ್ರದ್ವೃತ್ತಾವಪಿ ತ್ವನ್ತಶ್ಚೇತಸಾ ಕಲ್ಪಿತಂ ತ್ವಸತ್ ।**
**ಬಹಿಶ್ಚೇತೋ ಗೃಹೀತಂಸದ್ಯುಕ್ತಂ ವೈತಥ್ಯಮೇತಯೋಃ ॥ ೧೦ ॥**

೧೦. ಜಾಗದ್ವೃತ್ತಿಯಲ್ಲಿಯೂ ಒಳಗೆ ಚಿತ್ತದಿಂವ ಕಲ್ಪಿತವಾದದ್ದಾದರೆ ಅಸತ್ತು, ಹೊರಗೆ ಚಿತ್ತದಿಂವ ಗ್ರಹಿಸಲ್ಪಟ್ಟದ್ದು ಸತ್ತು. (ಆದ್ದರಿಂದ) ಇವೆರಡಕ್ಕೂ ವೈತಥ್ಯವು ಯುಕ್ತವು.

(ಭಾಷ್ಯ)

೯೧. ಸದಸತೋಃ ವೈತಥ್ಯಂ ಯುಕ್ತಮ್ । ಅನ್ತಬಹಿಶ್ಚೇತಃಕಲ್ಪಿತತ್ವಾವಿಶೇಷಾತ್ ಇತಿ । ವ್ಯಾಖ್ಯಾತಮ್ ಅನ್ಯತ್ ॥

---

1. ಈ ಮಾತುಗಳು ಭಾಷ್ಯದಲ್ಲಿ ಬಿಟ್ಟುಹೋಗಿವೆ.

2. ವೃತ್ತಿ, ಸ್ಥಾನ, ಸ್ಥಿತಿ, ಅವಸ್ಥೆ-ಇವು ಪರ್ಯಾಯಶಬ್ದಗಳು.

(ಇಲ್ಲಿಯೂ) ಸತ್ತು, ಅಸತ್ತು-(ಈ ಎರಡಕ್ಕೂ) ವೈತಥ್ಯ (ವಿರಬೇಕಾದದ್ದು) ಯುಕ್ತ; ಏಕೆಂದರೆ ಒಳಗೂ ಹೊರಗೂ ಚಿತ್ತಕಲ್ಪಿತವಾಗಿವೆ ಎಂಬುದು ಸಮಾನ ವಾಗಿದೆ (ಎಂದರ್ಥ)[1]. ಮಿಕ್ಕದ್ದನ್ನು ವ್ಯಾಖ್ಯಾನಮಾಡಿ (ದಂತಾ)ಗಿದೆ.[2]

## ಎಲ್ಲವೂ ಆತ್ಮನಲ್ಲಿ ಹುಟ್ಟುಗಟ್ಟಿದ ತೋರಿಕೆ

(ಭಾಷ್ಯ)

೯೨. ಚೋದಕ[3] ಆಹ—

(ಭಾಷ್ಯಾರ್ಥ)

(ಇಲ್ಲಿ) ಆಕ್ಷೇಪಕನು ಕೇಳುತ್ತಾನೆ :—

**ಉಭಯೋರಪಿ ವೈತಥ್ಯಂ ಭೇದಾನಾಂ ಸ್ಥಾನಯೋರ್ಯದಿ**
**ಕ ಏತಾನ್ ಬುಧ್ಯತೇ ಭೇದಾನ್ ಕೋ ವೈ ತೇಷಾಂ ವಿಕಲ್ಪಕಃ ॥ ೧೧ ॥**

೧೧. ಎರಡು ಸ್ಥಾನಗಳಲ್ಲಿಯೂ ಭೇದಗಳಿಗೆ ವೈತಥ್ಯವೇ ಆದರೆ ಈ ಭೇದಗಳನ್ನು ಯಾವಾತನು ಅರಿಯುತ್ತಾನೆ? ಇವುಗಳನ್ನು ವಿಕಲ್ಪಿಸುವವನು ಯಾವನು ?

(ಭಾಷ್ಯ)

೯೩. ಸ್ವಪ್ನಜಾಗ್ರತ್ಸ್ಥಾನಯೋಃ ಭೇದಾನಾಂ ಯದಿ ವೈತಥ್ಯಂ ಕಃ ಏತಾನ್ ಅನ್ತರ್ಬಹಿಃ ಚೇತಃಕಲ್ಪಿತಾನ್ ಬುಧ್ಯತೇ ? ಕೋ ವೈ ತೇಷಾಂ ವಿಕಲ್ಪಕಃ ? ಸ್ಮೃತಿ ಜ್ಞಾನಯೋಃ ಕ ಆಲಮ್ಬನಮ್ ? ಇತಿ ಅಭಿಪ್ರಾಯಃ । ನ ಚೇತ್ ನಿರಾತ್ಮವಾದ ಇಷ್ಟಃ ॥

(ಭಾಷ್ಯಾರ್ಥ)

ಕನಸು, ಎಚ್ಚರ-ಎಂಬ ಎರಡು ಸ್ಥಾನಗಳಲ್ಲಿರುವ ಭೇದಗಳಿಗೂ ವೈತಥ್ಯವಾದರೆ, ಒಳಗೂ ಹೊರಗೂ ಚಿತ್ತಕಲ್ಪಿತವಾಗಿರುವ ಇವುಗಳನ್ನು ಅರಿಯುವವನು ಯಾರು ? ಇವುಗಳನ್ನು ವಿಕಲ್ಪಿಸುವವನು ಯಾವನು ? ಸ್ಮೃತಿಗೂ ಜ್ಞಾನಕ್ಕೂ ಯಾರು

---

1. ಕಲ್ಪಿತವಾದದ್ದು ಅಸತ್ಯ ಎಂಬುದು ಯುಕ್ತ.

2. ಶ್ಲೋಕಕ್ಕೆ ಅಕ್ಷರಾರ್ಥವನ್ನು ಮಾಡಬೇಕಾದದ್ದಿಲ್ಲ.

3. " ಚೋದಕಶ್ಚ " ಆ॥ ರಾ॥

ಆಶ್ರಯನು ?-ಎಂದು ಅಭಿಪ್ರಾಯ. ಆತ್ಮನೇ ಇಲ್ಲವೆಂಬ ವಾದವು ಇಷ್ಟವಿಲ್ಲದಿದ್ದರೆ[1] (ಈ ಪ್ರಶ್ನೆಗೆ ಉತ್ತರವನ್ನು ಹೇಳಬೇಕು.)

**ಕಲ್ಪಯತ್ಯಾತ್ಮನಾತ್ಮಾನಮಾತ್ಮಾ ದೇವಃ ಸ್ವಮಾಯಯಾ ।**
**ಸ ಏವ ಬುಧ್ಯತೇ ಭೇದಾನಿತಿ ವೇದಾಂತನಿಶ್ಚಯಃ ॥ ೧೨ ॥**

೧೨. ದೇವನಾದ ಆತ್ಮನು ತನ್ನ ಮಾಯೆಯಿಂದ ತನ್ನಿಂದ ತನ್ನನ್ನು ಕಲ್ಪಿಸಿಕೊಳ್ಳುತ್ತಾನೆ. ಆತನೇ ಪದಾರ್ಥಗಳನ್ನು ಅರಿಯುತ್ತಾನೆ. ಹೀಗೆಂಬುದು ವೇದಾಂತನಿಶ್ಚಯವು.

(ಭಾಷ್ಯ)

ಸ್ವಯಂ ಸ್ವಮಾಯಯಾ ಸ್ವಮ್ ಆತ್ಮಾನಮ್ ಆತ್ಮಾ ದೇವಃ ಆತ್ಮನ್ಯೇವ ವಕ್ಷ್ಯಮಾಣಂ ಭೇದಾಕಾರಂ ಕಲ್ಪಯತಿ ರಜ್ಜ್ವಾದಾವಿವ ಸರ್ಪಾದೀನ್ । ಸ್ವಯಮೇವ ಚ ತಾನ್ ಬುಧ್ಯತೇ ಭೇದಾನ್ ತದ್ವದೇವ ಇತ್ಯೇವಂ ವೇದಾನ್ತನಿಶ್ಚಯಃ । ನಾನ್ಯೋಽಸ್ತಿ ಜ್ಞಾನಸ್ಮೃತ್ಯಾಶ್ರಯಃ । ನ ಚ ನಿರಾಸ್ಪದೇ ಏವ ಜ್ಞಾನಸ್ಮೃತೀ ವೈನಾಶಿಕಾನಾಮಿವ ಇತಿ ಅಭಿಪ್ರಾಯಃ ॥

(ಭಾಷ್ಯಾರ್ಥ)

ತಾನೇ[2] ತನ್ನ ಮಾಯೆಯಿಂದ ತನ್ನ ಆತ್ಮನನ್ನೇ ದೇವನಾದ ಆತ್ಮನು ತನ್ನಲ್ಲಿಯೇ ಈ ಮುಂದೆ[3] ಹೇಳುವ ಭೇದಗಳ ಆಕಾರವುಳ್ಳವನನ್ನಾಗಿ ಹಗ್ಗವೇ ಮುಂತಾದದ್ದರಲ್ಲಿ ಹಾವು ಮುಂತಾದವುಗಳನ್ನು (ಕಲ್ಪಿಸು)ವಂತೆ ಕಲ್ಪಿಸಿಕೊಳ್ಳುತ್ತಾನೆ. ಅವನೇ ಆ ಭೇದಗಳನ್ನು ಅದರಂತೆಯೇ[4] ಅರಿಯುತ್ತಾನೆ ಎಂದು ಹೀಗೆಂದು

---

1. ಹಿಂದೆ ಅನುಭವಿಸಿದ್ದನ್ನು ಈಗ ನೆನಪಿಗೆ ತಂದುಕೊಳ್ಳುವವನು ಒಬ್ಬನೇ ಇರಬೇಕೆಂದು ಆತ್ಮವಾದಿಗಳೆಲ್ಲರೂ ಒಪ್ಪುತ್ತಾರೆ. ಬೌದ್ಧರು ಮಾತ್ರ ಇಂಥ ಒಂದೇ ಆಶ್ರಯವನ್ನು ಒಪ್ಪುವದಿಲ್ಲ. ಅವರಿಗೆ ಜ್ಞಾನವೆಲ್ಲ ಕ್ಷಣಿಕವೇ. ಆದರೆ ಆತ್ಮನನ್ನು ಒಪ್ಪುವದಿಲ್ಲವೆನ್ನುವದಕ್ಕೂ ಆತ್ಮನ ಆಶ್ರಯವೇ ಬೇಕಾದದ್ದರಿಂದ ಅವರ ಮತವು ಒಪ್ಪತಕ್ಕದ್ದಲ್ಲ. ಅದ್ವೈತಿಗೆ ಈ ಆಶ್ರಯವು ಯಾವದು ?-ಎಂದು ಪ್ರಶ್ನೆ.

2. 'ತಾನೇ' ಎಂದದ್ದರಿಂದ ಬೇರೆಯ ಕರ್ತೃವನ್ನೂ 'ತನ್ನನ್ನು' ಎಂದದ್ದರಿಂದ ಬೇರೆಯ ಕರ್ಮವನ್ನೂ 'ತನ್ನಿಂದ' ಎಂದದ್ದರಿಂದ ಬೇರೊಂದು ಕರಣವನ್ನೂ ದೇವನೆಂದದ್ದರಿಂದ ಪ್ರಕಾಶವಾದ ಬೆಳಕನ್ನೂ ಆವಶ್ಯಕವಿಲ್ಲನೆಂದಾಯಿತು. ಮಾಯೆಯಿಂದ ಎಂಬುದು ಇವುಗಳು ಯಾವವೂ ಬೇಕಿಲ್ಲವೆಂಬುದಕ್ಕೆ ಕಾರಣವನ್ನು ತಿಳಿಸುತ್ತದೆ.

3. ಈ ಪ್ರಕರಣದ ೧೯ ನೆಯ ಕಾರಿಕೆಯಿಂದ ಹಿಡಿದು.

4. ಜ್ಞೇಯಗಳು ಹೇಗೆ ಮಾಯಿಕವೋ ಜ್ಞಾನಗಳೂ ಹಾಗೆಯೇ ಮಾಯಿಕ

ವೇದಾಂತಗಳ[1] ನಿಶ್ಚಯವು. ಅರಿವುನೆನಪುಗಳಿಗೆ ಆಶ್ರಯನಾದವನು ಮತ್ತೊಬ್ಬನಿಲ್ಲ.[2] ವೈನಾಶಿಕರ (ಮತದಲ್ಲಿ ಹೇಳಿರುವಂತೆ) ಅರಿವುನೆನಹುಗಳಿಗೆ ಆಶ್ರಯವೇ ಇಲ್ಲವೆಂದೂ (ಇಲ್ಲಿ ಹೇಳುವ) ದಿಲ್ಲ[3] ಎಂದು ಅಭಿಪ್ರಾಯ.

## ಹುಟ್ಟುಗಟ್ಟುವ ಪ್ರಕಾರಗಳು

(ಭಾಷ್ಯ)

೯೫. ಸ ಕಲ್ಪಯನ್[4] ಕೇನ ಪ್ರಕಾರೇಣ ಕಲ್ಪಯತಿ ಇತಿ ?

(ಭಾಷ್ಯಾರ್ಥ)

ಅವನು ಕಲ್ಪನೆಮಾಡುವಾಗ ಯಾವ ಪ್ರಕಾರದಿಂದ ಕಲ್ಪಿಸುತ್ತಾನೆ ? ಎಂದರೆ ಹೇಳುತ್ತಾರೆ:—

**ವಿಕರೋತ್ಯಪರಾನ್ ಭಾವಾನನ್ತಶ್ಚಿತ್ತೇ ವ್ಯವಸ್ಥಿತಾನ್ ।**
**ನಿಯತಾಂಶ್ಚ ಬಹಿಶ್ಚಿತ್ತ ಏವಂ ಕಲ್ಪಯತೇ ಪ್ರಭುಃ ॥ ೧೩ ॥**

೧೩. ಒಳಗೆ ಚಿತ್ತದಲ್ಲಿ ಇದ್ದುಕೊಂಡಿರುವ ಅಪರಭಾವಗಳನ್ನೂ ನಿಯತವಾದ ಭಾವಗಳನ್ನೂ ಬಹಿಶ್ಚಿತ್ತನಾಗಿ[5] ಮಾರ್ಪಡಿಸುತ್ತಾನೆ. ಹೀಗೆ ಪ್ರಭುವು ಕಲ್ಪಿಸುತ್ತಾನೆ.

(ಭಾಷ್ಯ)

೯೬. ವಿಕರೋತಿ ನಾನಾ ಕರೋತಿ ಅಪರಾನ್ ಲೌಕಿಕಾನ್ ಭಾವಾನ್ ಪದಾರ್ಥಾನ್ ಶಬ್ದಾದೀನ್ ಅನ್ಯಾಂಶ್ಚ ಅನ್ತಶ್ಚಿತ್ತೇ ವಾಸನಾರೂಪೇಣ ವ್ಯವಸ್ಥಿತಾನ್ ಅವ್ಯಾಕೃತಾನ್ ನಿಯತಾಂಶ್ಚ ಪೃಥಿವ್ಯಾದೀನ್ ಅನಿಯತಾಂಶ್ಚ ಕಲ್ಪನಾಕಾಲಾನ್ ಬಹಿಶ್ಚಿತ್ತಃ ಸನ್ । ತಥಾ ಅನ್ತಶ್ಚಿತ್ತಃ ಮನೋರಥಾದಿಲಕ್ಷಣಾನ್ ಇತಿ ಏವಂ ಕಲ್ಪಯತಿ। ಪ್ರಭುಃ ಈಶ್ವರ ಆತ್ಮಾ ಇತ್ಯರ್ಥಃ ॥

---

1. ಉಪನಿಷತ್ತುಗಳ.

2. ತಾರ್ಕಿಕರು ಈಶ್ವರನಿಗಿಂತ ಬೇರೆಯಾಗಿ ಜೀವರೆಂಬ ಜ್ಞಾತೃಗಳನ್ನು ಒಪ್ಪುವಂತೆ ವೇದಾಂತಿಗಳು ಒಪ್ಪುವದಿಲ್ಲ.

3. ಬೌದ್ಧರು ಹೇಳುವಂತೆ ಜ್ಞಾನಗಳು ಸ್ಥಿರವಾದ ಜ್ಞಾತೃವನ್ನು ಬಯಸದೆ ಇರುವವೆಂದು ವೇದಾಂತಿಗಳು ಒಪ್ಪುವದಿಲ್ಲ.

4. "ಸಂಕಲ್ಪಯನ್" ಎಂಬ ಪಾಠಕ್ಕಿಂತ ಇದೇ ಮೇಲು.

5. 'ಬಹಿಶ್ಚಿತ್ತೇ' ಎಂಬ ಕಾರಿಕೆಯ ಪದವನ್ನು ಹಿಡಿದು ಚಿತ್ತದ ಹೊರಗೆ ಎಂಬೂ ಅರ್ಥವನ್ನು ಮಾಡಬಹುದು; ಆದರೆ ಈಗ ಮಾಡಿರುವ ಅರ್ಥವು ಭಾಷ್ಯಾನುಸಾರವಾದದ್ದು.

(ಭಾಷ್ಯಾರ್ಥ)

ಅಪರವಾದ ಎಂದರೆ ಲೌಕಿಕವಾದ (ಕೆಲವು) ಶಬ್ದವೇ ಮುಂತಾದ ಭಾವಗಳನ್ನೂ (ಲೌಕಿಕ) ಪದಾರ್ಥಗಳನ್ನೂ, ಮತ್ತು ಬೇರೆಯಾದ[1] (ಪದಾರ್ಥಗಳನ್ನೂ) ಚಿತ್ತದ ಒಳಗೆ ವಾಸನೆಯ ರೂಪದಿಂದ[2] ಇದ್ದುಕೊಂಡಿರುವ ಅವ್ಯಾಕೃತವಾದ (ಈ ಪದಾರ್ಥಗಳನ್ನೂ) ಮತ್ತು ನಿಯತವಾದ ಪೃಥಿವಿಯೇ ಮುಂತಾದವುಗಳನ್ನೂ ಕಲ್ಪನೆಯ ಕಾಲದಲ್ಲಿ ಮಾತ್ರ ಇರುವ ಅನಿಯತವಾದ (ಭಾವಗಳನ್ನೂ)[3] ಹೊರಬುದ್ಧಿಯುಳ್ಳವನಾಗಿ ಮಾರ್ಪಡಿಸುತ್ತಾನೆ, ಬೇರೆಬೇರೆಯಾಗಿ ಮಾಡುತ್ತಾನೆ. ಹಾಗೂ ಒಳಬುದ್ಧಿಯುಳ್ಳವನಾಗಿ ಮನೋರಥವೇ ಮುಂತಾದ ರೂಪದ (ಭಾವಗಳನ್ನೂ ಮಾರ್ಪಡಿಸುತ್ತಾನೆ). ಹೀಗೆ ಪ್ರಭು ಎಂದರೆ ಸಮರ್ಥನಾದ ಆತ್ಮನು ಕಲ್ಪಿಸುತ್ತಾನೆ ಎಂದರ್ಥ.

## ಒಳಗಿನ ಹೊರಗಿನ ವಸ್ತುಗಳೆರಡೂ ಕಲ್ಪಿತವೇ

(ಭಾಷ್ಯ)

೯೭. ಸ್ವಪ್ನವತ್ ಚಿತ್ತಪರಿಕಲ್ಪಿತಂ ಸರ್ವಮ್ ಇತ್ಯೇತತ್ ಆಶಙ್ಕ್ಯತೇ । ಯಸ್ಮಾತ್ ಚಿತ್ತಪರಿಕಲ್ಪಿತೈಃ ಮನೋರಥಾದಿಲಕ್ಷಣೈಃ ಚಿತ್ತಪರಿಚ್ಛೇದ್ಯೈಃ ವೈಲಕ್ಷಣ್ಯಂ ಬಾಹ್ಯಾನಾಮ್ ಅನ್ಯೋನ್ಯಪರಿಚ್ಛೇದ್ಯತ್ವಮ್ ಇತಿ । ಸಾ ನ ಯುಕ್ತಾ ಆಶಙ್ಕಾ ॥

(ಭಾಷ್ಯಾರ್ಥ)

ಕನಸಿ (ನಲ್ಲಿ ಹೇಗೋ) ಹಾಗೆ (ಎಚ್ಚರದಲ್ಲಿಯೂ) ಎಲ್ಲವೂ ಚಿತ್ತಪರಿಕಲ್ಪಿತ (ವಾಗಿದೆ)–ಎಂಬಿದರ (ಮೇಲೆ) ಶಂಕೆ ಬರುತ್ತದೆ. ಏಕೆಂದರೆ ಚಿತ್ತದಲ್ಲಿ ಕಲ್ಪಿಸಿದ ಮನೋರಥವೇ ಮುಂತಾದ ರೂಪದ ಚಿತ್ತಕ್ಕೆ ಕಟ್ಟುಬಿದ್ದಿರುವ (ಭಾವಗಳಿಗಿಂತ)

1. ಶಾಸ್ತ್ರೀಯವಾದ (ಸ್ವರ್ಗಾದಿಗಳನ್ನು).

2. ಅನುಭವದಿಂದ ಅಂತಃಕರಣದಲ್ಲಿ ಉಂಟಾಗುವ ಸಂಸ್ಕಾರಗಳ ರೂಪದಿಂದ.

3. ನಿಯತವಾದ ಎಂಬುದು ಅನಿಯತವಾದದ್ದಕ್ಕೂ ಉಪಲಕ್ಷಣ; ಬಹಿಶ್ಚಿತ್ತನಾಗಿ ಎಂಬುದು ಅಂತಶ್ಚಿತ್ತನಾಗಿ ಎಂಬುದಕ್ಕೂ ಉಪಲಕ್ಷಣ. ಚಿತ್ತದಲ್ಲಿ ಅವ್ಯಕ್ತವಾಗಿದ್ದು ಹೊರಗೆ ಸ್ಫುಟವಾಗಿ ತೋರುವ ಭಾವಗಳು; ಚಿತ್ತದಲ್ಲಿ ಅನಿಯತವಾದ ಕಲ್ಪನಾರೂಪದ ಮತ್ತು ಹೊರಗೆ ನಿಯತವಾಗಿ ತೋರುವ ಪೃಥ್ವಿ ಮುಂತಾದವುಗಳು–ಎಂಬ ಅರ್ಥಗಳನ್ನು ಕ್ರಮವಾಗಿ ಪೂರ್ವಾರ್ಧದಲ್ಲಿಯೂ, ಉತ್ತರಾರ್ಧದಲ್ಲಿಯೂ ಭಾಷ್ಯಕಾರರು ತೋರಿಸಿರುತ್ತಾರೆ. ವ್ಯಾಖ್ಯಾನಕಾರರು ಕೊಟ್ಟಿರುವ ಕುಂಬಾರನ ದೃಷ್ಟಾಂತವು ಇಲ್ಲಿ ಅಷ್ಟು ಹೊಂದುಗೆಯಾಗಿಲ್ಲ.

ಹೊರಗಿನ (ಭಾವಗಳಲ್ಲಿ) ಒಂದರಿಂದೊಂದು ಪರಿಚ್ಛಿನ್ನವಾಗಿರುವದೆಂಬ ವೈಲಕ್ಷಣ್ಯ (ಇದೆ)[1]. ಆದ್ದರಿಂದ (ಶಂಕೆ ಬರುತ್ತದೆ). (ಆದರೆ) ಆ ಶಂಕೆಯು ಸರಿಯಲ್ಲ:—

**ಚಿತ್ತಕಾಲಾ ಹಿ ಯೇಽನಸ್ತು ದ್ವಯಕಾಲಾಶ್ಚ ಯೇ ಬಹಿಃ ।**
**ಕಲ್ಪಿತಾ ಏವ ತೇ ಸರ್ವೇ ವಿಶೇಷೋ ನಾನ್ಯಹೇತುಕಃ ॥ ೧೪ ॥**

೧೪. ಒಳಗೆ ಯಾವವು ಚಿತ್ತಕಾಲವುಳ್ಳವೇ (ಆಗಿರುವವೋ) ಮತ್ತು ಹೊರಗೆ ಯಾವವು ದ್ವಯಕಾಲವುಳ್ಳ (ವಾಗಿರುವ)ವೋ ಅವು ಎಲ್ಲವೂ ಕಲ್ಪಿತವಾದವುಗಳೇ. ವಿಶೇಷಕ್ಕೆ ಮತ್ತೊಂದು ಹೇತುವಿಲ್ಲ.

(ಭಾಷ್ಯ)

೯೮. ಚಿತ್ತಕಾಲಾ ಹಿ ಯೇ ಅನ್ತಸ್ತು । ಚಿತ್ತಪರಿಚ್ಛೇದ್ಯಾಃ ನಾನ್ಯಃ ಚಿತ್ತಕಾಲವ್ಯತಿರೇಕೇಣ ಪರಿಚ್ಛೇದಕಃ ಕಾಲೋ ಯೇಷಾಂ ತೇ ಚಿತ್ತಕಾಲಾಃ । ಕಲ್ಪನಾಕಾಲೇ ಏವ ಉಪಲಭ್ಯನ್ತೇ ಇತ್ಯರ್ಥಃ । ದ್ವಯಕಾಲಾಶ್ಚ ಭೇದಕಾಲಾಃ ಅನ್ಯೋನ್ಯಪರಿಚ್ಛೇದ್ಯಾಃ । ಯಥಾ "ಆಗೋದೋಹನಮ್ ಆಸ್ತೇ" । ಯಾವತ್ ಆಸ್ತೇ ತಾವತ ಗಾಂ ದೋಗ್ಧಿ ಯಾವತ್ ಗಾಂ ದೋಗ್ಧಿ ತಾವತ್ ಆಸ್ತೇ । ತಾವಾನ್ ಅಯಮ್ ಏತಾವಾನ್ ಸಃ । ಇತಿ ಪರಸ್ಪರಪರಿಚ್ಛೇದ್ಯಪರಿಚ್ಛೇದಕತ್ವಂ (ಯೇಷಾಂ) ಬಾಹ್ಯಾನಾಂ ಭೇದಾನಾಂ ತೇ ದ್ವಯಕಾಲಾಃ । ಅನ್ತಃ ಚಿತ್ತಕಾಲಾಃ ಬಾಹ್ಯಾಶ್ಚ ದ್ವಯಕಾಲಾಃ ಕಲ್ಪಿತಾ ಏವ ತೇ ಸರ್ವೇ । ನ ಬಾಹ್ಯಃ ದ್ವಯಕಾಲತ್ವವಿಶೇಷಃ ಕಲ್ಪಿತತ್ವವ್ಯತಿರೇಕೇಣ ಅನ್ಯಹೇತುಕಃ । ಅತ್ರಾಪಿ ಹಿ ಸ್ವಪ್ನದೃಷ್ಟಾನ್ತೋ ಭವತ್ಯೇವ॥

(ಭಾಷ್ಯಾರ್ಥ)

ಏಕೆಂದರೆ (ಯಾವವು) ಒಳಗೆ ಚಿತ್ತಕಾಲವುಳ್ಳವೇ (ಆಗಿರುವವೋ) ಚಿತ್ತಪರಿಚ್ಛಿನ್ನವಾಗಿರುವವೋ ಚಿತ್ತಕಾಲವನ್ನು ಬಿಟ್ಟು ಮತ್ತೊಂದು ಪರಿಚ್ಛೇದಕವಾದ ಕಾಲವು ಯಾವ (ಭಾವ)ಗಳಿಗೆ ಇರುವದಿಲ್ಲವೋ, ಅವು ಚಿತ್ತಕಾಲಗಳು. (ಯಾವವು) ಕಲ್ಪನಾಕಾಲದಲ್ಲಿ ಮಾತ್ರ ಕಾಣಬರುವವೋ ಎಂದರ್ಥ. ಮತ್ತು ದ್ವಯಕಾಲಗಳು ಎಂದರೆ ಭೇದಗಳ ಕಾಲವುಳ್ಳವು;[2] ಎಂದರೆ ಒಂದಕ್ಕೊಂದು ಕಟ್ಟುಬಿದ್ದಿರುವವು

---

1. ಹಿಂದಿನಕಾರಿಕೆಯಲ್ಲಿ ಚಿತ್ತದ ಒಳಗಿನ ಭಾವಗಳೂ ಹೊರಗಿನ ಭಾವಗಳೂ ಕಲ್ಪಿತವೆಂದು ಹೇಳಿದ್ದರಮೇಲೆ ಆಕ್ಷೇಪವಿದು.

2. ಭೇದಕಾಲವೆಂದರೆ ಕಾಲಭೇದವೆಂದೂ ಮೊದಲಿನ ಕಾಲ, ಕೊನೆಯ ಕಾಲ-ಇವುಗಳಿಂದ ಕಟ್ಟುವಡೆದಿರುವ ವಸ್ತುಗಳನ್ನು ಇಲ್ಲಿ ದ್ವಯಕಾಲಗಳೆಂದು ಕರೆದಿದೆಯೆಂದೂ ವ್ಯಾಖ್ಯಾನಕಾರರು ವರ್ಣಿಸಿರುತ್ತಾರೆ. ಅದೇ ಇದು ಎಂಬ-ಪ್ರತ್ಯಭಿಜ್ಞೆಗೆ ವಿಷಯವಾಗಿರುವ ವಸ್ತುಗಳಿಗೂ ವ್ಯಾಖ್ಯಾನವನ್ನು ಹೊಂದಿಸಬಹುದು. ಇದನ್ನೆಲ್ಲ ಭಾಷ್ಯದ ತಾತ್ಪರ್ಯವರ್ಣನೆಯೆಂದು ಭಾವಿಸಬಹುದು. ದ್ವಯಕಾಲಗಳು ಭೇದಕಾಲಗಳು. ಭೇದಗಳು ಎಂದರೆ ಬೇರೆಯ ಪದಾರ್ಥಗಳ ಕಾಲವುಳ್ಳವು ಎಂಬುದು ಭಾಷ್ಯಾನುಸಾರಿಯಾದ ಸರಳವಾದ ಅರ್ಥ.

ಎಂದರ್ಥ). ಹೇಗೆಂದರೆ "ಹಸುವನ್ನು ಕರೆಯುವವರೆಗೆ ಕುಳಿತಿರುತ್ತಾನೆ" ಎಂಬಲ್ಲಿ ಅಲ್ಲಿಯವರೆಗೆ ಕುಳಿತಿರುತ್ತಾನೋ ಅಲ್ಲಿಯವರೆಗೆ ಹಸುವನ್ನು ಕರೆಯುತ್ತಿರುತ್ತಾನೆ; ಅಲ್ಲಿಯವರೆಗೆ ಹಸುವನ್ನು ಕರೆಯುತ್ತಿರುತ್ತಾನೋ ಅಲ್ಲಿಯವರೆಗೆ ಕುಳಿತಿರುತ್ತಾನೆ. ಅದರಷ್ಟು ಇದು, ಇದರಷ್ಟು ಅದು.[1] ಹೀಗೆ ಒಂದೊಂದರ (ಕಾಲಕ್ಕೆ) ಕಟ್ಟುಬಿದ್ದಿರುವದು (ಯಾವ) ಹೊರಗಿನ ಭೇದಗಳಿಗೆ ಇರುವದೋ ಅವು ದ್ವಯಕಾಲಗಳು. ಒಳಗೆ ಚಿತ್ತಕಾಲ(ಗಳಾಗಿರುವವು), ಮತ್ತು ಹೊರಗೆ ದ್ವಯಕಾಲ(ಗಳಾಗಿರುವವು)-ಇವೆಲ್ಲವೂ ಕಲ್ಪಿತವಾದವುಗಳೇ. ಹೊರಗಿನ ದ್ವಯಕಾಲ(ಗಳಾಗಿರುವದೆಂಬ) ವಿಶೇಷಕ್ಕೆ ಕಲ್ಪಿತತ್ವವನ್ನು ಬಿಟ್ಟರೆ ಬೇರೆಯ ಹೇತುವಿಲ್ಲ. ಇಲ್ಲಿಯೂ ಕನಸಿನ ದೃಷ್ಟಾಂತವು ಇದ್ದೇ ಇರುತ್ತದೆ.

**ಅವ್ಯಕ್ತಾ ಏವ ಯೇಽನ್ತಸ್ತು ಸ್ಫುಟಾ ಏವ ಚ ಯೇ ಬಹಿಃ ।**
**ಕಲ್ಪಿತಾ ಏವ ತೇ ಸರ್ವೇ ವಿಶೇಷಸ್ತ್ವಿನ್ದ್ರಿಯಾನ್ತರೇ ॥ ೧೫ ॥**

೧೫. ಯಾವವು ಒಳಗೆ ಅವ್ಯಕ್ತವಾಗಿರುವವೋ ಮತ್ತು ಯಾವವು ಹೊರಗೆ ಸ್ಫುಟವಾಗಿಯೇ ಇರುವವೋ, ಅವೆಲ್ಲವೂ ಕಲ್ಪಿತವೇ. ವಿಶೇಷವಾದರೋ ಇಂದ್ರಿಯಾಂತರವಲ್ಲಿ (ರುವದು).

(ಭಾಷ್ಯ)

೯೯. ಯದಪಿ ಅನ್ತಃ ಅವ್ಯಕ್ತತ್ವಂ ಭಾವಾನಾಂ ಮನೋವಾಸನಾಮಾತ್ರಾಭಿವ್ಯಕ್ತಾನಾಂ, ಸ್ಫುಟತ್ವಂ ವಾ ಬಹಿಃ ಚಕ್ಷುರಾದೀನ್ದ್ರಿಯಾನ್ತರೇ ವಿಶೇಷಃ, ನಾಸೌ ಭೇದಾನಾಮ್ ಅಸ್ತಿತ್ವಕೃತಃ । ಸ್ವಪ್ನೇಽಪಿ ತಥಾ ದರ್ಶನಾತ್ । ಕಿಂ ತರ್ಹಿ? ಇನ್ದ್ರಿಯಾನ್ತರಕೃತ ಏವ । ಅತಃ ಕಲ್ಪಿತಾ ಏವ ಜಾಗ್ರದ್ಭಾವಾ ಅಪಿ ಸ್ವಪ್ನಭಾವವತ್ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಒಳಗೆ ಬರಿಯ ಮನೋವಾಸನೆಯಿಂದ ತೋರಿಕೊಳ್ಳುವ ಭಾವಗಳು ಅವ್ಯಕ್ತವಾಗಿರುವದು, ಹೊರಗೆ ಚಕ್ಷುರಾದಿಯಾದ ಬೇರೊಂದು ಇಂದ್ರಿಯಕ್ಕೆ (ಗೋಚರವಾಗಿರುವ) ಲ್ಲಿ (ಅವು) ಸ್ಫುಟವಾಗಿರುವದು–ಎಂಬ ವಿಶೇಷವುಂಟಲ್ಲ, ಅದು ಭೇದಗಳು (ನಿಜವಾಗಿ) ಇರುವದರಿಂದ (ಆದದ್ದ)ಲ್ಲ; ಏಕೆಂದರೆ ಕನಸಿನಲ್ಲಿಯೂ ಹಾಗೆಯೇ

---

1. ಭೇದಕಾಲಸಾಮಾನ್ಯವನ್ನು ವರ್ಣಿಸುವ ರೀತಿಯಿದು.

ವಿಶೇಷವು ಕಾಣುತ್ತದೆ.[1] (ಈ ವಿಶೇಷವು) ಮತ್ತೇತರಿಂದ (ಆದದ್ದು ? ಎಂದರೆ) ಮತ್ತೊಂದು ಇಂದ್ರಿಯವೆಂಬ (ನಿಮಿತ್ತದಿಂದ) ಆದದ್ದು.[2] ಆದ್ದರಿಂದ[3] ಎಚ್ಚರದ ಭಾವಗಳೂ ಕನಸಿನ ಭಾವಗಳಂತೆ ಕಲ್ಪಿತವಾದವುಗಳೇ ಎಂದು ಸಿದ್ಧವಾಯಿತು.

## ಕಲ್ಪನೆಗಳಿಗೆಲ್ಲ ಮೂಲ

(ಭಾಷ್ಯ)

೧೦೦. ಬಾಹ್ಯಾಧ್ಯಾತ್ಮಿಕಾನಾಂ ಭಾವಾನಾಮ್ ಇತರೇತರನಿಮಿತ್ತನೈಮಿತ್ತಿಕತಯಾ ಕಲ್ಪನಾಯಾಃ[4] ಕಿಂ ಮೂಲಮ್ ಇತಿ ? ಉಚ್ಯತೇ--

(ಭಾಷ್ಯಾರ್ಥ)

ಹೊರಗಿನ ಮತ್ತು ಒಳಗಿನ ಭಾವಗಳನ್ನು ಒಂದಕ್ಕೊಂದು ನಿಮಿತ್ತವೆಂದೂ (ಒಂದರ) ನಿಮಿತ್ತದಿಂದ (ಒಂದು) ಆಗಿರುವವೆಂದೂ ಕಲ್ಪಿಸುವದಕ್ಕೆ ಯಾವದು ಬೇರು ?-ಎಂದರೆ ಹೇಳುತ್ತಾರೆ :—

**ಜೀವಂ ಕಲ್ಪಯತೇ ಪೂರ್ವಂ ತತೋ ಭಾವಾನ್ ಪೃಥಗ್ವಿಧಾನ್ ।**
**ಬಾಹ್ಯಾನಾಧ್ಯಾತ್ಮಿಕಾಂಶ್ಚೈವ ಯಥಾವಿದ್ಯಸ್ತಥಾಸ್ಮೃತಿಃ ॥ ೧೬ ॥**

೧೬. ಮೊದಲು ಜೀವನನ್ನು ಕಲ್ಪಿಸುತ್ತಾನೆ. ಆಮೇಲೆ ಬೇರೆ ಬೇರೆಯ ವಿಧವಾದ ಹೊರಗಿನ ಮತ್ತು ಒಳಗಿನ ಭಾವಗಳನ್ನು (ಕಲ್ಪಿಸುತ್ತಾನೆ). ಎಂಥ ವಿದ್ಯೆಯುಳ್ಳವನೋ ಅಂಥ ಸ್ಮೃತಿಯುವ (ನಾಗಿ ಕಲ್ಪಿಸುತ್ತಾನೆ).

(ಭಾಷ್ಯ)

೧೦೧. ಜೀವಂ ಹೇತುಫಲಾತ್ಮಕಮ್ "ಅಹಂ ಕರೋಮಿ ಮಮ ಸುಖದುಃಖೇ" ಇತ್ಯೇವಂಲಕ್ಷಣಮ್ । ಅನೇವಂಲಕ್ಷಣೇ ಏವ ಶುದ್ಧೇ ಆತ್ಮನಿ ರಜ್ಜ್ವಾ

---

1. ಕನಸಿನಲ್ಲಿಯೂ ಒಳಗಿನ ಭಾವಗಳು ಅವ್ಯಕ್ತವಾಗಿಯೂ ಹೊರಗಿನ ಭಾವಗಳು ಸ್ಫುಟವಾಗಿಯೂ ಇರುತ್ತವೆ.

2. ಅಂತರಿಂದ್ರಿಯದಲ್ಲಿರುವವು ಅವ್ಯಕ್ತವಾಗಿರುವವು, ಬಹಿರಿಂದ್ರಿಯಕ್ಕೆ ಗೋಚರವಾದವು ಸ್ಫುಟವಾಗಿರುವವು.

3. ಚಿತ್ತಕಾಲತ್ವ, ದ್ವಯಕಾಲತ್ವ, ಅವ್ಯಕ್ತತ್ವ, ಸ್ಫುಟತ್ವ-ಎಂಬ ವಿಂಗಡವು ಕಲ್ಪಿತ ವಸ್ತುಗಳಲ್ಲಿಯೂ ಇರಬಹುದಾದ್ದರಿಂದ ಎಂದರ್ಥ.

4. "ಕಲ್ಪನಾಯಾಂ" ಅ॥

ಮಿವ ಸರ್ಪಂ ಕಲ್ಪಯತೇ ಪೂರ್ವಮ್ । ತತಃ ತಾದರ್ಥ್ಯೇನ ಕ್ರಿಯಾಕಾರಕ ಫಲಭೇದೇನ ಪ್ರಾಣಾದೀನ್ (ಪೃಥಗ್ವಿಧಾನ್ ?) ನಾನಾವಿಧಾನ್ ಭಾವಾನ್ ಬಾಹ್ಯಾನ್ ಆಧ್ಯಾತ್ಮಿಕಾಂಶ್ಚೈವ ಕಲ್ಪಯತೇ । ತತ್ರ ಕಲ್ಪನಾಯಾಂ ಕೋ ಹೇತುಃ ಇತಿ ? ಉಚ್ಯತೇ । ಯೋಽಸೌ ಸ್ವಯಂ ಕಲ್ಪಿತೋ ಜೀವಃ ಸರ್ವಕಲ್ಪನಾಯಾಮ್ ಅಧಿಕೃತಃ ಸ ಯಥಾವಿದ್ಯಃ ಯಾದೃಶೀ ವಿದ್ಯಾ ವಿಜ್ಞಾನಮ್ ಅಸ್ಯ ಇತಿ ಯಥಾವಿದ್ಯಃ ತಥಾವಿಧೈವ ಸ್ಮೃತಿಃ ತಸ್ಯ ಇತಿ ತಥಾಸ್ಮೃತಿಃ, ಭವತಿ ಸಃ ಇತಿ । ಅತಃ ಹೇತುಕಲ್ಪನಾವಿಜ್ಞಾನಾತ್ ಫಲವಿಜ್ಞಾನಮ್, ತತೋ ಹೇತುಫಲಸ್ಮೃತಿಃ, ತತಃ ತದ್ವಿಜ್ಞಾನಮ್ ತದರ್ಥ ಕ್ರಿಯಾಕಾರಕತತ್ಫಲಭೇದವಿಜ್ಞಾನಾನಿ, ತೇಭ್ಯಃ ತತ್ಸ್ಮೃತಿಃ । ತತ್ಸ್ಮೃತೇಶ್ಚ ಪುನ ಸ್ತದ್ವಿಜ್ಞಾನಾನಿ ಇತ್ಯೇವಂ ಬಾಹ್ಯಾನ್ ಆಧ್ಯಾತ್ಮಿಕಾಂಶ್ಚ ಇತರೇತರನಿಮಿತ್ತನೈಮಿತ್ತಿಕ ಭಾವೇನ ಅನೇಕಧಾ ಕಲ್ಪಯತೇ ॥

(ಭಾಷ್ಯಾರ್ಥ)

ಹೇತುಫಲಗಳ ಸ್ವರೂಪನಾದ[1] ನಾನು ಮಾಡುತ್ತೇನೆ, ನನಗೆ ಸುಖದುಃಖಗಳು (ಆಗುವವು) ಎಂಬ ರೂಪದ-ಜೀವನನ್ನು ಇಂಥ ಸ್ವರೂಪದವನಲ್ಲದ ಶುದ್ಧನಾಗಿಯೇ ಇರುವ ಆತ್ಮನಲ್ಲಿ ಹಗ್ಗದಲ್ಲಿ ಹಾವನ್ನು (ಕಲ್ಪಿಸು) ವಂತೆ ಮೊದಲು[2] ಕಲ್ಪಿಸಿಕೊಳ್ಳು ತ್ತಾನೆ. ಬಳಿಕ ಆ (ಜೀವನಿಗಾಗಿ) ಕ್ರಿಯೆ, ಕಾರಕ, ಫಲ-ಎಂಬ ಭೇದರೂಪದಿಂದ[3] ಪ್ರಾಣನೇ ಮುಂತಾದ (ಬೇರೆಬೇರೆಯ ವಿಧವಾದ) ನಾನಾವಿಧವಾದ ಹೊರಗಿನ ಮತ್ತು ಒಳಗಿನ ಭಾವಗಳನ್ನು ಕಲ್ಪಿಸುತ್ತಾನೆ. ಈ ಕಲ್ಪನೆಗೆ ಕಾರಣವೇನು ?[4] ಎಂದರೆ ಹೇಳುತ್ತಾರೆ ; ಎಲ್ಲಾ ಕಲ್ಪನೆಗೂ ಅಧಿಕಾರಿಯಾಗಿ[5] ತಾನೇ ಕಲ್ಪಿತನಾಗಿರುವ

---

1. ಕರ್ಮವು ಹೇತು, ಆದರಿಂದಾಗುವ ಭೋಗವು ಫಲ.

2. ಇಲ್ಲಿ ಜೀವತ್ವವು ಕಾಲದಲ್ಲಿ ಮೊದಲು ಆಗುವದೆಂದೂ ಬಳಿಕ ಕ್ರಿಯಾದಿಗಳು ಕಲ್ಪಿತವಾಗುವವೆಂದೂ ಅಭಿಪ್ರಾಯವಿಲ್ಲ; ಕರ್ತೃತ್ವಭೋಕ್ತೃತ್ವವನ್ನು ಕಲ್ಪಿಸಿಕೊಂಡಲ್ಲದೆ ಕ್ರಿಯಾದಿಗಳ ಕಲ್ಪನೆಯಾಗುವದಿಲ್ಲವಾದ್ದರಿಂದ ತಿಳಿವಳಿಕೆಯ ಕ್ರಮದಲ್ಲಿ ಜೀವತ್ವವೇ ಮೊದಲು ಎಂದರ್ಥ.

3. ಕ್ರಿಯೆ (ಕೆಲಸ) ಕಾರಕ (ಕೆಲಸಕ್ಕೆ ಬೇಕಾದ ಸಾಮುಗ್ರಿಗಳು) ಫಲ (ಕೆಲಸದಿಂದ ಉಂಟಾಗುವದು)-ಎಂಬ ರೂಪದ ಸಂಸಾರವು ಜೀವನಿಗೆ ಸಂಬಂಧಪಟ್ಟೇ ಕಲ್ಪಿತ ವಾಗಿರುತ್ತದೆ.

4. ಇಂಥ ಕಲ್ಪನೆಗೆ ಇಂಥದ್ದು ಕಾರಣವೆಂದು ಗೊತ್ತಾಗಿರಬೇಕಲ್ಲ! ಅದು ಯಾವದು ?

5. ಜೀವನೇ ಕಲ್ಪಿಸುವವನು, ಕಲ್ಪನೆಗೆ ಕರ್ತೃ.

ಆ ಈ ಜೀವನಿದಾನಲ್ಲ, ಅವನು ಯಥಾವಿದ್ಯನೋ ಎಂಥ ವಿದ್ಯೆಯು ಎಂದರೆ ಅರಿವು ಇವನಿಗೆ ಇರುವದರಿಂದ (ಇವನು) ಯಥಾವಿದ್ಯನು ; (ಇವನು ಎಂಥ ಅರಿವುಳ್ಳವನೋ ಎಂದರ್ಥ). ಅಂಥ ನೆನಹೇ ಇವನಿಗೆ (ಆಗುವದು) ; ಆದ್ದರಿಂದ (ಇವನು) ತಥಾಸ್ಮೃತಿಯಾಗಿರುವನು. ಆದ್ದರಿಂದ **ಹೇತುವನ್ನು ಕಲ್ಪಿಸುವ ಅರಿವಿನಿಂದ ಫಲದ ಅರಿವು (ಉಂಟಾಗುತ್ತದೆ) ; ಅದರಿಂದ ಹೇತುಫಲಗಳ ನೆನಹು, ಅದರಿಂದ ಅವುಗಳ ಅರಿವು, ಅದಕ್ಕಾಗಿ ಬೇಕಾದ ಕ್ರಿಯೆಗಳು, ಕಾರಕಗಳು, ಅವುಗಳ ಫಲಗಳು–ಇವುಗಳ ಅರಿವುಗಳು ; ಅವುಗಳಿಂದ ಆ (ಅರಿವುಗಳ) ಸ್ಮೃತಿ ಮತ್ತು ಅವುಗಳ ನೆನಹಿನಿಂದ ಮತ್ತೂ (ಒಮ್ಮೆ) ಅವುಗಳ ಅರಿವುಗಳು–ಎಂದೀ (ಕ್ರಮದಿಂದ) ಹೊರಗಿನ ಮತ್ತು** ಒಳಗಿನ (ಭಾವಗಳನ್ನು) ಒಂದಕ್ಕೊಂದು ನಿಮಿತ್ತವೆಂದೂ ನೈಮಿತ್ತಿಕವೆಂದೂ ಹಲವು ಬಗೆಯಾಗಿ ಕಲ್ಪಿಸುತ್ತಾನೆ[1] (ಎಂದರ್ಥ).

## ಜೀವಕಲ್ಪನೆಗೆ ಹೇತು ಆತ್ಮನನ್ನು ಅರಿಯದಿರುವದೇ

(ಭಾಷ್ಯ)

೧೧೨. ತತ್ರ ಜೀವಕಲ್ಪನಾ ಸರ್ವಕಲ್ಪನಾಮೂಲಮ್ ಇತ್ಯುಕ್ತಮ್ । ಸೈವ ಜೀವಕಲ್ಪನಾ ಕಿಂನಿಮಿತ್ತಾ ಇತಿ ? ದೃಷ್ಟಾಂತೇನ ಪ್ರತಿಪಾದಯತಿ—

(ಭಾಷ್ಯಾರ್ಥ)

ಇಲ್ಲಿ ಜೀವ (ನೆಂದು) ಕಲ್ಪಿಸಿಕೊಂಡಿರುವದು ಎಲ್ಲಾ ಕಲ್ಪನೆಗಳಿಗೂ ಮೂಲವು ಎಂದು ಹೇಳಿದೆ (ಯಷ್ಟೆ); ಆ ಜೀವಕಲ್ಪನೆಯೇ (ಮೊದಲು) ಯಾವ ನಿಮಿತ್ತದಿಂದ (ಆಗಿರುತ್ತದೆ) ? ಎಂದರೆ (ಇದನ್ನು) ದೃಷ್ಟಾಂತದಿಂದ ತಿಳಿಸುತ್ತಾರೆ:—

**ಅನಿಶ್ಚಿತಾ ಯಥಾ ರಜ್ಜುರಂಧಕಾರೇ ವಿಕಲ್ಪಿತಾ ।**
**ಸರ್ಪಧಾರಾದಿಭಿರ್ಭಾವೈಸ್ತದ್ವದಾತ್ಮಾ ವಿಕಲ್ಪಿತಃ ॥ ೧೭ ॥**

೧೭. ಅನಿಶ್ಚಿತವಾದ ಹಗ್ಗವು ಹೇಗೆ ಕತ್ತಲೆಯಲ್ಲಿ ಹಾವು, (ನೀರಿನ) ಕೋಡಿ–ಮುಂತಾದ ಭಾವಗಳೆಂದು ವಿಕಲ್ಪಿತವಾಗುವದೋ ಅದರಂತೆ ಆತ್ಮನು ವಿಕಲ್ಪಿತ (ನಾಗಿರುತ್ತಾನೆ).

---

1. ಊಟದ ಅನುಭವ, ಅದರಿಂದ ತೃಪ್ತಿಯ ಅನುಭವ, ಬಳಿಕ ಊಟವು ತೃಪ್ತಿಗೆ ಹೇತು, ತೃಪ್ತಿಯು ಅದರ ಫಲ ಎಂಬ ಅರಿವು, ಆ ಅರಿವಿನಿಂದ ಊಟಕ್ಕೆ ಪ್ರಯತ್ನ ಮತ್ತೆ ಅರಿವುನೆನಹುಗಳು–ಎಲ್ಲವೂ ಕಲ್ಪಿತವಾಗಿಯೇ ಆಗುವವು. ಕನಸಿನ ನಿಮಿತ್ತನೈಮಿತ್ತಿಕ ಭಾವದಂತೆಯೇ ಇದು. ಸತ್ಯವಾದ ನಿಮಿತ್ತವು ಯಾವದೂ ಇರಬೇಕಾದದ್ದಿಲ್ಲ. ಜೀವನಿಂದ ಹಿಡಿದು ಎಲ್ಲವೂ ಕಲ್ಪಿತವೇ ಎಂದು ಭಾವ.

(ಭಾಷ್ಯ)

೧೧೩. ಯಥಾ ಲೋಕೇ ಸ್ವೇನ ರೂಪೇಣ ಅನಿಶ್ಚಿತಾ ಅನವಧಾರಿತಾ ಏವಮೇವ ಇತಿ ರಜ್ಜುಃ ಮನ್ದಾನ್ಧಕಾರೇ। ಕಿಮ್ ? ಸರ್ಪಃ, ಉದಕಧಾರಾ, ದಣ್ಡ ಇತಿ ವಾ ಅನೇಕಧಾ ವಿಕಲ್ಪಿತಾ ಭವತಿ ಪೂರ್ವಂ ಸ್ವರೂಪಾನಿಶ್ಚಯನಿಮಿತ್ತಮ್ । ಯದಿ ಹಿ ಪೂರ್ವಮೇವ ರಜ್ಜುಃ ಸ್ವರೂಪೇಣ ನಿಶ್ಚಿತಾ ಸ್ಯಾತ್ ನ ಸರ್ಪಾದಿವಿಕಲ್ಪಃ ಅಭವಿಷ್ಯತ್ । ಯಥಾ ಸ್ವಹಸ್ತಾಙ್ಗುಲ್ಯಾದಿಷು । (ಯಥಾ)[1] ಏಷ ದೃಷ್ಟಾನ್ತಃ ತದ್ವತ್ ಹೇತುಫಲಾದಿಸಂಸಾರಧರ್ಮಾನರ್ಥವಿಲಕ್ಷಣತಯಾ ಸ್ವೇನ ವಿಶುದ್ಧವಿಜ್ಞಪ್ತಿಮಾತ್ರಸತ್ತಾದ್ವಯರೂಪೇಣ ಅನಿಶ್ಚಿತತ್ವಾತ್ ಜೀವಪ್ರಾಣಾದ್ಯನನ್ತಭಾವಭೇದೈಃ ಆತ್ಮಾ ವಿಕಲ್ಪಿತಃ ಇತ್ಯೇಷ ಸರ್ವೋಪನಿಷದಾಂ ಸಿದ್ಧಾನ್ತಃ ॥—

(ಭಾಷ್ಯಾರ್ಥ)

ಹೇಗೆ ಲೋಕದಲ್ಲಿ ತನ್ನರೂಪದಿಂದ ನಿಶ್ಚಯವಾಗದೆ ಇರುವ, ಹೀಗೆಯೇ (ಸರಿ) ಎಂದು ಗೊತ್ತಾಗದೆ ಇರುವ, ಹಗ್ಗವು ನಸುಗತ್ತಲೆಯಲ್ಲಿ-ಏನು ? (ಎಂದರೆ) ಹಾವು, ನೀರಿನಕೋಡಿ, ಅಥವಾ ಕೋಲು ಎಂದು (ಅದರ) ಸ್ವರೂಪವನ್ನು ಮೊದಲು ನಿಶ್ಚಯಿಸಿಕೊಳ್ಳದೆ ಇರುವ ನಿಮಿತ್ತದಿಂದ[2] ಬಲುಬಗೆಯಿಂದ ವಿಕಲ್ಪಿತವಾಗಿರುತ್ತದೆಯೋ. ಮೊದಲೇ ಹಗ್ಗವನ್ನು ಸ್ವರೂಪದಿಂದ ನಿಶ್ಚಯಿಸಿಕೊಂಡಿದ್ದರೆ, ಹಾವು (ಎಂದು) ಮುಂತಾದ ವಿಕಲ್ಪವು ಆಗುತ್ತಲೇ ಇರಲಿಲ್ಲ ; ಉದಾಹರಣೆಗೆ ತನ್ನ ಕೈಬೆರಳು ಮುಂತಾದ್ದರಲ್ಲಿ (ಈ ವಿಕಲ್ಪವಾಗುವದಿಲ್ಲ). ಅಲ್ಲವೆ ? ಈ ದೃಷ್ಟಾಂತವು (ಹೇಗೋ), ಅದರಂತೆ ಹೇತು, ಫಲ-ಮುಂತಾದ ಸಂಸಾರಧರ್ಮಗಳೆಂಬ ಅನರ್ಥಕ್ಕಿಂತ ವಿಲಕ್ಷಣವಾಗಿರುವ ಬಹುಶುದ್ಧವಾದ ಬರಿಯ ಚೈತನ್ಯವೂ ತನಗೆರಡನೆಯದಿಲ್ಲದ್ದೂ

---

1. ಈ ಮಾತು ಇಲ್ಲಿರಬೇಕೆಂದು ತೋರುತ್ತದೆ "ಯಥಾ" ಇಲ್ಲದೆಯೇ ವ್ಯಾಖ್ಯಾನ ಪಾಠ.

2. ಹಾವು ಮುಂತಾದವು ತೋರುವದಕ್ಕೆ ನಿಮಿತ್ತವೇನೆಂದು ಪ್ರಶ್ನೆ, ಹಗ್ಗದ ನಿಶ್ಚಯವಿಲ್ಲದಾಗಲೆಲ್ಲ ಹಾವು ತೋರಬೇಕೆಂಬ ಅಥವಾ ಹಾವೇ ತೋರಬೇಕೆಂಬ ನಿಯಮವೇನೂ ಇಲ್ಲ. ಈಚಿನ ವೇದಾಂತಿಗಳು ಕೆಲವರು ಹಾವೇ ಮುಂತಾದದ್ದಕ್ಕೆ ಹಗ್ಗದಲ್ಲಿರುವ ಚೈತನ್ಯವನ್ನಾಶ್ರಯಿಸಿರುವ ಅವಿದ್ಯೆಯೆಂಬುದು ಉಪಾದಾನಕಾರಣವೆಂದು ಕಲ್ಪಿಸಿರುತ್ತಾರೆ ; ಈ ಪ್ರಕ್ರಿಯೆಯು ವೇದಾಂತಸಿದ್ಧಾಂತಕ್ಕೆ ಅಪ್ರಕೃತವೂ ಭಾಷ್ಯಕಾರಿಕೆಗಳಿಗೆ ಹೊರಚ್ಚಾದದ್ದೂ ಆಗಿರುತ್ತದೆ. ಪೀಠಿಕೆಯನ್ನು ನೋಡಿ.

(ಆದ) ತನ್ನ ರೂಪದಿಂದ ನಿಶ್ಚಯವಾಗದೆ ಇರುವದರಿಂದ ಜೀವನು[1] ಪ್ರಾಣನು[2]- ಎಂದು ಮುಂತಾಗಿ ಲೆಕ್ಕವಿಲ್ಲದಷ್ಟು ಭಾವವಿಶೇಷಗಳ ರೂಪದಿಂದ ಆತ್ಮನು ವಿಕಲ್ಪಿತನಾಗಿರುತ್ತಾನೆ. ಹೀಗೆಂಬುದೇ ಎಲ್ಲಾ ಉಪನಿಷತ್ತುಗಳ ಸಿದ್ಧಾಂತವು.[3]

## ಸರ್ವಕಲ್ಪನಾನಿವೃತ್ತಿಯು ಜ್ಞಾನದ ಫಲ

**ನಿಶ್ಚಿತಾಯಾಂ ಯಥಾ ರಜ್ಜ್ವಾಂ ವಿಕಲ್ಪೋ ವಿನಿವರ್ತತೇ ।**
**ರಜ್ಜುರೇವೇತಿ ಚಾದ್ವೈತಂ ತದ್ವದಾತ್ಮವಿನಿಶ್ಚಯಃ ॥ ೧೮ ॥**

೧೮. ಹಗ್ಗವು ನಿಶ್ಚಯವಾಗಲು ಹೇಗೆ ವಿಕಲ್ಪವು ಹೋಗಿಬಿಡುವದೋ, ಹಗ್ಗವೇ ಎಂದು ಅದ್ವೈತ(ವಾಗಿ) ಬಿಡುವದೋ, ಅದರಂತೆಯೇ ಆತ್ಮವಿನಿಶ್ಚಯವು.

(ಭಾಷ್ಯ)

೧೦೪. ರಜ್ಜುರೇವ ಇತಿ ನಿಶ್ಚಯೇ ಸರ್ವವಿಕಲ್ಪನಿವೃತ್ತೌ ರಜ್ಜುರೇವ ಇತಿ ಚ ಅದ್ವೈತಂ ಯಥಾ ತಥಾ "ನೇತಿ ನೇತಿ" (ಬೃ. ೪-೪-೨೨) ಇತಿ ಸರ್ವಸಂಸಾರಧರ್ಮಶೂನ್ಯಪ್ರತಿಪಾದಕಶಾಸ್ತ್ರಜನಿತವಿಜ್ಞಾನಸೂರ್ಯಾಲೋಕಕೃತಾತ್ಮವಿನಿಶ್ಚಯಃ। "ಆತ್ಮೈವೇದಂ ಸರ್ವಮ್" (ಛಾಂ. ೭-೨೫-೨) "ಅಪೂರ್ವಮನಪರಮನನ್ತರಮಬಾಹ್ಯಮ್" (ಬೃ. ೨-೫-೧೯) "ಸಬಾಹ್ಯಾಭ್ಯನ್ತರೋ ಹ್ಯಜಃ" (ಮುಂ. ೨-೧-೨) "ಅಜರೋಽಮರೋಽಮೃತೋಽಭಯಃ" (ಬೃ. ೪-೪-೨೫) ಏಕ ಏವಾದ್ವಯಃ ಇತಿ ॥

(ಭಾಷ್ಯಾರ್ಥ)

**ಇದು ಹಗ್ಗವೇ (ಸರಿ) ಎಂದು ನಿಶ್ಚಯವಾಗಲು ಎಲ್ಲಾ ವಿಕಲ್ಪಗಳೂ ತೊಲಗಲಾಗಿ ಹಗ್ಗ(ವೊಂ)ದೇ ಎಂದು ಹೇಗೆ ಅದ್ವೈತವಾಗುತ್ತದೆಯೋ ಹಾಗೆಯೇ[4] "ಇದಲ್ಲ, ಇದಲ್ಲ" (ಬೃ. ೪-೪-೨೨) ಎಂದು ಯಾವ ಸಂಸಾರ**

---

1. ಕರ್ತೃಭೋಕ್ತೃರೂಪನಾದ ಪ್ರಾಣ.

2. ಪ್ರಾಜ್ಞನು.

3. ಅದ್ವಿತೀಯಚೈತನ್ಯರೂಪನಾದ ಆತ್ಮನಲ್ಲಿಯೇ ಜಗತ್ತೆಲ್ಲವೂ ಅಜ್ಞಾನದಿಂದ ತೋರುತ್ತಿರುವದೆಂಬುದೇ ವೇದಾಂತಸಿದ್ಧಾಂತವು ಎಂದರ್ಥ.

4. ಇಲ್ಲಿ ಹಾವು ತೋರದೆ ಹೋಗುವದೆಂಬುದು ದೃಷ್ಟಾಂತದಲ್ಲಿ ವಿವಕ್ಷಿತವಲ್ಲ. ಹಾವೆಂಬ ನಿಶ್ಚಯವು ತೊಲಗುವದೇ ಬೇಕಾದ ಹೋಲಿಕೆ.

**ಧರ್ಮವೂ (ಇಲ್ಲದ ಆತ್ಮನನ್ನು) ತಿಳಿಸಿಕೊಡುವ ಶಾಸ್ತ್ರದಿಂದ ಹುಟ್ಟಿದ ವಿಜ್ಞಾನವೆಂಬ ಸೂರ್ಯನ ಬೆಳಕಿನಿಂದ ಆಗುವ ಆತ್ಮವಿನಿಶ್ಚಯವು.**[1] "ಇದೆಲ್ಲವೂ ಆತ್ಮನೇ" (ಛಾಂ. ೭-೨೫-೨) "ಆ ಈ ಬ್ರಹ್ಮವು ಹಿಂದಿಲ್ಲದ, ಮುಂದಿಲ್ಲದ, ಒಳಗಿಲ್ಲದ, ಹೊರಗಿಲ್ಲದ (ತತ್ತ್ವವು)" (ಬೃ. ೨-೫-೧೯) "ಒಳಗೂ ಹೊರಗೂ ಅಜನಾದವನೇ" (ಮುಂ. ೨-೧-೨) "ಮುಪ್ಪಿಲ್ಲದ, ಸಾವಿಲ್ಲದ, ನಾಶವಾಗುವ ಸ್ವಭಾವವಿಲ್ಲದ, ಅಂಜಿಕೆಯಿಲ್ಲದ" (ಬೃ-೪-೪-೨೫) ಎರಡನೆಯದಿಲ್ಲದ ಒಬ್ಬನೇ (ಆಗಿರುವನು) ಎಂದು (ಆಗುತ್ತದೆ).

## ಆತ್ಮನಲ್ಲಿ ತೋರುವ ವಿಕಲ್ಪಗಳು ಮಾಯಾಮಾತ್ರ

**ಪ್ರಾಣಾದಿಭಿರನನ್ತೈಶ್ಚ ಭಾವೈರೇತೈರ್ವಿಕಲ್ಪಿತಃ ।**
**ಮಾಯೈಷಾ ತಸ್ಯ ದೇವಸ್ಯ ಯಯಾಯಂ[2] ಮೋಹಿತಃ ಸ್ವಯಮ್॥೧೯॥**

೧೯. ಪ್ರಾಣನೇ ಮುಂತಾದ ಈ ಲೆಕ್ಕವಿಲ್ಲದಷ್ಟು ಭಾವಗಳಾಗಿ (ಆತ್ಮನು) ವಿಕಲ್ಪಿತನಾಗಿರುತ್ತಾನೆ. ಇದು ಆ ದೇವನ ಮಾಯೆ; ಅದರಿಂದ ಇವನು ತಾನೇ ಮೋಹಿತನಾಗಿರುತ್ತಾನೆ.

(ಭಾಷ್ಯ)

೧೦೫. ಯದಿ ಆತ್ಮಾ ಏಕ ಏವ ಇತಿ ನಿಶ್ಚಯಃ, ಕಥಂ ಪ್ರಾಣಾದಿಭಿಃ ಅನನ್ತೈಃ ಭಾವೈಃ ಏತೈಃ ಸಂಸಾರಲಕ್ಷಣೈಃ ವಿಕಲ್ಪಿತಃ ಇತಿ? ಉಚ್ಯತೇ। ಶೃಣು। ಮಾಯಾ ಏಷಾ ತಸ್ಯ ಆತ್ಮನಃ ದೇವಸ್ಯ। ಯಥಾ ಮಾಯಾವಿನಾ ವಿಹಿತಾ ಮಾಯಾ ಗಗನಮ್ ಅತಿವಿಮಲಂ ಕುಸುಮಿತೈಃ ಸಪಲಾಶೈಃ ತರುಭಿಃ ಆಕೀರ್ಣಮಿವ ಕರೋತಿ ತಥಾ ಇಯಮಪಿ ದೇವಸ್ಯ ಮಾಯಾ ಯಯಾ ಅಯಂ ಸ್ವಯಮಪಿ ಮೋಹಿತ ಇವ ಮೋಹಿತೋ ಭವತಿ। "ಮಮ ಮಾಯಾ ದುರತ್ಯಯಾ" (ಗೀ. ೭-೧೪) ಇತ್ಯುಕ್ತಮ್ ॥

(ಭಾಷ್ಯಾರ್ಥ)

(ಆಕ್ಷೇಪ):—ಆತ್ಮನೊಬ್ಬನೇ ಸತ್ಯವು ಎಂಬುದೇ ನಿಶ್ಚಯವಾದರೆ ಪ್ರಾಣನೇ ಮೊದಲಾದ ಸಂಸಾರರೂಪವಾದ ಈ ಲೆಕ್ಕವಿಲ್ಲದಷ್ಟು ಭಾವಗಳಾಗಿ (ಅವನು) ವಿಕಲ್ಪಿತನಾಗಿರುವದು ಹೇಗೆ?

---

1. ಈ ನಿಶ್ಚಯವಾಗುವಾಗ ಯಾವದೊಂದೂ ಹೊಸದಾಗಿ ಬರುವದಿಲ್ಲ, ಯಾವದೊಂದೂ ನಿಜವಾಗಿ ಹೋಗುವದಿಲ್ಲವೆಂಬುದನ್ನು ಮನಸ್ಸಿನಲ್ಲಿಡಬೇಕು.

2. ಈ ವಾ॥ ಮ್ನ॥ ಪಾಠವೇ ಭಾಷ್ಯಸಮ್ಮತವಾಗಿರುವಂತೆ ಕಾಣುತ್ತದೆ.

(ಪರಿಹಾರ):—ಹೇಳುತ್ತೇವೆ, ಕೇಳು. ಇದು ಆ ಆತ್ಮನೆಂಬ ದೇವನ ಮಾಯೆಯು. ಹೇಗೆ ಮಾಯಾವಿಯು ಮಾಡಿದ ಮಾಯೆಯು ಬಹು ನಿರ್ಮಲವಾಗಿರುವ ಆಕಾಶ ವನ್ನು ಹೂಬಿಟ್ಟು ಎಲೆಗಳಿಂದ ಕೂಡಿದ ಮರಗಳು ತುಂಬಿಕೊಂಡಿರುವಂತೆ (ಕಾಣುವ ಹಾಗೆ) ಮಾಡುವದೋ ಹಾಗೆ ದೇವನ ಈ ಮಾಯೆಯೂ (ಮಾಡಿರುತ್ತದೆ). ಇದ ರಿಂದ ಈ (ಆತ್ಮನು) ತಾನೂ ಮೋಹಿತನಾಗಿರುತ್ತಾನೆ, ಮೋಹಿತನಾದಂತೆ (ಕಾಣು ತ್ತಾನೆ). “ನನ್ನ ಮಾಯೆಯು ದಾಟುವದಕ್ಕೆ ಕಷ್ಟವಾದದ್ದು” (ಗೀ. ೭-೧೪) ಎಂದು (ಭಗವಂತನಿಂದಲೂ) ಉಕ್ತವಾಗಿದೆ.

## ಆತ್ಮನಲ್ಲಿ ವಾದಿಗಳ ಕಲ್ಪನೆಗಳು

**ಪ್ರಾಣ ಇತಿ ಪ್ರಾಣವಿದೋ ಭೂತಾನೀತಿ ಚ ತದ್ವಿದಃ ।**
**ಗುಣಾ ಇತಿ ಗುಣವಿದಸ್ತತ್ತ್ವಾನೀತಿ ಚ ತದ್ವಿದಃ ॥ ೨೦ ॥**

೨೦. ಪ್ರಾಣನೆಂದು ಪ್ರಾಣನನ್ನು ಬಲ್ಲವರು[1]; ಮತ್ತು ಭೂತಗ ಳೆಂದು ಅವನ್ನು ಬಲ್ಲವರು; ಗುಣಗಳು ಎಂದು ಗುಣಗಳನ್ನು ಬಲ್ಲವರು; ಮತ್ತು ತತ್ತ್ವಗಳು ಎಂದು ಅವನ್ನು ಬಲ್ಲವರು.

**ಪಾದಾ ಇತಿ ಪಾದವಿದೋ ವಿಷಯಾ ಇತಿ ತದ್ವಿದಃ ।**
**ಲೋಕಾ ಇತಿ ಲೋಕವಿದೋ ದೇವಾ ಇತಿ ಚ ತದ್ವಿದಃ ॥ ೨೧ ॥**

೨೧. ಪಾದಗಳೆಂದು ಪಾದಗಳನ್ನು ಬಲ್ಲವರು; ವಿಷಯಗಳು ಎಂದು ಅವನ್ನು ಬಲ್ಲವರು; ಲೋಕಗಳು ಎಂದು ಲೋಕಗಳನ್ನು ಬಲ್ಲವರು; ಮತ್ತು ದೇವತೆಗಳು ಎಂದು ಅವರನ್ನು ಬಲ್ಲವರು.

**ವೇದಾ ಇತಿ ವೇದವಿದೋ ಯಜ್ಞಾ ಇತಿ ಚ ತದ್ವಿದಃ ।**
**ಭೋಕ್ತೇತಿ ಚ ಭೋಕ್ತೃವಿದೋ ಭೋಜ್ಯಮಿತಿ ಚ ತದ್ವಿದಃ ॥ ೨೨ ॥**

೨೨. ವೇದಗಳು ಎಂದು ವೇದಗಳನ್ನು ಬಲ್ಲವರು; ಮತ್ತು ಯಜ್ಞಗಳು ಎಂದು ಅವನ್ನು ಬಲ್ಲವರು; ಭೋಕ್ತೃ ಎಂದು ಭೋಕ್ತೃವನ್ನು ಬಲ್ಲವರು; ಭೋಜ್ಯವು ಎಂದು ಅದನ್ನು ಬಲ್ಲವರು.

---

1. “ಪ್ರಾಣನೆಂದರೆ ಹಿರಣ್ಯಗರ್ಭನು, ಅಥವಾ ತಟಸ್ಥೇಶ್ವರನು” ಎಂಬ ಆ॥ ವ್ಯಾಖ್ಯಾನವು ಭಾಷ್ಯವಿರುದ್ಧ; ಪ್ರಾಣನೆಂದರೆ ಪ್ರಾಜ್ಞನು ಎಂದು ಮುಂದೆ ಭಾಷ್ಯದಲ್ಲಿಯೇ ಇದೆ.

**ಸೂಕ್ಷ್ಮ ಇತಿ ಸೂಕ್ಷ್ಮವಿದಃ ಸ್ಥೂಲ ಇತಿ ಚ ತದ್ವಿದಃ ।**
**ಮೂರ್ತ ಇತಿ ಮೂರ್ತವಿದೋಽಮೂರ್ತ ಇತಿ ಚ ತದ್ವಿದಃ ॥ ೨೩ ॥**

೨೩. ಸೂಕ್ಷ್ಮನೆಂದು ಸೂಕ್ಷ್ಮವನ್ನು ಬಲ್ಲವರು, ಮತ್ತು ಸ್ಥೂಲನೆಂದು ಅದನ್ನು ಬಲ್ಲವರು. ಮೂರ್ತನೆಂದು ಮೂರ್ತವನ್ನು ಬಲ್ಲವರು, ಮತ್ತು ಅಮೂರ್ತನೆಂದು ಅದನ್ನು ಬಲ್ಲವರು.

**ಕಾಲ ಇತಿ ಕಾಲವಿದೋ ದಿಶ ಇತಿ ಚ ತದ್ವಿದಃ ।**
**ವಾದಾ ಇತಿ ವಾದವಿದೋ ಭುವನಾನೀತಿ ತದ್ವಿದಃ ॥ ೨೪ ॥**

೨೪. ಕಾಲವೆಂದು ಕಾಲವನ್ನು ಬಲ್ಲವರು, ಮತ್ತು ದಿಕ್ಕುಗಳೆಂದು ಅವನ್ನು ಬಲ್ಲವರು, ವಾದಗಳು ಎಂದು ವಾದವನ್ನು ಬಲ್ಲವರು, ಭುವನಗಳು ಎಂದು ಅವನ್ನು ಬಲ್ಲವರು.

**ಮನ ಇತಿ ಮನೋವಿದೋ ಬುದ್ಧಿರಿತಿ ಚ ತದ್ವಿದಃ ।**
**ಚಿತ್ತಮಿತಿ ಚಿತ್ತವಿದೋ ಧರ್ಮಾಧರ್ಮೌ ಚ ತದ್ವಿದಃ ॥ ೨೫ ॥**

೨೫. ಮನಸ್ಸೆಂದು ಮನಸ್ಸನ್ನು ಬಲ್ಲವರು, ಮತ್ತು ಬುದ್ಧಿ ಎಂದು ಅದನ್ನು ಬಲ್ಲವರು. ಚಿತ್ತವು ಎಂದು ಚಿತ್ತವನ್ನು ಬಲ್ಲವರು, ಮತ್ತು ಧರ್ಮಾಧರ್ಮಗಳು ಎಂದು ಅವನ್ನು ಬಲ್ಲವರು.

**ಪಞ್ಚವಿಂಶಕ ಇತ್ಯೇಕೇ ಷಡ್ವಿಂಶ ಇತಿ ಚಾಪರೇ ।**
**ಏಕತ್ರಿಂಶಕ ಇತ್ಯಾಹುರನನ್ತ ಇತಿ ಚಾಪರೇ ॥ ೨೬ ॥**

೨೬. ಇಪ್ಪತ್ತೈದನೆಯವನೆಂದು[1] ಕೆಲವರು; ಇಪ್ಪತ್ತಾರನೆಯವನೆಂದು[2] ಮತ್ತೆ ಕೆಲವರು; ಮೂವತ್ತೊಂದನೆಯವನೆಂದು[3] (ಕೆಲವರು) ಹೇಳುವರು; ಅನಂತನು ಎಂದೂ ಕೆಲವರು.

---

1. ಮೂಲಪ್ರಕೃತಿ; ಮಹತ್ತು; ಅಹಂಕಾರ, ತನ್ಮಾತ್ರೆಗಳು ಐದು-ಎಂಬ ಏಳು ಪ್ರಕೃತಿವಿಕೃತಿಗಳು; ಜ್ಞಾನೇಂದ್ರಿಯಗಳು, ಕರ್ಮೇಂದ್ರಿಯಗಳು ವಿಷಯಗಳು, ಮನಸ್ಸು ಹೀಗೆ ಹದಿನಾರು ವಿಕಾರಗಳು. ಈ ಇಪ್ಪತ್ತುನಾಲ್ಕಕ್ಕಿಂತ ಬೇರೆಯಾದ್ದರಿಂದ ಪುರುಷನು ಇಪ್ಪತ್ತೈದನೆಯವನು-ಎಂದು ಸಾಂಖ್ಯರು.

2. ಸಾಂಖ್ಯರ ತತ್ತ್ವಗಳಿಗಿಂತ ಬೇರೆಯಾದ ಈಶ್ವರನು ಇಪ್ಪತ್ತಾರನೆಯವನು ಎಂದು ಪಾತಂಜಲಯೋಗಿಗಳು.

3. ಇದು ಪಾಶುಪತರ ಮತವು:-ಇವರ ಮತದಂತೆ ರಾಗ, ಅವಿದ್ಯೆ, ನಿಯತಿ, ಕಾಲ, ಕಲಾ, ಮಾಯಾ, ಇವು ಸೇರಿ ಮೂವತ್ತೊಂದು ಎಂದು ಆ॥ ವ್ಯಾಖ್ಯಾನ. ಭೋಜದೇವ ಕೃತ ತತ್ತ್ವಪ್ರಕಾಶಿಕೆಯಲ್ಲಿ (೨೧-೨೩) ಹೇಳಿರುವ ತತ್ತ್ವಗಳೂ ಮೂವತ್ತೊಂದಿವೆ.

**ಲೋಕಾಂಲ್ಲೋಕವಿದಃ ಪ್ರಾಹುರಾಶ್ರಮಾ ಇತಿ ತದ್ವಿದಃ ।**
**ಸ್ತ್ರೀಪುಂನಪುಂಸಕಂ ಲೈಙ್ಗಾಃ ಪರಾಪರಮಥಾಪರೇ ॥ ೨೭ ॥**

೨೭. ಜನರೆಂದು ಜನವನ್ನು ಬಲ್ಲವರೂ, ಆಶ್ರಮಗಳು ಎಂದು ಅವನ್ನು ಬಲ್ಲವರೂ, ಹೆಣ್ಣು, ಗಂಡು, ನಪುಂಸಕ–ಎಂದು ಲಿಂಗವನ್ನು ಬಲ್ಲವರೂ, ಪರಾಪರವೆಂದು ಮತ್ತೆ ಕೆಲವರೂ (ಹೇಳುವರು).

**ಸೃಷ್ಟಿರಿತಿ ಸೃಷ್ಟಿವಿದೋ ಲಯ ಇತಿ ಚ ತದ್ವಿದಃ ।**
**ಸ್ಥಿತಿರಿತಿ ಸ್ಥಿತಿವಿದಃ ಸರ್ವೇ ಚೇಹ ತು ಸರ್ವದಾ ॥ ೨೮ ॥**

೨೮. ಸೃಷ್ಟಿ ಎಂದು ಸೃಷ್ಟಿಯನ್ನು ಬಲ್ಲವರೂ, ಲಯವೆಂದು ಅದನ್ನು ಬಲ್ಲವರೂ, ಸ್ಥಿತಿ ಎಂದು ಸ್ಥಿತಿಯನ್ನು ಬಲ್ಲವರೂ (ಹೇಳುವರು). ಆದರೆ (ಇವು) ಎಲ್ಲವೂ ಯಾವಾಗಲೂ ಈ (ಆತ್ಮ)ನಲ್ಲಿ (ಕಲ್ಪಿತವಾಗಿರುತ್ತವೆ).

(ಭಾಷ್ಯ)

೧೧೬. ಪ್ರಾಣಃ ಪ್ರಾಜ್ಞಃ ಬೀಜಾತ್ಮಾ । ತತ್ಕಾರ್ಯಭೇದಾ ಹಿ ಇತರೇ ಸ್ಥಿತ್ಯನ್ತಾಃ, ಅನ್ಯೇ ಚ ಸರ್ವೇ ಲೌಕಿಕಾಃ । ಸರ್ವಪ್ರಾಣಿಪರಿಕಲ್ಪಿತಾ ಭೇದಾಃ ರಜ್ಜ್ವಾಮಿವ ಸರ್ಪಾದಯಃ ತಚ್ಛೂನ್ಯೇ ಆತ್ಮನಿ ಆತ್ಮಸ್ವರೂಪಾನಿಶ್ಚಯಹೇತೋಃ ಅವಿದ್ಯಯಾ ಕಲ್ಪಿತಾಃ ಇತಿ ಪಿಣ್ಡೀಕೃತೋ[1]ಽರ್ಥಃ। ಪ್ರಾಣಾದಿಶ್ಲೋಕಾನಾಂ ಪ್ರತ್ಯೇಕಂ ಪದಾರ್ಥವ್ಯಾಖ್ಯಾನೇ ಫಲ್ಗುಪ್ರಯೋಜನತ್ವಾತ್ ಸಿದ್ಧಪದಾರ್ಥತ್ವಾಚ್ಚ ಯತ್ನೋ ನ ಕೃತಃ ॥

(ಭಾಷ್ಯಾರ್ಥ)

ಪ್ರಾಣನು ಎಂದರೆ ಪ್ರಾಜ್ಞನು, ಬೀಜಾತ್ಮನು,[2] ಏಕೆಂದರೆ ಸ್ಥಿತಿ ಎಂಬವರೆಗೆ (ಹೇಳಿರುವ) ಉಳಿದ (ಭಾವಗಳೂ), ಮತ್ತೂ ಬೇರೆಯಾದ ಲೌಕಿಕಭಾವಗಳೂ,[3] ಎಲ್ಲವೂ ಅವನ ಕಾರ್ಯವಿಶೇಷಗಳೇ (ಆಗಿವೆ). ಸರ್ವ ಜೀವರೂ ಕಲ್ಪಿಸಿರುವ

1. "ಪಿಣ್ಡಿತೋ" ಪಾ॥

2. ಆಗಮಪ್ರಕರಣದಲ್ಲಿ ಪ್ರಾಜ್ಞ; ಅವ್ಯಾಕೃತ–ಎರಡೂ ಒಂದೇ ಎಂದು ವರ್ಣಿಸಿದ ಆತ್ಮಸ್ವರೂಪವು.

3. ಶಾಸ್ತ್ರೀಯತತ್ತ್ವಗಳಂತೆ ಲೋಕದ ಜನರು ಕಲ್ಪಿಸಿರುವ ಪದಾರ್ಥಗಳೂ ಪ್ರಾಜ್ಞನ ಕಾರ್ಯಗಳೇ; ಅವೂ ಹೀಗೆಯೇ ಕಲ್ಪಿತ.

ೀದಗಳು ಹಗ್ಗದಲ್ಲಿ ಹಾವು ಮುಂತಾದವನ್ನು (ಕಲ್ಪಿಸುವಂತೆ) ಇವುಗಳಿಲ್ಲದ ಆತ್ಮ ಲ್ಲಿ ಆತ್ಮಸ್ವರೂಪವನ್ನು ನಿಶ್ಚಯಿಸದೆ ಇರುವದೆಂಬ ಹೇತುವಿನಿಂದ ಅವಿದ್ಯೆಯಿಂದ ಲ್ಪಿತವಾಗಿವೆ ಎಂಬುದು ಒಟ್ಟರ್ಥವು. 'ಪ್ರಾಣಃ' ಎಂದು ಮುಂತಾಗಿರುವ ್ಲೋಕಗಳಿಗೆ ಒಂದೊಂದಾಗಿ ಪದಾರ್ಥವನ್ನು ವಿವರಿಸುವದರಿಂದ ಪ್ರಯೋಜನವು ತ್ಯಲ್ಪವಾಗಿರುವದರಿಂದಲೂ, (ಅವುಗಳಲ್ಲಿರುವ) ಪದಗಳ ಅರ್ಥಗಳು ತಿಳಿದೇ ುವದರಿಂದಲೂ (ಆ ವ್ಯಾಖ್ಯಾನಕ್ಕಾಗಿ ನಾವು) ಪ್ರಯತ್ನವನ್ನು ಮಾಡಲಿಲ್ಲ.

**ಯಂ ಭಾವಂ ದರ್ಶಯೇದ್ಯಸ್ಯ ತಂ ಭಾವಂ ಸ ತು ಪಶ್ಯತಿ ।**
**ತಂ ಚಾವತಿ ಸ ಭೂತ್ವಾಸೌ ತದ್ಗ್ರಹಃ ಸಮುಪೈತಿ ತಮ್ ॥ ೨೯ ॥**

೨೯. ಯಾವನಿಗೆ ಯಾವ ಭಾವವನ್ನು ತೋರಿಸುತ್ತಾನೋ ' ಭಾವವನ್ನೇ ಅವನು ಕಾಣುತ್ತಾನೆ. ಮತ್ತು ಅದು ಈ (ಆತ್ಮ)ನಾಗಿ ವನನ್ನು ಕಾಪಾಡಿಕೊಳ್ಳುತ್ತದೆ; ಅದರ ಗ್ರಹಣೆಯು ಅವನನ್ನು ಬಂದು ೀರಿಕೊಳ್ಳುತ್ತದೆ.

(ಭಾಷ್ಯ)

೧೦೭. ಕಿಂ ಬಹುನಾ? ಪ್ರಾಣಾದೀನಾಮ್ ಅನ್ಯತಮಮ್ ಉಕ್ತಮ್ ನುಕ್ತಂ ವಾ ಅನ್ಯಂ ಯಂ[1] ಭಾವಂ ಪದಾರ್ಥಂ ದರ್ಶಯೇತ್ ಯಸ್ಯ ಆಚಾರ್ಯಃ ನ್ಯೋ ವಾ ಆಪ್ತಃ ಇದಮೇವ ತತ್ತ್ವಮ್ ಇತಿ ಸಃ ತಂ ಭಾವಮ್ ಆತ್ಮಭೂತಂ ಶ್ಯತಿ 'ಅಯಮ್ ಅಹಮ್' ಇತಿ ವಾ 'ಮಮ' ಇತಿ ವಾ । ತಂ ಚ ದ್ರಷ್ಟಾರಂ ಸ ಾವಃ ಅವತಿ । ಯೋ ದರ್ಶಿತೋ ಭಾವಃ ಅಸೌ (ಸ)[2] ಭೂತ್ವಾ ರಕ್ಷತಿ । ಸ್ವೇನ ್ಮನಾ ಸರ್ವತಃ ನಿರುಣದ್ಧಿ । ತಸ್ಮಿನ್ ಗ್ರಹಃ ತದ್ಗ್ರಹಃ, ತದಭಿನಿವೇಶಃ ಇದಮೇವ ತ್ತ್ವಮ್ ಇತಿ । ಸಃ ತಂ ಗ್ರಹೀತಾರಂ ಸಮುಪೈತಿ[3] ತಸ್ಯ ಆತ್ಮಭಾವಂ ನಿಗಚ್ಛತಿ ತ್ಯರ್ಥಃ ॥

---

1. ಆ॥ ಪಾಠದಲ್ಲಿ ಬಿಟ್ಟುಹೋಗಿದೆ.

2. ಆ॥ ಪಾಠದಲ್ಲಿಲ್ಲ; ಇಲ್ಲದಿದ್ದರೂ ಸಾಗುತ್ತದೆ.

3. 'ಉಪೈತಿ' ಎಂದಿಷ್ಟೇ ಅಚ್ಚಿನ ಪುಸ್ತಕಗಳಲ್ಲಿದೆ; ಮೂಲದಲ್ಲಿ ಸಮುಪೈತಿ ಂದೇ ಇದೆ; ಇಲ್ಲಿಯೂ ಇತ್ತೆಂದೇ ತೋರುತ್ತದೆ.

(ಭಾಷ್ಯಾರ್ಥ)

ಹೆಚ್ಚು (ಹೇಳಿದ್ದರಿಂ)ದೇನು? ಮೇಲೆ ಹೇಳಿರುವ ಪ್ರಾಣವೇ ಮುಂತಾದವುಗಳಲ್ಲಿ ಯಾವದಾದರೊಂದನ್ನು, ಅಥವಾ ಹೇಳದೆ ಇರುವ ಮತ್ತೊಂದನ್ನು, ಯಾವ ಭಾವವನ್ನು ಪದಾರ್ಥವನ್ನು 'ಇದೇ ತತ್ತ್ವವು' ಎಂದು ಯಾವನಿಗೆ **ಆಚಾರ್ಯನೋ**[1] ಅಥವಾ ಮತ್ತೆ ಯಾವನಾದರೊಬ್ಬ **ಆಪ್ತನೋ,**[2] ತೋರಿಸಿಕೊಡುವನೋ ಅವನು ಆ ಭಾವವನ್ನು ಇದು ನಾನೆಂದೋ ನನ್ನದೆಂದೋ[3] (ತನ್ನ) ಆತ್ಮನಾಗಿ ಕಾಣುತ್ತಾನೆ. ಮತ್ತು ಆ ಕಂಡವನನ್ನು ಆ ಭಾವವು ಕಾಪಾಡಿಕೊಳ್ಳುತ್ತದೆ, ಯಾವ ಭಾವವನ್ನು ತೋರಿಸಿತ್ತೋ ಅದು ಈ (ಆತ್ಮ)ವಾಗಿ (ಅವನನ್ನು) ಭದ್ರವಾಗಿರಿಸಿಕೊಳ್ಳುತ್ತದೆ; ತನ್ನ ರೂಪದಿಂದ (ಇವನನ್ನು) ಎಲ್ಲದರಿಂದ ತಡೆದಿಡುತ್ತದೆ[4]. ತದ್ಗ್ರಹವು ಎಂದರೆ ಆದರ ಗ್ರಹಣೆಯು 'ಇದೇ ತತ್ತ್ವವು' ಎಂದು ಅದರಲ್ಲಿರುವ ಅಭಿಮಾನವು; ಅದು ಆ (ಹಾಗೆ) ಗ್ರಹಿಸಿದವನನ್ನು ಬಂದುಸೇರಿಕೊಳ್ಳುತ್ತದೆ; ಅವನ ಆತ್ಮಭಾವವನ್ನೇ ಹೊಂದಿಬಿಡುತ್ತದೆ[5] ಎಂದರ್ಥ.

## ಆತ್ಮಜ್ಞಾನಿಯೇ ವೇದಾರ್ಥವನ್ನು ಬಲ್ಲವನು

**ಏತೈರೇಷೋಽಪೃಥಗ್ಭಾವೈಃ ಪೃಥಗೇವೇತಿ ಲಕ್ಷಿತಃ ।**
**ಏವಂ ಯೋ ವೇದ ತತ್ತ್ವೇನ ಕಲ್ಪಯೇತ್ ಸೋಽವಿಶಙ್ಕಿತಃ ॥ ೩೦ ॥**

೩೦. ಈ ಬೇರೆಯಿಲ್ಲದ ಭಾವಗಳ ರೂಪದಿಂದ ಈ (ಆತ್ಮನು) ಬೇರೆಯೇ ಎಂದು ಕಾಣುತ್ತಿರುವನು. ಹೀಗೆಂದು ಯಾವನು ಇದ್ದದ್ದು ಇದ್ದಂತೆ ಅರಿತುಕೊಂಡಿರುವನೋ ಅವನು ಅಂಜಿಕೆಯಿಲ್ಲದೆ ಕಲ್ಪಿಸುವನು.

---

1. ತತ್ತ್ವವನ್ನು ತಿಳಿದು ಆದರಂತೆ ನಡೆಯುತ್ತ ಮಿಕ್ಕವರನ್ನೂ ಆದಕ್ಕೆ ಒಲಿಸುವವನು.

2. ತತ್ತ್ವವನ್ನು ಸರಿಯಾಗಿ ತಿಳಿದುಕೊಂಡು ಇತರರಿಗೆ ತಿಳಿಸಬಲ್ಲವನು.

3. ಕಲ್ಪನೆಗಳು ಎರಡು ಬಗೆ, ಇಲ್ಲದ್ದನ್ನು ಇದೆ ಎಂದು ಕಲ್ಪಿಸುವದೊಂದು, ಆ ವಸ್ತುವಿಗೂ ತನಗೂ ನಿಜವಾಗಿ ಇಲ್ಲದ ಸಂಬಂಧವನ್ನು ಕಲ್ಪಿಸುವದು ಒಂದು.

4. ಮತ್ತೊಂದು ಅಭಿಪ್ರಾಯವು ಸರಿಯಾಗಿರಬಹುದೆಂದು ಭಾವಿಸದಂತೆ ಮಾಡುತ್ತದೆ.

5. ಇದೇ ಸರಿಯೆಂಬ ಭಾವವು ನಿಶ್ಚಿತವಾಗಿಬಿಡುತ್ತದೆ.

(ಭಾಷ್ಯ)

೧೦೮. ಏತೈಃ ಪ್ರಾಣಾದಿಭಿಃ ಆತ್ಮನಃ ಅಪೃಥಗ್ಭೂತೈಃ ಅಪೃಥಗ್ಭಾವೈಃ ಏಷಃ ಆತ್ಮಾ ರಜ್ಜುರಿವ ಸರ್ಪಾದಿವಿಕಲ್ಪನಾರೂಪೈಃ ಪೃಥಗೇವ ಇತಿ ಲಕ್ಷಿತಃ ಅಭಿಲಕ್ಷಿತಃ ನಿಶ್ಚಿತಃ ಮೂಢೈಃ 'ಇತ್ಯರ್ಥಃ। ವಿವೇಕಿನಾಂ ತು ರಜ್ಜ್ವಾಮಿವ ಕಲ್ಪಿತಾಃ ಸರ್ಪಾದಯಃ ನ ಆತ್ಮವ್ಯತಿರೇಕೇಣ ಪ್ರಾಣಾದಯಃ ಸನ್ತಿ ಇತ್ಯಭಿಪ್ರಾಯಃ। "ಇದಂ ಸರ್ವಂ ಯದಯಮಾತ್ಮಾ" (ಬೃ. ೨-೪-೬) ಇತಿ ಶ್ರುತೇಃ। ಏವಮ್ ಆತ್ಮವ್ಯತಿರೇಕೇಣ ಅಸತ್ತ್ವಂ ರಜ್ಜುಸರ್ಪವತ್ ಆತ್ಮನಿ ಕಲ್ಪಿತಾನಾಮ್; ಆತ್ಮಾನಂ ಚ ಕೇವಲಂ ನಿರ್ವಿಕಲ್ಪಂ ಯೋ ವೇದ ತತ್ತ್ವೇನ ಶ್ರುತಿತಃ ಯುಕ್ತಿತಶ್ಚ, ಸಃ ಅವಿಶಙ್ಕಿತಃ ವೇದಾರ್ಥಂ ವಿಭಾಗತಃ ಕಲ್ಪಯೇತ್ ಕಲ್ಪಯತಿ ಇತ್ಯರ್ಥಃ, 'ಇದಮ್ ಏವಂಪರಂ ವಾಕ್ಯಮ್,' 'ಅದೋಽನ್ಯಪರಮ್' ಇತಿ। ನ ಹಿ ಅನಧ್ಯಾತ್ಮವಿತ್ ವೇದಾನ್ ಜ್ಞಾತುಂ ಶಕ್ನೋತಿ ತತ್ತ್ವತಃ, "ನ ಹ್ಯನಧ್ಯಾತ್ಮವಿತ್ ಕಶ್ಚಿತ್, ಕ್ರಿಯಾಫಲಮುಪಾಶ್ನುತೇ" (ಮನು ೬-೮೨) ಇತಿ ಹಿ ಮಾನವಂ ವಚನಮ್ ||

(ಭಾಷ್ಯಾರ್ಥ)

ಈ ಪ್ರಾಣನೇ ಮುಂತಾದ, ಆತ್ಮನಿಗಿಂತ ಬೇರೆಯಲ್ಲದ ಬೇರೆಯಾಗಿ ಇಲ್ಲದಿರುವ ಭಾವಗಳ ರೂಪದಿಂದ ಈ ಆತ್ಮನು ಹಗ್ಗವು ಹಾವು ಮುಂತಾದ ಕಲ್ಪನೆಯ ರೂಪಗಳಿಂದ ಹೇಗೆ (ಕಾಣುತ್ತಿರುವದೋ) ಹಾಗೆ (ನಿಜವಾಗಿ) ಬೇರೆಯಾಗಿಯೇ (ಇರುವನು) ಎಂದು ಮೂಢರಿಗೆ ಕಾಣುತ್ತಿರುವನು, ತೋರುತ್ತಿರುವನು. (ಹಾಗೆಂದು ಅವರು) ನಿಶ್ಚಯಿಸಿರುವರು ಎಂದರ್ಥ. **ಆದರೆ ವಿವೇಕಿಗಳ (ಮತದಲ್ಲಿಯೋ)[1] ಎಂದರೆ ಹಗ್ಗದಲ್ಲಿ ಕಲ್ಪಿತವಾಗಿರುವ ಹಾವು ಮುಂತಾದವುಗಳಂತೆ, ಪ್ರಾಣಾದಿಗಳು (ತಮಗೆ ಆಧಾರವಾಗಿರುವ) ಆತ್ಮನನ್ನು ಬಿಟ್ಟು ಇರುವದಿಲ್ಲ ಎಂದು ಅಭಿಪ್ರಾಯ.** "ಇದೆಲ್ಲವೂ ಈ ಆತ್ಮನೆಂಬವನೇ" (ಬೃ. ೨-೪-೬) ಎಂಬ ಶ್ರುತಿ (ಇದಕ್ಕೆ) ಪ್ರಮಾಣವು. ಈ ರೀತಿಯಲ್ಲಿ ಆತ್ಮನಲ್ಲಿ ಕಲ್ಪಿತವಾದ (ಪ್ರಾಣಾದಿಗಳು) ಹಗ್ಗದ ಹಾವಿನಂತೆ ಆತ್ಮನನ್ನು ಬಿಟ್ಟು ಇಲ್ಲವೆಂದೂ ಆತ್ಮನೊಬ್ಬನೇ ಯಾವ ವಿಕಲ್ಪವೂ ಇಲ್ಲದವನೆಂದೂ ಯಾವನು ಇದ್ದದ್ದು ಇದ್ದಂತೆ, ಶ್ರುತಿಯಿಂದಲೂ ಯುಕ್ತಿಯಿಂದಲೂ[2],

---

1. ಪರಮಾರ್ಥವನ್ನು ಅಪರಮಾರ್ಥದಿಂದ ವಿಂಗಡಿಸಿಕೊಂಡಿರುವವರು ವಿವೇಕಿಗಳು.

2. ವಸ್ತುತಂತ್ರವಾದ ಜ್ಞಾನವಿಷಯದಲ್ಲಿ ಕರ್ಮದ ವಿಷಯಕ್ಕಿರುವಂತೆ ಬರಿಯ ಶ್ರುತಿಯೇ ಪ್ರಮಾಣವಲ್ಲ, ಅನುಭವತರ್ಕಾದಿಗಳೂ ಬೇಕಾಗುತ್ತದೆ. ಸೂ. ಭಾ. ೧-೧-೨.

ಅರಿತುಕೊಂಡಿರುವನೋ ಅವನು ವೇದಾರ್ಥವನ್ನು (ಯಾವ) ಅಂಜಿಕೆಯೂ ಇಲ್ಲದೆ "ಇದು ಇದರಲ್ಲಿ ತಾತ್ಪರ್ಯವುಳ್ಳ ವಾಕ್ಯವು, ಅದು ಮತ್ತೊಂದರಲ್ಲಿ ತಾತ್ಪರ್ಯವುಳ್ಳದ್ದು" ಎಂದು ವಿಂಗಡಿಸಿ ಕಲ್ಪಿಸಿಯಾನು, ಕಲ್ಪಿಸುತ್ತಾನೆ ಎಂದರ್ಥ. ಅಧ್ಯಾತ್ಮಜ್ಞಾನಿಯಲ್ಲದವನು ಯಾವನೂ ನಿಜವಾದ ವೇದಾರ್ಥವನ್ನು ಅರಿತುಕೊಳ್ಳಲಾರನಷ್ಟೆ. "ಅಧ್ಯಾತ್ಮಜ್ಞಾನಿಯಲ್ಲದವನು ಯಾವನೂ ಕ್ರಿಯೆಯ ಫಲವನ್ನು ಪಡೆದುಕೊಳ್ಳುವದಿಲ್ಲ" (ಮನು. ೬-೮೨) ಎಂದಲ್ಲವೆ, ಮನುವಿನ ವಚನವು[1] ?

## ದ್ವೈತಮಿಥ್ಯಾತ್ವಕ್ಕೆ ವೇದಾಂತಪ್ರಮಾಣ

(ಭಾಷ್ಯ)

೧೯. ಯದೇತತ್ ದ್ವೈತಸ್ಯ ಅಸತ್ತ್ವಮ್ ಉಕ್ತಂ ಯುಕ್ತಿತಃ, ತದೇತತ್ ವೇದಾನ್ತಪ್ರಮಾಣಾವಗತಮ್ ಇತ್ಯಾಹ—

(ಭಾಷ್ಯಾರ್ಥ)

ದ್ವೈತವು ಹುಸಿ ಎಂದು ಯುಕ್ತಿಯಿಂದ ಹೇಳಿದೆಯಷ್ಟೆ, ಆ ಇದು ವೇದಾಂತವೆಂಬ ಪ್ರಮಾಣದಿಂದ ನಿಶ್ಚಿತವಾದದ್ದು ಎಂದು ಹೇಳುತ್ತಾರೆ[2].

**ಸ್ವಪ್ನಮಾಯೇ ಯಥಾ ದೃಷ್ಟೇ ಗನ್ಧರ್ವನಗರಂ ಯಥಾ ।**
**ತಥಾ ವಿಶ್ವಮಿದಂ ದೃಷ್ಟಂ ವೇದಾನ್ತೇಷು ವಿಚಕ್ಷಣೈಃ ॥ ೩೧ ॥**

೩೧. ಕನಸುಮಾಯೆಗಳು ಹೇಗೆ ಕಂಡುಬಂದಿರುವವೋ, ಗಂಧರ್ವನಗರವು ಹೇಗೆ (ಕಂಡುಬಂದಿರುವದೋ), ಹಾಗೆ ಈ ವಿಶ್ವವು ವಿಚಕ್ಷಣರಿಗೆ ವೇದಾಂತಗಳಲ್ಲಿ ಕಂಡು ಬಂದಿರುವದು.

(ಭಾಷ್ಯ)

೧೧೦. ಸ್ವಪ್ನಶ್ಚ ಮಾಯಾ ಚ ಸ್ವಪ್ನಮಾಯೇ ಅಸದ್ವಸ್ತ್ವಾತ್ಮಿಕೇ ಸತ್ಯೌ[3] ಸದ್ವಸ್ತ್ವಾತ್ಮಿಕೇ ಇವ ಲಕ್ಷ್ಯೇತೇ ಅವಿವೇಕಿಭಿಃ । ಯಥಾ ಚ ಪ್ರಸಾರಿತಪಣ್ಯಾಪಣ

1. ಕ್ರಿಯೆ ಎಂದರೆ ಶಾಸ್ತ್ರೋಕ್ತಕರ್ಮವು; ಅದಕ್ಕೆ ಪರಮಫಲವು ಜ್ಞಾನವೇ.

2. ಹಿಂದೆ ಹೇಳಿದ ಯುಕ್ತಿಯು ಪ್ರಮಾಣಕ್ಕೆ ಬೆಂಬಲನಾಗಿ, ತಾರ್ಕಿಕರಂತೆ ಬರಿಯ ಉತ್ಪ್ರೇಕ್ಷೆಯುಲ್ಲ-ಎಂದು ತಿಳಿಸಿದಂತೆ ಆಯಿತು. ಪೀಠಿಕೆಯನ್ನು ನೋಡಿ

3. "ಅಸತ್ಯೌ" ಆ॥ "ಅಸತ್ಯೌ ಸತ್ಯೌ" ಕಾ॥ ಎಂಬವುಗಳಿಗಿಂತ ಈ ವಾ॥ ಪಾಠವೇ ಮೇಲು.

ಗೃಹಪ್ರಾಸಾದಸ್ತ್ರೀಪುಂಜನಪದ(?) ವ್ಯವಹಾರಾಕೀರ್ಣಮಿವ ಗನ್ಧರ್ವನಗರಂ ದೃಶ್ಯಮಾನಮೇವ ಸತ್ ಅಕಸ್ಮಾತ್ ಅಭಾವತಾಂ ಗತಂ ದೃಷ್ಟಮ್ । ಯಥಾ ಚ ಸ್ವಪ್ನಮಾಯೇ ದೃಷ್ಟೇ ಅಸದ್ರೂಪೇ । ತಥಾ ವಿಶ್ವಮಿದಂ ದ್ವೈತಂ ಸಮಸ್ತಮ್ ಅಸತ್ ದೃಷ್ಟಮ್ । ಕ್ವ ಇತಿ? ಆಹ–ವೇದಾನ್ತೇಷು "ನೇಹ ನಾನಾಸ್ತಿ ಕಿಂಚನ" (ಕ. ೨-೧-೧೧), "ಇನ್ದ್ರೋ ಮಾಯಾಭಿಃ" (ಬೃ. ೨-೫-೧೯), "ಆತ್ಮೈವೇದಮಗ್ರ ಆಸೀತ್"(?), "ಬ್ರಹ್ಮ[2]ವಾ ಇದಮಗ್ರ ಆಸೀತ್"(ಬೃ. ೧-೪-೧೦), "ದ್ವಿತೀಯಾದ್ವೈ ಭಯಂ ಭವತಿ" (ಬೃ. ೧-೪-೨), "ನ ತು ತದ್ದ್ವಿತೀಯಮಸ್ತಿ"(ಬೃ. ೪-೩-೨೩), "ಯತ್ರ ತ್ವಸ್ಯ ಸರ್ವಮಾತ್ಮೈವಾಭೂತ್"(ಬೃ. ೪-೫-೧೫) ಇತ್ಯಾದಿಷು। ವಿಚಕ್ಷಣೈಃ ನಿಪುಣತರವಸ್ತುದರ್ಶಿಭಿಃ ಪಣ್ಡಿತೈಃ ಇತ್ಯರ್ಥಃ ।

"ತಮಃಶ್ವಭ್ರನಿಭಂ ದೃಷ್ಟ್ವಾ[3] ವರ್ಷಬುದ್ಬುದಸಂನಿಭಮ್ ।
ನಾಶಪ್ರಾಯಂ ಸುಖಾದ್ಧೀನಂ ನಾಶೋತ್ತರಮಭಾವಗಮ್ ॥"

(ಮೋ. ಧ. ೩೦೧–೬೦) ಇತಿ ವ್ಯಾಸಸ್ಮೃತೇಃ ॥

(ಭಾಷ್ಯಾರ್ಥ)

ಸ್ವಪ್ನಮಾಯೆಗಳು ಕನಸೂ ಮಾಯೆಯೂ ಅಸತ್ತಾದ ವಸ್ತುವಿನ ಸ್ವರೂಪವುಳ್ಳವುಗಳಾಗಿದ್ದರೂ ಸತ್ತಾದ ವಸ್ತುವಿನ ಸ್ವರೂಪವುಳ್ಳವುಗಳಂತೆಯೇ, ವಿವೇಕವಿಲ್ಲದವರಿಗೆ ತೋರುತ್ತಿರುವವು. ಹೇಗೆ ಮಾರುವ ಸಾಮಾನುಗಳನ್ನು ಒಡ್ಡಿದ ಅಂಗಡಿಗಳು, ಮನೆಗಳು, ಉಪ್ಪರಿಗೆಗಳು, ಹೆಂಗಸರು, ಗಂಡಸರು-(ಮುಂತಾದ) ಜನರ ವ್ಯವಹಾರದಿಂದ ಕಿಕ್ಕಿರಿದಿರುವಂತೆ ಗಂಧರ್ವನಗರವು ಕಾಣುತ್ತಿದ್ದು ಇದ್ದಕ್ಕಿದ್ದಹಾಗೆಯೇ ಇಲ್ಲವಾಗುವದು ಕಂಡಿದೆಯೋ, ಮತ್ತು ಹೇಗೆ ಕನಸುಮಾಯೆಗಳು ಅಸದ್ರೂಪವಾಗಿರುವದು ಕಂಡಿದೆಯೋ, ಹಾಗೆಯೇ ಈ ದ್ವೈತವೆಲ್ಲವೂ ಸಮಸ್ತವೂ ಅಸತ್ತೆಂದು ಕಂಡುಬರುತ್ತದೆ. ಎಲ್ಲಿ? ಎಂದರೆ ಹೇಳುತ್ತಾರೆ: "ಇಲ್ಲಿ ಒಂದಿಷ್ಟೂ ನಾನಾತ್ವವಿರುವದಿಲ್ಲ" (ಕ. ೨-೧-೧೧) "ಇಂದ್ರನು ಮಾಯೆಗಳಿಂದ (ಬಹುರೂಪನಾಗಿ ಕಾಣುತ್ತಾನೆ)" (ಬೃ. ೨-೫-೧೯), "ಇದು ಮೊದಲು ಆತ್ಮನೇ ಆಗಿತ್ತು" (?) "ಇದು ಮೊದಲು ಬ್ರಹ್ಮವೇ ಆಗಿತ್ತು" (ಬೃ. ೧-೪-೧೦). "ಎರಡನೆಯದರಿಂದಲಲ್ಲವೆ, ಅಂಜಿಕೆಯಾಗುತ್ತದೆ" (ಬೃ. ೧-೪-೨), "ಆದರೆ ಆ ಎರಡನೆಯದು ಇರುವದಿಲ್ಲ" (ಬೃ. ೪-೩-೨೩), "ಆದರೆ ಎಲ್ಲಿ ಇವನಿಗೆ ಎಲ್ಲವೂ ಆತ್ಮನೇ ಆಯಿತೋ" (ಬೃ. ೪-೫-೧೫),–ಇವೇ ಮುಂತಾದ ವೇದಾಂತ (ವಚನ) ಗಳಲ್ಲಿ (ಕಂಡುಬಂದಿರು

---

1. "ಬ್ರಹ್ಮೈವೇದಮಗ್ರ ಆಸೀತ್" ಎಂಬ ಪಾಠವು ತಪ್ಪೆಂದು ತೋರುತ್ತದೆ.

2. "ದೃಷ್ಟಂ" ಎಂಬುದು 'ದೃಷ್ಟ್ವಾ" ಎಂಬುದಕ್ಕೆ ಬದಲು ತಪ್ಪಾಗಿ ಬಿದ್ದಿದೆ.

ತ್ತದೆ). ವಿಚಕ್ಷಣರಿಗೆ ಎಂದರೆ ವಸ್ತುವನ್ನು ಬಹಳ ಚೆನ್ನಾಗಿ ನೋಡುವರಾದ ಪಂಡಿತರಿಗೆ ಎಂದರ್ಥ. "ಕತ್ತಲೆಯಲ್ಲಿರುವ ಗುಂಡಿಯಂತಿರುವದೆಂದೂ ಮಳೆಯಿಂದ ನೀರಗುಳ್ಳೆಯಂತಿರುವದೆಂದೂ ನಾಶಪ್ರಚುರವಾಗಿರುವದೆಂದೂ ಸುಖವಿಲ್ಲದ್ದೆಂದೂ ನಾಶವಾದ ಬಳಿಕ ಇಲ್ಲದ್ದೆಂದೂ ಕಂಡುಕೊಂಡು" (ಮೋ. ಧ. ೩೦೧-೬೦) ಎಂಬ ವ್ಯಾಸಸ್ಮೃತಿಯು (ಇದಕ್ಕೆ ಪ್ರಮಾಣವು).

## ವ್ಯವಹಾರವು ಯಾವದೂ ಪರಮಾರ್ಥವಲ್ಲ

(ಭಾಷ್ಯ)

೧೧೧. ಪ್ರಕರಣಾರ್ಥೋಪಸಂಹಾರಾರ್ಥೋಽಯಂ ಶ್ಲೋಕಃ। ಯದಾ ವಿತಥಮ್ ದ್ವೈತಮ್, ಆತ್ಮೈವೈಕಃ ಪರಮಾರ್ಥತಃ ಸನ್ ತದಾ ಇದಂ ನಿಷ್ಪನ್ನಂ ಭವತಿ ಸರ್ವೋಽಯಂ ಲೌಕಿಕೋ ವೈದಿಕಶ್ಚ ವ್ಯವಹಾರಃ ಅವಿದ್ಯಾವಿಷಯ ಏವ ಇತಿ। ತದಾ—

(ಭಾಷ್ಯಾರ್ಥ)

ಈ ಪ್ರಕರಣದ ಅರ್ಥವನ್ನು ಉಪಸಂಹಾರಮಾಡುವದಕ್ಕೆ ಈ ಶ್ಲೋಕವು (ಬಂದಿರುತ್ತದೆ). ಯಾವಾಗ ದ್ವೈತವು ವಿತಥವೆಂತಲೂ ಆತ್ಮನೊಬ್ಬನೇ ಪರಮಾರ್ಥವಾಗಿ ಇರುವವನೆಂತಲೂ (ಆಯಿತೋ) ಆಗ ಇದು ಸಿದ್ಧವಾಗುತ್ತದೆ: (ಏನೆಂದರೆ) ಈ **ಲೌಕಿಕವೈದಿಕವ್ಯವಹಾರವೆಲ್ಲವೂ ಅವಿದ್ಯಾವಿಷಯವೇ**[1]. ಆಗ:—

**ನ ನಿರೋಧೋ ನ ಚೋತ್ಪತ್ತಿರ್ನ ಬದ್ಧೋ ನ ಚ ಸಾಧಕಃ।**
**ನ ಮುಮುಕ್ಷುರ್ನ ವೈ ಮುಕ್ತ ಇತ್ಯೇಷಾ ಪರಮಾರ್ಥತಾ ॥ ೩೨ ॥**

೩೨. ನಿರೋಧವಿಲ್ಲ, ಉತ್ಪತ್ತಿಯೂ ಇಲ್ಲ; ಬದ್ಧನಿಲ್ಲ, ಸಾಧಕನಿಲ್ಲ; ಮುಮುಕ್ಷುವಿಲ್ಲ, ಮುಕ್ತನೇ ಇಲ್ಲ. ಹೀಗೆಂಬುದು ಪರಮಾರ್ಥವು.

(ಭಾಷ್ಯ)

೧೧೨. ನ ನಿರೋಧಃ। ನಿರೋಧನಂ ನಿರೋಧಃ ಪ್ರಲಯಃ। ಉತ್ಪತ್ತಿಃ ಜನನಮ್। ಬದ್ಧಃ ಸಂಸಾರೀ ಜೀವಃ। ಸಾಧಕಃ ಸಾಧನವಾನ್[2] ಮೋಕ್ಷಸ್ಯ। ಮುಮುಕ್ಷುಃ ಮೋಚನಾರ್ಥೀ। ಮುಕ್ತಃ ವಿಮುಕ್ತಬನ್ಧಃ। ಉತ್ಪತ್ತಿಪ್ರಲಯಯೋಃ ಅಭಾವಾತ್ ಬದ್ಧಾದಯೋ ನ ಸನ್ತಿ ಇತ್ಯೇಷಾ ಪರಮಾರ್ಥತಾ ॥

---

1. ವ್ಯವಹಾರವೆಲ್ಲವೂ ಅವಿದ್ಯಾವಿಷಯವು, ಅವಿದ್ಯೆಯಿಂದ (ತಪ್ಪುತಿಳಿವಳಿಕೆಯಿಂದ) ತೋರತಕ್ಕದ್ದು–ಎಂಬುದನ್ನು ಗೀ. ಭಾ. ೨-೬೯, ಸೂ. ಭಾ. ಉಪೋದ್ಘಾತ- ಮುಂತಾದ ಕಡೆಗಳಲ್ಲಿ ಭಾಷ್ಯಕಾರರು ಮತ್ತೆ ಮತ್ತೆ ಪ್ರತಿಪಾದಿಸುತ್ತಾರೆ.

2. "ಸಾಧನಾತ್" ಅ॥

(ಭಾಷ್ಯಾರ್ಥ)

ನಿರೋಧವಿಲ್ಲ. ನಿರೋಧವೆಂದರೆ ನಾಶವಾಗತಕ್ಕದ್ದು, ಪ್ರಲಯವು. ಉತ್ಪತ್ತಿ ಎಂದರೆ ಹುಟ್ಟುವದು. ಬದ್ಧನು ಎಂದರೆ ಸಂಸಾರಿಯಾದ ಜೀವನು. ಸಾಧಕನು ಎಂದರೆ ಮೋಕ್ಷಕ್ಕೆ (ಬೇಕಾದ) ಸಾಧನಗಳುಳ್ಳವನು. ಮುಕ್ತನು ಎಂದರೆ ಬಂಧದಿಂದ ಬಿಡುಗಡೆಯನ್ನು ಹೊಂದಿರುವವನು. ಉತ್ಪತ್ತಿಪ್ರಲಯಗಳು ಇಲ್ಲವಾದ್ದರಿಂದ ಬದ್ಧಾದಿಗಳು ಇಲ್ಲ–ಎಂಬಿದು ಪರಮಾರ್ಥವು.

## ಹುಟ್ಟುಹೊಂದುಗಳು ಇಲ್ಲವೆಂಬುದು ಹೇಗೆ?

(ಭಾಷ್ಯ)

೧೧೩. ಕಥಮ್ ಉತ್ಪತ್ತಿಪ್ರಲಯಯೋಃ ಅಭಾವಃ ಇತಿ? ಉಚ್ಯತೇ ದ್ವೈತಸ್ಯ ಅಸತ್ತ್ವಾತ್ । "ಯತ್ರ ಹಿ ದ್ವೈತಮಿವ ಭವತಿ" (ಬೃ. ೨-೪-೧೪), "ಯ ಇಹ ನಾನೇವ ಪಶ್ಯತಿ" (ಕ. ೨-೧-೧೦), "ಆತ್ಮೈವೇದಂ ಸರ್ವಮ್" (ಛಾಂ. ೭-೨೫-೨), "ಬ್ರಹ್ಮೈವೇದಂ ಸರ್ವಮ್" (?)[1], "ಏಕಮೇವಾದ್ವಿತೀಯಮ್" (ಛಾಂ ೬-೨-೧), "ಇದಂ ಸರ್ವಂ ಯದಯಮಾತ್ಮಾ" (ಬೃ. ೨-೪-೬) ಇತ್ಯಾದಿನಾನಾಶ್ರುತಿಭ್ಯೋ ದ್ವೈತಸ್ಯ ಅಸತ್ತ್ವಂ ಸಿದ್ಧಮ್ । ಸತೋ ಹಿ ಉತ್ಪತ್ತಿಃ ಪ್ರಲಯೋ ವಾ ಸ್ಯಾತ್ ನ ಅಸತಃ ಶಶವಿಷಾಣಾದೇಃ । ನಾಪಿ ಅದ್ವೈತಮ್ ಉತ್ಪದ್ಯತೇ ಲೀಯತೇ ವಾ । ಅದ್ವಯಂ ಚ ಉತ್ಪತ್ತಿಪ್ರಲಯವಚ್ಚ ಇತಿ ವಿಪ್ರತಿಷಿದ್ಧಮ್ । ಯಸ್ತು ಪುನಃ ದ್ವೈತಸಂವ್ಯವಹಾರಃ ಸಃ ರಜ್ಜುಸರ್ಪವತ್ ಆತ್ಮನಿ ಪ್ರಾಣಾದಿಲಕ್ಷಣಃ ಕಲ್ಪಿತಃ ಇತ್ಯುಕ್ತಮ್ । ನ ಹಿ ಮನೋವಿಕಲ್ಪನಾಯಾಃ ರಜ್ಜುಸರ್ಪಾದಿಲಕ್ಷಣಾಯಾಃ ರಜ್ಜ್ವಾಂ ಪ್ರಲಯಃ ಉತ್ಪತ್ತಿರ್ವಾ । ನ ಚ ಮನಸಿ ರಜ್ಜುಸರ್ಪಸ್ಯ ಉತ್ಪತ್ತಿಃ ಪ್ರಲಯೋ ವಾ । ನ ಚ ಉಭಯತೋ ವಾ । ತಥಾ ಮಾನಸತ್ವಾವಿಶೇಷಾತ್ ದ್ವೈತಸ್ಯ । ನ ಹಿ ನಿಯತೇ ಮನಸಿ ಸುಷುಪ್ತೇ ವಾ ದ್ವೈತಂ ಗೃಹ್ಯತೇ । ಅತಃ ಮನೋವಿಕಲ್ಪನಾಮಾತ್ರಂ ದ್ವೈತಮ್ ಇತಿ ಸಿದ್ಧಮ್ । ತಸ್ಮಾತ್ ಸೂಕ್ತಂ ದ್ವೈತಸ್ಯ ಅಸತ್ತ್ವಾತ್ ನಿರೋಧಾದ್ಯಭಾವಃ ಪರಮಾರ್ಥತಾ ಇತಿ ॥

(ಭಾಷ್ಯಾರ್ಥ)

(ಪ್ರಶ್ನೆ):—ಉತ್ಪತ್ತಿಪ್ರಲಯಗಳು ಇಲ್ಲವೆಂಬುದು ಹೇಗೆ?

(ಉತ್ತರ):—ಹೇಳುತ್ತೇವೆ. ಏಕೆಂದರೆ ದ್ವೈತವು ಅಸತ್ತಾಗಿರುತ್ತದೆ. "ಎಲ್ಲಿ ದ್ವೈತವಿದ್ದಂತೆ ಇರುವದೋ" (ಬೃ. ೨-೪-೧೪), "ಯಾವನು ಇಲ್ಲಿ ನಾನಾತ್ವ(ವಿರು)

1. ಈ ಶ್ರುತಿ ಎಲ್ಲಿಯದೋ ತಿಳಿಯದು. ಮುಂಡಕದಲ್ಲಿ "ಬ್ರಹ್ಮೈವೇದಂ ವಿಶ್ವಮ್" ಎಂದಿದೆ. ತೈ. ಭಾ. ೧–೧೧ (ಭಾ. ಭಾ. ೭೭), ಸೂ. ಭಾ. ೧–೪–೨೨, ೨–೧–೧೪, ಗೀ. ಭಾ. ೧೩–೧೪ರಲ್ಲಿಯೂ ಇದನ್ನು ಉದಾಹರಿಸಿದೆ.

ವಂತೆ ಕಾಣುತ್ತಾನೋ" (ಕ. ೨-೧-೧೦), "ಇದೆಲ್ಲವೂ ಆತ್ಮನೇ" (ಛಾಂ. ೭-೨೫-೨), "ಇದೆಲ್ಲವೂ ಬ್ರಹ್ಮವೇ" (?), "(ತನ)ಗೆರಡನೆಯದಿಲ್ಲದ ಒಂದೇ" (ಛಾಂ. ೬-೨-೧), "ಇದೆಲ್ಲವೂ ಈ ಆತ್ಮನೆಂಬುದೇ" (ಬೃ. ೨-೪-೬)-ಮುಂತಾದ ನಾನಾಶ್ರುತಿಗಳಿಂದ ದ್ವೈತವು ಅಸತ್ತೆಂಬುದು ಸಿದ್ಧವಾಗಿರುತ್ತದೆ. ಸತ್ತಾ(ಗಿರುವದ)ಕ್ಕೆ, ಉತ್ಪತ್ತಿಯಾಗಲಿ ಪ್ರಲಯವಾಗಲಿ ಆದೀತೇ ಹೊರತು ಅಸತ್ತಾಗಿರುವ ಮೊಲದಕೊಂಬು ಮುಂತಾದದ್ದಕ್ಕೆ[1] (ಆಗಲಾರದು). ಅದ್ವೈತವೂ ಹುಟ್ಟುವದಿಲ್ಲ, ನಾಶವಾಗುವದೂ ಇಲ್ಲ. (ತನಗೆ)ರಡನೆಯದಿಲ್ಲದ್ದೂ ಆಗಿದೆ, ಉತ್ಪತ್ತಿಪ್ರಲಯಗಳಿರುವದೂ ಆಗಿದೆ-ಎಂಬುದು (ಒಂದಕ್ಕೊಂದು) ವಿರುದ್ಧವಾದದ್ದು.[2] ಇನ್ನು ಪ್ರಾಣಾದಿರೂಪದ ದ್ವೈತದ ಸಂವ್ಯವಹಾರವುಂಟಲ್ಲ, ಅದು ಹಗ್ಗದ ಹಾವಿನಂತೆ ಆತ್ಮನಲ್ಲಿ ಕಲ್ಪಿತವಾಗಿರುತ್ತದೆ-ಎಂದು ಹಿಂದೆ ಹೇಳಿದೆ. **ಹಗ್ಗದ ಹಾವೇ ಮುಂತಾದ ಮನಸ್ಸಿನ ವಿಕಲ್ಪವು[3] ಹಗ್ಗದಲ್ಲಿ ಅಡಗುವದೂ ಇಲ್ಲ, ಹುಟ್ಟುವದೂ ಇಲ್ಲ. ಅಲ್ಲವೆ? ಹಗ್ಗದ ಹಾವಿಗೆ ಮನಸ್ಸಿನಲ್ಲಿಯೂ ಹುಟ್ಟುವದೆಂಬುದಾಗಲಿ ನಾಶವಾಗುವದೆಂಬುದಾಗಲಿ ಇರುವದಿಲ್ಲ. ಇವೆರಡರಿಂದಲೂ (ಹುಟ್ಟುಹೊಂದುಗಳು ಆಗುವ)ದಿಲ್ಲ. ಅದರಂತೆಯೇ ದ್ವೈತವು ಮಾನಸವಾಗಿದೆ ಎಂಬುದು ಸಮಾನವಾಗಿರುವದರಿಂದ (ಅದಕ್ಕೂ) ಹುಟ್ಟುಹೊಂದುಗಳಿಲ್ಲ. ಮನಸ್ಸನ್ನು ನಿರೋಧಮಾಡಿದಾಗಲಾಗಲಿ ತನಿನಿದ್ರೆಯಲ್ಲಾಗಲಿ ದ್ವೈತವು ಕಾಣಬರುವದೇ ಇಲ್ಲ. ಅಲ್ಲವೆ? ಆದ್ದರಿಂದ ದ್ವೈತವು ಮನಸ್ಸಿನ ವಿಕಲ್ಪನೆಯೇ ಎಂದು ಸಿದ್ಧವಾಯಿತು.[4]** ಆದ್ದರಿಂದ ದ್ವೈತವು ಅಸತ್ತಾಗಿರುವದರಿಂದ ನಿರೋಧವೇ ಮುಂತಾದದ್ದು ಇಲ್ಲವೆಂಬುದು ಪರಮಾರ್ಥವು[5]-ಎಂದು ಹೇಳಿದ್ದು ಸರಿಯಾಗಿದೆ.

---

1. ಮೊಲದಕೊಂಬು ಮುಂತಾದದ್ದು ಇಲ್ಲವೆಂಬುದು ನಿರ್ವಿವಾದವು; ಅದಕ್ಕೆ ಹುಟ್ಟುಹೊಂದುಗಳಿಲ್ಲವೆಂಬುದೂ ನಿರ್ವಿವಾದವು.

2. ಹುಟ್ಟುಹೊಂದುಗಳು ಸಾವಯವವಾದ ವಸ್ತುವಿಗೆ ತನ್ನಿಂದಲೋ ಮತ್ತೊಂದರಿಂದಲೋ ಆಗಬಹುದು; ಅದ್ವಿತೀಯತತ್ತ್ವಕ್ಕೆ ಇವೆರಡೂ ಇಲ್ಲ.

3. ಹಗ್ಗದ ಹಾವು ಅವಿದ್ಯಾಶಕ್ತಿಯ ಪರಿಣಾಮವು ಎಂಬುದು ಭಾಷ್ಯಸಮ್ಮತವಲ್ಲವೆಂಬುದು ಇಲ್ಲಿ ಸ್ಪಷ್ಟವಾಗಿದೆ.

4. ದ್ವೈತವು ಮನೋವಿಕಲ್ಪನೆ ಎಂದು ಹೇಳಿದ ಮಾತ್ರದಿಂದ ವಿಜ್ಞಾನವಾದವಾಯಿತೆಂದು ಶಂಕಿಸಬಾರದು; ಕ್ಷಣಿಕವಿಜ್ಞಾನವೇ ಮುಂತಾದವನ್ನು ಒಪ್ಪದೆ, ಮನಸ್ಸು ಮತ್ತು ಅದರಿಂದ ಕಲ್ಪಿತವಾದ ದ್ವೈತ-ಎರಡಕ್ಕೂ ಬೇರೆಯಾದ ಆತ್ಮನನ್ನು ಒಪ್ಪುವ ವೇದಾಂತವು ವಿಜ್ಞಾನವಾದವಲ್ಲ.

5. ದ್ವೈತಾಭಾವವು ಪರಮಾರ್ಥ-ಎಂದರೆ ಆತ್ಮನೊಬ್ಬನೇ ಸತ್ಯ ಎಂದರ್ಥ.

# ದ್ವೈತವು ಅಸತ್ತಾದರೂ ಶೂನ್ಯವಾದವು ಸಿದ್ಧಿಸುವದಿಲ್ಲ

(ಭಾಷ್ಯ)

೧೧೪. ಯದ್ಯೇವಂ ದ್ವೈತಾಭಾವೇ ಶಾಸ್ತ್ರವ್ಯಾಪಾರಃ, ನಾದ್ವೈತೇ । ವಿರೋಧಾತ್ । ತಥಾ ಚ ಸತಿ ಅದ್ವೈತಸ್ಯ ವಸ್ತುತ್ವೇ ಪ್ರಮಾಣಾಭಾವಾತ್ ಶೂನ್ಯವಾದಪ್ರಸಙ್ಗಃ । ದ್ವೈತಸ್ಯ ಚ ಅಭಾವಾತ್ । ನ । ರಜ್ಜುಸರ್ಪಾದಿವಿಕಲ್ಪನಾಯಾಃ ನಿರಾಸ್ಪದತ್ವಾನುಪಪತ್ತಿಃ[1] ಇತಿ ಪ್ರತ್ಯುಕ್ತಮೇತತ್ ಕಥಮ್ ಉಜ್ಜೀವಯಸೀತಿ ? ಆಹ–ರಜ್ಜುರಪಿ ಸರ್ಪವಿಕಲ್ಪಸ್ಯ ಆಸ್ಪದಭೂತಾ ವಿಕಲ್ಪಿತೈವ[2] ಇತಿ ದೃಷ್ಟಾಂತಾನುಪಪತ್ತಿಃ । ನ । ವಿಕಲ್ಪನಾಕ್ಷಯೇ ಅವಿಕಲ್ಪಿತಸ್ಯ ಅವಿಕಲ್ಪಿತತ್ವಾದೇವ ಸತ್ತ್ವೋಪಪತ್ತೇಃ । ರಜ್ಜುಸರ್ಪವತ್ ಅಸತ್ತ್ವಮ್ ಇತಿ ಚೇತ್ । ನ । ಏಕಾನ್ತೇನ ಅವಿಕಲ್ಪಿತತ್ವಾತ್, ಅವಿಕಲ್ಪಿತರಜ್ಜ್ವಂಶವತ್ ಪ್ರಾಕ್ ಸರ್ಪಾಭಾವವಿಜ್ಞಾನಾತ್ । ವಿಕಲ್ಪಯಿತುಶ್ಚ ಪ್ರಾಗ್ವಿಕಲ್ಪನೋತ್ಪತ್ತೇಃ ಸಿದ್ಧತ್ವಾಭ್ಯುಪಗಮಾತ್[3] ಅಸತ್ತ್ವಾನುಪಪತ್ತಿಃ ॥

(ಭಾಷ್ಯಾರ್ಥ)

(ಆಕ್ಷೇಪ):-- ಹಾಗಾದರೆ ದ್ವೈತವು ಇಲ್ಲವೆಂಬುದನ್ನು (ತಿಳಿಸುವ)ದರಲ್ಲಿ ಶಾಸ್ತ್ರವು ಕೆಲಸ(ಮಾಡುವದೇ) ಹೊರತು ಅದ್ವೈತ(ವನ್ನು ತಿಳಿಸುವದರ)ಲ್ಲಲ್ಲ. ಏಕೆಂದರೆ (ಅದ್ವೈತವನ್ನು ತಿಳಿಸುವದೆಂದರೆ) ವಿರೋಧವಾಗುತ್ತದೆ[4]. ಹಾಗಾದಮೇಲೆ ಅದ್ವೈತವು (ನಿಜವಾಗಿ) ಇರುವದೆಂಬುದಕ್ಕೆ ಪ್ರಮಾಣವಿಲ್ಲದ್ದರಿಂದಲೂ ದ್ವೈತವೂ ಇಲ್ಲದ್ದರಿಂದಲೂ ಶೂನ್ಯವಾದವು ಬಂದೊದಗುತ್ತದೆ.

(ಸಮಾಧಾನ): -- ಹಾಗಲ್ಲ. ಹಗ್ಗದ ಹಾವು ಮುಂತಾದ ವಿಕಲ್ಪನೆಗೆ ಆಧಾರವು ಇಲ್ಲವೆಂಬುದು ಯುಕ್ತವಾಗುವದಿಲ್ಲ ಎಂದು ಹಿಂದೆಯೇ ಇದನ್ನು ತಿರಸ್ಕರಿಸಿದ್ದಾಗಿದೆಯಲ್ಲ[5] ! (ಹೀಗಿರುವಲ್ಲಿ ಮತ್ತೆ) ಹೇಗೆ ಇದನ್ನು ಬದುಕಿಸುವೆ ?

---

1. 'ನಿರಾಸ್ಪದತ್ವೇ ಅನುಪಪತ್ತಿಃ' ಪಾ॥; "ರಜ್ಜುವತ್ ಸರ್ಪಾದಿ" ಎಂಬ ಪಾ॥ ಪಾಠವು ಸರಿಯಲ್ಲ.

2. 'ಕಲ್ಪಿತೈವ' ಪಾ॥ಕಾ॥

3. "ಸಿದ್ಧತ್ವಾಭ್ಯುಪಗಮಾದೇವ" ಪಾ॥ಕಾ॥

4. ಅದ್ವೈತದಲ್ಲಿ ಹೇಳುವ ಶಾಸ್ತ್ರ, ಹೇಳಲ್ಪಡುವ ವಿಷಯ--ಎಂಬ ದ್ವೈತವಿದೆ ಎಂಬುದು ವಿರೋಧವು.

5. ಉಪನಿಷತ್ತಿನ ೭ನೆಯ ಮಂತ್ರದ ಭಾಷ್ಯ (ಭಾ. ಭಾ. ೪೫)ದಲ್ಲಿ ಇದನ್ನು ಹೇಳಿದೆ.

(ಆಕ್ಷೇಪ) :—(ಆಕ್ಷೇಪಕನು) ಹೇಳುತ್ತಾನೇನೆಂದರೆ ಹಾವೆಂಬ ವಿಕಲ್ಪಕ್ಕೆ ಆಧಾರ(ವಾಗಿರುವ) ಹಗ್ಗವುಕೂಡ ವಿಕಲ್ಪಿತವಾಗಿಯೇ ಇರುತ್ತದೆ; ಆದ್ದರಿಂದ (ಅದ್ವೈತವು ಸತ್ಯವಾಗಿರುವದೆಂಬುದಕ್ಕೆ ಅದು) ದೃಷ್ಟಾಂತವೆಂಬುದು ಹೊಂದುವದಿಲ್ಲ.[1]

(ಸಮಾಧಾನ) :—ಹಾಗಲ್ಲ. ಏಕೆಂದರೆ ವಿಕಲ್ಪನೆಯು ಹೋದರೆ ಅವಿಕಲ್ಪಿತವಾದದ್ದು ಅವಿಕಲ್ಪಿತವಾಗಿರುವದರಿಂದಲೇ (ಅದು ನಿಜವಾಗಿ) ಇರುವದೆಂಬುದು[2] ಯುಕ್ತವಾಗಿರುತ್ತದೆ.

(ಆಕ್ಷೇಪ) :—(ಅದೂ) ಹಗ್ಗದ ಹಾವಿನಂತೆ ಅಸತ್ತೇ (ಆಗಲಿ)!

(ಪರಿಹಾರ) :—ಹಾಗಲ್ಲ. ಏಕೆಂದರೆ (ಅದು) ನಿಯಮವಾಗಿ ಅವಿಕಲ್ಪಿತವಾಗಿಯೇ ಇದೆ.[3] ಇದು ಹಾವಲ್ಲವೆಂಬ ಅರಿವು ಉಂಟಾಗುವ ಮುಂಚೆ ಇರುವ ಅವಿಕಲ್ಪಿತವಾದ ಹಗ್ಗದ ಅಂಶದಂತೆಯೇ[4] (ಅವಿಕಲ್ಪಿತವಾಗಿದೆ). ವಿಕಲ್ಪನೆಯು ಉಂಟಾಗುವ ಮುಂಚೆ ವಿಕಲ್ಪನೆಮಾಡುವವನು ಇರುತ್ತಾನೆಂದು (ನೀವೂ) ಒಪ್ಪುವದರಿಂದಲೂ (ಅದು) ಅಸತ್ತೆಂಬುದು ಸರಿಯಾಗುವದಿಲ್ಲ.[5]

## ಶಾಸ್ತ್ರವು ದ್ವೈತದ ಅರಿವನ್ನು ಹೇಗೆ ಬಾಧಿಸುತ್ತದೆ?

(ಭಾಷ್ಯ)

೧೧೫. ಕಥಂ ಪುನಃ ಸ್ವರೂಪೇ ವ್ಯಾಪಾರಾಭಾವೇ ಶಾಸ್ತ್ರಸ್ಯ ದ್ವೈತವಿಜ್ಞಾನನಿವರ್ತಕತ್ವಮ್? ನೈಷ ದೋಷಃ। ರಜ್ಜ್ವಾಂ ಸರ್ಪಾದಿವತ್ ಆತ್ಮನಿ ದ್ವೈತಸ್ಯ

---

1. ಹಾವು ಹೇಗೆ ಕಲ್ಪಿತವೋ ಹಗ್ಗವೂ ಹಾಗೆಯೇ ಕಲ್ಪಿತವೆಂದು ನೀವೂ ಒಪ್ಪುತ್ತೀರಲ್ಲವೆ? ಆಗ ಕಲ್ಪಿತವಲ್ಲದ ದೃಷ್ಟಾಂತವೆಲ್ಲಿದೆ?–ಎಂದು ಆಕ್ಷೇಪ.

2. ಹಗ್ಗ, ಹಾವು–ಮುಂತಾದವುಗಳಲ್ಲೆಲ್ಲ, 'ಇದು', 'ಇರವು'–ಎಂಬುದು ಸೇರಿಕೊಂಡೇ ಇರುತ್ತದೆ. 'ಇರವು' ಅವಿಕಲ್ಪಿತವಾದ ಅಂಶವಾಗಬಹುದು; ಅದನ್ನು ದೃಷ್ಟಾಂತವಾಗಿ ತೆಗೆದುಕೊಳ್ಳಬಹುದು–ಎಂದು ಭಾವ.

3. ಅದ್ವೈತವೂ ಅಸತ್ತೇ, ಸತ್ಯವಾಗಿ ತೋರಿದ ಹಗ್ಗದ ಹಾವಿನಂತೆ–ಎಂದೇಕೆ ಯುಕ್ತಿಯನ್ನು ಮಾಡಬಾರದು?–ಎಂಬ ಆಕ್ಷೇಪಕ್ಕೆ ಉತ್ತರವಿದು.

4. ಒಂದು ಸಲ ಸತ್ಯವೆಂದು ತೋರಿ, ಆ ಬಳಿಕ ಹಾಗಲ್ಲವೆಂದು ತೋರಿದರೆ ಅಸತ್ಯವೆನಬಹುದು. ಆದರೆ ಹಗ್ಗದಲ್ಲಿ ತೋರುವ ಇರವಿನಂತೆ ಮೊದಲೂ ಆಮೇಲೂ ಒಂದೇ ರೂಪದಿಂದ ಇರುವದು ಹಾಗಾಗಲಾರದು–ಎಂದರ್ಥ.

5. ಎಚ್ಚರದಲ್ಲಿ ತೋರುವ ಹಗ್ಗದ ಇರವಿನ ಅಂಶವು ಕನಸಿನಲ್ಲಿ ಕಾಣುವದಿಲ್ಲವಾದರೂ ವಿಕಲ್ಪಿಸುವ ನಾನು ಎಂಬ ಅಂಶವು ಭ್ರಾಂತಿಕಾಲದಲ್ಲಿಯೂ ಬಾಧೆಯ ಕಾಲದಲ್ಲಿಯೂ ಒಂದೇ ಆಗಿರುತ್ತದೆ ಎಂಬುದು ನಿರ್ವಿವಾದ.

ಅವಿದ್ಯಾಧ್ಯಸ್ತತ್ವಾತ್ । ಕಥಮ್ ? ಸುಖ್ಯಹಮ್, ದುಃಖೀ, ಮೂಢಃ, ಜಾತಃ, ಮೃತಃ, ಜೀರ್ಣಃ, ದೇಹವಾನ್, ಪಶ್ಯಾಮಿ, ವ್ಯಕ್ತಃ, ಅವ್ಯಕ್ತಃ[1], ಕರ್ತಾ, ಫಲೀ, ಸಂಯುಕ್ತಃ, ವಿಯುಕ್ತಃ, ಕ್ಷೀಣಃ, ವೃದ್ಧಃ, ಅಹಮ್, ಮಮ ಏತೇ ಇತ್ಯೇವ ಮಾದಯಃ ಸರ್ವೇ ಆತ್ಮನಿ ಅಧ್ಯಾರೋಪ್ಯನ್ತೇ । ಆತ್ಮಾ ಏತೇಷು ಅನುಗತಃ । ಸರ್ವತ್ರ ಅವ್ಯಭಿಚಾರಾತ್ । ಯಥಾ ಸರ್ಪಧಾರಾದಿಭೇದೇಷು ರಜ್ಜುಃ । ಯದಾ ಚ ಏವಂ ವಿಶೇಷ್ಯಸ್ವರೂಪಪ್ರತ್ಯಯಸ್ಯ ಸಿದ್ಧತ್ವಾತ್ ನ ಕರ್ತವ್ಯತ್ವಂ ಶಾಸ್ತ್ರೇಣ । ಅಕೃತಕರ್ತೃ ಚ ಶಾಸ್ತ್ರಮ್ । ಕೃತಾನುಕಾರಿತ್ವೇ ಅಪ್ರಮಾಣಮ್ । ಯತಃ ಅವಿದ್ಯಾರೋಪಿತಸುಖಿತ್ವಾದಿವಿಶೇಷಪ್ರತಿಬನ್ಧಾದೇವ ಆತ್ಮನಃ ಸ್ವರೂಪೇಣ ಅನವಸ್ಥಾನಮ್। ಸ್ವರೂಪಾವಸ್ಥಾನಂ ಚ ಶ್ರೇಯಃ ಇತಿ ಸುಖಿತ್ವಾದಿನಿವರ್ತಕಂ ಶಾಸ್ತ್ರಮ್ ಆತ್ಮನಿ ಅಸುಖಿತ್ವಾದಿಪ್ರತ್ಯಯಕರಣೇನ ನೇತಿನೇತ್ಯಸ್ಥೂಲಾದಿವಾಕ್ಯೈಃ। ಆತ್ಮಸ್ವರೂಪವತ್ ಅಸುಖಿತ್ವಾದಿರಪಿ ಸುಖಿತ್ವಾದಿಭೇದೇಷು ನಾನುವೃತ್ತೋಽಸ್ತಿ ಧರ್ಮಃ । ಯದಿ ಅನುವೃತ್ತಃ ಸ್ಯಾತ್ ನಾಧ್ಯಾರೋಪ್ಯೇತ[2] ಸುಖಿತ್ವಾದಿಲಕ್ಷಣೋ ವಿಶೇಷಃ । ಯಥಾ ಉಷ್ಣತ್ವಗುಣವಿಶೇಷವತಿ ಅಗ್ನೌ ಶೀತತಾ । ತಸ್ಮಾತ್ ನಿರ್ವಿಶೇಷೇ ಏವ ಆತ್ಮನಿ ಸುಖಿತ್ವಾದಯೋ ವಿಶೇಷಾಃ ಕಲ್ಪಿತಾಃ । ಯತ್ತು ಅಸುಖಿತ್ವಾದಿಶಾಸ್ತ್ರಮ್ ಆತ್ಮನಃ ತತ್ ಸುಖಿತ್ವಾದಿವಿಶೇಷನಿವೃತ್ತ್ಯರ್ಥಮೇವ ಇತಿ ಸಿದ್ಧಮ್ । "ಸಿದ್ಧಂ ತು ನಿವರ್ತಕತ್ವಾತ್" ಇತ್ಯಾಗಮವಿದಾಂ ಸೂತ್ರಮ್ ॥

(ಭಾಷ್ಯಾರ್ಥ)

(ಆಕ್ಷೇಪ) :—ಹಾಗಾದರೆ (ಆತ್ಮ) ಸ್ವರೂಪ (ದ ವಿಷಯ) :ದಲ್ಲಿ ಶಾಸ್ತ್ರಕ್ಕೆ ವ್ಯಾಪಾರವಿಲ್ಲದಿದ್ದರೆ (ಅದು) ದ್ವೈತದ ಅರಿವನ್ನು ತೊಲಗಿಸುವದು ಹೇಗೆ?[3]

(ಪರಿಹಾರ) :—ಇದೇನೂ ತಪ್ಪಲ್ಲ. ಏಕೆಂದರೆ ಹಗ್ಗದಲ್ಲಿ ಹಾವು ಮುಂತಾದವುಗಳಂತೆ ಆತ್ಮನಲ್ಲಿ ದ್ವೈತವು ಅವಿದ್ಯೆಯಿಂದ ಅಧ್ಯಸ್ತವಾಗಿರುತ್ತದೆ. ಹೇಗೆ? (ಎಂದರೆ): ನಾನು ಸುಖಿಯು, ದುಃಖಿಯು, ಮೂಢನು, ಹುಟ್ಟಿದೆನು, ಸತ್ತೆನು, ಮುದುಕನಾದೆನು, ದೇಹವುಳ್ಳವನು, ನೋಡುತ್ತೇನೆ, ವ್ಯಕ್ತನು, ಅವ್ಯಕ್ತನು,[4] ಮಾಡುವವನು,

---

1. "ವ್ಯಕ್ತಾವ್ಯಕ್ತಃ" ಪಾ॥

2. "ಅಧ್ಯಾರೋಪಿತಸುಖಿತ್ವಾದಿ" ಎಂಬ ಪಾಠಕ್ಕಿಂತ ಈ ಪಾ॥ ಪಾಠವೇ ಮೇಲು.

3. ಹಗ್ಗವೆಂಬ ಆಧಾರವನ್ನು ತಿಳಿಸಿದ ಜ್ಞಾನವೇ ಹಾವನ್ನು ತೊಲಗಿಸುತ್ತದೆ; ಆತ್ಮನನ್ನು ತಿಳಿಸದೆ ಶಾಸ್ತ್ರವು ದ್ವೈತವನ್ನು ಕಳೆಯುವದು ಹೇಗೆ?–ಎಂದು ಆಕ್ಷೇಪ.

4. ಬಿದ್ರ ಮುಂತಾದವುಗಳಲ್ಲಿ ವಿಶೇಷರೂಪದಿಂದ ತೋರಿಕೊಳ್ಳದೆ ಇರುವೆನು.

ಫಲವನ್ನು (ಅನುಭವಿಸುವ) ವನು, (ಇದಕ್ಕೆ) ಸೇರಿಕೊಂಡೆನು, (ಇದನ್ನು) ಅಗಲಿದೆನು, ಸೊರಗಿದೆನು, ಮೈದುಂಬಿಕೊಂಡೆನು, ನಾನು, ನನ್ನವರು ಇವರು-ಎಂಬಿವೇ ಮುಂತಾದವುಗಳೆಲ್ಲ ಆತ್ಮನಲ್ಲಿ ಆರೋಪಿತವಾಗುತ್ತವೆ. ಹಾವು, ನೀರಿನಕೋಡಿ-ಮುಂತಾದ (ಕಲ್ಪಿತ) ಭೇದಗಳಲ್ಲಿ ಹಗ್ಗವು (ಸೇರಿಕೊಂಡೇ ಇರುವಂತೆ)[1], ಆತ್ಮನು ಇವುಗಳಲ್ಲಿ ಸೇರಿಕೊಂಡೇ ಇರುತ್ತಾನೆ; ಏಕೆಂದರೆ (ಇವುಗಳಲ್ಲಿ) ಯಾವದರಲ್ಲಿಯೂ (ಅವನು) ತೋರದೆ ಹೋಗುವದಿಲ್ಲ. ಹೀಗಿರುವದೆಂದು ಯಾವಾಗ (ಆಯಿತೋ ಆಗ), ವಿಶೇಷ್ಯ (ವಾದ ಆತ್ಮನ) **ಸ್ವರೂಪದ ಅರಿವು ಸಿದ್ಧವಾಗಿರುವದರಿಂದ (ಅದನ್ನು) ಶಾಸ್ತ್ರವು ಮಾಡಿಕೊಡಬೇಕಾದದ್ದಿಲ್ಲ.**[2] **ಶಾಸ್ತ್ರವು (ಮೊದಲೇ) ಆಗದೆ ಇರುವ (ಅರಿವನ್ನು) ಮಾಡಿಕೊಡತಕ್ಕದ್ದು. (ಮೊದಲೇ) ಆಗಿರುವ (ಅರಿವನ್ನೇ) ಅನುಸರಿಸಿ (ಹೇಳಿದರೆ) ಪ್ರಮಾಣವಾಗದೆ (ಹೋಗುವದು)**[3]. ಆತ್ಮನು ತನ್ನ ಸ್ವರೂಪದಿಂದ ನೆಲೆನಿಂತುಕೊಳ್ಳದೆ ಇರುವದೆಂಬುದು ಅವಿದ್ಯೆಯಿಂದ ಹುಟ್ಟುಗಟ್ಟಿರುವ ಸುಖಿತ್ವವೇ ಮುಂತಾದ ಅಡ್ಡಿಯಿಂದಲೇ ಆಗಿರುವದರಿಂದಲೂ ಸ್ವರೂಪದಲ್ಲಿ ನೆಲೆನಿಲ್ಲುವದೇ ಶ್ರೇಯಸ್ಸಾಗಿರುವದರಿಂದಲೂ ಆತ್ಮನ (ವಿಷಯದ)ಲ್ಲಿ (ಅವನು) ಸುಖಿಯಲ್ಲ ಎಂದು ಮುಂತಾದ ಅರಿವನ್ನುಂಟುಮಾಡುವ ಮೂಲಕ ಸುಖಿತ್ವವೇ ಮುಂತಾದ (ಅಡ್ಡಿಯನ್ನು) ಶಾಸ್ತ್ರವು "ಇದಲ್ಲ, ಇದಲ್ಲ" "ಸ್ಥೂಲವಲ್ಲ"-ಮುಂತಾದ ವಾಕ್ಯಗಳಿಂದ ತೊಲಗಿಸುತ್ತದೆ. ಸುಖಿತ್ವವೇ ಮುಂತಾದ ಆಯಾ (ರೂಪ) ಗಳಲ್ಲಿ ಅಸುಖಿತ್ವಾದಿಯಾದ ಧರ್ಮವೂ ಆತ್ಮಸ್ವರೂಪ(ವು) ವಂತೆ ಸೇರಿಕೊಂಡಿರುವದಿಲ್ಲ. ಒಂದು ವೇಳೆ (ಅದು) ಸೇರಿಕೊಂಡು ಇದ್ದಿದ್ದರೆ, ಸುಖಿತ್ವವೇ ಮುಂತಾದ (ಯಾವ) ವಿಶೇಷವೂ (ಆತ್ಮನಲ್ಲಿ) ಆರೋಪಿತವಾಗುತ್ತಿರಲಿಲ್ಲ. ಹೇಗೆ ಬಿಸಿಯಾಗಿರುವಿಕೆ ಎಂಬ ವಿಶೇಷಗುಣವುಳ್ಳ ಬೆಂಕಿಯಲ್ಲಿ ತಂಪು (ಎಂಬುದು ಆರೋಪಿತವಾಗಲಾರದೋ ಹಾಗೆಯೇ ಇದು). ಆದ್ದರಿಂದ ಯಾವ ವಿಶೇಷವೂ ಇಲ್ಲದ ಆತ್ಮನಲ್ಲಿ ಸುಖಿತ್ವವೇ ಮುಂತಾದ ವಿಶೇಷಗಳು ಕಲ್ಪಿತವಾಗಿರುತ್ತವೆ; ಆದರೆ '(ಇವನು) ಸುಖಿಯಲ್ಲ' ಎಂದು ಮುಂತಾಗಿ (ಹೇಳುವ) ಶಾಸ್ತ್ರವೋ ಎಂದರೆ ಅದು (ಆತ್ಮನಲ್ಲಿ) ಸುಖಿತ್ವವೇ ಮುಂತಾದದ್ದನ್ನು ಅಲ್ಲಗಳೆಯುವದಕ್ಕಾಗಿಯೇ ಎಂದು ಸಿದ್ಧವಾಗುತ್ತದೆ. **'ಸಿದ್ಧಂ ತು ನಿವರ್ತಕತ್ವಾತ್'** (ಹುಟ್ಟುಗಟ್ಟಿದ್ದನ್ನು ತೊಲಗಿಸುವದರಿಂದಲೇ ಶಾಸ್ತ್ರಪ್ರಾಮಾಣ್ಯವು ಸಿದ್ಧವಾಗಿರುತ್ತದೆ)ಎಂದು ಆಗಮವನ್ನು ಬಲ್ಲವರ ಸೂತ್ರವೂ[4] (ಇದೆ).

---

1. ಹಗ್ಗವೆಂಬ ರೂಪದಿಂದಲ್ಲ; ಇದು ಎಂಬ ರೂಪದಿಂದ ಸೇರಿಕೊಂಡೇ ತೋರುತ್ತಿರುತ್ತದೆ. ವ್ಯಕ್ತಿಗಳಲ್ಲಿ ಜಾತಿಯು ಸೇರಿಕೊಂಡಿರುವಂತೆ ಅಲ್ಲವೆಂದು ತಿಳಿಸುವದಕ್ಕಾಗಿ ಈ ದೃಷ್ಟಾಂತವನ್ನು ಕೊಟ್ಟಿದೆ.

2. ಗೀ. ಭಾ. ೧೮-೫೦; ಬೃ. ಭಾ. ೧-೪-೭.

3. ಅನುವಾದವಾಗುವದು.

4. ದ್ರವಿಡಾಚಾರ್ಯರ ಸೂತ್ರವು. ಪೀಠಿಕೆಯನ್ನು ನೊ.ಡಿ.

# ಅದ್ವೈತವೇ ಮಂಗಲಕರವು

(ಭಾಷ್ಯ)

೧೧೬. ಪೂರ್ವಶ್ಲೋಕಾರ್ಥಸ್ಯ ಹೇತುಮ್ ಆಹ—

(ಭಾಷ್ಯಾರ್ಥ)

ಹಿಂದಿನ ಶ್ಲೋಕ(ದಲ್ಲಿ ಹೇಳಿರುವ) ವಿಷಯಕ್ಕೆ (ಇಲ್ಲಿ) ಕಾರಣವನ್ನು[1] ಹೇಳುತ್ತಾರೆ:—

**ಭಾವೈರಸದ್ಭಿರೇವಾಯಮದ್ವಯೇನ ಚ ಕಲ್ಪಿತಃ ।**
**ಭಾವಾ ಅಪ್ಯದ್ವಯೇನೈವ ತಸ್ಮಾದದ್ವಯತಾ ಶಿವಾ ॥ ೩೩ ॥**

೩೩. ಈತನು ಅಸತ್ತೇ ಆಗಿರುವ ಭಾವಗಳ (ರೂಪ)ದಿಂದಲೂ ಅದ್ವಯ (ರೂಪ)ದಿಂದಲೂ ಕಲ್ಪಿತನಾಗಿರುವನು. ಭಾವಗಳೂ ಅದ್ವಯದಿಂದಲೇ (ಕಲ್ಪಿತವಾಗಿರುವವು). ಆದ್ದರಿಂದ ಅದ್ವಯತ್ವವೇ ಶಿವವು.

(ಭಾಷ್ಯ)

೧೧೭. ಯಥಾ ರಜ್ಜ್ವಾಮ್ ಅಸದ್ಭಿಃ ಸರ್ಪಧಾರಾದಿಭಿಃ ಅದ್ವಯೇನ ಚ ರಜ್ಜುದ್ರವ್ಯೇಣ ಸತಾ 'ಅಯಂ ಸರ್ಪಃ,'[2] 'ಇಯಂ ಧಾರಾ,' 'ದಣ್ಡೋಽಯಮ್' ಇತಿ ವಾ ರಜ್ಜುದ್ರವ್ಯಮೇವ ಕಲ್ಪ್ಯತೇ, ಏವಂ ಪ್ರಾಣಾದಿಭಿಃ ಅನನ್ತೈಃ ಅಸದ್ಭಿರೇವ ಅವಿದ್ಯಮಾನೈಃ ನ ಪರಮಾರ್ಥತಃ । ನ ಹಿ ಅಪ್ರಚಲಿತೇ ಮನಸಿ ಕಶ್ಚಿತ್ ಭಾವಃ ಉಪಲಕ್ಷಯಿತುಂ ಶಕ್ಯತೇ ಕೇನಚಿತ್ । ನ ಚ ಆತ್ಮನಃ ಪ್ರಚಲನಮ್ ಅಸ್ತಿ । ಪ್ರಚಲಿತಸ್ಯೈವ ಉಪಲಭ್ಯಮಾನಾಃ ಭಾವಾಃ ನ ಪರಮಾರ್ಥತಃ ಸನ್ತಃ ಕಲ್ಪಯಿತುಂ ಶಕ್ಯಾಃ । ಅತಃ ಅಸದ್ಭಿರೇವ ಪ್ರಾಣಾದಿಭಾವೈಃ ಅದ್ವಯೇನ ಚ ಪರಮಾರ್ಥಸತಾ ಆತ್ಮನಾ ರಜ್ಜುವತ್ ಸರ್ವವಿಕಲ್ಪಾಸ್ಪದಭೂತೇನ ಅಯಂ ಸ್ವಯಮೇವ ಆತ್ಮಾ ಕಲ್ಪಿತಃ, ಸದಾ ಏಕಸ್ವಭಾವೋಽಪಿ ಸನ್ । ತೇ ಚ ಪ್ರಾಣಾದಿಭಾವಾಃ ಅಪಿ ಅದ್ವಯೇನೈವ ಸತಾ ಆತ್ಮನಾ ವಿಕಲ್ಪಿತಾಃ । ನ ಹಿ ನಿರಾಸ್ಪದಾ ಕಾಚಿತ್ ಕಲ್ಪನಾ ಉಪ

---

1. ಅದ್ವೈತವು ಕಲ್ಪನಾವಸ್ಥೆಯಲ್ಲಿಯೂ ಇರುತ್ತದೆ; ಕಲ್ಪಿತವಾದದ್ದು ಅದ್ವೈತ ತತ್ತ್ವವನ್ನು ಬಿಟ್ಟು ನಿಜವಾಗಿ ಇರುವದಿಲ್ಲ ಎಂಬ ಕಾರಣವನ್ನು. ಇದನ್ನು ಭಾಷ್ಯದಲ್ಲಿ ಹಿಂದೆಯೇ ಹೇಳಿದೆ.

2. 'ಇತಿ' ಎಂದು ಹೆಚ್ಚಾಗಿ ಪಾ॥; ಹಾಗಾದರೆ 'ಧಾರಾ ಇತಿ' ಎಂದೂ ಬೇಕು.

ಲಭ್ಯತೇ[1] । ಅತಃ ಸರ್ವಕಲ್ಪನಾಸ್ಪದತ್ವಾತ್ ಸ್ವೇನ ಆತ್ಮನಾ ಅದ್ವಯಸ್ಯ ಅವ್ಯಭಿಚಾರಾತ್ ಕಲ್ಪನಾವಸ್ಥಾಯಾಮಪಿ ಅದ್ವಯತಾ ಶಿವಾ । ಕಲ್ಪನಾ ಏವ ತು ಅಶಿವಾಃ । ರಜ್ಜುಸರ್ಪಾದಿವತ್ ತ್ರಾಸಾದಿಕಾರಿಣ್ಯೋ ಹಿ ತಾಃ । ಅದ್ವಯತಾ ಅಭಯಾ ಅತಃ ಸೈವ ಶಿವಾ ॥

(ಭಾಷ್ಯಾರ್ಥ)

ಹೇಗೆ ಹಗ್ಗದಲ್ಲಿಲ್ಲದ ಹಾವು, (ನೀರಿನ) ಕೋಡಿ-ಮುಂತಾದವುಗಳ (ರೂಪ) ದಿಂದಲೂ, ಅದ್ವಯವಾದ ಹಗ್ಗವೆಂಬ ನಿಜವಾಗಿರುವ ವಸ್ತುವಿನ ರೂಪದಿಂದಲೂ 'ಇದು ಹಾವು,' 'ಇದು (ನೀರಿನ) ಕೋಡಿ,' 'ಇದು ಕೋಲು' ಎಂದೋ, (ಇದು ಹಗ್ಗವು ಎಂದೋ)[2] ಹಗ್ಗವೆಂಬ ವಸ್ತುವೇ ಕಲ್ಪಿಸಲ್ಪಡುತ್ತದೆಯೋ[3] ಹೀಗೆಯೇ ಪ್ರಾಣನೇ ಮುಂತಾದ ಲೆಕ್ಕವಿಲ್ಲದಷ್ಟು ಅಸತ್ತಾಗಿಯೇ ಇರುವ ಇಲ್ಲದೆಯೇ ಇರುವ, ನಿಜವಾಗಿಯೂ (ಇರುವ ಭಾವಗಳ ರೂಪ)ದಿಂದಲ್ಲ-ಏಕೆಂದರೆ ಮನಸ್ಸು ಅಲುಗಾಡದೆ ಇರುವಾಗ ಯಾರಿಗೂ ಯಾವ ಭಾವವನ್ನೂ ಕಾಣುವದು ಆಗಲಾರದು[4]. ಆತ್ಮನಿಗಂತೂ ಅಲುಗಾಟವಿಲ್ಲ[5]. ಅಲುಗಾಡುವ (ಮನಸ್ಸಿಗೇ) ಕಾಣಬರುವ ಭಾವಗಳು ನಿಜವಾಗಿಯೂ ಇರುವವೆಂದು ಕಲ್ಪಿಸುವದು ಆಗಲಾರದು. ಆದ್ದರಿಂದ ಅಸತ್ತಾಗಿಯೇ ಇರುವ ಪ್ರಾಣಾದಿಭಾವಗಳ (ರೂಪ)ದಿಂದಲೂ ಮತ್ತು ಅದ್ವಯವಾದ, ಹಗ್ಗದಂತೆ ಎಲ್ಲಾ ವಿಕಲ್ಪಗಳಿಗೂ ಆಧಾರವಾಗಿರುವ, ಪರಮಾರ್ಥವಾಗಿಯೂ ಇದ್ದುಕೊಂಡಿರುವ ಆತ್ಮನಾಗಿಯೂ[6] ಈ ಆತ್ಮನು ಯಾವಾಗಲೂ ಒಂದೇ ರೂಪದವನಾಗಿದ್ದರೂ ತಾನೇ[7]

---

1. 'ಉಪಪದ್ಯತೇ' ವಾ॥ ಮ್ಯ॥

2. 'ರಜ್ಜುರಿಯಮ್ ಇತಿ ವಾ' ಎಂಬ ಮಾತು ಇಲ್ಲ ಮೂಲದಲ್ಲಿರಬೇಕು.

3. ಹಗ್ಗವೆಂದೂ ಹಾವೆಂದೂ ಕಲ್ಪಿಸುವದು ಹಗ್ಗವನ್ನೇ. ಹಾವಿನಲ್ಲಿರುವ ಇದು ಎಂಬಂಶವು ಹಗ್ಗವೇ.

4. ಸುಷುಪ್ತಿ-ಮುಂತಾದ ಅವಸ್ಥೆಗಳಲ್ಲಿ ಭಾವಗಳು ಕಾಣುವದಿಲ್ಲ. ಅಲ್ಲಿ ಮನಸ್ಸಿನ ಅಲುಗಾಟವೂ ಇಲ್ಲ.

5. ಆತ್ಮನು ನಿಜವಾಗಿಯೇ ದ್ವೈತರೂಪನಾಗುವನು-ಎಂಬ ಪರಿಣಾಮವಾದವು ಯುಕ್ತಿವಿರುದ್ಧ ; ಮುಂದಿನ ಪ್ರಕರಣಗಳಲ್ಲಿ ಇದನ್ನು ತೋರಿಸಲಾಗುತ್ತದೆ.

6. ಹಗ್ಗವು ಸರ್ಪಾದಿಕಲ್ಪನೆಗಳಿಗೆ ವ್ಯಾವಹಾರಿಕವಾದ ಅಧಿಷ್ಠಾನವು ; ಆತ್ಮನು ಪರಮಾರ್ಥವಾಗಿ ಎಲ್ಲಾ ಕಲ್ಪನೆಗಳಿಗೂ ಆಧಾರವು.

7. 'ಇದು ಹಾವು' ಎಂಬಲ್ಲಿ ಇದು ಎಂಬ ರೂಪದಿಂದ ಹಗ್ಗವೂ ಹಾವು ಎಂಬ ರೂಪದಿಂದ ಹಾವೂ ಹಗ್ಗದಲ್ಲಿ ಕಲ್ಪಿತವಾಗಿರುತ್ತವೆ. ಹಗ್ಗದಲ್ಲಿಯೂ 'ಇದು' ಎಂಬಂಶವೂ ಇದ್ದರೂ ಹಾವಿಗೆ ಸಂಬಂಧಪಟ್ಟಂತೆ ತೋರುವ 'ಇದು' ಕಲ್ಪಿತವಾದದ್ದೇ. ಹೀಗೆಯೇ 'ನಾನು ಪ್ರಾಜ್ಞನು (ಸುಷುಪ್ತಿಯನ್ನನುಭವಿಸುವವನು)' ಎಂಬ ಕಲ್ಪನೆಯನ್ನೂ ತಿಳಿಯಬೇಕು. ಆತ್ಮನು ದೃಷ್ಟಾಂತದ ಹಗ್ಗದಂತೆ ತನ್ನ ಸ್ವರೂಪದಲ್ಲಿ ಯಾವಾಗಲೂ ಇದ್ದುಕೊಂಡೇ ಇರುತ್ತಾನೆ.

ಕಲ್ಪಿತನಾಗಿರುವನು. ಮತ್ತು ಆ ಪ್ರಾಣನೇ ಮುಂತಾದ ಭಾವಗಳುಕೂಡ ಅದ್ವಯ ನಿಂದಲೇ, (ಎಂದರೆ) ಇರುವ ಆತ್ಮನಿಂದಲೇ[1] ಕಲ್ಪಿತವಾಗಿರುತ್ತವೆ. ಏಕೆಂದರೆ (ಯಾವ) ಆಧಾರವೂ ಇಲ್ಲದ ಯಾವ ಕಲ್ಪನೆಯನ್ನೂ (ನಾವು) ಕಂಡಿಲ್ಲ[2]. **ಆದ್ದರಿಂದ ಎಲ್ಲಾ ಕಲ್ಪನೆಗಳಿಗೂ ಆಧಾರವಾಗಿರುವದರಿಂದ, ಅದ್ವಯವು ತನ್ನ ರೂಪದಿಂದ (ಆಗಲೂ) ಬೇರ್ಪಡದೆಯೇ ಇರುವದರಿಂದ, ಕಲ್ಪನೆಯ(ನ್ನು ಮಾಡುವ) ಅವಸ್ಥೆಯಲ್ಲಿಯೂ ಅದ್ವಯತ್ವವೇ ಮಂಗಲಕರವಾದದ್ದು[3] ; ಕಲ್ಪನೆಗಳೇ-ಅಮಂಗಲವಾಗಿರುತ್ತವೆ, ಏಕೆಂದರೆ ಹಗ್ಗದ ಹಾವೇ ಮುಂತಾದವುಗಳಂತೆ ಅವು ಅಂಜಿಕೆಯೇ ಮುಂತಾದವನ್ನು ಉಂಟುಮಾಡುತ್ತವೆ[4].** ಅದ್ವಯತ್ವವು (ಯಾವ) ಅಂಜಿಕೆಯೂ ಇಲ್ಲದ್ದು ; ಆದ್ದರಿಂದ ಅದೇ ಮಂಗಲಕರವಾದದ್ದು.

(ಭಾಷ್ಯ)

೧೧೮. ಕುತಶ್ಚ ಅದ್ವಯತಾ ಶಿವಾ ?

(ಭಾಷ್ಯಾರ್ಥ)

ಅದ್ವಯತ್ವವು ಮಂಗಲಕರವೆನ್ನುವದಕ್ಕೆ ಮತ್ತೂ ಯಾವ ಕಾರಣವಿದೆ? ಎಂದರೆ :—

**ನಾತ್ಮಭಾವೇನ ನಾನೇದಂ ನ ಸ್ವೇನಾಪಿ ಕಥಂಚನ ।**
**ನ ಪೃಥಙ್ನಾಪೃಥಕ್ಕಿಂಚಿದಿತಿ ತತ್ತ್ವವಿದೋ ವಿದುಃ ॥ ೩೪ ॥**

**೩೪.** ಇದು ಆತ್ಮಭಾವದಿಂದಲೂ ನಾನಾ (ರೂಪವಾಗಿ) ಇಲ್ಲ ; ತನ್ನ ರೂಪದಿಂದಲೂ ಹೇಗೂ ಇರುವದಿಲ್ಲ. ಯಾವದೂ ಬೇರೆಯಲ್ಲ, ಬೇರೆಯಲ್ಲದೆಯೂ ಅಲ್ಲ. ಹೀಗೆಂದು ತತ್ತ್ವವಿದರು ತಿಳಿದಿರುವರು.

---

1. ಆತ್ಮನನ್ನೇ ಭಾವಗಳೆಂದು ಕಲ್ಪಿಸುತ್ತೇವೆ ; ಏನೂ ಇಲ್ಲದ ಶೂನ್ಯದಲ್ಲಿ ಅವನ್ನು ಕಲ್ಪಿಸಿಲ್ಲ.

2. 'ಉಪಪದ್ಯತೇ' ಎಂಬ ಪಾಠಕ್ಕೆ 'ಆಧಾರವಿಲ್ಲದ ಕಲ್ಪನೆಯೆಂಬುದೇ ಹೊಂದು ವಹಾಗಿಲ್ಲ' ಎಂದು ಕನ್ನಡಿಸಬೇಕು.

3. ಭಾವಗಳಿಂದ ನಮಗೆ ಮಂಗಲವಾಗಿರುವದೆಂದು ನಾವು ತಿಳಿಯುವಾಗಲೂ ಆತ್ಮನಿಂದಲೇ ಆ ಮಂಗಲವಾಗಿರುತ್ತದೆ.

4. ಸ್ವರೂಪವಿಚ್ಯುತಿಯನ್ನು ಮಾಡುವ ಭಾವಗಳು ಮಂಗಲಕರವೆಂದು ಆಗ ಲಾರವು.

(ಭಾಷ್ಯ)

೧೧೯. **ನಾನಾಭೂತಂ ಪೃಥಕ್ತ್ವಮ್ ಅನ್ಯಸ್ಯ ಅನ್ಯಸ್ಮಾತ್ ಯತ್ರ ದೃಷ್ಟಮ್, ತತ್ರ ಅಶಿವಂ ಭವೇತ್** । ನ ಹಿ ಅತ್ರ ಅದ್ವಯೇ ಪರಮಾರ್ಥಸತ್ಯಾತ್ಮನಿ ಪ್ರಾಣಾದಿ ಸಂಸಾರಜಾತಮ್ ಇದಂ ಜಗತ್ ಆತ್ಮಭಾವೇನ ಪರಮಾರ್ಥಸ್ವರೂಪೇಣ ನಿರೂಪ್ಯ ಮಾಣಂ ನಾನಾ ವಸ್ತ್ವನ್ತರಭೂತಂ ಭವತಿ । ಯಥಾ ರಜ್ಜುಸ್ವರೂಪೇಣ ಪ್ರಕಾಶೇನ ನಿರೂಪ್ಯಮಾಣೋ ನ ನಾನಾಭೂತಃ ಕಲ್ಪಿತಃ ಸರ್ಪೋಽಸ್ತಿ ತದ್ವತ್ । ನಾಪಿ ಸ್ವೇನ ಪ್ರಾಣಾದ್ಯಾತ್ಮನಾ ಇದಂ ವಿದ್ಯತೇ ಕದಾಚಿದಪಿ । ರಜ್ಜುಸರ್ಪವತ್ ಕಲ್ಪಿತತ್ವಾದೇವ। ತಥಾ ಅನ್ಯೋನ್ಯಂ ನ ಪೃಥಕ್ ಪ್ರಾಣಾದಿ ವಸ್ತು । ಯಥಾ ಅಶ್ವಾತ್ ಮಹಿಷಃ ಪೃಥಕ್ ವಿದ್ಯತೇ ಏವಮ್[1] । ಅತಃ ಅಸತ್ತ್ವಾತ್ ನ[2] ಅಪೃಥಕ್ ವಿದ್ಯತೇ ಅನ್ಯೋನ್ಯಂ ಪರೇಣ ವಾ ಕಿಂಚಿತ್ । ಇತಿ ಏವಂ ಪರಮಾರ್ಥಂ ತತ್ತ್ವವಿದಃ[3] ಬ್ರಾಹ್ಮಣಾಃ ವಿದುಃ । **ಅತಃ ಅಶಿವಹೇತುತ್ವಾಭಾವಾತ್** ಅದ್ವಯತೈವ ಶಿವಾ ಇತ್ಯಭಿಪ್ರಾಯಃ ।

(ಭಾಷ್ಯಾರ್ಥ)

ನಾನಾ (ರೂಪ)ವಾಗಿರುವ, ಒಂದರಿಂದ ಮತ್ತೊಂದು ಬೇರೆಯಾಗಿ ಇರುವದು ಎಲ್ಲಿ ಕಾಣುವದೋ ಅಲ್ಲಿ ಅಮಂಗಲವಾಗಬಹುದು. (ಆದರೆ) ತನಗೆರಡನೆಯದಿಲ್ಲದ ನಿಜವಾಗಿಯೂ ಸತ್ಯವಾಗಿರುವ ಈ ಆತ್ಮನಲ್ಲಿ ಪ್ರಾಣಾದಿಸಂಸಾರಸಮೂಹವೆಂಬ ಈ ಜಗತ್ತು, ಆತ್ಮಭಾವದಿಂದ ಪರಮಾರ್ಥಸ್ವರೂಪದಿಂದ ಚೆನ್ನಾಗಿ ನೋಡಿದರೆ ನಾನಾ (ರೂಪ)ವಾಗಿ, (ಅದಕ್ಕಿಂತ) ಬೇರೆಯಾದ ವಸ್ತುವಾಗಿ ಇರುವದಿಲ್ಲ. ಹೇಗೆ ಹಗ್ಗದ ರೂಪದಿಂದ ಬೆಳಕಿನಲ್ಲಿ ಚೆನ್ನಾಗಿ ಕಂಡುಕೊಂಡ(ರೆ), ನಾನಾಭೂತವಾದ ಕಲ್ಪಿತವಾದ ಹಾವು ಇರುವದಿಲ್ಲವೋ, ಅದರಂತೆಯೇ (ಇದು). ಇದು ತನ್ನ ಪ್ರಾಣನೇ ಮುಂತಾದ ರೂಪದಿಂದಲೂ ಎಂದೂ ಇರುವದಿಲ್ಲ; ಏಕೆಂದರೆ (ಇದು) ಹಗ್ಗದ ಹಾವಿನಂತೆ ಕಲ್ಪಿತ ವಾಗಿರುವದರಿಂದಲೇ (ಅಸತ್ತಾಗಿದೆ) ಮತ್ತು ಹೇಗೆ ಕುದುರೆಗಿಂತ ಕೋಣವು ಬೇರೆ ಯಾಗಿ ಇದ್ದುಕೊಂಡಿರುವದೋ ಹಾಗೆ ಪ್ರಾಣಾದಿ ವಸ್ತು(ಗಳು) ಒಂದಕ್ಕಿಂತ ಒಂದು ಬೇರೆಯಾಗಿ(ಯೂ ಇರುವ)ದಿಲ್ಲ. (ಹೀಗೆ) ಅಸತ್ತಾಗಿರುವದೆಂಬ ಈ (ಕಾರಣ)ದಿಂದ ಅವು ಒಂದಕ್ಕಿಂತ ಒಂದಾಗಲಿ (ತಮಗಿಂತ) ಬೇರೆಯಾಗಿರುವ (ಆತ್ಮನಿ)ಗಿಂತಲಾಗಲಿ

---

1. ' ಏವ ' ಅ॥ ಪ್ರೈ॥

2. ' ನಾಪಿ ' ವಾ॥

3. " ಪರಮಾರ್ಥತತ್ತ್ವಮ್ ಆತ್ಮವಿದಃ " ಅ॥ ಕಾ॥, " ಪರಮಾರ್ಥತತ್ತ್ವವಿದಃ " ವಾ॥-ಎಂಬ ಮುದ್ರಿತಪಾಠಗಳಿಂದ ನಾವು ಕೊಟ್ಟಿರುವ ಪಾಠವು ಮೇಲೆಂದು ತೋರುತ್ತದೆ

ಬೇರೆಯಲ್ಲದೆಯೂ ಯಾವದೊಂದೂ ಇರುವದಿಲ್ಲ. ಹೀಗೆಂದು ಈ ರೀತಿಯಲ್ಲಿ ಪರಮಾರ್ಥವನ್ನು ತತ್ತ್ವವನ್ನು ಬಲ್ಲ ಬ್ರಾಹ್ಮಣರು[1] ತಿಳಿದಿರುವರು[2]. ಆದ್ದರಿಂದ ಅಮಂಗಲಕ್ಕೆ ಕಾರಣವಿಲ್ಲದ್ದಾದ್ದರಿಂದ ಅದ್ವಯತ್ವವೇ ಮಂಗಲವು ಎಂದು ಅಭಿಪ್ರಾಯ[3].

## ತತ್ತ್ವದರ್ಶನವನ್ನು ಯಾರು ಬಲ್ಲರು?

(ಭಾಷ್ಯ)

೧೨೦. ತದೇತತ್ ಸಮ್ಯಗ್ದರ್ಶನಂ ಸ್ತೂಯತೇ—

(ಭಾಷ್ಯಾರ್ಥ)

ಅಂಥ ಈ ಸಮ್ಯಗ್ದರ್ಶನವನ್ನು (ಈಗ) ಹೊಗಳಲಾಗುತ್ತದೆ:—

**ವೀತರಾಗಭಯಕ್ರೋಧೈರ್ಮುನಿಭಿರ್ವೇದಪಾರಗೈಃ ।**
**ನಿರ್ವಿಕಲ್ಪೋ ಹ್ಯಯಂ ದೃಷ್ಟಃ ಪ್ರಪಞ್ಚೋಪಶಮೋಽದ್ವಯಃ॥೩೫॥**

೩೫. ವೀತರಾಗಭಯಕ್ರೋಧರಾದ ವೇದಪಾರಗರಾದ ಮುನಿಗಳು ನಿರ್ವಿಕಲ್ಪನೂ ಪ್ರಪಂಚೋಪಶಮನೂ ಅದ್ವಯನೂ ಆದ ಈ (ಆತ್ಮನನ್ನು) ಕಂಡಿರುವರು.

(ಭಾಷ್ಯ)

೧೨೧. ವಿಗತರಾಗಭಯಕ್ರೋಧಾದಿಸರ್ವದೋಷೈಃ[4] ಸರ್ವದಾ ಮುನಿಭಿಃ ಮನನಶೀಲೈಃ ವಿವೇಕಿಭಿಃ ವೇದಪಾರಗೈಃ ಅವಗತವೇದಾರ್ಥತತ್ತ್ವೈಃ[5] ಜ್ಞಾನಿಭಿಃ

1. ಬ್ರಹ್ಮಜ್ಞಾನಿಗಳು.

2. ಪರಮಾರ್ಥಕ್ಕಿಂತ ಬೇರೆಯಾಗಿ ಅದರೊಡನೆ ಒಂದಾಗಿ ತಾವು ತಾವು ಭಿನ್ನವಾಗಿ ಅಥವಾ ಅಭಿನ್ನವಾಗಿ ಇರುವ ದ್ವಿತೀಯವಸ್ತುಗಳೇ ಇಲ್ಲ. ಪ್ರಾಣಾದಿಗಳನ್ನು ಅದಕ್ಕಿಂತ ಬೇರೆಯೆಂದಾಗಲಿ ಬೇರೆಯಲ್ಲವೆಂದಾಗಲಿ ಹೇಳಿದರೆ ಅವುಗಳನ್ನು ಸತ್ಯೆಂದು ಒಪ್ಪಿದಂತೆಯೇ ಹಾಗೆ ಒಪ್ಪುವದು ಅನುಭವವಿರುದ್ಧ.

3 ತನಗೆರಡನೆಯುದಿಲ್ಲದ ವಸ್ತುವೇ ನಿಜವಾಗಿ ಮಂಗಲವು; ಅದ್ವೈತವಲ್ಲದ ವಸ್ತು ತಾನು ಮಂಗಲವಾದರೂ ಮತ್ತೊಂದರಿಂದಲೂ ಅಮಂಗಲವಾಗಬಹುದೆಂಬ ಅಂಜಿಕೆಯುಂಟು—ಎಂದರ್ಥ.

4. "ವೀತರಾಗಭಯದ್ವೇಷಕ್ರೋಧಾದಿಸರ್ವದೋಷೈಃ" ಅ॥

5. "ಅವಗತವೇದಾನ್ತಾರ್ಥತತ್ತ್ವೈಃ" ವಾ॥

ನಿರ್ವಿಕಲ್ಪಃ ಸರ್ವವಿಕಲ್ಪಶೂನ್ಯಃ ಅಯಮ್ ಆತ್ಮಾ ದೃಷ್ಟಃ ಉಪಲಬ್ಧಃ ವೇದಾನ್ತಾರ್ಥ ತತ್ಪರೈಃ । ಪ್ರಪಞ್ಚೋಪಶಮಃ । ಪ್ರಪಞ್ಚಃ ದ್ವೈತಭೇದವಿಸ್ತಾರಃ । ತಸ್ಯ ಉಪಶಮಃ ಅಭಾವಃ ಯಸ್ಮಿನ್ ಸ ಆತ್ಮಾ ಪ್ರಪಞ್ಚೋಪಶಮಃ । ಅತ ಏವ ಅದ್ವಯಃ । ವಿಗತ ದೋಷೈರೇವ ಪಣ್ಡಿತೈಃ ವೇದಾನ್ತಾರ್ಥತತ್ಪರೈಃ ಸಂನ್ಯಾಸಿಭಿಃ ಅಯಮಾತ್ಮಾ ದ್ರಷ್ಟುಂ ಶಕ್ಯಃ, ನಾನ್ಯೈಃ ರಾಗಾದಿಕಲುಷಿತಚೇತೋಭಿಃ ಸ್ವಪಕ್ಷಪಾತಿದರ್ಶನೈಃ, ತಾರ್ಕಿಕಾ ದಿಭಿಃ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಅನುರಾಗ, ಅಂಜಿಕೆ, ಸಿಟ್ಟು–ಮುಂತಾದ ಯಾವ ದೋಷವೂ ಇಲ್ಲದವರೂ, ಮುನಿಗಳೂ ಯಾವಾಗಲೂ (ತತ್ತ್ವ)ವನ್ನು ಮನನಮಾಡುವ ಸ್ವಭಾವದವರೂ ಎಂದರೆ ವಿವೇಕಿಗಳೂ ; ವೇದಪಾರಗರೂ ವೇದದ ಅರ್ಥವನ್ನು ಮನಗಂಡವರೂ– ಆಗಿರುವ ಜ್ಞಾನಿಗಳು ನಿರ್ವಿಕಲ್ಪನೂ ಯಾವ ಹುಟ್ಟುಗಟ್ಟಿದ (ಪದಾರ್ಥ)ವೂ ಇಲ್ಲ ದವನೂ, ಪ್ರಪಂಚೋಪಶಮನೂ–ಪ್ರಪಂಚವೆಂದರೆ ದ್ವೈತದ ಭೇದಗಳು ಹರಡಿ ಕೊಂಡಿರುವದು ; ಅದರ ಉಪಶಮವು, ಎಂದರೆ ಇಲ್ಲದಿರುವಿಕೆಯು ಯಾವನಲ್ಲಿರು ವದೋ ಆ ಆತ್ಮನು ಪ್ರಪಂಚೋಪಶಮನು. (ಅಂಥವನೂ)–ಆದ್ದರಿಂದಲೇ ಅದ್ವ ಯನೂ ಆಗಿರುವ ಈ ಆತ್ಮನನ್ನು ಕಂಡಿರುವರು, ಅರಿತುಕೊಂಡಿರುತ್ತಾರೆ. **ಯಾವ ದೋಷಗಳೂ ಇಲ್ಲದ, ವೇದಾಂತಾರ್ಥದಲ್ಲಿಯೇ ತತ್ಪರರಾಗಿರುವ ಸಂನ್ಯಾಸಿ ಗಳಿಗೇ ಈ ಆತ್ಮನನ್ನು ಕಾಣುವದು ಶಕ್ಯವೇ ಹೊರತು ರಾಗವೇ ಮುಂತಾದ (ದೋಷಗಳಿಂದ) ಚಿತ್ತವು ಕದಡಿರುವ, ತಮಗೆ ಬೇಕಾಗಿರುವ ದರ್ಶನ ಗಳನ್ನೇ (ಇಟ್ಟುಕೊಂಡಿರುವ) ತಾರ್ಕಿಕರೇ ಮುಂತಾದವರಿಗೆ ಆಗಲಾರದು- ಎಂದು ಅಭಿಪ್ರಾಯ**[1].

## ಜ್ಞಾನಿಗಳ ವ್ಯವಹಾರ

(ಭಾಷ್ಯ)

೧೨೨. ಯಸ್ಮಾತ್ ಸರ್ವಾನರ್ಥೋಪಶಮರೂಪತ್ವಾತ್ ಅದ್ವಯಂ ಶಿವಮ್ ಅಭಯಮ್-

---

*1. ಅಂತಃಕರಣದೋಷವಿಲ್ಲದ ಜ್ಞಾನಿಗಳಿಗೇ ತಿಳಿಯುವದೇ ಹೊರತು ಮಿಕ್ಕವರಿಗೆ ತಿಳಿಯುವದಿಲ್ಲ–ಎಂದು ಜ್ಞಾನವನ್ನು ಹೊಗಳಿರುವದರಿಂದ ಮುಮುಕ್ಷುಗಳಾದವರು ಅಂತಃಕರಣದೋಷಗಳನ್ನು ಕಳೆದುಕೊಂಡು ಬ್ರಹ್ಮನಿಷ್ಠರಿಂದಲೇ ತತ್ತ್ವವನ್ನು ಅರಿತು ಕೊಳ್ಳಬೇಕು ಎಂದು ಹೇಳಿದಂತೆ ಆಯಿತು.*

(ಭಾಷ್ಯಾರ್ಥ)

ಯಾವ ಅನರ್ಥವೂ ಇಲ್ಲದ ಸ್ವರೂಪವಾದ್ದರಿಂದ ಅದ್ವಯವೇ ಮಂಗಲವೂ ಅಂಜಿಕೆಯಿಲ್ಲದ್ದೂ ಆಗಿರುವದಷ್ಟೆ.

**ತಸ್ಮಾದೇವಂ ವಿದಿತ್ವೈನಮದ್ವೈತೇ ಯೋಜಯೇತ್ ಸ್ಮೃತಿಮ್ ।**
**ಅದ್ವೈತಂ ಸಮನುಪ್ರಾಪ್ಯ ಜಡವಲ್ಲೋಕಮಾಚರೇತ್ ॥ ೩೬ ॥**

೩೬. ಆದ್ದರಿಂದ ಹೀಗೆಂದು ಈತನನ್ನು ಅರಿತುಕೊಂಡು ಅದ್ವೈತದಲ್ಲಿ ಸ್ಮೃತಿಯನ್ನು ಯೋಜನೆಮಾಡಬೇಕು. ಅದ್ವೈತವನ್ನು ಪಡೆದುಕೊಂಡು ಜಡನಂತೆ ಲೋಕ(ವ್ಯವಹಾರವನ್ನು) ಮಾಡಬೇಕು.

(ಭಾಷ್ಯ)

೧೨೩. ಅತಃ ಏವಂ ವಿದಿತ್ವಾ ಏನಮ್ ಅದ್ವೈತೇ ಸ್ಮೃತಿಂ ಯೋಜಯೇತ್ । ಅದ್ವೈತಾವಗಮಾಯೈವ ಸ್ಮೃತಿಂ ಕುರ್ಯಾತ್ ಇತ್ಯರ್ಥಃ! ತಚ್ಚ ಅದ್ವೈತಮ್ (ಸಮನುಪ್ರಾಪ್ಯ) ಅವಗಮ್ಯ "ಅಹಮಸ್ಮಿ ಪರಂ ಬ್ರಹ್ಮ" ಇತಿ ವಿದಿತ್ವಾ ಅಶನಾಯಾದ್ಯತೀತಂ ಸಾಕ್ಷಾದಪರೋಕ್ಷಾತ್ ಅಜಮ್ ಆತ್ಮಾನಂ ಸರ್ವಲೋಕವ್ಯವಹಾರಾತೀತಮ್, ಜಡವತ್ ಲೋಕಮ್ ಆಚರೇತ್ । ಅಪ್ರಖ್ಯಾಪಯನ್ ಆತ್ಮಾನಮ್ ಅಹಮ್ ಏವಂವಿಧಃ (ಇತಿ ?) ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಆದ್ದರಿಂದ ಈ (ಆತ್ಮನನ್ನು) ಹೀಗೆಂದು ತಿಳಿದುಕೊಂಡು ಅದ್ವೈತದಲ್ಲಿಯೇ ಸ್ಮೃತಿಯನ್ನು ಯೋಜನೆಮಾಡಬೇಕು, ಅದ್ವೈತವನ್ನು ಮನಗಾಣುವದಕ್ಕಾಗಿಯೇ ಸ್ಮೃತಿಯನ್ನು ಮಾಡಬೇಕು-ಎಂದರ್ಥ.[1] ಮತ್ತು ಅದ್ವೈತವನ್ನು (ಪಡೆದುಕೊಂಡು)[2], "ಮನಗಂಡು, ನಾನು ಪರಬ್ರಹ್ಮವೇ ಆಗಿರುತ್ತೇನೆ" ಎಂದು ಹಸಿವು

---

1. ಆತ್ಮನನ್ನು ತಿಳಿದುಕೊಂಡಬಳಿಕ ಅದ್ವೈತಸ್ಮೃತಿಸಂತಾನವನ್ನು ಮಾಡಬೇಕು, ಅದರಿಂದ ಜ್ಞಾನವು ಗಟ್ಟಿಯಾಗುತ್ತದೆ-ಎಂಬ ಆ॥ ವ್ಯಾಖ್ಯಾನವು ಸರಿಯಲ್ಲ ಏಕೆಂದರೆ ಜ್ಞಾನವು ಉತ್ಪನ್ನವಾದರೆ ಮತ್ತೇನೂ ಮಾಡಬೇಕಾದದ್ದು ಇರುವದೇ ಇಲ್ಲ; ಅದ್ವೈತವು ಹೀಗೆ ಮಂಗಲರೂಪವಾದದ್ದೆಂದು ನಿಶ್ಚಯಿಸಿ ಅದನ್ನು ಅರಿತುಕೊಳ್ಳುವದಕ್ಕೆ ಶಮದಮಾದಿಗಳ ಅಭ್ಯಾಸಮಾಡುವದರಮೂಲಕ ಯತ್ನಿಸಬೇಕು ಎಂದರ್ಥ. ಬೃ. ಭಾ. ೪-೪-೨೧.

2. 'ಸಮನುಪ್ರಾಪ್ಯ' ಎಂಬ ಮಾತು ಭಾಷ್ಯಮೂಲದಲ್ಲಿ ಬಿಟ್ಟುಹೋಗಿದೆ.

ಮುಂತಾದವುಗಳನ್ನು ದಾಟಿರುವ ನೇರಾಗಿ ಅಪರೋಕ್ಷವಾಗಿರುವ ಜನ್ಮರಹಿತನಾದ ಲೋಕವ್ಯವಹಾರವನ್ನೆಲ್ಲ ಮೀರಿರುವ[1] ಆತ್ಮನನ್ನು (ಅರಿತುಕೊಂಡು) ಜಡನಂತೆ ಲೋಕ (ವ್ಯವಹಾರವನ್ನು) ಮಾಡುತ್ತಿರಬೇಕು. ನಾನು ಇಂಥವನು ಎಂದು (ಹೊರಕ್ಕೆ) ತೋರಿಸಿಕೊಳ್ಳದೆ (ವ್ಯವಹಾರಮಾಡುತ್ತಿರಬೇಕು)[2] ಎಂದರ್ಥ.

(ಭಾಷ್ಯ)

೧೨೪ ಕಯಾ ಚರ್ಯಯಾ ಲೋಕಮ್ ಆಚರೇತ್ ಇತಿ? ಆಹ-

(ಭಾಷ್ಯಾರ್ಥ)

ಯಾವ ನಡೆವಳಿಕೆಯಿಂದ ಲೋಕ (ವ್ಯವಹಾರವನ್ನು) ಮಾಡುತ್ತಿರಬೇಕು? ಎಂದರೆ ಹೇಳುತ್ತಾರೆ:—

**ನಿಸ್ತುತಿರ್ನಿರ್ನಮಸ್ಕಾರೋ ನಿಃಸ್ವಧಾಕಾರ ಏವ ಚ ।**
**ಚಲಾಚಲನಿಕೇತಶ್ಚ ಯತಿರ್ಯಾದೃಚ್ಛಿಕೋ ಭವೇತ್ ॥ ೩೭ ॥**

೩೭. ಸ್ತೋತ್ರಮಾಡುವದಿಲ್ಲದೆ, ನಮಸ್ಕಾರಮಾಡುವದಿಲ್ಲದೆ, ಸ್ವಧಾಕಾರವಿಲ್ಲದೆ, ಚಲಾಚಲನಿಕೇತನಾಗಿ ಯತಿಯು ಯಾದೃಚ್ಛಿಕನಾಗಿರಬೇಕು.

(ಭಾಷ್ಯ)

೧೨೫. ಸ್ತುತಿನಮಸ್ಕಾರಾದಿಸರ್ವಕರ್ಮವಿವರ್ಜಿತಃ, ತ್ಯಕ್ತಸರ್ವಬಾಹ್ಯೈಷಣಃ ಪ್ರತಿಪನ್ನಪರಮಹಂಸಪಾರಿವ್ರಾಜ್ಯಃ ಇತ್ಯಭಿಪ್ರಾಯಃ। "ಏತಂ ವೈ ತಮಾತ್ಮಾನಂ ವಿದಿತ್ವಾ" (ಬೃ. ೩-೫-೧) ಇತ್ಯಾದಿಶ್ರುತೇಃ। "ತದ್ಬುದ್ಧಯಸ್ತದಾತ್ಮಾನಸ್ತನ್ನಿಷ್ಠಾಸ್ತತ್ಪರಾಯಣಾಃ" (ಗೀ. ೫-೧೭) ಇತ್ಯಾದಿಸ್ಮೃತೇಶ್ಚ। ಚಲಂ ಶರೀರಮ್। ಪ್ರತಿಕ್ಷಣಮ್ ಅನ್ಯಥಾಭಾವಾತ್। ಅಚಲಮ್ ಆತ್ಮತತ್ತ್ವಮ್। ಯದಾ ಕದಾಚಿತ್ ಭೋಜನಾದಿವ್ಯವಹಾರನಿಮಿತ್ತಮ್ ಆಕಾಶವತ್ ಅಚಲಂ ಸ್ವರೂಪಮ್ ಆತ್ಮತತ್ತ್ವಮ್ ಆತ್ಮನಃ ನಿಕೇತಮ್ ಆಶ್ರಯಮ್ ಆತ್ಮಸ್ಥಿತಿಂ ವಿಸ್ಮೃತ್ಯ "ಅಹಮ್" ಇತಿ ಮನ್ಯತೇ ಯದಾ ತದಾ ಚಲೋ ದೇಹಃ ನಿಕೇತಃ ಯಸ್ಯ ಸೋಽಯಮ್ (ಚಲನಿಕೇತಃ)। ಏವಂ ಚಲಾಚಲನಿಕೇತೋ ವಿದ್ವಾನ್। ನ ಪುನರ್ಬಾಹ್ಯವಿಷಯಾಶ್ರಯಃ। ಸ ಚ ಯಾದೃಚ್ಛಿಕೋ ಭವೇತ್। ಯದೃಚ್ಛಾಪ್ರಾಪ್ತಕೌಪೀನಾಚ್ಛಾದನಗ್ರಾಸಮಾತ್ರದೇಹಸ್ಥಿತಿಃ ಇತ್ಯರ್ಥಃ॥

---

1. ಬೃ. ೩-೫-೧ ರ ಸೂಚನೆಯಿದು.

2. "ಬಾಲ್ಯೇನ ತಿಷ್ಠಾಸೇತ್" ಬೃ. ೩-೫-೧ ಎಂಬ ಶ್ರುತಿಯನ್ನೂ ಸೂ. ಭಾ. ೩-೪-೫೦ ನ್ನೂ ನೋಡಿರಿ. ಇಲ್ಲಿಂದ ಹಿಡಿದು ಮೂರು ಶ್ಲೋಕಗಳಲ್ಲಿ ಹೇಳಿರುವವು ಕೃತಾರ್ಥನಲಕ್ಷಣಗಳು, ಮುಮುಕ್ಷುವಾದ ಸಂನ್ಯಾಸಿಗೆ ಸಾಧನಗಳು.

(ಭಾಷ್ಯ)

ಸ್ತುತಿಸುವದು, ನಮಸ್ಕರಿಸುವದು-ಮುಂತಾದ ಯಾವ ಕರ್ಮವೂ ಇಲ್ಲದವ ನಾಗಿ, ಹೊರಗಿನ ಏಷಣೆಗಳನ್ನೆಲ್ಲ ಬಿಟ್ಟು **ಪರಮಹಂಸಪಾರಿವ್ರಾಜ್ಯವನ್ನು**[1] ಹೊಂದಿದವನಾಗಿ ಎಂದು ಅಭಿಪ್ರಾಯ. "ಈ ಅಂಥ ಆತ್ಮನನ್ನೇ ಅರಿತುಕೊಂಡು ಏಷಣೆಗಳನ್ನು ಬಿಟ್ಟಿದ್ದು ಭಿಕ್ಷಾಚರ್ಯವನ್ನು ಮಾಡುವರು." ಬೃ. ೩-೫-೧) ಎಂದು ಮುಂತಾಗಿರುವ ಶ್ರುತಿಯೂ "ಅದರಲ್ಲಿಯೇ ಬುದ್ಧಿಯುಳ್ಳವರಾಗಿ ಅದನ್ನೇ ಆತ್ಮನನ್ನು ಮಾಡಿಕೊಂಡವರಾಗಿ, ಅದರಲ್ಲಿಯೇ ನಿಷ್ಠೆಯುಳ್ಳವರಾಗಿ, ಅದೇ ಪರಮಗತಿಯೆನ್ನು ವವರಾಗಿ" (ಗೀ. ೫-೧೭) ಎಂದು ಮುಂತಾಗಿರುವ ಸ್ಮೃತಿಯೂ ಇದಕ್ಕೆ ಪ್ರಮಾಣವು. ಚಲವೆಂದರೆ ಶರೀರವು, ಏಕೆಂದರೆ (ಇದು) ಪ್ರತಿಕ್ಷಣವೂ ಬೇರೆಯಾಗುತ್ತಿರುವದು, ಅಚಲವೆಂದರೆ ಆತ್ಮತತ್ತ್ವವು. **ಯಾವಾಗಲಾದರೂ ಊಟವೇ ಮುಂತಾದ ವ್ಯವಹಾರದ ನಿಮಿತ್ತವಾಗಿ, ಆಕಾಶದಂತೆ ಅಚಲವಾಗಿರುವ ಸ್ವರೂಪವಾದ ಆತ್ಮತತ್ತ್ವವೆಂಬ ನಿಕೇತವನ್ನು ಆಶ್ರಯವಾದ ಆತ್ಮಸ್ಥಿತಿಯನ್ನು ಮರೆತು ಯಾವಾಗ 'ನಾನು' ಎಂದು ಎಣಿಸಿಕೊಳ್ಳುವನೋ ಆಗ, ಚಲವಾದ ದೇಹವೇ ಯಾವನಿಗೆ ನಿಕೇತವೋ ಅಂಥ ಇವನು (ಚಲನಿಕೇತನು)**[2]. ಜ್ಞಾನಿಯು ಹೀಗೆ ಚಲಾಚಲನಿಕೇತನಾಗಿರುವನೇ ಹೊರತು ಹೊರಗಿನ ವಿಷಯ ಗಳನ್ನು ಆಶ್ರಯಿಸಿಕೊಂಡಿರುವದಿಲ್ಲ[3]. ಮತ್ತು ಅವನು ಯಾದೃಚ್ಛಿಕನಾಗಿರಬೇಕು, ತಾನೇ ದೊರಕಿದ ಕೌಪೀನವನ್ನು ಹಾಕಿಕೊಳ್ಳುವದು, (ಒಂದು) ಕವಳ ಅನ್ನದಿಂದಲೇ ದೇಹವನ್ನು ಕಾಪಾಡಿಕೊಳ್ಳುವದು[4]-(ಹೀಗಿರಬೇಕು) ಎಂದರ್ಥ[5].

---

1. ಸಂನ್ಯಾಸಾಶ್ರಮವೆಂಬ ಸ್ಮಾರ್ತಸಂನ್ಯಾಸವೊಂದು, ಏಷಣಾತ್ಯಾಗರೂಪವಾದ ಪರಮಹಂಸಪಾರಿವ್ರಾಜ್ಯವೆಂಬ, ಜ್ಞಾನಾಂಗಸಂನ್ಯಾಸವೊಂದು-ಹೀಗೆ ಎರಡು ಸಂನ್ಯಾಸ ಗಳಿರುವವು ಎಂದು ಬೃ. ಭಾ. ೩-೫-೧ ರಲ್ಲಿ ಹೇಳಿದೆ. ಇಲ್ಲಿ ಜ್ಞಾನಾಂಗವಾದ ಸಂನ್ಯಾಸ ವನ್ನು ಹೇಳಿದೆ. ಪೀಠಿಕೆಯನ್ನು ನೋಡಿ.

2. 'ಚಲನಿಕೇತಃ' ಎಂಬ ಮಾತು ಭಾಷ್ಯಮೂಲದಲ್ಲಿ ಬಿಟ್ಟುಹೋಗಿದೆ ಎಂದು ಕಲ್ಪಿಸಲಾಗಿದೆ.

3. ಹೊರಗಿನ ಮನೆ, ಮಠ-ಮುಂತಾದವುಗಳಿಲ್ಲದವನಾಗಿರುತ್ತಾನೆ ಎಂದರ್ಥ. ಆ. ಧ. ೧-೮-೨೨-೪ ರಲ್ಲಿರುವ ಆತ್ಮಸ್ವರೂಪವರ್ಣನೆಯನ್ನು ನೋಡಿ.

4. ಗೌ. ಧ. ೧-೩-೧೭, ೧೮ ನ್ನು ನೋಡಿ.

5. ಈ ಕಾರಿಕೆಯ ಮೊದಲನೆ ಅರ್ಥದ ಅಭಿಪ್ರಾಯವನ್ನು ವೋ. ಧ. ೨೪೫-೨೪ ಮುಂತಾದ ಸ್ಮೃತಿವಾಕ್ಯಗಳಲ್ಲಿ ಕಾಣಬಹುದು.

**ತತ್ತ್ವಮಾಧ್ಯಾತ್ಮಿಕಂ ದೃಷ್ಟ್ವಾ ತತ್ತ್ವಂ ದೃಷ್ಟ್ವಾ ತು ಬಾಹ್ಯತಃ ।**
**ತತ್ತ್ವೀಭೂತಸ್ತದಾರಾಮಸ್ತತ್ತ್ವಾದಪ್ರಚ್ಯುತೋ ಭವೇತ್ ॥ ೩೮ ॥**

೩೮. ಒಳಗಿನ ತತ್ತ್ವವನ್ನು ಕಂಡುಕೊಂಡು, ಹೊರಗಿನ ತತ್ತ್ವವನ್ನೂ ಕಂಡುಕೊಂಡು ತತ್ತ್ವವೇ (ತಾನಾ)ಗಿ ಅದರಲ್ಲಿಯೇ ರತನಾಗಿ, ತತ್ತ್ವದಿಂದ ಜಾರಿಬೀಳದೆ ಇರಬೇಕು.

(ಭಾಷ್ಯ)

೧೨. ಬಾಹ್ಯಂ ಪೃಥಿವ್ಯಾದಿತತ್ತ್ವಮ್, ಆಧ್ಯಾತ್ಮಿಕಂ ಚ ದೇಹಾದಿಲಕ್ಷಣಂ ರಜ್ಜುಸರ್ಪಾದಿವತ್ ಸ್ವಪ್ನಮಾಯಾದಿವಚ್ಚ ಅಸತ್ । "ವಾಚಾರಂಭಣಂ ವಿಕಾರೋ ನಾಮಧೇಯಮ್" (ಛಾಂ. ೬-೧-೪) ಇತ್ಯಾದಿಶ್ರುತೇಃ । ಆತ್ಮಾ ಚ ಸಬಾಹ್ಯಾಭ್ಯನ್ತರೋ ಹ್ಯಜಃ, ಅಪೂರ್ವಃ, ಅನಪರಃ,[1] ಅನನ್ತರಃ, ಅಬಾಹ್ಯಃ, ಕೃತ್ಸ್ನಃ, ತಥಾ ಆಕಾಶವತ್ ಸರ್ವಗತಃ, ಸೂಕ್ಷ್ಮಃ, ಅಚಲಃ, ನಿರ್ಗುಣಃ, ನಿಷ್ಕಲಃ, ನಿಷ್ಕ್ರಿಯಃ । "ತತ್ಸತ್ಯಂ ಸ ಆತ್ಮಾ ತತ್ತ್ವಮಸಿ" (ಛಾಂ. ೬-೮-೧೬) ಇತಿ ಶ್ರುತೇಃ । ಇತಿ ಏವಂ ತತ್ತ್ವಂ ದೃಷ್ಟ್ವಾ । ತತ್ತ್ವೀಭೂತಃ । ತದಾರಾಮಃ ನ ಬಾಹ್ಯರಮಣಃ । ಯಥಾ ಅತತ್ತ್ವದರ್ಶೀ ಕಶ್ಚಿತ್ ಚಿತ್ತಮ್ ಆತ್ಮತ್ವೇನ ಪ್ರತಿಪನ್ನಃ ಚಿತ್ತಚಲನಮ್ ಅನು ಚಲಿತಮ್ ಆತ್ಮಾನಂ ಮನ್ಯಮಾನಃ ತತ್ತ್ವಾತ್ ಚಲಿತಂ ದೇಹಾದಿಭೂತಮ್ ಆತ್ಮಾನಂ ಕದಾಚಿತ್ ಮನ್ಯತೇ "ಪ್ರಚ್ಯುತೋಽಹಮ್ ಆತ್ಮತತ್ತ್ವಾತ್ ಇದಾನೀಮ್" ಇತಿ । ಸಮಾಹಿತೇ ತು ಮನಸಿ ಕದಾಚಿತ್ ತತ್ತ್ವೀಭೂತಂ ಪ್ರಸನ್ನಮ್ ಆತ್ಮಾನಂ[2] ಮನ್ಯತೇ 'ಇದಾನೀಮ್ ಅಸ್ಮಿ ತತ್ತ್ವೀಭೂತಃ' ಇತಿ, ನ ತಥಾ ಆತ್ಮವಿದ್ಭವೇತ್ । ಆತ್ಮನಃ ಏಕರೂಪತ್ವಾತ್, ಸ್ವರೂಪಪ್ರಚ್ಯವನಾಸಂಭವಾಚ್ಚ । 'ಸದೈವ ಬ್ರಹ್ಮಾಸ್ಮಿ' ಇತಿ ಅಪ್ರಚ್ಯುತೋ ಭವೇತ್ ತತ್ತ್ವಾತ್ । ಸದಾ ಅಪ್ರಚ್ಯುತಾತ್ಮತತ್ತ್ವದರ್ಶನೋ ಭವೇತ್ ಇತ್ಯಭಿಪ್ರಾಯಃ । "ಶುನಿ ಚೈವ ಶ್ವಪಾಕೇ ಚ" (ಗೀ. ೫-೧೮), "ಸಮಂ ಸರ್ವೇಷು ಭೂತೇಷು" (ಗೀ. ೧೩-೨೭) ಇತ್ಯಾದಿಸ್ಮೃತೇಃ ॥

(ಭಾಷ್ಯಾರ್ಥ)

ಹೊರಗಿನ ಪೃಥಿವ್ಯಾದಿಗಳ ತತ್ತ್ವವೂ ಒಳಗಿನ ಶರೀರವೇ ಮುಂತಾದ ರೂಪದ (ವಸ್ತುಗಳ ತತ್ತ್ವವೂ) ಹಗ್ಗದ ಹಾವು ಮುಂತಾದವುಗಳಂತೆಯೂ ಕನಸು, ಮಾಯೆ–ಮುಂತಾದವುಗಳಂತೆಯೂ ಅಸತ್ತು, "ಕಾರ್ಯವು ಮಾತಿನಿಂದಾದ ಹೆಸರು ಮಾತ್ರ" (ಛಾಂ. ೬-೧-೪)–ಮುಂತಾದ ಶ್ರುತಿಯು ಇದಕ್ಕೆ ಪ್ರಮಾಣವು. ಮತ್ತು ಆತ್ಮನು

---

1. ಈ ಮಾತುಗಳು ವಾ॥ ಪಾಠದಲ್ಲಿವೆ.

2. 'ತತ್ತ್ವಭೂತಂ' ಎಂಬದಕ್ಕಿಂತ ಇದೇ ಸರಿಯಾದ ಪಾಠವೆಂದು ತೋರುತ್ತದೆ. ಏಕೆಂದರೆ ಮೂಲದಲ್ಲಿ ಇದೇ ಇದೆ. 'ಪ್ರಸನ್ನಾತ್ಮಾನಂ' ಎಂಬುದಕ್ಕಿಂತ ಈ ವಾ॥ ಪಾಠವೇ ಮೇಲು.

ಒಳಗೂ ಹೊರಗೂ ಜನ್ಮವಿಲ್ಲದವನೇ[1] ; ಹಿಂದಿಲ್ಲದವನು, ಮುಂದಿಲ್ಲದವನು, ಒಳಗಿಲ್ಲದವನು, ಹೊರಗಿಲ್ಲದವನು, ಪೂರ್ಣನು, ಮತ್ತು ಆಕಾಶದಂತೆ ಸರ್ವಗತನೂ ಸೂಕ್ಷ್ಮನೂ (ಆದವನು), ಅಲುಗಾಡದವನು, ಗುಣಗಳಿಲ್ಲದವನು, ಅವಯವಗಳಿಲ್ಲದವನು, ಕ್ರಿಯೆಯಿಲ್ಲದವನು, "ಅದು ಸತ್ಯವು, ಅದು ಆತ್ಮನು; ಅದೇ ನೀನಾಗಿರುವೆ" (ಛಾಂ. ೬-೮-೭) ಎಂಬ ಶ್ರುತಿಯು ಇದಕ್ಕೆ ಪ್ರಮಾಣವು. ಹೀಗೆಂದು ತತ್ತ್ವವನ್ನು ಕಂಡುಕೊಂಡು[2] ತತ್ತ್ವವೇ ಆದವನಾಗಿ ಅದರಲ್ಲಿ ಆರಾಮನಾಗಿ, ಎಂದರೆ ಹೊರಗಿನ (ವಸ್ತುಗಳಲ್ಲಿ) ರತನಾಗದೆ (ಎಂದರ್ಥ). **ಹೇಗೆ ತತ್ತ್ವವನ್ನು ಕಂಡುಕೊಳ್ಳದವನೊಬ್ಬನು ಚಿತ್ತವನ್ನೇ (ತನ್ನ) ಆತ್ಮನೆಂದು ತಿಳಿದುಕೊಂಡು ಚಿತ್ತವು ಚಲಿಸಿದ್ದನ್ನು ಅನುಸರಿಸಿ ತಾನೂ ಚಲಿತನಾದೆನೆಂದು ಭಾವಿಸಿಕೊಳ್ಳುತ್ತಾ, 'ನಾನು ಈಗ ಆತ್ಮತತ್ತ್ವದಿಂದ ಜಾರಿಬಿದ್ದೆನು' ಎಂದು ತತ್ತ್ವದಿಂದ ಚಲಿಸಿ ದೇಹಾದಿಗಳೇ ತಾನು ಆದೆನೆಂದು ಒಂದು ಸಲ ಎಣಿಸಿಕೊಳ್ಳುವನೋ, ಆದರೆ ಮತ್ತೊಮ್ಮೆ ಮನಸ್ಸು ಸಮಾಧಾನವನ್ನು ಹೊಂದಿದರೆ 'ಈಗ ತತ್ತ್ವನಾದೆನು' ಎಂದು ತಾನು ತತ್ತ್ವವೇ ಆಗಿ ಪ್ರಸನ್ನನಾದೆನೆಂದು ಎಣಿಸಿಕೊಳ್ಳುವನೋ, ಹಾಗೆ ಆತ್ಮಜ್ಞಾನಿಯು ಆಗಬಾರದು. ಏಕೆಂದರೆ ಆತ್ಮನು ಒಂದೇ ರೂಪದವನಾಗಿರುತ್ತಾನೆ, (ಅವನು ತನ್ನ) ಸ್ವರೂಪದಿಂದ ಜಾರಿಬೀಳುವದೆಂಬುದೂ ಆಗುವಂತಿಲ್ಲ.**[3] (ಆದ್ದರಿಂದ) 'ಯಾವಾಗಲೂ ಬ್ರಹ್ಮವಾಗಿರುವೆನು' ಎಂದು ತತ್ತ್ವದಿಂದ ಜಾರಿಬೀಳದೆ ಇರಬೇಕು. "ನಾಯಿಯಲ್ಲಿಯೂ ಚಂಡಾಲನಲ್ಲಿಯೂ (ಪಂಡಿತರು ಸಮದರ್ಶಿಗಳಾಗಿರುವರು." ಗೀ. ೫-೧೮) "ಎಲ್ಲಾ ಪ್ರಾಣಿಗಳಲ್ಲಿಯೂ ಸಮವಾಗಿರುವ" (ಅವು ನಾಶವಾದರೂ ನಾಶವಾಗದ ಪರಮೇಶ್ವರನನ್ನು ಕಂಡವನೇ ತತ್ತ್ವವನ್ನು ಕಂಡವನು. ಗೀ. ೧೩-೨೭) ಮುಂತಾದ ಸ್ಮೃತಿಯು ಇದಕ್ಕೆ ಪ್ರಮಾಣವು.[3]

---

1. ಇಲ್ಲಿರುವ ಆತ್ಮವಿಶೇಷಣಗಳನ್ನು ಮುಂಡಕ, ಬೃಹದಾರಣ್ಯಕ-ಮುಂತಾದ ಹಲವು ಶ್ರುತಿಗಳಿಂದ ಆರಿಸಿಕೊಂಡಿದೆ ಎಂಬುದು ಸ್ಪಷ್ಟ.

2. ಬಾಹ್ಯಾಧ್ಯಾತ್ಮಿಕವಾದ ಅನಾತ್ಮವು ಅಸತ್ತಾಗಿರುವದೆಂಬುದು ಅವುಗಳ ತತ್ತ್ವ; ಆತ್ಮನು ಯಾವಾಗಲೂ ಸತ್ತೇ ಎಂಬುದು ಆತ್ಮನ ತತ್ತ್ವವು. ಗೀ. ಭಾ. ೧೩-೨೬.

3. ಇಲ್ಲಿ ಖಂಡಿಸಿರುವ ಪೂರ್ವಪಕ್ಷವನ್ನು ಧ್ಯಾನವಾದಿಗಳಾದ ಕೆಲವರು ವೇದಾಂತಿಗಳು ಅವಲಂಬಿಸಿದ್ದರು. ಈ ಕಾರಿಕೆಗೆ ಅವರು ಮಾಡುತ್ತಿದ್ದ ಅರ್ಥವನ್ನೇ ಇಲ್ಲಿ ಅನುವಾದ ಮಾಡಿಕೊಂಡಿದೆ. ಪೀಠಿಕೆಯನ್ನು ನೋಡಿ.

4. ಈ ವಾಕ್ಯಗಳಲ್ಲಿ ತತ್ತ್ವಜ್ಞಾನವನ್ನೇ ಹೇಳಿದೆ; ತತ್ತ್ವಭಾವನೆಯನ್ನಲ್ಲ.

# ೩. ಅದ್ವೈತಪ್ರಕರಣ

## ಗ್ರಂಥಸಂಬಂಧ

(ಭಾಷ್ಯ)

೧೨೭. ಓಙ್ಕಾರನಿರ್ಣಯೇ ಉಕ್ತಃ ಪ್ರಪಞ್ಚೋಪಶಮಃ ಶಿವಃ ಅದ್ವೈತಃ ಆತ್ಮಾ ಇತಿ ಪ್ರತಿಜ್ಞಾಮಾತ್ರೇಣ । "ಜ್ಞಾತೇ ದ್ವೈತಂ ನ ವಿದ್ಯತೇ" (೧-೧೮) ಇತಿ ಚ । ತತ್ರ ದ್ವೈತಾಭಾವಸ್ತು ವೈತಥ್ಯಪ್ರಕರಣೇನ ಸ್ವಪ್ನಮಾಯಾಗನ್ಧರ್ವನಗರಾದಿದೃಷ್ಟಾನ್ತೈಃ ದೃಶ್ಯತ್ವಾದ್ಯನ್ತವತ್ತ್ವಾದಿಹೇತುಭಿಃ ತರ್ಕೇಣ ಚ ಪ್ರತಿಪಾದಿತಃ । ಅದ್ವೈತಂ ಕಿಮ್ ಆಗಮಮಾತ್ರೇಣ ಪ್ರತಿಪತ್ತವ್ಯಮ್, ಆಹೋಸ್ವಿತ್ ತರ್ಕೇಣಾಪಿ ಇತಿ ? ಅತ ಆಹ–ಶಕ್ಯತೇ ತರ್ಕೇಣಾಪಿ ಜ್ಞಾತುಮ್ । ತತ್ ಕಥಮ್ ಇತಿ ಅದ್ವೈತಪ್ರಕರಣಮ್ ಆರಭ್ಯತೇ ॥

(ಭಾಷ್ಯಾರ್ಥ)

ಓಂಕಾರವನ್ನು ನಿರ್ಣಯಮಾಡುವಾಗ[1] ಆತ್ಮನು ಪ್ರಪಂಚೋಪಶಮನು, ಶಿವನು, ಅದ್ವೈತನು–ಎಂದು ಪ್ರತಿಜ್ಞಾಮಾತ್ರದಿಂದ[2] ಹೇಳಿತ್ತು. "ಅರಿತರೆ ದ್ವೈತವಿರುವದಿಲ್ಲ" (೧-೧೮) ಎಂದೂ ಹೇಳಿತ್ತು. ಇವೆ(ರಡ)ರಲ್ಲಿ[3] ದ್ವೈತವಿರುವದಿಲ್ಲವೆಂಬುದನ್ನು ಮಾತ್ರ **ವೈತಥ್ಯಪ್ರಕರಣ**ದಲ್ಲಿ ಕನಸು, ಮಾಯೆ, ಗಂಧರ್ವನಗರ–ಮುಂತಾದ[4] ದೃಷ್ಟಾಂತಗಳಿಂದ ದೃಶ್ಯವಾಗಿರುವದು, ಮೊದಲುಕೊನೆಗಳಿರುವದು–ಮುಂತಾದ[5] ಹೇತುಗಳ (ಆಧಾರ)ದಿಂದ ತರ್ಕದಿಂದಲೂ ತಿಳಿಸಿಕೊಟ್ಟದ್ದಾಯಿತು. (ಇನ್ನು) ಅದ್ವೈತವನ್ನು ಬರಿಯ ಆಗಮದಿಂದಲೇ ತಿಳಿದುಕೊಳ್ಳಬೇಕೊ, ಅಥವಾ ತರ್ಕದಿಂದಲೂ (ಅದನ್ನು ತಿಳಿಯುಕೊಳ್ಳುವದಕ್ಕಾದೀತೊ)?– ಎಂದರೆ ಇದಕ್ಕೆ ಹೇಳುತ್ತಾರೆ: (ಇದನ್ನು) ತರ್ಕದಿಂದಲೂ ತಿಳಿದುಕೊಳ್ಳುವದಕ್ಕೆ ಆಗುತ್ತದೆ. ಅದು ಹೇಗೆ ಎಂಬುದನ್ನು (ತಿಳಿಸುವದಕ್ಕೆ) ಅದ್ವೈತಪ್ರಕರಣವನ್ನು ಪ್ರಾರಂಭಿಸಿದ್ದಾರೆ.

---

1. "ಓಙ್ಕಾರನಿರ್ಣಯಃ ಉಕ್ತಃ"–ಎಂದು ಭಾಷ್ಯಪಾಠವನ್ನು ಒಪ್ಪಿದರೆ ಓಂಕಾರವು ಪ್ರಪಂಚವಿಲ್ಲದ, ಶಿವ, ಅದ್ವೈತ, ಆತ್ಮನೇ ಎಂದು ಹೇಳಿತ್ತು ಎಂದೂ ಅರ್ಥಮಾಡಬಹುದು. ಉಪನಿಷತ್ತಿನ ೭, ೧೨ನೆಯ ಮಂತ್ರಗಳನ್ನು ನೋಡಿರಿ.

2. ಆಗಮಪ್ರಕರಣವು ಉಪದೇಶಪ್ರಧಾನವಾದದ್ದು; ಅಲ್ಲಿ ಹೇಳಿರುವದಕ್ಕೆ ಅಲ್ಲಿ ಯುಕ್ತಿಯನ್ನು ಕೊಟ್ಟಿಲ್ಲ.

3. ಅದ್ವೈತ, ದ್ವೈತಮಿಥ್ಯಾತ್ವ- ಇವೆರಡರಲ್ಲಿ.

4. ೨-೩, ೨-೧೭ ಇವುಗಳಲ್ಲಿ ಈ ದೃಷ್ಟಾಂತಗಳಿವೆ.

5. ೨.೪, ೬ ಈ ಕಾರಿಕೆಗಳನ್ನು ನೋಡಿ.

**ಉಪಾಸನಾಶ್ರಿತೋ ಧರ್ಮೋ ಜಾತೇ ಬ್ರಹ್ಮಣಿ ವರ್ತತೇ ।**
**ಪ್ರಾಗುತ್ಪತ್ತೇರಜಂ ಸರ್ವಂ ತೇನಾಸೌ ಕೃಪಣಃ ಸ್ಮೃತಃ ॥ ೧ ॥**

೧. ಉಪಾಸನೆಯನ್ನಾಶ್ರಯಿಸಿರುವ ಧರ್ಮನು ಉತ್ಪತ್ತಿಗೆ ಮೊದಲು ಎಲ್ಲವೂ ಅಜವು (ಎಂದು) ಜಾತಬ್ರಹ್ಮದಲ್ಲಿ ಇದ್ದುಕೊಂಡಿರುತ್ತಾನೆ. ಅದರಿಂದ ಇವನು ಕೃಪಣನೆನಿಸುವನು.

(ಭಾಷ್ಯ)

೧-೮. ಉಪಾಸ್ಯೋಪಾಸನಾದಿಭೇದಜಾತಂ ಸರ್ವಂ ವಿತಥಮ್, ಕೇವಲಶ್ಚ ಆತ್ಮಾ ಅದ್ವಯಃ ಪರಮಾರ್ಥಃ ಇತಿ ಸ್ಥಿತಮ್ ಅತೀತೇ ಪ್ರಕರಣೇ । ಯತಃ ಉಪಾಸನಾಶ್ರಿತಃ ಉಪಾಸನಮ್ ಆತ್ಮನಃ ಮೋಕ್ಷಸಾಧನತ್ವೇನ ಗತಃ "ಉಪಾಸಕೋಽಹಮ್, ಮಮ ಉಪಾಸ್ಯಂ ಬ್ರಹ್ಮ । ತದುಪಾಸನಂ ಕೃತ್ವಾ ಜಾತೇ ಬ್ರಹ್ಮಣಿ ಇದಾನೀಂ ವರ್ತಮಾನಃ ಅಜಂ ಬ್ರಹ್ಮ ಶರೀರಪಾತಾತ್ ಊರ್ಧ್ವಂ ಪ್ರತಿಪತ್ಸ್ಯೇ । ಪ್ರಾಗುತ್ಪತ್ತೇಶ್ಚ ಅಜಮಿದಂ ಸರ್ವಮ್ ಅಹಂ ಚ । ಯದಾತ್ಮಕೋಽಹಂ ಪ್ರಾಗುತ್ಪತ್ತೇಃ, ಇದಾನೀಂ ಜಾತೋ ಜಾತೇ ಬ್ರಹ್ಮಣಿ ಚ ವರ್ತಮಾನಃ ಉಪಾಸನಯಾ ಪುನಃ ತದೇವ ಪ್ರತಿಪತ್ಸ್ಯೇ" ಇತ್ಯೇವಮ್ ಉಪಾಸನಾಶ್ರಿತಃ ಧರ್ಮಃ ಸಾಧಕಃ ಯೇನ ಏವಂ ಕ್ಷುದ್ರಬ್ರಹ್ಮವಿತ್ ತೇನ ಅಸೌ ಕಾರಣೇನ ಕೃಪಣಃ ದೀನಃ ಅಲ್ಪಕಃ ಸ್ಮೃತಃ ನಿತ್ಯಾಜಬ್ರಹ್ಮದರ್ಶಿಭಿಃ ಇತ್ಯಭಿಪ್ರಾಯಃ । "ಯದ್ವಾಚಾನಭ್ಯುದಿತಂ ಯೇನ ವಾಗಭ್ಯುದ್ಯತೇ । ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ" (ಕೇ. ೧-೪) ಇತ್ಯಾದಿಶ್ರುತೇಸ್ತಲವಕಾರಾಣಾಮ್ ॥

(ಭಾಷ್ಯಾರ್ಥ)

ಉಪಾಸ್ಯ,[1] ಉಪಾಸನೆ–ಮುಂತಾದ ಭೇದಸಮೂಹವೆಲ್ಲವೂ ವಿತಥವೇ, ತನಗೆರಡನೆಯದಿಲ್ಲದ ಆತ್ಮನೊಬ್ಬನೇ ಪರಮಾರ್ಥವು–ಎಂದು ಹಿಂದಿನ ಪ್ರಕರಣದಲ್ಲಿ ಸಿದ್ಧವಾಗಿರುತ್ತದೆ. ಯಾವ ಕಾರಣದಿಂದ, ಉಪಾಸನೆಯನ್ನಾಶ್ರಯಿಸಿರುವ ಉಪಾಸನೆಯು ತನಗೆ ಮೋಕ್ಷಸಾಧನವು ಎಂದುಕೊಂಡವನಾಗಿ "ನಾನು ಉಪಾಸಕನು, ನನಗೆ ಬ್ರಹ್ಮವು ಉಪಾಸ್ಯ(ವಾಗಿದೆ); ಅದರ ಉಪಾಸನೆಯನ್ನು ಮಾಡಿ ಹುಟ್ಟಿರುವ ಬ್ರಹ್ಮದಲ್ಲಿ[2] ಈಗ ಇರುವವನಾಗಿ ಜನ್ಮರಹಿತವಾದ ಬ್ರಹ್ಮವನ್ನು (ಈ)

1. ಉಪಾಸನೆಗೆ ವಿಷಯ.
2. ಜಗದ್ರೂಪವಾಗಿ ಪರಿಣಮಿಸಿರುವ ಬ್ರಹ್ಮದಲ್ಲಿ.

ಶರೀರವು ಬಿದ್ದಬಳಿಕ ಪಡೆದುಕೊಳ್ಳುವೆನು.[1] ಸೃಷ್ಟಿಯಾಗುವದಕ್ಕೆ ಮೊದಲು ಇದೆಲ್ಲವೂ ನಾನೂ ಹುಟ್ಟಿಲ್ಲದ (ಬ್ರಹ್ಮವೇ ಆಗಿದ್ದೆವು). ಸೃಷ್ಟಿಗೆ ಮೊದಲು ನಾನು ಯಾವ ಸ್ವರೂಪವಾಗಿದ್ದು, ಈಗ ಹುಟ್ಟಿ ಹುಟ್ಟಿರುವ ಬ್ರಹ್ಮದಲ್ಲಿದ್ದುಕೊಂಡಿರುವೆನೋ, ಮತ್ತೆ ಉಪಾಸನೆಯಿಂದ ಅದೇ (ಬ್ರಹ್ಮವನ್ನು) ಪಡೆದುಕೊಳ್ಳುವೆನು" ಎಂದೀ ಪರಿಯಲ್ಲಿ ಉಪಾಸನೆಯನ್ನು ಆಶ್ರಯಿಸಿಕೊಂಡಿರುವ **ಧರ್ಮನು**[2], ಸಾಧಕನು, ಈ ರೀತಿಯಲ್ಲಿ ಯಾವ(ಕಾರಣ)ದಿಂದ ಕೀಳು ಬ್ರಹ್ಮವನ್ನು (ಹುಟ್ಟಿಗೆ) ಅರಿತವನಾಗಿರುವನೋ, ಆ ಕಾರಣದಿಂದ ಅವನು ಕೃಪಣನು[3], ದೀನನು, ಅಲ್ಪನು—ಎಂದು ನಿತ್ಯವಾದ ಹುಟ್ಟಿಲ್ಲದ ಬ್ರಹ್ಮವನ್ನು ಕಂಡುಕೊಂಡವರಿಂದ ಅನ್ನಿಸಿಕೊಳ್ಳುತ್ತಾನೆ ಎಂದು ಅಭಿಪ್ರಾಯ. "ಯಾವದು ಮಾತಿನಿಂದ ಹೇಳುವದಕ್ಕಾಗದೋ ಯಾವದರಿಂದ ಮಾತೇ ಹೇಳಲ್ಪಡುವದೋ ಅದೇ ಬ್ರಹ್ಮವೆಂದು ನೀನು ಅರಿತುಕೊ. ಇದು ಎಂದು ಉಪಾಸನೆ ಮಾಡುವರಲ್ಲ, ಇದಲ್ಲ" (ಕೇ. ೧–೪) ಎಂದು ಮೊದಲಾಗಿರುವ ತಲವಕಾರಶ್ರುತಿ ಇದಕ್ಕೆ ಪ್ರಮಾಣವು.

## ಅಜಾತಬ್ರಹ್ಮವಾದಕ್ಕೆ ಅವತರಣಿಕೆ

**(ಭಾಷ್ಯ)**

೧೫. ಸಬಾಹ್ಯಾಭ್ಯನ್ತರಮ್, ಅಜಮ್ ಆತ್ಮಾನಂ ಪ್ರತಿಪತ್ತುಮ್ ಅಶಕ್ನುವನ್ ಅವಿದ್ಯಯಾ ದೀನಮ್ ಆತ್ಮಾನಂ ಮನ್ಯಮಾನಃ, "ಜಾತೋಽಹಮ್, ಜಾತೇ ಬ್ರಹ್ಮಣಿ ವರ್ತೇ, ತದುಪಾಸನಾಶ್ರಿತಃ ಸನ್ ಬ್ರಹ್ಮ ಪ್ರತಿಪತ್ಸ್ಯೇ" ಇತ್ಯೇವಂ ಪ್ರತಿಪನ್ನಃ ಕೃಪಣೋ ಭವತಿ ಯಸ್ಮಾತ್—

**(ಭಾಷ್ಯಾರ್ಥ)**

ಒಳಗೂ ಹೊರಗೂ ಹುಟ್ಟಿಲ್ಲದ ಆತ್ಮನನ್ನು ಅರಿಯಲಾರದೆ ಅವಿದ್ಯೆಯಿಂದ ತಾನು ದೀನನೆಂದು ಭಾವಿಸಿಕೊಂಡು "ನಾನು ಹುಟ್ಟಿರುವೆನು, ಹುಟ್ಟಿದ ಬ್ರಹ್ಮದಲ್ಲಿ ಇರುತ್ತೇನೆ, ಅದರ ಉಪಾಸನೆಯನ್ನು ಆಶ್ರಯಿಸಿಕೊಂಡು ಬ್ರಹ್ಮವನ್ನು ಪಡೆಯುವೆನು" ಎಂದೀ ಪರಿಯಲ್ಲಿ ತಿಳಿದುಕೊಂಡಿರುವವನು ಕೃಪಣನಾಗುವನಲ್ಲವೆ,—

---

1. ಉಪಾಸನೆಯನ್ನು ಮಾಡಿ ಸಾಕ್ಷಾತ್ಕಾರಮಾಡಿಕೊಂಡರೆ ಶರೀರವನ್ನು ಬಿಟ್ಟ ಬಳಿಕ ಅರ್ಚಿರಾದಿಮಾರ್ಗದಿಂದ ಹೋಗಿ ಬ್ರಹ್ಮಸಾಯುಜ್ಯವನ್ನು ಪಡೆಯುತ್ತಾನೆಂದು ಉಪನಿಷತ್ತುಗಳಲ್ಲಿ ಹೇಳಿದೆ.

2. ಧರ್ಮ ಎಂಬ ಮಾತನ್ನು ಜೀವ ಎಂಬ ಅರ್ಥದಲ್ಲಿ ಕಾರಿಕಾಕಾರರು ಅಲ್ಲಲ್ಲಿ ಉಪಯೋಗಿಸಿರುತ್ತಾರೆ. ದೇಹಧಾರಣೆಮಾಡಿರುವದರಿಂದ ಧರ್ಮನೆನಿಸುವನು ಎಂದು ಆ। ವ್ಯಾಖ್ಯಾನದಲ್ಲಿ ಕಲ್ಪಿಸಿದೆ. ಈ ಪ್ರಯೋಗಕ್ಕೆ ಕ. ೨–೨–೧೪ ನೋಡಿ.

3. ಬೃ. ೩–೮–೧೦ರ ಸೂಚನೆ.

**ಅತೋ ವಕ್ಷ್ಯಾಮ್ಯಕಾರ್ಪಣ್ಯಮಜಾತಿ ಸಮತಾಂ ಗತಮ್ ।**
**ಯಥಾ ನ ಜಾಯತೇ ಕಿಂಚಿಜ್ಜಾಯಮಾನಂ ಸಮನ್ತತಃ ॥ ೨ ॥**

**೨. ಆದ್ದರಿಂದ ಅಕಾರ್ಪಣ್ಯವಾದ ಹುಟ್ಟಿಲ್ಲದ ಸಮತೆಯನ್ನು ಹೊಂದಿರುವ (ಬ್ರಹ್ಮವು) ಎಲ್ಲೆಲ್ಲಿಯೂ ಹುಟ್ಟುತ್ತಿದ್ದರೂ ಸ್ವಲ್ಪವೂ ಹುಟ್ಟುವದಿಲ್ಲವೆಂಬುದು ಹೇಗೆಂಬುದನ್ನು ಹೇಳುವೆನು.**

**(ಭಾಷ್ಯ)**

೧೩೦. **ಅತಃ** ವಕ್ಷ್ಯಾಮಿ **ಅಕಾರ್ಪಣ್ಯಮ್** ಅಕೃಪಣಭಾವಮ್ ಅಜಂ ಬ್ರಹ್ಮ । ತದ್ ಹಿ ಕಾರ್ಪಣ್ಯಾಸ್ಪದಮ್ "ಯತ್ರಾನ್ಯೋಽನ್ಯತ್ ಪಶ್ಯತ್ಯನ್ಯಚ್ಛೃಣೋತ್ಯನ್ಯ ದ್ವಿಜಾನಾತಿ ತದಲ್ಪಮ್, ಮರ್ತ್ಯಮ್, ಅಸತ್"[1] (ಛಾಂ. ೭-೧-೪) ಇತ್ಯಾದಿ ಶ್ರುತಿಭ್ಯಃ । ತದ್ವಿಪರೀತಂ ಸಬಾಹ್ಯಾಭ್ಯನ್ತರಮಜಮ್ ಅಕಾರ್ಪಣ್ಯಂ ಭೂಮಾಖ್ಯಂ ಬ್ರಹ್ಮ । ಯತ್ ಪ್ರಾಪ್ಯ ಅವಿದ್ಯಾಕೃತಸರ್ವಕಾರ್ಪಣ್ಯನಿವೃತ್ತಿಃ ತತ್ ಅಕಾರ್ಪಣ್ಯಂ ವಕ್ಷ್ಯಾಮಿ ಇತ್ಯರ್ಥಃ । ತತ್ **ಅಜಾತಿ** ಅವಿದ್ಯಮಾನಾ ಜಾತಿಃ ಅಸ್ಯ । **ಸಮತಾಂ ಗತಂ** ಸರ್ವಸಾಮ್ಯಂ ಗತಮ್ । ಕಸ್ಮಾತ್ ? ಅವಯವವೈಷಮ್ಯಾಭಾವಾತ್ । ಯತ್ ಹಿ ಸಾವಯವಂ ವಸ್ತು ತತ್ ಅವಯವೈಃ ವೈಷಮ್ಯಂ[2] ಗಚ್ಛತ್ 'ಜಾಯತೇ' ಇತಿ ಉಚ್ಯತೇ । ಇದಂ ತು ನಿರವಯವತ್ವಾತ್ ಸಮತಾಂ ಗತಮ್ ಇತಿ ನ ಕೈಶ್ಚಿತ್ ಅವಯವೈಃ ಸ್ಫುಟತಿ । ಅತಃ ಅಜಾತಿ, ಅಕಾರ್ಪಣ್ಯಮ್ **ಸಮನ್ತತಃ** ಸಮನ್ತಾತ್ । **ಯಥಾ ನ ಜಾಯತೇ ಕಿಂಚಿತ್** ಅಲ್ಪಮಪಿ ನ ಸ್ಫುಟತಿ । ರಜ್ಜುಸರ್ಪವತ್ ಅವಿದ್ಯಾಕೃತದೃಷ್ಟ್ಯಾ **ಜಾಯಮಾನಂ** ಯೇನ ಪ್ರಕಾರೇಣ ನ ಜಾಯತೇ ಸರ್ವತಃ ಅಜಮೇವ ಬ್ರಹ್ಮ ಭವತಿ ತಥಾ । ತಂ ಪ್ರಕಾರಂ ಶೃಣು ಇತ್ಯರ್ಥಃ ॥

**(ಭಾಷ್ಯಾರ್ಥ)**

ಆದ್ದರಿಂದ ಅಕಾರ್ಪಣ್ಯವಾದ ಕೃಪಣತ್ವವಿಲ್ಲದ ಹುಟ್ಟಿಲ್ಲದ ಬ್ರಹ್ಮವನ್ನು ಹೇಳುವೆನು. "ಎಲ್ಲಿ ಒಬ್ಬನು ಮತ್ತೊಂದನ್ನು ಕಾಣುತ್ತಾನೋ, ಮತ್ತೊಂದನ್ನು ಕೇಳುತ್ತಾನೋ, ಮತ್ತೊಂದನ್ನು ಅರಿಯುತ್ತಾನೋ ಅದಲ್ಲವೆ, ಕೃಪಣತ್ವಕ್ಕೆ ಎಡೆಯಾಗಿರುವದು? ಅದು ಅಲ್ಪವು, ನಾಶವಾಗತಕ್ಕದ್ದು, ಅಸತ್ತು (ಛಾಂ. ೭-೨೪-೧)"

1. ಇದು ಛಾಂದೋಗ್ಯವಾಕ್ಯದ ಅರ್ಥವು; ಅದರಲ್ಲಿ 'ಅನ್ಯೋ' ಎಂಬ ಮಾತಿಲ್ಲ, ಅಸತ್ ಎಂಬುದೂ ಇಲ್ಲ. 'ಮರ್ತ್ಯಂ ತತ್' ಎಂದು ವಾ॥ ಮ್ಯ॥

2. "ತದವಯವವೈಷಮ್ಯಮ್" ವಾ ॥; "ತದವಯವವೈಷಮ್ಯಾತ್ ವೈಷಮ್ಯಂ" ಮ್ಯ॥

"ವಿಕಾರವೆಂಬುದು ಮಾತಿನಿಂದಾಗಿರುವ ಬರಿಯ ಹೆಸರು. (ಛಾಂ. ೬-೧-೪)" ಮುಂತಾದ ಶ್ರುತಿಗಳು ಇದಕ್ಕೆ ಪ್ರಮಾಣವು. ಇದಕ್ಕೆ ವಿರುದ್ಧವಾಗಿರುವ ಹೊರಗೂ ಒಳಗೂ ಹುಟ್ಟಿಲ್ಲದ **ಭೂಮ**ವೆಂಬ ಹೆಸರಿನ ಬ್ರಹ್ಮವು ಕಾರ್ಪಣ್ಯವಿಲ್ಲದ್ದು. ಯಾವದನ್ನು ಪಡೆದುಕೊಂಡರೆ ಅವಿದ್ಯೆಯಿಂದಾಗಿರುವ ಕಾರ್ಪಣ್ಯವೆಲ್ಲವೂ ತೊಲಗುವದೋ ಆ ಅಕಾರ್ಪಣ್ಯವನ್ನು ಹೇಳುವೆನು ಎಂದರ್ಥ. ಅದು ಅಜಾತಿ ಎಂದರೆ ಹುಟ್ಟು ಅದಕ್ಕೆ ಇಲ್ಲವಾದ್ದರಿಂದ (ಅಜಾತಿ); ಸಮತೆಯನ್ನು ಹೊಂದಿರುವದು, ಸರ್ವಸಾಮ್ಯವನ್ನು ಹೊಂದಿರತಕ್ಕದ್ದು. (ಅದು ಹುಟ್ಟಿಲ್ಲದ್ದು ಎಂಬುದಕ್ಕೆ ಕಾರಣ)ವೇನು? ಎಂದರೆ, ಅವಯವಗಳಿಂದಾದ ಹೆಚ್ಚುಕಡಿಮೆಯಿಲ್ಲದ್ದರಿಂದ. ಯಾವ ವಸ್ತು ಅವಯವಗಳಿಂದ ಕೂಡಿರುವದೋ ಅದು ಅವಯವಗಳಿಂದ ಹೆಚ್ಚುಕಡಿಮೆಯಾಗುವದಾ(ದ್ದರಿಂದ) ಹುಟ್ಟುತ್ತದೆ[1] ಎನಿಸುತ್ತದೆ. ಆದರೆ ಈ (ಬ್ರಹ್ಮ)ವಾದರೋ ಅವಯವಗಳಿಲ್ಲದ್ದಾದ್ದರಿಂದ ಸಮತೆಯನ್ನು ಹೊಂದಿರುವದಾದ್ದರಿಂದ ಯಾವ ಅವಯವಗಳಿಂದಲೂ ಸಿಡಿದುಕೊಳ್ಳುವದಿಲ್ಲ; ಆದ್ದರಿಂದ ಹುಟ್ಟಿಲ್ಲದ ಅಕಾರ್ಪಣ್ಯವಾಗಿರುತ್ತದೆ. ಎಲ್ಲೆಲ್ಲಿಯೂ ಎಂದರೆ ಎಲ್ಲಾ ಕಡೆಯಲ್ಲಿಯೂ (ಹುಟ್ಟಿಲ್ಲದ್ದು ಎಂದರ್ಥ). ಹೇಗೆ (ಅದು)ಒಂದಿಷ್ಟೂ ಸ್ವಲ್ಪವಾದರೂ ಹುಟ್ಟುವದಿಲ್ಲವೋ ಸಿಡಿದುಕೊಳ್ಳದೆ ಇರುವದೋ, ಹಗ್ಗದ ಹಾವಿನಂತೆ ಅವಿದ್ಯೆಯಿಂದಾದ ದೃಷ್ಟಿಯಿಂದ ಹುಟ್ಟುತ್ತಲೇ ಇರುವದಾಗಿ, ಯಾವ ಪ್ರಕಾರದಿಂದ ಹುಟ್ಟುವದೇ ಇಲ್ಲವೋ ಎಲ್ಲೆಲ್ಲಿಯೂ ಹುಟ್ಟಿಲ್ಲದ ಬ್ರಹ್ಮವೇ ಆಗಿರುವದೋ ಅದನ್ನು (ಹೇಳುತ್ತೇನೆ). ಆ ಪ್ರಕಾರವನ್ನು ಕೇಳು ಎಂದರ್ಥ.

## ಜೀವನ ಹುಟ್ಟೂ ಸಾವೂ ಔಪಾಧಿಕ

**(ಭಾಷ್ಯ)**

೧೩೧. ಅಜಾತಿ ಬ್ರಹ್ಮ ಅಕಾರ್ಪಣ್ಯಂ ವಕ್ಷ್ಯಾಮಿ ಇತಿ ಪ್ರತಿಜ್ಞಾತಮ್ । ತತ್ಸಿದ್ಧ್ಯರ್ಥಂ ಹೇತುಂ ದೃಷ್ಟಾನ್ತಂ ಚ ವಕ್ಷ್ಯಾಮಿ ಇತ್ಯಾಹ—

**(ಭಾಷ್ಯಾರ್ಥ)**

ಹುಟ್ಟಿಲ್ಲದ ಅಕಾರ್ಪಣ್ಯವಾದ ಬ್ರಹ್ಮವನ್ನು ಹೇಳುವೆನು-ಎಂದು ತಿಳಿಸಿದ್ದಾಯಿತು; ಅದನ್ನು ಸಾಧಿಸುವದಕ್ಕೆ ಹೇತುವನ್ನೂ ದೃಷ್ಟಾಂತವನ್ನೂ ಹೇಳೋಣವೆಂದು (ಹೀಗೆ)ನ್ನುತ್ತಾರೆ:—

---

1. ಅವಯುವಗಳ ಹೆಚ್ಚುಕಡಿಮೆಯನ್ನು ಪಡೆಯುವದೇ ಹೊಸದೊಂದು ರೂಪದಿಂದ ಹುಟ್ಟುವದೆಂಬ ವಿಕಾರವು.

**ಆತ್ಮಾ ಹ್ಯಾಕಾಶವಜ್ಜೀವೈರ್ಘಟಾಕಾಶೈರಿವೋದಿತಃ ।**
**ಘಟಾದಿವಚ್ಚ ಸಙ್ಘಾತೈರ್ಜಾತಾವೇತನ್ನಿದರ್ಶನಮ್ ॥ ೩ ॥**

೩. ಆತ್ಮನು, ಆಕಾಶವು ಘಟಾಕಾಶಗಳ(ರೂಪ)ದಿಂದ ಹೇಗೋ ಹಾಗೆ, ಜೀವರ (ರೂಪ)ದಿಂದಲೂ ಘಟಾದಿಗಳಂತೆ ಸಂಘಾತಗಳ (ರೂಪ) ದಿಂದಲೂ ಹುಟ್ಟುವನು. ಹುಟ್ಟಿಗೆ ಇದು ನಿದರ್ಶನವು.

(ಭಾಷ್ಯ)

೧೩.೨. ಆತ್ಮಾ ಪರಃ ಹಿ ಯಸ್ಮಾತ್ ಆಕಾಶವತ್ ಸೂಕ್ಷ್ಮಃ ನಿರವಯವಃ ಸರ್ವಗತಃ ತಸ್ಮಾತ್[1] ಆಕಾಶವತ್ ಉಕ್ತಃ । ಜೀವೈಃ ಕ್ಷೇತ್ರಜ್ಞೈಃ ಘಟಾಕಾಶೈರಿವ ಘಟಾಕಾಶತುಲ್ಯೈಃ ಉದಿತಃ ಉಕ್ತಃ ಸ ಏವ ಆಕಾಶಸಮಃ ಪರ ಆತ್ಮಾ । ಅಥವಾ ಘಟಾಕಾಶೈಃ ಯಥಾ ಆಕಾಶ ಉದಿತಃ ಉತ್ಪನ್ನಃ ತಥಾ ಪರಃ ಜೀವಾತ್ಮಭಿಃ ಉತ್ಪನ್ನಃ । ಜೀವಾತ್ಮನಾಂ ಪರಸ್ಮಾತ್ ಆತ್ಮನಃ ಉತ್ಪತ್ತಿಃ ಯಾ ಶ್ರೂಯತೇ ವೇದಾನ್ತೇಷು ಸಾ ಮಹಾಕಾಶಾತ್ ಘಟಾಕಾಶೋತ್ಪತ್ತಿಸಮಾ ನ ಪರಮಾರ್ಥತಃ ಇತ್ಯಭಿಪ್ರಾಯಃ । ತಸ್ಮಾದೇವ ಆಕಾಶಾತ್ ಘಟಾದಯಃ ಸಙ್ಘಾತಾಃ ಯಥಾ ಉತ್ಪದ್ಯನ್ತೇ ಏವಮ್ ಆಕಾಶಸ್ಥಾನೀಯಾತ್ ಪರಮಾತ್ಮನಃ ಪೃಥಿವ್ಯಾದಿಭೂತಸಙ್ಘಾತಾ ಆಧ್ಯಾತ್ಮಿಕಾಶ್ಚ ಕಾರ್ಯಕರಣಲಕ್ಷಣಾಃ ರಜ್ಜುಸರ್ಪವತ್ ವಿಕಲ್ಪಿತಾಃ ಜಾಯನ್ತೇ । ಅತಃ ಉಚ್ಯತೇ ಘಟಾದಿವಚ್ಚ ಸಙ್ಘಾತೈಃ ಉದಿತಃ ಇತಿ । ಯದಾ ಮನ್ದಬುದ್ಧಿಪ್ರತಿಪಿಪಾದಯಿಷಯಾ ಶ್ರುತ್ಯಾ ಆತ್ಮನಃ ಜಾತಿಃ ಉಚ್ಯತೇ ಜೀವಾದೀನಾಂ ತದಾ ಜಾತೌ ಉಪಗಮ್ಯಮಾನಾಯಾಮ್ ಏತತ್ ನಿದರ್ಶನಮ್ ದೃಷ್ಟಾನ್ತಃ ಯಥೋದಿತಾಕಾಶವದಿತ್ಯಾದಿಃ ॥

(ಭಾಷ್ಯಾರ್ಥ)

ಆತ್ಮನು ಎಂದರೆ ಪರಮಾತ್ಮನು ಆಕಾಶದಂತೆ ಸೂಕ್ಷ್ಮನಾಗಿ ಅವಯುವಗಳಿಲ್ಲದೆ ಎಲ್ಲೆಲ್ಲಿಯೂ ವ್ಯಾಪ್ತನಾಗಿರುವನಷ್ಟೆ, ಆದ್ದರಿಂದ ಆಕಾಶದಂತೆ (ಇರುವನು) ಎಂದು (ಶ್ರುತಿಯಲ್ಲಿ) ಉಕ್ತನಾಗಿರುತ್ತಾನೆ[2]. ಆಕಾಶಕ್ಕೆ ಸಮನಾಗಿರುವ ಅದೇ ಪರಮಾತ್ಮನು ಘಟಾಕಾಶಗಳಿಂದ ಹೇಗೋ ಹಾಗೆ ಎಂದರೆ ಗಡಿಗೆಯ ಆಕಾಶಗಳಿಗೆ ಸಮಾನನಾಗಿ

---

1. ಒಂದು ಲಿಖಿತಪುಸ್ತಕದಲ್ಲಿದೆ ಎಂದು ಆ॥ ಮುದ್ರಿತಪುಸ್ತಕದಲ್ಲಿರುವ ಪಾಠ.

2. ಉದಿತಃ ಎಂಬ ಮಾತನ್ನು ವದ್ ಹೇಳು ಎಂಬ ಧಾತುವಿನಿಂದ ಹುಟ್ಟಿದ್ದೆಂದು ಇಲ್ಲಿ ಭಾವಿಸಿದೆ.

ಜೀವರು(ಗಳ) ರೂಪದಿಂದ ಕ್ಷೇತ್ರಜ್ಞರುಗಳೆಂಬ ರೂಪದಿಂದ ಉದಿತಃ ಹೇಳಲ್ಪಟ್ಟಿರುವನು[1] (ಎಂದರ್ಥ). ಅಥವಾ (ಈ ಶ್ಲೋಕಾರ್ಥಕ್ಕೆ ಮತ್ತೊಂದು ಅರ್ಥವನ್ನೂ ಹೂಡಬಹುದು). ಆಕಾಶವು ಹೇಗೆ ಘಟಾಕಾಶಗಳಾಗಿ ಉದಿತವಾಗಿರುವದೋ, ಹುಟ್ಟಿರುವದೋ[2], ಹಾಗೆ ಪರ(ಮಾತ್ಮ)ನು ಜೀವಾತ್ಮರ(ರೂಪ)ದಿಂದ ಹುಟ್ಟಿರುವನು[3]. ಜೀವಾತ್ಮರುಗಳಿಗೆ ಪರಮಾತ್ಮನಿಂದ ಉತ್ಪತ್ತಿಯಾಗುವದೆಂದು ಉಪನಿಷತ್ತುಗಳಲ್ಲಿ ಹೇಳಿದೆಯಲ್ಲ[4], ಅದು ಮಹಾಕಾಶದಿಂದ ಘಟಾಕಾಶಗಳು ಹುಟ್ಟುವದಕ್ಕೆ ಸಮವಾದದ್ದು, ನಿಜವಾಗಿ (ಆಗುವ ಹುಟ್ಟಲ್ಲ) ಎಂದು ಅಭಿಪ್ರಾಯ.

ಅದೇ ಆಕಾಶದಿಂದ ಗಡಿಗೆಯೇ ಮುಂತಾದ ಗುಂಪುಗಳು ಹೇಗೆ ಹುಟ್ಟುವವೋ, ಹಾಗೆ ಆಕಾಶದಂತಿರುವ ಪರಮಾತ್ಮನಿಂದ ಪೃಥಿವಿಯೇ ಮುಂತಾದ ಭೂತಗಳ ಗುಂಪುಗಳೂ (ನಮ್ಮ) ಒಳಗಿನ ಕಾರ್ಯಕರಣರೂಪವಾದ (ಗುಂಪುಗಳೂ) ಹಗ್ಗದ ಹಾವಿನಂತೆ ವಿಕಲ್ಪಿತವಾಗಿ[5] ಹುಟ್ಟುವವು. ಆದ್ದರಿಂದ ಗಡಿಗೆಯೇ ಮುಂತಾದವುಗಳಂತೆ ಸಂಘಾತಗಳಾಗಿಯೂ ಹುಟ್ಟಿರುವನು ಎಂದು ಹೇಳಿರುತ್ತದೆ[6].

ಮಂದಬುದ್ಧಿಯುಳ್ಳವರಿಗೆ (ತತ್ತ್ವವನ್ನು) ತಿಳಿಸುವದಕ್ಕಾಗಿ ಪರಮಾತ್ಮನಿಂದ ಜೀವಾದಿಗಳಿಗೆ[7] ಉತ್ಪತ್ತಿಯನ್ನು ಯಾವಾಗ ಶ್ರುತಿಯಲ್ಲಿ ಹೇಳಲಾಗುತ್ತದೆಯೋ, ಆಗ ಹುಟ್ಟನ್ನು ಒಪ್ಪಿರುವ (ಆ ಸಂದರ್ಭದಲ್ಲಿ) ಇದು, ಎಂದರೆ ಮೇಲೆ ಹೇಳಿರುವ ಆಕಾಶದಂತೆ ಎಂದು ಮುಂತಾಗಿರುವದು, ನಿದರ್ಶನವು ದೃಷ್ಟಾಂತವು[8].

---

1. ಆಕಾಶವನ್ನು ಗಡಿಗೆಯ ಆಕಾಶವೆಂಬುದು ಹೇಗೆ ಉಪಾಧಿಯಿಂದ ಆದಿದ ಗೌಣಪ್ರಯೋಗವೋ, ಹಾಗೆಯೇ ಪರಮಾತ್ಮನನ್ನು ಜೀವನೆಂದಿರುವದೂ ಗೌಣವೇ, ನಿಜವಾಗಿ ಪರಮಾತ್ಮನನ್ನೇ ಜೀವನೆಂದು ಕರೆಯುತ್ತೇವೆ ಎಂದರ್ಥ. ತೈ. ೨-೬-೧, ಛಾಂ. ೬-೩-೨, ಬೃ. ೪-೪-೫.

2. "ಉತ್ + ಇತಃ" ಎಂದು ಬಿಡಿಸಿಕೊಂಡು ಉದಿತಃ ಎಂಬ ಮಾತಿಗೆ ಹುಟ್ಟಿರುವನು ಎಂದರ್ಥವನ್ನು ಮಾಡಿದೆ.

3. ಹುಟ್ಟಿದಂತೆ ತೋರುವನು.

4. ಬೃ. ೨-೧-೨೦, ಮುಂ. ೨-೧-೧ ಮುಂತಾದ ಶ್ರುತಿಗಳನ್ನು ಇಲ್ಲಿ ಪರಾಮರ್ಶಿಸಿದೆ. ಆತ್ಮನಿಗೆ ನಿಜವಾಗಿ ಹುಟ್ಟಿಲ್ಲವೆಂಬುದನ್ನು ಸೂ. ಭಾ. ೨-೩-೧೭ ರಲ್ಲಿ ನಿರ್ಣಯಿಸಿದೆ.

5. ಭ್ರಾಂತಿಯಿಂದ ಕಲ್ಪಿತವಾಗಿ.

6. ಆಕಾಶವೇ ಗಡಿಗೆ ಮುಂತಾದವುಗಳಾಗಿಯೂ ಅವುಗಳ ಉಪಾಧಿಯಿಂದ ಘಟಾಕಾಶಾದಿಗಳಾಗಿಯೂ ಹುಟ್ಟಿದಂತೆ ಕಾಣುವ ಹಾಗೆ ಆತ್ಮನೂ ಕಾಣುತ್ತಾನೆ ಎಂದರ್ಥ.

7. ಜೀವ, ಶರೀರಾದಿಗಳು-ಇವುಗಳಿಗೆ; ನಿಜವಾಗಿ ಯಾವದೂ ಹುಟ್ಟುವದಿಲ್ಲ.

8. ಆತ್ಮನು ಅಜನು, ಏಕೆಂದರೆ ಆಕಾಶದಂತೆ ಅವನು ಸೂಕ್ಷ್ಮನೂ ನಿರವಯವನೂ ಸರ್ವಗತನೂ ಆಗಿರುತ್ತಾನೆ-ಎಂದು ಹೇತುವನ್ನೂ ದೃಷ್ಟಾಂತವನ್ನೂ ಹೇಳಿದಂತೆ ಆಯಿತು.

**ಘಟಾದಿಷು ಪ್ರಲೀನೇಷು ಘಟಾಕಾಶಾದಯೋ ಯಥಾ ।**
**ಆಕಾಶೇ ಸಂಪ್ರಲೀಯನ್ತೇ ತದ್ವಜ್ಜೀವಾ ಇಹಾತ್ಮನಿ　　॥ ೪ ॥**

೪. ಗಡಿಗೆಯೇ ಮುಂತಾದವುಗಳು ನಾಶವಾದರೆ ಗಡಿಗೆಯ ಆಕಾಶವೇ ಮುಂತಾದವುಗಳು ಹೇಗೆ ಆಕಾಶದಲ್ಲಿ ಅಡಗುವವೋ ಅದರಂತೆ ಇಲ್ಲಿ ಜೀವರು ಆತ್ಮನಲ್ಲಿ (ಅಡಗುವರು).

(ಭಾಷ್ಯ)

೧೫೩. ಯಥಾ ಘಟಾದ್ಯುತ್ಪತ್ತ್ಯಾ ಘಟಾಕಾಶಾದ್ಯುತ್ಪತ್ತಿಃ, ಯಥಾ ಚ ಘಟಾದಿಪ್ರಲಯೇ[1] ಘಟಾಕಾಶಾದಿಪ್ರಲಯಃ, ತದ್ವತ್ ದೇಹಾದಿಸಙ್ಘಾತೋತ್ಪತ್ತ್ಯಾ ಜೀವೋತ್ಪತ್ತಿಃ, ತತ್ಪ್ರಲಯೇ[2] ಚ ಜೀವಾನಾಮ್ ಇಹ ಆತ್ಮನಿ ಪ್ರಲಯಃ ನ ಸ್ವತಃ ಇತ್ಯರ್ಥಃ ॥

(ಭಾಷ್ಯಾರ್ಥ)

ಹೇಗೆ ಗಡಿಗೆ ಮುಂತಾದವುಗಳು ಹುಟ್ಟಿದರೆ ಗಡಿಗೆಯ ಆಕಾಶವೇ ಮುಂತಾದವುಗಳ ಉತ್ಪತ್ತಿ(ಯಾಗುವದೋ), ಹೇಗೆ ಗಡಿಗೆಯೇ ಮುಂತಾದವು ನಾಶವಾದರೆ ಗಡಿಗೆಯ ಆಕಾಶವೇ ಮುಂತಾದವು (ನಾಶವಾಗುವವೋ) ಅದರಂತೆ ದೇಹವೇ ಮುಂತಾದ ಸಂಘಾತಗಳು ಹುಟ್ಟಿದರೆ ಜೀವರಿಗೆ ಹುಟ್ಟು, ಅವು ನಾಶವಾದರೆ ಇಲ್ಲಿ ಆತ್ಮನಲ್ಲಿಯೂ ಪ್ರಲಯ(ವಾಗುವದು), ಸ್ವತಃ (ಅವರಿಗೆ ಹುಟ್ಟುಹೊಂದು)ಗಳಿಲ್ಲ ಎಂದರ್ಥ.

## ಆತ್ಮೈಕತ್ವವಾದದಲ್ಲಿ ಸುಖದುಃಖಾದಿಗಳ ವ್ಯವಸ್ಥೆ

(ಭಾಷ್ಯ)

೧೫೪. ಸರ್ವದೇಹೇಷು ಆತ್ಮೈಕತ್ವೇ ಏಕಸ್ಮಿನ್ ಜನನಮರಣಸುಖಾದಿಮತಿ ಆತ್ಮನಿ ಸರ್ವಾತ್ಮನಾಂ ತತ್ಸಂಬನ್ಧಃ ಕ್ರಿಯಾಫಲಸಾಙ್ಕರ್ಯಂ ಚ ಸ್ಯಾತ್ ಇತಿ ಯೇ ಆಹುಃ ದ್ವೈತಿನಃ ತಾನ್ ಪ್ರತಿ ಇದಮ್ ಉಚ್ಯತೇ—

---

1. 'ಘಟಾದಿಪ್ರಲಯೇನ' ವಾ॥

2. 'ತತ್ಪ್ರಲಯೇನ' ವಾ॥

(ಭಾಷ್ಯಾರ್ಥ)

ಎಲ್ಲಾ ದೇಹಗಳಲ್ಲಿ ಒಬ್ಬನೇ ಆತ್ಮನಿದ್ದರೆ ಒಬ್ಬ ಆತ್ಮನಿಗೆ ಹುಟ್ಟುಹೊಂದುಗಳೂ ಸುಖಾದಿಗಳೂ ಆದರೆ ಎಲ್ಲಾ ಆತ್ಮರಿಗೂ ಅದರ ಸಂಬಂಧವೂ ಕರ್ಮ ಮತ್ತು (ಅದರ) ಫಲ–ಇವುಗಳ ಬೆರಕೆಯೂ ಆಗಬೇಕಾದೀತು[1] ಎಂದು ದ್ವೈತಿಗಳು ಹೇಳುವರಲ್ಲ, ಅವರಿಗೆ ಇದನ್ನು (ಉತ್ತರ)ವಾಗಿ ಹೇಳುತ್ತಾರೆ:—

**ಯಥೈಕಸ್ಮಿನ್ ಘಟಾಕಾಶೇ ರಜೋಧೂಮಾದಿಭಿರ್ಯುತೇ ।**
**ನ ಸರ್ವೇ ಸಂಪ್ರಯುಜ್ಯನ್ತೇ ತದ್ವಜ್ಜೀವಾಃ ಸುಖಾದಿಭಿಃ ॥ ೫ ॥**

೫. ಹೇಗೆ ಒಂದು ಘಟಾಕಾಶವು ಧೂಳು, ಹೊಗೆ–ಮುಂತಾದವುಗಳಿಂದ ಕೂಡಿದ್ದರೆ ಎಲ್ಲಾ (ಘಟಾಕಾಶಗಳೂ ಅವುಗಳೊಡನೆ) ಸೇರಿರುವದಿಲ್ಲವೋ ಅದರಂತೆ ಜೀವರು ಸುಖಾದಿಗಳೊಡನೆ (ಎಲ್ಲರೂ ಸೇರಿರುವದಿಲ್ಲ).

(ಭಾಷ್ಯ)

೧೩೫. ಯಥಾ ಏಕಸ್ಮಿನ್ ಘಟಾಕಾಶೇ ರಜೋಧೂಮಾದಿಭಿಃ ಯುತೇ ಸಂಯುಕ್ತೇ ನ ಸರ್ವೇ ಘಟಾಕಾಶಾಃ[2] ತದ್ರಜೋಧೂಮಾದಿಭಿಃ ಸಂಪ್ರಯುಜ್ಯನ್ತೇ ತದ್ವತ್ ಜೀವಾಃ ಸುಖಾದಿಭಿಃ ॥

(ಭಾಷ್ಯಾರ್ಥ)

ಹೇಗೆ ಒಂದು ಗಡಿಗೆಯ ಆಕಾಶವು ಧೂಳು, ಹೊಗೆ–ಮುಂತಾದವುಗಳಿಂದ ಕೂಡಿಕೊಂಡಿದ್ದರೆ ಸೇರಿಕೊಂಡಿದ್ದರೆ ಎಲ್ಲಾ ಗಡಿಗೆಯ ಆಕಾಶಗಳೂ ಆ ಧೂಳು, ಹೊಗೆ–ಮುಂತಾದವುಗಳಿಂದ ಸೇರಿಕೊಂಡಿರುವದಿಲ್ಲವೋ ಅದರಂತೆ (ಎಲ್ಲಾ) ಜೀವರೂ (ಒಬ್ಬರ) ಸುಖವೇ ಮುಂತಾದವುಗಳಿಂದ (ಸೇರಿಕೊಂಡಿರುವದಿಲ್ಲ).

---

1. ಆತ್ಮನಿಗೆ ಸುಖದುಃಖಾದಿಗಳ ಸಂಬಂಧವು ನಿಜವಾಗಿ ಆಗುವದೆಂದು ಸಿದ್ಧಾಂತಿಯು ಒಪ್ಪುವದೇ ಇಲ್ಲವಾದರೂ ವ್ಯವಹಾರದೃಷ್ಟಿಯಿಂದ ಒಬ್ಬನಿಗೆ ಆಗುವಂತೆ ತೋರುವ ಸುಖದುಃಖಗಳು ಮತ್ತೊಬ್ಬನಿಗೂ ಆಗಬೇಕಲ್ಲವೆ?–ಎಂದು ಪೂರ್ವಪಕ್ಷಿಯ ಶಂಕೆ.

2.

# ಆತ್ಮೈಕತ್ವವಿಷಯದಲ್ಲಿ ಸಾಂಖ್ಯರ ಆಕ್ಷೇಪಕ್ಕೆ ಪರಿಹಾರ

(ಭಾಷ್ಯ)

೧೩೬. ನನು ಏಕ ಏವ ಆತ್ಮಾ । ಬಾಢಮ್, ನನು ನ ಶ್ರುತಂ ತ್ವಯಾ ಆಕಾಶವತ್ ಸರ್ವಸಙ್ಘಾತೇಷು ಏಕ ಏವ ಆತ್ಮಾ ಇತಿ ? । ಯದಿ ಏಕ ಏವ ಆತ್ಮಾ ತರ್ಹಿ ಸರ್ವತ್ರ ಸುಖೀ ದುಃಖೀ ಚ ಸ್ಯಾತ್ । ನ ಚ ಇದಂ ಸಾಙ್ಖ್ಯಚೋದ್ಯಂ[1] ಸಂಭವತಿ । ನ ಹಿ ಸಾಙ್ಖ್ಯಾಃ ಆತ್ಮನಃ ಸುಖದುಃಖಾದಿಮತ್ತ್ವಮ್ ಇಚ್ಛತಿ । ಬುದ್ಧಿ ಸಮವಾಯಾಭ್ಯುಪಗಮಾತ್ ಸುಖದುಃಖಾದೀನಾಮ್ । ನ ಚ ಉಪಲಬ್ಧಿಸ್ವರೂಪಸ್ಯ ಆತ್ಮನಃ ಭೇದಕಲ್ಪನಾಯಾಂ ಪ್ರಮಾಣಮ್ ಅಸ್ತಿ । ಭೇದಾಭಾವೇ ಪ್ರಧಾನಸ್ಯ ಪಾರಾರ್ಥ್ಯಾನುಪಪತ್ತಿಃ ಇತಿ ಚೇತ್ । ನ । ಪ್ರಧಾನಕೃತಸ್ಯ ಅರ್ಥಸ್ಯ ಆತ್ಮನಿ ಅಸಮವಾಯಾತ್ । ಯದಿ ಹಿ ಪ್ರಧಾನಕೃತಃ ಬನ್ಧಃ ಮೋಕ್ಷೋ ವಾ ಅರ್ಥಃ ಪುರುಷೇಷು ಭೇದೇನ ಸಮವೈತಿ ತತಃ ಪ್ರಧಾನಸ್ಯ ಪಾರಾರ್ಥ್ಯಮ್ ಆತ್ಮೈಕತ್ವೇ ನೋಪಪದ್ಯತೇ, ಇತಿ ಯುಕ್ತಾ ಪುರುಷಭೇದಕಲ್ಪನಾ । ನ ಚ ಸಾಙ್ಖ್ಯೈಃ ಬನ್ಧಃ ಮೋಕ್ಷೋ ವಾ ಅರ್ಥಃ ಪುರುಷಸಮವೇತಃ ಅಭ್ಯುಪಗಮ್ಯತೇ । ನಿರ್ವಿಶೇಷಾಶ್ಚ ಚೇತನಮಾತ್ರಾಃ ಆತ್ಮಾನಃ ಅಭ್ಯುಪಗಮ್ಯನ್ತೇ । ಅತಃ ಪುರುಷಸತ್ತಾಮಾತ್ರ ಪ್ರಯುಕ್ತಮೇವ ಪ್ರಧಾನಸ್ಯ ಪಾರಾರ್ಥ್ಯಂ ಸಿದ್ಧಮ್, ನ ತು ಪುರುಷಭೇದ ಪ್ರಯುಕ್ತಮ್ ಇತ್ಯತಃ ಪುರುಷಭೇದಕಲ್ಪನಾಯಾಂ ನ ಪ್ರಧಾನಸ್ಯ ಪಾರಾರ್ಥ್ಯಂ ಹೇತುಃ । ನ ಚ ಅನ್ಯತ್ ಪುರುಷಭೇದಕಲ್ಪನಾಯಾಂ ಪ್ರಮಾಣಮ್ ಅಸ್ತಿ ಸಾಙ್ಖ್ಯಾನಾಮ್ । ಪರಸತ್ತಾಮಾತ್ರಮೇವ ಚೈತತ್ ನಿಮಿತ್ತೀಕೃತ್ಯ ಸ್ವಯಂ ಬಧ್ಯತೇ ಮುಚ್ಯತೇ ಚ ಪ್ರಧಾನಮ್ । ಪರಶ್ಚ ಉಪಲಬ್ಧಿಮಾತ್ರಸತ್ತಾಸ್ವರೂಪೇಣ ಪ್ರಧಾನ ಪ್ರವೃತ್ತೌ ಹೇತುಃ, ನ ಕೇನಚಿತ್ ವಿಶೇಷೇಣ ಇತಿ ಕೇವಲಮೂಢತಯೈವ ಪುರುಷ ಭೇದಕಲ್ಪನಾ ವೇದಾರ್ಥಪರಿತ್ಯಾಗಶ್ಚ ॥

(ಭಾಷ್ಯಾರ್ಥ)

(ಆಕ್ಷೇಪ) :—ಆತ್ಮನು ಒಬ್ಬನೇ ಅಲ್ಲವೆ ?

(ಪರಿಹಾರ) :—ಹೌದು. ಆಕಾಶದಂತೆ ಎಲ್ಲಾ (ಕಾರ್ಯಕರಣ) ಸಂಘಾತ ಗಳಲ್ಲಿಯೂ ಒಬ್ಬನೇ ಆತ್ಮ(ನಿರುವ)ನೆಂದು ಹೇಳಿರುವದನ್ನು[2] ನೀನು ಕೇಳಿಲ್ಲವೆ ?

---

1. "ಸಾಙ್ಖ್ಯಸ್ಯ ಚೋದ್ಯಮ್" ವಾ॥

2. ಹಿಂದೆ ಕಾರಿಕೆಯಲ್ಲಿಯೇ ಹೇಳಿದೆಯಲ್ಲ!–ಎಂದಾದರೂ "ಆಕಾಶದಂತೆ ಸರ್ವ ಗತನೂ ನಿತ್ಯನೂ ಆಗಿರುತ್ತಾನೆ" ಎಂದು ಶ್ರುತಿಯೇ ಹೇಳಿರುವದಲ್ಲ! ಎಂದಾದರೂ ಈ ವಾಕ್ಯಕ್ಕೆ ಅರ್ಥವನ್ನು ಮಾಡಬಹುದು.

(ಆಕ್ಷೇಪ) :—ಆತ್ಮನು ಒಬ್ಬನೇ ಎಂದಾದರೆ, ಆಗ ಎಲ್ಲೆಲ್ಲಿಯೂ ಸುಖಿಯೂ ದುಃಖಿಯೂ ಆಗಿರಬೇಕಾದೀತು.

(ಪರಿಹಾರ) :—ಇದು ಸಾಂಖ್ಯನ[1] ಆಕ್ಷೇಪಣೆಯಾಗುವಂತಿಲ್ಲ. ಏಕೆಂದರೆ ಸಾಂಖ್ಯನು ಆತ್ಮನಿಗೆ ಸುಖದುಃಖಾದಿಗಳುಂಟೆಂದು ಒಪ್ಪುವದಿಲ್ಲ; ಸುಖದುಃಖಾದಿಗಳು ಬುದ್ಧಿಗೇ ಸೇರಿದವೆಂದು ಅವನು ಒಪ್ಪಿರುವದರಿಂದ (ಅವನು ಹೀಗೆಂದು ಒಪ್ಪುವದಿಲ್ಲ). ಚೈತನ್ಯಸ್ವರೂಪನಾದ ಆತ್ಮನಲ್ಲಿ ಭೇದವನ್ನು ಕಲ್ಪಿಸುವದಕ್ಕೆ ಪ್ರಮಾಣವೇ ಇಲ್ಲ[2].

(ಸಾಂಖ್ಯ) :—(ಆತ್ಮನಲ್ಲಿ) ಭೇದವಿಲ್ಲದಿದ್ದರೆ ಪ್ರಧಾನವು ಮತ್ತೊಬ್ಬರ ಪ್ರಯೋಜನಕ್ಕಾಗಿ (ಕೆಲಸಮಾಡುವದೆಂಬುದು) ಹೊಂದುವದಿಲ್ಲವಲ್ಲ[3] !

(ಭಾಷ್ಯಕಾರ) :—ಹಾಗಲ್ಲ. ಏಕೆಂದರೆ ಪ್ರಧಾನದಿಂದಾಗುವ ಪ್ರಯೋಜನವು ಬಂಧವಾಗಲಿ ಮೋಕ್ಷವಾಗಲಿ—ಪುರುಷರುಗಳಿಗೆ ಬೇರೆಬೇರೆಯಾಗಿ ಸಂಬಂಧಪಡುವದಾಗಿದ್ದರೆ, ಆಗ ಪ್ರಧಾನವು ಮತ್ತೊಬ್ಬರ ಪ್ರಯೋಜನಕ್ಕಾಗಿ (ಕೆಲಸಮಾಡುವದು) ಆತ್ಮನು ಒಬ್ಬನಾದರೆ ಹೊಂದುವದಿಲ್ಲವೆಂದು ಪುರುಷಭೇದವನ್ನು ಕಲ್ಪಿಸುವದು ಸರಿ(ಯಾಗುತ್ತಿತ್ತು). ಆದರೆ ಸಾಂಖ್ಯರು (ಆ) ಪ್ರಯೋಜನವು ಬಂಧವಾಗಲಿ ಮೋಕ್ಷವಾಗಲಿ ಪುರುಷರಿಗೆ ಸಂಬಂಧಪಡುವದೆಂದು ಒಪ್ಪುವದಿಲ್ಲ[4]. ಆತ್ಮರು ಯಾವ ವಿಶೇಷವೂ ಇಲ್ಲದವರು, ಚೈತನ್ಯಮಾತ್ರ (ಸ್ವರೂಪರು)—ಎಂದು (ಅವರು) ಒಪ್ಪಿಕೊಂಡಿರುತ್ತಾರೆ. ಆದ್ದರಿಂದ ಪುರುಷನು ಇರುವನೆಂಬುದಿಷ್ಟೇ ಕಾರಣದಿಂದ ಪ್ರಧಾನವು ಮತ್ತೊಬ್ಬರಿಗಾಗಿ (ಕೆಲಸಮಾಡುವ)ದೆಂದು[5] ಏರ್ಪಡುವದೇ ಹೊರತು

---

1. ಆತ್ಮರು ಅನೇಕವೆಂದು ಹೇಳುವ ವಾದಿಯು ಸಾಂಖ್ಯನೊ, ವೈಶೇಷಿಕನೊ ? ಸಾಂಖ್ಯನಾಗಲಾರನು ಎಂದರ್ಥ. ಆಚಾರ್ಯರ ಕಾಲಕ್ಕೆ ದ್ವೈತಿಗಳಾದ ವೇದಾಂತಿಗಳೇ ಇರಲಿಲ್ಲವೆಂಬುದಕ್ಕೆ ಇದೊಂದು ಸಾಕ್ಷಿ.

2. ಬುದ್ಧಿಯ ಸಂಬಂಧದಿಂದ ಆತ್ಮನಿಗೂ ಸುಖದುಃಖಾದಿಗಳು ನಿಜವಾಗಿ ಆಗುವವೆಂದು ಸಾಂಖ್ಯರು ಒಪ್ಪುವದಿಲ್ಲ; ಪುರುಷರು ಅಸಂಗರು ಎಂದು ಅವರು ಹೇಳುತ್ತಾರೆ.

3. ಇದು ಅರ್ಥಾಪತ್ತಿಪ್ರಮಾಣವು, ಇದನ್ನು ಸಾಂಖ್ಯರು ಅನುಮಾನದಲ್ಲಿಯೇ ಸೇರಿಸಿರುತ್ತಾರೆ. ಸಾಂ. ಕಾ. ೪ರ ಗೌ. ಭಾಷ್ಯವನ್ನು ನೋಡಿ. ಪ್ರಕೃತಿಯ ಪಾರಾರ್ಥ್ಯವನ್ನು ಸಾಂ. ಕಾ. ೫೬ ರಿಂದ ೬೦ರ ವರೆಗೆ ವರ್ಣಿಸಿದೆ.

4. ಸಾಂ. ಕಾ. ೬೨, ೬೩, ೬೪ ನೋಡಿ.

5. ಕೆಲಸಮಾಡುವಂತೆ ತೋರುತ್ತದೆ ಎಂದು ಎಂದರ್ಥ. ನಿಜವಾಗಿ ಬಂಧಮೋಕ್ಷಗಳೂ ಪ್ರಕೃತಿಗೇ ಎಂದು ಸಾಂಖ್ಯರೇ ಒಪ್ಪಿರುತ್ತಾರೆ. ಸಾಂ. ಕಾ. ೬೨.

ಪುರುಷರು ಬೇರೆಬೇರೆಯಾಗಿರುವದರಿಂದ ಎಂದು (ಏರ್ಪಡು)ವದಿಲ್ಲ. ಆದ್ದರಿಂದ ಪುರುಷರು ಬೇರೆಬೇರೆಯಾಗಿರುವರೆಂದು ಕಲ್ಪಿಸುವದಕ್ಕೆ ಪ್ರಧಾನವು ಮತ್ತೊಬ್ಬರಿಗಾಗಿ (ಕೆಲಸಮಾಡುವ)ದೆಂಬುದು ಕಾರಣ(ವಾಗುವ)ದಿಲ್ಲ. ಪುರುಷರು ಬೇರೆಬೇರೆ ಎಂದು ಕಲ್ಪಿಸುವದಕ್ಕೆ (ಇನ್ನು) ಬೇರೊಂದು ಪ್ರಮಾಣವೂ ಸಾಂಖ್ಯರಿಗೆ ಇರುವದಿಲ್ಲ. ಮತ್ತೊಬ್ಬ(ನಾದ ಪುರುಷ)ನ ಇರುವಿಕೆಯೆಂಬ ಇದನ್ನು ಮಾತ್ರ ನಿಮಿತ್ತವಾಗಿ ಮಾಡಿಕೊಂಡು ಪ್ರಧಾನವು ತಾನೇ ಬಂಧವನ್ನು ಪಡೆಯುತ್ತದೆ, (ತಾನೇ) ಮೋಕ್ಷ ವನ್ನೂ ಪಡೆಯುತ್ತದೆ. (ಆ) ಬೇರೆಯಾಗಿರುವ (ಪುರುಷನು) ಚೈತನ್ಯವೆಂಬು ದೊಂದೇ ಇರುವಿಕೆಯುಳ್ಳ[1] ಸ್ವರೂಪ(ವುಳ್ಳವನಾಗಿ ಅಷ್ಟ)ರಿಂದಲೇ ಪ್ರಧಾನವು ಕೆಲಸ ಮಾಡುವದಕ್ಕೆ ಕಾರಣವಾಗಿರುವನೇ ಹೊರತು (ತನ್ನಲ್ಲಿರುವ) ಯಾವದಾದರೊಂದು ವಿಶೇಷದಿಂದಲ್ಲ. ಆದ್ದರಿಂದ ಪುರುಷರು ಬೇರೆಬೇರೆಯೆಂದು (ಸಾಂಖ್ಯರು) ಕಲ್ಪಿಸಿರು ವದೂ ವೇದಾರ್ಥವನ್ನು ಬಿಟ್ಟಿರುವದೂ ಬರಿಯ ಮೂಢತನದಿಂದಲೇ (ಆಗಿರುತ್ತದೆ).

# ವೈಶೇಷಿಕಾದಿಗಳ ಖಂಡನೆ

## (ಭಾಷ್ಯ)

೧೩೭. ಯತ್[2] ತು ವೈಶೇಷಿಕಾದಯಃ ಇಚ್ಛಾದಯಃ ಆತ್ಮಸಮವಾಯಿನಃ ಇತಿ ತದಪಿ ಅಸತ್ । ಸ್ಮೃತಿಹೇತೂನಾಂ ಸಂಸ್ಕಾರಾಣಾಮ್ ಅಪ್ರದೇಶವತಿ ಆತ್ಮನಿ ಅಸಮವಾಯಾತ್ । ಆತ್ಮಮನಃಸಂಯೋಗಾಚ್ಚ ಸ್ಮೃತ್ಯುತ್ಪತ್ತೇಃ ಸ್ಮೃತಿನಿಯ ಮಾನುಪಪತ್ತಿಃ । ಯುಗಪದ್ ವಾ ಸ್ಮೃತ್ಯುತ್ಪತ್ತಿಪ್ರಸಙ್ಗಃ । ನ ಚ ಭಿನ್ನಜಾತೀ ಯಾನಾಂ ಸ್ಪರ್ಶಾದಿಹೀನಾನಾಮ್ ಆತ್ಮನಾಂ ಮನಆದಿಭಿಃ ಸಮ್ಬನ್ಧೋ ಯುಕ್ತಃ । ನ ಚ ದ್ರವ್ಯಾತ್ ರೂಪಾದಯಃ ಗುಣಾಃ ಕರ್ಮಸಾಮಾನ್ಯವಿಶೇಷಸಮವಾಯಾ ವಾ ಭಿನ್ನಾಃ ಸನ್ತಿ ಪರೇಷಾಮ್ । ಯದಿ ಹಿ ಅತ್ಯನ್ತಭಿನ್ನಾ ಏವ ದ್ರವ್ಯಾತ್ ಸ್ಯುಃ ಇಚ್ಛಾ ದಯಶ್ಚ ಆತ್ಮನಃ ತಥಾ[3] ಸತಿ ದ್ರವ್ಯೇಣ ತೇಷಾಂ ಸಮ್ಬನ್ಧಾನುಪಪತ್ತಿಃ । ಅಯುತ ಸಿದ್ಧಾನಾಂ ಸಮವಾಯಲಕ್ಷಣಃ ಸಂಬನ್ಧಃ ನ ವಿರುಧ್ಯತೇ ಇತಿ ಚೇತ್ । ನ । ಇಚ್ಛಾ ದಿಭ್ಯಃ ಅನಿತ್ಯೇಭ್ಯಃ ಆತ್ಮನಃ ನಿತ್ಯತ್ವಪ್ರಸಙ್ಗಃ । ಸ ಚ ಅನಿಷ್ಟಃ । ಆತ್ಮನಃ ಅನಿರ್ಮೋಕ್ಷಪ್ರಸಙ್ಗಾತ್ ।

1. ಪರಾರ್ಥವಾಗಿರುವದಕ್ಕೆ ಪರನು ಬೇಕು ; ಅನೇಕ ಪರರು ಬೇಕಿಲ್ಲ.

2. ‘ ಯೇ ತು ’ ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

3. ಅಚ್ಚಿನ ಪಾಠದಲ್ಲಿ ಇಲ್ಲಿ ಚ ಹೆಚ್ಚಾಗಿದೆ.

(ಭಾಷ್ಯಾರ್ಥ)

ಇನ್ನು ವೈಶೇಷಿಕರೇ ಮೊದಲಾದವರು[1] ಇಚ್ಛೆಯೇ ಮುಂತಾದವು ಆತ್ಮನಿಗೆ ಸಮವಾಯ (ಸಂಬಂಧದಿಂದ ಸೇರಿಕೊಂಡಿರುವ) ವೆಂದು ಹೇಳುವರಲ್ಲ, ಅದೂ ಸರಿಯಲ್ಲ. ಏಕೆಂದರೆ ಸ್ಮೃತಿಗೆ ಕಾರಣವಾಗಿರುವ ಸಂಸ್ಕಾರಗಳು (ಆಶ್ರಯಿಸುವದಕ್ಕೆ ಬೇಕಾದ) ಪ್ರದೇಶವಿಲ್ಲದ ಆತ್ಮನಲ್ಲಿ (ಎಂದಿಗೂ) ಸೇರಿಕೊಂಡಿರಲಾರವು. ಆತ್ಮ ಮನಸ್ಸುಗಳ ಸಂಯೋಗದಿಂದ ಸ್ಮೃತಿಯು ಹುಟ್ಟುವದಾದ್ದರಿಂದ (ಇಂಥದ್ದರ) ನೆನಪು (ಇಂಥ ಕಾಲದಲ್ಲಿಯೇ ಹುಟ್ಟಬೇಕೆಂಬ) ನಿಯಮವು ಇರಬಾರದಾಗುವದು[2]. ಅಥವಾ ಎಲ್ಲಾ ಸ್ಮೃತಿಗಳೂ ಒಟ್ಟಿಗೆ ಹುಟ್ಟಬಹುದಾಗುವದು[3]. ಇದಲ್ಲದೆ ಬೇರೆಯ ಜಾತಿಗೆ ಸೇರಿದ ಸ್ಪರ್ಶವೇ ಮುಂತಾದವುಗಳಿಲ್ಲದ ಆತ್ಮರಿಗೆ ಮನಸ್ಸು ಮುಂತಾದವುಗಳ ಸಂಬಂಧವು(ಂಟಾಗುವದೆಂಬುದು) ಸರಿಯೂ ಅಲ್ಲ[4]. (ಈ ವೈಶೇಷಿಕಾದಿ) ಪ್ರತಿ (ವಾದಿ)ಗಳ (ಮತದಲ್ಲಿ) ದ್ರವ್ಯಕ್ಕಿಂತ ಬೇರೆಯಾಗಿ ರೂಪವೇ ಮುಂತಾದ ಗುಣಗಳಾ ಗಲಿ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ–(ಇವು)ಗಳಾಗಲಿ ಇರುವಂತಿಲ್ಲ[5]. ಏಕೆಂದರೆ (ಗುಣಗಳು) ದ್ರವ್ಯಕ್ಕಿಂತಲೂ ಇಚ್ಛಾದಿಗಳು ಆತ್ಮನಿಗಿಂತಲೂ ಅತ್ಯಂತವಾಗಿ ಬೇರೆಯೇ ಆಗಿದ್ದರೆ, ಹಾಗಾದರೆ ಅವುಗಳಿಗೆ ದ್ರವ್ಯದೊಡನೆ ಸಂಬಂಧ (ವೆಂಬುದೇ) ಹೊಂದುವದಿಲ್ಲ. ಅಯುತಸಿದ್ಧವಾಗಿರುವ[6] (ಪದಾರ್ಥಗಳಿಗೆ) **ಸಮವಾಯ**ವೆಂಬ ಸಂಬಂಧವು(ಂಟಾಗುವದು) ವಿರುದ್ಧವಲ್ಲವಲ್ಲ !–ಎಂದು (ವೈಶೇಷಿಕರು ಶಂಕಿಸ

1. ಆತ್ಮನಲ್ಲಿ ಇಚ್ಛಾದಿಗಳು ಸತ್ಯವಾಗಿರುವವೆಂದು ಒಪ್ಪುವ ಪಾಶುಪತರೇ ಮುಂತಾದವರನ್ನೂ ಇಲ್ಲಿ ತೆಗೆದುಕೊಂಡಿದೆ. ಗೀ. ಭಾ. ೧೩–೬ ನೋಡಿ.

2. ಜ್ಞಾನವು ಉಂಟಾಗುವದಕ್ಕೆ ಆತ್ಮಮನಸ್ಸುಗಳಿಗೆ ಸಂಯೋಗವಾಗಲೇ ಬೇಕೆಂಬುದು ವೈಶೇಷಿಕರ ಮತ. ಸ್ಮೃತಿಯೂ ಜ್ಞಾನವಾದ್ದರಿಂದಲೂ ಅನುಭವವುಂಟಾಗು ವಾಗಲೂ ಆತ್ಮಮನಃಸಂಯೋಗವಾಗುವದೆಂದು ಆ ವಾದಿಗಳು ಒಪ್ಪುವರಾದ್ದರಿಂದಲೂ ಅನುಭವವಿರುವಾಗಲೂ ಸ್ಮೃತಿಯುಂಟಾಗಬಹುದಾಗುವದು. ಇದೂ ಅನುಭವವಿರುದ್ಧ.

3. ಒಂದೇ ಸಂಯೋಗದಿಂದ ಎಲ್ಲಾ ನೆನಪುಗಳೂ ಹುಟ್ಟಬಹುದಾಗುವದು.

4. ಆತ್ಮನಲ್ಲಿ ಸ್ಪರ್ಶಾದಿಗಳಿಲ್ಲ, ಅವಯವಗಳಿಲ್ಲ; ಮನಸ್ಸು ಮುಂತಾದವುಗಳಿಗಿವೆ. ಆದ್ದರಿಂದ ಆತ್ಮನೆಂಬ ದ್ರವ್ಯವು ಬೇರೆಯ ಜಾತಿಯದಾಯಿತು.

5. ದ್ರವ್ಯ, ಗುಣ, ಕರ್ಮ, ಸಾಮಾನ್ಯ, ವಿಶೇಷ, ಸಮವಾಯ–ಎಂಬ ಆರು ಭಾವ ಪದಾರ್ಥಗಳನ್ನು ವೈಶೇಷಿಕರು ಒಪ್ಪಿರುತ್ತಾರೆ. ಇವುಗಳಲ್ಲಿ ದ್ರವ್ಯಕ್ಕೆ ಮಿಕ್ಕವು ಅಧೀನ ವೆಂದೂ ಒಪ್ಪಿ ಅದಕ್ಕಿಂತ ಬೇರೆಯೆಂದೂ ಒಪ್ಪಿರುವದು ಯುಕ್ತಿವಿರುದ್ಧವೆಂದರ್ಥ. ಸೂ. ಭಾ. ೨–೨–೧೭ ನೋಡಿ.

6. ನಿತ್ಯಸಂಬಂಧಕ್ಕೆ ತಕ್ಕವಾಗಿರುವ ಪದಾರ್ಥಗಳು ಅಯುತಸಿದ್ಧಗಳು.

ಬಹುದು). (ಆದರೆ) ಹಾಗಲ್ಲ. (ಏಕೆಂದರೆ) ಇಚ್ಛೆಯೇ ಮುಂತಾದವು ಅನಿತ್ಯ(ವಾಗಿರುವದರಿಂದ ಅವು)ಗಳೊಡನೆ ನಿತ್ಯನಾಗಿರುವ ಆತ್ಮನಿಗೆ ಅಯುತಸಿದ್ಧತ್ವವು ಹೊಂದುವಹಾಗಿಲ್ಲ; ಏಕೆಂದರೆ ಅವನು ಮೊದಲೇ ಸಿದ್ಧನಾಗಿರುತ್ತಾನೆ[1]. ಇಚ್ಛಾದಿಗಳು ಆತ್ಮನೊಡನೆ ಅಯುತಸಿದ್ಧ(ನಾಗಿರುವ)ವೆಂದರೆ ಆತ್ಮನಲ್ಲಿರುವ ಮಹತ್ತ್ವ(ವೆಂಬ ಗುಣದಂತೆ[2] ಅವೂ) ನಿತ್ಯವಾಗಬೇಕಾಗುವದು. ಆದರೆ ಅದು (ಯಾರಿಗೂ) ಇಷ್ಟವಲ್ಲ[3]; ಏಕೆಂದರೆ (ಆಗ) ಆತ್ಮನಿಗೆ ಮೋಕ್ಷವೇ ಇಲ್ಲವೆಂದಾಗಬೇಕಾಗುತ್ತದೆ[4].

(ಭಾಷ್ಯ)

೧೩೮. ಸಮವಾಯಸ್ಯ ಚ ದ್ರವ್ಯಾತ್ ಅನ್ಯತ್ವೇ ಸತಿ ದ್ರವ್ಯೇಣ ಸಂಬನ್ಧಾನ್ತರಂ ವಾಚ್ಯಮ್ । ಯಥಾ ದ್ರವ್ಯಗುಣಯೋಃ । ಸಮವಾಯಃ ನಿತ್ಯಸಂಬನ್ಧ ಏವ ಇತಿ ನ ವಾಚ್ಯಮ್ ಇತಿ ಚೇತ್ । ತಥಾ ಚ ಸಮವಾಯಸಂಬನ್ಧವತಾಂ ನಿತ್ಯಸಂಬನ್ಧಪ್ರಸಙ್ಗಾತ್ ಪೃಥಕ್ತ್ವಾನುಪಪತ್ತಿಃ । ಅತ್ಯನ್ತಪೃಥಕ್ತ್ವೇ ಚ ದ್ರವ್ಯಾದೀನಾಂ ಸ್ಪರ್ಶವದಸ್ಪರ್ಶ(ವದ್)[5] ದ್ರವ್ಯಯೋರಿವ ಷಷ್ಠ್ಯರ್ಥಾನುಪಪತ್ತಿಃ । ಇಚ್ಛಾದ್ಯುಪಜನಾಪಾಯವದ್ಗುಣವತ್ತ್ವೇ ಚ ಆತ್ಮನಃ ಅನಿತ್ಯತ್ವಪ್ರಸಙ್ಗಃ । ದೇಹಫಲಾದಿವತ್ । ಸಾವಯವತ್ವಂ ವಿಕ್ರಿಯಾವತ್ತ್ವಂ ಚ ದೇಹಾದಿವದೇವ ಇತಿ ದೋಷೌ ಅಪರಿಹಾರ್ಯೌ । ಯಥಾ ತು ಆಕಾಶಸ್ಯ ಅವಿದ್ಯಾಧ್ಯಾರೋಪಿತಘಟಾದ್ಯುಪಾಧಿಕೃತರಜೋಧೂಮಮಲವತ್ತ್ವಾದಿದೋಷವತ್ತ್ವಮ್,[6] ತಥಾ ಆತ್ಮನಃ ಅವಿದ್ಯಾಧ್ಯಾರೋಪಿತಬುದ್ಧ್ಯಾದ್ಯುಪಾಧಿಕೃತಸುಖದುಃಖಾದಿದೋಷವತ್ತ್ವೇ ಬನ್ಧಮೋಕ್ಷಾದಯಃ

1. ಯುತಸಿದ್ಧವೆಂದರೆ ಬೇರೆಬೇರೆಯ ಕಾಲದಲ್ಲಿ, ಬೇರೆಬೇರೆಯ ಕಡೆಯಲ್ಲಿ ಸ್ವತಂತ್ರವಾಗಿರುವದು; ಹಾಗಿಲ್ಲದ್ದು **ಅಯುತಸಿದ್ಧವು.** ಆತ್ಮನು ಮೊದಲೇ ಇದ್ದು ಇಚ್ಛಾದಿಗಳು ಆಮೇಲೆ ಉಂಟಾಗುವದರಿಂದ ಅವು ಯುತಸಿದ್ಧ.

2. ಆತ್ಮನಲ್ಲಿ ಮಹತ್ವವೆಂಬ ಪರಿಮಾಣವು ನಿತ್ಯವಾಗಿರುವದೆಂದು ವೈಶೇಷಿಕರು ಇಟ್ಟುಕೊಂಡಿರುತ್ತಾರೆ.

3. ಏಕೆಂದರೆ ಅದು ಅನುಭವವಿರುದ್ಧ.

4. ಇಚ್ಛಾದಿಗಳು ಹೋಗುವದೇ ಮೋಕ್ಷವಾದ್ದರಿಂದ ಅವು ಹೋಗದಿದ್ದರೆ ಮೋಕ್ಷವಿಲ್ಲವಾಗುವದು.

5. 'ಅಸ್ಪರ್ಶವದ್ದ್ರವ್ಯ' ಎಂದೇ ಆಚಾರ್ಯರು ಬರೆದಿರಬಹುದು.

6. ಈ ವಾ॥ ಕಾ॥ ಪಾಠವು "ಅವಿದ್ಯಾಧ್ಯಾರೋಪಿತರಜೋಧೂಮಮಲತ್ವಾದಿದೋಷವತ್ತ್ವಮ್" ಎಂಬ ಅ॥ ಪಾಠಕ್ಕಿಂತ ಮೇಲು.

ವ್ಯಾವಹಾರಿಕಾಃ ನ ವಿರುಧ್ಯನ್ತೇ। ಸರ್ವವಾದಿಭಿಃ ಅವಿದ್ಯಾಕೃತವ್ಯವಹಾರಾಭ್ಯುಪಗಮಾತ್, ಪರಮಾರ್ಥಾನಭ್ಯುಪಗಮಾಚ್ಚ । ತಸ್ಮಾತ್ ಆತ್ಮಭೇದಪರಿಕಲ್ಪನಾ ವೃಥೈವ ತಾರ್ಕಿಕೈಃ ಕ್ರಿಯತೇ ಇತಿ ||

(ಭಾಷ್ಯಾರ್ಥ)

ಇದಲ್ಲದೆ ಸಮವಾಯವು ದ್ರವ್ಯಕ್ಕಿಂತ ಬೇರೆಯಾದರೆ ದ್ರವ್ಯಕ್ಕೂ (ಅದಕ್ಕೂ) ದ್ರವ್ಯಗುಣಗಳಿಗಿರುವಂತೆ ಮತ್ತೊಂದು ಸಂಬಂಧವನ್ನು ಹೇಳಬೇಕಾಗುವದು[1]. ಸಮವಾಯವು ನಿತ್ಯಸಂಬಂಧವೇ ಆಗಿರುವದರಿಂದ (ಅದಕ್ಕೆ ಬೇರೆ ಸಂಬಂಧವನ್ನು) ಹೇಳಬೇಕಾದದ್ದಿರುವದಿಲ್ಲವಲ್ಲ !–ಎಂದು (ಪೂರ್ವಪಕ್ಷಿ ಕೇಳಬಹುದು). ಹಾಗಾದರೆ ಸಮವಾಯಸಂಬಂಧವುಳ್ಳ (ಪದಾರ್ಥಗಳಿಗೆ) ನಿತ್ಯಸಂಬಂಧವಿರಬೇಕಾಗುವದರಿಂದ ಅವು ಬೇರೆಬೇರೆ ಎಂಬುದು ಹೊಂದುವದಿಲ್ಲ[2]. ದ್ರವ್ಯಾದಿಗಳು ಬೇರೆಬೇರೆಯೇ ಆಗಿದ್ದರೆ ಸ್ಪರ್ಶವುಳ್ಳ (ದ್ರವ್ಯ), ಸ್ಪರ್ಶವಿಲ್ಲದ ದ್ರವ್ಯ (–ಇವು)ಗಳಿಗೆ ಹೇಗೆ (ಸಂಬಂಧವಿರಲಾರದೋ ಹಾಗೆ) ಷಷ್ಠ್ಯರ್ಥವು[3] ಹೊಂದುವದಿಲ್ಲ. ಇಚ್ಛೆಯೇ ಮುಂತಾದ ಹುಟ್ಟುವದು, ಹೋಗುವದು–ಎಂಬ (ಸ್ವಭಾವ)ವುಳ್ಳ ಗುಣವುಳ್ಳವನಾದರೆ ಆತ್ಮನು ಅನಿತ್ಯನೂ ಆಗಬೇಕಾಗುವದು[4]. ದೇಹ, ಹಣ್ಣು–ಮುಂತಾದವುಗಳಂತೆಯೇ (ಇದನ್ನರಿಯಬೇಕು). (ಇದೇ) ದೇಹಾದಿಗಳಂತೆಯೇ (ಆತ್ಮನಿಗೆ) ಅವಯವಗಳುಳ್ಳವನಾಗುವಿಕೆ, ವಿಕಾರಾದಿಗಳಿರುವವನಾಗುವಿಕೆ–ಎಂಬ ದೋಷಗಳೂ (ಉಂಟಾಗುವದನ್ನು) ಪರಿಹರಿಸಿಕೊಳ್ಳುವನಕ್ಕೆ ಆಗುವದಿಲ್ಲ[5].

---

1. ದ್ರವ್ಯಗುಣಗಳು ; ದ್ರವ್ಯಕ್ರಿಯೆಗಳು ; ಜಾತಿವ್ಯಕ್ತಿಗಳು–ಇವುಗಳಿಗೆ ಸಮವಾಯ ಸಂಬಂಧವಿದೆಯೆಂದೂ ಅವು ಬೇರೆಬೇರೆಯ ಪದಾರ್ಥಗಳೆಂದೂ ವೈಶೇಷಿಕರ ಅಂಗೀಕಾರವು.

2. ಸಮವಾಯವೆಂಬ ಸಂಬಂಧವೇ ಸಿದ್ಧಿಸುವದಿಲ್ಲವೆಂಬುದನ್ನು ಸೂ. ಭಾ. ೨–೨–೧೩ ರಲ್ಲಿ ಖಂಡಿಸಿದೆ.

3. ಸಂಬಂಧವು.

4. ಇದಕ್ಕೆ ಹೇತುವನ್ನು ಮುಂದಿನ ವಾಕ್ಯದಲ್ಲಿ ಕೊಟ್ಟಿದೆ.

5. ದೇಹ, ಹಣ್ಣು–ಇವುಗಳಲ್ಲಿ ಬೇರೆಬೇರೆಯ ಗುಣಗಳು ಹುಟ್ಟಿ ಹೋಗುತ್ತಿರುವವು; ಅವು ಸಾವಯವವೂ ಅನಿತ್ಯವೂ ಆಗಿವೆ. ಇದರಂತೆ ಎಲ್ಲೆಲ್ಲಿಯೂ ಇರುವದು ಅನುಭವದಲ್ಲಿದೆ.

**ಆದರೆ ಆಕಾಶದಲ್ಲಿ ತಪ್ಪುತಿಳಿವಳಿಕೆಯಿಂದ ಹುಟ್ಟುಗಟ್ಟಿದ ಗಡಿಗೆಯೇ ಮುಂತಾದ ಉಪಾಧಿಗಳಿಂದಾದ ಧೂಳು, ಹೊಗೆ, ಕಪ್ಪು-ಮುಂತಾದವುಗಳಿರುವವೆಂಬ ದೋಷಗಳು ಹೇಗೆ ಇರುವವೋ ಹಾಗೆ ಆತ್ಮನಲ್ಲಿ ಅವಿದ್ಯೆಯಿಂದ ಹುಟ್ಟುಗಟ್ಟಿದ, ಬುದ್ಧಿಯೇ ಮುಂತಾದ ಉಪಾಧಿಗಳಿಂದಾದ ಸುಖ, ದುಃಖ-ಮುಂತಾದ ದೋಷಗಳಿರುವವೆಂಬ (ಪಕ್ಷ)ದಲ್ಲಿ ಬಂಧ, ಮೋಕ್ಷ-ಮುಂತಾದವುಗಳು ವ್ಯಾವಹಾರಿಕ(ವಾಗಿರುವದು) ವಿರುದ್ಧವಾಗುವದಿಲ್ಲ. ಏಕೆಂದರೆ ಎಲ್ಲಾ ವಾದಿಗಳೂ ಅವಿದ್ಯೆಯಿಂದಾದ ವ್ಯವಹಾರವನ್ನು ಒಪ್ಪಿರುತ್ತಾರೆ, ನಿಜವಾಗಿ (ಆ ವ್ಯವಹಾರದಂತೆ ಇರುವವೆಂದು ಯಾರೂ) ಒಪ್ಪುವದಿಲ್ಲ[1].**

ಆದ್ದರಿಂದ ಆತ್ಮರು ಬೇರೆಬೇರೆ ಎಂದು ತಾರ್ಕಿಕರು ಕಲ್ಪಿಸಿರುವದು ವ್ಯರ್ಥವಾಗಿರುತ್ತದೆ ಎಂದಾಯಿತು[2].

## ಅವಿದ್ಯಾಕೃತವ್ಯವಹಾರಕ್ಕೆ ದೃಷ್ಟಾಂತ

**(ಭಾಷ್ಯ)**

೧೩೯. ಕಥಂ ಪುನಃ ಆತ್ಮಭೇದನಿಮಿತ್ತ ಇವ ವ್ಯವಹಾರಃ ಏಕಸ್ಮಿನ್ ಆತ್ಮನಿ ಅವಿದ್ಯಾಕೃತಃ ಉಪಪದ್ಯತೇ ಇತಿ ? ಉಚ್ಯತೇ—

**(ಭಾಷ್ಯಾರ್ಥ)**

(ಪ್ರಶ್ನೆ) :—ಆತ್ಮರು ಬೇರೆಬೇರೆಯಾಗಿರುವ ನಿಮಿತ್ತದಿಂದಾದ ವ್ಯವಹಾರದಂತಿರುವದೇ ಆತ್ಮನು ಒಬ್ಬನೇ (ಎಂಬ ಪಕ್ಷ)ದಲ್ಲಿ ಅವಿದ್ಯೆಯಿಂದಾದದ್ದು (ಎಂದರೂ) ಹೊಂದುತ್ತದೆ ಎಂಬುದಾದರೂ ಹೇಗೆ ?[3]

(ಉತ್ತರ) :—ಹೇಳುತ್ತೇವೆ :

---

1. ಜನರು ದೇಹಧರ್ಮವನ್ನು ಆತ್ಮನಿಗೆ ಆದಂತೆ ವ್ಯವಹರಿಸುತ್ತಾರೆ; ಇದು ಮಿಥ್ಯಾಜ್ಞಾನಕೃತವೆಂದು ತಾರ್ಕಿಕರೂ ಒಪ್ಪುತ್ತಾರೆ. ಇದರಂತೆ ಅದ್ವಿತೀಯಾತ್ಮನಲ್ಲಿಯೂ ಅವಿದ್ಯೆಯಿಂದ ಬಂಧಮೋಕ್ಷಾದಿಗಳನ್ನು ಒಪ್ಪಿದರೆ ದೋಷವೇನೂ ಇಲ್ಲ.

2. ಸೂ. ಭಾ. ೨-೩-೪೯, ೫೦ ರಲ್ಲಿ ಇದೇ ಚರ್ಚೆಯನ್ನು ಮಾಡಿರುತ್ತದೆ. ತಾರ್ಕಿಕರ ಮತದಲ್ಲಿಯೇ ಈ ದೋಷವನ್ನು ಅಲ್ಲಿ ತೋರಿಸಿರುತ್ತದೆ.

3. ಆತ್ಮರುಗಳಲ್ಲಿ ರೂಪಭೇದ, ಕಾರ್ಯಭೇದ, ನಾಮಭೇದ-ಎಂಬ ವ್ಯವಹಾರವೆಲ್ಲವೂ ತಪ್ಪುತಿಳಿವಳಿಕೆಯಿಂದಲೇ ಆಗಿದೆ ಎಂಬುದಕ್ಕೆ ದೃಷ್ಟಾಂತವಿದೆಯೆ ?

**ರೂಪಕಾರ್ಯಸಮಾಖ್ಯಾಶ್ಚ ಭಿದ್ಯನ್ತೇ ತತ್ರ ತತ್ರ ವೈ ।**
**ಆಕಾಶಸ್ಯ ನ ಭೇದೋಽಸ್ತಿ ತದ್ವಜ್ಜೀವೇಷು ನಿರ್ಣಯಃ ॥ ೬ ॥**

೬. ಮತ್ತು ರೂಪ, ಕಾರ್ಯ, ಹೆಸರು–ಇವುಗಳು ಹೇಗೆ ಅಲ್ಲಲ್ಲಿ ಬೇರಬೇರೆಯಾಗಿರುವವೋ, (ಆದರೆ) ಆಕಾಶಕ್ಕೆ ಹೇಗೆ ಭೇದವಿರುವದಿಲ್ಲವೋ ಅದರಂತೆ ಜೀವರುಗಳ (ವಿಷಯದಲ್ಲಿಯೂ) ನಿರ್ಣಯವು.

(ಭಾಷ್ಯ)

೧೪೦. ಯಥಾ ಇಹ ಆಕಾಶೇ ಏಕಸ್ಮಿನ್ ಘಟಕರಕಾಪವರಕಾದ್ಯಾಕಾಶಾನಾಮ್ ಅಲ್ಪತ್ವಮಹತ್ತ್ವಾದಿರೂಪಾಣಿ ಭಿದ್ಯನ್ತೇ । ತಥಾ ಕಾರ್ಯಮ್ ಉದಕಾಹರಣಧಾರಣಶಯನಾದಿ । ಸಮಾಖ್ಯಾಶ್ಚ ಘಟಾಕಾಶಃ ಕರಕಾಕಾಶಃ[1] ಇತ್ಯಾದ್ಯಾಃ ತತ್ಕೃತಾಶ್ಚ ಭಿನ್ನಾ ದೃಶ್ಯನ್ತೇ । ತತ್ರ ತತ್ರ ವೈ ವ್ಯವಹಾರವಿಷಯೇ ಇತ್ಯರ್ಥಃ । ಸರ್ವೋಽಯಮ್ ಆಕಾಶೇ ರೂಪಾದಿಭೇದಕೃತಃ ವ್ಯವಹಾರಃ ನ ಪರಮಾರ್ಥ[2] ಏವ । ಪರಮಾರ್ಥತಸ್ತು ಆಕಾಶಸ್ಯ ನ ಭೇದಃ ಅಸ್ತಿ । ನ ಚ ಆಕಾಶಭೇದನಿಮಿತ್ತಃ ವ್ಯವಹಾರಃ ಅಸ್ತಿ, ಅನ್ತರೇಣ ಪರೋಪಾಧಿಕೃತಂ ದ್ವಾರಮ್ । ಯಥಾ ಏತತ್, ತದ್ವತ್ ದೇಹೋಪಾಧಿಭೇದಕೃತೇಷು ಜೀವೇಷು ಘಟಾಕಾಶಸ್ಥಾನೀಯೇಷು ಆತ್ಮಸು ನಿರೂಪಣಾತ್ ಕೃತಃ ಬುದ್ಧಿಮದ್ಭಿಃ ನಿರ್ಣಯಃ ನಿಶ್ಚಯಃ ಇತ್ಯರ್ಥಃ ॥

(ಭಾಷ್ಯಾರ್ಥ)

ಹೇಗೆ ಈ (ಲೋಕ)ದಲ್ಲಿ ಒಂದೇ ಆಗಿರುವ ಆಕಾಶದಲ್ಲಿ ಗಡಿಗೆ, ಕುಡಿಕೆ, ಮನೆ–ಮುಂತಾದ ಬಯಲುಗಳಲ್ಲಿ (ಒಂದು) ಸಣ್ಣದು, (ಇನ್ನೊಂದು) ದೊಡ್ಡದು–ಎಂದು ಮುಂತಾಗಿ ರೂಪಗಳು ಬೇರೆಬೇರೆಯಾಗಿರುವವೋ; ಹಾಗೂ ನೀರನ್ನು ತರುವದು, (ಅದನ್ನು) ಇಟ್ಟುಕೊಳ್ಳುವದು, ಮಲಗುವದು–ಮುಂತಾದ ಕಾರ್ಯವು (ಇವುಗಳಲ್ಲಿ ಹೇಗೆ) ಬೇರೆಬೇರೆಯಾಗಿರುವದೋ; ಮತ್ತು ಗಡಿಗೆಯ ಆಕಾಶ, ಕುಡಿಕೆಯ ಆಕಾಶ–ಎಂದು ಮುಂತಾದ ಅವುಗಳಿಂದಾದ ಹೆಸರುಗಳೂ ಬೇರೆಬೇರೆಯಾಗಿ ಕಂಡುಬರುವವೋ ಅಲ್ಲಲ್ಲಿ ಎಂದರೆ (ಆಯಾ) ವ್ಯವಹಾರದ ವಿಷಯದಲ್ಲಿ (ಹೇಗೆ ಈ ಭೇದಗಳು ಕಂಡುಬರುವವೋ) ಎಂದರ್ಥ. ರೂಪವೇ ಮುಂತಾದವುಗಳು[3]

---

1. ' ಘಟಾಕಾಶಕರಕಾಕಾಶ ' ಅ॥ಕಾ॥ವ್ಯೆ॥

2. ' ಅಪರಮಾರ್ಥ ಏವ ' ವಾ॥

3. ವ್ಯಾಕೃತಜಗತ್ತೆಲ್ಲವೂ ಅವಿವ್ಯಾಕೃತವಾದ ನಾಮರೂಪಕರ್ಮಮಯವೆಂಬುದನ್ನು ಬೃ. ಭಾ. ೧–೬–೧ ರಲ್ಲಿ ಕಾಣಬಹುದು.

ಬೇರೆಬೇರೆಯಾಗಿರುವದರಿಂದಾದ ಈ ವ್ಯವಹಾರವೆಲ್ಲ ನಿಜವೇ ಆಗಿರುವದಿಲ್ಲ ; ನಿಜವಾಗಿ ನೋಡಿದರೆ ಆಕಾಶಕ್ಕೆ ಭೇದವೇ ಇರುವದಿಲ್ಲ, ಆಕಾಶವು ಬೇರೆಬೇರೆಯಾಗಿರುವದರಿಂದಾದ ವ್ಯವಹಾರ(ವೆಂಬುದೂ) ಮತ್ತೊಂದು ಉಪಾಧಿಯಿಂದಾದ ವ್ಯವಹಾರವನ್ನು ಬಿಟ್ಟರೆ (ನಿಜವಾಗಿ) ಇರುವದೇ ಇಲ್ಲ. ಇದು ಹೇಗೋ ಹಾಗೆಯೇ ದೇಹಾದಿಗಳೆಂಬ ಬೇರೆಬೇರೆಯ ಉಪಾಧಿಗಳಿಂದ ಆಗಿರುವ ಘಟಾಕಾಶದಂತೆ ಇದ್ದುಕೊಂಡಿರುವ[1] ಜೀವರುಗಳಲ್ಲಿಯೂ ಚೆನ್ನಾಗಿ ನೋಡಿ ಬುದ್ಧಿವಂತರು ನಿರ್ಣಯವನ್ನು ನಿಶ್ಚಯವನ್ನು ಮಾಡಿಕೊಂಡಿರುವರು[2] ಎಂದರ್ಥ.

(ಭಾಷ್ಯ)

೧೪೧. ನನು ತತ್ರ ಪರಮಾರ್ಥಕೃತ ಏವ ಘಟಾಕಾಶಾದಿಷು ರೂಪಕಾರ್ಯಾದಿಭೇದವ್ಯವಹಾರಃ ಇತಿ ? ನೈತದಸ್ತಿ । ಯಸ್ಮಾತ್—

(ಭಾಷ್ಯಾರ್ಥ)

(ಆಕ್ಷೇಪ) :—ಆ (ದೃಷ್ಟಾಂತವಲ್ಲಿ) ಗಡಿಗೆಯ ಆಕಾಶವೇ ಮುಂತಾದವುಗಳಲ್ಲಿ ರೂಪ, ಕಾರ್ಯ-ಮುಂತಾದ ಭೇದವ್ಯವಹಾರವು ನಿಜವಾಗಿ ಆಗಿರುವದೇ ಅಲ್ಲವೆ ?

(ಪರಿಹಾರ) :—ಇದು (ಸರಿ)ಯಲ್ಲ. ಏಕೆಂದರೆ :

**ನಾಕಾಶಸ್ಯ ಘಟಾಕಾಶೋ ವಿಕಾರಾವಯವೌ ಯಥಾ ।**
**ನೈವಾತ್ಮನಃ ಸದಾ ಜೀವೋ ವಿಕಾರಾವಯವೌ ತಥಾ ॥ ೭ ॥**

೭. ಗಡಿಗೆಯ ಆಕಾಶವು ಹೇಗೆ ಆಕಾಶದ ವಿಕಾರಾವಯವಗಳಲ್ಲವೋ ಹಾಗೆ ಜೀವನು ಎಂದಿಗೂ ಆತ್ಮನ ವಿಕಾರಾವಯವಗಳಲ್ಲ.

(ಭಾಷ್ಯ)

೧೪೨. ಪರಮಾರ್ಥಾಕಾಶಸ್ಯ ಘಟಾಕಾಶಃ ನ ವಿಕಾರಃ । ಯಥಾ ಸುವರ್ಣಸ್ಯ ರುಚಕಾದಿಃ, ಯಥಾ ವಾ ಅಪಾಂ ಫೇನಬುದ್ಬುದಹಿಮಾದಿಃ । ನಾಪಿ ಅವಯವಃ, ಯಥಾ ವೃಕ್ಷಸ್ಯ ಶಾಖಾದಿಃ । ನ[3] ಆಕಾಶಸ್ಯ ಘಟಾಕಾಶಃ ವಿಕಾರಾವಯವೌ ಯಥಾ

1. ಸೂ. ಭಾ. ೨-೧-೧೪ ರಲ್ಲಿ ಕೊಟ್ಟಿರುವ ಜೀವೇಶ್ವರವಿಭಾಗವರ್ಣನೆಯನ್ನು ನೋಡಿ.

2. ಒಬ್ಬ ಆತ್ಮನಲ್ಲಿಯೇ ಅನೇಕತ್ವ ಭ್ರಾಂತಿಯಾಗಬಹುದೆಂದು ನಿಶ್ಚಯಿಸಿಕೊಂಡಿರುತ್ತಾರೆ-ಎಂದರ್ಥ.

3. ' ತಥಾ ' ಎಂದು ಅಚ್ಚಿನಪುಸ್ತಕಗಳಲ್ಲಿರುವದು ಹೆಚ್ಚು.

ತಥಾ ನೈವ ಆತ್ಮನಃ ಪರಸ್ಯ ಪರಮಾರ್ಥಸತಃ ಮಹಾಕಾಶಸ್ಥಾನೀಯಸ್ಯ ಘಟಾಕಾಶಸ್ಥಾನೀಯಃ ಜೀವಃ ಸದಾ ಸರ್ವದಾ ಯಥೋಕ್ತದೃಷ್ಟಾನ್ತವತ್ ನ ವಿಕಾರಃ, ನಾಪಿ ಅವಯವಃ । ಅತಃ ಆತ್ಮಭೇದಕೃತೋ ವ್ಯವಹಾರಃ ಮೃಷೈವ ಇತ್ಯರ್ಥಃ ॥

(ಭಾಷ್ಯಾರ್ಥ)

ಗಡಿಗೆಯ ಆಕಾಶವು ನಿಜವಾಗಿರುವ ಆಕಾಶದ ವಿಕಾರವಲ್ಲ[1]. ಹೇಗೆ ಅಸಲಿ ಮುಂತಾದದ್ದು ಚಿನ್ನದ (ವಿಕಾರವೋ), ಅಥವಾ ಹೇಗೆ ನೀರಿಗೆ ನೊರೆ, ಗುಳ್ಳೆ, ಮಂಜು-ಮುಂತಾದದ್ದು (ವಿಕಾರವೋ ಹಾಗೆ ವಿಕಾರವಲ್ಲ). ಮರಕ್ಕೆ ಕೊಂಬೆ ಮುಂತಾದದ್ದು ಹೇಗೆ (ಅವಯವವೋ ಹಾಗೆ) ಅವಯವವೂ ಅಲ್ಲ. (ಹೇಗೆ)ಗಡಿಗೆಯ ಆಕಾಶವು (ನಿಜವಾಗಿರುವ) ಬಯಲಿನ ವಿಕಾರಾವಯವಗಳು ಹೇಗಲ್ಲವೋ, ಹಾಗೆ ಮಹಾಕಾಶದಂತೆ ಇರುವ ಪರಮಾತ್ಮನಿಗೆ ಘಟಾಕಾಶದಂತೆ ಇರುವ ಜೀವನು ಎಂದಿಗೂ ಯಾವಾಗಲೂ ಈ ಹೇಳಿದ ದೃಷ್ಟಾಂತದಂತೆ ವಿಕಾರವಲ್ಲ, ಅವಯವವೂ[1] ಅಲ್ಲ. ಆದ್ದರಿಂದ ಆತ್ಮರು ಬೇರೆ ಬೇರೆಯೆಂದು (ಇಟ್ಟುಕೊಂಡದ್ದ)ರಿಂದಾಗಿರುವ ವ್ಯವಹಾರವು **ಹುಸಿಯೇ ಎಂದರ್ಥ.**

## ಜೀವನ ಸಂಸಾರವು ಪರಮಾರ್ಥವಲ್ಲ.

(ಭಾಷ್ಯ)

೧೪೩. ಯಸ್ಮಾತ್ ಯಥಾ ಘಟಾಕಾಶಾದಿಭೇದಬುದ್ಧಿನಿಬನ್ಧನಃ ರೂಪಕಾರ್ಯಾದಿಭೇದವ್ಯವಹಾರಃ ತಥಾ ದೇಹೋಪಾಧಿಜೀವಭೇದಕೃತಃ ಜನ್ಮಮರಣಾದಿವ್ಯವಹಾರಃ, ತಸ್ಮಾತ್ ತತ್ಕೃತಮೇವ ಕ್ಲೇಶಕರ್ಮಫಲಮಲವತ್ತ್ವಮಾತ್ಮನಃ ನ ಪರಮಾರ್ಥತಃ ಇತಿ ಏತಮರ್ಥಂ ದೃಷ್ಟಾನ್ತೇನ ಪ್ರತಿಪಿಪಾದಯಿಷನ್ ಆಹ—

(ಭಾಷ್ಯಾರ್ಥ)

ಹೇಗೆ ಗಡಿಗೆಯ ಆಕಾಶವೇ ಮುಂತಾದವು ಬೇರೆಬೇರೆ ಎಂಬ ಬುದ್ಧಿಯ ನಿಮಿತ್ತದಿಂದಲೇ (ಅವುಗಳ) ರೂಪ, ಕಾರ್ಯ—ಮುಂತಾದ ಭೇದವ್ಯವಹಾರ(ವಾಗು)

1. ಕಾರ್ಯವಲ್ಲ; ಪರಿಣಾಮವಲ್ಲ.

2. ಸೂ. ಭಾ. ೪-೩-೧೩; ಬೃ. ಭಾ. ೨-೧-೨೦ ಇವುಗಳಲ್ಲಿಯೂ ವಿಕಾರಾವಯವ ಪಕ್ಷಗಳನ್ನು ಖಂಡಿಸಿದೆ; ಆದ್ದರಿಂದ ಈ ಪಕ್ಷಗಳನ್ನು ಕೆಲವರು ವೇದಾಂತಿಗಳು ಅವಲಂಬಿಸಿದ್ದರೆಂದು ನಂಬಬೇಕಾಗಿದೆ. ಸೂ. ಭಾ. ೨-೩-೪೩ ನ್ನೂ ನೋಡಿ.

ವದೋ ಹಾಗೆ ದೇಹಗಳೆಂಬ ಉಪಾಧಿಯಿಂದಾದ ಜೀವರು ಬೇರೆಯೆಂಬ (ಬುದ್ಧಿ)ಯಿಂದಾದದ್ದು (ಜೀವರ) ಹುಟ್ಟು, ಸಾವು-ಮುಂತಾದ ವ್ಯವಹಾರವಷ್ಟೆ. ಆದ್ದರಿಂದ ಕ್ಲೇಶ, ಕರ್ಮ, ಫಲ-ಎಂಬ ಮಲವು[1] ಆತ್ಮನಲ್ಲಿ ಆ (ಅವಿದ್ಯಾವ್ಯವಹಾರ)ದಿಂದಲೇ ಆದದ್ದು, ನಿಜವಾಗಿ (ಅದು) ಅವನಲ್ಲಿಲ್ಲ-ಎಂಬೀ ವಿಷಯವನ್ನು ದೃಷ್ಟಾಂತದಿಂದ ತಿಳಿಸಿಕೊಡುವದಕ್ಕಾಗಿ (ಹೀಗೆಂದು ಹೇಳುತ್ತಾರೆ :—

**ಯಥಾ ಭವತಿ ಬಾಲಾನಾಂ ಗಗನಂ ಮಲಿನಂ ಮಲೈಃ ।**
**ತಥಾ ಭವತ್ಯಬುದ್ಧಾನಾಮಾತ್ಮಾಽಪಿ ಮಲಿನೋ ಮಲೈಃ ॥ ೮ ॥**

೮. ಹೇಗೆ ಗಗನವು ಹುಡುಗರಿಗೆ ಮಲಗಳಿಂದ ಮಲಿನವಾಗಿರುವದೋ, ಹಾಗೆ ಅಬುದ್ಧರಿಗೆ ಆತ್ಮನೂ ಮಲಗಳಿಂದ ಮಲಿನವಾಗಿರುತ್ತಾನೆ.

(ಭಾಷ್ಯ)

೧೪೪. ಯಥಾ ಭವತಿ ಲೋಕೇ ಬಾಲಾನಾಮ್ ಅವಿವೇಕಿನಾಂ ಗಗನಮ್ ಆಕಾಶಂ ಘನರಜೋಧೂಮಾದಿಮಲೈಃ ಮಲಿನಂ ಮಲವತ್ ಗಗನಯಾಥಾತ್ಮ್ಯವಿವೇಕಿನಾಮ್[2] ತಥಾ ಭವತಿ ಆತ್ಮಾ ಪರೋಽಪಿ ಯೋ ವಿಜ್ಞಾತಾ ಪ್ರತ್ಯಕ್ ಕ್ಲೇಶಕರ್ಮಫಲಮಲೈಃ ಮಲಿನಃ ಅಬುದ್ಧಾನಾಂ ಪ್ರತ್ಯಗಾತ್ಮವಿವೇಕರಹಿತಾನಾಂ ನ ಆತ್ಮವಿವೇಕವತಾಮ್ । ನ ಹಿ ಊಷರದೇಶಃ ತೃಡ್ವತ್ಪ್ರಾಣ್ಯಧ್ಯಾರೋಪಿತೋದಕಫೇನತರಙ್ಗಾದಿಮಾನ್ । ತಥಾ ನಾತ್ಮಾ ಅಬುಧಾರೋಪಿತಕ್ಲೇಶಾದಿಮಲೈಃ ಮಲಿನೋ ಭವತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಲೋಕದಲ್ಲಿ ಹೇಗೆ ಹುಡುಗರಿಗೆ ಅವಿವೇಕಿಗಳಿಗೆ ಗಗನವು ಆಕಾಶವು, ಮೋಡ, ಧೂಳು, ಹೊಗೆ-ಮುಂತಾದ ಮಲಗಳಿಂದ ಮಲಿನವಾಗಿ ಮಲವುಳ್ಳದ್ದಂತ (ತೋರು)ತ್ತಿರುತ್ತದೆಯೋ ಗಗನದ ನಿಜವನ್ನು ಬಿಡಿಸಿ ಅರಿತುಕೊಂಡಿರುವವರಿಗೆ (ಹೇಗೆ ತೋರುವ)ದಿಲ್ಲವೋ ಹಾಗೆ ಆತ್ಮನು ಒಳಗೆ ವಿಜ್ಞಾತೃವಾಗಿರುವನಲ್ಲ, (ಅವನು) ಪರಮಾತ್ಮನೇ ಆಗಿದ್ದರೂ ಅಬುದ್ಧರಿಗೆ ಎಂದರೆ ಪ್ರತ್ಯಗಾತ್ಮನನ್ನು ಬಿಡಿಸಿ ಅರಿತುಕೊಳ್ಳದೆ ಇರುವವರಿಗೆ ಕ್ಲೇಶಗಳು, ಕರ್ಮ, (ಅವರ) ಫಲ-ಎಂಬ ಮಲಗಳಿಂದ,

---

1. ಯೋ. ಸೂ. ೧-೨೪.

2. "ನ ಗಗನಂ ಮಲವತ್ ಯಾಥಾತ್ಮ್ಯವಿವೇಕಿನಾಮ್" ಆ॥; "ನ ಗಗನಯಾಥಾತ್ಮ್ಯವಿವೇಕವತಾಮ್" ವಾ॥ ನಾವು ಕೊಟ್ಟಿರುವದು ಕಾ॥ ಪಾಠ.

ಮಲಿನನಾಗಿ ತೋರುತ್ತಿರುವನೇ ಹೊರತು ಆತ್ಮನನ್ನು ಬಿಡಿಸಿ ಅರಿತುಕೊಂಡವರಿಗೆ ತೋರುವದಿಲ್ಲ. ಬಾಯಾರಿಕೆಯುಳ್ಳ ಪ್ರಾಣಿಯು ಮರುಭೂಮಿಯಲ್ಲಿ ಹುಟ್ಟುಗಟ್ಟಿರುವ ನೀರು, ನೊರೆ, ತೆರೆ–ಮುಂತಾದವು (ನಿಜವಾಗಿ ಅದರಲ್ಲಿ) ಇರುವದಿಲ್ಲವಷ್ಟೆ? ಹಾಗೆಯೇ ಆತ್ಮನಲ್ಲಿ ತಿಳಿಯದವರು ಹುಟ್ಟುಗಟ್ಟಿರುವ ಕ್ಲೇಶವೇ ಮುಂತಾದ ಮಲಗಳಿಂದ (ಅವನು ನಿಜವಾಗಿ) ಮಲಿನವಾಗಿರುವದಿಲ್ಲ ಎಂದರ್ಥ.

(ಭಾಷ್ಯ)

೧೪೫. ಪುನರಪಿ ಉಕ್ತಮೇವ ಅರ್ಥಂ ಪ್ರಪಞ್ಚಯತಿ—

(ಭಾಷ್ಯಾರ್ಥ)

ಮತ್ತೂ ಒಂದು ಸಲ (ಹಿಂದೆ) ಹೇಳಿರುವ ಅರ್ಥವನ್ನೇ ಬಿಚ್ಚಿ ಹೇಳುತ್ತಾರೆ[1]:—

**ಮರಣೇ ಸಂಭವೇ ಚೈವ ಗತ್ಯಾಗಮನಯೋರಪಿ ।**
**ಸ್ಥಿತೌ ಸರ್ವಶರೀರೇಷು ಹ್ಯಾಕಾಶೇನಾವಿಲಕ್ಷಣಃ ॥ ೯ ॥**

೯. ಸಾವಿನಲ್ಲಿಯೂ ಮತ್ತು ಹುಟ್ಟಿನಲ್ಲಿಯೂ ಹೋಗುವಿಕೆಬರುವಿಕೆಗಳಲ್ಲಿಯೂ ಇರುವದರಲ್ಲಿಯೂ, ಸರ್ವಶರೀರಗಳಲ್ಲಿಯೂ ಆಕಾಶಕ್ಕಿಂತ ಬೇರೆಯ ರೂಪದವನಲ್ಲದೆಯೇ (ಇರುವನು).

(ಭಾಷ್ಯ)

೧೪೬. ಘಟಾಕಾಶಜನ್ಮನಾಶಗಮನಾಗಮನಸ್ಥಿತಿವತ್ ಸರ್ವಶರೀರೇಷು ಆತ್ಮನಃ ಜನ್ಮಮರಣಾದಿಃ । ಆಕಾಶೇನ ಅವಿಲಕ್ಷಣಃ ಪ್ರತ್ಯೇತವ್ಯಃ ಇತ್ಯರ್ಥಃ ॥

(ಭಾಷ್ಯಾರ್ಥ)

ಗಡಿಗೆಯ ಆಕಾಶವು ಹುಟ್ಟುವದು, ನಾಶವಾಗುವದು, ಹೋಗುವದು, ಬರುವದು, ಇರುವದು–ಇವುಗಳಂತೆಯೇ ಎಲ್ಲಾ ಶರೀರಗಳಲ್ಲಿಯೂ ಆತ್ಮನ ಹುಟ್ಟು, ಸಾವು–ಮುಂತಾದವುಗಳು[2]. (ಆತ್ಮನು) ಆಕಾಶಕ್ಕಿಂತ (ಈ ಯಾವ ವಿಷಯದಲ್ಲಿಯೂ) ಬೇರೆಯ ರೂಪದವನಲ್ಲ (ಎಂದ)ರಿಯಬೇಕು ಎಂದರ್ಥ.

---

1. ಉಪಸಂಹಾರಕ್ಕಾಗಿ ಮತ್ತೆ ಹೇಳಿದ್ದಾರೆ ಎಂದರ್ಥ.

2. ಇವೆಲ್ಲವೂ ಅವಿದ್ಯಕವೇ, ನಿಜವಲ್ಲ.

# ಆತ್ಮನ ಶರೀರಗಳೆಲ್ಲವೂ ಆವಿದ್ಯಕ

**ಸಙ್ಘಾತಾಃ ಸ್ವಪ್ನವತ್ ಸರ್ವೇ ಆತ್ಮಮಾಯಾವಿಸರ್ಜಿತಾಃ ।**
**ಆಧಿಕ್ಯೇ ಸರ್ವಸಾಮ್ಯೇ ವಾ ನೋಪಪತ್ತಿರ್ಹಿ ವಿದ್ಯತೇ ॥ ೧೦ ॥**

೧೦. ಸಂಘಾತಗಳೆಲ್ಲವೂ ಕನಸಿನಂತೆ ಆತ್ಮಮಾಯೆಯಿಂದ ಸೃಷ್ಟಿಯಾಗಿರುತ್ತವೆ. (ಅವುಗಳಲ್ಲಿ ಕೆಲವು) ಹೆಚ್ಚಿನವುಗಳೆಂಬ ವಿಷಯದಲ್ಲಾಗಲಿ ಎಲ್ಲವೂ ಸಮಾನವೆಂಬ ವಿಷಯದಲ್ಲಾಗಲಿ ಉಪಪತ್ತಿಯು ಇರುವದೇ ಇಲ್ಲ.

(ಭಾಷ್ಯ)

೧೪೭. ಘಟಾದಿಸ್ಥಾನೀಯಾಸ್ತು ದೇಹಾದಿಸಙ್ಘಾತಾಃ ಸ್ವಪ್ನದೃಶ್ಯದೇಹಾದಿವತ್ ಮಾಯಾವಿಕೃತದೇಹಾದಿವಚ್ಚ[1] ಆತ್ಮಮಾಯಾವಿಸರ್ಜಿತಾಃ । ಆತ್ಮನಃ ಮಾಯಾ ಅವಿದ್ಯಾ । ತಯಾ ಪ್ರತ್ಯುಪಸ್ಥಾಪಿತಾಃ ನ ಪರಮಾರ್ಥತಃ ಸನ್ತಿ ಇತ್ಯರ್ಥಃ । ಯದಿ ಆಧಿಕ್ಯಮ್ ಅಧಿಕಭಾವಃ ತಿರ್ಯಗ್ದೇಹಾದ್ಯಪೇಕ್ಷಯಾ ದೇವಾದಿಕಾರ್ಯಕರಣಸಙ್ಘಾತಾನಾಮ್, ಯದಿ ವಾ ಸರ್ವೇಷಾಂ ಸಮತೈವ ನ ಏಷಾಂ ಉಪಪತ್ತಿಃ ಸಮ್ಭವಸದ್ಭಾವಪ್ರತಿಪಾದಕೋ[2] ಹೇತುಃ ವಿದ್ಯತೇ । ನಾಸ್ತಿ । ಹಿ ಯಸ್ಮಾತ್ ತಸ್ಮಾತ್ ಅವಿದ್ಯಾಕೃತಾ ಏವ ನ ಪರಮಾರ್ಥತಃ ಸನ್ತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಗಡಿಗೆ ಮುಂತಾದವುಗಳಂತೆ ಇರುವ ದೇಹವೇ ಮುಂತಾದವುಗಳ ಸಂಘಾತಗಳಾದರೋ ಕನಸಿನಲ್ಲಿ ಕಾಣಬರುವ ದೇಹಾದಿಗಳಂತೆಯೂ ಮಾಯಾವಿಯು ಮಾಡಿರುವ ದೇಹವೇ ಮುಂತಾದವುಗಳಂತೆಯೂ[3] ಆತ್ಮಮಾಯಾವಿಸರ್ಜಿತವಾಗಿರುವವು. ಆತ್ಮನ ಮಾಯೆ ಎಂದರೆ ಅವಿದ್ಯೆ; ಅದರಿಂದ ಎದುರಿಗೆ ಮುಂದೊಡ್ಡಲ್ಪಟ್ಟಿರುವವೇ ಹೊರತು ನಿಜವಾಗಿ ಇರುವದಿಲ್ಲ ಎಂದರ್ಥ. ಕೀಳುಪ್ರಾಣಿಗಳ ದೇಹವೇ ಮುಂತಾ

---

1. 'ಮಾಯಾಕೃತದೇಹಾದಿವಚ್ಚ' ಎಂದಿದ್ದರೂ ಸಾಕಾಗುವದು.

2. 'ಉಪಪತ್ತಿಃ ಸಮ್ಭವಃ' ಆ॥; 'ಉಪಪತ್ತಿಸಮ್ಭವಃ'-ಎಂದು ಮುಂತಾಗಿರುವ ಮುದ್ರಿತಪಾಠವನ್ನು ಹೀಗೆ ತಿದ್ದಿಕೊಂಡಿದೆ.

3. ದೇಹಗಳನ್ನು ಕನಸುಮಾಯೆಗಳ ದೇಹಕ್ಕೆ ಹೋಲಿಸಿರುವದು ಅವುಗಳು ಬರಿಯ ಹುಸಿತೋರಿಕೆ ಎಂಬುದಕ್ಕೆ. ಗೀ. ಭಾ. ಭಾ. ೨೮.

ದವುಗಳಿಗೆ ಹೋಲಿಸಿದರೆ ದೇವತೆಗಳೇ ಮುಂತಾದವರ ಕಾರ್ಯಕರಣಸಂಘಾತಗಳು ಹೆಚ್ಚಿನವೇ ಆಗಿರಲಿ, ಅಥವಾ ಎಲ್ಲವೂ ಒಂದೇ ಸಮವೆಂದೇ ಆಗಲಿ, ಇವುಗಳಿಗೆ ಉಪಪತ್ತಿಯು ಎಂದರೆ (ಅವುಗಳ) ಹುಟ್ಟು (ನಿಜವಾಗಿ) ಇರುವದೆಂದು ತೋರಿಸಿ ಕೊಡುವ ಹೇತು[1] (ಯಾವದೊಂದೂ) ಇರುವದೇ ಇಲ್ಲ. ಹೀಗಿರುವವಷ್ಟೆ, ಆದ ಕಾರಣ (ಅವೆಲ್ಲವೂ) ಅವಿದ್ಯೆಯಿಂದಾದವುಗಳೇ ಹೊರತು ನಿಜವಾಗಿಯೂ ಇರುವದಿಲ್ಲ ಎಂದರ್ಥ.

## ಆತ್ಮನಿಗೆ ಹುಟ್ಟುಮುಂತಾದವಿಲ್ಲವೆಂಬುದಕ್ಕೆ ಶ್ರುತಿ

(ಭಾಷ್ಯ)

೧೪೮. ಉತ್ಪತ್ತ್ಯಾದಿವರ್ಜಿತಸ್ಯ ಅದ್ವಯಸ್ಯ ಆತ್ಮತತ್ತ್ವಸ್ಯ ಶ್ರುತಿಪ್ರಮಾಣ ಕತ್ವಪ್ರದರ್ಶನಾರ್ಥಂ ವಾಕ್ಯಾನಿ ಉಪನ್ಯಸ್ಯನ್ತೇ—

(ಭಾಷ್ಯಾರ್ಥ)

ಹುಟ್ಟು ಮುಂತಾದವುಗಳಿಲ್ಲದ, ತನಗೆರಡನೆಯದಿಲ್ಲದ, ಆತ್ಮತತ್ತ್ವಕ್ಕೆ ಶ್ರುತಿಯೇ ಪ್ರಮಾಣವೆಂದು ತೋರಿಸಿಕೊಡುವದಕ್ಕಾಗಿ (ಕೆಲವು) ವಾಕ್ಯಗಳನ್ನು ಉದಾಹರಿಸುತ್ತಾರೆ :—

**ರಸಾದಯೋ ಹಿ ಯೇ ಕೋಶಾಃ ವ್ಯಾಖ್ಯಾತಾಸ್ತೈತ್ತಿರೀಯಕೇ ।**
**ತೇಷಾಮಾತ್ಮಾ ಪರೋ ಜೀವಃ ಖಂ ಯಥಾ ಸಮ್ಪ್ರಕಾಶಿತಃ ॥ ೧೧ ॥**

೧೧. ರಸವೇ ಮುಂತಾದ ಯಾವ ಕೋಶಗಳನ್ನು ತೈತ್ತಿರೀಯಕ ದಲ್ಲಿ ವಿವರಿಸಿರುತ್ತದೆಯೋ ಅವುಗಳಿಗೆ ಆತ್ಮನಾದ ಪರಜೀವನೇ ಆಕಾಶ ದಂತೆ ಎಂದು ಸಂಪ್ರಕಾಶಿತನಾಗಿರುತ್ತಾನೆ.

(ಭಾಷ್ಯ)

೧೪೯. ರಸಾದಯಃ ' ಅನ್ನರಸಮಯಃ ', ' ಪ್ರಾಣಮಯಃ ' ಇತ್ಯೇವಮಾ ದಯಃ ಯೇ ಕೋಶಾ ಇವ ಕೋಶಾಃ ಅಸ್ಯಾದೇರಿವ । ಉತ್ತರೋತ್ತರಾಪೇಕ್ಷಯಾ

---

1. " ಸಮ್ಭವಾದಿಸದ್ಭಾವಯುಕ್ತಿಃ " ಎಂದು ಪಾಠವಿದ್ದರೆ ಹುಟ್ಟುವದೇ ಮುಂತಾ ದದ್ದು ಇದೆ ಎಂಬುದನ್ನು ತೋರಿಸಿಕೊಡುವ ಯುಕ್ತಿ ಎಂದು ಕನ್ನಡಿಸಬೇಕು. ಹಿಂದಿನ ಟಾಂಕೆಯನ್ನು ನೋಡಿ.

ಬಹಿರ್ಭಾವಾತ್ ಪೂರ್ವಪೂರ್ವಸ್ಯ[1] । ವ್ಯಾಖ್ಯಾತಾಃ ವಿಸ್ಪಷ್ಟಮ್ ಆಖ್ಯಾತಾಃ ತೈತ್ತಿರೀಯಕಶಾಖೋಪನಿಷದ್ವಲ್ಲ್ಯಾಮ್ । ತೇಷಾಂ ಕೋಶಾನಾಮ್ ಆತ್ಮಾ ಯೇನ ಆತ್ಮನಾ ಪಞ್ಚಾಪಿ ಕೋಶಾ ಆತ್ಮವನ್ತಃ ಅನ್ತರತಮೇನ । ಸ ಹಿ ಸರ್ವೇಷಾಂ ಜೀವನ ನಿಮಿತ್ತತ್ವಾತ್ ಜೀವಃ । ಕೋಽಸೌ ಇತಿ ? ಆಹ– ಪರ ಏವ ಆತ್ಮಾ ಯಃ ಪೂರ್ವಂ " ಸತ್ಯಂ ಜ್ಞಾನಮನನ್ತಂ ಬ್ರಹ್ಮ " (ತೈ. ೨-೧) ಇತಿ ಪ್ರಕೃತಃ । ಯಸ್ಮಾತ್ ಆತ್ಮನಃ ಸ್ವಪ್ನಮಾಯಾದಿವತ್ ಆಕಾಶಾದಿಕ್ರಮೇಣ ರಸಾದಯಃ ಕೋಶಲಕ್ಷಣಾಃ ಸಙ್ಘಾತಾಃ ಆತ್ಮಮಾಯಾವಿಸರ್ಜಿತಾಃ ಇತಿ ಉಕ್ತಮ್ । ಸ ಆತ್ಮಾ ಅಸ್ಮಾಭಿಃ ಯಥಾ ಖಂ ತಥಾ ಇತಿ ಸಂಪ್ರಕಾಶಿತಃ । " ಆತ್ಮಾ ಹ್ಯಾಕಾಶವತ್ (೩-೩) ಇತ್ಯಾದಿಭಿಃ ಶ್ಲೋಕೈಃ । ನ ತಾರ್ಕಿಕಪರಿಕಲ್ಪಿತಾತ್ಮವತ್ ಖರುಷಬುದ್ಧಿಪ್ರಮಾಣಗಮ್ಯಃ ಇತಿ ಅಭಿಪ್ರಾಯಃ ॥

(ಭಾಷ್ಯಾರ್ಥ)

ರಸವೇ ಮುಂತಾದ ' ಅನ್ನರಸಮಯನು ', ' ಪ್ರಾಣಮಯನು '- ಎಂಬಿವೇ ಮುಂತಾದ, (ಯಾವ) ಕೋಶಗಳನ್ನು–ಕತ್ತಿಯೇ ಮುಂತಾದದ್ದರ ಒರೆಗಳಂತೆ ಮುಂದುಮುಂದಿನ (ಕೋಶ)ಕ್ಕಿಂತ ಹಿಂದು ಹಿಂದಿನದು ಹೊರಗಡೆ ಇರುವದರಿಂದ[2] (ಕೋಶಗಳೆನಿಸಿರುವ ಪಂಚಕೋಶಗಳನ್ನು) – **ತೈತ್ತಿರೀಯಕದಲ್ಲಿ** ತೈತ್ತಿರೀಯಕ ಶಾಖೆಯ ಉಪನಿಷತ್ತಿನ (ಎರಡನೆಯ)ವಲ್ಲಿಯಲ್ಲಿ ವ್ಯಾಖ್ಯಾನಮಾಡಿರುತ್ತದೆಯೋ ವಿಸ್ಪಷ್ಟವಾಗಿ ಹೇಳಿರುತ್ತದೆಯೋ, ಆ ಕೋಶಗಳ ಆತ್ಮನು, **ಎಲ್ಲಕ್ಕೂ ಒಳಗಿರುವ ಯಾವ ಆತ್ಮನಿಂದ (ಆ) ಐದು ಕೋಶಗಳೂ ಆತ್ಮವಂತಗಳಾಗಿರುವವೋ, ಅವನೇ ಎಲ್ಲರಿಗೂ ಬದುಕಿರುವದಕ್ಕೆ ಕಾರಣನಾಗಿರುವದರಿಂದ ಜೀವನು**[3].

---

1. 'ಉತ್ತರೋತ್ತರಸ್ಯಾಪೇಕ್ಷಯಾ ಬಹಿರ್ಭಾವಾತ್ ಪೂರ್ವಸ್ಯ ಪೂರ್ವಸ್ಯ' ಎಂದೂ ಆ॥ ಪಾಠವುಂಟು.

2. ' ಅನ್ಯೋಽನ್ತರ ಆತ್ಮಾಪ್ರಾಣಮಯಃ ' ಅನ್ನಮಯನಿಗಿಂತ ಒಳಗಿರುವ ಮತ್ತೊಬ್ಬ ಆತ್ಮನು ಪ್ರಾಣಮಯನು (ತೈ. ೨-೨) ಮುಂತಾದ ಶ್ರುತಿಯ ಆಧಾರದಿಂದ ಆಡಿದ ಮಾತು.

3. ಅನ್ನಮಯಕ್ಕೆ ಪ್ರಾಣಮಯನು ಆತ್ಮನು, ಪ್ರಾಣಮಯಕ್ಕೆ ಮನೋಮಯನು- ಎಂದು ಮುಂತಾಗಿ ಶ್ರುತಿಯಲ್ಲಿ ಹೇಳಿರುವ ಆತ್ಮರು ನಿಜವಾಗಿ ಆತ್ಮರಲ್ಲ. ಆತ್ಮರಾಗಿ ತೋರುವ ಕೋಶಗಳೇ. ಆನಂದಮಯಕೋಶದ ವಿವರಣೆಯಲ್ಲಿ ' ಆನಂದವು ಆತ್ಮನು ' (ತೈ ೨-೫ ೪) ಎಂದಿದೆಯಲ್ಲ, (ತೈ. ಭಾ. ಭಾ. ೧೪೭) ಅವನೇ ನಿಜವಾದ ಆತ್ಮನು. ಮಿಥ್ಯೆಯಾದ ಕೋಶಗಳು ಅವನಿಂದಲೇ ಇರವನ್ನು ಪಡೆದು ಬಾಳುವದರಿಂದ ಅವರಿಗೆ ಇವನೇ ಜೀವ. ತೈ. ಭಾ. ಭಾ. ೧೨೭ ನ್ನು ನೋಡಿ.

ಅವನು ಯಾವನು ? ಎಂದರೆ ಹೇಳುತ್ತಾರೆ: ಪರಮನೇ ಆಗಿರುವ ಆತ್ಮನು, ಹಿಂದೆ "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. ೨-೧) ಎಂದು ಪ್ರಕೃತನಾಗಿದ್ದನಲ್ಲ,(ಅವನೇ). ಆ ಆತ್ಮನಿಂದಲೇ ಕನಸು, ಮಾಯೆ-ಮುಂತಾದ(ವುಗಳ ಸಂಘಾತಗಳಂತೆ) ಆಕಾಶವೇ ಮುಂತಾದ ಕ್ರಮದಿಂದ ರಸವೇ ಮುಂತಾದ ಕೋಶರೂಪವಾಗಿರುವ ಸಂಘಾತಗಳು ಆತ್ಮಮಾಯಾವಿಸರ್ಜಿತವಾಗಿರುತ್ತವೆ[1] ಎಂದು (ಹಿಂದಿನ ಶ್ಲೋಕದಲ್ಲಿ) ಹೇಳಲಾಗಿದುತ್ತದೆ. ಆ ಆತ್ಮನೇ ನಾವು "ಆತ್ಮಾ ಹ್ಯಾಕಾಶವತ್" (೩-೩) ಮುಂತಾದ ಶ್ಲೋಕಗಳಲ್ಲಿ ಆಕಾಶವು ಹೇಗಿರುವದೋ ಹಾಗೆ (ಇರುವದೆಂದು) ತಿಳಿಸಿಕೊಟ್ಟಿರುವದು **(ಇಷ್ಟೇ ಹೊರತು ನಾವು ಹೇಳಿರುವ ಆತ್ಮನು) ತಾರ್ಕಿಕರು ಕಲ್ಪಿಸಿರುವ ಆತ್ಮನಂತೆ ಪುರುಷಬುದ್ಧಿ ಎಂಬ ಪ್ರಮಾಣದಿಂದ ತಿಳಿಯಬರುವವನಲ್ಲ[2] ಎಂದು ಅಭಿಪ್ರಾಯ.**

**ದ್ವಯೋರ್ದ್ವಯೋರ್ಮಧುಜ್ಞಾನೇ ಪರಂ ಬ್ರಹ್ಮ ಪ್ರಕಾಶಿತಮ್ ।**
**ಪೃಥಿವ್ಯಾಮುದರೇ ಚೈವ ಯಥಾಕಾಶಃ ಪ್ರಕಾಶಿತಃ ॥ ೧೨ ॥**

೧೨. ಪೃಥಿವಿಯಲ್ಲಿಯೂ ಉದರದಲ್ಲಿಯೂ ಆಕಾಶವನ್ನು (ನಾವು ತಿಳಿಸಿರು)ವಂತೆಯೇ ಮಧುಜ್ಞಾನದಲ್ಲಿ ಎರಡೆರಡರಲ್ಲಿ ಪರಬ್ರಹ್ಮವನ್ನು ತಿಳಿಸಿಕೊಟ್ಟಿರುತ್ತದೆ.

(ಭಾಷ್ಯ)

೧೫೦. ಕಿಂಚ ಅಧಿದೈವಮ್ ಅಧ್ಯಾತ್ಮಂ ಚ ತೇಜೋಮಯೋಽಮೃತಮಯಃ ಪುರುಷಃ ಪೃಥಿವ್ಯಾದ್ಯನ್ತರ್ಗತಃ ಯೋ ವಿಜ್ಞಾತಾ ಪರ ಏವ ಆತ್ಮಾ ಬ್ರಹ್ಮ ಸರ್ವಮ್ ಇತಿ ದ್ವಯೋರ್ದ್ವಯೋಃ ಆ ದ್ವೈತಕ್ಷಯಾತ್ ಪರಂ ಬ್ರಹ್ಮ ಪ್ರಕಾಶಿತಮ್ । ಕ್ವ ಇತಿ ? ಆಹ-ಬ್ರಹ್ಮವಿದ್ಯಾಖ್ಯಂ ಮಧು ಅಮೃತಮ್[3] ಮೋದನಹೇತುತ್ವಾತ್ ವಿಜ್ಞಾ

1. ಸೃಷ್ಟಿಯಾಗಿರುವ ಅನ್ನಮಯಾದಿಗಳಿಗೂ ಕನಸಿನ ಅನ್ನಮಯಾದಿಗಳಿಗೂ ತಾರತಮ್ಯವಿಲ್ಲ.

2. ನಾವು ಹೇಳಿರುವ ಆತ್ಮನು ಉಪನಿಷತ್ಪ್ರಮಾಣಗಮ್ಯನಾದ ಪರಮಾತ್ಮನು, ಸಾಂಖ್ಯರು, ವೈಶೇಷಿಕರು-ಮುಂತಾದವರು ತರ್ಕದಿಂದ ಸಿದ್ಧಪಡಿಸಿರುವ ಆತ್ಮನಲ್ಲ. ಸೂ. ಭಾ. ೧-೧-೪, ಬೃ. ಭಾ. ೩-೯-೨೬.

3. ಇವರ ಮುಂದೆ ಮುದ್ರಿತಪುಸ್ತಕಗಳಲ್ಲಿರುವ ಅಮೃತತ್ತ್ವಮ್ ಎಂಬ ಮಾತನು ಹೆಚ್ಚೆಂದು ಬಿಟ್ಟುಬಿಟ್ಟದೆ.

ಯತೇ[1] ಅಸ್ಮಿನ್[2] ಇತಿ ಮಧುಜ್ಞಾನಂ ಮಧುಬ್ರಾಹ್ಮಣಮ್ । ತಸ್ಮಿನ್ ಇತ್ಯರ್ಥಃ । ಕಿಮಿವ ಇತಿ ? ಆಹ–ಪೃಥಿವ್ಯಾಮ್ ಉದರೇ ಚೈವ ಯಥಾ ಏಕಃ ಆಕಾಶಃ ಅನುಮಾನೇನ ಪ್ರಕಾಶಿತಃ ಶ್ಲೋಕೇ[3] ತದ್ವತ್ ಇತ್ಯರ್ಥಃ ॥

(ಭಾಷ್ಯಾರ್ಥ)

ಇದಲ್ಲದೆ ಅಧಿದೈವ ಮತ್ತು ಅಧ್ಯಾತ್ಮ–(ಈ ಎರಡು ರೂಪವಾಗಿಯೂ ಇರುವ) **ತೇಜೋಮಯನೂ ಅಮೃತಮಯನೂ ಆಗಿರುವ ಪೃಥಿವಿಯೇ ಮುಂತಾದವುಗಳಲ್ಲಿರುವ ಪುರುಷನಾದ** ವಿಜ್ಞಾತೃವಿದಾನಲ್ಲ, ಅವನು ಪರಮಾತ್ಮನಾದ ಬ್ರಹ್ಮವೇ, (ಅವನೇ) ಎಲ್ಲವೂ–ಎಂದು ಎರಡೆರಡರಲ್ಲಿ[4]–ದ್ವೈತವೆಲ್ಲವೂ ಹೋಗುವವರೆಗೂ (ಹೇಳಿ)–ಪರಬ್ರಹ್ಮವನ್ನೇ ತಿಳಿಸಿರುತ್ತದೆ. ಎಲ್ಲಿ? ಎಂದರೆ ಹೇಳುತ್ತಾರೆ: ಬ್ರಹ್ಮವಿದ್ಯೆ ಎಂಬ ಮಧು, ಮೋದನಕ್ಕೆ ಕಾರಣವಾಗಿರುವದರಿಂದ (ಅದು ಮಧು) ಅಮೃತವು–ಇದರಲ್ಲಿ ತಿಳಿಯಬರುತ್ತದೆಯಾದ್ದರಿಂದ **ಮಧುಬ್ರಾಹ್ಮಣವು**[5] ಮಧುಜ್ಞಾನವು. ಅದರಲ್ಲಿ (ತಿಳಿಸಿರುತ್ತದೆ) ಎಂದರ್ಥ[6]. ಏತರಂತೆ ? ಪೃಥಿವಿಯಲ್ಲಿಯೂ ಶರೀರದಲ್ಲಿಯೂ ಹೇಗೆ

---

1. 'ತತ್ ವಿಜ್ಞಾಯತೇ' ವಾ॥ ಕಾ॥

2. 'ಯಸ್ಮಿನ್' ಎಂಬ ಮುದ್ರಿತಪಾಠವನ್ನು ಹೀಗೆ ತಿದ್ದಿಕೊಂಡಿದೆ.

3. 'ಲೋಕೇ' ಎಂಬ ಮುದ್ರಿತಪಾಠವನ್ನು ಹೀಗೆ ತಿದ್ದಿಕೊಂಡಿದೆ. ಈ ವಾಕ್ಯದ ಅನುವಾದವನ್ನೂ ಅದಕ್ಕೆ ಕೊಟ್ಟಿರುವ ಟಿಪ್ಪಣಿಯನ್ನೂ ನೋಡಿರಿ.

4. ಪೃಥ್ವಿ, ಶರೀರ; ಅಪ್ಪು, ತೇಜಸ್ಸು; ಅಗ್ನಿ, ವಾಕ್ಕು; ವಾಯು, ಪ್ರಾಣ; ಆದಿತ್ಯ, ಚಕ್ಷುಸ್ಸು; ದಿಕ್ಕುಗಳು, ಶ್ರೋತ್ರ; ಚಂದ್ರ, ಮನಸ್ಸು; ಮಿಂಚು, ತ್ವಕ್ಕು; ಗುಡುಗು, ಸ್ವರ; ಆಕಾಶ, ಹೃದಯಾಕಾಶ; ಧರ್ಮಸತ್ಯಗಳಸಾಮಾನ್ಯ ವಿಶೇಷಗಳು; ಮನುಷ್ಯಜಾತಿ ಮನುಷ್ಯವ್ಯಕ್ತಿ; ಕಾರ್ಯಕರಣಸಂಘಾತ;–ಹೀಗೆ ಎರಡೆರಡಾಗಿ ತೆಗೆದುಕೊಂಡು ಎಲ್ಲೆಲ್ಲಿಯೂ ಆತ್ಮನು ಒಬ್ಬನೇ ಎಂದು ತಿಳಿಸಿರುತ್ತದೆ.

5. ಬೃ. ೨-೫ ಕ್ಕೆ ಮಧುಬ್ರಾಹ್ಮಣವೆಂದು ಹೆಸರು; ಇದರಲ್ಲಿ ಬ್ರಹ್ಮವಿದ್ಯೆ ಎಂಬ ಆನಂದಹೇತುವಾದ ಮಧುವನ್ನು ತಿಳಿಸಿರುತ್ತದೆ.

6. ಬೃ. ಭಾ. ೨-೫-೧ ರಲ್ಲಿ ಕೊಟ್ಟಿರುವ ಮಂತ್ರವ್ಯಾಖ್ಯಾನಕ್ಕೂ ಇಲ್ಲಿ ಕೊಟ್ಟಿರುವ ವ್ಯಾಖ್ಯಾನಕ್ಕೂ ಸ್ವಲ್ಪ ಹೆಚ್ಚುಕಡಿಮೆಯಿರುವಂತೆ ಕಾಣುತ್ತದೆ. ಪೃಥಿವಿ, ಶರೀರ, ಪೃಥಿವ್ಯಂತರ್ಗತ ಶಾರೀರಾಂತರ್ಗತ ಲಿಂಗಾಭಿಮಾನಿಯಾದ ಆತ್ಮ-ಇವೆಲ್ಲವೂ ಏತರಕಾರ್ಯವೋ ಆ ಆತ್ಮನೇ ಬ್ರಹ್ಮ ಎಂಬುದು ಬೃ. ಭಾ. ಇಲ್ಲಿ ಪೃಥಿವಿಯಲ್ಲಿಯೂ ಶರೀರದಲ್ಲಿಯೂ ಇರುವ ಆತ್ಮನು ಒಬ್ಬನೇ, ಅದೇ ಬ್ರಹ್ಮ–ಎಂದು ಹೇಳಿದೆ.

ಆಕಾಶವು ಒಂದೇ ಎಂದು ಅನುಮಾನ (ಪ್ರಮಾಣ)ದಿಂದ ಶ್ಲೋಕದಲ್ಲಿ[1] ತಿಳಿಸಲಾಗಿದೆಯೋ ಅದರಂತೆ ಎಂದರ್ಥ.

**ಜೀವಾತ್ಮನೋರನನ್ಯತ್ವಮಭೇದೇನ ಪ್ರಶಸ್ಯತೇ ।**
**ನಾನಾತ್ವಂ ನಿನ್ದ್ಯತೇ ಯಚ್ಚ ತದೇವಂ ಹಿ ಸಮಞ್ಜಸಮ್ ॥ ೧೩ ॥**

೧೩. ಜೀವಾತ್ಮರುಗಳಿಗೆ ಅಭೇದ(ವಿರುವದ)ರಿಂದ (ಅವರು) ಬೇರೆ ಬೇರೆಯಲ್ಲವೆಂಬುದನ್ನು ಹೊಗಳಿರುವದೂ ಬೇರೆ ಬೇರೆ ಎಂಬುದನ್ನು ನಿಂದಿಸಿರುವದೂ (ಇದೆ)ಯಲ್ಲ, ಅದು ಹೀಗೆಯೇ ಸಮಂಜಸವಾಗುತ್ತದೆ.

(ಭಾಷ್ಯ)

೧೫೧. ಯತ್ ಯುಕ್ತಿತಃ ಶ್ರುತಿತಶ್ಚ ನಿರ್ಧಾರಿತಂ ಜೀವಸ್ಯ ಪರಸ್ಯ ಚ ಆತ್ಮನಃ ಜೀವಾತ್ಮನೋಃ ಅನನ್ಯತ್ವಮ್ ಅಭೇದೇನ ಪ್ರಶಸ್ಯತೇ ಸ್ತೂಯತೇ ಶಾಸ್ತ್ರೇಣ ವ್ಯಾಸಾದಿಭಿಶ್ಚ । ಯಚ್ಚ ಸರ್ವಪ್ರಾಣಿಸಾಧಾರಣಂ ಸ್ವಾಭಾವಿಕಂ ಶಾಸ್ತ್ರಬಹಿಷ್ಕೃತೈಃ ಕುತಾರ್ಕಿಕೈಃ ವಿರಚಿತಂ ನಾನಾತ್ವದರ್ಶನಂ ನಿನ್ದ್ಯತೇ "ನ ತು ತದ್ದ್ವಿತೀಯಮಸ್ತಿ" (ಬೃ. ೪-೩-೨೩), "ದ್ವಿತೀಯಾದ್ ವೈ ಭಯಂ ಭವತಿ" (ಬೃ. ೧-೪-೨) ಉದರಮನ್ತರಂ ಕುರುತೇ, ಅಥ ತಸ್ಯ ಭಯಂ ಭವತಿ (ತೈ. ೨-೭)' "ಇದಂ ಸರ್ವಂ ಯದಯಮಾತ್ಮಾ" (ಬೃ. ೨-೪-೬), "ಮೃತ್ಯೋಃ ಸ ಮೃತ್ಯುಮಾಪ್ನೋತಿ ಯ ಇಹ ನಾನೇವ ಪಶ್ಯತಿ" (ಕ. ೨-೧-೧೦) ಇತ್ಯಾದಿವಾಕ್ಯೈಶ್ಚ ಅನ್ಯೈಶ್ಚ ಬ್ರಹ್ಮವಿದ್ಭಿಃ ಯಚ್ಚೈತತ್ ತತ್ ಏವಂ ಹಿ ಸಮಞ್ಜಸಮ್ ಋಜ್ವವಬೋಧಂ ನ್ಯಾಯ್ಯಮ್ ಇತ್ಯರ್ಥಃ । ಯಾಸ್ತು ತಾರ್ಕಿಕಪರಿಕಲ್ಪಿತಾಃ ಕುದೃಷ್ಟಯಃ ತಾಃ ಅನೃಜ್ವ್ಯಃ ನಿರೂಪ್ಯಮಾಣಾ ನ ಘಟನಾಂ ಪ್ರಾಞ್ಚನ್ತಿ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಯುಕ್ತಿಯಿಂದಲೂ ಶ್ರುತಿಯಿಂದಲೂ[2] (ನಾವು) ನಿಶ್ಚಿಯವಾಡಿರುವ ಜೀವಾತ್ಮರುಗಳಿಗೆ ಜೀವನಿಗೂ ಪರಮಾತ್ಮನಿಗೂ ಅಭೇದವಿರುವದರಿಂದ (ಅವರಿಬ್ಬರೂ)

1. ಲೋಕದಲ್ಲಿ ಎಂಬ ಮೂಲವನ್ನಿಟ್ಟುಕೊಂಡು "ಜನರು ಆಕಾಶೈಕ್ಯವನ್ನು ಅನುಮಾನದಿಂದ ನಿಶ್ಚಯಿಸುವಂತೆ"–ಎಂಬ ಅರ್ಥವನ್ನು ಆ॥ ವ್ಯಾಖ್ಯಾನದಲ್ಲಿ ತೆಗೆದಿದೆ. ಆದರೆ ಇದು ಪ್ರಕೃತಕ್ಕೆ ಹೊಂದುವ-ಹಾಗೆ ಕಾಣುವದಿಲ್ಲ. ಶ್ಲೋಕದಲ್ಲಿ ಘಟಾಕಾಶಾದಿದೃಷ್ಟಾಂತದಿಂದ ನಾವು ಆಕಾಶೈಕ್ಯವನ್ನು ಯುಕ್ತಿಯಿಂದ ತೋರಿಸಿರುವಂತೆ ಮಧುಬ್ರಾಹ್ಮಣದಲ್ಲಿಯೂ ಆತ್ಮೈಕ್ಯವನ್ನು ತೋರಿಸಿದೆ. ಆದ್ದರಿಂದ ನಮ್ಮ ಅಭಿಪ್ರಾಯಕ್ಕೆ ಶ್ರುತಿಯು ಬೆಂಬಲವಿದೆ ಎಂಬುದೇ ಇಲ್ಲಿ ಒಟ್ಟು ಅಭಿಪ್ರಾಯ.

2. ಶ್ರುತಿಪ್ರಮಾಣವನ್ನು ಯುಕ್ತಿಯಿಂದ ನೋಡಿದರೂ ಆತ್ಮೈಕತ್ವವೇ ಏರ್ಪಡುವದರಿಂದ ಇದೇ ಸಮ್ಯಗ್ದರ್ಶನವೆಂದು ಭಾವ.

ಬೇರೆಯಲ್ಲವೆಂಬುದನ್ನು ಶಾಸ್ತ್ರವೂ ವ್ಯಾಸಾದಿಗಳೂ ಪ್ರಶಂಸೆಮಾಡಿರುತ್ತಾರೆ, ಹೊಗಳಿರುತ್ತಾರೆ ಎಂಬುದಿದೆಯಲ್ಲ, (ಅದು), ಮತ್ತು ಸರ್ವಪ್ರಾಣಿಗಳಿಗೂ ಸಮಾನವಾಗಿರುವ ಸ್ವಾಭಾವಿಕವಾದ,[1] ಶಾಸ್ತ್ರಕ್ಕೆ ಹೊರಚ್ಚಾಗಿರುವ ಕುತಾರ್ಕಿಕರು[2] ಕಲ್ಪಿಸಿಕೊಂಡಿರುವ ನಾನಾತ್ವದರ್ಶನವು " ಆದರೆ ಆ ಎರಡನೆಯುದಿರುವದಿಲ್ಲ " (ಬೃ. ೪-೩-೨೩), " ಎರಡನೆಯದರಿಂದಲೇ ಹೆದರಿಕೆಯುಂಟಾಗುತ್ತದೆಯಷ್ಟೆ " (ಬೃ. ೧-೪-೨) " ಸ್ವಲ್ಪವಾದರೂ ಭೇದವನ್ನು ಮಾಡಿಕೊಂಡರೆ, ಆಗ ಅವನಿಗೆ ಭಯವುಂಟಾಗುತ್ತದೆ " (ತೈ. ೨-೭), " ಇದೆಲ್ಲವೂ ಈ ಆತ್ಮನೆಂಬುವೇ " (ಬೃ. ೨-೪-೬), " ಯಾವನು ಇಲ್ಲಿ ಭೇದವಿರುವಂತೆ ಕಾಣುವನೋ ಅವನು ಸಾವಿನಮೇಲೆ ಸಾವನ್ನು ಹೊಂದುವನು " (ಕ. ೨-೧-೧೦) ಇವೇ ಮುಂತಾದ ವಾಕ್ಯಗಳಿಂದಲೂ ಬೇರೆಯ ಬ್ರಹ್ಮಜ್ಞಾನಿಗಳಿಂದಲೂ[3] ನಿಂದಿತವಾಗಿರುತ್ತದೆಯಲ್ಲ, ಅದೂ[4] ಹೀಗೆಯೇ[5] ಸಮಂಜಸವಾಗುತ್ತದೆ, ನೆಟ್ಟಗೆ ಮನವರಿಕೆಯಾಗುತ್ತದೆ, ಯುಕ್ತವಾಗುತ್ತದೆ ಎಂದರ್ಥ. ಆದರೆ, ತಾರ್ಕಿಕರು ಕಲ್ಪಿಸಿಕೊಂಡಿರುವ ಕುದೃಷ್ಟಿಗಳಿರುವವಲ್ಲ[6], ಅವು ನೆಟ್ಟಗಿರುವದಿಲ್ಲ[7], ಪರೀಕ್ಷಿಸಿ ನೋಡಿದರೆ ಹೊಂದುಗಡೆಯಾಗುವದಿಲ್ಲ ಎಂದು ಅಭಿಪ್ರಾಯ.

---

1. ಅಜ್ಞಾನಿಗಳೆಲ್ಲರಿಗೂ ಸ್ವಭಾವದಿಂದಲೇ ತಿಳಿದಿರುವ ಎಂದರ್ಥ. ಶಾಸ್ತ್ರವು ಅಜ್ಞರಿಗೆ ಗೊತ್ತಿರುವದನ್ನೇ ಹೇಳಿದರೆ ಅನುವಾದುವದೇ ಹೊರತು ಪ್ರಮಾಣವೆನಿಸಲಾರದು.

2. ಶಾಸ್ತ್ರವೆಂದರೆ ವೇದವು. ಶಾಸ್ತ್ರವನ್ನು ಒಪ್ಪದ ಬೌದ್ಧಾದಿಗಳೂ, ಒಪ್ಪಿದರೂ ತರ್ಕವನ್ನು ಮುಖ್ಯವಾಗಿಟ್ಟುಕೊಂಡು ಶಾಸ್ತ್ರವನ್ನು ಎರಡನೆಯದಾಗಿ ಮಾಡಿಕೊಂಡಿರುವ ಸಾಂಖ್ಯಾದಿಗಳೂ ಕುತಾರ್ಕಿಕರು.

3. ವ್ಯಾಸಾದಿಗಳು 'ವಾಸುದೇವನೇ ಎಲ್ಲವೂ' (ಗೀ), 'ಇದೆಲ್ಲವೂ ನಾನೂ ವಾಸುದೇವನು' (ವಿ. ಪು)-ಮುಂತಾದ ವಾಕ್ಯಗಳಿಂದ ಆತ್ಮೈಕತ್ವದರ್ಶನವನ್ನು ಹೊಗಳಿರುತ್ತಾರೆ; "ದ್ವೈತಿಗಳು ನಿಜವನ್ನರಿತವರಲ್ಲ" (ವಿ. ಧ), "ಆತ್ಮನಿಗೂ ಬ್ರಹ್ಮಕ್ಕೂ ಇಲ್ಲದ ಭೇದವನ್ನು ಯಾರುತಾನೇ ಮಾಡಿಯಾರು ?" (ವಿ. ಪು)-ಮುಂತಾದ ವಾಕ್ಯಗಳಿಂದ ದ್ವೈತದರ್ಶನವನ್ನು ನಿಂದಿಸಿರುತ್ತಾರೆ.

4. 'ಯಚ್ಚೈತತ್' ಎಂಬ ಮಾತನ್ನು ಭಾಷ್ಯದಲ್ಲಿ ಸಂಬಂಧಕ್ಕಾಗಿ ಮತ್ತೆ ಹಾಕಿಕೊಂಡಿದೆ.

5. ಆತ್ಮೈಕತ್ವಪಕ್ಷದಲ್ಲಿಯೇ.

6. ವೇದಬಾಹ್ಯರಾದ ತಾರ್ಕಿಕರ ಕುದೃಷ್ಟಿಗಳಿಂದ ಶ್ರೇಯಸ್ಸಾಗದು-ಎಂಬ (ಮನು. ೧೨-೯೫) ವಚನದ ಸೂಚನೆ.

7. ಅನುಭವಾನುಸಾರಿಯಾದ ಕರ್ಮವೇ ನೇರಾಗಿರುವದು; ಹಾಗಿಲ್ಲದ್ದು ಕೊಂಕು.

## ಶ್ರುತ್ಯುಕ್ತಜೀವಬ್ರಹ್ಮಭೇದಕ್ಕೆ ಗತಿ

(ಭಾಷ್ಯ)

ನನು ಶ್ರುತ್ಯುಕ್ತ ಜೀವಪರಮಾತ್ಮನೋಃ ಪೃಥಕ್ತ್ವಂ[1] ಪ್ರಾಗುತ್ಪತ್ತೇಃ ಉತ್ಪತ್ತ್ಯ ರ್ಥೋಪನಿಷದ್ವಾಕ್ಯೇಭ್ಯಃ ಪೂರ್ವಂ ಪ್ರಕೀರ್ತಿತಂ ಕರ್ಮಕಾಣ್ಡೇ ಅನೇಕಶಃ ಕಾಮ ಭೇದತಃ " ಇದಂಕಾಮಃ, ಅದಃಕಾಮಃ " ಇತಿ । ಪರಶ್ಚ " ಸ ದಾಧಾರ, ಪೃಥಿವೀಂ ದ್ಯಾಮ್ .... " (ಋ. ೧೦-೧೨೧-೧) ಇತ್ಯಾದಿಮನ್ತ್ರವರ್ಣೈಃ । ತತ್ರ ಕಥಂ ಕರ್ಮ ಜ್ಞಾನಕಾಣ್ಡವಾಕ್ಯವಿರೋಧೇ ಜ್ಞಾನಕಾಣ್ಡವಾಕ್ಯಾರ್ಥಸ್ಯೈವ ಏಕತ್ವಸ್ಯಸಾಮಞ್ಜ ಸ್ಯಮ್ ಅವಧಾರ್ಯತೇ ಇತಿ ? ಅತ್ರೋಚ್ಯತೇ—

(ಭಾಷ್ಯಾರ್ಥ)

(ಆಕ್ಷೇಪ) :—ಶ್ರುತಿಯಲ್ಲಿಯೂ ಜೀವಪರಮಾತ್ಮರು ಬೇರೆಬೇರೆ ಎಂದು ಉತ್ಪತ್ತಿಗಿಂತ ಮೊದಲು, ಎಂದರೆ ಉತ್ಪತ್ತಿಯನ್ನು (ಹೇಳುವ)ದಕ್ಕಾಗಿ (ಬಂದಿರುವ) ಉಪನಿಷದ್ವಾಕ್ಯಗಳಿಗಿಂತ ಮೊದಲು ಕರ್ಮಕಾಂಡದಲ್ಲಿ " ಇದನ್ನು ಬಯಸುವವನು (ಇಂಥ ಯಾಗವನ್ನು ಮಾಡಬೇಕು[2] ಎಂದು ಕಾಮಗಳು ಬೇರೆಬೇರೆಯಾಗಿರುವ (ದೆಂಬುದನ್ನವಲಂಬಿಸಿ) ಹೇಳಿದೆಯಲ್ಲ ! " ಆತ್ಮನು ಪೃಥಿವಿಯನ್ನೂ ಮತ್ತು (ಈ) ಅಂತರಿಕ್ಷವನ್ನೂ ಹಿಡಿದಿಟ್ಟುಕೊಂಡಿರುವನು " (ಋ. ೧೦-೧೨೧-೧)ಎಂದು ಮುಂತಾ ಗಿರುವ ಮಂತ್ರವರ್ಣಗಳಿಂದ ಪರ(ಮಾತ್ಮ)ನನ್ನೂ ಹೇಳಿದೆಯಲ್ಲ[3] ! ಹೀಗಿರುವಲ್ಲಿ ಕರ್ಮಕಾಂಡಜ್ಞಾನಕಾಂಡಗಳ ವಾಕ್ಯಗಳಿಗೆ (ಒಂದಕ್ಕೊಂದಕ್ಕೆ) ವಿರೋಧವಾದರೆ ಜ್ಞಾನಕಾಂಡದ ವಾಕ್ಯಗಳ ಅರ್ಥವಾದ ಏಕತ್ವವೊಂದೇ ಸಮಂಜಸವೆಂದು ನಿರ್ಧರಿ ಸುವದು ಹೇಗೆ (ಸರಿ) ?

(ಪರಿಹಾರ) :— ಇದಕ್ಕೆ (ಉತ್ತರವನ್ನು) ಹೇಳುತ್ತೇವೆ.

---

1. ಇಲ್ಲಿ ' ಯತ್ ಪೃಥಕ್ತ್ವಂ ' ಎಂಬ ಪಾಠದಲ್ಲಿ ಯತ್ ಬೇಕಿಲ್ಲ.

2. ಉದಾಹರಣೆಗೆ ತೈ. ಸಂ. ೨-೧ ನ್ನು ನೋಡಿರಿ. ಅಲ್ಲಿ ಭೂತಿಕಾಮನು, ಪ್ರಜಾ ಕಾಮನು, ಪಶುಕಾಮನು-ಮುಂತಾದ ವಿಶೇಷಣಗಳನ್ನು ಕಾಣಬಹುದು. ಇದರಿಂದ ಜೀವರು ಬೇರೆಬೇರೆ ಎಂದಂತಾಯಿತೆಂದು ಪೂರ್ವಪಕ್ಷಿಯ ಭಾವ.

3. ಇದರಿಂದ ಜೀವರಿಗಿಂತ ವಿಲಕ್ಷಣವಾದ ಪರಮಾತ್ಮನನ್ನು ಹೇಳಿದಂತೆ ಆಯಿತು ಎಂದು ಭಾವ.

**ಜೀವಾತ್ಮನೋಃ ಪೃಥಕ್ತ್ವಂ ಯತ್ ಪ್ರಾಗುತ್ಪತ್ತೇಃ ಪ್ರಕೀರ್ತಿತಮ್ ।**
**ಭವಿಷ್ಯದ್ವೃತ್ತ್ಯಾ ಗೌಣಂ ತನ್ಮುಖ್ಯತ್ವಂ ಹಿ ನ ಯುಜ್ಯತೇ ॥ ೧೪ ॥**

೧೪. ಜೀವಾತ್ಮರುಗಳಿಗೆ ಪೃಥಕ್ತ್ವವನ್ನು ಉತ್ಪತ್ತಿಗಿಂತ ಮೊದಲು ಹೇಳಿದೆಯಲ್ಲ, ಅದು ಭವಿಷ್ಯದ್ವೃತ್ತಿಯಿಂದ ಗೌಣವು ; ಏಕೆಂದರೆ ಮುಖ್ಯತ್ವವು ಯುಕ್ತವಾಗುವದಿಲ್ಲ.

(ಭಾಷ್ಯ)

೧೫೩. "ಯತೋ ವಾ ಇಮಾನಿ ಭೂತಾನಿ ಜಾಯನ್ತೇ" (ತೈ. ೩-೧), "ಯಥಾಗ್ನೇಃ ಕ್ಷುದ್ರಾ ವಿಸ್ಫುಲಿಙ್ಗಾಃ" (ಬೃ. ೨-೧-೨೦), "ತಸ್ಮಾದ್ವಾ ಏತಸ್ಮಾದಾತ್ಮನ ಆಕಾಶಃ ಸಂಭೂತಃ" (ತೈ. ೨-೧), "ತದೈಕ್ಷತ.... ತತ್ತೇಜೋಽಸೃಜತ" (ಛಾಂ. ೬-೨-೩)-ಇತ್ಯಾದ್ಯುತ್ಪತ್ತ್ಯರ್ಥೋಪನಿಷದ್ವಾಕ್ಯೇಭ್ಯಃ ಪ್ರಾಕ್ ಪೃಥಕ್ತ್ವಂ ಕರ್ಮಕಾಣ್ಡೇ ಪ್ರಕೀರ್ತಿತಂ ಯತ್, ತತ್ ನ ಪರಮಾರ್ಥತಃ[1], ಕಿಂ ತರ್ಹಿ ? ಗೌಣಮ್, ಮಹಾಕಾಶಘಟಾಕಾಶಾದಿಭೇದವತ್ । ಯಥಾ 'ಓದನಂ ಪಚತಿ' ಇತಿ ಭವಿಷ್ಯದ್ವೃತ್ತ್ಯಾ ತದ್ವತ್ । ನ ಹಿ ಭೇದವಾಕ್ಯಾನಾಂ ಕದಾಚಿದಪಿ ಮುಖ್ಯಭೇದಾರ್ಥಕತ್ವಮ್ ಉಪಪದ್ಯತೇ । ಸ್ವಾಭಾವಿಕಾವಿದ್ಯಾವತ್ಪ್ರಾಣಿಭೇದದೃಷ್ಟ್ಯನುವಾದಿತ್ವಾತ್ ಆತ್ಮಭೇದವಾಕ್ಯಾನಾಮ್ । ಇಹ ಚ ಉಪನಿಷತ್ಸು ಉತ್ಪತ್ತಿಪ್ರಲಯಾದಿವಾಕ್ಯೈಃ ಜೀವಪರಮಾತ್ಮನೋಃ ಏಕತ್ವಮೇವ ಪ್ರತಿಪಿಪಾದಯಿಷಿತಮ್ "ತತ್ ತ್ವಮಸಿ" (ಛಾಂ. ೬-೮-೭), "ಅನ್ಯೋಽಸಾವನ್ಯೋಽಹಮಸ್ಮೀತಿ ನ ಸ ವೇದ" (ಬೃ. ೧-೪-೧೦) ಇತ್ಯಾದಿಭ್ಯಃ[2] । ಅತಃ ಉಪನಿಷತ್ಸು ಏಕತ್ವಂ ಶ್ರುತ್ಯಾ ಪ್ರತಿಪಿಪಾದಯಿಷಿತಂ ಭವಿಷ್ಯತಿ ಇತಿ ಭಾವಿನೀಮ್ ಏಕವೃತ್ತಿಮ್[3] ಆಶ್ರಿತ್ಯ ಲೋಕಭೇದದೃಷ್ಟ್ಯನುವಾದಃ[4] ಗೌಣ ಏವ ಇತ್ಯಭಿಪ್ರಾಯಃ ॥

---

1. 'ಪರಮಾರ್ಥಮ್' ಆ॥ ಕಾ॥ ವಾ॥

2. 'ಇತ್ಯಾದಿಭಿಃ' ಎಂಬ ಮುದ್ರಿತಪಾಠವನ್ನು ಹೀಗೆ ತಿದ್ದಿಕೊಂಡಿದೆ.

3. 'ಭಾವಿನೀಮಿವ ವೃತ್ತಿಮ್' ವಾ॥

4. 'ಲೋಕೇ ಭೇದದೃಷ್ಟ್ಯನುವಾದಃ' ಎಂಬ ಮುದ್ರಿತಪಾಠವನ್ನು ಹೀಗೆ ತಿದ್ದಿಕೊಂಡಿದೆ.

(ಭಾಷ್ಯಾರ್ಥ)

"ಯಾವದರಿಂದಲೇ ಈ ಭೂತಗಳು ಹುಟ್ಟುತ್ತವೆಯೋ" (ತೈ. ೩-೧) "ಬೆಂಕಿಯಿಂದ ಸಣ್ಣ ಸಣ್ಣ ಕಿಡಿಗಳು ಹೇಗೆ (ಹೊರಟುಬರುವವೋ)" (ಬೃ. ೨-೧-೨೦ "ಆ ಈ ಆತ್ಮನಿಂದಲೇ ಆಕಾಶವು ಉಂಟಾಯಿತು" (ತೈ. ೨-೧), "ಅದ ನೋಡಿತು....ಅದು ತೇಜಸ್ಸನ್ನು ಸೃಷ್ಟಿಸಿತು" (ಛಾಂ. ೬-೨-೩). ಮುಂತಾ ಉತ್ಪತ್ತಿಯನ್ನು (ಹೇಳುವ)ದಕ್ಕಾಗಿ (ಬಂದಿರುವ) ಉಪನಿಷದ್ವಾಕ್ಯಗಳಿಗಿಂ ಮೊದಲು[1] (ಜೀವಾತ್ಮರು) ಬೇರೆಬೇರೆ ಎಂದು ಕರ್ಮಕಾಂಡದಲ್ಲಿ ಹೇಳಿರುತ್ತ ಯಲ್ಲ, ಅದು ಪರಮಾರ್ಥವಾಗಿ (ಹೇಳಿದ್ದಲ್ಲ); ಮತ್ತೇನೆಂದರೆ ಮಹಾಕಾಶಕ್ಕೂ ಘಟಾಕಾಶವೇ ಮುಂತಾದವುಗಳಿಗೂ ಭೇದ(ವನ್ನು ಹೇಳುವದು ಹೇಗೆ ಗೌಣವೋ ಹಾಗೆ ಗೌಣವು. 'ಅನ್ನವನ್ನು ಅಡುತ್ತಾನೆ' ಎಂದು ಹೇಗೆ ಭವಿಷ್ಯದ್ವೃತ್ತಿಯಿಂ (ಹೇಳುವರೋ) ಹಾಗೆ (ಹೇಳಿದ್ದು). **ಭೇದವಾಕ್ಯಗಳಿಗೆ ಮುಖ್ಯಭೇದವೆ ಅರ್ಥ ಎಂಬುದು ಎಂದಿಗೂ ಹೊಂದುವದೇ ಇಲ್ಲ; ಏಕೆಂದರೆ ಸ್ವಾಭಾವಿ ವಾದ ಅವಿದ್ಯೆಯುಳ್ಳ ಜೀವರುಗಳ ಭೇದದೃಷ್ಟಿಯನ್ನೇ ಆತ್ಮಭೇದವಾಕ ಗಳು ಅನುವಾದಮಾಡುತ್ತಿರುತ್ತವೆ[2].** ಇಲ್ಲಿ ಉಪನಿಷತ್ತುಗಳಲ್ಲಿಯೋ ಎಂವ ಉತ್ಪತ್ತಿ, ಪ್ರಲಯ–ಮುಂತಾದ ವಾಕ್ಯಗಳಿಂದ ಜೀವಪರಮಾತ್ಮರುಗಳು ಒಂದೆಂಬ ದನ್ನೇ (ತಾತ್ಪರ್ಯದಿಂದ) ತಿಳಿಸಿಕೊಡುವದಕ್ಕೆ ಹೊರಟಿರುತ್ತದೆ[3]. "ಅದೇ ನೀನ ಗಿರುವೆ" (ಛಾಂ. ೬-೮-೭), "ಈ (ದೇವತೆ) ಬೇರೆ, ನಾನು ಬೇರೆ ಎಂದ (ಯಾವನು ಉಪಾಸನೆಮಾಡುವನೋ) ಅವನು ಅರಿಯನು" (ಬೃ. ೧-೪-೧೦ ಮುಂತಾದ (ವಚನಗಳು ಇವಕ್ಕೆ ಆಧಾರವು)[4]. ಆದ್ದರಿಂದ ಮುಂದೆ ಉಪನಿಷತ್ತು ಗಳಲ್ಲಿ ಏಕತ್ವವನ್ನು ಶ್ರುತಿಯು (ತಾತ್ಪರ್ಯದಿಂದ) ತಿಳಿಸುವದು ಎಂದು ಮುಂದೆ ಆಗುವ ಏಕತ್ವವೃತ್ತಿಯನ್ನವಲಂಬಿಸಿ (ಅಜ್ಞ) ಜನರ ಭೇದದೃಷ್ಟಿಯನ್ನು ಅನುವಾದ ಮಾಡಿರುವದು ಗೌಣವೇ ಎಂದು ಅಭಿಪ್ರಾಯ.

---

1. ಉಪನಿಷತ್ತುಗಳಲ್ಲಿರುವ ಉತ್ಪತ್ತಿವಾಕ್ಯಗಳು ಐಕ್ಯಕ್ಕಾಗಿಯೇ ಬಂದವುಗಳಾದ ರಿಂದ ಎಂದರ್ಥ. ಉತ್ಪತ್ತಿಗಿಂತ ಮೊದಲು ಎಂಬುದು ವಾಕ್ಯದ ಅರ್ಥವಲ್ಲ; ಏಕೆಂದ ಅಜಾತಿಯನ್ನು ಹೇಳುವದಕ್ಕೆಂದೇ ಈ ಪ್ರಕರಣವು ಬಂದಿದೆ.

2. ಆ ವಾಕ್ಯಗಳಿಗೆ ಕರ್ಮಾದಿಗಳನ್ನು ವಿಧಿಸುವದರಲ್ಲಿಯೇ ತಾತ್ಪರ್ಯವಿದೆ ಅವಿಚಾರಸ್ವಭಾವದ ದೆಸೆಯಲ್ಲಿರುವ ಅವಿದ್ಯೆಯಿಂದ ಕಲ್ಪಿತವಾದ ಭೇದವನ್ನೇ ಅನುವಾ ಮಾಡಿಕೊಂಡು ಕರ್ಮಾದಿಗಳನ್ನು ವಿಧಿಸಿದೆ.

2. ಉತ್ಪತ್ತ್ಯಾದಿವಾಕ್ಯಗಳು ಐಕ್ಯಪರವೆಂಬುದಕ್ಕೆ ಸೂ. ಭಾ. ೪-೩-೧೪ ನೋಡಿ.

4. ಉತ್ಪತ್ತ್ಯಾದಿವಾಕ್ಯಗಳು ಐಕ್ಯವಾಕ್ಯಗಳಲ್ಲಿ ಕೊನೆಗೊಂಡಿರುವದೇ ಆಧಾರವು.

(ಭಾಷ್ಯ)

೧೫೪. ಅಥವಾ "ತದೈಕ್ಷತ........ತತ್ತೇಜೋऽಸೃಜತ" (ಛಾಂ. ೬-೨-೩) ಇತ್ಯಾದ್ಯುತ್ಪತ್ತೇಃ ಪ್ರಾಕ್ "ಏಕಮೇವಾದ್ವಿತೀಯಮ್" (ಛಾಂ. ೬-೨-೨) ಇತಿ ಏಕತ್ವಂ ಪ್ರಕೀರ್ತಿತಮ್ । ತದೇವ ಚ "ತತ್ಸತ್ಯಂ ಸ ಆತ್ಮಾ ತತ್ತ್ವಮಸಿ" (ಛಾಂ. ೬-೮-೭) ಇತಿ ಏಕತ್ವಂ ಭವಿಷ್ಯತಿ ಇತಿ ತಾಂ ಭವಿಷ್ಯದ್ವೃತ್ತಿಮ್ ಅಪೇಕ್ಷ್ಯ ಯತ್ ಜೀವಾತ್ಮನೋಃ ಪೃಥಕ್ತ್ವಂ[1] ಯತ್ರ ಕ್ವಚಿತ್ ವಾಕ್ಯೇ ಗಮ್ಯಮಾನಂ ತತ್ ಗೌಣಮ್ । ಯಥಾ ಓದನಂ ಪಚತಿ ಇತಿ ತದ್ವತ್ ॥

(ಭಾಷ್ಯಾರ್ಥ)

ಅಥವಾ (ಈ ಶ್ಲೋಕಕ್ಕೆ ಹೀಗೂ ಅರ್ಥವನ್ನು ಮಾಡಬಹುದು): "ಅದು (ಆಲೋಚಿಸಿ) ನೋಡಿತು .... ಅದು ತೇಜಸ್ಸನ್ನು ಸೃಷ್ಟಿಸಿತು" (ಛಾಂ. ೬-೨-೩) ಮುಂತಾದ ಉತ್ಪತ್ತಿ (ಯನ್ನು ಹೇಳುವ) ಮುಂಚೆಯೇ "ಎರಡನೆಯದಿಲ್ಲದ ಒಂದೇ" (ಛಾಂ. ೬-೨-೨) ಎಂದು ಏಕತ್ವವನ್ನು ಹೇಳಿರುತ್ತದೆ. ಅದೇ ಏಕತ್ವವನ್ನು "ಅದು ಸತ್ಯವು, ಅದೇ ಆತ್ಮನು, ನೀನು ಅದಾಗಿರುವೆ" (ಛಾಂ. ೬-೮-೭) ಎಂದು (ಹೇಳ)ಲಾಗುವದು ಎಂಬ (ಕಾರಣದಿಂದ) ಆ ಭವಿಷ್ಯದ್ವೃತ್ತಿಯ ಅಪೇಕ್ಷೆಯಿಂದ ಜೀವಾತ್ಮರುಗಳಿಗೆ ಭೇದವನ್ನು ಯಾವದಾದರೊಂದು ವಾಕ್ಯದಲ್ಲಿ (ಹೇಳಿರುವಂತೆ) ತೋರುತ್ತದೆಯಲ್ಲ, ಅದು ಗೌಣವು. 'ಅನ್ನವನ್ನು ಅಡುತ್ತಾನೆ' ಎಂಬ ಪ್ರಯೋಗ ದಂತೆಯೇ[2] ಇದು.

---

1. ಉತ್ಪತ್ತಿ (ವಾಕ್ಯ) ಕ್ಕಿಂತ ಮೊದಲು (ಅದ್ವೈತವನ್ನು) ಹೇಳಿದೆಯಲ್ಲ, ಅದೇ ಮುಂದೆ (ಉಕ್ತ) ವಾಗುವದೆಂಬ ಕಾರಣದಿಂದ, ಜೀವಾತ್ಮರ ಪೃಥಕ್ತ್ವವು ಗೌಣವೇ, ಏಕೆಂದರೆ ಮುಖ್ಯತ್ವವು ಹೊಂದುವದಿಲ್ಲ-ಎಂದು ಶ್ಲೋಕಕ್ಕೆ ಈ ವ್ಯಾಖ್ಯಾನಕ್ಕೆ ತಕ್ಕಂತೆ ಅರ್ಥವನ್ನು ಮಾಡಿಕೊಳ್ಳಬೇಕು.

2. ಈ ಪ್ರಯೋಗದಲ್ಲಿ ಅನ್ನವೆಂಬ ಶಬ್ದವನ್ನು ಹೇಗೆ ಗೌಣಾರ್ಥದಲ್ಲಿ ಉಪಯೋಗಿಸಿದೆಯೋ ಹಾಗೆ ಶ್ರುತಿಯಲ್ಲಿ ಜೀವಪರಮಾತ್ಮರ ಭೇದವನ್ನು ಹೇಳುವಂತೆ ಕಾಣುವ ಶಬ್ದಗಳಿಗೆಲ್ಲ ಗೌಣಾರ್ಥವನ್ನು ಕಲ್ಪಿಸಬೇಕು, ಏಕೆಂದರೆ ಉಪಕ್ರಮೋಪಸಂಹಾರಗಳಿಂದ ಏಕತ್ವವು ಮುಖ್ಯವೆಂದು ಸಿದ್ಧವಾಗಿರುತ್ತದೆ.

## ಸೃಷ್ಟಿವಾಕ್ಯಗಳ ತಾತ್ಪರ್ಯ

### (ಭಾಷ್ಯ)

೧೫೫. ನನು ಯದಿ[1] ಉತ್ಪತ್ತೇಃ ಪ್ರಾಕ್ ಅಜಂ ಸರ್ವಮ್ ಏಕಮೇ‌ ಅದ್ವಿತೀಯಮ್ ತಥಾಪಿ ಉತ್ಪತ್ತೇರೂರ್ಧ್ವಂ ಜಾತಮ್ ಇದಂ ಸರ್ವಮ್ ಜೀವಾಶ್ಚ ಭಿನ್ನಾಃ ಇತಿ । ನೈವಮ್ । ಅನ್ಯಾರ್ಥತ್ವಾತ್ ಉತ್ಪತ್ತಿಶ್ರುತೀನಾಮ್ ಪೂರ್ವಮಪಿ ಪರಿಹೃತ ಏವ ಅಯಂ ದೋಷಃ " ಸ್ವಪ್ನವತ್ ಆತ್ಮಮಾಯಾ ವಿಸರ್ಜಿತಾಃ ಸಙ್ಘಾತಾಃ ಘಟಾಕಾಶೋತ್ಪತ್ತಿಭೇದಾದಿವತ್ ಜೀವಾನಾಮ್ ಉತ್ಪತ್ತಿ ಭೇದಾದಿಃ " ಇತಿ ಇತ ಏವ ಉತ್ಪತ್ತಿಭೇದಾದಿಶ್ರುತಿಭ್ಯಃ ಆಕೃಷ್ಯ । ಇಹ ಪುನ ಉತ್ಪತ್ತಿಶ್ರುತೀನಾಮ್ ಐದಂಪರ್ಯಪ್ರತಿಪಿಪಾದಯಿಷಯಾ ಉಪನ್ಯಾಸಃ ॥

### (ಭಾಷ್ಯಾರ್ಥ)

(ಆಕ್ಷೇಪ) :—ಸೃಷ್ಟಿಯಾಗುವ ಮೊದಲು ಎಲ್ಲವೂ ಜನ್ಮರಹಿತವಾದ ತನಗೆರಡನೆಯದಿಲ್ಲದ ಒಂದೇ (ತತ್ತ್ವವಾಗಿರುವ)ದಾದರೂ ಸೃಷ್ಟಿಯಾದ ಬಳಿಕ ಇ ಲ್ಲವೂ ಹುಟ್ಟಿರುತ್ತದೆ, ಜೀವರೂ ಬೇರೆಬೇರೆ (ಯಾಗಿರುತ್ತಾರಲ್ಲ) !

(ಸಮಾಧಾನ) :—ಹಾಗಲ್ಲ. ಏಕೆಂದರೆ ಸೃಷ್ಟಿಶ್ರುತಿಗಳಿಗೆ ಬೇರೆಯ ಪ್ರಯೋಜನವುಂಟು.

ಕನಸಿನ (ಸಂಘಾತ)ಗಳಂತೆ ಸಂಘಾತಗಳು ಆತ್ಮಮಾಯೆಯಿಂದ ಸೃಷ್ಟವಾ ರುತ್ತವೆ ; ಜೀವರುಗಳ ಉತ್ಪತ್ತಿ, ಭೇದ–ಮುಂತಾದದ್ದು ಘಟಾಕಾಶಗಳ ಉತ್ಪತ್ತಿ ಭೇದ–ಮುಂತಾದವುಗಳಂತೆ (ಗೌಣವು) ಎಂದು ಈ ಉತ್ಪತ್ತಿ, ಭೇದ–ಮುಂತಾ ಶ್ರುತಿಗಳಿಂದಲೇ (ವಿಷಯವನ್ನು) ತೆಗೆದುಕೊಂಡು ಹಿಂದೆಯೂ (ಕಾ. ೩–೯, ೧೦ ಈ ದೋಷಕ್ಕೆ ಪರಿಹಾರವನ್ನು ಹೇಳಿರುತ್ತದೆ. ಆದರೆ ಈಗ ಉತ್ಪತ್ತಿಶ್ರುತಿಗಳಿ ತಾತ್ಪರ್ಯವನ್ನು ತಿಳಿಸುವದಕ್ಕಾಗಿ[2] (ಹೀಗೆಂದು) ಹೇಳುತ್ತಾರೆ.

**ಮೃಲ್ಲೋಹವಿಸ್ಫುಲಿಙ್ಗಾದ್ಯೈಃ ಸೃಷ್ಟಿರ್ಯಾ ಚೋದಿತಾನ್ಯಥಾ ।**
**ಉಪಾಯಃ ಸೋಽವತಾರಾಯ ನಾಸ್ತಿ ಭೇದಃ ಕಥಂಚನ ॥ ೧೫ ॥**

೧೫. ಮಣ್ಣು, ಕಬ್ಬಿಣ, ಕಿಡಿ– ಮುಂತಾದ (ದೃಷ್ಟಾಂತ)ಗಳಿಂ ಬೇರೆ(ಬೇರೆ)ಯಾಗಿ ಸೃಷ್ಟಿಯನ್ನು ಹೇಳಿದೆಯಲ್ಲ, ಅದು (ವಿಷಯಕ್ಕೆ ಇಳಿಸುವದಕ್ಕೆ ಉಪಾಯವು. ಹೇಗೂ ಭೇದವಿರುವದಿಲ್ಲ.

---

1. ಯದ್ಯಪಿ ಎಂಬ ಅರ್ಥದಲ್ಲಿಯೇ ಇದನ್ನು ಉಪಯೋಗಿಸಿರುತ್ತದೆ.

2. ಶ್ರುತಿಯು ಗೌಣವಾದ ಉತ್ಪತ್ತಿಯನ್ನಾದರೂ ಹೇಳುವದೇಕೆ ?–ಎಂಬ ಪ್ರಶ್ನೆ ಉತ್ತರವನ್ನು ಕೊಡುವದಕ್ಕಾಗಿ.

(ಭಾಷ್ಯ)

೧೫೬. ಮೃಲ್ಲೋಹವಿಸ್ಫುಲಿಙ್ಗಾದಿದೃಷ್ಟಾನ್ತೋಪನ್ಯಾಸೈಃ ಸೃಷ್ಟಿಃ ಯಾ ಚ ಉದಿತಾ ಪ್ರಕಾಶಿತಾ[1] ಅನ್ಯಥಾ ಅನ್ಯಥಾ ಚ ಸ ಸರ್ವಃ ಸೃಷ್ಟಿಪ್ರಕಾರಃ ಜೀವ ಪರಮಾತ್ಮೈಕತ್ವಬುದ್ಧ್ಯವತಾರಾಯ ಉಪಾಯಃ ಅಸ್ಮಾಕಮ್ । ಯಥಾ ಪ್ರಾಣ ಸಂವಾದೇ ವಾಗಾದ್ಯಾಸುರಪಾಪ್ಮವೇಧಾದ್ಯಾಖ್ಯಾಯಿಕಾ ಕಲ್ಪಿತಾ ಪ್ರಾಣವೈಶಿಷ್ಟ್ಯ ಬೋಧಾವತಾರಾಯ ॥

(ಭಾಷ್ಯಾರ್ಥ)

**ಮಣ್ಣು, ಕಬ್ಬಿಣ, ಕಿಡಿ**—ಮುಂತಾದ ದೃಷ್ಟಾಂತಗಳನ್ನು ಕೊಟ್ಟು ಸೃಷ್ಟಿಯನ್ನು ಬೇರೆಬೇರೆಯಾಗಿ ಹೇಳಿದೆಯಲ್ಲ, ತಿಳಿಸಿಕೊಟ್ಟಿದೆಯಲ್ಲ, ಆ ಸೃಷ್ಟಿಪ್ರಕಾರವೆಲ್ಲ ಜೀವ ಪರಮಾತ್ಮರ ಐಕ್ಯದ ಬುದ್ಧಿಗೆ ಇಳಿಸುವದಕ್ಕೆ ಉಪಾಯವೆಂದು ನಮ್ಮ (ಮತವು). ಹೇಗೆ **ಪ್ರಾಣಸಂವಾದದಲ್ಲಿ**[2] ವಾಕ್ಕು ಮುಂತಾದವುಗಳಿಗೆ ಆಸುರಪಾಪದ ಹೊಡೆತ ವಾಯಿತು ಎಂಬ ಮುಂತಾಗಿ ಕಲ್ಪಿಸಿರುವ ಕಥೆ(ಯೆಲ್ಲ) ಪ್ರಾಣನ ಹೆಚ್ಚುಗಾರಿಕೆಯ ತಿಳಿವಳಿಕೆಗೆ ಇಳಿಸುವದಕ್ಕೆ (ಉಪಾಯವೋ ಹಾಗೆ).

(ಭಾಷ್ಯ)

೧೫೭. ತದಪಿ ಅಸಿದ್ಧಮ್ ಇತಿ ಚೇತ್ । ನ । ಶಾಖಾಭೇದೇಷು ಅನ್ಯಥಾ ಅನ್ಯಥಾ ಚ ಪ್ರಾಣಾದಿಸಂವಾದಶ್ರವಣಾತ್ । ಯದಿ ಹಿ ಸಂವಾದಃ ಪರಮಾರ್ಥ ಏವ ಅಭೂತ್ ಏಕರೂಪ ಏವ ಸಂವಾದಃ ಸರ್ವಶಾಖಾಸು ಅಶ್ರೋಷ್ಯತ[3], ವಿರುದ್ಧಾ ನೇಕಪ್ರಕಾರೇಣ ನಾಶ್ರೋಷ್ಯತ । ಶ್ರೂಯತೇ ತು । ತಸ್ಮಾತ್ ನ ತಾದರ್ಥ್ಯಂ ಸಂವಾದಶ್ರುತೀನಾಮ್ । ತಥಾ ಉತ್ಪತ್ತಿವಾಕ್ಯಾನಿ ಪ್ರತ್ಯೇತವ್ಯಾನಿ । ಕಲ್ಪಸರ್ಗ ಭೇದಾತ್ ಸಂವಾದಶ್ರುತೀನಾಮ್ ಉತ್ಪತ್ತಿಶ್ರುತೀನಾಂ ಚ ಪ್ರತಿಸರ್ಗಮ್ ಅನ್ಯಥಾ ತ್ವಮ್ ಇತಿ ಚೇತ್ । ನ । ನಿಷ್ಪ್ರಯೋಜನತ್ವಾತ್ ಯಥೋಕ್ತಬುದ್ಧ್ಯವತಾರ ಪ್ರಯೋಜನವ್ಯತಿರೇಕೇಣ । ನ ಹಿ ಅನ್ಯಪ್ರಯೋಜನವತ್ತ್ವಂ ಸಂವಾದೋತ್ಪತ್ತಿ

---

1. ಇಲ್ಲಿ "ಕಲ್ಪಿತಾ" ಎಂದು ವಾ॥ ಕಾ॥

2. ಬೃ. ೧-೩ ಏನ್ನು ನೋಡಿ. ವಾಕ್ಕು ಒಳ್ಳೆಯುದನ್ನಾಡುವದು ಮುಂತಾದ ಆಸಂಗವನ್ನು ಮಾಡಿದಾಗ ಕೆಟ್ಟಮಾತನ್ನಾಡುವದು ಮುಂತಾದ ಪಾಪವನ್ನು ಅಸುರರು ಇಂದ್ರಿಯಗಳಿಗೆ ಹತ್ತಿಸಿದರೆಂದು ಅಲ್ಲಿ ಹೇಳಿದೆ.

3. ಈ ವಾ॥ ಪಾಠವೇ ಸರಿ.

ಶ್ರುತೀನಾಂ ಶಕ್ಯಂ ಕಲ್ಪಯಿತುಮ್ । ತಥಾತ್ವಪ್ರತಿಪತ್ತಯೇ ಧ್ಯಾನಾರ್ಥಮ್ ಇತಿ ಚೇತ್ । ನ । ಕಲಹೋತ್ಪತ್ತಿಪ್ರಲಯಾನಾಂ ಪ್ರತಿಪತ್ತೇರನಿಷ್ಟತ್ವಾತ್ । ತಸ್ಮಾತ್ ಉತ್ಪತ್ತ್ಯಾದಿಶ್ರುತಯಃ ಆತ್ಮೈಕತ್ವಬುದ್ಧ್ಯವತಾರಾಯೈವ ನಾನ್ಯಾರ್ಥಾಃ ಕಲ್ಪಯಿತುಂ ಯುಕ್ತಾಃ । ಅತಃ ನಾಸ್ತಿ ಉತ್ಪತ್ತ್ಯಾದಿಕೃತಃ ಭೇದಃ ಕಥಂಚನ ॥--

(ಭಾಷ್ಯಾರ್ಥ)

(ಆಕ್ಷೇಪ) :—ಅದೂ ಸಿದ್ಧವಾಗಿಲ್ಲವಲ್ಲ[1] !

(ಪರಿಹಾರ) :—ಹಾಗಲ್ಲ. ಏಕೆಂದರೆ ಬೇರೆಬೇರೆಯ ಶಾಖೆಗಳಲ್ಲಿ ಬೇರೆಬೇರೆಯಾಗಿ[2] ಪ್ರಾಣಾದಿಸಂವಾದವು[3] ಶ್ರುತಿಯಲ್ಲಿರುತ್ತದೆ. ಸಂವಾದವು ನಿಜವಾಗಿಯೇ ನಡೆದಿದ್ದರೆ ಎಲ್ಲಾ ಶಾಖೆಗಳಲ್ಲಿಯೂ ಒಂದೇ ಬಗೆಯಾಗಿ ಶ್ರುತಿಯಲ್ಲಿರುತ್ತಿತ್ತು ; ವಿರುದ್ಧವಾದ ಅನೇಕ ಪ್ರಕಾರವಾಗಿ ಶ್ರುತಿಯು ಹೇಳುತ್ತಿರಲಿಲ್ಲ. ಆದರೆ (ವಿರುದ್ಧವಾಗಿ) ಹೇಳಿರುತ್ತದೆ. ಆದ್ದರಿಂದ ಸಂವಾದಶ್ರುತಿಗಳಿಗೆ ಆ (ಸಂವಾದವು ನಿಜವೆಂಬರ್ಥದಲ್ಲಿ ತಾತ್ಪರ್ಯವಿಲ್ಲ. ಇದರಂತೆಯೇ ಸೃಷ್ಟಿವಾಕ್ಯಗಳನ್ನೂ ತಿಳಿಯಬೇಕು.[4]

(ಪೂರ್ವಪಕ್ಷಿ) :—ಬೇರೆಬೇರೆಯ ಕಲ್ಪಗಳ ಸೃಷ್ಟಿಗಳು (ಬೇರೆಬೇರೆಯಾಗಿರು(ವದರಿಂದ ಸಂವಾದಶ್ರುತಿಗಳೂ ಸೃಷ್ಟಿಶ್ರುತಿಗಳೂ ಬೇರೆಬೇರೆಯಾಗಿವೆ (ಎನ್ನೋಣ).

---

1. ಪ್ರಾಣಸಂವಾದವು ಪರಮಾರ್ಥವಲ್ಲವೆಂದೂ ಸಿದ್ಧವಾಗಿರುವದಿಲ್ಲವಲ್ಲ !

2. ಉದಾಹರಣೆಗೆ ಛಾಂದೋಗ್ಯದಲ್ಲಿ (೫-೧) ಪ್ರಾಣಗಳು ತಮ್ಮಲ್ಲಿ ಯಾವನು ಶ್ರೇಷ್ಠನೆಂದು ತಿಳಿಯುವದಕ್ಕೆ ಪ್ರಜಾಪತಿಯ ಬಳಿಗೆ ಹೋದವೆಂದೂ ಆತನು ನಿಮ್ಮಲ್ಲಿ ಯಾವನು ಶರೀರವನ್ನು ಬಿಟ್ಟರೆ ಅದು ಅತ್ಯಂತ ಅಮಂಗಲವಾಗಿ ತೋರುವದೋ ಅವನು ಶ್ರೇಷ್ಠನು ಎಂದು ನಿರ್ಣಯಿಸಿದನೆಂದೂ ಇದೆ. ಐತರೇಯಾರಣ್ಯಕ (೨-೧-೪) ರಲ್ಲಿ ತಾವುತಾವೇ 'ನಮ್ಮಲ್ಲಿ ಯಾರು ಹೊರಟರೆ ಶರೀರವು ಬೀಳುವದೋ ಅವನೇ ಉಕ್ಥನು' ಎಂದು ಗೊತ್ತುಮಾಡಿಕೊಂಡವು ಎಂದಿದೆ. ಇತ್ಯಾದಿ.

3. ಇಲ್ಲಿರುವ ಆದಿ ಎಂಬುದಕ್ಕೆ ಅರ್ಥವೇನೆಂಬುದು ತಿಳಿಯದು. ಮುಖ್ಯಪ್ರಾಣನಲ್ಲದೆ ಮಿಕ್ಕ ಪ್ರಾಣಗಳು ಎಂದು ಆ॥ ವ್ಯಾಖ್ಯಾನದಲ್ಲಿ ಅರ್ಥಮಾಡಿದೆ.

4. ಅವುಗಳು ಒಂದೊಂದು ಕಡೆಯಲ್ಲಿ ಒಂದೊಂದು ಬಗೆಯಾಗಿರುತ್ತವೆಯಾದ್ದರಿಂದ ಅವಕ್ಕೆ ಸೃಷ್ಟಿಯಲ್ಲಿ ತಾತ್ಪರ್ಯವಿಲ್ಲ ಎಂದು ಭಾವ. ಸೂ. ಭಾ. ೧-೪-೧೪.

(ಸಿದ್ಧಾಂತಿ) :—ಹಾಗಲ್ಲ. ಏಕೆಂದರೆ (ನಾವು) ಹೇಳಿರುವ ಬುದ್ಧಿಗೆ ಇಳಿಸುವ ದೆಂಬ ಪ್ರಯೋಜನವನ್ನು ಬಿಟ್ಟರೆ (ಅವುಗಳಿಗೆ ಯಾವ ಬೇರೆಯ) ಪ್ರಯೋಜನವೂ ಇರುವದಿಲ್ಲ. ಸಂವಾದ (ಶ್ರುತಿಗಳಿಗೂ) ಉತ್ಪತ್ತಿಶ್ರುತಿಗಳಿಗೂ (ಮತ್ತೆ) ಯಾವ ಪ್ರಯೋಜನವಾದರೂ ಇದೆ ಎಂದು ಕಲ್ಪಿಸುವದಕ್ಕೆ ಆಗುವದೇ ಇಲ್ಲ.

(ಪೂರ್ವಪಕ್ಷಿ) :—ಆ (ಸ್ವರೂಪ)ವನ್ನು ಪಡೆಯುಕೊಂಡು[1] ಧ್ಯಾನಮಾಡುವದ ಕ್ಕಾಗಿ (ಅವುಗಳನ್ನು ಹೇಳಿದೆ ಎಂದರೊ) ?

(ಸಿದ್ಧಾಂತಿ) :—(ಅದು ಸರಿ)ಯಲ್ಲ. ಏಕೆಂದರೆ ಕಲಹ, ಉತ್ಪತ್ತಿ, ಪ್ರಲಯ- ಇವುಗಳನ್ನು ಪಡೆಯುವದು[2] ಯಾರಿಗೂ ಇಷ್ಟವಲ್ಲ. ಆದ್ದರಿಂದ ಸೃಷ್ಟಿ ಮುಂತಾದ ದ್ದನ್ನು ಹೇಳುವ ಶ್ರುತಿಗಳು ಆತ್ಮನು ಒಬ್ಬನೇ ಎಂಬ ಬುದ್ಧಿಗೆ ಇಳಿಸುವದಕ್ಕೇ (ಉಪಾಯವಾಗಿ) ಬಂದಿವೆಯೇ ಹೊರತು (ಅವುಗಳಿಗೆ) ಮತ್ತೆ ಬೇರೆ ಅರ್ಥವಿದೆ ಎಂದು ಕಲ್ಪಿಸುವದು ಸರಿಯಾಗಲಾರದು. ಆದ್ದರಿಂದ ಸೃಷ್ಟಿಯೇ ಮುಂತಾದವು ಗಳಿಂದಾದ ಭೇದವು ಹೇಗೂ ಇರುವದಿಲ್ಲ.

## ಕರ್ಮೋಪಾಸನಾವಾಕ್ಯಗಳ ಗತಿ

### (ಭಾಷ್ಯ)

೧೫೮. ಯದಿ ಪರ ಏವ ಆತ್ಮಾ ನಿತ್ಯಶುದ್ಧಬುದ್ಧಮುಕ್ತಸ್ವಭಾವಃ ಏಕಃ ಪರಮಾರ್ಥತಃ[3] ಸನ್ "ಏಕಮೇವಾದ್ವಿತೀಯಮ್" (ಛಾಂ. ೬–೨–೨) ಇತ್ಯಾದಿ ಶ್ರುತಿಭ್ಯಃ । ಅಸತ್ ಅನ್ಯತ್, ಕಿಮರ್ಥಾ ಇಯಮ್ ಉಪಾಸನಾ ಉಪದಿಷ್ಟಾ? "ಆತ್ಮಾ ವಾ ಅರೇ ದ್ರಷ್ಟವ್ಯಃ" (ಬೃ. ೨–೪–೫) "ಯ ಆತ್ಮಾಪಹತಪಾಪ್ಮಾ" (ಛಾಂ. ೮–೭–೧) "ಸ ಕ್ರತುಂ ಕುರ್ವೀತ" (ಛಾಂ. ೩–೧೪–೧) "ಆತ್ಮೇತ್ಯೇವೋಪಾಸೀತ" (ಬೃ. ೧–೪–೭) ಇತ್ಯಾದಿಶ್ರುತಿಭ್ಯಃ ? ಕರ್ಮಾಣಿ ಚ ಅಗ್ನಿಹೋತ್ರಾದೀನಿ ? ಶೃಣು ತತ್ರ ಕಾರಣಮ್—

---

1. ಪ್ರಾಣಗಳನ್ನು ಉಪಾಸನೆಮಾಡಿದರೆ ಅವುಗಳ ಆಧಿದೈವಕರೂಪದ ಸಾಕ್ಷಾತ್ಕಾರವೂ ಸಾಯುಜ್ಯವೂ ಆಗುವದೆಂದು ಪೂರ್ವಪಕ್ಷಿಯ ಅಭಿಪ್ರಾಯವಿರಬಹುದು.

2. ಪ್ರಾಣಸಂವಾದವೇ ಮುಂತಾದದ್ದೂ ಉತ್ಪತ್ತಿಯೇ ಮುಂತಾದದ್ದೂ ಸತ್ಯವೆಂದು ಧ್ಯಾನಮಾಡಬೇಕೆಂದು ವಿಧಿಸಿಲ್ಲ. ವಿಧಿಸಿದರೆ ಧ್ಯಾನಕ್ಕೆ ಅನುಗುಣವಾದ ಕಲಹವೇ ಮುಂತಾದ ಅನಿಷ್ಟಫಲವೂ ಆಗುತ್ತದೆ ಎಂದು ಭಾವ. ಪರಿಣಾಮಪ್ರಕ್ರಿಯೆಯು ಶ್ರುತಿಯಲ್ಲಿಯೂ ಸೂತ್ರದಲ್ಲಿಯೂ ಕಂಡರೂ ಪರಿಣಾಮವು ಸತ್ಯವೆಂಬುದಕ್ಕಲ್ಲ, ಉಪಾಸನೆಗೆ ಮತ್ತು ಐಕ್ಯಜ್ಞಾನಕ್ಕೆ. ಸೂ. ಭಾ. ೨–೧–೧೪, ೨–೧–೨೦.

3. "ಪರಮಾರ್ಥಃ ಸನ್" ಆ॥ ಕಾ॥ ವ್ಯಾ॥ "ಪರಮಾರ್ಥಸನ್" ಎಂದೇ ಆಚಾರ್ಯರು ಬರೆದಿದ್ದರೂ ಬರೆದಿರಬಹುದು.

(ಭಾಷ್ಯಾರ್ಥ)

(ಆಕ್ಷೇಪ) :—"ಎರಡನೆಯದಿಲ್ಲದ ಒಂದೇ" (ಛಾಂ. ೬–೨–೨) ಮುಂತಾದ ಶ್ರುತಿಗಳ (ಪ್ರಮಾಣ)ದಿಂದ ಯಾವಾಗಲೂ ಶುದ್ಧನಾಗಿ ಜ್ಞಾನಸ್ವರೂಪನಾಗಿ ಮುಕ್ತನಾಗಿರುವ ಸ್ವಭಾವದ ಪರಮಾತ್ಮನೊಬ್ಬನೇ ನಿಜವಾಗಿರುವವನು, ಮಿಕ್ಕದ್ದು ಹುಸಿತೋರಿಕೆ–ಎಂದಾದರೆ "ಎಲೆ, ಆತ್ಮನನ್ನೇ ನೋಡಬೇಕು" (ಬೃ ೨–೪–೫): "ಯಾವ ಆತ್ಮನು ನಾಶವಾಗಿರುವ ಪಾಪವುಳ್ಳವನೋ (ಅವನನ್ನು ಹುಡುಕಬೇಕು) (ಛಾಂ. ೮–೭–೧)", "ಅವನು (ಈ) ನಿಶ್ಚಯವನ್ನು ಮಾಡಬೇಕು"[1] (ಛಾಂ. ೩–೧೪–೧) "ಆತ್ಮನೆಂದೇ ಉಪಾಸನೆಮಾಡಬೇಕು" (ಬೃ. ೧–೪–೭) ಮುಂತಾದ ಶ್ರುತಿಗಳಿಂದ ಈ ಉಪಾಸನೆಯನ್ನೇಕೆ ಉಪದೇಶಮಾಡಿರುತ್ತದೆ? ಅಗ್ನಿಹೋತ್ರಾದಿ ಕರ್ಮಗಳನ್ನಾದರೂ (ಏತಕ್ಕೆ ಉಪದೇಶಮಾಡಿರುತ್ತದೆ[2]?)

(ಸಮಾಧಾನ) :—ಅದಕ್ಕೆ ಕಾರಣವನ್ನು ಕೇಳು :—

**ಆಶ್ರಮಾಸ್ತ್ರಿವಿಧಾ ಹೀನಮಧ್ಯಮೋತ್ಕೃಷ್ಟದೃಷ್ಟಯಃ ।**
**ಉಪಾಸನೋಪದಿಷ್ಟೇಯಂ ತದರ್ಥಮನುಕಮ್ಪಯಾ ॥ ೧೬ ॥**

೧೬. ಹೀನ, ಮಧ್ಯಮ, ಉತ್ಕೃಷ್ಟ–ಎಂಬ ದೃಷ್ಟಿಗಳುಳ್ಳ ಆಶ್ರಮಗಳು ಮೂರು ಬಗೆ. ಈ ಉಪಾಸನೆಯು ಅವರಿಗಾಗಿ ಕನಿಕರದಿಂದ ಉಪದಿಷ್ಟವಾಗಿರುತ್ತದೆ.

(ಭಾಷ್ಯ)

೧೫೯. ಆಶ್ರಮಾಃ ಆಶ್ರಮಿಣಃ ಅಧಿಕೃತಾಃ । ವರ್ಣಿನಶ್ಚ ಮಾರ್ಗಗಾಃ । ಆಶ್ರಮಶಬ್ದಸ್ಯ ಪ್ರದರ್ಶನಾರ್ಥತ್ವಾತ್ । ತ್ರಿವಿಧಾಃ । ಕಥಮ್? ಹೀನಮಧ್ಯಮೋತ್ಕೃಷ್ಟದೃಷ್ಟಯಃ । ಹೀನಾ ನಿಕೃಷ್ಟಾ । ಮಧ್ಯಮಾ ಉತ್ಕೃಷ್ಟಾ ಚ ದೃಷ್ಟಿಃ ದರ್ಶನಸಾಮರ್ಥ್ಯಂ ಯೇಷಾಂ ತೇ । ಮನ್ದಮಧ್ಯಮೋತ್ತಮಬುದ್ಧಿಸಾಮರ್ಥ್ಯೋಪೇ

1. ಇದೂ ಮುಂದಿನ ವಾಕ್ಯವೂ ಬೃಹದಾರಣ್ಯಕವಾಕ್ಯವೂ, ಜ್ಞಾನವಾಕ್ಯಗಳಾದರೂ ಪೂರ್ವಪಕ್ಷಿಯ ಅಭಿಪ್ರಾಯದಲ್ಲಿ ಇವು ಉಪಾಸನಾವಿಧಿಗಳು. ಸೂ. ಭಾ. ೧–೧–೪ ರಲ್ಲಿ ಈ ವೃತ್ತಿಕಾರರಮತವನ್ನು ಅನುವಾದಮಾಡಿಕೊಂಡು ಖಂಡಿಸಿದೆ. ಮೊದಲನೆಯ ಎರಡು ವಾಕ್ಯಗಳಲ್ಲಿಯೂ ಉಪಾಸನೆಯನ್ನೇ ವಿಧಿಸಿದೆ ಎಂಬ ಆ॥ ವ್ಯಾಖ್ಯಾನವು ಭಾಷ್ಯಾನುಗುಣವಲ್ಲ.

2. ಕರ್ಮೋಪಾಸನೆಗಳನ್ನು ವಿಧಿಸಿರುವದಕ್ಕೆ ಉಪಪತ್ತಿಯಿಲ್ಲದೆ ಹೋಗುವದರಿಂದ ಏಕತ್ವಪಕ್ಷವು ಸರಿಯಲ್ಲ ಎಂದು ಭಾವ.

ಪೇತಾಃ ಇತ್ಯರ್ಥಃ । ಉಪಾಸನಾ ಉಪದಿಷ್ಟಾ ಇಯಂ ತದರ್ಥಂ ಮನ್ದಮಧ್ಯಮ ದೃಷ್ಟ್ಯಾಶ್ರಮಾದ್ಯರ್ಥಂ ಕರ್ಮಾಣಿ ಚ । ನ ಚ ಆತ್ಮಾ ಏಕ ಏವ ಅದ್ವಿತೀಯಃ ಇತಿ ನಿಶ್ಚಿತೋತ್ತಮದೃಷ್ಟ್ಯರ್ಥಂ ದಯಾಲುನಾ ವೇದೇನ । ಅನುಕಮ್ಪಯಾ ಸನ್ಮಾರ್ಗಗಾಃ ಸನ್ತಃ ಕಥಮ್ ಇಮಾಮ್ ಉತ್ತಮಾಮ್ ಏಕತ್ವದೃಷ್ಟಿಂ ಪ್ರಾಪ್ನುಯುಃ ಇತಿ । "ಯನ್ಮನಸಾ ನ ಮನುತೇ ಯೇನಾಹುರ್ಮನೋ ಮತಮ್। ತದೇವ ಬ್ರಹ್ಮ ತ್ವಂ ವಿದ್ಧಿ ನೇದಂ ಯದಿದಮುಪಾಸತೇ" (ಕೇ. ೧–೫) "ತತ್ ತ್ವಮಸಿ" (ಛಾಂ. ೬–೮–೭) "ಆತ್ಮೈವೇದಂ ಸರ್ವಮ್" (ಛಾಂ. ೭–೨೫–೨) ಇತ್ಯಾದಿ ಶ್ರುತಿಭ್ಯಃ ॥

(ಭಾಷ್ಯಾರ್ಥ)

ಆಶ್ರಮಿಗಳು ಎಂದರೆ ಆಶ್ರಮದಲ್ಲಿರುವ ಅಧಿಕಾರಿಗಳು; ಮತ್ತು ಮಾರ್ಗದಲ್ಲಿರುವ[1] ವರ್ಣದವರು (ಎಂದರ್ಥ); ಏಕೆಂದರೆ (ಇಲ್ಲಿರುವ) ಆಶ್ರಮಶಬ್ದವು (ವರ್ಣಗಳಿಗೂ) ಉಪಲಕ್ಷಣವಾಗಿ ಬಂದಿರುತ್ತದೆ. (ಅವರು) ಮೂರು ಬಗೆ. ಹೇಗೆಂದರೆ, (ಅವರು) ಹೀನಮಧ್ಯಮೋತ್ಕೃಷ್ಟ ದೃಷ್ಟಿಗಳು; ಹೀನ ಎಂದರೆ ಕೀಳಾದ ಮಧ್ಯಮವಾದ ಮತ್ತು ಉತ್ಕೃಷ್ಟವಾದ ದೃಷ್ಟಿಯ ಸಾಮರ್ಥ್ಯವು ಯಾರಿಗೆ ಇರುವದೋ ಅವರು (ಹೀನಮಧ್ಯಮೋತ್ಕೃಷ್ಟದೃಷ್ಟಿಗಳು); ಕೀಳ್ತರದ, ನಡುತರದ, ಮತ್ತು ಮೇಲ್ತರದ ಬುದ್ಧಿಶಕ್ತಿಯಿಂದ ಕೂಡಿರುವವರು ಎಂದು ಅರ್ಥ. ಈ ಉಪಾಸನೆಯನ್ನೂ, ಕರ್ಮಗಳನ್ನೂ ಅವರಿಗಾಗಿ (ಅ) ಕೀಳ್ತರದ, ನಡುತರದ, ದೃಷ್ಟಿಯುಳ್ಳ ಆಶ್ರಮಿಗಳೇ ಮುಂತಾದವರಿಗಾಗಿ ಉಪದೇಶಮಾಡಲಾಗಿದೆಯೇ ಹೊರತು ಆತ್ಮನು ಎರಡನೆಯದಿಲ್ಲದ ಒಬ್ಬನೇ ಎಂಬ ನಿಶ್ಚಿತವಾದ ಉತ್ತಮವಾದ ಏಕತ್ವದೃಷ್ಟಿಯವರಿಗಲ್ಲ[2]. (ಅಂಥವರಿಗಾಗಿ) ದಯಾಳುವಾದ ವೇದದಿಂದ "(ಇವರು) ಸನ್ಮಾರ್ಗದಲ್ಲಿ ನಡೆಯುವವರಾಗಿ ಹೇಗಾದರೂ ಈ ಉತ್ತಮವಾದ ಏಕತ್ವದೃಷ್ಟಿಯನ್ನು ಪಡೆದುಕೊಳ್ಳಲಿ!" ಎಂದು ಕನಿಕರದಿಂದ (ಉಪದೇಶಮಾಡಿರುತ್ತದೆ.) "ಯಾವದನ್ನು ಮನಸ್ಸಿನಿಂದ ಮನನಮಾಡಲಾರನೋ ಯಾವದರಿಂದ ಮನಸ್ಸೂ ಮನನಮಾಡ

---

1. ವೈದಿಕಮಾರ್ಗದಲ್ಲಿರುವ ಎಂದರ್ಥ. ಕರ್ಮವನ್ನೂ ಉಪಾಸನವನ್ನೂ ವೈದಿಕರಿಗೇ ವಿಧಿಸಿರುತ್ತದೆ.

2. ಆದ್ದರಿಂದ "ಸ ಆತ್ಮಾ ಸ ವಿಜ್ಞೇಯಃ" ಎಂದು ಇಲ್ಲಿ ಹೇಳಿರುವದು ಉತ್ತಮದೃಷ್ಟಿಯುಳ್ಳವರಿಗಾಗಿ, ಇದು ಉಪಾಸನೆಯ ವಿಧಿಯಲ್ಲ ಎಂದು ಭಾವ. ಆತ್ಮನನ್ನು ಹುಡುಕಬೇಕು, ಅರಿತುಕೊಳ್ಳಬೇಕು–ಎಂಬ ವ್ಯವಹಾರವುಕೂಡ ಅರಿಯುವದಕ್ಕೆ ಮೊದಲೇ ಎಂದು ಹಿಂದೆಯೇ (೧–೧೮) ರಲ್ಲಿ ಹೇಳಿದೆ. ಸೂ. ಭಾ. ೧.೧-೪, ೧ ೧–೧೭, ೧ ೨–೬ ಮುಂತಾದ ಕಡೆಗಳಲ್ಲಿಯೂ ಇದನ್ನು ಪ್ರತಿಪಾದಿಸಿರುತ್ತದೆ.

ಲ್ಪಡುವದೆಂದು ಹೇಳುವರೋ ಅದೇ ಬ್ರಹ್ಮವೆಂದು ನೀನು ತಿಳಿ; ಯಾವದನ್ನು ಇದು ಎಂದು ಉಪಾಸನೆಮಾಡುತ್ತಾರೋ ಅದನ್ನಲ್ಲ" (ಕೇ. ೧-೫) "ಅದು ನೀನಾಗಿರುವೆ" (ಛಾಂ. ೬-೮-೭) "ಇದೆಲ್ಲವೂ ಆತ್ಮನೇ" (ಛಾಂ. ೭-೨೫-೨) ಎಂಬಿವೇ ಮುಂತಾದ ಶ್ರುತಿಗಳು[1] ಇವಕ್ಕೆ ಪ್ರಮಾಣವು.

## ರಾಗದ್ವೇಷಾದಿಗಳಿಗೆಡೆಯಿಲ್ಲದ್ದರಿಂದ ಅದ್ವೈತವೇ ಸರಿಯಾದ ದರ್ಶನ

(ಭಾಷ್ಯ)

೧೬೦. ಶಾಸ್ತ್ರೋಪಪತ್ತಿಭ್ಯಾಮ್ ಅವಧಾರಿತತ್ವಾತ್ ಅದ್ವಯಾತ್ಮದರ್ಶನಂ ಸಮ್ಯಗ್ದರ್ಶನಮ್ । ತದ್ಬಾಹ್ಯತ್ವಾತ್ ಮಿಥ್ಯಾದರ್ಶನಮ್ ಅನ್ಯತ್ । ಇತಶ್ಚ ಮಿಥ್ಯಾದರ್ಶನಂ ದ್ವೈತಿನಾಮ್ । ರಾಗದ್ವೇಷಾದಿದೋಷಾಸ್ಪದತ್ವಾತ್ । ಕಥಮ್ ?—

(ಭಾಷ್ಯಾರ್ಥ)

ಶಾಸ್ತ್ರ (ಪ್ರಮಾಣ), ಯುಕ್ತಿ (ಈ ಎರಡ)ರಿಂದಲೂ ನಿರ್ಧರಿಸಿರುವದರಿಂದ ಅದ್ವಯಾತ್ಮದರ್ಶನವೇ ಸರಿಯಾದ ದರ್ಶನವು. ಆ (ಎರಡಕ್ಕೂ) ಹೊರಚ್ಚಾಗಿರುವದರಿಂದ ಮಿಕ್ಕದ್ದು ತಪ್ಪುದರ್ಶನವು. ದ್ವೈತಿಗಳದು ತಪ್ಪುದರ್ಶನವೆಂಬುದು ಈ ಕಾರಣದಿಂದಲೂ (ಸಿದ್ಧವಾಗುತ್ತದೆ. ಅದೇನೆಂದರೆ ಅದು) ರಾಗ, ದ್ವೇಷ-ಮುಂತಾದ ದೋಷಗಳಿಗೆ ಎಡೆಯಾಗಿರುತ್ತದೆ. (ಅದು) ಹೇಗೆ ? (ಎಂದರೆ) :-

**ಸ್ವಸಿದ್ಧಾನ್ತವ್ಯವಸ್ಥಾಸು ದ್ವೈತಿನೋ ನಿಶ್ಚಿತಾ ದೃಢಮ್ ।**
**ಪರಸ್ಪರಂ ವಿರುಧ್ಯನ್ತೇ ತೈರಯಂ ನ ವಿರುಧ್ಯತೇ ॥ ೧೭ ॥**

೧೭. ತಮ್ಮ ಸಿದ್ಧಾಂತಗಳ ವ್ಯವಸ್ಥೆಗಳಲ್ಲಿ ದ್ವೈತಿಗಳು ದೃಢವಾಗಿ ನಿಶ್ಚಿತರಾಗಿರುವರಾಗಿ ಒಬ್ಬರಿಗೊಬ್ಬರು ವಿರುದ್ಧವಾಗಿರುತ್ತಾರೆ. ಇದು ಅವರಿಗೆ ವಿರುದ್ಧವಾಗಿಲ್ಲ.

---

1. ಪರಮಾತ್ಮನಿಗೆ ಉಪಾಸ್ಯತ್ವವೇ ನಿಜವಾದ ಸ್ವರೂಪವಾದರೆ ಹೀಗೆಂದು ಶ್ರುತಿಗಳು ಹೇಳುತ್ತಿರಲಿಲ್ಲ ಎಂದು ಭಾವ.

(ಭಾಷ್ಯ)

೧೬೧. ಸ್ವಸಿದ್ಧಾನ್ತವ್ಯವಸ್ಥಾಸು ಸ್ವಸಿದ್ಧಾನ್ತರಚನಾನಿಯಮೇಷು ಕಪಿಲಕಣಾದಬುದ್ಧಾರ್ಹತಾದಿದೃಷ್ಟ್ಯನುಸಾರಿಣಃ ದ್ವೈತಿನಃ ನಿಶ್ಚಿತಾಃ । ಏವಮೇವ ಏಷ ಪರಮಾರ್ಥಃ ನಾನ್ಯಥಾ ಇತಿ ತತ್ರ ತತ್ರ ಅನುರಕ್ತಾಃ, ಪ್ರತಿಪಕ್ಷಂ ಚ ಆತ್ಮನಃ ಪಶ್ಯನ್ತಃ ತಂ ದ್ವಿಷನ್ತಃ ಇತ್ಯೇವಂ ರಾಗದ್ವೇಷೋಪೇತಾಃ ಸ್ವಸಿದ್ಧಾನ್ತದರ್ಶನನಿಮಿತ್ತಮೇವ ಪರಸ್ಪರಮ್ ಅನ್ಯೋನ್ಯಂ ವಿರುಧ್ಯನ್ತೇ । ತೈಃ ಅನ್ಯೋನ್ಯವಿರೋಧಿಭಿಃ ಅಸ್ಮದೀಯಃ ಅಯಂ ವೈದಿಕಃ ಸರ್ವಾನನ್ಯತ್ವಾತ್ ಆತ್ಮೈಕತ್ವದರ್ಶನಪಕ್ಷಃ ನ ವಿರುಧ್ಯತೇ । ಯಥಾ ಸ್ವಹಸ್ತಪಾದಾದಿಭಿಃ । ಏವಂ ರಾಗದ್ವೇಷಾದಿದೋಷಾನಾಸ್ಪದತ್ವಾತ್ ಆತ್ಮೈಕತ್ವಬುದ್ಧಿರೇವ ಸಮ್ಯಗ್ದರ್ಶನಮ್ ಇತಿ ಅಭಿಪ್ರಾಯಃ ॥

(ಭಾಷ್ಯಾರ್ಥ)

ದ್ವೈತಿಗಳು ಎಂದರೆ **ಕಪಿಲ, ಕಣಾದ, ಬುದ್ಧ, ಅರ್ಹತ** ಮುಂತಾದವರ ದೃಷ್ಟಿಯನ್ನು ಅವಲಂಬಿಸಿರುವವರು[1], ತಮ್ಮ ತಮ್ಮ ಸಿದ್ಧಾಂತಗಳ ವ್ಯವಸ್ಥೆಗಳಲ್ಲಿ ತಮ್ಮ (ತಮ್ಮ) ಸಿದ್ಧಾಂತಗಳನ್ನು ಕಟ್ಟುವ ನಿಯಮಗಳಲ್ಲಿ[2] ನಿಶ್ಚಿತರಾಗಿ ಈ ಪರಮಾರ್ಥವು ಹೀಗೆಯೇ ಬೇರೆಯ ಪ್ರಕಾರದಿಂದಲ್ಲ ಎಂದು ಆಯಾ (ಸಿದ್ಧಾಂತನಿಯಮ) ದಲ್ಲಿ ಅನುರಾಗವುಳ್ಳವರಾಗಿ, ತಮಗೆ ಎದುರುಪಕ್ಷವು (ಇಂಥದ್ದೆಂದು) ತಿಳಿಯುತ್ತಾ ಅದನ್ನು ಹಗೆಮಾಡುತ್ತಾ (ಇರುವರು). ಹೀಗೆ ರಾಗದ್ವೇಷಗಳಿಂದ ಕೂಡಿದವರಾಗಿ ತಮ್ಮ ಸಿದ್ಧಾಂತವಾಗಿರುವ ದರ್ಶನದ ಕಾರಣದಿಂದಲೇ ಒಬ್ಬರಿಗೊಬ್ಬರಿಗೆ ವಿರುದ್ಧರಾಗಿರುತ್ತಾರೆ[3]. (ಹಾಗೆ) ಒಬ್ಬರಿಗೊಬ್ಬರು ವಿರೋಧಿಗಳಾಗಿರುವ ಅವರಿಗೆ ಈ ವೈದಿಕವಾದ ಆತ್ಮೈಕತ್ವದರ್ಶನವೆಂಬ ನಮ್ಮ ಪಕ್ಷವು, ಯಾವದಕ್ಕೂ ಭಿನ್ನವಾಗಿರುವದಿಲ್ಲವಾದ್ದರಿಂದ[4], ವಿರುದ್ಧವಾಗಿರುವದಿಲ್ಲ; ಹೇಗೆ ತನ್ನ ಕೈಕಾಲು—ಮುಂತಾದವುಗಳಿಗೆ (ತಾನು

---

1. ಇವರೆಲ್ಲರಿಗೂ ತರ್ಕವೇ ಮುಖ್ಯವಾಗಿರುವದರಿಂದ ಇವರನ್ನು ತಾರ್ಕಿಕರೆಂದು ಆಚಾರ್ಯರು ಕರೆದಿದ್ದಾರೆ. ಪೀಠಿಕೆಯನ್ನು ನೋಡಿ.

2. ಸಿದ್ಧಾಂತಗಳನ್ನು ಕೆಲವು ಯುಕ್ತಿಸಿದ್ಧವಾದ ನಿಯಮಗಳಿಂದ ಕಟ್ಟುವರೇ ಹೊರತು ಅವು ಅನುಭವಸಮ್ಮತವಲ್ಲ ಎಂಬುದನ್ನು 'ರಚನಾನಿಯಮೇಷು' ಎಂಬ ಮಾತಿನಿಂದ ಸೂಚಿಸಿದೆ.

3. ತಮ್ಮ ಸಿದ್ಧಾಂತಕ್ಕೆ ಅನುಗುಣವಾದ ಸಿದ್ಧಾಂತವುಳ್ಳವರಲ್ಲಿ ರಾಗ; ಪ್ರತಿಕೂಲವಾದ ಸಿದ್ಧಾಂತವುಳ್ಳವರಲ್ಲಿ ದ್ವೇಷ-ಹೀಗೆ ದೋಷಯುಕ್ತರಾಗಿರುವದರಿಂದ ಒಬ್ಬರಿಗೊಬ್ಬರು ವಿರುದ್ಧರಾಗಿರುತ್ತಾರೆ.

4. ಏಕೆಂದರೆ ಅದ್ವೈತಾತ್ಮನಿಗಿಂತ ಬೇರೆಯಾಗಿರುವದೇ ಇಲ್ಲ.

ವಿರೋಧಿಯಲ್ಲವೋ ಹಾಗೆಯೇ ಇದು). **ಹೀಗೆ ರಾಗ, ದ್ವೇಷ-ವುುಂತಾದ ದೋಷಗಳಿಗೆ ಎಡೆಯಿಲ್ಲದೆ ಇರುವದರಿಂದ ಆತ್ಮೈಕತ್ವಬುದ್ಧಿಯೇ ಸರಿಯಾದ ತಿಳಿವಳಿಕೆ ಎಂದು ಅಭಿಪ್ರಾಯ.**

೧೬೨. ಕೇನ ಹೇತುನಾ ತೈಃ ನ ವಿರುಧ್ಯತೇ ಇತಿ ? ಉಚ್ಯತೇ—

(ಭಾಷ್ಯ)

(ಇದು) ಯಾವ ಕಾರಣದಿಂದ ಅವರಿಗೆ ವಿರುದ್ಧವಲ್ಲ ?-ಎಂದರೆ ಹೇಳುತ್ತಾರೆ :-

**ಅದ್ವೈತಂ ಪರಮಾರ್ಥೋ ಹಿ ದ್ವೈತಂ ತದ್ಭೇದ ಉಚ್ಯತೇ ।**
**ತೇಷಾಮುಭಯಥಾ ದ್ವೈತಂ ತೇನಾಯಂ ನ ವಿರುಧ್ಯತೇ ॥ ೧೮ ॥**

೧೮. ಏಕೆಂದರೆ ಅದ್ವೈತವು ಪರಮಾರ್ಥವು; ದ್ವೈತವು ಅದರ ಭೇದವೆನಿಸುತ್ತದೆ. ಅವರಿಗೆ ಎರಡು ಪ್ರಕಾರದಿಂದಲೂ ದ್ವೈತವೇ. ಆದ್ದರಿಂದ ಇದು ವಿರುದ್ಧವಲ್ಲ.

(ಭಾಷ್ಯ)

೧೬೩. ಅದ್ವೈತ**ಮ್** ಪರಮಾರ್ಥಃ ಹಿ ಯಸ್ಮಾತ್ ದ್ವೈತಂ ನಾನಾತ್ವಂ ತಸ್ಯ ಅದ್ವೈತಸ್ಯ ಭೇದಃ ತದ್ಭೇದಃ ತಸ್ಯ ಕಾರ್ಯಮ್ ಇತ್ಯರ್ಥಃ । "ಏಕಮೇವಾದ್ವಿತೀಯಮ್" (ಛಾಂ. ೬-೨-೧) "ತತ್ ತೇಜೋಽಸೃಜತ" (ಛಾಂ. ೬-೨-೩) ಇತಿ ಶ್ರುತೇಃ । ಉಪಪತ್ತೇಶ್ಚ । ಸ್ವಚಿತ್ತಸ್ಪನ್ದನಾಭಾವೇ ಸಮಾಧೌ ಮೂರ್ಛಾಯಾಂ ಸುಸುಪ್ತೌ ಚಾಭಾವಾತ್ । ಅತಃ ತದ್ಭೇದ ಉಚ್ಯತೇ ದ್ವೈತಮ್ । ದ್ವೈತಿನಾಂ ತು ತೇಷಾಂ ಪರಮಾರ್ಥತಶ್ಚ[1] ಅಪರಮಾರ್ಥತಶ್ಚ ಉಭಯಥಾಪಿ ದ್ವೈತಮೇವ । ಯದಿ ಚ ತೇಷಾಂ ಭ್ರಾನ್ತಾನಾಂ ದ್ವೈತದೃಷ್ಟಿಃ, ಅಸ್ಮಾಕಮ್ ಅದ್ವೈತದೃಷ್ಟಿಃ ಅಭ್ರಾನ್ತಾನಾಮ್, ತೇನ ಅಯಂ ಹೇತುನಾ ಅಸ್ಮತ್ಪಕ್ಷಃ ನ ವಿರುಧ್ಯತೇ ತೈಃ । "ಇನ್ದ್ರೋ ಮಾಯಾಭಿಃ ಪುರುರೂಪ ಈಯತೇ" (ಬೃ. ೨-೫-೧೯) "ನ ತು ತದ್ದ್ವಿತೀಯಮಸ್ತಿ" (ಬೃ. ೪-೩-೨೩) ಇತಿ ಶ್ರುತೇಃ । ಯಥಾ ಮತ್ತಗಜಾರೂಢಃ ಉನ್ಮತ್ತಂ ಭೂಮಿಷ್ಠಂ[2] "ಗಜಾರೂಢೋಽಹಮ್ ವಾಹಯ ಮಾಂ ಪ್ರತಿ" ಇತಿ ಬ್ರುವಾಣಮಪಿ ತಂ ಪ್ರತಿ ನ ವಾಹಯತಿ ಅವಿರೋಧಬುದ್ಧ್ಯಾ, ತದ್ವತ್।

---

1. 'ಪರಮಾರ್ಥತೋಽಪರಮಾರ್ಥತಶ್ಚ' ವಾ॥

2. 'ಪ್ರತಿ' ಎಂದು ಆ॥ ಕಾ॥ ಗಳಲ್ಲಿ ಹೆಚ್ಚಾಗಿರುವದು ಬೇಕಿಲ್ಲ.

ತತಃ ಪರಮಾರ್ಥತಃ ಬ್ರಹ್ಮವಿತ್ ಆತ್ಮೈವ ದ್ವೈತಿನಾಮ್ । ತೇನ ಅಯಂ ಹೇತುನಾ ಅಸ್ಮತ್ಪಕ್ಷಃ ನ ವಿರುಧ್ಯತೇ ತೈಃ ॥

(ಭಾಷ್ಯಾರ್ಥ)

(೫) ಏಕೆಂದರೆ ಅದ್ವೈತವು ಪರಮಾರ್ಥವು, ದ್ವೈತವು ನಾನಾತ್ವವು ಅದರ ಭೇದವು ಆ ಅದ್ವೈತದ ಕಾರ್ಯವು ಎನಿಸಿರುತ್ತದೆ. "ಎರಡನೆಯದಿಲ್ಲದ ಒಂದೇ" (ಛಾಂ. ೬-೨-೧), "ಅದು ತೇಜಸ್ಸನ್ನು ಸೃಷ್ಟಿಸಿತು" (ಛಾಂ. ೬-೨-೩) ಎಂಬ ಶ್ರುತಿಯು[1] ಇದಕ್ಕೆ ಪ್ರಮಾಣವು. **ಯುಕ್ತಿಯಿಂದಲೂ (ಹೀಗೆಂದು ಏರ್ಪಡುತ್ತದೆ). ಏಕೆಂದರೆ ತನ್ನ ಚಿತ್ತದ ಅಲುಗಾಟವಿಲ್ಲದ ಸಮಾಧಿಯಲ್ಲಿ, ಮೂರ್ಛೆಯಲ್ಲಿ, ಮತ್ತು ತನಿನಿದ್ರೆಯಲ್ಲಿ (ದ್ವೈತವು) ಇರುವದಿಲ್ಲ[2].** ಆದ್ದರಿಂದ ದ್ವೈತವು ಆ (ಅದ್ವೈತ)ದ ಭೇದವೆನಿಸುತ್ತದೆ. ಆದರೆ ಆ ದ್ವೈತಿಗಳ (ಮತದಲ್ಲಿ) ನಿಜವಾಗಿಯೂ ಭ್ರಾಂತಿಯಿಂದಲೂ, ಎರಡು ಪ್ರಕಾರದಿಂದಲೂ, ದ್ವೈತವೇ[3]. ಅವರು ಭ್ರಾಂತರಾಗಿರುವದರಿಂದ ದ್ವೈತದೃಷ್ಟಿಯೂ, ಅಭ್ರಾಂತರಾಗಿರುವದರಿಂದ ನಮಗೆ ಅದ್ವೈತದೃಷ್ಟಿ ಎಂದಾದರೆ, (ಆಗ) ಆ ಕಾರಣದಿಂದ ಈ ನಮ್ಮ ಪಕ್ಷವು ಅವರಿಗೆ ವಿರುದ್ಧವಾಗುವದಿಲ್ಲ. "ಇಂದ್ರನು ಮಾಯೆಗಳಿಂದ ಬಹುರೂಪವಾಗಿ ತೋರುವನು" (ಬೃ. ೨-೫-೧೯), "ಆದರೆ ಅಲ್ಲಿ ಎರಡನೆಯದಿರುವದಿಲ್ಲ[4]" (ಬೃ. ೪-೩-೨೩) ಎಂಬ ಶ್ರುತಿಯಿಂದ (ಇದು ಸಿದ್ಧವಾಗುತ್ತದೆ). ಹೇಗೆ ಮದ್ದಾನೆಯನ್ನೇರಿರುವವನು, ನೆಲದಮೇಲಿದ್ದುಕೊಂಡಿರುವ ಹುಚ್ಚ(ನೊಬ್ಬನು) "ನಾನು ಆನೆಯನ್ನೇ)ರಿರುವೆನು, ನನ್ನಕಡೆಗೆ (ನಿನ್ನ ಆನೆಯನ್ನು) ಬಿಡು" ಎಂದು ಹೇಳಿದರೂ (ಅವನಲ್ಲಿ) ವಿರೋಧಬುದ್ಧಿಯನ್ನು ಮಾಡದೆ ಅವನ ಕಡೆಗೆ (ಆನೆಯನ್ನು) ಬಿಡದಿರುವನೋ ಅದರಂತೆಯೇ (ಇದು). ಆದ್ದರಿಂದ ಬ್ರಹ್ಮಜ್ಞಾನಿಯು ದ್ವೈತಿಗಳಿಗೆ ನಿಜವಾಗಿ ಆತ್ಮನೇ ಆಗಿರುತ್ತಾನೆ; ಆದ್ದರಿಂದ ಈ ಕಾರಣದಿಂದ ನಮ್ಮ ಈ ಪಕ್ಷವು ಅವರಿಗೆ ವಿರುದ್ಧವಾಗಿರುವದಿಲ್ಲ.

---

1. ಅದ್ವೈತದಿಂದ ದ್ವೈತವೆಲ್ಲವೂ ಬಂದಿದೆ, ಆದ್ದರಿಂದ ಅದ್ವೈತವೇ ಪರಮಾರ್ಥವು ಎಂದು ಶ್ರುತಿಯ ಅಭಿಪ್ರಾಯ.

2. ಆದ್ದರಿಂದ ಅದ್ವೈತದಲ್ಲಿಯೇ ದ್ವೈತವು ಆರೋಪಿತವಾಗಿರುವದೆಂಬುದು ಅನುಭವಸಮ್ಮತ.

3. ಆದ್ದರಿಂದ ಶ್ರುತ್ಯನುಭವವಿರುದ್ಧವಾದ ಮತದವರು.

4. ಭ್ರಾಂತಿಯಿಂದ ದ್ವೈತವು ತೋರುವದೆಂಬುದಕ್ಕೂ ಅದ್ವೈತದಲ್ಲಿ ದ್ವೈತವು ಅಡಗಿದೆ ಎಂಬುದಕ್ಕೂ ಸುಷುಪ್ತಿಯ ಅನುಭವವಿದೆಯೆಂದು ಈ ಎರಡು ಶ್ರುತಿಗಳು ಹೇಳುವವು.

(ಭಾಷ್ಯ)

೧೬೪. ದ್ವೈತಮ್ ಅದ್ವೈತಭೇದಃ ಇತಿ ಉಕ್ತೇ ದ್ವೈತಮಪಿ ಅದ್ವೈತವತ್ ಪರಮಾರ್ಥಸತ್ ಇತಿ ಸ್ಯಾತ್ ಕಸ್ಯಚಿತ್ ಆಶಙ್ಕಾ ಇತ್ಯತಃ ಆಹ—

(ಭಾಷ್ಯಾರ್ಥ)

ದ್ವೈತವು ಅದ್ವೈತದ ಭೇದವು ಎಂದು ಹೇಳಿರುವದರಿಂದ ಅದ್ವೈತದಂತೆ ದ್ವೈತವೂ ನಿಜವಾಗಿರುವದೆಂದು ಯಾವನಿಗಾದರೂ ಆಶಂಕೆಯುಂಟಾಗಬಹುದು[1]. ಆದ್ದರಿಂದ ಅದಕ್ಕೆ (ಪರಿಹಾರವನ್ನು) ಹೇಳುತ್ತಾರೆ ;—

**ಮಾಯಯಾ ಭಿದ್ಯತೇ ಹ್ಯೇತನ್ನಾನ್ಯಥಾಜಂ ಕಥಂಚನ ।**
**ತತ್ತ್ವತೋ ಭಿದ್ಯಮಾನೇ ಹಿ ಮರ್ತ್ಯತಾಮಮೃತಂ ವ್ರಜೇತ್ ॥ ೧೯ ॥**

೧೯. ಇದು ಮಾಯೆಯಿಂದಲೇ ಭಿನ್ನವಾಗಿರುತ್ತದೆ. ಅಜವಾದದ್ದು (ಇನ್ನು) ಬೇರೆ (ಯಾವ) ಪ್ರಕಾರದಿಂದಲೂ (ಭಿನ್ನವಾಗಲಾರದು). ಏಕೆಂದರೆ ನಿಜವಾಗಿಯೇ ಭೇದವಾಗುವದಾದರೆ ಅಮೃತವು ಮರ್ತ್ಯತ್ವವನ್ನು ಹೊಂದಬೇಕಾದೀತು.

(ಭಾಷ್ಯ)

೧೬೫. ಯತ್ ಪರಮಾರ್ಥಸತ್ ಅದ್ವೈತಂ ಮಾಯಯಾ ಭಿದ್ಯತೇ ಹಿ ಏತತ್ ತೈಮಿರಿಕಾನೇಕಚನ್ದ್ರವತ್ ರಜ್ಜುಃ ಸರ್ಪಧಾರಾದಿಭಿರ್ಭೇದೈರಿವ ನ ಪರಮಾರ್ಥತಃ ನಿರವಯವತ್ವಾತ್ ಆತ್ಮನಃ । ಸಾವಯವಂ ಹಿ ಅವಯವಾನ್ಯಥಾತ್ವೇನ ಭಿದ್ಯತೇ । ಯಥಾ ಮೃತ್ ಘಟಾದಿಭೇದೈಃ । ತಸ್ಮಾತ್ ನಿರವಯವಮ್ ಅಜಂ ನ ಅನ್ಯಥಾ ಕಥಂಚನ । ಕೇನಚಿದಪಿ ಪ್ರಕಾರೇಣ ನ ಭಿದ್ಯತೇ ಇತಿ ಅಭಿಪ್ರಾಯಃ । ತತ್ತ್ವತಃ ಭಿದ್ಯಮಾನೇ[2] ಹಿ ಅಮೃತಮ್ ಅಜಮ್ ಅದ್ವಯಂ ಸ್ವಭಾವತಃ ಸನ್ ಮರ್ತ್ಯತಾಂ ವ್ರಜೇತ್ । ಯಥಾ ಅಗ್ನಿಃ ಶೀತತಾಮ್ । ತಚ್ಚ ಅನಿಷ್ಟಂ ಸ್ವಭಾವವೈಪರೀತ್ಯಗಮದನಮ್ । ಸರ್ವಪ್ರಮಾಣವಿರೋಧಾತ್ । ಅಜಮವ್ಯಯಮ್[3] ಆತ್ಮ

---

1. ಅದ್ವೈತದಲ್ಲಿ ಭೇದವುಂಟಾದರೆ ಅದು ನಿಜವಾಗಿ ಅದ್ವೈತವಲ್ಲ ಎಂಬ ಯುಕ್ತಿಯನ್ನು ಮರೆತು ಯಾವನಾದರೂ ಹೀಗೆಂದು ಶಂಕಿಸಬಹುದು.

2. “ ಭಿದ್ಯಮಾನಮ್ ” ಪಾ॥ ಕಾ॥

3. ‘ ಅದ್ವಯಮ್ ’ ಪಾ॥ ; ಅದೂ ಆಗಬಹುದು.

ತತ್ತ್ವಂ ಮಾಯಯೈವ ಭಿದ್ಯತೇ ನ ಪರಮಾರ್ಥತಃ । ತಸ್ಮಾತ್ ನ ಪರಮಾರ್ಥ ಸತ್ ದ್ವೈತಮ್ ॥

(ಭಾಷ್ಯಾರ್ಥ)

ನಿಜವಾಗಿಯೂ ಇದ್ದುಕೊಂಡಿರುವ ಅದ್ವೈತವಿದೆಯಲ್ಲ. ಇದು ಪರೆಗಣ್ಣಿನವರಿಗೆ (ಕಾಣುವ) ಅನೇಕ ಚಂದ್ರರಂತೆಯೂ ಹಗ್ಗವು ಹಾವು, (ನೀರಿನ) ಕೋಡಿ-ಮುಂತಾದ ವಿಶೇಷ (ರೂಪ)ಗಳಿಂದ ಭಿನ್ನವಾಗಿರುವಂತೆಯೂ ಮಾಯೆಯಿಂದ ಭಿನ್ನವಾಗಿರುವದೇ ಹೊರತು ನಿಜವಾಗಿ (ಭಿನ್ನವಾಗಿರು)ವದಿಲ್ಲ. ಏಕೆಂದರೆ ಆತ್ಮನು ನಿರವಯವನಾಗಿರುತ್ತಾನೆ. ಅವಯವಗಳಿಂದ ಕೂಡಿರುವ (ವಸ್ತುವೇ) ಅಲ್ಲವೆ, (ತನ್ನ) ಅವಯವಗಳು ಮಾರ್ಪಡುವದರಿಂದ ಭಿನ್ನವಾಗಿರುತ್ತದೆ? ಉದಾಹರಣೆಗೆ ಮಣ್ಣು, ಗಡಿಗೆಯೇ ಮುಂತಾದ (ರೂಪದ) ಭೇದಗಳಾಗಿ (ಭಿನ್ನವಾಗುತ್ತದೆ). ಆದ್ದರಿಂದ ನಿರವಯವವಾಗಿರುವ ಅಜವಾದ (ಬ್ರಹ್ಮವು) ಇನ್ನು ಹೇಗೂ ಯಾವ ಪ್ರಕಾರದಿಂದಲೂ ಬೇರ್ಪಡುವದಿಲ್ಲ—ಎಂದು ಅಭಿಪ್ರಾಯ. ಏಕೆಂದರೆ (ಅದು) ನಿಜವಾಗಿಯೇ ಭಿನ್ನವಾಗುವದಾದರೆ ಸ್ವಭಾವದಿಂದ ಅಮೃತವೂ ಅಜವೂ ಅದ್ವಯವೂ[1] ಆಗಿರುವದು, ಬೆಂಕಿಯು ತಂಪನ್ನು ಪಡೆಯುವಂತೆ ಮರ್ತ್ಯತ್ವವನ್ನು ಹೊಂದಬೇಕಾದೀತು. ಸ್ವಭಾವವೇ ವಿರುದ್ಧವಾಗಿ ಆಗುವದು (ಯಾರಿಗೂ) ಇಷ್ಟವಲ್ಲ[2]. ಏಕೆಂದರೆ (ಹಾಗಾಗುವದು) ಎಲ್ಲಾ ಪ್ರಮಾಣಗಳಿಗೂ ವಿರುದ್ಧವಾಗಿರುತ್ತದೆ. ಅಜವೂ, ಅದ್ವಯವೂ, ಆಗಿರುವ ಆತ್ಮತತ್ತ್ವವು ಮಾಯೆಯಿಂದಲೇ ಭಿನ್ನವಾಗಿರುತ್ತದೆಯೇ ಹೊರತು ನಿಜವಾಗಿ (ಭಿನ್ನವಾಗಿ)ರುವದಿಲ್ಲ. ಆದ್ದರಿಂದ ದ್ವೈತವು ನಿಜವಾಗಿರುವದಲ್ಲ.

## ಜಾತಬ್ರಹ್ಮವಾದದಲ್ಲಿ ದೋಷ

**ಅಜಾತಸ್ಯೈವ ಭಾವಸ್ಯ ಜಾತಿಮಿಚ್ಛನ್ತಿ ವಾದಿನಃ ।**
**ಅಜಾತೋ ಹ್ಯಮೃತೋ ಭಾವೋ ಮರ್ತ್ಯತಾಂ ಕಥಮೇಷ್ಯತಿ ॥ ೨೦ ॥**

೨೦. ಅಜಾತವೇ ಆಗಿರುವ ಭಾವಕ್ಕೆ ವಾದಿಗಳು ಜಾತಿಯನ್ನು ಒಪ್ಪಿರುತ್ತಾರೆ. ಅಜಾತವೂ, ಅಮೃತವೂ ಆಗಿರುವ ಭಾವವು ಮರ್ತ್ಯತ್ವವನ್ನು ಹೇಗೆ ಹೊಂದೀತು?

---

1. ಅಮೃತವೆಂದರೆ ನಾಶವಾಗುವ ಯೋಗ್ಯತೆಯಿಲ್ಲದ್ದು. ಅಜ ಎಂದರೆ ಹುಟ್ಟಿಲ್ಲದ್ದು. ಅದ್ವಯವೆಂದರೆ ತನಗೆರಡನೆಯದಿಲ್ಲದ್ದು. ಇಂಥದ್ದಕ್ಕೆ ನಾಶವಾಗುವದೆಂಬುದು ಸಾಧ್ಯವಿಲ್ಲ.

2. ವಸ್ತುವಿನ ಸ್ವಭಾವವು ಬೇರೆಯಾಗುತ್ತದೆ ಎಂದು ಯಾವ ವಾದಿಗಳೂ ಹೇಳುವದಿಲ್ಲ.

(ಭಾಷ್ಯ)

೧೬೬. ಯೇ ತು ಪುನಃ ಕೇಚಿತ್ ಉಪನಿಷದ್ವ್ಯಾಖ್ಯಾತಾರಃ ಬ್ರಹ್ಮವಾದಿನಃ ವಾವದೂಕಾಃ ಅಜಾತಸ್ಯೈವ ಆತ್ಮತತ್ತ್ವಸ್ಯ ಅಮೃತಸ್ಯ ಸ್ವಭಾವತಃ ಜಾತಿಮ್ ಉತ್ಪತ್ತಿಮ್ ಇಚ್ಛನ್ತಿ ಪರಮಾರ್ಥತ ಏವ ತೇಷಾಂ ಜಾತಂ ಚೇತ್ ತದೇವ ಮರ್ತ್ಯತಾಮ್ ಏಷ್ಯತಿ ಅವಶ್ಯಮ್ । ಸ ಚ ಅಜಾತಃ ಹಿ ಅಮೃತಃ ಭಾವಃ ಸ್ವಭಾವತಃ ಸನ್ ಆತ್ಮಾ ಕಥಂ ಮರ್ತ್ಯತಾಮ್ ಏಷ್ಯತಿ ? ನ ಕಥಂಚನ ಮರ್ತ್ಯತ್ವಂ ಸ್ವಭಾವ ವೈಪರೀತ್ಯಮ್ ಏಷ್ಯತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಆದರೆ ಉಪನಿಷತ್ತುಗಳನ್ನು ವ್ಯಾಖ್ಯಾನಮಾಡಿರುವ ಬ್ರಹ್ಮವಾದಿಗಳು ಕೆಲವರು ವಾದಿಗಳು[1] ಅಜಾತವೇ ಆಗಿರುವ ಆತ್ಮತತ್ತ್ವಕ್ಕೆ ಸ್ವಭಾವದಿಂದ ಅಮೃತವಾಗಿರುವ (ಆತ್ಮತತ್ತ್ವಕ್ಕೆ) ಜಾತಿಯನ್ನು ಎಂದರೆ ನಿಜವಾಗಿಯೇ ಹುಟ್ಟನ್ನು ಒಪ್ಪಿರುವರಲ್ಲ, ಅವರ (ಮತದಲ್ಲಿ) ಹುಟ್ಟಿದ್ದಾದರೆ ಅದೇ ಅವಶ್ಯವಾಗಿ ಮರ್ತ್ಯತ್ವವನ್ನು ಹೊಂದಿಯೇ ತೀರುವದು. ಆ ಅಜಾತವಾಗಿ ಅಮೃತವಾಗಿರುವ ಸ್ವಭಾವದಿಂದ ಸದ್ರೂಪನಾಗಿರುವ[2] ಆತ್ಮನು ಹೇಗೆ ಮರ್ತ್ಯತ್ವವನ್ನು ಹೊಂದಿಯಾನು ? ಮರ್ತ್ಯತ್ವವೆಂಬ ವಿರುದ್ಧಸ್ವಭಾವವನ್ನು ಹೇಗೂ ಹೊಂದಲಾರನು ಎಂದು ಅರ್ಥ.

**ನ ಭವತ್ಯಮೃತಂ ಮರ್ತ್ಯಂ ನ ಮರ್ತ್ಯಮಮೃತಂ ತಥಾ ।**
**ಪ್ರಕೃತೇರನ್ಯಥಾಭಾವೋ ನ ಕಥಂಚಿದ್ಭವಿಷ್ಯತಿ ॥ ೨೧ ॥**

೨೧. ಅಮೃತವು ಮರ್ತ್ಯವಾಗುವದಿಲ್ಲ. ಹಾಗೂ ಮರ್ತ್ಯವು ಅಮೃತ(ವಾಗುವ)ದಿಲ್ಲ. ಪ್ರಕೃತಿಗೆ ಅನ್ಯಥಾಭಾವವು ಹೇಗೂ ಆಗಲಾರದು.

(ಭಾಷ್ಯ)

೧೬೭. ಯಸ್ಮಾತ್ ನ ಭವತಿ ಅಮೃತಂ ಮರ್ತ್ಯಂ ಲೋಕೇ । ನಾಪಿ ಮರ್ತ್ಯಮ್ ಅಮೃತಂ ತಥಾ । ತತಃ ಪ್ರಕೃತೇಃ ಸ್ವಭಾವಸ್ಯ ಅನ್ಯಥಾಭಾವಃ ಸ್ವತಃ ಪ್ರಚ್ಯುತಿಃ ನ ಕಥಂಚಿತ್ ಭವಿಷ್ಯತಿ । ಅಗ್ನೇರಿವ ಔಷ್ಣ್ಯಸ್ಯ ॥

---

1. ವಾದಿನಃ ಎಂಬುದನ್ನೂ ಬರೆದು ಭಾಷ್ಯಕಾರರು ವಾವದೂಕಾಃ ಎಂಬ ಅರ್ಥವನ್ನು ಬರೆದಿರುವರೋ ಮೂಲದ ಮಾತನ್ನು ಬಿಟ್ಟೇ ಇರುವರೋ ಹೇಳುವದಕ್ಕೆ ಬರುವದಿಲ್ಲ. ಇದರಂತೆ ಭಾವಸ್ಯ ಎಂಬ ಮಾತೂ ಬಿಟ್ಟಿದೆ.

2. " ಆತ್ಮನು ಸ್ವಭಾವದಿಂದ ಅಜಾತನೂ ಅಮೃತನಾಗಿದ್ದುಕೊಂಡಿರುವವನಾಗಿದ್ದುಕೊಂಡು ಹೇಗೆ......." ಎಂದೂ ಕನ್ನಡಿಸಬಹುದು.

(ಭಾಷ್ಯಾರ್ಥ)

ಏಕೆಂದರೆ ಲೋಕದಲ್ಲಿ ಅಮೃತವಾದದ್ದು[1] ಮರ್ತ್ಯವಾಗುವದಿಲ್ಲ, ಹಾಗೂ ಮರ್ತ್ಯವಾದದ್ದು[2] ಅಮೃತವೂ ಆಗುವದಿಲ್ಲ. ಆದ್ದರಿಂದ ಪ್ರಕೃತಿಗೆ ಎಂದರೆ ಸ್ವಭಾವಕ್ಕೆ ಅನ್ಯಥಾಭಾವವು[3], ತನ್ನ (ಸ್ವರೂಪ)ದಿಂದ ಜಾರುವದು ಹೇಗೂ ಆಗಲಾರದು, ಬೆಂಕಿಗೆ ಬಿಸಿಯು ಹೇಗೆ (ತಪ್ಪಲೇ ಆರದೋ ಹಾಗೆ)

**ಸ್ವಭಾವೇನಾಮೃತೋ ಯಸ್ಯ ಭಾವೋ ಗಚ್ಛತಿ ಮರ್ತ್ಯತಾಮ್ ।**
**ಕೃತಕೇನಾಮೃತಸ್ತಸ್ಯ ಕಥಂ ಸ್ಥಾಸ್ಯತಿ ನಿಶ್ಚಲಃ　　॥ ೨೨ ॥**

೨೨. ಯಾವನ (ಮತದಲ್ಲಿ) ಸ್ವಭಾವದಿಂದ ಅಮೃತವಾದ ಭಾವವು ಮರ್ತ್ಯತ್ವವನ್ನು ಹೊಂದುವದೋ, ಅವನ (ಮತದಲ್ಲಿ) ಕೃತಕವಾಗಿ ಅಮೃತವಾದದ್ದು ನಿಶ್ಚಲವಾಗಿ ಹೇಗೆ ನಿಲ್ಲುವದು ?

(ಭಾಷ್ಯ)

೧೬೮. ಯಸ್ಯ ಪುನರ್ವಾದಿನಃ ಸ್ವಭಾವೇನ ಅಮೃತಃ ಭಾವಃ ಮರ್ತ್ಯತಾಂ ಗಚ್ಛತಿ ಪರಮಾರ್ಥತಃ ಜಾಯತೇ, ತಸ್ಯ ಪ್ರಾಕ್ ಉತ್ಪತ್ತೇಃ ಸ ಭಾವಃ ಸ್ವಭಾವತಃ ಅಮೃತಃ ಇತಿ ಪ್ರತಿಜ್ಞಾ ಮೃಷೈವ । ಕಥಂ ತರ್ಹಿ ? ಕೃತಕೇನ ಅಮೃತಃ ತಸ್ಯ ಸ್ವಭಾವಃ ಕೃತಕೇನ ಅಮೃತಃ । ಸ ಕಥಂ ಸ್ಥಾಸ್ಯತಿ ನಿಶ್ಚಲಃ ಅಮೃತಸ್ವಭಾವತಯಾ ? ನ ಕಥಂಚಿತ್ ಸ್ಥಾಸ್ಯತಿ । ಆತ್ಮಜಾತಿವಾದಿನಃ ಸರ್ವಥಾ[4] ಅಜಂ ನಾಮ ನಾಸ್ತ್ಯೇವ, ಸರ್ವಮೇತತ್ ಮರ್ತ್ಯಮ್ । ಅತಃ ಅನಿರ್ಮೋಕ್ಷಪ್ರಸಙ್ಗಃ ಇತ್ಯಭಿಪ್ರಾಯಃ ।

(ಭಾಷ್ಯಾರ್ಥ)

ಆದರೆ ಯಾವ ವಾದಿಯ (ಮತದಲ್ಲಿ) ಸ್ವಭಾವದಿಂದ ಅಮೃತವಾಗಿರುವ ಭಾವವು ಮರ್ತ್ಯತ್ವವನ್ನು ಹೊಂದುತ್ತದೆಯೋ, ನಿಜವಾಗಿ ಹುಟ್ಟುತ್ತದೆಯೋ[5] ಆತನೆ

1. ಸ್ವಭಾವದಿಂದ ನಾಶವಾಗತಕ್ಕದ್ದಲ್ಲದ್ದು.
2. ನಾಶವಾಗುವ ಸ್ವಭಾವವುಳ್ಳದ್ದು.
3. ಮತ್ತೊಂದು ಸ್ವರೂಪವನ್ನು ಪಡೆಯುವದು, ಮಾರ್ಪಾಡು.
4. "ಸರ್ವದಾ" ಆ॥ ಕಾ॥ ಮೈ॥
5. ನಿಜವಾಗಿ ಹುಟ್ಟುವದನ್ನು ಇಲ್ಲಿ ಖಂಡಿಸಿದೆ, ಮಾಯೆಯಿಂದ ಹುಟ್ಟುವದನ್ನಲ್ಲ.

(ಮತದಲ್ಲಿ) ಹುಟ್ಟುವದಕ್ಕೆ ಮೊದಲು ಆ ವಸ್ತು ಸ್ವಭಾವದಿಂದ ಅಮೃತ(ವಾಗಿರುತ್ತದೆ) ಎಂಬ ಪ್ರತಿಜ್ಞೆಯು ಸುಳ್ಳೇ. ಮತ್ತೇನೆಂದರೆ ಕೃತಕವಾಗಿ ಅಮೃತವು, ಅದರ ಸ್ವಭಾವವು ಕೃತಕವಾಗಿ[1] ಅಮೃತವಾಗಿರುತ್ತದೆ. ಅದು ನಿಶ್ಚಲವಾಗಿ ಅಮೃತಸ್ವಭಾವದಿಂದ ಹೇಗೆ ನಿಂತುಕೊಳ್ಳುವದು ? ಹೇಗೂ ನಿಂತುಕೊಳ್ಳಲಾರದು. ಆತ್ಮನಿಗೆ ಹುಟ್ಟು (ಉಂಟೆಂಬ)ವಾದಿಯ(ಮತದಲ್ಲಿ) ಹೇಗೂ ಅಜವೆಂಬುದು ಇಲ್ಲವೇ ಇಲ್ಲ. ಇದೆಲ್ಲವೂ ಮರ್ತ್ಯವೇ. ಆದ್ದರಿಂದ (ಈ ಮತದಲ್ಲಿ) ಮೋಕ್ಷವೇ ಇಲ್ಲವೆಂವಾಗುವದು ಎಂದು ಅಭಿಪ್ರಾಯ.

## ಅಜಾತಿವಾದದಲ್ಲಿ ಸೃಷ್ಟಿಶ್ರುತಿಯು ತಾತ್ಪರ್ಯ

(ಭಾಷ್ಯ)

೧೬೯. ನನು ಅಜಾತಿವಾದಿನಃ ಸೃಷ್ಟಿಪ್ರತಿಪಾದಿಕಾ ಶ್ರುತಿಃ ನ ಸಙ್ಗಚ್ಛತೇ[2] । ಬಾಢಮ್, ವಿದ್ಯತೇ ಸೃಷ್ಟಿಪ್ರತಿಪಾದಿಕಾ ಶ್ರುತಿಃ । ಸಾ ತು ಅನ್ಯಪರಾ । "ಉಪಾಯಃ ಸೋಽವತಾರಾಯ." (೩-೧೫) ಇತಿ ಅವೋಚಾಮ । ಇದಾನೀಮ್ ಉಕ್ತೇಽಪಿ ಪರಿಹಾರೇ ಪುನಶ್ಚೋದ್ಯಪರಿಹಾರೌ ವಿವಕ್ಷಿತಾರ್ಥಂ ಪ್ರತಿ ಸೃಷ್ಟಿಶ್ರುತ್ಯಕ್ಷರಾಣಾಮ್ ಆನುಲೋಮ್ಯವಿರೋಧಶಙ್ಕಾಮಾತ್ರಪರಿಹಾರಾರ್ಥೌ ॥

(ಭಾಷ್ಯಾರ್ಥ)

(ಆಕ್ಷೇಪ) :— (ಯಾವದೂ) ಹುಟ್ಟುವದಿಲ್ಲವೆಂಬ ವಾದಿಯ (ಮತದಲ್ಲಿ) ಸೃಷ್ಟಿಯನ್ನು ಹೇಳುವ ಶ್ರುತಿಗೆ (ಪ್ರಾಮಾಣ್ಯವು) ಹೊಂದುವದಿಲ್ಲವಲ್ಲ !

(ಪರಿಹಾರ) :—ನಿಜ, ಸೃಷ್ಟಿಯನ್ನು ಹೇಳುವ ಶ್ರುತಿ(ಯೂ) ಇದೆ. ಆದರೆ ಅವಕ್ಕೆ ತಾತ್ಪರ್ಯವು ಬೇರೆ. ಅದು ತತ್ತ್ವವನ್ನು (ಮೆಲ್ಲಗೆ) ತಂದು ತಿಳಿಸುವದಕ್ಕೆ ಉಪಾಯವೆಂದು (ಹಿಂದೆ ೩-೧೫ರಲ್ಲಿ) ಹೇಳಿರುತ್ತೇವೆ.

ಹೀಗೆ ಪರಿಹಾರವನ್ನು ಹೇಳಿದ್ದರೂ ಈಗ ಮತ್ತೆ ಆಕ್ಷೇಪಪರಿಹಾರಗಳನ್ನು (ಇಲ್ಲಿ ಹೇಳಿರುವದು) (ನೀವು) ಹೇಳಬೇಕೆಂದಿರುವ (ಅಜಾತಿಯೆಂಬ) ವಿಷಯಕ್ಕೆ ಸೃಷ್ಟಿಶ್ರುತಿಯ ಅಕ್ಷರಗಳು ಹೊಂದುಗೆಯಾಗದೆ ವಿರುದ್ಧವಾಗಿರುವವಲ್ಲ !– ಎಂಬ ಶಂಕೆಯನ್ನು ಮಾತ್ರ ಪರಿಹರಿಸುವದಕ್ಕೆ.

---

1. ತೋರಿಕೆಯಿಂದ; ಪರಮಾರ್ಥವಾಗಿ ಅದು ಮರ್ತ್ಯವೇ–

2. "ಸಙ್ಗಚ್ಛತೇ ಪ್ರಾಮಾಣ್ಯಮ್" ಎಂಬ ಆ॥ ಕಾ॥ ಪಾಠದಲ್ಲಿ "ಪ್ರಾಮಾಣ್ಯಮ್" ಬೇಕಾಗಿಲ್ಲ.

**ಭೂತತೋಽಭೂತತೋ ವಾಪಿ ಸೃಜ್ಯಮಾನೇ ಸಮಾ ಶ್ರುತಿಃ ।**
**ನಿಶ್ಚಿತಂ ಯುಕ್ತಿಯುಕ್ತಂ ಚ ಯತ್ ತದ್ಭವತಿ ನೇತರತ್ ॥ ೨೩ ॥**

೨೩. ಭೂತವಾಗಿ ಅಥವಾ ಅಭೂತವಾಗಿ ಸೃಷ್ಟಿಯಾಗಿದ್ದರೂ ಶ್ರುತಿಯು ಸಮವಾಗಿರುತ್ತದೆ. ಯಾವದು ನಿಶ್ಚಿತವಾಗಿಯೂ ಯುಕ್ತಿಯುಕ್ತವಾಗಿಯೂ (ಇರುವದೋ) ಅದು ಆಗುವದೇ ಹೊರತು ಉಳಿದದ್ದು (ಆಗುವ)ದಿಲ್ಲ.

(ಭಾಷ್ಯ)

೧೭೦. ಭೂತತಃ ಪರಮಾರ್ಥತಃ ಸೃಜ್ಯಮಾನೇ ವಸ್ತುನಿ ಅಭೂತತೋ ಮಾಯಯಾ ವಾ ಮಾಯಾವಿನಾ ಇವ ಸೃಜ್ಯಮಾನೇ ವಸ್ತುನಿ ಸಮಾ ತುಲ್ಯಾ ಸೃಷ್ಟಿಶ್ರುತಿಃ । ನನು ಗೌಣಮುಖ್ಯಯೋಃ ಮುಖ್ಯೇ ಶಬ್ದಾರ್ಥಪ್ರತಿಪತ್ತಿಃ ಯುಕ್ತಾ । ನ । ಅನ್ಯಥಾ ಸೃಷ್ಟೇಃ ಅಪ್ರಸಿದ್ಧತ್ವಾತ್ । ನಿಷ್ಪ್ರಯೋಜನತ್ವಾಚ್ಚ ಇತಿ ಅವೋಚಾಮ । ಅವಿದ್ಯಾ (ಸೃಷ್ಟಿ) ವಿಷಯೈವ ಸರ್ವಾ ಗೌಣೀ ಮುಖ್ಯಾ ಚ ಸೃಷ್ಟಿಃ ನ ಪರಮಾರ್ಥತಃ । "ಸಬಾಹ್ಯಾಭ್ಯನ್ತರೋ ಹ್ಯಜಃ" (ಮುಂ. ೨-೧-೨) ಇತಿ ಶ್ರುತೇಃ। ತಸ್ಮಾತ್ ಶ್ರುತ್ಯಾ ನಿಶ್ಚಿತಂ ಯತ್ ಏಕಮೇವಾದ್ವಿತೀಯಮ್, ಅಜಮ್, ಅಮೃತಮ್–ಇತಿ । ಯುಕ್ತಿಯುಕ್ತಂ ಚ ಯುಕ್ತ್ಯಾ ಚ ಸಮ್ಪನ್ನಂ ತದೇವ ಇತಿ ಅವೋಚಾಮ ಪೂರ್ವೈರ್ಗ್ರನ್ಥೈಃ । ತದೇವ ಶ್ರುತ್ಯರ್ಥೋ ಭವತಿ ನೇತರತ್ ಕದಾಚಿದಪಿ ॥

(ಭಾಷ್ಯಾರ್ಥ)

ಭೂತವಾಗಿ ಎಂದರೆ ನಿಜವಾಗಿ ವಸ್ತುವು ಸೃಷ್ಟಿಯಾಗಲಿ ಅಭೂತವಾಗಿ ಎಂದರೆ ಮಾಯಾವಿಯಿಂದ ಆಗುವಂತೆ ಮಾಯೆಯಿಂದ ವಸ್ತುಸೃಷ್ಟಿಯಾಗಲಿ, (ಎರಡರಲ್ಲಿಯೂ) ಸೃಷ್ಟಿಶ್ರುತಿಯು ಸಮವಾಗಿರುವದು, ಒಂದೇ ಆಗಿರುವದು.

(ಆಕ್ಷೇಪ) :—ಗೌಣಮುಖ್ಯಗಳಲ್ಲಿ, ಮುಖ್ಯ(ವಾದ ಅರ್ಥದಲ್ಲಿಯೇ) ಶಬ್ದಾರ್ಥವೆಂದು ತಿಳಿಯುವದು ಯುಕ್ತವಲ್ಲವೆ[1] ?

(ಸಮಾಧಾನ) :—ಹಾಗಲ್ಲ. ಏಕೆಂದರೆ ಬೇರೆಯ ಬಗೆಯ ಸೃಷ್ಟಿಯೇ ಇಲ್ಲ[2]; (ಸೃಷ್ಟಿಶ್ರುತಿಗೆ ಆ ಪಕ್ಷದಲ್ಲಿ) ಯಾವ ಪ್ರಯೋಜನವೂ ಇಲ್ಲ ಎಂದು (ಹಿಂದೆ ೧೫ನೆಯ

1. ಶಾ. ಭಾ. ೩-೨-೧ "ಮುಖ್ಯಗೌಣಯೋಃ ಮುಖ್ಯೇ ಕಾರ್ಯಸಂಪ್ರತ್ಯಯಃ"

2. ಮಾಯಿಕವಲ್ಲದ ಮುಖ್ಯ ಸೃಷ್ಟಿ ಇದ್ದರೆತಾನೆ ನಾವು ಹೇಳುವದು ಗೌಣವಾದೀತು ?

ಕಾರಿಕೆಯಲ್ಲಿ) ಹೇಳಿರುತ್ತೇವೆ. ಗೌಣಸೃಷ್ಟಿ, ಮುಖ್ಯಸೃಷ್ಟಿ–ಎಲ್ಲವೂ ಅವಿದ್ಯಾ ವಿಷಯವಾದದ್ದೇ ಹೊರತು ನಿಜವಾದದ್ದಲ್ಲ. "ಹೊರಗೂ ಒಳಗೂ ಜನ್ಮವಿಲ್ಲದವನು" (ಮುಂ. ೨–೧–೨) ಎಂಬ ಶ್ರುತಿಯ (ಪ್ರಮಾಣ)ದಿಂದ (ಹೀಗೆಂದು ಸಿದ್ಧವಾಗುವದು). ಆದ್ದರಿಂದ ಯಾವದು "ಎರಡನೆಯದಿಲ್ಲದ ಒಂದೇ" "ಜನ್ಮರಹಿತವಾದದ್ದು" "ಅಮೃತವಾದದ್ದು" ಎಂದು ಶ್ರುತಿಯಿಂದ ನಿಶ್ಚಿತವಾಗಿರುವದೋ (ಯಾವದು) ಯುಕ್ತಿಯುಕ್ತವೂ (ಆಗಿರುವದೋ)–ಯುಕ್ತಿಯಿಂದ ಕೂಡಿರುವದು ಅದೇ ಎಂದು ಹಿಂದಿನ ಶ್ಲೋಕಗಳಲ್ಲಿ[1] ಹೇಳಿರುತ್ತೇವಷ್ಟೆ–ಅದೇ[2] ಶ್ರುತ್ಯರ್ಥವಾಗುವದೇ ಹೊರತು ಮತ್ತೊಂದು ಎಂದಿಗೂ (ಶ್ರುತ್ಯರ್ಥವಾಗ)ಲಾರದು.

(ಭಾಷ್ಯ)

೧೭೧. ಕಥಂ ಶ್ರುತಿನಿಶ್ಚಯಃ ಇತಿ ? ಆಹ—

(ಭಾಷ್ಯಾರ್ಥ)

ಶ್ರುತಿಯ ನಿಶ್ಚಯವು ಹೇಗೆ ?—ಎಂದರೆ (ಕಾರಿಕಾಕಾರರು) ಹೇಳುತ್ತಾರೆ.

**ನೇಹ ನಾನೇತಿ ಚಾಮ್ನಾಯಾದಿಂದ್ರೋ ಮಾಯಾಭಿರಿತ್ಯಪಿ ।**
**ಅಜಾಯಮಾನೋ ಬಹುಧಾ ಮಾಯಯಾ ಜಾಯತೇ ತು ಸಃ॥೨೪॥**

೨೪. "ಇಲ್ಲಿ ನಾನಾ ಇಲ್ಲ" ಎಂಬ ಆಮ್ನಾಯದಿಂದಲೂ "ಇಂದ್ರನು ಮಾಯೆಗಳಿಂದ" ಎಂಬ ಶಾಸ್ತ್ರದಿಂದಲೂ ಹುಟ್ಟದೆ ಇರುವನಾಗಿಯೇ ಅವನು ಬಹು ಪ್ರಕಾರವಾಗಿ ಮಾಯೆಯಿಂದಲೇ ಹುಟ್ಟುವನು.

(ಭಾಷ್ಯ)

೧೭೨. ಯದಿ ಹಿ ಭೂತತ ಏವ ಸೃಷ್ಟಿಃ ಸ್ಯಾತ್, ತತಃ ಸತ್ಯಮೇವ ನಾನಾ ವಸ್ತು ಇತಿ ತದಭಾವಪ್ರದರ್ಶನಾರ್ಥಮ್[3] ಆಮ್ನಾಯಃ ನ ಸ್ಯಾತ್ । ಅಸ್ತಿ ಚ "ನೇಹ ನಾನಾಸ್ತಿ ಕಿಂಚನ" (ಕ. ೨-೧-೧೧) ಇತ್ಯಾದಿರಾಮ್ನಾಯಃ ದ್ವೈತಭಾವ ಪ್ರತಿಷೇಧಾರ್ಥಃ । ತಸ್ಮಾತ್ ಆತ್ಮೈಕತ್ವಪ್ರತಿಪತ್ತ್ಯರ್ಥಾ ಕಲ್ಪಿತಾ ಸೃಷ್ಟಿಃ ಅಭೂ

---

1. ಆಕಾಶದೃಷ್ಟಾಂತದ ಕಾರಿಕೆಗಳಲ್ಲಿ

2. ಜನ್ಮರಹಿತವಾದ ಅದ್ವೈತತತ್ತ್ವವೇ-

3. 'ಪ್ರದರ್ಶನಾರ್ಥಃ' ವಾ॥

ತ್ರೈವ ಪ್ರಾಣಸಂವಾದವತ್ । "ಇನ್ದ್ರೋ ಮಾಯಾಭಿಃ" (ಬೃ. ೨-೫-೧೯) ಇತಿ ಅಭೂತಾರ್ಥಪ್ರತಿಪಾದಕೇನ ಮಾಯಾಶಬ್ದೇನ ವ್ಯಪದೇಶಾತ್ । ನನು ಪ್ರಜ್ಞಾವಚನೋ ಮಾಯಾಶಬ್ದಃ । ಸತ್ಯಮ್ । ಇನ್ದ್ರಿಯಪ್ರಜ್ಞಾಯಾ ಅವಿದ್ಯಾಮಯತ್ವೇನ ಮಾಯಾತ್ವಾಭ್ಯುಪಗಮಾತ್ ಅದೋಷಃ । ಮಾಯಾಭಿಃ ಇನ್ದ್ರಿಯಪ್ರಜ್ಞಾಭಿಃ ಅವಿದ್ಯಾರೂಪಾಭಿಃ ಇತ್ಯರ್ಥಃ । "ಅಜಾಯಮಾನೋ ಬಹುಧಾ ವಿಜಾಯತೇ" (ತೈ. ಆ. ೩-೧೩) ಇತಿ ಶ್ರುತೇಃ । ತಸ್ಮಾತ್ ಮಾಯಯೈವ ಜಾಯತೇ ತು ಸಃ । ತುಶಬ್ದಃ ಅವಧಾರಣಾರ್ಥಃ 'ಮಾಯಯೈವ' ಇತಿ । ನ ಹಿ ಅಜಾಯಮಾನತ್ವಂ ಬಹುಧಾ ಜನ್ಮ ಚ ಏಕತ್ರ ಸಮ್ಭವತಿ । ಅಗ್ನಾವಿವ ಶೈತ್ಯಮ್ ಔಷ್ಣ್ಯಂ ಚ । ಫಲವತ್ತ್ವಾಚ್ಚ ಆತ್ಮೈಕತ್ವದರ್ಶನಮೇವ ಶ್ರುತಿನಿಶ್ಚಿತೋಽರ್ಥಃ । "ತತ್ರ ಕೋ ಮೋಹಃ ಕಃ ಶೋಕಃ ಏಕತ್ವಮನುಪಶ್ಯತಃ "(ಈ ೭) ಇತ್ಯಾದಿ ಮನ್ತ್ರವರ್ಣಾತ್," ಮೃತ್ಯೋಃ ಸ ಮೃತ್ಯುಮಾಪ್ನೋತಿ" (ಕ. ೩-೧ ೧೦) ಇತಿ ನಿನ್ದಿತತ್ವಾಚ್ಚ ಸೃಷ್ಟ್ಯಾದಿಭೇದದೃಷ್ಟೇಃ ॥

(ಭಾಷ್ಯಾರ್ಥ)

ಏಕೆಂದರೆ ನಿಜವಾಗಿಯೂ ಸೃಷ್ಟಿಯಾಗಿರುವದಾದರೆ ಆಗ ಬೇರೆಬೇರೆಯ (ರೂಪದ) ವಸ್ತು ಸತ್ಯವೇ ಆಗುವದರಿಂದ ಅದು ಇಲ್ಲ ಎಂದು ತಿಳಿಸುವದಕ್ಕಾಗಿ ಶಾಸ್ತ್ರವು ಇರುತ್ತಿರಲಿಲ್ಲ. ಆದರೆ ಇಲ್ಲಿ "ಒಂದಿಷ್ಟೂ ನಾನಾತ್ವವಿರುವದಿಲ್ಲ" (ಕ. ೨-೧-೧೧) ಎಂದು ದ್ವೈತವಸ್ತುವನ್ನು ಅಲ್ಲಗಳೆಯುವದಕ್ಕಾಗಿ (ಹೊರಟಿರುವ) ಶಾಸ್ತ್ರವು ಇದೆ. ಆದ್ದರಿಂದ ಪ್ರಾಣಸಂವಾದದಂತೆ ಸೃಷ್ಟಿಯೂ, ಆತ್ಮೈಕತ್ವವನ್ನು ತಿಳಿಯುವದಕ್ಕೆ (ಉಪಾಯವಾಗಿ) ಕಲ್ಪಿತವಾಗಿದೆ, ನಿಜವಲ್ಲವೇ ಅಲ್ಲ. "ಇಂದ್ರನು ಮಾಯೆಗಳಿಂದ (ಬಹುರೂಪನಾಗಿ ತೋರುತ್ತಾನೆ)" (ಬೃ. ೨-೫-೧೯) ಎಂದು (ನಿಜವಾಗಿ) ಇಲ್ಲದ ವಸ್ತುವನ್ನು ತಿಳಿಸುವ "ಮಾಯಾ" ಎಂಬ ಶಬ್ದದಿಂದ (ಸೃಷ್ಟಿಯನ್ನು ಶ್ರುತಿಯಲ್ಲಿ) ಕರೆದಿದ್ದುದೆ.

(ಆಕ್ಷೇಪ) :—ಮಾಯಾ ಎಂಬ ಮಾತಿಗೆ ಪ್ರಜ್ಞೆ ಎಂದು ಅರ್ಥವಲ್ಲವೆ[1] ?

(ಪರಿಹಾರ) :—ನಿಜ. ಇಂದ್ರಿಯದ ಅರಿವು ಅವಿದ್ಯಾಮಯವಾಗಿರುವದರಿಂದ[2] (ಇದು) ಇದು ಮಾಯೆ ಎಂದು (ನಾವು) ಒಪ್ಪಿರುವದರಿಂದ (ಇದರಲ್ಲಿ ಏನೂ)

---

1. ಯಾಸ್ಕರ ನಿಘಂಟುವಿನಲ್ಲಿ 'ಮಾಯಾ' ಎಂಬ ಶಬ್ದವನ್ನು ಜ್ಞಾನದ ಹೆಸರುಗಳಲ್ಲಿ ಒಂದಾಗಿ ಹೇಳಿದೆ.

2. ತಪ್ಪುತಿಳಿವಳಿಕೆಯಾಗಿರುವದರಿಂದ, ಪರಮಾರ್ಥದಲ್ಲಿಲ್ಲದ ಭೇದವನ್ನು ತಿಳಿಸುವದರಿಂದ.

ತಪ್ಪಿಲ್ಲ. ಮಾಯೆಗಳಿಂದ ಎಂದರೆ ಅವಿದ್ಯಾರೂಪವಾದ ಇಂದ್ರಿಯದ ಅರಿವುಗಳಿಂದ ಎಂದರ್ಥ[1] " "ಹುಟ್ಟದೆ ಇರುವವನಾಗಿ ಬಹುಪ್ರಕಾರದಿಂದ ಹುಟ್ಟುತ್ತಾನೆ" (ತೈ. ಆ. ೩-೧೩) ಎಂಬ ಶ್ರುತಿಯ (ಪ್ರಮಾಣ)ದಿಂದ (ಇದು ಸಿದ್ಧವಾಗುತ್ತದೆ). ಆದ್ದರಿಂದ ಮಾಯೆಯಿಂದಲೇ ಅವನು ಹುಟ್ಟುತ್ತಾನೆ. (ಕಾರಿಕೆಯಲ್ಲಿರುವ) ತುಶಬ್ದವು 'ಮಾಯೆಯಿಂದಲೇ' ಎಂದು ಒತ್ತಿಹೇಳುವದಕ್ಕಾಗಿ (ಬಂದಿರುತ್ತದೆ). ಏಕೆಂದರೆ ಹುಟ್ಟದಿರುವದೂ ಬಹುಪ್ರಕಾರವಾಗಿ ಹುಟ್ಟುವದೂ, ಬೆಂಕಿಯಲ್ಲಿ ತಂಪೂ ಬಿಸಿಯೂ ಹೇಗೆ (ಇರುವದು ಹೊಂದಲಾರದೋ ಹಾಗೆ ಎರಡೂ) ಒಂದರಲ್ಲಿಯೇ ಹೊಂದಲಾರದು[2]. ಆತ್ಮೈಕತ್ವದರ್ಶನಕ್ಕೆ ಫಲವನ್ನು (ಹೇಳಿರುವದರಿಂದಲೂ[3] ಇದೇ) ಶ್ರುತಿನಿಶ್ಚಿತವಾದ ಅರ್ಥವು. "ಏಕತ್ವವನ್ನು ಕಂಡುಕೊಂಡಾತನಿಗೆ ಅಲ್ಲಿ ಯಾವ ಮೋಹವು, ಯಾವ ಶೋಕವು?" (ಈ. ೭) ಎಂದು ಮುಂತಾಗಿ ಮಂತ್ರವರ್ಣ (ವಿರುವ)ದರಿಂದ (ಈ ಜ್ಞಾನಕ್ಕೆ ಫಲವತ್ತ್ವವು ಸಿದ್ಧವಾಗಿರುತ್ತದೆ). "(ಯಾವನು ಇಲ್ಲಿ ನಾನಾತ್ವವಿದ್ದಂತೆ ಕಾಣುವನೋ) ಅವನು ಮೃತ್ಯುವಿನಮೇಲೆ ಮೃತ್ಯುವನ್ನು ಪಡೆಯುತ್ತಾನೆ" (ಕ. ೨-೧-೧೦) ಎಂದು ಸೃಷ್ಟಿಯೇ ಮುಂತಾದ ಭೇದದೃಷ್ಟಿಯನ್ನು ನಿಂದಿಸಿರುವದರಿಂದಲೂ[4] (ಇದೇ ಶ್ರುತಿಯ ನಿಶ್ಚಯವೆಂದು ಏರ್ಪಡುತ್ತದೆ).

**ಸಮ್ಭೂತೇರಪವಾದಾಚ್ಚ ಸಮ್ಭವಃ ಪ್ರತಿಷಿಧ್ಯತೇ ।**
**ಕೋ ನ್ವೇನಂ ಜನಯೇದಿತಿ ಕಾರಣಂ ಪ್ರತಿಷಿಧ್ಯತೇ ॥ ೨೫ ॥**

೨೫. ಸಂಭೂತಿಯನ್ನು ಅಲ್ಲಗಳೆದಿರುವದರಿಂದಲೂ ಸಂಭವವನ್ನು ಇಲ್ಲವೆಂದಿರುತ್ತದೆ. "ಈತನನ್ನು ಯಾರು ತಾನೆ ಹುಟ್ಟಿಸಿಯಾನು?" ಎಂದು ಕಾರಣವನ್ನು ಇಲ್ಲವೆಂದಿರುತ್ತದೆ.

(ಭಾಷ್ಯ)

೧೭೩. "ಅನ್ಧಂ ತಮಃ ಪ್ರವಿಶನ್ತಿ ಯೇ ಸಮ್ಭೂತಿಮುಪಾಸತೇ" (ಈ. ಮಾ. ೯) ಸ ಹಿ ಪರಮಾರ್ಥತಃ ಸಮ್ಭೂತಾಯಾಂ[5] ಸಮ್ಭೂತೌ ತದಪವಾದಃ

1. ಆತ್ಮನು ಇಂದ್ರಿಯದರಿವುಗಳಿಂದ ಬಹುಪ್ರಕಾರವಾಗಿ ಕಾಣುತ್ತಾನೆ, ಎಂದು ಶ್ರುತಿಯ ಅರ್ಥ.

2. ಆದ್ದರಿಂದ ಹುಟ್ಟುವದು ಪರಮಾರ್ಥವಲ್ಲ.

3. ಫಲವುಳ್ಳ ಶ್ರುತಿಗೆ ಫಲವನ್ನು ಹೇಳದಿರುವ ವಾಕ್ಯವು ಅಂಗವೆಂಬುದು ಮೀಮಾಂಸಕರ ಯುಕ್ತಿ; ಏಕತ್ವಕ್ಕೆ ಫಲವಿದೆ, ಸೃಷ್ಟಿಗೆ ಫಲವಿಲ್ಲ. ಆದ್ದರಿಂದ ಸೃಷ್ಟಿವಾಕ್ಯವು ಏಕತವಾಕ್ಯಕ್ಕೆ ಅಂಗವಾಯಿತು.

4. ನಾನಾತ್ವವನ್ನು ನಿಂದಿಸಿರುವದರಿಂದ ಅದು ಶ್ರುತ್ಯರ್ಥವಾಗಲಾರದು.

5. 'ಪರಮಾರ್ಥಸದ್ಭೂತಾಯಾಂ' ಪಾ॥

ಉಪಪದ್ಯತೇ । ನನು ವಿನಾಶೇನ ಸಮ್ಭೂತೇಃ ಸಮುಚ್ಚಯವಿಧ್ಯರ್ಥಃ ಸಮ್ಭೂತ್ಯಪವಾದಃ । ಯಥಾ " ಅನ್ಧಂ ತಮಃ ಪ್ರವಿಶನ್ತಿ ಯೇಽವಿದ್ಯಾಮುಪಾಸತೇ " (ಈ. ಮಾ. ೧೨) ಇತಿ । ಸತ್ಯಮೇವ ದೇವತಾದರ್ಶನಸ್ಯ ಸಮ್ಭೂತಿವಿಷಯಸ್ಯ ವಿನಾಶಶಬ್ದವಾಚ್ಯಸ್ಯ ಚ[1] ಕರ್ಮಣಃ ಸಮುಚ್ಚಯವಿಧಾನಾರ್ಥಃ ಸಮ್ಭೂತ್ಯಪವಾದಃ। ತಥಾಪಿ ವಿನಾಶಾಖ್ಯಸ್ಯ ಕರ್ಮಣಃ ಸ್ವಾಭಾವಿಕಾಜ್ಞಾನಪ್ರವೃತ್ತಿರೂಪಸ್ಯ ಮೃತ್ಯೋಃ ಅತಿತರಣಾರ್ಥತ್ವವತ್ ದೇವತಾದರ್ಶನಕರ್ಮಸಮುಚ್ಚಯಸ್ಯ ಪುರುಷಸಂಸ್ಕಾರಾರ್ಥಸ್ಯ ಕರ್ಮಫಲರಾಗಪ್ರವೃತ್ತಿರೂಪಸ್ಯ ಸಾಧ್ಯಸಾಧನೈಷಣಾದ್ವಯಲಕ್ಷಣಸ್ಯ ಮೃತ್ಯೋಃ ಅತಿತರಣಾರ್ಥತ್ವಮ್ । ಏವಂ ಹಿ ಏಷಣಾದ್ವಯರೂಪಾತ್ ಮೃತ್ಯೋಃ ಅಶುದ್ಧೇಃ ವಿಯುಕ್ತಃ ಪುರುಷಃ ಸಂಸ್ಕೃತಃ ಸ್ಯಾತ್ । ಅತಃ ಮೃತ್ಯೋಃ ಅತಿತರಣಾರ್ಥಾ ದೇವತಾದರ್ಶನಕರ್ಮಸಮುಚ್ಚಯಲಕ್ಷಣಾ ಹಿ ಅವಿದ್ಯಾ । ಏವಮೇವ ಏಷಣಾಲಕ್ಷಣಾತ್[2] ಅವಿದ್ಯಯಾ[3] ಮೃತ್ಯೋಃ ಅತಿತೀರ್ಣಸ್ಯ ವಿರಕ್ತಸ್ಯ ಉಪನಿಷಚ್ಛಾಸ್ತ್ರಾರ್ಥಾಲೋಚನಪರಸ್ಯ ನಾನ್ತರೀಯಕೀ ಪರಮಾತ್ಮೈಕತ್ವವಿದ್ಯೋತ್ಪತ್ತಿಃ ಇತಿ ಪೂರ್ವಭಾವಿನೀಮ್ ಅವಿದ್ಯಾಮ್ ಅಪೇಕ್ಷ್ಯ ಪಶ್ಚಾದ್ಭಾವಿನೀ ಬ್ರಹ್ಮವಿದ್ಯಾ ಅಮೃತತ್ವಸಾಧನಾ ಏಕೇನ ಪುರುಷೇಣ ಸಮ್ಬಧ್ಯಮಾನಾ ಅವಿದ್ಯಯಾ ಸಮುಚ್ಚೀಯತೇ ಇತ್ಯುಚ್ಯತೇ । ಅತಃ ಅನ್ಯಾರ್ಥತ್ವಾತ್ ಅಮೃತತ್ವಸಾಧನಂ ಬ್ರಹ್ಮವಿದ್ಯಾಮ್ ಅಪೇಕ್ಷ್ಯ ನಿನ್ದಾರ್ಥ ಏವ ಭವತಿ ಸಮ್ಭೂತ್ಯಪವಾದಃ । ಯದ್ಯಪಿ ಅಶುದ್ಧಿವಿಯೋಗಹೇತುಃ। ಅತನ್ನಿಷ್ಠತ್ವಾತ್ । ಅತ ಏವ ಸಮ್ಭೂತೇರಪವಾದಾತ್ ಸಮ್ಭೂತೇಃ ಆಪೇಕ್ಷಿಕಮೇವ ಸತ್ತ್ವಮ್ ಇತಿ ಪರಮಾರ್ಥಸದಾತ್ಮೈಕತ್ವಮ್ ಅಪೇಕ್ಷ್ಯ ಅಮೃತಾಖ್ಯಃ ಸಮ್ಭವಃ ಪ್ರತಿಷಿಧ್ಯತೇ ॥

(ಭಾಷ್ಯಾರ್ಥ)

"ಯಾರು ಸಂಭೂತಿಯನ್ನು ಉಪಾಸನೆಮಾಡುತ್ತಾರೋ ಅವರು ಅಂಧಂ ತಮಸ್ಸನ್ನು ಪ್ರವೇಶಿಸುತ್ತಾರೆ." (ಈ. ಮಾ. ೯) ಎಂದು ಸಂಭೂತಿಯನ್ನು ಉಪಾಸನೆ ಮಾಡತಕ್ಕದ್ದಲ್ಲವೆಂದು ಹೇಳಿರುವದರಿಂದ ಸಂಭವವನ್ನು ಇಲ್ಲವೆಂದಿರುತ್ತದೆ. ಸಂಭೂತಿಯು ನಿಜವಾಗಿ ಹುಟ್ಟಿದ್ದರೆ ಅದನ್ನು ಅಲ್ಲಗಳೆಯುವದು ಹೊಂದಲೇ ಆರದು.

---

1. ಅ॥ ಪಾಠದಲ್ಲಿಲ್ಲದಿದ್ದರೂ ಚಕಾರವು ಇಲ್ಲಿ ಬೇಕು.

2. 'ಏವಮೇವ ಏಷಣಾದ್ವಯಲಕ್ಷಣಾವಿದ್ಯಾಯಾಃ' ವಾ॥, "ಏವಮೇವ ಏಷಣಾಲಕ್ಷಣಾವಿದ್ಯಾಯಾಃ" ಕಾ॥

3. "ಅವಿದ್ಯಾಯಾಃ" ಎಂಬ ಮುದ್ರಿತಪಾಠಕ್ಕಿಂತ ಇದೇ ಮೇಲು.

(ಆಕ್ಷೇಪ) :—(ಇಲ್ಲಿ) ಸಂಭೂತಿಗೂ ವಿನಾಶಕ್ಕೂ ಸಮುಚ್ಚಯವನ್ನು ವಿಧಿಸುವುದಕ್ಕಲ್ಲವೆ, ಸಂಭೂತಿಯನ್ನು ಅಪವಾದಮಾಡಿರುವದು[1] ? ಹೇಗೆ (ಮುಂದೆ) "ಯಾರು ಅವಿದ್ಯೆಯನ್ನು ಉಪಾಸನೆಮಾಡುವರೋ ಅವರು ಅಂಧಂತಮಸ್ಸನ್ನು ಪ್ರವೇಶಿಸುತ್ತಾರೆ" (ಈ. ಮಾ. ೧೨) ಎಂಬ (ವಿದ್ಯಾವಿದ್ಯೆಗಳ ಸಮುಚ್ಚಯವನ್ನು ವಿಧಿಸುವದಕ್ಕಾಗಿ ಅವಿದ್ಯೋಪಾಸನೆಯನ್ನು ನಿಂದಿಸಿದೆಯೋ ಹಾಗೆಯೇ ಇದೂ ಅಲ್ಲವೆ ?)

(ಪರಿಹಾರ) :—ಸಂಭೂತಿವಿಷಯಕವಾದ ದೇವತೋಪಾಸನೆಯನ್ನೂ ಮತ್ತು ವಿನಾಶಶಬ್ದವಾಚ್ಯವಾದ ಕರ್ಮವನ್ನೂ ಸಮುಚ್ಚಯ (ಮಾಡಿ ಅನುಷ್ಠಾನಮಾಡಬೇಕೆಂದು) ವಿಧಾನಮಾಡುವದಕ್ಕಾಗಿಯೇ ಸಂಭೂತಿಯನ್ನು ನಿಂದಿಸಿದೆ–ಎಂಬುದು ನಿಜವೇ. ಆದರೂ ವಿನಾಶವೆಂಬ ಹೆಸರಿನ ಕರ್ಮವನ್ನು ಸ್ವಾಭಾವಿಕವಾದ ಅಜ್ಞಾನ (ದಿಂದಾಗುವ) ಪ್ರವೃತ್ತಿರೂಪವಾದ ಮೃತ್ಯುವನ್ನು[2] ದಾಟುವದಕ್ಕೆ ಹೇಗೆ (ವಿಧಿಸಿದೆಯೋ ಹಾಗೆ), **ದೇವತಾದರ್ಶನ, ಕರ್ಮ–ಇವುಗಳ ಸಮುಚ್ಚಯಾನುಷ್ಠಾನವು ಪುರುಷಸಂಸ್ಕಾರಕ್ಕಾಗಿ (ಮಾಡತಕ್ಕದ್ದಾಗಿದ್ದು) ಕರ್ಮಫಲದಲ್ಲಿ ರಾಗದಿಂದ ಪ್ರವರ್ತಿಸುವ ಸಾಧ್ಯಸಾಧನಗಳೆಂಬ ಎರಡು ಏಷಣೆಗಳ ರೂಪದ ಮೃತ್ಯುವನ್ನು ದಾಟುವದಕ್ಕಾಗಿ[3] (ವಿಧಿಸಿರುತ್ತದೆ).** ಈ ರೀತಿಯಲ್ಲಿ ಏಷಣಾದ್ವಯರೂಪವಾದ ಮೃತ್ಯುವೆನಿಸಿರುವ ಅಶುದ್ಧಿಯಿಂದ ಬಿಡುಗಡೆಯನ್ನು ಹೊಂದಿದರೆ ಪುರುಷನು ಸಂಸ್ಕಾರವನ್ನು ಹೊಂದಿದವನಾಗುವನು. ಆದ್ದರಿಂದ **(ಈ) ಮೃತ್ಯು**

---

1. **ಸಂಭೂತಿ**ಯನ್ನು ನಿಜವಾಗಿ ನಿಂದಿಸಿದೆಯಾದರೆ ಸಂಭವವು ಮಾಯಿಕವೆಂದಾದೀತು ; ಆದರೆ ಹಾಗಲ್ಲ. ಒಂದನ್ನು ನಿಂದಿಸುವದು ಮತ್ತೊಂದರ ವಿಧಾನಾರ್ಥವಾಗಿ–ಎಂಬ ನ್ಯಾಯದಿಂದ ಸಂಭೂತಿ, ವಿನಾಶ–ಇವುಗಳನ್ನು ಒಂದೊಂದಾಗಿ ಮಾಡುವದನ್ನು ನಿಂದಿಸಿರುವದು ಎರಡನ್ನೂ ಸೇರಿಸಿ ಅನುಷ್ಠಾನಮಾಡಬೇಕು ಎಂಬ ಅಭಿಪ್ರಾಯದಿಂದ. ಅದ್ದರಿಂದ ಸಂಭೂತಿಯನ್ನು ನಿಂದಿಸಿಲ್ಲ–ಎಂದು ಪೂರ್ವಪಕ್ಷಿಯ ಭಾವ. ಇಲ್ಲಿ ಕೊಟ್ಟಿರುವ ಶ್ರುತಿಯನ್ನು ಮಾಧ್ಯಂದಿನಪಾಠದಂತೆ ಅರ್ಥಮಾಡಿಕೊಳ್ಳಬೇಕು.

2. ಶಾಸ್ತ್ರವಿಹಿತಕರ್ಮವನ್ನರಿಯದವರು ಸ್ವಭಾವದಿಂದ ತೊಡಗುವ ಲೌಕಿಕಕರ್ಮವನ್ನೇ ಇಲ್ಲಿ ಮೃತ್ಯುವೆಂದಿದೆ; ಏಕೆಂದರೆ ಅದರಿಂದ ಆ ಜನರಿಗೆ ಅನರ್ಥವೇ ಉಂಟಾಗುವದು.

3. ಶಾಸ್ತ್ರೀಯಕರ್ಮವನ್ನೂ ಉಪಾಸನೆಯನ್ನೂ ಮಾಡುವವನು ಅವುಗಳ ಫಲವನ್ನು ಬಯಸದೆ ಅನುಷ್ಠಾನಮಾಡಿದರೆ ಪುರುಷಸಂಸ್ಕಾರವುಂಟಾಗುವದೆಂಬ ಕಾರಣದಿಂದ ಅವನ್ನು ವಿಧಿಸಿದೆಯೇ ಹೊರತು ಕೇವಲ ಸಮುಚ್ಚಯಕ್ಕಾಗಿ ಅಲ್ಲ. ಬಯಕೆ ಎಂಬ ಮೃತ್ಯುವನ್ನು ದಾಟುವದೇ [ಅವಕ್ಕೆ ಮುಖ್ಯೋದ್ದೇಶ. ಸಾಧ್ಯಸಾಧನಗಳೆಂಬ ಏಷಣೆಗಳನ್ನು ಬೃ. ೧–೫–೧೭ ರಲ್ಲಿ ವರ್ಣಿಸಿದೆ.

**ವನ್ನು ದಾಟುವದಕ್ಕಾಗಿ ದೇವತಾದರ್ಶನ, ಕರ್ಮ-ಇವುಗಳ ಸಮುಚ್ಚಯ ವೆಂಬ ಅವಿದ್ಯೆಯನ್ನು (ವಿಧಿಸಿರುತ್ತದೆ[1]). ಹೀಗೆಯೇ ಏಷಣಾರೂಪವಾದ ಮೃತ್ಯುವನ್ನು ಅವಿದ್ಯೆಯಿಂದ[2] ದಾಟಿರುವವನಾಗಿ ವಿರಕ್ತನಾಗಿರುವವನು ಉಪನಿಷಚ್ಛಾಸ್ತ್ರದ ಅರ್ಥವನ್ನು ಮನನಮಾಡುವದರಲ್ಲಿ ತಾತ್ಪರ್ಯ ವುಳ್ಳವನಾದರೆ ಪರಮಾತ್ಮೈಕತ್ವವಿದ್ಯೆಯುಂಟಾಗುವದು ಅವಶ್ಯವಾಗಿ (ಆಗಿಯೇ ತೀರುವ)ದರಿಂದ ಮೊದಲು ಇರುವ ಅವಿದ್ಯೆಗಿಂತ ಆ ಬಳಿಕ ಉಂಟಾಗುವ ಅಮೃತತ್ತ್ವಸಾಧನವಾದ ಬ್ರಹ್ಮವಿದ್ಯೆಯು ಒಬ್ಬ ಪುರುಷ ನಲ್ಲಿಯೇ ಸೇರಿಕೊಳ್ಳುವದರಿಂದ ಅವಿದ್ಯೆಗೆ ಸೇರಿಸಿದ್ಧಾಯಿತೆನಿಸುತ್ತದೆ[3].** ಆದ್ದರಿಂದ ಅಶುದ್ಧಿಯನ್ನು ತೊಲಗಿಸುವದಕ್ಕೆ ಕಾರಣವಾದರೂ (ಸಮುಚ್ಚಯವು) ಬೇರೆ ಒಂದು ಪ್ರಯೋಜನಕ್ಕಾಗಿರುವದರಿಂದ[4] ಅಮೃತತ್ತ್ವಕ್ಕೆ ಸಾಧನವಾಗಿರುವ ಬ್ರಹ್ಮವಿದ್ಯೆಯ ಹೋಲಿಕೆಯಿಂದ ಸಂಭೂತಿಯ ನಿಂದೆಯು ನಿಂದೆಗಾಗಿಯೇ (ಬಂದದ್ದು) ಎಂದಾಗುತ್ತದೆ[5]. ಏಕೆಂದರೆ (ಅದು) ಅದರಲ್ಲಿಯೇ ತಾತ್ಪರ್ಯವುಳ್ಳದ್ದಲ್ಲ[6]. ಆದ್ದರಿಂದಲೇ (ಹೀಗೆ) ಸಂಭೂತಿಯನ್ನು ನಿಂದಿಸಿರುವದರಿಂದ ಸಂಭೂತಿಯ ಇರವು ಆಪೇಕ್ಷಿಕವೇ[7] (ಆಯಿತು). ಆದ್ದರಿಂದ ನಿಜವಾಗಿಯೂ ಇರುವ ಆತ್ಮೈಕತ್ವದ ದೃಷ್ಟಿಯಿಂದ ಅಮೃತವೆಂಬ ಸಂಭವವನ್ನು ಇಲ್ಲವೆಂದಿರುತ್ತದೆ (ಎಂದು ಸಿದ್ಧ ವಾಯಿತು).

---

1. "ವಿದ್ಯಾಂಚಾವಿದ್ಯಾಂ ಚ" ಎಂಬ ಶ್ರುತಿಗೆ ಅರ್ಥವನ್ನು ಹೇಳುವದಕ್ಕೆ ಇಲ್ಲಿಂದ ಮೊದಲು ಮಾಡಿದೆ.

2. ಕರ್ಮೋಪಾಸನೆಗಳ ಸಮುಚ್ಚಯದಿಂದ.

3. ಅವಿದ್ಯೆಯು ಅನುಷ್ಠಾನರೂಪ, ವಿದ್ಯೆಯು ಪರಮಾರ್ಥಜ್ಞಾನರೂಪ-ಇವೆರಡೂ ಒಬ್ಬನಲ್ಲಿಯೇ ಕ್ರಮವಾಗಿರುವದರಿಂದ ಸಮುಚ್ಚಿತವೆಂದು ಹೇಳಿವೆಯೇ ಹೊರತು ಒಂದೇ ಕಾಲದಲ್ಲಿರುವವೆಂಬ ಅಭಿಪ್ರಾಯದಿಂದಲ್ಲ.

4. ಅದ್ವೈತಜ್ಞಾನಕ್ಕಾಗಿ ಎಂದರ್ಥ.

5. ಸಮುಚ್ಚಯವು ಬ್ರಹ್ಮವಿದ್ಯೆಯ ದೃಷ್ಟಿಯಿಂದ ನಿಜವಾಗಿ ಅವಿದ್ಯೆಯೇ; ಅದರಿಂದಾಗುವ ಫಲವು, ಅಮೃತತ್ವವು, ಅಂಥಂತಮಸ್ಸೆಂದಿರುವದು ನಿಂದೆಗಾಗಿಯೇ.

6. ಸಂಭೂತಿಫಲವಾದ ಅಮೃತವನ್ನೇ ಹೇಳುವದಕ್ಕೆ ಬಂದದ್ದಲ್ಲ.

7. ಹೋಲಿಕೆಯ ಅಮೃತವು ಪರಮಾರ್ಥವಾಗಲಾರದು.

(ಭಾಷ್ಯ)

೧೭೪. ಏವಂ ಮಾಯಾನಿರ್ಮಿತಸ್ಯೈವ[1] ಜೀವಸ್ಯ ಅವಿದ್ಯಯಾ ಪ್ರತ್ಯುಪಸ್ಥಾಪಿತಸ್ಯ ಅವಿದ್ಯಾನಾಶೇ ಸ್ವಭಾವರೂಪತ್ವಾತ್ ಪರಮಾರ್ಥತಃ ಕೋ ನ್ವೇನಂ ಜನಯೇತ್ ? ನ ಹಿ ರಜ್ಜ್ವಾಮ್ ಅವಿದ್ಯಾರೋಪಿತಂ ಸರ್ಪಂ ಪುನಃ ವಿವೇಕತೋ ನಷ್ಟಂ ಜನಯೇತ್ ಕಶ್ಚಿತ್ । ತಥಾ ನ ಕಶ್ಚಿತ್ ಏನಂ ಜನಯೇದಿತಿ ಕೋ ನು ಇತ್ಯಾಕ್ಷೇಪಾರ್ಥತ್ವಾತ್ ಕಾರಣಂ ಪ್ರತಿಷಿಧ್ಯತೇ । ಅವಿದ್ಯೋದ್ಭೂತಸ್ಯ ನಷ್ಟಸ್ಯ ಜನಯಿತೃಕಾರಣಂ ನ ಕಿಂಚಿತ್ ಅಸ್ತಿ ಇತ್ಯಭಿಪ್ರಾಯಃ । "ನಾಯಂ ಕುತಶ್ಚಿನ್ನ ಬಭೂವ ಕಶ್ಚಿತ್" (ಕ. ೧-೨-೧೮) ಇತಿ ಶ್ರುತೇಃ ॥

(ಭಾಷ್ಯಾರ್ಥ)

ಹೀಗೆ ಮಾಯೆಯಿಂದ ನಿರ್ಮಿತನಾದಂತೆ ಅವಿದ್ಯೆಯಿಂದ ಕಲ್ಪಿತನಾಗಿರುವ ಜೀವನಿಗೆ ಅವಿದ್ಯೆಯು ಹೋಗಲು ಪರಮಾರ್ಥವಾಗಿಯೇ (ತನ್ನ) ಸ್ವಭಾವರೂಪ (ವನ್ನೇ ಹೊಂದು)ವದರಿಂದ "ಇವನನ್ನು (ಮತ್ತೆ[2]) ಯಾರು ಹುಟ್ಟಿಸಿಯಾರು ?" (ಬೃ. ೩-೯-೨೮) ಹಗ್ಗದಲ್ಲಿ ಅವಿದ್ಯೆಯಿಂದ ಆರೋಪಿತವಾಗಿರುವ ಸರ್ಪವನ್ನು ವಿವೇಕದಿಂದ (ಅದು) ಹೋದ (ಬಳಿಕ) ಮತ್ತೆ ಯಾರೂ ಹುಟ್ಟಿಸಲಾರರಷ್ಟೆ? ಹಾಗೆಯೇ (ಇವನನ್ನು) ಯಾರೂ ಹುಟ್ಟಿಸಲಾರರು ಎಂದು (ಅವನನ್ನು ಹುಟ್ಟಿಸುವ) ಕಾರಣವನ್ನೇ (ಶ್ರುತಿಯಲ್ಲಿ) ಇಲ್ಲವೆಂದಿರುತ್ತದೆ; ಏಕೆಂದರೆ (ಅಲ್ಲಿ) "ಯಾರುತಾನೆ (ಹುಟ್ಟಿಸಿಯಾರು ?) ಎಂಬುದಕ್ಕೆ ಆಕ್ಷೇಪವೇ ಅರ್ಥ. ಅವಿದ್ಯೆಯಿಂದ ಉಂಟಾಗಿ ನಷ್ಟವಾಗಿರುವದನ್ನು ಉಂಟುಮಾಡುವ ಕಾರಣವು ಯಾವದೂ ಇಲ್ಲ ಎಂದು ಅಭಿಪ್ರಾಯ. "ಈತನು ಏತರಿಂದಲೂ (ಉಂಟಾಗು)ವದಿಲ್ಲ, ಯಾರೂ (ಈತನಿಂದ) ಉಂಟಾಗಿರುವದಿಲ್ಲ" (ಕ. ೧-೨-೧೮) ಎಂಬ ಶ್ರುತಿಯ (ಬೆಂಬಲ)ವಿರುವದರಿಂದ (ಹೀಗೆಂದು ಅರ್ಥಮಾಡಬೇಕು).

---

1. "ನಿರ್ಮಿತಸ್ಯೈವ" ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

2. 'ಪುನಃ' ಎಂಬ ಮಾತು ಕಾರಿಕೆಯಲ್ಲಿಲ್ಲವೆಂಬ ಕಾರಣದಿಂದ ಭಾಷ್ಯಕಾರರು ಇಲ್ಲಿ ಬಿಟ್ಟಿರುವರೋ ಭಾಷ್ಯದಲ್ಲಿದ್ದದ್ದನ್ನು ಲೇಖಕರು ಕೈಬಿಟ್ಟಿರುವರೋ ತಿಳಿಯದು; ಅರ್ಥಕ್ಕೇನೋ ಇದೂ ಅವಶ್ಯ.

## ಶ್ರುತಿಯಿಂದ ಆಜಬ್ರಹ್ಮದ ಜ್ಞಾನವಾಗುವ ರೀತಿ

**ಸ ಏಷ ನೇತಿ ನೇತೀತಿ ವ್ಯಾಖ್ಯಾತಂ ನಿಹ್ನುತೇ ಯತಃ ।**
**ಸರ್ವಮಗ್ರಾಹ್ಯಭಾವೇನ ಹೇತುನಾಜಂ ಪ್ರಕಾಶತೇ ॥ ೨೬ ॥**

**೨೬.** "ಸ ಏಷ ನೇತಿ ನೇತಿ" (ಆ ಈತನು ಇದಲ್ಲ, ಇದಲ್ಲ) ಎಂದು ವಿವರಿಸಿದ್ದನ್ನು ಎಲ್ಲವನ್ನೂ ಅಗ್ರಾಹ್ಯತ್ವವೆಂಬ ಕಾರಣದಿಂದ ಅಲ್ಲಗಳೆಯುತ್ತದೆಯಾದ್ದರಿಂದ ಅಜವು ಬೆಳಗುತ್ತದೆ.

**(ಭಾಷ್ಯ)**

೧೭೫. ಸರ್ವವಿಶೇಷಪ್ರತಿಷೇಧೇನ "ಅಥಾತ ಆದೇಶೋ ನೇತಿ ನೇತಿ" (ಬೃ. ೨-೩-೬) ಇತಿ ಪ್ರತಿಪಾದಿತಸ್ಯ ಆತ್ಮನಃ ದುರ್ಬೋಧ್ಯತ್ವಂ[1] ಮನ್ಯಮಾನಾ ಶ್ರುತಿಃ ಪುನಃ ಪುನಃ ಉಪಾಯಾನ್ತರತ್ವೇನ ತಸ್ಯೈವ ಪ್ರತಿಪಿಪಾದಯಿಷಯಾ ಯದ್ ಯತ್ ವ್ಯಾಖ್ಯಾತಂ ತತ್ ಸರ್ವಂ ನಿಹ್ನುತೇ ಗ್ರಾಹ್ಯಂ ಜನಿಮದ್ಬುದ್ಧಿವಿಷಯಮ್ ಅಪಲಪತಿ ಅರ್ಥಾತ್ । "ಸ ಏಷ ನೇತಿ ನೇತಿ" (ಬೃ. ೩-೯-೨೬, ೪-೨-೪, ೪-೪-೨೨, ೪-೫-೧೫) ಇತ್ಯಾತ್ಮನಃ ಅದೃಶ್ಯತಾಂ ದರ್ಶಯನ್ತೀ ಶ್ರುತಿಃ ಉಪಾಯಸ್ಯ ಉಪೇಯನಿಷ್ಠತಾಮ್ ಅಜಾನತಃ ಉಪಾಯತ್ವೇನ ವ್ಯಾಖ್ಯಾತಸ್ಯ ಉಪೇಯವತ್ ಗ್ರಾಹ್ಯತಾ ಮಾ ಭೂತ್ ಇತಿ ಅಗ್ರಾಹ್ಯಭಾವೇನ ಹೇತುನಾ ಕಾರಣೇನ ನಿಹ್ನುತೇ ಇತ್ಯರ್ಥಃ । ತತಶ್ಚ ಏವಮ್ ಉಪಾಯಸ್ಯ ಉಪೇಯನಿಷ್ಠತಾಮೇವ ಜಾನತಃ ಉಪೇಯಸ್ಯ ಚ ನಿತ್ಯೈಕರೂಪತ್ವಮ್ ಇತಿ ತಸ್ಯ ಸಬಾಹ್ಯಾಭ್ಯನ್ತರಮಜಮ್ ಆತ್ಮತತ್ತ್ವಂ ಪ್ರಕಾಶತೇ ಸ್ವಯಮೇವ ॥

**(ಭಾಷ್ಯಾರ್ಥ)**

"ಇನ್ನು ಆದ್ದರಿಂದ (ಬ್ರಹ್ಮದ) ಉಪದೇಶವನ್ನು (ಮಾಡಲಾಗುತ್ತದೆ) 'ಇದಲ್ಲ', 'ಇದಲ್ಲ'" (ಬೃ. ೨-೩-೬) ಎಂದು ಎಲ್ಲಾ ವಿಶೇಷಗಳನ್ನೂ ಅಲ್ಲಗಳೆದು[2] ತಿಳಿಸಿಕೊಟ್ಟ ಆತ್ಮನನ್ನು ಅರಿತುಕೊಳ್ಳುವದು ಕಷ್ಟವೆಂಬ ಅಭಿಪ್ರಾಯದಿಂದ

---

1. 'ದುರ್ಬೋಧತ್ವಂ' ಪಾ॥

2. ಮೂರ್ತಾಮೂರ್ತಗಳನ್ನೂ, ಅದರ ವಾಸನೆಗಳನ್ನೂ ಅಲ್ಲಗಳೆದು ಎಂದರ್ಥ

ಸ್ರುತಿಯು ಮತ್ತೆಮತ್ತೆ ಬೇರೊಂದು ಉಪಾಯದಿಂದ[1] ಅವನನ್ನೇ ತಿಳಿಸಿಕೊಡಬೇ
ೇಂಬ ಇಚ್ಛೆಯಿಂದ ಯಾವಯಾವದನ್ನು (ಹಿಂದೆ) ವಿವರಿಸಿಹೇಳಿತ್ತೋ ಅದೆಲ್ಲ
ವನ್ನೂ ನಿಷೇಧಿಸುತ್ತದೆ, ಗ್ರಾಹ್ಯವಾದ ಹುಟ್ಟುಳ್ಳದ್ದೆಂಬ ಬುದ್ಧಿಗೆ ವಿಷಯವಾದ
ದ್ದೆಲ್ಲ)ವನ್ನೂ ಅರ್ಥ(ವಶ)ದಿಂದ ಅಲ್ಲಗಳೆಯುತ್ತದೆ[2]. "ಸ ಏಷ ನೇತಿ ನೇತಿ"
ಆ ಇವನೇ ನೇತಿ ನೇತಿ ಎಂಬ ಆತ್ಮನು ಬೃ. ೩-೯-೨೬, ೪-೨-೪, ೪-೪-೨೨,
-೫-೧೫) ಎಂದು ಆತ್ಮನು ಅದೃಶ್ಯನೆಂದು ತಿಳಿಸುವ ಶ್ರುತಿಯು ಉಪಾಯವಾಗಿ
ಹೇಳಿದ್ದಕ್ಕೆ) ಉಪೇಯದಲ್ಲಿಯೇ ತಾತ್ಪರ್ಯವೆಂಬುದನ್ನು ಅರಿಯದೆ ಇರುವವನು
**ಉಪಾಯವೆಂದು ತಾನು ಹೇಳಿರುವದನ್ನು ಉಪೇಯದಂತೆಯೇ (ಸತ್ಯ
ವೆಂದು) ಗ್ರಹಿಸುವದು ಆಗಬಾರದು ಎಂದು, (ಅದು) ಅಗ್ರಾಹ್ಯವೆಂಬ
ಹೇತುವಿನಿಂದ, ಕಾರಣದಿಂದ, ಅಲ್ಲಗಳೆಯುತ್ತದೆ[3] ಎಂದರ್ಥ.** ಮತ್ತು ಇದರಿಂದ
ೀಗೆ ಉಪಾಯವು ಉಪೇಯದಲ್ಲಿಯೇ ತಾತ್ಪರ್ಯವುಳ್ಳದ್ದು ಎಂದೂ ಉಪೇಯವು
ರೂಪವಾಗಲೂ ಒಂದೇ ರೂಪವಾಗಿರುವದೆಂದೂ[4] ಅರಿತುಕೊಂಡವನಿಗೆ ಹೊರಗೂ
ಒಳಗೂ ಜನ್ಮರಹಿತವಾಗಿರುವ ಆತ್ಮತತ್ತ್ವವು ತಾನೇ ತೋರಿಕೊಳ್ಳುತ್ತದೆ[5].

## ಸದ್ವಸ್ತುವಿಗೆ ಮಾಯೆಯಿಂದ ಜನ್ಮವುಂಟು

(ಭಾಷ್ಯ)

೧೭೬. ಏವಂ ಹಿ ಶ್ರುತಿವಾಕ್ಯಶತೈಃ ಸಬಾಹ್ಯಾಭ್ಯನ್ತರಮಜಮ್ ಆತ್ಮ
ತತ್ತ್ವಮ್, ಅದ್ವಯಮ್, ನ ತತೋಽನ್ಯತ್ ಅಸ್ತಿ ಇತಿ ನಿಶ್ಚಿತಮ್ ಏತತ್ ।
ಯುಕ್ತ್ಯಾ ಚ ಅಧುನಾ ಏತದೇವ ಪುನರ್ನಿರ್ಧಾರ್ಯತೇ ಇತ್ಯಾಹ—

---

1. ಬೃ. ೩-೯-೨೬ ರಲ್ಲಿ ಶರೀರಾದಿಕಾರ್ಯಕರಣಗಳು ಆತ್ಮನಿಗಾಗಿ ಇವೆ ಎಂಬ ಉಪಾಯದಿಂದ; ೪-೨-೪ ರಲ್ಲಿ ಜಾಗ್ರದಾದ್ಯವಸ್ಥೆಗಳೆಂಬ ಉಪಾಯದಿಂದ; ೪-೪-೨೨ ರಲ್ಲಿ ಯಜ್ಞಾದಿಸಾಧನಗಳು. ಸಂನ್ಯಾಸ ಎಂಬ ಉಪಾಯದಿಂದ; ೪-೫-೧೫ ರಲ್ಲಿ ಪ್ರಿಯತಮನಾದ ಆತ್ಮನ ಶ್ರವಣಾದಿಗಳೆಂಬ ಉಪಾಯದಿಂದ-ಹೀಗೆ ಬೇರೆಬೇರೆಯ ಉಪಾಯಗಳಿಂದ ಎಂದರ್ಥ.

2. 'ಸ ಏಷ ನೇತಿ ನೇತ್ಯಾತ್ಮಾ' ಎಂದು ಮತ್ತೆಮತ್ತೆ ಹೇಳಿರುತ್ತದೆ.

3. ಉಪಾಯವು ಉಪಾಯವೆಂಬುದೇ ಗ್ರಹಿಸತಕ್ಕದ್ದು; ಅದು ಸತ್ಯವೆಂದೂ ಗ್ರಹಿಸಬಾರದು. ಆದ್ದರಿಂದ ಒಂದೊಂದು ಉಪಾಯವನ್ನು ಹೇಳಿದ ಬಳಿಕವೂ ನೇತಿ ನೇತಿ 'ಇದಲ್ಲ', 'ಇದಲ್ಲ' ಎಂದು ಉಪಾಯವನ್ನು ಅಲ್ಲಗಳೆದಿರುತ್ತದೆ.

4. ಉಪಾಯವು ಬೇರೆಯಾದಮಾತ್ರದಿಂದ ಅದು ತಿಳಿಸುವ ಆತ್ಮನು ಬೇರೆಯಲ್ಲ.

5. ನೇತಿ ನೇತಿ ಶ್ರುತಿಯು ಉಪಾಯವನ್ನು ಅಲ್ಲಗಳೆಯುವದರಲ್ಲಿಯೇ ಮುಗಿಯುತ್ತದೆ. ಆತ್ಮನನ್ನು ವಿಷಯೀಕರಿಸಿ ತಿಳಿಸುವದಿಲ್ಲ.. ಆತ್ಮನು ಸ್ವಯಂಪ್ರಕಾಶನಾದ್ದರಿಂದ ತಾನೇ ತಿಳಿದು ಬರುತ್ತಾನೆ.

(ಭಾಷ್ಯಾರ್ಥ)

ಹೀಗೆ ನೂರಾರು ಶ್ರುತಿವಾಕ್ಯಗಳಿಂದ ಹೊರಗೂ ಒಳಗೂ ಹುಟ್ಟಿಲ್ಲದ ಎರಡನೆಯದಿಲ್ಲದ್ದು ಆತ್ಮತತ್ತ್ವವು, ಅದಕ್ಕಿಂತ ಬೇರೆಯಾಗಿ (ಯಾವದೂ) ಇಲ್ಲ—ಎಂಬದನ್ನು ನಿಶ್ಚಯಿಸಲಾಯಿತು. ಈಗ ಯುಕ್ತಿಯಿಂದಲೂ ಇದನ್ನೇ ಮತ್ತೆ ಗೊತ್ತುಪಡಿಸಲಾಗುತ್ತದೆ ಎಂದು ಹೇಳುತ್ತಾರೆ :—

**ಸತೋ ಹಿ ಮಾಯಯಾ ಜನ್ಮ ಯುಜ್ಯತೇ ನ ತು ತತ್ತ್ವತಃ ।**
**ತತ್ತ್ವತೋ ಜಾಯತೇ ಯಸ್ಯ ಜಾತಂ ತಸ್ಯ ಹಿ ಜಾಯತೇ ॥ ೨೭ ॥**

೨೭. ಏಕೆಂದರೆ ಸತ್ತಿಗೆ ಮಾಯೆಯಿಂದ ಜನ್ಮವು ಹೊಂದುತ್ತದೆಯೇ ಹೊರತು ನಿಜವಾಗಿ (ಜನ್ಮವು ಹೊಂದು)ವದಿಲ್ಲ. ಯಾವನ (ಮತದಲ್ಲಿ) ನಿಜವಾಗಿ ಹುಟ್ಟುವದೋ ಅವನ (ಮತದಲ್ಲಿ) ಹುಟ್ಟಿದ್ದೇ ಹುಟ್ಟುತ್ತದೆ ಎಂದಾಗುವದು.

(ಭಾಷ್ಯ)

೧೭೭. ತತ್ರ ಏತತ್ ಸ್ಯಾತ್—ಸದಾ ಅಗ್ರಾಹ್ಯಮೇವ ಚೇತ್ ಅಸದೇವ ಆತ್ಮತತ್ತ್ವಮ್ ಇತಿ । ತನ್ನ । ಕಾರ್ಯಗ್ರಹಣಾತ್ । ಯಥಾ ಸತಃ ಮಾಯಾವಿನಃ ಮಾಯಯಾ ಜನ್ಮ ಕಾರ್ಯಮ್, ಏವಂ ಜಗತಃ ಜನ್ಮ ಕಾರ್ಯಂ ಗೃಹ್ಯಮಾಣಂ ಮಾಯಾವಿನಮಿವ ಪರಮಾರ್ಥಸನ್ತಮ್ ಆತ್ಮಾನಂ ಜಗಜ್ಜನ್ಮಮಾಯಾಸ್ಪದಮ್ ಅವಗಮಯತಿ[1] । ಯಸ್ಮಾತ್ ಸತೋ ಹಿ ವಿದ್ಯಮಾನಾತ್ ಕಾರಣಾತ್ ಮಾಯಾನಿರ್ಮಿತಸ್ಯ ಹಸ್ತ್ಯಾದಿಕಾರ್ಯಸ್ಯೇವ ಜಗಜ್ಜನ್ಮ ಯುಜ್ಯತೇ । ನಾಸತಃ ಕಾರಣಾತ್ । ನ ತು ತತ್ತ್ವತ ಏವ ಆತ್ಮನಃ ಜನ್ಮ ಯುಜ್ಯತೇ ॥

(ಭಾಷ್ಯಾರ್ಥ)

ಇಲ್ಲಿ ಈ (ಆಕ್ಷೇಪವು) ಉಂಟಾಗಬಹುದು :—ಆತ್ಮತತ್ತ್ವವು ಯಾವಾಗಲೂ ಅಗ್ರಾಹ್ಯವೇ ಆಗಿದ್ದರೆ[2] (ಅದು) ಅಸತ್ತೇ (ಎಂದಾಯಿತು). (ಆದರೆ) ಇದು ಸರಿಯಲ್ಲ. ಏಕೆಂದರೆ (ಅವರ) ಕಾರ್ಯವು ತಿಳಿಯಬರುತ್ತದೆ. ಹೇಗೆ (ನಿಜವಾಗಿಯೂ) ಇರುತ್ತಿರುವ ಮಾಯಾವಿಯಿಂದಲೇ (ಹುಸಿತೋರಿಕೆಯ ವಸ್ತುಗಳ) ಜನ್ಮವೆಂಬ

---

1. " ಮಾಯಾಸ್ಪದಮೇವ ಗಮಯತಿ " ವಾ॥ಕಾ॥

2. ಆತ್ಮನು ಅಗೃಹ್ಯನು, ಅವನೇ ನೇತಿ ನೇತಿ ಎಂದು ಹೇಳಿದ ಆತ್ಮನು ಎಂದು ಶ್ರುತಿಯಲ್ಲಿದೆ ಎಂದು ಹಿಂದಿನ ಕಾರಿಕೆಯಲ್ಲಿ ಹೇಳಿದೆಯಷ್ಟೆ ; ಅಗ್ರಾಹ್ಯನಾದರೆ ಅವನು ಅಸದ್ರೂಪನು, ಇಲ್ಲ—ಎಂದಾಯಿತು ಎಂದು ಆಕ್ಷೇಪ.

ಕಾರ್ಯವು ಮಾಯೆಯಿಂದಾಗಿರುವದೋ[1] ಹಾಗೆಯೇ ಜಗತ್ತಿನ ಜನ್ಮವೆಂಬ ಕಾರ್ಯವು ತಿಳಿಯಬರುತ್ತಿರುವದರಿಂದ ಮಾಯಾವಿಯಂತೆ ನಿಜವಾಗಿಯೂ ಇದ್ದು ಕೊಂಡಿರುವ ಜಗತ್ತಿನ ಜನ್ಮವೆಂಬ ಮಾಯೆಗೆ ಆಸ್ಪದನಾಗಿರುವ[2] ಆತ್ಮನು (ಇರ ಬೇಕೆಂದು) ಗೊತ್ತುಪಡಿಸಿಕೊಡುತ್ತದೆ. ಏಕೆಂದರೆ ಸತ್ತಾಗಿರುವ (ನಿಜವಾಗಿ) ಇದ್ದು ಕೊಂಡೇ ಇರುವ ಕಾರಣದಿಂದಲೇ ಮಾಯಾನಿರ್ಮಿತವಾದ ಆನೆಯೇ ಮುಂತಾದ ಕಾರ್ಯವು (ಹುಟ್ಟು)ವಂತೆ ಜಗತ್ತಿನ ಜನ್ಮವಾಗುವದೆಂಬುದು ಯುಕ್ತವಾಗುವದೇ ಹೊರತು ಇಲ್ಲದ ಕಾರಣದಿಂದ (ಆಗುವದೆಂಬುದು ಯುಕ್ತ)ವಾಗಲಾರದು. ಹೀಗಲ್ಲದೆ ನಿಜವಾಗಿಯೇ ಆತ್ಮನಿಂದ ಜನ್ಮವಾ(ಗುವದೆಂಬುದು) ಯುಕ್ತವಲ್ಲ.

(ಭಾಷ್ಯ)

೧೭೮. ಅಥ ವಾ ಸತಃ ವಿದ್ಯಮಾನಸ್ಯ ವಸ್ತುನಃ ರಜ್ಜ್ವಾದೇಃ ಸರ್ಪಾದಿವತ್ ಮಾಯಯಾ ಜನ್ಮ ಯುಜ್ಯತೇ ನ ತು ತತ್ತ್ವತಃ ಯಥಾ ತಥಾ ಅಗ್ರಾಹ್ಯಸ್ಯಾಪಿ ಸತ ಏವ ನಾತ್ಮನಃ ರಜ್ಜುಸರ್ಪವತ್ ಜಗದ್ರೂಪೇಣ ಮಾಯಯಾ ಜನ್ಮ ಯುಜ್ಯತೇ ನ ತು ತತ್ತ್ವತ ಏವ ಅಜಸ್ಯ ಆತ್ಮನಃ ಜನ್ಮ । ಯಸ್ಯ ಪುನಃ ಪರಮಾರ್ಥಸತ್ ಅಜಮ್ ಆತ್ಮತತ್ತ್ವಮ್ ಜಗದ್ರೂಪೇಣ ಜಾಯತೇ ವಾದಿನಃ ನ ಹಿ ತಸ್ಯ ಅಜಂ ಜಾಯತೇ ಇತಿ ಶಕ್ಯಂ ವಕ್ತುಮ್ । ವಿರೋಧಾತ್ । ತತಃ ತಸ್ಯ ಅರ್ಥಾತ್ ಜಾತಂ ಜಾಯತೇ ಇತಿ ಆಪನ್ನಮ್ । ತತಶ್ಚ ಅನವಸ್ಥಾ ಜಾತಾತ್ ಜಾಯಮಾನತ್ವೇನ । ತಸ್ಮಾತ್ ಅಜಮ್ ಏಕಮೇವ ಆತ್ಮತತ್ತ್ವಮ್ ಇತಿ ಸಿದ್ಧಮ್ ॥

(ಭಾಷ್ಯಾರ್ಥ)

ಅಥವಾ[3] ಸತ್ತಾದ (ನಿಜವಾಗಿ) ಇದು ಕೊಂಡಿರುವ ಹಗ್ಗವೇ ಮುಂತಾದ ವಸ್ತುವಿಗೆ ಹಾವೇ ಮುಂತಾದ (ರೂಪದಿಂದ) ಮಾಯೆಯಿಂದ (ಮಾತ್ರ) ಜನ್ಮವು

---

1. “ಮಾಯಾಯಾಃ ಜನ್ಮ” ಅಥವಾ “ಮಾಯಾಜನ್ಮ” ಎಂದೂ ಭಾಷ್ಯಕಾರರು ಬರೆದಿರಬಹುದು. ಆದರೆ ಕಾರಿಕೆಗನುಗುಣವಾಗಿ ಮಾಯಯಾ ಎಂಬ ಪಾಠವನ್ನೇ ಇಟ್ಟು ಕೊಂಡಿದೆ.

2. ಮಾಯಾವಿಯಲ್ಲಿ ಮಾಯಾವಸ್ತುಗಳು ಕಲ್ಪಿತವಾಗಿರಬೇಕು, ಅದು ನಿರಾಸ್ಪದ ವಾಗಿರಲಾರದು.

3. ಮೊದಲನೆಯ ಅರ್ಥದಿಂದ ‘ಸತಃ’ ಎಂಬುದು ಪಂಚಮಿ ಎಂದು ನಿಮಿತ್ತ ಕಾರಣವಾಗಿ ಬ್ರಹ್ಮವನ್ನು ಒಪ್ಪಿ ಅರ್ಥವನ್ನು ಹೇಳಲಾಗಿತ್ತು. ಆಗ ಷಷ್ಠಿ ಎಂದು ಗಣಿಸಿ ಉಪಾದಾನಕಾರಣವಾಗಿ ಒಪ್ಪಿ ಹೇಳುತ್ತಾರೆ. ಮಾಯಾಜನ್ಮವಾಗುವದು ನಿಜವಾಗಿರುವ ವಸ್ತುವಿನಿಂದ, ನಿಜವಾಗಿರುವ ವಸ್ತುವಿಗೆ.

ಆಗಬಹುದಾಗಿರುತ್ತದೆಯೇ ಹೊರತು ನಿಜವಾಗಿ (ಜನ್ಮವು) ಹೇಗೆ (ಆಗುವಂ) ತಿಲ್ಲವೋ, ಹಾಗೆ ಅಗ್ರಾಹ್ಯನಾಗಿರುವನಾದರೂ ನಿಜವಾಗಿರುವ ಆತ್ಮನಿಗೇ ಹಗ್ಗದ ಹಾವಿನಂತಿರುವ ಜಗದ್ರೂಪದಿಂದ ಮಾಯಿಯಿಂದ ಜನ್ಮ (ವಾಗುವದೆಂಬುದು) ಯುಕ್ತವಾಗುತ್ತದೆಯೇ ಹೊರತು ಜನ್ಮರಹಿತನಾದ ಆತ್ಮನಿಗೆ ನಿಜವಾಗಿಯೇ ಜನ್ಮವು ಆಗಲಾರದು. ಆದರೆ ಯಾವ ವಾದಿಯ ಮತದಲ್ಲಿ ನಿಜವಾಗಿ ಸತ್ತಾಗಿರುವ ಜನ್ಮರಹಿತವಾದ ಆತ್ಮತತ್ತ್ವವು ಜಗದ್ರೂಪದಿಂದ (ನಿಜವಾಗಿ) ಹುಟ್ಟುವದೋ[1] ಆತನು ಅಜವಾದದ್ದು ಹುಟ್ಟುತ್ತದೆ ಎಂದು ಹೇಳುವದಕ್ಕೆ ಆಗಲಾರದು. ಏಕೆಂದರೆ (ಅದು ತನಗೆ ತಾನೇ) ವಿರೋಧವಾಗುತ್ತದೆ[2]. ಆದ್ದರಿಂದ ಆತನ (ಮಾತಿಗೆ) ಅರ್ಥವು ಹುಟ್ಟಿದ್ದೇ ಹುಟ್ಟುವದು ಎಂದು ಆಗುತ್ತದೆ, ಮತ್ತು ಅದರಿಂದ ಹುಟ್ಟಿದ್ದರಿಂದಲೇ ಹುಟ್ಟುವದೆಂದಾಗಿ ಅನವಸ್ಥೆಯಾಗುವದು[3]. ಆದ್ದರಿಂದ ಆತ್ಮತತ್ತ್ವವು ಜನ್ಮರಹಿತವಾದ ಒಂದೇ ಎಂದು ಸಿದ್ಧವಾಯಿತು.

**ಅಸತೋ ಮಾಯಯಾ ಜನ್ಮ ತತ್ತ್ವತೋ ನೈವ ಯುಜ್ಯತೇ ।**
**ವನ್ಧ್ಯಾಪುತ್ರೋ ನ ತತ್ತ್ವೇನ ಮಾಯಯಾ ವಾಪಿ ಜಾಯತೇ॥ ೨೮ ॥**

೨೮. ಅಸತ್ತಿಗೆ ಮಾಯೆಯಿಂದ (ಅಥವಾ) ತತ್ತ್ವದಿಂದ ಜನ್ಮವು ಹೊಂದುವದೇ ಇಲ್ಲ. ಬಂಜೆಯ ಮಗನು ತತ್ತ್ವದಿಂದಲಾಗಲಿ ಮಾಯೆಯಿಂದಲಾಗಲಿ ಹುಟ್ಟುವದಿಲ್ಲ.

(ಭಾಷ್ಯ)

೧೭೬. ಅಸದ್ವಾದಿನಾಮ್ ಅಸತಃ ಭಾವಸ್ಯ ಮಾಯಯಾ ತತ್ತ್ವತೋ ವಾ ನ ಕಥಂಚನ ಜನ್ಮ ಯುಜ್ಯತೇ । ಅದೃಷ್ಟತ್ವಾತ್ । ನ ಹಿ ವನ್ಧ್ಯಾಪುತ್ರಃ ಮಾಯಯಾ ತತ್ತ್ವತೋ ವಾ ಜಾಯತೇ । ತಸ್ಮಾತ್ ಅತ್ರ ಅಸದ್ವಾದೋ ದೂರತ ಏವ ಅನುಪಪನ್ನಃ ಇತ್ಯರ್ಥಃ ॥

---

1. ಈ ಕಾರಿಕೆಯಲ್ಲಿ (೧) ಜನ್ಮವು ನಿಜವಾಗಿಯೂ ಆಗುತ್ತದೆ ಎಂಬ ವಾದ, (೨) ಅಸತ್ತಿಗೆ ಜನ್ಮವಾಗುವದೆಂಬ ವಾದ-ಇವೆರಡೂ ಸರಿಯಲ್ಲವೆಂದು ಹೇಳಿದೆ. ಎರಡನೆಯ ವಾದದ ಅನುಪಪತ್ತಿಯನ್ನು ಮುಂದಿನ ಶ್ಲೋಕದಲ್ಲಿ ತೋರಿಸಿದೆ, ಮೊದಲನೆಯವರ ಅನುಪಪತ್ತಿಯನ್ನು ಇಲ್ಲಿಯೇ ತಿಳಿಸಿದೆ.

2. ಅಜ, ಹುಟ್ಟುತ್ತದೆ-ಎಂಬ ಮಾತು ವ್ಯಾಹತ.

3. ಏಕೆಂದರೆ ಎಷ್ಟೇ ಹಿಂದಕ್ಕೆ ಸರಿದು ಯಾವದೊಂದನ್ನು ನೋಡಿದರೂ ಅದಕ್ಕೊಂದು ಕಾರಣವಿರಬೇಕಾಗುವದು.

(ಭಾಷ್ಯಾರ್ಥ)

ಅಸದ್ವಾದಿಗಳ (ಮತವಲ್ಲಿ[1]) ಇಲ್ಲದಿರುವ ಭಾವವು ಹುಟ್ಟುತ್ತದೆ (ಎಂಬುದು) ಾಯೆಯಿಂದಲಾಗಲಿ ನಿಜವಾಗಿಯಾಗಲಿ ಹೇಗೂ ಹೊಂದಲಾರದು. (ಏಕೆಂದರೆ ದು ಎಲ್ಲಿಯೂ) ಕಂಡುಬರುವದಿಲ್ಲ. ಬಂಜೆಯ ಮಗನು ಮಾಯೆಯಿಂದಲಾಗಲಿ ಜವಾಗಿಯಾಗಲಿ ಹುಟ್ಟುವದೇ ಇಲ್ಲ. ಆದ್ದರಿಂದ ಇಲ್ಲಿ ಅಸದ್ವಾದವು ದೂರ ಂಗಿಯೇ ಅಯುಕ್ತವಾಗಿರುತ್ತದೆ ಎಂದರ್ಥ.

## ಜನ್ಮವು ಮಾಯಿಕವೆಂಬುದು ಹೇಗೆ?

(ಭಾಷ್ಯ)

೧೮೦. ಕಥಂ ಪುನಃ ಸತಃ ಮಾಯಯೈವ ಜನ್ಮ ಇತಿ ? ಉಚ್ಯತೇ—

(ಭಾಷ್ಯಾರ್ಥ)

(ಆಕ್ಷೇಪ) :—ಸದ್ವಸ್ತುವಿಗಾದರೂ ಮಾಯೆಯಿಂದಲೇ ಜನ್ಮವು ಎಂಬುದು ೀಗೆ ?

(ಪರಿಹಾರ) :—ಹೇಳುತ್ತೇವೆ :—

**ಯಥಾ ಸ್ವಪ್ನೇ ದ್ವಯಾಭಾಸಂ ಸ್ಪನ್ದತೇ ಮಾಯಯಾ ಮನಃ ।**
**ತಥಾ ಜಾಗ್ರದ್ ದ್ವಯಾಭಾಸಂ ಸ್ಪನ್ದತೇ ಮಾಯಯಾ ಮನಃ ॥೨೯॥**

೨೯. ಹೇಗೆ ಸ್ವಪ್ನದಲ್ಲಿ ಮನಸ್ಸು ಮಾಯೆಯಿಂದ ದ್ವಯಾಭಾಸ ವಾಗಿ ಅಲುಗಾಡುತ್ತಿರುವದೋ ಹಾಗೆ ಜಾಗ್ರತ್ತಿನಲ್ಲಿ ಮನಸ್ಸು ಮಾಯೆ ಯಿಂದ ದ್ವಯಾಭಾಸವಾಗಿ ಅಲುಗಾಡುತ್ತಿರುವದು.

(ಭಾಷ್ಯ)

೧೮೧. ಯಥಾ ರಜ್ಜ್ವಾಂ ವಿಕಲ್ಪಿತಃ ಸರ್ಪಃ ರಜ್ಜುರೂಪೇಣ ಅವೇಕ್ಷ್ಯ ಮಾಣಃ ಸನ್ ಏವಂ ಮನಃ ಪರಮಾರ್ಥವಿಜ್ಞಪ್ತ್ಯಾತ್ಮರೂಪೇಣ ಅವೇಕ್ಷ್ಯಮಾಣಂ

---

1. ಇಲ್ಲಿ ಅಸತ್ಕಾರ್ಯವಾದಿಗಳಾದ ವೈಶೇಷಿಕರನ್ನೂ ಶೂನ್ಯವಾದಿಗಳನ್ನೂ ಸೇರಿಸಿ ಖಂಡಿಸಿದೆ ಎಂದು ಭಾವಿಸಬೇಕು.

ಸದ್ ಗ್ರಾಹ್ಯಗ್ರಾಹಕರೂಪೇಣ ದ್ವಯಾಭಾಸಂ ಸ್ಪನ್ದತೇ ಸ್ವಪ್ನೇ ಮಾಯಯಾ ರಜ್ಜ್ವಾಮ್ ಇವ ಸರ್ಪಃ। ತಥಾ ತದ್ವದೇವ ಜಾಗ್ರತ್ ಜಾಗರಿತೇ ಸ್ಪನ್ದತೇ ಮಾಯಯಾ ಮನಃ । ಸ್ಪನ್ದತೇ ಇವ ಇತ್ಯರ್ಥಃ ॥

(ಭಾಷ್ಯಾರ್ಥ)

**ಹೇಗೆ ಹಗ್ಗದಲ್ಲಿ ಹುಟ್ಟುಗಟ್ಟಿರುವ ಹಾವು ಹಗ್ಗದ ರೂಪದಿಂದ ನೋಡಿದರೆ ಸದ್ರೂಪವಾಗಿರುವದೋ, ಹಾಗೆ ಮನಸ್ಸು ಪರಮಾರ್ಥವಿಜ್ಞಾನವಾದ ಆತ್ಮಸ್ವರೂಪದಿಂದ ನೋಡಿದಾಗ ಸದ್ರೂಪವಾಗಿರುವದು[1].** (ಅದು) ಅರಿಯುವದು, ಅರಿಯಲ್ಪಡತಕ್ಕದ್ದು ಎಂಬ ರೂಪದಿಂದ ದ್ವೈತದಂತೆ ತೋರುತ್ತಾ ಕನಸಿನಲ್ಲಿ ಮಾಯೆಯಿಂದ ಹಗ್ಗದಲ್ಲಿ ಹಾವು ತೋರುವಂತೆ, ಮಾಯೆಯಿಂದ ಅಲುಗಾಡುತ್ತಿರುತ್ತದೆ. ಹಾಗೆಯೇ ಅದರಂತೆಯೇ (ಜಾಗ್ರತ್ ಜಾಗರಿತೇ) ಎಚ್ಚರದಲ್ಲಿಯೂ ಮನಸ್ಸು ಮಾಯೆಯಿಂದ ಅಲುಗಾಡುವಂತಿರುತ್ತದೆ. ಎಂದು ಅರ್ಥ[2].

**ಅದ್ವಯಂ ಚ ದ್ವಯಾಭಾಸಂ ಮನಃ ಸ್ವಪ್ನೇ ನ ಸಂಶಯಃ ।**
**ಅದ್ವಯಂ ಚ ದ್ವಯಾಭಾಸಂ ತಥಾ ಜಾಗ್ರನ್ನ ಸಂಶಯಃ ॥ ೩೦ ॥**

೩೦. ಮನಸ್ಸು ಕನಸಿನಲ್ಲಿ ಅದ್ವಯವೂ ದ್ವಯಾಭಾಸವೂ (ಆಗಿರುತ್ತದೆ ಎಂಬುದರಲ್ಲಿ) ಸಂಶಯವಿಲ್ಲ. ಹಾಗೆ ಎಚ್ಚರದಲ್ಲಿ(ಯೂ) ಅದ್ವಯವೂ ದ್ವಯಾಭಾಸವೂ (ಆಗಿರುತ್ತದೆ ಎಂಬುದರಲ್ಲಿ) ಸಂಶಯವಿಲ್ಲ.

(ಭಾಷ್ಯ)

೧೮೨. ರಜ್ಜುರೂಪೇಣ ಸರ್ಪ ಇವ ಪರಮಾರ್ಥತಃ ಆತ್ಮರೂಪೇಣ ಅದ್ವಯಂ ಸತ್ ದ್ವಯಾಭಾಸಂ ಮನಃ ಸ್ವಪ್ನೇ ನ ಸಂಶಯಃ । ನ ಹಿ ಸ್ವಪ್ನೇ ಹಸ್ತ್ಯಾದಿ ಗ್ರಾಹ್ಯಂ ತತ್ ಗ್ರಾಹಕಂ ವಾ ಚಕ್ಷುರಾದಿ ದ್ವಯಂ ವಿಜ್ಞಾನವ್ಯತಿರೇಕೇಣ ಅಸ್ತಿ । ಜಾಗ್ರದಪಿ ತಥೈವ ಇತ್ಯರ್ಥಃ । ಪರಮಾರ್ಥಸದ್ವಿಜ್ಞಾನಮಾತ್ರಾವಿಶೇಷಾತ್ ॥

---

1. ಮನಸ್ಸು ಎಂದೇ ಕಾರಿಕೆಯಲ್ಲಿದ್ದರೂ ಇದು ಅದ್ವಯವಾಗಿರುವದೆಂದು ಮುಂದಿನ ಕಾರಿಕೆಯಲ್ಲಿ ಹೇಳಿರುವದರಿಂದಲೂ ಆತ್ಮರೂಪದಿಂದಲೇ ಇದು ಸತ್ಯವೆಂದು ಇನ್ನೂ ಮುಂದೆ ವಿವರಿಸಿರುವದರಿಂದಲೂ, ಮನಸ್ಸೆಂದರೆ ಇಲ್ಲಿ ಆತ್ಮನೆಂದೇ ಗ್ರಹಿಸಬೇಕು. ಮಾಂ. ೪ ನೆಯ ಮಂತ್ರದ ಭಾಷ್ಯವನ್ನು ನೋಡಿ.

2. "ಮಾಯೆಯಿಂದ ಅಲುಗಾಡುತ್ತಿರುತ್ತದೆ" ಎಂದರೆ ಇದೂ ಒಂದು ಬಗೆಯ ಅಲುಗಾಟವೆಂದು ಭಾವಿಸಬಾರದು.

(ಭಾಷ್ಯಾರ್ಥ)

ಹಾವು ಹಗ್ಗದ ರೂಪದಿಂದ ಹೇಗೋ ಹಾಗೆ ನಿಜವಾಗಿ ಆತ್ಮರೂಪದಿಂದ ಅದ್ವಯವಾಗಿದ್ದುಕೊಂಡು ಮನಸ್ಸು ಕನಸಿನಲ್ಲಿ ದ್ವೈತದಂತೆ ಕಾಣುತ್ತಿರುವದು. (ಇದಕ್ಕೆ) ಸಂಶಯವಿಲ್ಲ. ಏಕೆಂದರೆ ಸ್ವಪ್ನದಲ್ಲಿ ವಿಜ್ಞಾನಕ್ಕಿಂತ[1] ಬೇರೆಯಾಗಿ-ಆನೆಯೇ ಮುಂತಾದ ಗ್ರಾಹ್ಯವಾಗಲಿ ಅಥವಾ ಅದನ್ನು ಗ್ರಹಿಸುವ ಚಕ್ಷುರಿಂದ್ರಿಯವೇ ಮುಂತಾದದ್ದಾಗಲಿ-ದ್ವೈತವು ಇರುವದೇ ಇಲ್ಲ. ಎಚ್ಚರದಲ್ಲಿಯೂ ಹಾಗೆಯೇ ಎಂದರ್ಥ. ಏಕೆಂದರೆ ಪರಮಾರ್ಥಸತ್ತಾಗಿರುವ ವಿಜ್ಞಾನಮಾತ್ರವೇ[2] (ಇರುವದೆಂಬುದು) ಸಮಾನವಾಗಿರುತ್ತದೆ.

## ದ್ವೈತವು ಮನೋಮಾತ್ರ

(ಭಾಷ್ಯ)

೧೮೩. ರಜ್ಜುಸರ್ಪವತ್ ವಿಕಲ್ಪನಾರೂಪಂ ದ್ವೈತರೂಪೇಣ ಮನ ಏವ ಇತಿ ಉಕ್ತಮ್ । ತತ್ರ ಕಿಂ ಪ್ರಮಾಣಮ್ ಇತಿ ? ಅನ್ವಯವ್ಯತಿರೇಕಲಕ್ಷಣಮ್ ಅನುಮಾನಮ್ ಆಹ । ಕಥಮ್ ?

(ಭಾಷ್ಯಾರ್ಥ)

ಹಗ್ಗದ ಹಾವಿನಂತೆ ಮನಸ್ಸೇ ದ್ವೈತರೂಪದಿಂದ ವಿಕಲ್ಪನಾರೂಪ(ವುಳ್ಳದ್ದಾಗಿರುವದು) ಎಂದು ಹೇಳಿದೆ(ಯಷ್ಟೆ). ಅದಕ್ಕೆ ಪ್ರಮಾಣವೇನು ? ಎಂದರೆ (ಇದಕ್ಕೆ) ಅನ್ವಯ, ವ್ಯತಿರೇಕ[3] ಎಂಬ ಅನುಮಾನವನ್ನು ಹೇಳುತ್ತಾರೆ. ಹೇಗೆಂದರೆ :—

**ಮನೋದೃಶ್ಯಮಿದಂ ದ್ವೈತಂ ಯತ್ಕಿಂಚಿತ್ ಸಚರಾಚರಮ್ ।**
**ಮನಸೋ ಹ್ಯಮನೀಭಾವೇ ದ್ವೈತಂ ನೈವೋಪಲಭ್ಯತೇ ॥ ೩೧ ॥**

೩೧. ಸಚರಾಚರವಾದ ಈ ದ್ವೈತವೆಂಬುದು ಎಷ್ಟಿದೆಯೋ (ಅಷ್ಟೂ) ಮನೋದೃಶ್ಯವಾಗಿರುತ್ತದೆ. ಏಕೆಂದರೆ ಮನಸ್ಸು ಅಮನಸ್ಸಾದರೆ ದ್ವೈತವು ತೋರುವದೇ ಇಲ್ಲ.

---

1. ಮನಸ್ಸಿಗಿಂತ ಎಂದು ಅರ್ಥವನ್ನು ಮಾಡಬೇಕಾದದ್ದಿಲ್ಲ; ಚೈತನ್ಯಕ್ಕಿಂತ ಎಂದೇ ಅರ್ಥ.

2. ಆತ್ಮಚೈತನ್ಯವೇ.

3. ಅದಿದ್ದರೆ ಇದೂ ಇರುವದು ಎಂಬುದು ಅನ್ವಯ; ಅದಿಲ್ಲದಿದ್ದರೆ ಇದೂ ಇರುವದಿಲ್ಲ ಎಂಬುದು ವ್ಯತಿರೇಕ.

(ಭಾಷ್ಯ)

೧೮೪. ತೇನ ಹಿ ಮನಸಾ ವಿಕಲ್ಪ್ಯಮಾನೇನ ದೃಶ್ಯಮ್ ಮನೋದೃಶ್ಯಮ್ ಇದಂ ದ್ವೈತಮ್ । ಸರ್ವಂ ಮನಃ ಇತಿ ಪ್ರತಿಜ್ಞಾ । ತದ್ಭಾವೇ ಭಾವಾತ್ ತದಭಾವೇ ಅಭಾವಾತ್ । ಮನಸೋ ಹಿ ಅಮನೀಭಾವೇ ನಿರುದ್ಧೇ[1] ವಿವೇಕದರ್ಶನಾಭ್ಯಾಸ ವೈರಾಗ್ಯಾಭ್ಯಾಂ ರಜ್ಜ್ವಾಮಿವ ಸರ್ಪೇ, ಲಯಂ ಗತೇ ವಾ ಸುಷುಪ್ತೇ, ದ್ವೈತಂ ನೈವ ಉಪಲಭ್ಯತೇ । ಇತಿ ಅಭಾವಾತ್ ಸಿದ್ಧಂ ದ್ವೈತಸ್ಯ ಅಸತ್ತ್ವಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ವಿವಿಧವಾಗಿ ಕಲ್ಪಿಸಲ್ಪಡುವ ಆ ಮನಸ್ಸಿಗೇ ಈ ದ್ವೈತವೆಂಬುದು ದೃಶ್ಯವಾಗಿರುತ್ತದೆ[2]. ಆದ್ದರಿಂದ ಮನೋದೃಶ್ಯವು. ಎಲ್ಲವೂ ಮನಸ್ಸೇ ಎಂಬುದು ಪ್ರತಿಜ್ಞೆ[3]. ಏಕೆಂದರೆ ಅದಿದ್ದರೆ ಇರುತ್ತದೆ, ಅದಿಲ್ಲದಿದ್ದರೆ (ಇದೂ) ಇರುವದಿಲ್ಲ. ಹೇಗೆಂದರೆ ಮನಸ್ಸಿಗೆ ಅಮನೀಭಾವವಾದರೆ, ವಿವೇಕದರ್ಶನದ ಅಭ್ಯಾಸ (ಮತ್ತು) ವೈರಾಗ್ಯ-(ಇವು)ಗಳಿಂದ (ಮನಸ್ಸು) ಹಗ್ಗದಲ್ಲಿ ಹಾವಿನಂತೆ ನಾಶಗೊಳಿಸಲ್ಪಟ್ಟರೆ[4], ಅಥವಾ ಸುಷುಪ್ತಿಯಲ್ಲಿ ಅಡಗಿದರೆ[5], ದ್ವೈತವು ತೋರುವದೇ ಇಲ್ಲ. ಆದ್ದರಿಂದ (ಹೀಗೆ) ಇರುವದಿಲ್ಲವಾದ್ದರಿಂದ ದ್ವೈತವು ಅಸತ್ತು[6] ಎಂದು ಸಿದ್ಧವಾಯಿತು ಎಂದರ್ಥ.

## ಜ್ಞಾನದಿಂದ ಮನಸ್ಸು ಅಮನಸ್ಸಾಗುವದು

(ಭಾಷ್ಯ)

೧೮೫. ಕಥಂ ಪುನರಮನೀಭಾವಃ ಇತಿ ? ಉಚ್ಯತೇ—

---

1. "ಮನಸಿ" ಎಂದು ಅಧ್ಯಾಹಾರಮಾಡಿಕೊಳ್ಳಬೇಕು. ಆಗ ಮುಂದೆ ಬಂದಿರುವ ಸಪ್ತಮೀವಿಭಕ್ತಿಗಳನ್ನು ಇದಕ್ಕೆ ಹೊಂದಿಸಿಕೊಳ್ಳುವದಕ್ಕೆ ಅನುಕೂಲವಾಗುತ್ತದೆ.

2. ಮನಸ್ಸಿಗೆ ದೃಶ್ಯ ಎಂಬಲ್ಲಿ ಮನಸ್ಸೇ ದೃಶ್ಯವಾಗಿ ತೋರುತ್ತದೆ-ಎಂಬ ಅಭಿಪ್ರಾಯವು ಅಡಗಿದೆ.

3. ಪ್ರತಿಜ್ಞೆ, ಹೇತು-ಮುಂತಾದ ನ್ಯಾಯದ ಅವಯವಗಳನ್ನು ೨೪ ಭಾಷ್ಯದಲ್ಲಿ ವಿವರಿಸಿದೆ.

4. ಬಾಧಿತವಾದರೆ ಎಂದರ್ಥ. ಯೋಗದಲ್ಲಿ ಹೇಳಿರುವ ಚಿತ್ತನಿರೋಧವಿವಲ್ಲ.

5. ಮನಸ್ಸು ಅಲ್ಲಿ ಕಾಣದೆ ಇದ್ದರೂ ಅಲ್ಲಿ ಇವೆ ಎಂದೇ ನಮ್ಮಗಳ ಭಾವತೆಯಿದೆ ಆದ್ದರಿಂದ ಅಲ್ಲಿ ಅದು ಅಡಗಿದೆ ಎಂದು ಹೇಳಿದೆ. ನಿಜವಾಗಿ ಅಲ್ಲಿಯೂ ಮನಸ್ಸಿಲ್ಲ.

6. ಜ್ಞಾನವೇ ಜ್ಞೇಯವಸ್ತುವಿನ ಇರವಿಗೆ ಪ್ರಮಾಣವು ಎಂದು ಭಾವ,

(ಭಾಷ್ಯಾರ್ಥ)

(ಪ್ರಶ್ನೆ) :—(ಮನಸ್ಸು) ಅಮನಸ್ಸಾಗುವದಾದರೂ ಹೇಗೆ ?

(ಉತ್ತರ) :— ಹೇಳುತ್ತೇವೆ.

**ಆತ್ಮಸತ್ಯಾನುಬೋಧೇನ ನ ಸಙ್ಕಲ್ಪಯತೇ ಯದಾ ।**
**ಅಮನಸ್ತಾಂ ತದಾ ಯಾತಿ ಗ್ರಾಹ್ಯಾಭಾವೇ ತದಗ್ರಹಮ್ ॥ ೩೨ ॥**

೩೨. ಆತ್ಮಸತ್ಯಾನುಬೋಧದಿಂದ ಯಾವಾಗ ಸಂಕಲ್ಪಿಸುವದಿಲ್ಲವೋ ಆಗ ಗ್ರಾಹ್ಯವು ಇಲ್ಲವಾಗಲು ಗ್ರಹಣವಿಲ್ಲದ್ದಾಗಿ ಅದು ಅಮನಸ್ತೆಯನ್ನು ಹೊಂದುವದು.

ಭಾಷ್ಯ

೧೮೬. ಆತ್ಮೈವ ಸತ್ಯಮ್ ಆತ್ಮಸತ್ಯಮ್ ಮೃತ್ತಿಕಾವತ್ । "ವಾಚಾರಮ್ಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್" (ಛಾಂ. ೬-೧-೪) ಇತಿ ಶ್ರುತೇಃ । ತಸ್ಯ ಶಾಸ್ತ್ರಾಚಾರ್ಯೋಪದೇಶಮ್ ಅನು ಅವಬೋಧಃ ಆತ್ಮಸತ್ಯಾನುಬೋಧಃ । ತೇನ ಸಙ್ಕಲ್ಪ್ಯಾಭಾವತಯಾ ನ ಸಙ್ಕಲ್ಪಯತೇ ದಾಹ್ಯಾಭಾವೇ ಜ್ವಲನಮಿವ ಅಗ್ನೇಃ[1] । ಯದಾ ಯಸ್ಮಿನ್ ಕಾಲೇ ತದಾ ತಸ್ಮಿನ್ ಕಾಲೇ ಅಮನಸ್ತಾಮ್ ಅಮನೋಭಾವಂ ಯಾತಿ ಗ್ರಾಹ್ಯಾಭಾವೇ ತತ್ ಮನಃ ಅಗ್ರಹಂ ಗ್ರಹಣವಿಕಲ್ಪನಾವರ್ಜಿತಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಆತ್ಮಸತ್ಯವು ಎಂದರೆ ಆತ್ಮನೆಂಬ ಸತ್ಯವು. "ವಿಕಾರವು ವಾತಿನಿಂದಾಗಿರುವ ಬರಿಯ ಹೆಸರು. ಮಣ್ಣೆಂಬುದೇ ಸತ್ಯವು" (ಛಾಂ. ೬-೧-೪) ಎಂಬ ಶ್ರುತಿಯ ಪ್ರಮಾಣವಂತೆ ಮೃತ್ತಿಕೆಯಂತೆ[2] (ಆತ್ಮನೇ ಸತ್ಯವು). **ಅ (ಆತ್ಮಸತ್ಯವನ್ನು**

1. "ಅಗ್ನೇಃ" ಎಂಬ ಅಚ್ಚಿನ ಪಾಠವು ಅಷ್ಟು ಹೊಂದುಗೆಯಾಗಿಲ್ಲ. "ಅಗ್ನಿಃ" ಎಂದು ತಿದ್ದಿಕೊಂಡರೂ ಜ್ವಲನಂ ನ ಕುರುತೇ ಎಂದು ಅಧ್ಯಾಹಾರಮಾಡಿಕೊಂಡು ಅನ್ವಯಿಸಬೇಕಾಗುವದು. ಇಲ್ಲಿ ಮೂಲವು ಏನೋ ಸ್ವಲ್ಪ ಬದಲಾಯಿಸಿರುವಂತೆ ಕಾಣುತ್ತದೆ.

2. ಮೃತ್ತಿಕೆಯೇ ಹೇಗೆ ಘಟಾದಿಕಲ್ಪನೆಗಳಿಗೆ ಆಸ್ಪದವಾಗಿರುವದೋ ಹಾಗೆ ಪರಮಾರ್ಥಸತ್ಯನಾದ ಆತ್ಮನೇ ಎಲ್ಲಕ್ಕೂ ಆಸ್ಪದನಾಗಿರುತ್ತಾನೆ, ಆತ್ಮನನ್ನು ಬಿಟ್ಟು ಯಾವದೊಂದೂ ಸತ್ಯವಾಗಿರುವದಿಲ್ಲ ಎಂದರ್ಥ. "ಏಕಾತ್ಮಪ್ರತ್ಯಯಸಾರಮ್" ಎಂಬ ಶ್ರುತಿಯ ಅಭಿಪ್ರಾಯವೂ ಇಲ್ಲಿದೆ.

**ಶಾಸ್ತ್ರ, ಆಚಾರ್ಯ–ಇವರುಗಳ ಉಪದೇಶಕ್ಕೆ ಅನುಗುಣವಾಗಿ ಅರಿತು ಕೊಳ್ಳುವದೇ ಆತ್ಮಸತ್ಯಾನುಬೋಧವು[1].** ಅದರಿಂದ ಸಂಕಲ್ಪಮಾಡತಕ್ಕ (ವಿಷಯವು ಯಾವದೂ) ಇಲ್ಲದಿರುವದರಿಂದ ಸುಡುವ (ವಸ್ತು)ವಿಲ್ಲವಾಗಲು ಬೆಂಕಿಯು ಸುಡುವಿಕೆಯನ್ನು (ಬಿಡು)ವಂತೆ ಯಾವಾಗ ಯಾವಕಾಲದಲ್ಲಿ (ಯಾವ ದನ್ನೂ) ಸಂಕಲ್ಪಿಸದೆ ಇರುವದೋ, ಆಗ ಆ ಕಾಲದಲ್ಲಿ ಆ ಮನಸ್ಸು ಗ್ರಾಹ್ಯವಾದ (ವಸ್ತು) ಇಲ್ಲವಾಗಲು[2] ಅಗ್ರಹವಾಗಿ ಅರಿಯುವದೆಂಬ ವಿಕಲ್ಪವಿಲ್ಲದ್ದಾಗಿ ಎಂದರ್ಥ. (ಆಗ) ಅಮನಸ್ತೆಯನ್ನು ಮನಸ್ಸಾಗಿಲ್ಲದಿರುವಿಕೆಯನ್ನು ಹೊಂದುತ್ತದೆ[3].

## ಜ್ಞಾನದ ಸ್ವರೂಪ

(ಭಾಷ್ಯ)

೧೮೭. ಯದಿ ಅಸದಿದಂ ದ್ವೈತಮ್ ಕೇನ ಸ್ವಮಜಮ್[4] ಆತ್ಮತತ್ತ್ವಂ ವಿಬುಧ್ಯತೇ ಇತಿ ? ಉಚ್ಯತೇ—

(ಭಾಷ್ಯಾರ್ಥ)

(ಆಕ್ಷೇಪ) :—ಈ ದ್ವೈತವು ಅಸತ್ತೇ ಆದರೆ ಹುಟ್ಟಿಲ್ಲದ ತನ್ನ ಆತ್ಮನನ್ನು ಏತರಿಂದ ಅರಿಯಬೇಕು ?

(ಪರಿಹಾರ) :—ಹೇಳುತ್ತೇವೆ :—

**ಅಕಲ್ಪಕಮಜಂ ಜ್ಞಾನಂ ಜ್ಞೇಯಾಭಿನ್ನಂ ಪ್ರಚಕ್ಷತೇ ।**
**ಬ್ರಹ್ಮಜ್ಞೇಯಮಜಂ ನಿತ್ಯಮಜೇನಾಜಂ ವಿಬುಧ್ಯತೇ ॥ ೩೩ ॥**

೩೩. ಜ್ಞಾನವು, ಅಕಲ್ಪಕವು, ಅಜವು, ಜ್ಞೇಯಾಭಿನ್ನವು (ಎಂದು) ಹೇಳುವರು. ಬ್ರಹ್ಮಜ್ಞೇಯವು[5] ನಿತ್ಯವೂ ಅಜವು. ಅಜದಿಂದ ಅಜವು ಅರಿತುಕೊಳ್ಳುತ್ತದೆ.

---

1. ಶ್ರುತಿ, ಗುರುವಾಕ್ಯ, ಆತ್ಮಾನುಭವ–ಈ ಮೂರೂ ಹೊಂದುಗಡೆಯಾಗಿ ಆಗುವ ಬೋಧವೇ ಆತ್ಮಸತ್ಯಾನುಬೋಧವು.

2. ಅಸತ್ಯವೆಂದು ಸ್ಫುಟವಾಗಲು.

3. ಆತ್ಮಸ್ವರೂಪವನ್ನೇ ಪಡೆದುಬಿಡುತ್ತದೆ.

4. "ಸಮಜ್ಞಸಮ್" ಎಂಬ ಅಚ್ಚಿನ ಪಾಠಕಿಂತ ಇದು ಉತ್ತಮ.

5. ಭಾಷ್ಯಕ್ಕನುಗುಣವಾಗಿ ಕನ್ನಡಿಸಿರುವದಿದು. "ಬ್ರಹ್ಮ ಜ್ಞೇಯಮ್" ಬಿಡಿಸಿ ಕೊಂಡು ಜ್ಞೇಯವಾದ ಬ್ರಹ್ಮವು ನಿತ್ಯವು, ಅಜವಾದದ್ದು "–ಎಂದೂ ಕನ್ನಡಿಸಬಹುದು.

(ಭಾಷ್ಯ)

೧೪೮. ಅಕಲ್ಪಕಂ ಸರ್ವಕಲ್ಪನಾವರ್ಜಿತಮ್ ಅತ ಏವ ಅಜಂ ಜ್ಞಾನಂ ಜ್ಞಪ್ತಿಮಾತ್ರಂ ಜ್ಞೇಯೇನ ಪರಮಾರ್ಥಸತಾ ಬ್ರಹ್ಮಣಾ ಅಭಿನ್ನಂ ಪ್ರಚಕ್ಷತೇ ಕಥಯನ್ತಿ ಬ್ರಹ್ಮವಿದಃ । "ನ ಹಿ ವಿಜ್ಞಾತುರ್ವಿಜ್ಞಾತೇರ್ವಿಪರಿಲೋಪೋ ವಿದ್ಯತೇ" (ಬೃ. ೪-೩-೩೦) ಅಗ್ನ್ಯುಷ್ಣವತ್। "ವಿಜ್ಞಾನಮಾನನ್ದಂ ಬ್ರಹ್ಮ" (ಬೃ. ೩-೯-೨೮) "ಸತ್ಯಂ ಜ್ಞಾನಮನನ್ತಂ ಬ್ರಹ್ಮ" (ತೈ. ೨-೧) ಇತ್ಯಾದಿಶ್ರುತಿಭ್ಯಃ। ತಸ್ಯೈವ ವಿಶೇಷಣಮ್ (ಬ್ರಹ್ಮಜ್ಞೇಯಮ್)। ಬ್ರಹ್ಮ ಜ್ಞೇಯಂ ಯಸ್ಯ ಸ್ವಸ್ಯ ತದಿದಂ ಬ್ರಹ್ಮಜ್ಞೇಯಮ್। ಔಷ್ಣಸ್ಯೇವ[1] ಅಗ್ನಿವತ್ ಅಭಿನ್ನಮ್। ತೇನ ಆತ್ಮಸ್ವರೂಪೇಣ ಅಜೇನ ಜ್ಞಾನೇನ ಅಜಂ ಜ್ಞೇಯಮ್ ಆತ್ಮತತ್ತ್ವಂ ಸ್ವಯಮೇವ ವಿಬುಧ್ಯತೇ ಅವಗಚ್ಛತಿ । ನಿತ್ಯಪ್ರಕಾಶಸ್ವರೂಪ ಇವ ಸವಿತಾ ನಿತ್ಯವಿಜ್ಞಾನೈಕರಸಘನತ್ವಾತ್ ನ ಜ್ಞಾನಾನ್ತರಮ್ ಅಪೇಕ್ಷತೇ ಇತ್ಯರ್ಥಃ ॥

(ಭಾಷ್ಯಾರ್ಥ)

ಅಕಲ್ಪಕವಾದ ಯಾವ ಕಲ್ಪನೆಯೂ ಇಲ್ಲದ[2], ಆದ್ದರಿಂದಲೇ ಅಜವಾದ ಜ್ಞಾನವು ಬರಿಯ ಚೈತನ್ಯವು ಜ್ಞೇಯವಾದ ಪರಮಾರ್ಥಸದ್ರೂಪವಾದ ಬ್ರಹ್ಮಕ್ಕಿಂತ ಬೇರೆಯಲ್ಲ (ಎಂದು) ಬ್ರಹ್ಮಜ್ಞಾನಿಗಳು ಹೇಳುವರು, ತಿಳಿಸುತ್ತಾರೆ. "ಅರಿಯುವಾತನ ಅರಿವಿಗೆ ನಾಶವು ಇರುವದೇ ಇಲ್ಲ" (ಬೃ. ೪-೩-೩೦) ಬೆಂಕಿಯ ಬಿಸಿಗೆ ಹೇಗೆ (ಲೋಪವಿಲ್ಲವೋ ಹಾಗೆ). "ವಿಜ್ಞಾನವೂ ಆನಂದವೂ ಆದ ಬ್ರಹ್ಮವು" (ಬೃ. ೩-೯-೨೮) "ಸತ್ಯವೂ ಜ್ಞಾನವೂ ಅನಂತವೂ ಆದ ಬ್ರಹ್ಮವು" (ತೈ. ೨-೧) ಮುಂತಾದ ಶ್ರುತಿಗಳು ಇದಕ್ಕೆ ಪ್ರಮಾಣವು. ಆ ಜ್ಞಾನಕ್ಕೇ[3] (ಇನ್ನೊಂದು) ವಿಶೇಷಣವನ್ನು (ಹೇಳುತ್ತಾರೆ): (ಇದು ಬ್ರಹ್ಮಜ್ಞೇಯವು). ಬ್ರಹ್ಮವು ಯಾವ ತನಗೆ ಜ್ಞೇಯವಾಗಿರುವದೋ ಅಂಥ ಇದು ಬ್ರಹ್ಮಜ್ಞೇಯವು. ಬಿಸಿಯು ಬೆಂಕಿಗೆ ಹೇಗೋ

---

1. "ಉಷ್ಣಸ್ಯೇನ" ಎಂಬ ಅ॥ ಪಾಠಕ್ಕಿಂತ ಇದು ಮೇಲು.

2. ಇದು ಇಂಥ "ದ್ರವ್ಯವು, ಗುಣವು" ಮುಂತಾದ ಕಲ್ಪನೆಯಿಲ್ಲದ.

3. "ಬ್ರಹ್ಮಜ್ಞೇಯವಾದ ಜ್ಞಾನವು" ಎಂದು ಅನ್ವಯಿಸಿರುತ್ತದೆ. ಅಜವಾಗಿರುವ ಆತ್ಮತತ್ತ್ವವು ತಾನೇ ತನ್ನನ್ನರಿಯುವ ಜ್ಞಾನವಾಗಿರುತ್ತದೆ ಎಂಬರ್ಥವು ಇದರಿಂದ ಹೊರಡುತ್ತದೆ. ಬ್ರಹ್ಮವೂ, ಜ್ಞೇಯವೂ, ನಿತ್ಯವೂ, ಅಜವೂ ಆದ ಜ್ಞಾನವಾಗಿರುತ್ತದೆ ಎಂದೂ ಅರ್ಥವನ್ನು ಮಾಡಬಹುದು. 'ಜ್ಞೇಯವೆಂಬುದು 'ಭೂತಪೂರ್ವಗತಿಯಿಂದ ಎಂದು ಉಪ

(ಹಾಗೆ ಬ್ರಹ್ಮಕ್ಕಿಂತಲೂ) ಅಭಿನ್ನವಾದದ್ದು. (ನಿತ್ಯವೂ ಅಜವಾದದ್ದು[1]). ಆ ತನ್ನ ಸ್ವರೂಪವೇ ಆಗಿರುವ ಅಜವಾದ ಜ್ಞಾನದಿಂದ ಅಜವಾದ ಜ್ಞೇಯವು ಆತ್ಮತತ್ತ್ವವು, ತಾನೇ ಅರಿತುಕೊಳ್ಳುತ್ತದೆ, ಗೊತ್ತುಮಾಡಿಕೊಳ್ಳುತ್ತದೆ. ಯಾವಾಗಲೂ ಬೆಳಗುತ್ತಿರುವ ಸ್ವರೂಪದ ಸೂರ್ಯನಂತೆ ಯಾವಾಗಲೂ ಅರಿವಿನ ಸ್ವರೂಪವೇ ಆಗಿರುವ ಗಟ್ಟಿಯಾಗಿರುವದರಿಂದ ಮತ್ತೊಂದು ಜ್ಞಾನವನ್ನು ಬಯಸುವದಿಲ್ಲ[2] ಎಂದರ್ಥ.

## ಜ್ಞಾನದಿಂದ ನಿಗ್ರಹವಾದ ಮನಸ್ಸಿನ ಸ್ವರೂಪ

(ಭಾಷ್ಯ)

೧೮೯. ಆತ್ಮಸತ್ಯಾನುಬೋಧೇನ ಸಙ್ಕಲ್ಪಮ್ ಅಕುರ್ವತ್ ಬಾಹ್ಯವಿಷಯಾಭಾವೇ ನಿರಿನ್ಧನಾಗ್ನಿವತ್ ಪ್ರಶಾನ್ತಂ ನಿಗೃಹೀತಂ ನಿರುದ್ಧಂ ಮನೋ ಭವತಿ ಇತ್ಯುಕ್ತಮ್ । ಏವಂ ಚ ಮನಸಃ ಹಿ ಅಮನೀಭಾವೇ ದ್ವೈತಾಭಾವಶ್ಚ ಉಕ್ತಃ । ತಸ್ಯ—

(ಭಾಷ್ಯಾರ್ಥ)

ಆತ್ಮನೇ ಸತ್ಯನೆಂಬ ಅನುಬೋಧದಿಂದ ಹೊರಗಿನ ವಿಷಯವಿಲ್ಲವಾಗಲು ಸಂಕಲ್ಪವನ್ನು ಮಾಡದೆ ಕಟ್ಟಿಗೆಯಿಲ್ಲದ ಬೆಂಕಿಯಂತೆ ಬಹಳ ಶಾಂತವಾಗಿ ಮನಸ್ಸು ನಿಗೃಹೀತವಾಗಿ ನಿರುದ್ಧವಾಗುವದು ಎಂದು ಹೇಳಿದ್ದಾಯಿತು. ಮತ್ತು ಹೀಗೆ ಮನಸ್ಸು ಮನಸ್ಸಲ್ಲದೆ ಹೋಗಲು ದ್ವೈತವೂ ಇರುವದಿಲ್ಲ ಎಂದು ಹೇಳಿದ್ದಾಯಿತು[3]. ಆ—

**ನಿಗೃಹೀತಸ್ಯ ಮನಸೋ ನಿರ್ವಿಕಲ್ಪಸ್ಯ ಧೀಮತಃ ।**
**ಪ್ರಚಾರಃ ಸ ತು ವಿಜ್ಞೇಯಃ ಸುಷುಪ್ತೇಽನ್ಯೋ ನ ತತ್ಸಮಃ ॥ ೩೪ ॥**

೩೪. ನಿಗೃಹೀತವಾದ, ನಿರ್ವಿಕಲ್ಪವಾದ, ಧೀವಂತವಾದ ಮನಸ್ಸಿನ ಪ್ರಚಾರವಿದೆಯಲ್ಲ, ಅದನ್ನೇ ಅರಿತುಕೊಳ್ಳಬೇಕು. ತನಿನಿದ್ರೆಯಲ್ಲಿ (ಇರುವದು) ಬೇರೆಯ (ತರ)ದ್ದು; ಅದಕ್ಕೆ ಸಮನಲ್ಲ.

---

1. ಈ ಎರಡು ಮಾತುಗಳು ಭಾಷ್ಯದಲ್ಲಿ ಇಲ್ಲಿ ಬಿಟ್ಟುಹೋಗಿವೆ.

2. ಅಕ್ಷರಾರ್ಥವನ್ನು ಹಿಡಿದು ತಾನು ತನ್ನನ್ನೇ ಅರಿತುಕೊಳ್ಳುತ್ತದೆ ಎಂಬ ಕರ್ಮಕರ್ತೃಭಾವವನ್ನು ಕಲ್ಪಿಸಬಾರದು—ಎಂದು ಭಾವ.

3. ೩೧-೩೩ ನೆಯ ಕಾರಿಕೆಗಳಲ್ಲಿ ಹೇಳಿರುವದರ ಸಾರವಿದು.

(ಭಾಷ್ಯ)

೧೯೦. ಏವಂ ನಿಗೃಹೀತಸ್ಯ ನಿರುದ್ಧಸ್ಯ ಮನಸಃ ನಿರ್ವಿಕಲ್ಪಸ್ಯ ಸರ್ವಕಲ್ಪನಾವರ್ಜಿತಸ್ಯ ಧೀಮತಃ ವಿವೇಕವತಃ ಪ್ರಚರಣಂ ಪ್ರಚಾರಃ ಯಃ ಸ ತು ಪ್ರಚಾರಃ (ವಿಜ್ಞೇಯಃ)[1] ವಿಶೇಷೇಣ ಜ್ಞೇಯಃ ಯೋಗಿಭಿಃ । ನನು ಸರ್ವಪ್ರತ್ಯಯಾಭಾವೇ ಯಾದೃಶಃ ಸುಷುಪ್ತಿಸ್ಥಸ್ಯ ಮನಸಃ ಪ್ರಚಾರಃ ತಾದೃಶ ಏವ ನಿರುದ್ಧಸ್ಯಾಪಿ । ಪ್ರತ್ಯಯಾಭಾವಾವಿಶೇಷಾತ್ । ಕಿಂ ತತ್ರ ವಿಜ್ಞೇಯಮ್ ಇತಿ ? ಅತ್ರ ಉಚ್ಯತೇ । ನೈವಮ್ । ಯಸ್ಮಾತ್ ಸುಷುಪ್ತೇ ಅನ್ಯಃ ಪ್ರಚಾರಃ ಅವಿದ್ಯಾಮೋಹತಮೋಗ್ರಸ್ತಸ್ಯ ಅನ್ತರ್ಲೀನಾನೇಕಾನರ್ಥಪ್ರವೃತ್ತಿಬೀಜವಾಸನಾವತಃ ಮನಸಃ ಆತ್ಮಸತ್ಯಾನುಬೋಧಹುತಾಶವಿಪ್ಲುಷ್ಟಾವಿದ್ಯಾನರ್ಥಪ್ರವೃತ್ತಿಬೀಜಸ್ಯ ನಿರುದ್ಧಸ್ಯ ಅನ್ಯ ಏವ ಪ್ರಶಾನ್ತಸರ್ವಕ್ಲೇಶರಜಸಃ ಸ್ವತನ್ತ್ರಃ ಪ್ರಚಾರಃ । ಅತಃ ನ ತತ್ಸಮಃ । ತಸ್ಮಾತ್ ಯುಕ್ತಃ ಸ ವಿಜ್ಞಾತುಮ್ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಹೀಗೆ ನಿಗ್ರಹೀತವಾದ ನಿರುದ್ಧವಾದ[2] ನಿರ್ವಿಕಲ್ಪವಾದ ಯಾವ ಕಲ್ಪನೆಯೂ ಇಲ್ಲದ ಧೀವಂತವಾದ ಎಂದರೆ ವಿವೇಕದಿಂದ ಕೂಡಿರುವ[3] ನಡೆಯೆಂಬ ಪ್ರಚಾರವಿದೆಯಲ್ಲ[4], ಆ ಪ್ರಚಾರವು ವಿಜ್ಞೇಯವು, ಯೋಗಿಗಳಾದವರು[5] ವಿಶೇಷವಾಗಿ ಅರಿತುಕೊಳ್ಳತಕ್ಕದ್ದು.

(ಆಕ್ಷೇಪ) :—ಯಾವ ಪ್ರತ್ಯಯವೂ ಇಲ್ಲದೆ ಹೋಗಲಾಗಿ ತನಿನಿದ್ರೆಯಲ್ಲಿರುವ ಮನಸ್ಸಿನ ಪ್ರಚಾರವು ಎಂಥದ್ದಾ(ಗಿರುವದೋ) ನಿರುದ್ಧ (ಮನಸ್ಸಿ)ನ (ಪ್ರಚಾರ)ವೂ ಅಂಥದ್ದೇ (ಆಗಿರುತ್ತದೆ). ಏಕೆಂದರೆ ಪ್ರತ್ಯಯಗಳು ಇಲ್ಲವೆಂಬುದು (ಎರಡಕ್ಕೂ) ಸಮಾನವಾಗಿರುತ್ತದೆ. (ಹೀಗಿರುವಲ್ಲಿ) ಇಲ್ಲಿ ಅರಿತುಕೊಳ್ಳತಕ್ಕದ್ದು ಏನು ?

---

1. ಈ ಮಾತು ಆ॥ ದಲ್ಲಿ ಬಿಟ್ಟು ಹೋಗಿದೆ. ಆ॥ಕಾ॥ಗಳಲ್ಲಿ " ವಿಶೇಷೇಣ ಜ್ಞೇಯಃ ವಿಜ್ಞೇಯಃ " ಎಂದಿದೆ.

2. ನಿರುದ್ಧವಾದ ಎಂದರೆ ಜ್ಞಾನದಿಂದ ಆತ್ಮನಾಗಿ ಮಾಡಿಕೊಂಡು ಇಲ್ಲವಾಗಿಸಿದ ಎಂದರ್ಥ ; ಇಲ್ಲಿ ಯೋಗದಲ್ಲಿ ಹೇಳಿರುವ ಚಿತ್ತವೃತ್ತಿನಿರೋಧವನ್ನೇನೂ ಹೇಳಿಲ್ಲ.

3. ಆತ್ಮನೇ ಸತ್ಯ, ಮಿಕ್ಕದ್ದೆಲ್ಲವೂ ಅಸತ್ಯ-ಎಂಬ ವಿವೇಕದಿಂದ ಕೂಡಿರುವ.

4. ಪ್ರಚಾರವೆಂದರೆ ವೃತ್ತಿಯು; ವ್ಯವಹಾರದೃಷ್ಟಿಯಿಂದ ಮನಸ್ಸಿನ ವೃತ್ತಿಯು ಜ್ಞಾನವು, ಪರಮಾರ್ಥವಾಗಿ ಅದು ಆತ್ಮನೇ.

5. ವಿಚಾರಕರಾದ ಮುಮುಕ್ಷುಗಳು,

(ಪರಿಹಾರ):—ಇದಕ್ಕೆ (ಉತ್ತರವನ್ನು) ಹೇಳುತ್ತೇವೆ. ಹಾಗಲ್ಲ. ಏಕೆಂದರೆ **ತನಿನಿದ್ರೆಯಲ್ಲಿ ಅವಿದ್ಯೆಯೆಂಬ ಮೋಹದ ಕತ್ತಲೆಯಿಂದ ಮುಚ್ಚಲ್ಪಟ್ಟಿರುವ ತನ್ನೊಳಗೆ ಅನೇಕ ಅನರ್ಥಪ್ರವೃತ್ತಿಗಳಿಗೆ ಬೀಜವಾದ ವಾಸನೆಗಳಿಂದ ಕೂಡಿರುವ ಮನಸ್ಸಿನ ಪ್ರಚಾರವೇ ಬೇರೆ**[1]**, ಆತ್ಮನೇ ಸತ್ಯವೆಂಬ ಅನುಬೋಧವೆಂಬ ಬೆಂಕಿಯಿಂದ ಅವಿದ್ಯೆಯೆಂಬ ಅನರ್ಥಪ್ರವೃತ್ತಿಬೀಜವು ಸುಟ್ಟು ಹೋಗಿರುವ ನಿರುದ್ಧವಾದ, ಕ್ಲೇಶಗಳ ರಜಸ್ಸೆಲ್ಲ ನಾಶವಾಗಿ ಬಿಟ್ಟಿರುವ (ಮನಸ್ಸಿನ) ಸ್ವತಂತ್ರವಾದ ಪ್ರಚಾರವೇ ಬೇರೆ(ಯ ಬಗೆಯದು)**[2]. ಆದ್ದರಿಂದ (ಇದು) ಅದಕ್ಕೆ ಸಮನಲ್ಲ. ಆದ್ದರಿಂದ ಇದನ್ನು ಅರಿತುಕೊಳ್ಳಬೇಕಾದದ್ದು ಯುಕ್ತ ಎಂದು ಅಭಿಪ್ರಾಯ.

(ಭಾಷ್ಯ)

೧೯೧. ಪ್ರಚಾರಭೇದೇ ಹೇತುಮ್ ಆಹ—

(ಭಾಷ್ಯಾರ್ಥ)

(ಈ ಎರಡು) ಪ್ರಚಾರಗಳು ಬೇರೆಯಾಗಿರುವದಕ್ಕೆ ಕಾರಣವನ್ನು ಹೇಳುತ್ತಾರೆ:—

**ಲೀಯತೇ ಹಿ ಸುಷುಪ್ತೇ ತನ್ನಿಗೃಹೀತಂ ನ ಲೀಯತೇ ।**
**ತದೇವ ನಿರ್ಭಯಂ ಬ್ರಹ್ಮ ಜ್ಞಾನಾಲೋಕಂ ಸಮನ್ತತಃ ॥ ೩೫ ॥**

೩೫. ಏಕೆಂದರೆ ಸುಷುಪ್ತಿಯಲ್ಲಿ ಅದು ಲಯವಾಗುತ್ತದೆ; ನಿಗೃಹೀತವಾದರೆ ಲಯವಾಗುವದಿಲ್ಲ. ಅದೇ ನಿರ್ಭಯವಾದ ಎಲ್ಲೆಲ್ಲಿಯೂ ಜ್ಞಾನಾಲೋಕವಾದ ಬ್ರಹ್ಮವು.

---

1. ಸುಷುಪ್ತಿಯಲ್ಲಿ ವಿಷಯಗಳ ಅರಿವು ಇರುವದಿಲ್ಲವಾದರೂ ಎಚ್ಚತ್ತಕೂಡಲೆ ವಿಷಯಸತ್ಯತ್ವಬುದ್ಧಿಯು ಮತ್ತೆ ಕಾಣುತ್ತದೆ. ಆದ್ದರಿಂದ ಮನಸ್ಸಿನ ವೃತ್ತಿಯಲ್ಲಿ ದ್ವೈತಸತ್ಯತ್ವವಾಸನೆಯಿರುವದು ಎಂದು ಹೇಳಿದೆ. ಇಲ್ಲಿ ಹೇಳಿರುವ ಅವಿದ್ಯೆಯ ವಿಷಯಕ್ಕೆ **ಪೀಠಿಕೆಯನ್ನು ನೋಡಿ.**

2. ಜ್ಞಾನವುಂಟಾದರೆ ಅವಿದ್ಯೆಯು ನಾಶವಾಗುವದು. ಅದರಿಂದ ರಾಗಾದಿಕ್ಲೇಶಗಳೂ ಹೋಗಿರುವವು. ಆದ್ದರಿಂದ ಕರ್ಮಪ್ರವೃತ್ತಿಯೂ ಆಗದೇ ಇರುವದು. ಆದ್ದರಿಂದ ಇಲ್ಲಿ ಮನಸ್ಸು ಸ್ವತಂತ್ರವಾದ ವೃತ್ತಿಯನ್ನು ಹೊಂದಿರುತ್ತದೆ. ಸುಷುಪ್ತಿಯ ಮನಸ್ಸಿನಂತೆ ಪರವಶವಲ್ಲ.

(ಭಾಷ್ಯ)

೧೯೨. ಲೀಯತೇ ಸುಷುಪ್ತೇ[1] ಹಿ ಯಸ್ಮಾತ್ ಸರ್ವಾಭಿಃ ಅವಿದ್ಯಾಪ್ರತ್ಯಯ ಬೀಜವಾಸನಾಭಿಃ ಸಹ ತಮೋರೂಪಮ್ ಅವಿಶೇಷರೂಪಂ ಬೀಜಭಾವಮ್ ಆಪದ್ಯತೇ। ತತ್ ವಿವೇಕವಿಜ್ಞಾನಪೂರ್ವಕಂ ನಿರುದ್ಧಂ ನಿಗೃಹೀತಂ ಸತ್ ನ ಲೀಯತೇ ತಮೋಬೀಜಭಾವಂ ನ ಆಪದ್ಯತೇ। ತಸ್ಮಾತ್ ಯುಕ್ತಃ ಪ್ರಚಾರಭೇದಃ ಸುಷುಪ್ತಸ್ಯ ಸಮಾಹಿತಸ್ಯ ಚ[2] ಮನಸಃ । ಯದಾ ಗ್ರಾಹ್ಯಗ್ರಾಹಕಾವಿದ್ಯಾಕೃತಮಲದ್ವಯ ವರ್ಜಿತಮ್, ತದಾ ಪರಮ್ ಅದ್ವಯಂ ಬ್ರಹ್ಮೈವ ತತ್ ಸಂವೃತ್ತಮ್ ಇತ್ಯತಃ ತದೇವ ನಿರ್ಭಯಮ್ । ದ್ವೈತಗ್ರಹಣಸ್ಯ ಭಯನಿಮಿತ್ತಸ್ಯ ಅಭಾವಾತ್ ಶಾನ್ತಮ್ ಅಭಯಂ ಬ್ರಹ್ಮ । ಯದ್ ವಿದ್ವಾನ್ ನ ಬಿಭೇತಿ ಕುತಶ್ಚನ । ತದೇವ ವಿಶೇಷ್ಯತೇ ಜ್ಞಪ್ತಿಃ ಜ್ಞಾನಮ್ ಆತ್ಮಸ್ವಭಾವಚೈತನ್ಯಮ್ । ತದೇವ ಜ್ಞಾನಮ್ ಆಲೋಕಃ ಪ್ರಕಾಶಃ ಯಸ್ಯ ತದ್ ಬ್ರಹ್ಮ ಜ್ಞಾನಾಲೋಕಮ್ । ವಿಜ್ಞಾನೈಕರಸಘನಮ್ ಇತ್ಯರ್ಥಃ। ಸಮನ್ತತಃ ಸಮನ್ತಾತ್ ಸರ್ವತಃ । ವ್ಯೋಮವತ್ ನೈರನ್ತರ್ಯೇಣ ವ್ಯಾಪಕಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಹಿ=ಏಕೆಂದರೆ (ಇದು) **ಸುಷುಪ್ತಿಯಲ್ಲಿ ಅವಿದ್ಯಾಪ್ರತ್ಯಯಗಳಿಗೆ ಬೀಜವಾಗಿರುವ ಎಲ್ಲಾ ವಾಸನೆಗಳೊಡನೆ ಲಯವಾಗುತ್ತದೆ. ತಮೋರೂಪವಾದ ಸಾಮಾನ್ಯರೂಪವಾದ ಬೀಜಭಾವವನ್ನು ಹೊಂದುತ್ತದೆ. ಅದು ವಿವೇಕ ವಿಜ್ಞಾನಪೂರ್ವಕವಾಗಿ ನಿಗೃಹೀತವಾದರೆ ನಿರುದ್ಧವಾದರೆ ಲಯವಾಗುವದಿಲ್ಲ. ತಮೋರೂಪದ ಬೀಜಭಾವವನ್ನು ಹೊಂದುವದಿಲ್ಲ**[3]. ಆದ್ದರಿಂದ ಸುಷುಪ್ತವಾದ ಮತ್ತು ಸಮಾಹಿತವಾದ ಮನಸ್ಸಿನ ಪ್ರಚಾರಗಳಲ್ಲಿ ಭೇದ(ವಿರುವದು) ಯುಕ್ತವಾಗಿರುತ್ತದೆ. ಯಾವಾಗ ಗ್ರಾಹ್ಯ, ಗ್ರಾಹಕ–ಎಂಬ, ಅವಿದ್ಯೆಯಿಂದಾಗಿರುವ ಮಲದ್ವಯವಿಲ್ಲದ್ದಾಗುವದೋ[4] ಆಗ ಹೆಚ್ಚಿನ ಅದ್ವಯವಾದ ಬ್ರಹ್ಮವೇ ಅದಾಗಿ

1. 'ಸುಷುಪ್ತೌ' ಎಂಬ ಅಚ್ಚಿನ ಪಾಠಕ್ಕಿಂತ ಇದೇ ಕಾರಿಕಾನುಸಾರಿ.

2. "ಚ" ಇಲ್ಲಿ ಬೇಕು.

3. ಬೀಜಭಾವವು ತಮೋರೂಪವು–ಎಂದರೆ ಅವಿದ್ಯಾಕಲ್ಪಿತವು ಎಂದರ್ಥ. ಹಗ್ಗದಲ್ಲಿ ಕಲ್ಪಿತವಾಗಿರುವ ಹಾವು ಕಣ್ಮರೆಯಾದರೆ ಹೇಗೆ ಬೀಜಭಾವವು ಇರುವದೋ ಹಾಗೆಯೇ ಇಲ್ಲಿಯೂ ಅರಿಯಬೇಕು.

4. ವ್ಯವಹಾರದಲ್ಲಿ ಕಾಣುವ ಅರಿಯುವದು, ಅರಿಯಲ್ಪಡತಕ್ಕದ್ದು–ಎಂಬ ವಿಭಾಗವು ಅವಿದ್ಯಾಕಲ್ಪಿತವಾಗಿರುತ್ತದೆ.

ಬಿಟ್ಟಿರುವದರಿಂದ ಅದೇ ನಿರ್ಭಯವು. ಭಯಕ್ಕೆ ಕಾರಣವಾದ ದ್ವೈತದ ಅರಿವೆಂಬ ನಿಮಿತ್ತವು ಇಲ್ಲದ್ದರಿಂದ ಶಾಂತವಾಗಿ ಅಭಯವಾಗಿರುವ ಬ್ರಹ್ಮ(ವಾಗಿರುತ್ತದೆ). ಆ ಬ್ರಹ್ಮವನ್ನು ಅರಿತುಕೊಂಡವನು ಏತಕ್ಕೂ ಹೆದರುವದಿಲ್ಲ[1]. ಆ (ಬ್ರಹ್ಮರೂಪವಾದ ಮನಸ್ಸಿಗೇ) ವಿಶೇಷಣವನ್ನು ಹೇಳುತ್ತಾರೆ: ಜ್ಞಾನವೆಂದರೆ ಅರಿವು, ಆತ್ಮಸ್ವರೂಪವೇ ಆದ ಚೈತನ್ಯವು. ಆ ಜ್ಞಾನವೆಂಬ ಆಲೋಕವು, ಬೆಳಕು, ಯಾವ ಬ್ರಹ್ಮಕ್ಕಿರುವದೋ ಅದು ಜ್ಞಾನಾಲೋಕವು. ಅರಿವೆಂಬ ಒಂದೇ ರಸದ ಗಟ್ಟಿಯು ಎಂದರ್ಥ. (ಸಮನ್ತತಃ=ಸಮನ್ತಾತ್) ಎಲ್ಲಾ ಕಡೆಯಲ್ಲಿಯೂ ಆಕಾಶದಂತೆ ಎಡೆಬಿಡದೆ ವ್ಯಾಪಿಸಿಕೊಂಡಿರುತ್ತದೆ ಎಂದರ್ಥ.

**ಅಜಮನಿದ್ರಮಸ್ವಪ್ನಮನಾಮಕಮರೂಪಕಮ್ ।**
**ಸಕೃದ್ವಿಭಾತಂ ಸರ್ವಜ್ಞಂ ನೋಪಚಾರಃ ಕಥಂಚನ ॥ ೩೬ ॥**

೩೬. ಅಜವು, ಅನಿದ್ರವು, ಅಸ್ವಪ್ನವು, ಅನಾಮಕವು, ಅರೂಪಕವು, ಒಂದೇ ಸಮನೆ ಪ್ರಕಾಶಿಸುವಂಥದ್ದು, ಸರ್ವಜ್ಞವು. ಹೇಗೂ ಉಪಚಾರವಿರುವದಿಲ್ಲ.

(ಭಾಷ್ಯ)

೧೯೩. ಜನ್ಮನಿಮಿತ್ತಾಭಾವಾತ್ ಸಬಾಹ್ಯಾಭ್ಯನ್ತರಮ್ ಅಜಮ್ । ಅವಿದ್ಯಾನಿಮಿತ್ತಂ ಹಿ ಜನ್ಮ ರಜ್ಜುಸರ್ಪವತ್ ಇತಿ ಅವೋಚಾಮ । ಸಾ ಚ ಅವಿದ್ಯಾ ಆತ್ಮಸತ್ಯಾನುಬೋಧೇನ ನಿರುದ್ಧಾ ಯತಃ ಅತಃ[2] ಅಜಮ್ । ಅತ ಏವ ಅನಿದ್ರಮ್ । ಅವಿದ್ಯಾಲಕ್ಷಣಾನಾದಿಮಾಯಾನಿದ್ರಾಸ್ವಾಪಾತ್[3] ಪ್ರಬುದ್ಧಮ್[4] ಅದ್ವಯಸ್ವರೂಪೇಣ । ಅತಃ 'ಅಸ್ವಪ್ನಮ್' । ಅಪ್ರಬೋಧಕೃತೇ ಹಿ ಅಸ್ಯ ನಾಮರೂಪೇ । ಪ್ರಬೋಧಾಚ್ಚ ತೇ ರಜ್ಜುಸರ್ಪವದ್ ವಿನಷ್ಟೇ ಇತಿ ನ ನಾಮ್ನಾ ಅಭಿಧೀಯತೇ ಬ್ರಹ್ಮ ರೂಪ್ಯತೇ ವಾ ನ ಕೇನಚಿತ್ ಪ್ರಕಾರೇಣ ಇತಿ ಅನಾಮಕಮ್ ಅರೂಪಕಂ ಚ ತತ್ । "ಯತೋ ವಾಚೋ ನಿವರ್ತನ್ತೇ" (ತೈ. ೨-೪) ಇತ್ಯಾದಿಶ್ರುತೇಃ । ಕಿಂ ಚ ಸಕೃದ್ವಿಭಾತಂ । ಸದೈವ ವಿಭಾತಂ ಸದಾ ಭಾರೂಪಮ್ । ಅಗ್ರಹಣಾನ್ಯಥಾ

1. ತೈತ್ತಿರೀಯ ೨-೯ ಶ್ರುತಿಯ ಸೂಚನೆ. ಅಲ್ಲಿ ಹೇಳಿರುವ ಬ್ರಹ್ಮಸ್ವರೂಪವೇ ಜ್ಞಾನದಿಂದ ನಿಗೃಹೀತವಾದ ಮನಸ್ಸಿನ ಸ್ವರೂಪವು ಎಂದು ಭಾವ.

2. ಈ ಮಾತು ಇಲ್ಲಿ ಬೇಕು.

3. 'ಅನಾದಿಮಾಯಾ....' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

4. 'ಪ್ರಬುದ್ಧಃ' ಆ॥

ಗ್ರಹಣಾವಿರ್ಭಾವತಿರೋಭಾವವರ್ಜಿತತ್ವಾತ್। ಗ್ರಹಣಾಗ್ರಹಣೇ ಹಿ ರಾತ್ರ್ಯಹನೀ। ತಮಶ್ಚಾವಿದ್ಯಾಲಕ್ಷಣಂ ಸದಾ ಅಪ್ರಭಾತತ್ವೇ ಕಾರಣಮ್। ತದಭಾವಾತ್ ನಿತ್ಯ ಚೈತನ್ಯಭಾರೂಪತ್ವಾಚ್ಚ ಯುಕ್ತಂ 'ಸಕೃದ್ವಿಭಾತಮ್' ಇತಿ। ಅತ ಏವ ಸರ್ವಂ ಚ ತತ್ ಜ್ಞಸ್ವರೂಪಂ[1] ಚ ಇತಿ ಸರ್ವಜ್ಞಮ್। ನ ಇಹ ಬ್ರಹ್ಮಣಿ ಏವಂವಿಧೇ ಉಪ ಚರಣಮ್ ಉಪಚಾರಃ ಕರ್ತವ್ಯಃ। ಯಥಾ ಅನ್ಯೇಷಾಮ್ ಆತ್ಮಸ್ವರೂಪವ್ಯತಿರೇಕೇಣ ಸಮಾಧಾನಾದ್ಯುಪಚಾರಃ। ನಿತ್ಯಶುದ್ಧಬುದ್ಧಮುಕ್ತಸ್ವಭಾವತ್ವಾತ್ ಬ್ರಹ್ಮಣಃ ಕಥಂಚನ। ನ ಕಥಂಚಿದಪಿ ಕರ್ತವ್ಯಸಮ್ಭವಃ ಅವಿದ್ಯಾನಾಶೇ ಇತ್ಯರ್ಥಃ ॥

(ಭಾಷ್ಯಾರ್ಥ)

(ಈ ಬ್ರಹ್ಮವು[2]) ಜನ್ಮಕ್ಕೆ ನಿಮಿತ್ತವೇ ಇಲ್ಲದ್ದರಿಂದ ಹೊರಗೂ ಒಳಗೂ **ಅಜವು.** ಹಗ್ಗದ ಹಾವು (ಹುಟ್ಟು)ವಂತೆ (ಇದು) ಹುಟ್ಟುವದಕ್ಕೆ ಅವಿದ್ಯೆಯೇ ನಿಮಿತ್ತವೆಂದು (ಹಿಂದೆ[3]) ಹೇಳಿರುತ್ತೇವೆ. ಆ ಅವಿದ್ಯೆಯೇ ಆತ್ಮನೇ ಸತ್ಯನೆಂಬ ಅನುಬೋಧದಿಂದ ನಾಶವಾಗಿರುತ್ತದೆಯಷ್ಟೆ, ಆ ಕಾರಣದಿಂದ (ಇದು) **ಅಜವು.** ಆದ್ದರಿಂದಲೇ ಅನಿದ್ರವು[4]. ಅವಿದ್ಯಾಲಕ್ಷಣವಾದ ಅನಾದಿಯಾದ ಮಾಯಾನಿದ್ರೆಯ ಕನಸಿನಿಂದ ಅದ್ವಯಸ್ವರೂಪವನ್ನು (ಹೊಂದಿದ) ಆತ್ಮನಾಗಿ ಎಚ್ಚತ್ತಿದೆಯಾಗಿ[5] ಅಸ್ವಪ್ನವು. ಎಚ್ಚರದೆ ಇರುವದರಿಂದಲೇ ಅಲ್ಲವೆ, ಅದಕ್ಕೆ ನಾಮರೂಪಗಳು (ತೋರಿಕೊಳ್ಳುವದು)? (ಈಗ) ಎಚ್ಚತ್ತಿರುವದರಿಂದ ಅವುಗಳು ಹಗ್ಗದ ಹಾವಿನಂತೆ ಹೋಗಿಬಿಟ್ಟಿರುತ್ತವೆಯಾಗಿ (ಈ) ಬ್ರಹ್ಮವು (ಯಾವ) ಹೆಸರಿನಿಂದಲೂ ಹೇಳುವದಕ್ಕೆ ಆಗುವಂತಿಲ್ಲ. ಯಾವ ಪ್ರಕಾರವಾಗಿಯೂ ನಿರೂಪಿಸುವದಕ್ಕೂ ಬರುವದಿಲ್ಲ; ಆದ್ದರಿಂದ ಅದು ಅನಾಮಕವು, ಅರೂಪಕವು. "ಯಾವದರಿಂದ ವಾಕ್ಕುಗಳು ಹಿಂತಿರುಗುವವೋ" (ತೈ. ೨-೪) ಮುಂತಾದ ಶ್ರುತಿಯು ಇದಕ್ಕೆ ಪ್ರಮಾಣವು. ಮತ್ತು (ಇದು) ಒಂದೇಸಮನೆ ಪ್ರಕಾಶಿಸುವಂಥದ್ದು, ಯಾವಾಗಲೂ ಹೊಳೆಯುವಂಥದ್ದು,

---

1. 'ಜ್ಞಪ್ತಿಸ್ವರೂಪಂ ಚ' ಎಂಬ ಪಾ॥ ಕಾ॥ ಪಾಠವು ಬೇಕಿಲ್ಲ.

2. ಜ್ಞಾನದಿಂದ ನಿಗೃಹೀತವಾದ ಮನಸ್ಸು ಬ್ರಹ್ಮವೇ ಆಗಿರುತ್ತದೆ; ಆ ಬ್ರಹ್ಮದ ಲಕ್ಷಣವನ್ನೇ ಇಲ್ಲಿ ಹೇಳಿರುತ್ತದೆ.

3. ಈ ಪ್ರಕರಣದ ೨೭ನೆಯ ಕಾರಿಕೆಯಲ್ಲಿ.

4. ಅವಿದ್ಯೆಯೇ ನಿದ್ರೆ; ಅದು ಹೋಗಿರುವದರಿಂದ ಅನಿದ್ರವು

5. ೧-೧೬ನೆಯ ಕಾರಿಕೆಯ ಭಾಷ್ಯದಲ್ಲಿ ಈ ಅನಾದಿ ಸ್ವಪ್ನವನ್ನು ಅದರಿಂದ ಎಚ್ಚತ್ತಿರುವವನ ಆತ್ಮನ ವರ್ಣನೆಯನ್ನೂ ಇದಕ್ಕೆ ಹೋಲಿಸಿರಿ. ಅಲ್ಲಿ ತುರೀಯವಾತ್ಮನ ವರ್ಣನೆಯೂ ಇಲ್ಲಿರುವ ನಿಗೃಹೀತ ಮನಸ್ಸಿನ ವರ್ಣನೆಯೂ ಒಂದೇ ತತ್ತ್ವವನ್ನು ಹೇಳುವವು.

ಯಾವಾಗಲೂ ಬೆಳಕಿನ ರೂಪದ್ದೇ (ಆಗಿರುವದು) ; ಏಕೆಂದರೆ ತಿಳಿಯದಿರುವದು, ತಪ್ಪಾಗಿ ತಿಳಿಯುವದು, ತೋರುವದು, ಮರೆಯಾಗುವದು–ಇವುಗಳಿರುವದಿಲ್ಲ[1]. ತಿಳಿಯುವದು, ತಿಳಿಯದಿರುವದು–ಎಂಬ ಹಗಲುರಾತ್ರಿಗಳೂ ಅವಿದ್ಯಾರೂಪವಾದ ಕತ್ತಲೆಯೂ (ಇದು) ಯಾವಾಗಲೂ ತೋರದಿರುವದಕ್ಕೆ ಕಾರಣವು[2]. ಆ (ಕಾರಣ) ವಿಲ್ಲದ್ದರಿಂದಲೂ ಯಾವಾಗಲೂ ಚೈತನ್ಯವೆಂಬ ಬೆಳಕಿನ ರೂಪದಲ್ಲಿಯೇ ಇರುವದ ರಿಂದಲೂ (ಎಂದೆಂದಿಗೂ) 'ಒಂದೇಸಮನೆ ಪ್ರಕಾಶಿಸುವಂಥದ್ದು' ಎಂದು (ಹೇಳಿದ್ದು) ಸರಿ. ಆದ್ದರಿಂದಲೇ ಅದು ಸರ್ವವೂ ಆಗಿದ್ದು ಜ್ಞಸ್ವರೂಪವೂ[3] ಆಗಿರುವದರಿಂದ ಸರ್ವಜ್ಞವು. ಈ ವಿಧವಾಗಿರುವ ಈ ಬ್ರಹ್ಮದಲ್ಲಿ ಹೇಗೂ ಉಪಚಾರವಿಲ್ಲ, ಉಪಚರ ಣವು (ಇನ್ನೂ) ಮಾಡಬೇಕಾದದ್ದು ಇರುವದಿಲ್ಲ. ಹೇಗೆ ಮಿಕ್ಕವರಿಗೆ ಆತ್ಮಸ್ವರೂಪ ಕ್ಕಿಂತ ಬೇರೆಯಾಗಿ ಸಮಾಧಿಯೇ ಮುಂತಾದ ಉಪಚಾರವು (ಉಳಿ)ದಿರುವದೋ[4] (ಹಾಗೆ ಉಳಿದಿರುವದಿಲ್ಲ). **ಬ್ರಹ್ಮವು ನಿತ್ಯಶುದ್ಧಬದ್ಧಮುಕ್ತಸ್ವಭಾವವುಳ್ಳದ್ದಾದ್ದರಿಂದ, ಅವಿದ್ಯೆಯು ನಾಶವಾದಮೇಲೆ (ಇನ್ನು) ಮಾಡಬೇಕಾದದ್ದೆಂಬುದು ಹೇಗೂ ಹೊಂದುವದಿಲ್ಲ[5] ಎಂದರ್ಥ.**

(ಭಾಷ್ಯ)

೧೯೪. ಅನಾಮಕತ್ವಾದ್ಯುಕ್ತಾರ್ಥಸಿದ್ಧಯೇ ಹೇತುಮ್ ಆಹ—

(ಭಾಷ್ಯಾರ್ಥ)

(ಅನಾಮಕವು) ಎಂದು ಮುಂತಾಗಿ (ಹಿಂದೆ) ಹೇಳಿರುವ ವಿಷಯವು ಸಿದ್ಧಿ ಯಾಗುವದಕ್ಕಾಗಿ (ಇಲ್ಲಿ) ಕಾರಣವನ್ನು ಹೇಳುತ್ತಾರೆ :—

---

1. ತಿಳಿಯದಿರುವದು, ತಿಳಿಯುವದು–ಎಂಬ ಜ್ಞಾನಾಜ್ಞಾನಗಳಿಗೆ ಆಶ್ರಯವಲ್ಲ. ಹಗಲು ವಿಷಯಗಳನ್ನು ಕಾಣುವದು, ರಾತ್ರಿಯಲ್ಲಿ ಕಾಣದಿರುವದು–ಎಂಬ ಹೆಚ್ಚುಕಡಿಮೆ ಗಳು ಜನರಿಗೆ ಇರುವಂತೆ ಇದಕ್ಕೆ ಇಲ್ಲ. ಜ್ಞಾನವುಂಟಾದಾಗ ತೋರುವದು ಉಂಟಾಗದೆ ಇರುವಾಗ ತೋರದೆ ಇರುವದು ಎಂದು ಜ್ಞಾನಾಜ್ಞಾನಗಳಿಗೆ ವಿಷಯವೂ ಅಲ್ಲ. ಎಂದು **ಅರ್ಥ.**

2. ಮೊದಲನೆಯ ಎರಡನ್ನು ಆಶ್ರಯಪರವಾಗಿಯೂ, ಎರಡನೆಯ ಕತ್ತಲೆಯನ್ನು ವಿಷಯದ ಪರವಾಗಿಯೂ ಅರ್ಥಮಾಡಿಕೊಳ್ಳಬೇಕು.

3. ಎಲ್ಲವನ್ನೂ ಅರಿಯುವದೆಂದರ್ಥವಲ್ಲ; ಏಕೆಂದರೆ ಅದು ಅದ್ವಿತೀಯವಾಗಿರು ತ್ತದೆ. ಚೈತನ್ಯಸ್ವರೂಪವೇ ಎಂದರ್ಥ.

4. ಅಜ್ಞರಿಗೆ ಸಮಾಧಿಯೇ ಮುಂತಾದದ್ದು ಮಾಡತಕ್ಕದ್ದಿರುತ್ತದೆ. ಇದರ ವಿವರ ವನ್ನು ಮುಂದೆ ೪೦ನೆಯ ಕಾರಿಕೆಯಿಂದ ಕೊಡಲಾಗುತ್ತದೆ.

5. ಜ್ಞಾನಾಭ್ಯಾಸವೇ ಮುಂತಾದ ಸಾಧನಗಳು ಜ್ಞಾನವಾದ ಬಳಿಕವೂ ಇರುವ ವೆಂಬ ವೇದಾಂತಿಗಳ ಖಂಡನೆಯು ಇಲ್ಲಿ ಸೂಚಿತವಾಗಿರುತ್ತದೆ. ಪೀಠಿಕೆಯನ್ನು ನೋಡಿ.

**ಸರ್ವಾಭಿಲಾಪವಿಗತಃ ಸರ್ವಚಿನ್ತಾಸಮುತ್ಥಿತಃ ।**
**ಸುಪ್ರಶಾನ್ತಃ ಸಕೃಜ್ಜ್ಯೋತಿಃ ಸಮಾಧಿರಚಲೋಽಭಯಃ ॥ ೩೭ ॥**

೩೭. ಸರ್ವಾಭಿಲಾಪವಿಗತನು, ಸರ್ವಚಿಂತಾಸಮುತ್ಥಿತನು, ಸುಪ್ರಶಾಂತನು, ಸಕೃಜ್ಜ್ಯೋತಿಯು, ಸಮಾಧಿಯು, ಅಚಲನು, ಅಭಯನು.

(ಭಾಷ್ಯ)

೧೯೫. ಅಭಿಲಪ್ಯತೇ ಅನೇನ ಇತಿ ಅಭಿಲಾಪಃ ವಾಕ್ ಕರಣಂ ಸರ್ವಪ್ರಕಾರಸ್ಯ ಅಭಿಧಾನಸ್ಯ । ತಸ್ಮಾತ್ ವಿಗತಃ । ವಾಕ್ ಅತ್ರ ಉಪಲಕ್ಷಣಾರ್ಥಾ । ಸರ್ವಬಾಹ್ಯಕರಣವರ್ಜಿತಃ ಇತ್ಯೇತತ್ । ತಥಾ ಸರ್ವಚಿನ್ತಾಸಮುತ್ಥಿತಃ । ಚಿನ್ತ್ಯತೇ ಅನಯಾ ಇತಿ ಚಿನ್ತಾ ಬುದ್ಧಿಃ । ತಸ್ಯಾಃ ಸಮುತ್ಥಿತಃ । ಅನ್ತಃಕರಣವರ್ಜಿತಃ ಇತ್ಯರ್ಥಃ । "ಅಪ್ರಾಣೋ ಹ್ಯಮನಾಃ ಶುಭ್ರೋ ಹ್ಯಕ್ಷರಾತ್ ಪರತಃ ಪರಃ" (ಮುಂ. ೨-೧-೨) ಇತ್ಯಾದಿಶ್ರುತೇಃ[1] । ಯಸ್ಮಾತ್ ಸರ್ವವಿಶೇಷವರ್ಜಿತಃ[2] ಅತಃ ಸುಪ್ರಶಾನ್ತಃ । ಸಕೃಜ್ಜ್ಯೋತಿಃ ಸದೈವ ಜ್ಯೋತಿಃ ಆತ್ಮಚೈತನ್ಯಸ್ವರೂಪೇಣ । ಸಮಾಧಿಃ । ಸಮಾಧಿನಿಮಿತ್ತಪ್ರಜ್ಞಾವಗಮ್ಯತ್ವಾತ್ । ಸಮಾಧೀಯತೇ ಅಸ್ಮಿನ್ ಇತಿ ವಾ ಸಮಾಧಿಃ । ಅಚಲಃ ಅವಿಕ್ರಿಯಃ । ಅತ ಏವ ಅಭಯಃ । ವಿಕ್ರಿಯಾಭಾವಾತ್ ॥

(ಭಾಷ್ಯಾರ್ಥ)

ಯಾವದರಿಂದ ಹೇಳುತ್ತಾರೋ ಅದು ಅಭಿಲಾಪವು, ಎಲ್ಲಾ ಬಗೆಯ ಮಾತಿಗೂ ಕರಣವಾದ ವಾಕ್ಕು; ಅದು ಇಲ್ಲದವನು (ಸರ್ವಾಭಿಲಾಪವಿಗತನು). ಇಲ್ಲಿ ವಾಕ್ಕು (ಇಲ್ಲವೆಂದು ಹೇಳಿರುವದು) ಉಪಲಕ್ಷಣಕ್ಕಾಗಿ; ಹೊರಗಿನ ಯಾವ ಕರಣಗಳೂ ಇಲ್ಲದವನು ಎಂದು ಅಭಿಪ್ರಾಯ ಹಾಗೂ ಸರ್ವಚಿಂತಾಸಮುತ್ಥಿತನು, ಇದರಿಂದ ಚಿಂತಿಸುತ್ತಾರಾದ್ದರಿಂದ (ಈ) ಬುದ್ಧಿಯು ಚಿಂತೆ (ಎನಿಸುವದು); ಅದನ್ನು (ಬಿಟ್ಟು) ಎದ್ದವನು. (ಸರ್ವಚಿಂತಾಸಮುತ್ಥಿತನು); ಅಂತಃಕರಣವಿಲ್ಲದವನು ಎಂದರ್ಥ. "ಅಪ್ರಾಣನು, ಅಮನಸ್ಕನು, ಶುಭ್ರನು, ಹೆಚ್ಚಿನ ಅಕ್ಷರಕ್ಕಿಂತಲೂ ಹೆಚ್ಚಿನವನು" (ಮುಂ. ೨-೧-೨) ಮುಂತಾದ ಶ್ರುತಿಯು[3] ಇದಕ್ಕೆ ಪ್ರಮಾಣವು. (ಹೀಗೆ)

---

1. "ಅಪ್ರಾಣೋಽಹ್ಯಮನಾಃ ಶುಭ್ರಃ" ಇತಿ ಶ್ರುತೇಃ । ಅಕ್ಷರಾತ್ ಪರತಃ ಪರಃ ಎಂಬ ಆ॥ ಪಾಠವು ಸರಿಯಲ್ಲ.

2. 'ಸರ್ವವಿಷಯವರ್ಜಿತಃ' ಎಂಬ ವಾ॥ ವ್ಯೆ॥ ಪಾಠವು ಸರಿಯಲ್ಲ.

3. ಇಲ್ಲಿ ಪ್ರಾಣವಿಲ್ಲ ಎಂದರೆ ಬಹಿಃಕರಣಗಳಿಲ್ಲ. ಮನಸ್ಸಿಲ್ಲ ಎಂದರೆ ಅಂತಃಕರಣವಿಲ್ಲ-ಎಂದು ಅಭಿಪ್ರಾಯ.

ಯಾವ ವಿಶೇಷವೂ ಇಲ್ಲದವನಾದ್ದರಿಂದ ಅತ್ಯಂತ ಪ್ರಶಾಂತನಾಗಿರುವನು. ಸಕೃಜ್ಜ್ಯೋತಿಯು, ಯಾವಾಗಲೂ ಆತ್ಮಚೈತನ್ಯಸ್ವರೂಪದಿಂದ ಬೆಳಗುತ್ತಿರುವವನು. **ಸಮಾಧಿಯು:** ಏಕೆಂದರೆ **ಸಮಾಧಿಯ ನಿಮಿತ್ತದಿಂದ (ಉಂಟಾಗುವ) ಅರಿವಿನಿಂದ ತಿಳಿಯಬರುತ್ತಾನೆ. ಅಥವಾ (ಚಿತ್ತವು) ಇವನಲ್ಲಿ ಸಮಾಧಾನವನ್ನು ಹೊಂದುತ್ತದೆಯಾದ್ದರಿಂದ (ಇವನು) ಸಮಾಧಿಯು**[1]. ಅಚಲನು, ಯಾವ ವಿಕಾರವೂ ಇಲ್ಲದವನು; ಆದ್ದರಿಂದಲೇ ಅಭಯನು, ಏಕೆಂದರೆ ಇವನಲ್ಲಿ (ಯಾವ) ವಿಕಾರವೂ ಇರುವದಿಲ್ಲ.

(ಭಾಷ್ಯ)

೧೯೬. ಯಸ್ಮಾತ್ ಹ್ರಹ್ಮೈವ 'ಸಮಾಧಿರಚಲೋಽಭಯಃ' ಇತ್ಯುಕ್ತಮ್ ಅತಃ—

(ಭಾಷ್ಯಾರ್ಥ)

(ಹೀಗೆ) ಬ್ರಹ್ಮವೇ ಸಮಾಧಿಯು, ಅಚಲವಾದದ್ದು, ಭಯವಿಲ್ಲದ್ದು–ಎಂದು ಹೇಳಿದೆಯಷ್ಟೆ; ಆದ್ದರಿಂದ:—

**ಗ್ರಹೋ ನ ತತ್ರ ನೋತ್ಸರ್ಗಶ್ಚಿನ್ತಾ ಯತ್ರ ನ ವಿದ್ಯತೇ ।**
**ಆತ್ಮಸಂಸ್ಥಂ ತದಾ ಜ್ಞಾನಮಜಾತಿ ಸಮತಾಂ ಗತಮ್ ॥ ೩೮ ॥**

೩೮. ಎಲ್ಲಿ ಚಿಂತೆಯಿಲ್ಲವೋ ಅಲ್ಲಿ ಗ್ರಹವಿಲ್ಲ, ಉತ್ಸರ್ಗವಿಲ್ಲ. ಆಗ ಜ್ಞಾನವು ಆತ್ಮಸಂಸ್ಥವಾ(ಗಿರುವದು), ಅಜಾತಿಯಾಗಿ ಸಮತೆಯನ್ನು ಹೊಂದಿರುವದು.

(ಭಾಷ್ಯ)

೧೯೭. ನ ತತ್ರ ತಸ್ಮಿನ್ ಬ್ರಹ್ಮಣಿ ಗ್ರಹಃ ಗ್ರಹಣಮ್ ಉಪಾದಾನಮ್ ನ ಉತ್ಸರ್ಗಃ ಉತ್ಸರ್ಜನಂ ಹಾನಂ ವಾ ವಿದ್ಯತೇ । ಯತ್ರ ಹಿ ವಿಕ್ರಿಯಾ ತದ್ವಿಷಯತ್ವಂ ವಾ ತತ್ರ ಹಾನೋಪಾದಾನೇ ಸ್ಯಾತಾಮ್ । ನ ತದ್ದ್ವಯಮ್ ಇಹ ಬ್ರಹ್ಮಣಿ ಸಂಭವತಿ । ವಿಕಾರಹೇತೋಃ ಅನ್ಯಸ್ಯ ಅಭಾವಾತ್, ನಿರವಯವತ್ವಾಚ್ಚ ।

---

1. ಮನಸ್ಸು ಸಮಾಧಾನವನ್ನು ಹೊಂದಿದರೆ ಆತ್ಮಜ್ಞಾನವಾಗುತ್ತದೆ ಎಂದು ಮೊದಲನೆಯ ಅರ್ಥ; ಆತ್ಮನಲ್ಲಿ ನಿಂತಹೊರತು ಮನಸ್ಸು ಸಮಾಧಾನವನ್ನು ಹೊಂದುವದಿಲ್ಲ ಎಂಬುದು ಎರಡನೆಯ ಅರ್ಥ. ಗೀ-ಭಾ. ೨-೫೩ ಭಾ. ಭಾ. ೯೯ ನೋಡಿ.

ಅತಃ ನ ತತ್ರ ಹಾನೋಪಾದಾನೇ ಸಂಭವತಃ[1] । ಚಿನ್ತಾ ಯತ್ರ ನ ವಿದ್ಯತೇ । ಸರ್ವಪ್ರಕಾರೈವ ಚಿನ್ತಾ ನ ಸಂಭವತಿ ಯತ್ರ । ಅಮನಸ್ತ್ವಾತ್ ಕುತಸ್ತತ್ರ ಹಾನೋಪಾದಾನೇ ಇತ್ಯರ್ಥಃ। ಯದೈವ ಆತ್ಮಸತ್ಯಾನುಬೋಧೋ ಜಾತಃ ತದೈವ ಆತ್ಮಸಂಸ್ಥಂ ವಿಷಯಾಭಾವಾತ್ ಅಗ್ನ್ಯುಷ್ಣವತ್ ಆತ್ಮನ್ಯೇವ ಸ್ಥಿತಂ ಜ್ಞಾನಮ್ । ಅಜಾತಿ ಜಾತಿವರ್ಜಿತಮ್ । ಸಮತಾಂ ಗತಮ್, ಪರಂ ಸಾಮ್ಯಮ್ ಆಪನ್ನಂ ಭವತಿ । ಯತ್ ಆದೌ ಪ್ರತಿಜ್ಞಾತಮ್, "ಅತೋ ವಕ್ಷ್ಯಾಮ್ಯಕಾರ್ಪಣ್ಯಮಜಾತಿ ಸಮತಾಂ ಗತಮ್" (೩–೨) ಇತಿ, ಇದಂ ತತ್ ಉಪಪತ್ತಿತಃ ಶಾಸ್ತ್ರತಶ್ಚ ಉಕ್ತಮ್ ಉಪಸಂಹ್ರಿಯತೇ–"ಅಜಾತಿ ಸಮತಾಂ ಗತಮ್" ಇತಿ । ಏತಸ್ಮಾತ್ ಆತ್ಮಸತ್ಯಾನುಬೋಧಾತ್ ಕಾರ್ಪಣ್ಯವಿಷಯಮ್ ಅನ್ಯತ್ । "ಯೋ ವಾ ಏತದಕ್ಷರಂ ಗಾರ್ಗ್ಯವಿದಿತ್ವಾಸ್ಮಾಲ್ಲೋಕಾತ್ ಪ್ರೈತಿ ಸ ಕೃಪಣಃ" (ಬೃ. ೩–೮–೧೦) ಇತಿ ಶ್ರುತೇಃ । ಪ್ರಾಪ್ಯೈತತ್ ಸರ್ವಃ ಕೃತಕೃತ್ಯಃ ಬ್ರಾಹ್ಮಣೋ ಭವತಿ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಅಲ್ಲಿ ಆ ಬ್ರಹ್ಮದಲ್ಲಿ, ಗ್ರಹವು ಎಂದರೆ ಗ್ರಹಿಸುವದು, ತೆಗೆದುಕೊಳ್ಳುವದು ಇರುವದಿಲ್ಲ; ಉತ್ಸರ್ಗವು, ಉತ್ಸರ್ಜನವು, ಬಿಡುವದೂ ಇರುವದಿಲ್ಲ. ಎಲ್ಲಿ ವಿಕಾರವಾಗಲಿ, ಆ (ವಿಕಾರಕ್ಕೆ) ವಿಷಯವಾಗಿರುವವಾಗಲಿ (ಇರುವದೋ) ಅದರ (ವಿಷಯ)ದಲ್ಲಿ ತೆಗೆದುಕೊಳ್ಳುವದೂ ಬಿಡುವದೂ ಇರಬಹುದು. ಆ ಎರಡೂ ಈ ಬ್ರಹ್ಮದಲ್ಲಿ ಇರುವಹಾಗಿಲ್ಲ; ಏಕೆಂದರೆ (ಇದರ) ವಿಕಾರಕ್ಕೆ ಕಾರಣವಾದದ್ದು ಮತ್ತೊಂದು ಇರುವದಿಲ್ಲ, (ಇದು) ಅವಯವಗಳಿಲ್ಲದ್ದೂ ಆಗಿದೆ[2]. ಆದ್ದರಿಂದ ಅದರಲ್ಲಿ ಹಾನೋಪಾದಾನಗಳು ಆಗುವಂತಿಲ್ಲ. ಎಲ್ಲಿ ಚಿಂತೆಯಿಲ್ಲವೋ ಯಾವ (ಬ್ರಹ್ಮದಲ್ಲಿ) ಮನಸ್ಸಿಲ್ಲದಿರುವದರಿಂದ[3] ಯಾವ ಬಗೆಯ ಚಿಂತೆಯೂ ಇರುವಂತಿಲ್ಲವೋ[4] (ಎಂದರ್ಥ). (ಇಂಥಕಡೆ)ಯಲ್ಲಿ ಹಾನೋಪಾದಾನಗಳು ಎಲ್ಲಿದ್ದಾವು[5] ? ಎಂದರ್ಥ.

---

1. "ಹಾನೋಪಾದಾನೇ ಇತ್ಯರ್ಥಃ" ಆ॥

2. ಅದ್ವಿತೀಯವಾದ್ದರಿಂದ ಅದನ್ನು ಮಾರ್ಪಡಿಸುವ ಹೇತುವಿಲ್ಲ; ಅವಯವಗಳಿಲ್ಲದ್ದರಿಂದ ಅದು ಮಾರ್ಪಡುವ ಸ್ವಭಾವದ್ದಲ್ಲ.

3. ಮುಂ. ೨–೧–೨. ಆತ್ಮನಲ್ಲಿ ಮನಸ್ಸಿಲ್ಲ, ಮನಸ್ಸುಳ್ಳವಸ್ತುವೊಂದು ಆತ್ಮನಿಗಿಂತ ಬೇರೆಯಾಗಿಲ್ಲ; ಆದ್ದರಿಂದ ಮನಸ್ಸಿನ ಪ್ರತ್ಯಯಕ್ಕೆ ವಿಷಯವಾಗಿರುವದೆಂಬುದು ಬ್ರಹ್ಮದಲ್ಲಿಲ್ಲ.

4. ಯಾವ ಪ್ರತ್ಯಯಕ್ಕೂ ವಿಷಯವಲ್ಲದ್ದೋ ಎಂದರ್ಥ.

5. ಮನಸ್ಸಿಗೇ ವಿಷಯವಾಗದ್ದು ಇಂದ್ರಿಯಗಳಿಂದ ತೆಗೆದುಕೊಳ್ಳುವದಕ್ಕೂ ಬಿಡುವದಕ್ಕೂ ಹೇಗೆ ವಿಷಯವಾದೀತು ?–ಎಂದರ್ಥ.

ಯಾವಾಗ ಆತ್ಮವೊಂದೇ ಸತ್ಯವೆಂಬ ಅನುಬೋಧವುಂಟಾಯಿತೋ ಆಗಲೇ ಜ್ಞಾನವು (ತನಗೆ) ವಿಷಯವಿಲ್ಲದ್ದರಿಂದ ಬೆಂಕಿಯು ಬಿಸಿಯಂತೆ ಆತ್ಮಸಂಸ್ಥವಾಯಿತು[1]. ಆತ್ಮನಲ್ಲಿಯೇ ನಿಂತುಬಿಟ್ಟಿತು. 'ಅಜಾತಿ ಜಾತಿಯಿಲ್ಲದ್ದು, ಸಮತೆಯನ್ನು ಹೊಂದಿರುವದು ಮೆಚ್ಚಿನ ಸಾಮ್ಯವನ್ನು ಹೊಂದಿರುವದು[2]. "ಅತೋ ವಕ್ಷ್ಯಾಮ್ಯಕಾರ್ಪಣ್ಯಮಜಾತಿ ಸಮತಾಂ ಗತಮ್" ಆದ್ದರಿಂದ ಕಾರ್ಪಣ್ಯವಿಲ್ಲದ, ಸಮತೆಯನ್ನು ಹೊಂದಿರುವ ಅಜಾತಿಯನ್ನು ಹೇಳುವೆನು. (೩-೨) ಎಂದು ಮೊದಲು ಪ್ರತಿಜ್ಞೆ ಮಾಡಿತ್ತಷ್ಟೆ, ಆ ಇದನ್ನು ಯುಕ್ತಿಯಿಂದಲೂ, ಶಾಸ್ತ್ರದಿಂದಲೂ ಹೇಳಿದ್ದಾಯಿತಾಗಿ ಈಗ "ಅಜಾತಿ ಸಮತಾಂ ಗತಮ್" ಎಂದು ಉಪಸಂಹಾರಮಾಡಿರುತ್ತದೆ[3]. ಈ ಆತ್ಮಸತ್ಯಾನುಬೋಧಕ್ಕಿಂತ ಬೇರೆಯಾದದ್ದು ಕಾರ್ಪಣ್ಯಕ್ಕೆ ವಿಷಯವಾದದ್ದು. ಏಕೆಂದರೆ "ಎಲೌ ಗಾರ್ಗಿ, ಈ ಅಕ್ಷರವನ್ನು ಅರಿತುಕೊಳ್ಳದೆ ಯಾವನಾದರೆ ಈ ಲೋಕವನ್ನು ಬಿಟ್ಟು ತೆರಳುವನೋ ಅವನು ಕೃಪಣನು." (ಬೃ. ೩-೮-೧೦) ಇದನ್ನು ಪಡೆದರೆ ಪ್ರತಿಯೊಬ್ಬನೂ ಕೃತಕೃತ್ಯನೂ, ಬ್ರಾಹ್ಮಣನೂ ಆಗುವನು[4] ಎಂದಭಿಪ್ರಾಯ

(ಭಾಷ್ಯ)

೧೭೮. ಯದ್ಯಪಿ ಇದಮಿತ್ಥಂ ಪರಮಾರ್ಥತತ್ತ್ವಮ್—

(ಭಾಷ್ಯಾರ್ಥ)

ಈ ಪರಮಾರ್ಥತತ್ತ್ವವು ಹೀಗಿರುವದಾದರೂ[5]—

---

1. ಕಟ್ಟಿಗೆಯನ್ನು ಸುಟ್ಟ ಬಳಿಕ ಬೆಂಕಿಯ ಬಿಸಿಯು ತನಗೆ ವಿಷಯವಿಲ್ಲದ್ದರಿಂದ ಹೇಗೆ ಬೆಂಕಿಯ ಸ್ವರೂಪದಲ್ಲಿಯೇ ಇರುವದೋ ಹಾಗೆ ಮನಸ್ಸು ವಿಷಯದ ಅಸತ್ಯತ್ವವನ್ನು ಕಂಡೊಡನೆ ಅಮನಸ್ಕವಾಗಿ ಆತ್ಮನ ಸ್ವರೂಪದಲ್ಲಿಯೇ ನಿಂತುಬಿಡುತ್ತದೆ. ಪರಮಾರ್ಥದೃಷ್ಟಿಯಿಂದ ಆತ್ಮನೇ ಮನೋರೂಪವಾಗಿಯೂ ತೋರುತ್ತಿರುವನು ಎಂದು ಹೇಳಿದಂತೆ ಆಯಿತು.

2. 'ಪರಂ ಸಾಮ್ಯಮ್' ಎಂದರೆ ಸಮಾನವಾಗುವದಲ್ಲ. ಒಂದೇ ಆಗಿಬಿಡುವದು. ಬ್ರಹ್ಮಕ್ಕಿಂತ ಬೇರೆಯಾಗಿ ಯಾವದೊಂದೂ ಇರುವದಿಲ್ಲವಾದ್ದರಿಂದ ಜ್ಞಾನದಿಂದ ಏಕತ್ವರೂಪವಾದ ಸಾಮ್ಯವನ್ನು ಹೊಂದಬಹುದು. ಮುಂ. ಭಾ. ೩-೧-೩-ನೋಡಿ.

3. ಅಜಾತಿಯನ್ನು ಹೇಳುವದೇ ಪ್ರಕರಣಕ್ಕೆ ಮುಖ್ಯವಾದ ಗುರಿ ಎಂಬುದನ್ನು ತಿಳಿಸುವುದಕ್ಕೆ ಉಪಕ್ರಮಿಸಿದ್ದನ್ನು ಉಪಸಂಹಾರಮಾಡುತ್ತಾರೆ. ಮುಂದೆ ಯೋಗರೂಪವಾದ ಸಾಧನವನ್ನು ಹೇಳಿರುವದರಲ್ಲಿ ಪರಮತಾತ್ಪರ್ಯವಿಲ್ಲ.

4. ೧೨-೯೩, ಬೃ-ಭಾ. 'ಅಥ ಬ್ರಾಹ್ಮಣಃ' ಎಂಬುದರ ವ್ಯಾಖ್ಯಾನವನ್ನು ನೋಡಿ.

5. ಆತ್ಮಸ್ವರೂಪವೇ ಆಗಿರುವದಾದರೂ.

**ಅಸ್ಪರ್ಶಯೋಗೋ ವೈ ನಾಮ ದುರ್ದರ್ಶಃ ಸರ್ವಯೋಗಿಭಿಃ ।**
**ಯೋಗಿನೋ ಬಿಭ್ಯತಿ ಹ್ಯಸ್ಮಾದಭಯೇ ಭಯದರ್ಶಿನಃ ॥ ೩೯ ॥**

೩೯. ಅಸ್ಪರ್ಶಯೋಗ ಎಂದು ಪ್ರಸಿದ್ಧವಾಗಿರುವ (ಇದು) ಎಲ್ಲಾ ಯೋಗಿಗಳಿಗೂ ದುರ್ದರ್ಶವಾಗಿರುವದು. ಏಕೆಂದರೆ ಅಭಯದಲ್ಲಿ ಭಯವನ್ನು ಕಾಣುತ್ತಾ ಯೋಗಿಗಳು ಇದಕ್ಕೆ ಹೆದರುವರು.

(ಭಾಷ್ಯ)

೧೯೯. ಅಸ್ಪರ್ಶಯೋಗೋ ನಾಮ ಅಯಮ್ । ಸರ್ವಸಮ್ಬನ್ಧಾಖ್ಯಸ್ಪರ್ಶವರ್ಜಿತತ್ವಾತ್ ಅಸ್ಪರ್ಶಯೋಗೋ ನಾಮ ವೈ ಸ್ಮರ್ಯತೇ ಪ್ರಸಿದ್ಧಮ್[1] ಉಪನಿಷತ್ಸು । ದುಃಖೇನ ದೃಶ್ಯತೇ ಇತಿ ದುರ್ದರ್ಶಃ ಸರ್ವೈಃ ಯೋಗಿಭಿಃ[2] ವೇದಾನ್ತವಿಹಿತವಿಜ್ಞಾನರಹಿತೈಃ ಸರ್ವಯೋಗಿಭಿಃ । ಆತ್ಮಸತ್ಯಾನುಬೋಧಾಯಾಸಲಭ್ಯ ಏವ ಇತ್ಯರ್ಥಃ । ಯೋಗಿನಃ ಬಿಭ್ಯತಿ ಹಿ ಅಸ್ಮಾತ್ ಸರ್ವಭಯವರ್ಜಿತಾದಪಿ ಆತ್ಮನಾಶರೂಪಮ್ ಇಮಂ ಯೋಗಂ ಮನ್ಯಮಾನಾಃ ಭಯಂ ಕುರ್ವನ್ತಿ । ಅಭಯೇ ಅಸ್ಮಿನ್ ಭಯದರ್ಶಿನಃ ಭಯನಿಮಿತ್ತಾತ್ಮನಾಶದರ್ಶನಶೀಲಾಃ ಅವಿವೇಕಿನಃ ಇತ್ಯರ್ಥಃ ॥

(ಭಾಷ್ಯಾರ್ಥ)

ಇದು ಅಸ್ಪರ್ಶಯೋಗವೆಂದೇ ಪ್ರಸಿದ್ಧವಾಗಿರುವದು. ಯಾವ ಸಂಬಂಧರೂಪವಾದ ಸ್ಪರ್ಶವೂ (ಇದಕ್ಕೆ) ಇರುವದಿಲ್ಲವಾದ್ದರಿಂದ[3] ಉಪನಿಷತ್ತುಗಳಲ್ಲಿ ಪ್ರಸಿದ್ಧವಾಗಿರುವ ಇದನ್ನು ಅಸ್ಪರ್ಶಯೋಗವೆಂದು (ಬಲ್ಲವರು) ಹೇಳುತ್ತಿರುವರು[4]. ಎಲ್ಲಾ ಯೋಗಿಗಳಿಗೂ ಇದು ದುರ್ದರ್ಶವು, ಕಷ್ಟದಿಂದ ತಿಳಿಯಬರುವಂಥದ್ದು, ವೇದಾಂತ

---

1. "ಪ್ರಸಿದ್ಧಃ" ವಾ॥ ಕಾ॥ ವ್ಯ॥

2. ಮೂಲದಲ್ಲಿಯೂ ಭಾಷ್ಯದಲ್ಲಿಯೂ 'ಸರ್ವಯೋಗಿನಾಮ್,' ವಾ॥

3. ಆತ್ಮಜ್ಞಾನವು ಯಾವದೊಂದು ಸಂಬಂಧವೂ ಇಲ್ಲದ ಆತ್ಮನನ್ನು ತಿಳಿಸುವದರಿಂದ ಇದಕ್ಕೆ ಅಸ್ಪರ್ಶಯೋಗವೆಂದು ಹೆಸರು. ಗೀ. ಭಾ. ೬-೨೩ ರಲ್ಲಿ ಯೋಗಶಬ್ದದ ನಿರ್ವಚನವನ್ನು ನೋಡಿ.

4. ಈ ಜ್ಞಾನವು ಉಪನಿಷತ್ತುಗಳಲ್ಲಿ ಪ್ರಸಿದ್ಧವಾಗಿದೆ, ಜ್ಞಾನಿಗಳು ಇದನ್ನು ಅಸ್ಪರ್ಶಯೋಗವೆಂದು ಕರೆಯುತ್ತಾರೆ; ಏಕೆಂದರೆ ಯೋಗದಂತೆ ಇಲ್ಲಿ ಯಾವದನ್ನೂ ವಿಷಯಮಾಡಿಕೊಳ್ಳಬೇಕಾದದ್ದು ಇರುವದಿಲ್ಲ. 'ಸ್ಮರ್ಯತೇ' ಎಂದರೆ 'ಸ್ಮರ್ಯತೇ ಬ್ರಹ್ಮವಿದ್ಭಿಃ' ಬ್ರಹ್ಮಜ್ಞಾನಿಗಳು ಹೇಳುತ್ತಾರೆ ಎಂದರ್ಥ.

ದಲ್ಲಿ ಹೇಳಿರುವ ವಿಜ್ಞಾನವಿಲ್ಲದ ಎಲ್ಲಾ ಯೋಗಿಗಳಿಗೂ (ದುರ್ದರ್ಶವು), ಆತ್ಮ ಸತ್ಯಾನುಬೋಧವೆಂಬ ಆಯಾಸದಿಂದಲೇ ಸಿಕ್ಕತಕ್ಕದ್ದು[1]. ಯಾವ ಭಯವೂ ಇಲ್ಲದ್ದಾದರೂ ಇದು ತಮ್ಮ (ಸ್ವರೂಪದ) ನಾಶ(ಕ್ಕೆ ಕಾರಣವು) ಎಂದು ಈ ಯೋಗವನ್ನು ಅರಿಯುತ್ತಾ ಯೋಗಿಗಳು ಇದಕ್ಕೆ ಹೆದರುತ್ತಾರೆ, ಅಂಜಿಕೆಯನ್ನು ಮಾಡಿಕೊಂಡಿರುತ್ತಾರೆ. ಅಭಯವಾದ ಇದರಲ್ಲಿ[2] ಭಯದರ್ಶಿಗಳಾಗಿ ಭಯಕ್ಕೆ ಕಾರಣವಾದ ಆತ್ಮನಾಶವನ್ನೇ ಕಾಣುವ ಸ್ವಭಾವದ ಅವಿವೇಕಿಗಳು[3] (ಇದಕ್ಕೆ ಅಂಜುತ್ತಾರೆ) ಎಂದರ್ಥ.

## ಮಧ್ಯಮಾಧಿಕಾರಿಗಳಿಗೆ ಮನೋನಿಗ್ರಹದಿಂದ ಪುರುಷಾರ್ಥ

**ಮನಸೋ ನಿಗ್ರಹಾಯತ್ತಮಭಯಂ ಸರ್ವಯೋಗಿನಾಮ್ ।**
**ದುಃಖಕ್ಷಯಃ ಪ್ರಬೋಧಶ್ಚಾಪ್ಯಕ್ಷಯಾ ಶಾನ್ತಿರೇವ ಚ ॥ ೪೦ ॥**

೪೦. ಎಲ್ಲಾ ಯೋಗಿಗಳಿಗೂ ಅಭಯವು ಮನಸ್ಸಿನ ನಿಗ್ರಹಕ್ಕೆ ಅಧೀನವು; ದುಃಖಕ್ಷಯವೂ ಜ್ಞಾನವೂ ಅಕ್ಷಯವಾದ ಶಾಂತಿಯೂ (ಮನಸ್ಸಿನ ನಿಗ್ರಹಕ್ಕೆ ಅಧೀನವು).

**(ಭಾಷ್ಯ)**

೨೦೦. ಯೇಷಾಂ ಪುನಃ ಬ್ರಹ್ಮಸ್ವರೂಪವ್ಯತಿರೇಕೇಣ ರಜ್ಜುಸರ್ಪವತ್ ಕಲ್ಪಿತಮೇವ ಮನಃ ಇನ್ದ್ರಿಯಾದಿ ಚ ನ ಪರಮಾರ್ಥತಃ ವಿದ್ಯತೇ, ತೇಷಾಂ ಬ್ರಹ್ಮಸ್ವರೂಪಾಣಾಮ್ ಅಭಯಂ ಮೋಕ್ಷಾಖ್ಯಾ ಚ ಅಕ್ಷಯಾ ಶಾನ್ತಿಃ ಸ್ವಭಾವತ ಏವ ಸಿದ್ಧಾ ನಾನ್ಯಾಯತ್ತಾ "ನೋಪಚಾರಃ ಕಥಂಚನ" (೩-೩೬) ಇತಿ ಅವೋಚಾಮ। ಯೇ ತು ಅತಃ ಅನ್ಯೇ ಯೋಗಿನಃ ಮಾರ್ಗಗಾಃ ಹೀನಮಧ್ಯಮದೃಷ್ಟಯಃ ಮನೋಽನ್ಯತ್ ಆತ್ಮವ್ಯತಿರಿಕ್ತಮ್ ಆತ್ಮಸಂಬನ್ಧಿ ಪಶ್ಯನ್ತಿ, ತೇಷಾಮ್ ಆತ್ಮಸತ್ಯಾನುಬೋಧರಹಿತಾನಾಂ ಮನಸಃ ನಿಗ್ರಹಾಯತ್ತಮ್ ಅಭಯಂ ಸರ್ವೇಷಾಂ ಯೋಗಿ

---

1. ಬರಿಯ ಯೋಗದಿಂದ ಸಿಕ್ಕತಕ್ಕದ್ದಲ್ಲ.

2. ತೈ. ೨-೭; ಬೃ. ೪-೨-೪

3. ಭಯವನ್ನು ಕಾಣುವವರು ಕರ್ಮಿಗಳೆಂದು ವ್ಯಾಖ್ಯಾನ; ಆದರೆ ಆತ್ಮಸತ್ಯಾನುಬೋಧವಿಲ್ಲದ ಸಾಧಕರನ್ನೆಲ್ಲ ಇಲ್ಲಿ ಯೋಗಿಗಳೆಂದು ಕರೆದಿದೆ ಎಂಬುದು ಮುಖ್ಯ.

ನಾಮ್ । ಕಿಂ ಚ ದುಃಖಕ್ಷಯೋಽಪಿ । ನ ಹಿ ಆತ್ಮಸಂಬನ್ಧಿನಿ ಮನಸಿ ಪ್ರಚಲಿತೇ ದುಃಖಕ್ಷಯಃ ಅಸ್ತಿ ಅವಿವೇಕಿನಾಮ್ । ಕಿಂ ಚ ಆತ್ಮಪ್ರಬೋಧೋಽಪಿ ಮನೋನಿಗ್ರಹಾಯತ್ತ ಏವ । ತಥಾ ಅಕ್ಷಯಾಪಿ ಮೋಕ್ಷಾಖ್ಯಾ ಶಾನ್ತಿಃ ತೇಷಾಂ ಮನೋನಿಗ್ರಹಾಯತ್ತೈವ ॥

(ಭಾಷ್ಯಾರ್ಥ)

**ಯಾರಿಗಾದರೆ ಬ್ರಹ್ಮಸ್ವರೂಪಕ್ಕಿಂತ ಬೇರೆಯಾದ ಮನಸ್ಸೂ ಇಂದ್ರಿಯವೇ ಮುಂತಾದವುಗಳೂ ಹಗ್ಗದ ಹಾವಿನಂತೆ ಕಲ್ಪಿತವೇ ಆಗಿರುವದೋ ನಿಜವಾಗಿ ಇರುವದಿಲ್ಲವೋ ಬ್ರಹ್ಮಸ್ವರೂಪರಾಗಿರುವ ಅವರಿಗೆ ಅಭಯವೂ ಮೋಕ್ಷವೆಂಬ ಹೆಸರಿನ ಅಕ್ಷಯವಾದ ಶಾಂತಿಯೂ ಸ್ವಭಾವದಿಂದಲೇ ಸಿದ್ಧವಾಗಿರುತ್ತದೆಯೇ ಹೊರತು ಮತ್ತೊಂದರ ಅಧೀನವಲ್ಲ. "(ಅವರು) ಮಾಡತಕ್ಕದ್ದು ಹೇಗೂ ಇರುವದಿಲ್ಲ" ಎಂದು ಹಿಂದೆ ಹೇಳಿರುತ್ತೇವೆ.**

**ಆದರೆ ಯಾರು ಇವರಿಗಿಂತ ಭಿನ್ನರಾಗಿರುವ ಯೋಗಿಗಳೋ ಹೀನಮಧ್ಯಮದೃಷ್ಟಿಗಳುಳ್ಳವರಾಗಿ[1] (ವೈದಿಕ) ಮಾರ್ಗದಲ್ಲಿ ನಡೆಯುತ್ತಾ ಆತ್ಮನಿಗಿಂತ ಬೇರೆಯಾಗಿ ಆತ್ಮನಿಗೆ ಸಂಬಂಧಪಟ್ಟಂತೆ ಮನಸ್ಸೆಂಬುದು ಬೇರೆ (ಇದೆ) ಎಂದು, ತಿಳಿದಿರುವರೋ ಅಂಥ ಸರ್ವಯೋಗಿಗಳೂ ಆತ್ಮಸತ್ಯಾನುಬೋಧವು ಇಲ್ಲದವರಾದ್ದರಿಂದ (ಅವರಿಗೆ) ಅಭಯವು ಮನಸ್ಸನ್ನು ನಿಗ್ರಹಮಾಡಿಕೊಳ್ಳುವದಕ್ಕೆ ಅಧೀನವಾಗಿರುವದು[2].** ಮತ್ತು ದುಃಖಕ್ಷಯವೂ (ಅವರಿಗೆ ಮನೋನಿಗ್ರಹದ ಅಧೀನವೇ) ; ಏಕೆಂದರೆ ವಿವೇಕವಿಲ್ಲದವರಿಗೆ[3] ಆತ್ಮನಿಗೆ ಸಂಬಂಧಪಟ್ಟಿರುವ ಮನಸ್ಸು ಅಲುಗಾಡಿದರೆ ದುಃಖವು ನಾಶವಾಗಲೇ ಆರದು[4]. **ಇದಲ್ಲದೆ**

1. ಜ್ಞಾನಿಗಳಿಗೆ ಜ್ಞಾನಾಭ್ಯಾಸ, ಧ್ಯಾನ-ಮುಂತಾದ ಸಾಧನಗಳು ಯಾವದೂ ಇಲ್ಲ; ಹೀನದೃಷ್ಟಿಯುಳ್ಳ ಕರ್ಮಿಗಳಿಗೂ ಮಧ್ಯಮದೃಷ್ಟಿಯುಳ್ಳ ಉಪಾಸಕರಿಗೂ ಸಾಧನವನ್ನು ಶಾಸ್ತ್ರದಲ್ಲಿ ಹೇಳಿದೆ ಎಂದು ಭಾವ.

2. ಜ್ಞಾನಯೋಗಿಗಳನ್ನು ಬಿಟ್ಟು ಮಿಕ್ಕ ಸರ್ವಯೋಗಿಗಳಿಗೂ ಎಂದು ಕಾರಿಕೆಗೆ ಅರ್ಥಮಾಡಬೇಕು ಎಂಬುದು ಹಿಂದಿನ ಗ್ರಂಥಸಂದರ್ಭದಿಂದ ಸ್ಪಷ್ಟವಾಗುತ್ತದೆ ಎಂದು ಭಾವ. ಜ್ಞಾನಿಗಳಿಗೆ ಅಭಯಾದಿಗಳು ಸ್ವತಃಸಿದ್ಧ, ಯೋಗಿಗಳಿಗೆ ಮನೋನಿಗ್ರಹಸಾಧ್ಯ.

3. ಆತ್ಮಜ್ಞಾನವಿಲ್ಲದವರಿಗೆ.

4. ಮನಸ್ಸು ಅಲುಗಾಡುವ ಎಚ್ಚರಕನಸುಗಳಲ್ಲಿ ದುಃಖವೂ ಅದರ ಅಲುಗಾಟವಿಲ್ಲದ ಸುಷುಪ್ತಿಯಲ್ಲಿ ಸುಖವೂ ಅನುಭವಸಿದ್ಧ; ಆದ್ದರಿಂದ ಮನಸ್ಸು ಅಲುಗಾಡದಂತೆ ಮಾಡಿಕೊಂಡರೇ ಸಾಧಕರಿಗೆ ದುಃಖಕ್ಷಯ.

ಆತ್ಮಜ್ಞಾನವೂ (ಅವರಿಗೆ) ಮನೋನಿಗ್ರಹಕ್ಕೆ ಅಧೀನವಾಗಿಯೇ ಇರುವದು[1]. ಇದರಂತೆ ಅಕ್ಷಯವಾದ ಮೋಕ್ಷವೆಂಬ ಶಾಂತಿಯುಕೂಡ ಅವರಿಗೆ ಮನೋನಿಗ್ರಹಕ್ಕೆ ಅಧೀನವಾಗಿಯೇ ಇರುವದು.

**ಉತ್ಸೇಕ ಉದಧೇ ರ್ಯದ್ವತ್ ಕುಶಾಗ್ರೇಣೈಕಬಿನ್ದುನಾ ।**
**ಮನಸೋ ನಿಗ್ರಹಸ್ತದ್ವದ್ಭವೇದಪರಿಖೇದತಃ    ॥ ೪೧ ॥**

೪೧. ಸಮುದ್ರವನ್ನು ಕುಶಾಗ್ರದಿಂದ ಒಂದೊಂದು ತೊಟ್ಟಾಗಿ ತೆಗೆದುಹಾಕುವದು ಹೇಗೋ ಅದರಂತೆ ಅಪರಿಖೇದದಿಂದ ಮನಸ್ಸಿನ ನಿಗ್ರಹವು (ಆಗುವದು).

(ಭಾಷ್ಯ)

೨೦೧. ಮನೋನಿಗ್ರಹೋऽಪಿ ತೇಷಾಮ್ ಉದಧೇಃ ಕುಶಾಗ್ರೇಣ ಏಕಬಿನ್ದುನಾ ಉತ್ಸೇಚನೇನ ಶೋಷಣವ್ಯವಸಾಯವತ್ ವ್ಯವಸಾಯವತಾಮ್ ಅನವಸನ್ನಾನ್ತಃಕರಣಾನಾಮ್ ಅನಿರ್ವೇದಾತ್ ಅಪರಿಖೇದತಃ ಭವತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಅವರಿಗೆ ಮನೋನಿಗ್ರಹವುಕೂಡ ದರ್ಭೆಯ ತುದಿಯಿಂದ ಒಂದೊಂದು ತೊಟ್ಟಾಗಿ ತೆಗೆದುಹಾಕುವದರಿಂದ ಸಮುದ್ರವನ್ನು ಬತ್ತಿಸುವೆನೆಂಬ ನಿಶ್ಚಯದಂತೆ ಮನೋನಿಶ್ಚಯವುಳ್ಳವರಾಗಿ ಅಂತಃಕರಣದಲ್ಲಿ ಕುಸಿಯದೆ ಇರುವವರಿಗೆ ಬೇಸರವಿಲ್ಲದೆ ಇರುವ ಅಪರಿಖೇದದಿಂದ ಆಗುತ್ತದೆ ಎಂದರ್ಥ.

(ಭಾಷ್ಯ)

೨೦೨. ಕಿಮ್ ಅಪರಿಖಿನ್ನವ್ಯವಸಾಯಮಾತ್ರಮೇವ ಮನೋನಿಗ್ರಹೇ ಉಪಾಯಃ ? ನ ಇತ್ಯುಚ್ಯತೇ—

(ಭಾಷ್ಯಾರ್ಥ)

ಬೇಸರವಿಲ್ಲದ ನಿಶ್ಚಯವೊಂದೇ ಮನೋನಿಗ್ರಹಕ್ಕೆ ಉಪಾಯವೆ ?—ಎಂದರೆ ಹಾಗಲ್ಲವೆನ್ನುತ್ತಾರೆ.

---

1. ಮನೋನಿಗ್ರಹವಾದ ಬಳಿಕ ತತ್ತ್ವಜ್ಞಾನವು ಅವರಿಗೆ ಹೊಳೆಯುವದು.

**ಉಪಾಯೇನ ನಿಗೃಹ್ಣೀಯಾತ್ ವಿಕ್ಷಿಪ್ತಂ ಕಾಮಭೋಗಯೋಃ ।**
**ಸುಪ್ರಸನ್ನಂ ಲಯೇ ಚೈವ ಯಥಾ ಕಾಮೋ ಲಯಸ್ತಥಾ ॥ ೪೨ ॥**

೪೨. ಕಾಮಭೋಗಗಳಲ್ಲಿ ವಿಕ್ಷಿಪ್ತವಾದ (ಮನಸ್ಸನ್ನು) ಉಪಾಯದಿಂದ ನಿಗ್ರಹಮಾಡಬೇಕು. ಲಯದಲ್ಲಿ ಸುಪ್ರಸನ್ನವಾದ (ಮನಸ್ಸನ್ನೂ ನಿಗ್ರಹಮಾಡಬೇಕು). ಹೇಗೆ ಕಾಮವೋ ಲಯವೂ ಹಾಗೆಯೇ.

(ಭಾಷ್ಯ)

೨೦೩. ಅಪರಿಖಿನ್ನವ್ಯವಸಾಯವಾನ್ ಸನ್ ವಕ್ಷ್ಯಮಾಣೇನ ಉಪಾಯೇನ ಕಾಮಭೋಗವಿಷಯೇ[1] ವಿಕ್ಷಿಪ್ತಂ ಮನಃ ನಿಗೃಹ್ಣೀಯಾತ್ ನಿರುನ್ಧ್ಯಾತ್ ಆತ್ಮನ್ಯೇವ ಇತ್ಯರ್ಥಃ । ಕಿಂ ಚ ಲೀಯತೇ ಅಸ್ಮಿನ್ ಇತಿ ಸುಷುಪ್ತಿಃ ಲಯಃ ತಸ್ಮಿನ್ ಲಯೇ ಚ ಸುಪ್ರಸನ್ನಮ್ ಆಯಾಸವರ್ಜಿತಮಪಿ ಇತ್ಯೇತತ್ । 'ನಿಗೃಹ್ಣೀಯಾತ್' ಇತ್ಯನುವರ್ತತೇ । ಸುಪ್ರಸನ್ನಂ ಚೇತ್ ಕಸ್ಮಾತ್ ನಿಗೃಹ್ಯತೇ ಇತಿ ? ಉಚ್ಯತೇ । ಯಸ್ಮಾತ್ ಯಥಾ ಕಾಮಃ ಅನರ್ಥಹೇತುಃ ತಥಾ ಲಯೋಽಪಿ । ಅತಃ ಕಾಮವಿಷಯಸ್ಯ ಮನಸಃ ನಿಗ್ರಹವತ್ ಲಯಾದಪಿ ನಿರೋದ್ಧವ್ಯತ್ವಮ್[2] ಇತ್ಯರ್ಥಃ—

(ಭಾಷ್ಯಾರ್ಥ)

(ಹೀಗೆ) ಬೇಸರವಿಲ್ಲದೆ ಮನೋನಿಶ್ಚಯವುಳ್ಳವನಾಗಿ ಮುಂದೆ ಹೇಳುವ ಉಪಾಯದಿಂದ ಕಾಮ ಮತ್ತು ಭೋಗ—(ಇವುಗಳ) ವಿಷಯದಲ್ಲಿ ವಿಕ್ಷಿಪ್ತವಾದ[3] ಮನಸ್ಸನ್ನು ನಿಗ್ರಹಿಸಬೇಕು, ಆತ್ಮನಲ್ಲಿಯೇ ತಡೆದು ನಿಲ್ಲಿಸಿಕೊಳ್ಳಬೇಕು ಎಂದರ್ಥ. ಮತ್ತು (ಲಯದಲ್ಲಿ), ಇದರಲ್ಲಿ (ಮನಸ್ಸು) ಲಯವಾಗುವದರಿಂದ ಸುಷುಪ್ತಿಗೆ 'ಲಯ' ವೆಂದು ಹೆಸರು ; ಆ ಲಯದಲ್ಲಿಯೂ ಸುಪ್ರಸನ್ನವಾದ (ಮನಸ್ಸನ್ನು) ಆಯಾಸವಿಲ್ಲದ (ಮನಸ್ಸನ್ನು) ಎಂದರ್ಥ[4]. 'ನಿಗ್ರಹಿಸಬೇಕು' ಎಂದು ಇಲ್ಲಿಯೂ

---

1. 'ವಿಷಯೇಷು' ಎಂಬ ಪಾಠಕ್ಕಿಂತ ಈ ಪಾಠವು ಮೇಲು.

2. 'ನಿರೋದ್ಧವ್ಯಮ್' ಆ॥ ಕಾ॥ ವ್ಯಾ॥

3. ಚಂಚಲವಾದ; ವಿಷಯಗಳ ಕಡೆಗೆ ಇಂದ್ರಿಯಗಳ ಮೂಲಕ ಧಾವಿಸುವದಕ್ಕೂ ಅವು ದೊರೆತರೆ ಭೋಗಿಸುವದಕ್ಕೂ ಮನಸ್ಸು ಹೊಯ್ದಾಡುತ್ತಿರುವದು. ಇದೇ ವಿಕ್ಷೇಪವೆಂಬ ದೋಷವು.

4. ವಿಷಯವಿಷಯಿಗಳ ಆಕಾರದಲ್ಲಿ ಇರುವದೇ ಆಯಾಸವು. ಈ ಆಯಾಸವು ಸುಷುಪ್ತಿಯಲ್ಲಿಲ್ಲದ್ದರಿಂದ ಸುಪ್ರಸನ್ನವೆಂದಿದೆ.

ಹಿಂದಿನಿಂದ ಸೇರಿಕೊಳ್ಳುತ್ತದೆ. ಸುಪ್ರಸನ್ನವಾಗಿದ್ದರೆ (ಅದನ್ನು) ನಿಗ್ರಹಿಸುವದು ಏಕೆ ? – ಎಂದರೆ ಹೇಳುತ್ತಾರೆ: ಏಕೆಂದರೆ ಹೇಗೆ ಕಾಮವು ಅನರ್ಥಹೇತುವೋ ಲಯವೂ ಹಾಗೆಯೇ (ಅನರ್ಥಹೇತು)[1]. ಆದ್ದರಿಂದ ಕಾಮವನ್ನು ವಿಷಯಮಾಡಿಕೊಳ್ಳುವ ಮನಸ್ಸನ್ನು ಹೇಗೆ ನಿಗ್ರಹಮಾಡಿಕೊಳ್ಳಬೇಕೋ ಹಾಗೆಯೇ ಲಯ (ವಾಗದಂತೆ ಅದ) ರಿಂದಲೂ ತಡೆದಿಡಬೇಕು– ಎಂದರ್ಥ.

(ಭಾಷ್ಯ)

೨೦೪. ಕಃ ಸ ಉಪಾಯ ಇತಿ ? ಉಚ್ಯತೇ—

(ಭಾಷ್ಯಾರ್ಥ)

ಆ ಉಪಾಯವು ಯಾವದು ? ಎಂದರೆ ಹೇಳುತ್ತಾರೆ.

**ದುಃಖಂ ಸರ್ವಮನುಸ್ಮೃತ್ಯ ಕಾಮಭೋಗಾನ್ನಿವರ್ತಯೇತ್ ।**
**ಅಜಂ ಸರ್ವಮನುಸ್ಮೃತ್ಯ ಜಾತಂ ನೈವ ತು ಪಶ್ಯತಿ ॥ ೪೩ ॥**

೪೩. ಎಲ್ಲವೂ ದುಃಖವೆಂದು ನೆನೆದು ಕಾಮಭೋಗದಿಂದ (ಮನಸ್ಸನ್ನು) ಹಿಂತಿರುಗಿಸಿಕೊಳ್ಳಬೇಕು. ಎಲ್ಲವೂ ಅಜವೆಂದು ನೆನೆದುಕೊಂಡರೆ ಹುಟ್ಟಿದ್ದನ್ನು ಕಾಣುವದೇ ಇಲ್ಲ.

(ಭಾಷ್ಯ)

೨೦೫. ಸರ್ವಂ ದ್ವೈತಮ್ ಅವಿದ್ಯಾವಿಜೃಮ್ಭಿತಂ ದುಃಖಮೇವ ಇತಿ ಅನುಸ್ಮೃತ್ಯ ಕಾಮಭೋಗಾತ್ ಕಾಮನಿಮಿತ್ತಃ ಭೋಗಃ ಇಚ್ಛಾವಿಷಯಃ ತಸ್ಮಾತ್ ವಿಪ್ರಸೃತಂ ಮನಃ ನಿವರ್ತಯೇತ್ ವೈರಾಗ್ಯಭಾವನಯಾ ಇತ್ಯರ್ಥಃ । ಅಜಂ ಬ್ರಹ್ಮ ಸರ್ವಮ್ ಇತ್ಯೇತತ್ ಶಾಸ್ತ್ರಾಚಾರ್ಯೋಪದೇಶತಃ ಅನುಸ್ಮೃತ್ಯ ತದ್ವಿಪರೀತಂ ದ್ವೈತಂ ಜಾತಂ[2] ನೈವ ತು ಪಶ್ಯತಿ । ಅಭಾವಾತ್ ॥

---

1. ಲಯವು ಸ್ವತಃ ಅನರ್ಥಹೇತುವಲ್ಲದಿದ್ದರೂ ವಿಕ್ಷೇಪದ ಮೂಲಕವಾಗಿ ಅನರ್ಥಹೇತುವಾಗಿರುತ್ತದೆ.

2. "ದ್ವೈತಜಾತಂ" ಎಂದೇ ಅಚ್ಚಿನ ಪುಸ್ತಕಗಳಲ್ಲಿದೆಯಾದರೂ 'ದ್ವೈತಂ ಜಾತಂ' ಎಂದೇ ಇರಬೇಕು, ಏಕೆಂದರೆ ಮೂಲದಲ್ಲಿ 'ಜಾತಮ್' ಎಂದೇ ಇದೆ.

(ಭಾಷ್ಯಾರ್ಥ)

ಅವಿದ್ಯೆಯಿಂದ ಹರಡಿಕೊಂಡಿರುವ ದ್ವೈತವೆಲ್ಲವೂ ದುಃಖವೇ ಎಂದು ನೆನೆದು[1] ಕಾಮಭೋಗದಿಂದ ಕಾಮನಿಮಿತ್ತವಾದ ಭೋಗವೆಂಬ ಇಚ್ಛೆಯ ವಿಷಯ(ವಿದೆಯಲ್ಲ), ಅದರಿಂದ, ವಿಕ್ಷಿಪ್ತವಾದ ಮನಸ್ಸನ್ನು ವೈರಾಗ್ಯಭಾವನೆಯಿಂದ ಹಿಂತಿರುಗಿಸಿಕೊಳ್ಳಬೇಕು ಎಂದರ್ಥ. ಎಲ್ಲವೂ ಅಜವಾದ (ಹುಟ್ಟಿಲ್ಲದ) ಬ್ರಹ್ಮವು ಎಂಬಿದನ್ನು ಶಾಸ್ತ್ರಚಾರ್ಯರುಗಳ ಉಪದೇಶದಿಂದ ಅನುಸ್ಮರಣೆಮಾಡಿಕೊಂಡರೆ[2] ಅದಕ್ಕೆ ವಿರುದ್ಧವಾದ ದ್ವೈತವೆಂಬ ಹುಟ್ಟಿರುವ (ವಸ್ತುವನ್ನು) ಕಾಣುವದೇ ಇಲ್ಲ. ಏಕೆಂದರೆ ಅದು ಇರುವದೇ ಇಲ್ಲ[3].

**ಲಯೇ ಸಮ್ಬೋಧಯೇಚ್ಚಿತ್ತಂ ವಿಕ್ಷಿಪ್ತಂ ಶಮಯೇತ್ ಪುನಃ ।**
**ಸಕಷಾಯಂ ವಿಜಾನೀಯಾತ್ ಸಮಪ್ರಾಪ್ತಂ ನ ಚಾಲಯೇತ್ ॥೪೪॥**

೪೪. ಲಯವಾದರೆ ಚಿತ್ತವನ್ನು ಎಚ್ಚರಗೊಳಿಸಬೇಕು, ವಿಕ್ಷಿಪ್ತವಾದರೆ ಮತ್ತೆ ಶಮನಮಾಡಬೇಕು. ಸಕಷಾಯವೆಂಬುದನ್ನು ಅರಿತುಕೊಳ್ಳಬೇಕು; ಸಮಪ್ರಾಪ್ತವಾದರೆ ಚಾಲನೆಮಾಡಬಾರದು.

(ಭಾಷ್ಯ)

೨೦೬. ಏವಮ್ ಅನೇನ ಜ್ಞಾನಾಭ್ಯಾಸವೈರಾಗ್ಯದ್ವಯೋಪಾಯೇನ ಲಯೇ ಸುಷುಪ್ತೇ ಲೀನಂ ಸಂಬೋಧಯೇತ್ ಮನಃ । ಆತ್ಮವಿವೇಕದರ್ಶನೇನ ಯೋಜಯೇತ್ । ಚಿತ್ತಂ ಮನಃ ಇತಿ ಅನರ್ಥಾನ್ತರಮ್ । ವಿಕ್ಷಿಪ್ತಂ ಚ ಕಾಮಭೋಗೇಷು ಶಮಯೇತ್ ಪುನಃ । ಏವಂ ಪುನಃಪುನಃ ಅಭ್ಯಸ್ಯತಃ ಲಯಾತ್ ಸಮ್ಬೋಧಿತಂ ವಿಷಯೇಭ್ಯಶ್ಚ ವ್ಯಾವರ್ತಿತಂ ನಾಪಿ ಸಾಮ್ಯಾಪನ್ನಮ್ ಅನ್ತರಾಲಾವಸ್ಥಂ ಸಕಷಾಯಂ ಸರಾಗಂ ಬೀಜಸಂಯುಕ್ತಂ ಮನಃ ಇತಿ ವಿಜಾನೀಯಾತ್ । ತತೋಽಪಿ ಯತ್ನತಃ ಸಾಮ್ಯಮ್ ಆಪಾದಯೇತ್ । ಯದಾ ತು ಸಮಪ್ರಾಪ್ತಂ ಭವತಿ ಸಮಪ್ರಾಪ್ತ್ಯಭಿಮುಖೀಭವತಿ ಇತ್ಯರ್ಥಃ । ತತಃ ತತ್ ನ ವಿಚಾಲಯೇತ್ ವಿಷಯಾಭಿಮುಖಂ ನ ಕುರ್ಯಾತ್ ಇತ್ಯರ್ಥಃ ॥

---

1. ಅನುಭವದಿಂದಲೂ ವೈರಾಗ್ಯಬೋಧಕಸ್ಮೃತಿಗಳಿಂದಲೂ ಮನದಂದು.

2. ಶ್ರುತಿಯಿಂದಲೂ ಆಚಾರ್ಯರಿಂದಲೂ ತಿಳಿದದ್ದನ್ನು ನೆನೆದುಕೊಂಡರೆ.

3. ನಿಜವಾಗಿ ದ್ವೈತವು ಇಲ್ಲವೇ ಇಲ್ಲವಾದ್ದರಿಂದ ಅದು ಇಲ್ಲವೆಂದು ಭಾವಿಸಿದರೆ ಅದು ಹೋಗಿಬಿಡುವದು ಎಂದು ಭಾವ.

(ಭಾಷ್ಯಾರ್ಥ)

ಹೀಗೆ ಜ್ಞಾನಾಭ್ಯಾಸ[1], ವೈರಾಗ್ಯ–ಎಂಬ ಈ ಎರಡು ಉಪಾಯಗಳಿಂದ ಲಯವಾದರೆ ಸುಷುಪ್ತಿಯಲ್ಲಿ ಲಯವಾದ (ಚಿತ್ತವನ್ನು[2]) ಮನಸ್ಸನ್ನು ಎಚ್ಚರಗೊಳಿಸ ಬೇಕು, ಆತ್ಮನನ್ನು ಬಿಡಿಸಿ ತಿಳಿದುಕೊಳ್ಳುವದಕ್ಕೆ ಹತ್ತಿಸಬೇಕು. ಚಿತ್ತವೆಂದರೂ ಮನಸ್ಸೆಂದರೂ ಒಂದೇ. ಕಾಮಭೋಗಗಳಲ್ಲಿ ವಿಕ್ಷಿಪ್ತವಾದರೆ (ಅದನ್ನು) ಮತ್ತೆ ಶಮನಗೊಳಿಸಬೇಕು. ಹೀಗೆ ಮತ್ತೆಮತ್ತೆ ಅಭ್ಯಾಸಮಾಡುತ್ತಾ ಲಯವಾಗದಂತೆ ಎಚ್ಚರಿಸಿ, ವಿಷಯಗಳಿಂದಲೂ ಹಿಂತಿರುಗಿಸಿದರೆ (ಇನ್ನೂ) ಸಾಮ್ಯವನ್ನು ಹೊಂದ ದಿದ್ದರೆ[3], ಆ ನಡುವಣ ಅವಸ್ಥೆಯಲ್ಲಿರುವ ಮನಸ್ಸನ್ನು **ಸಕಷಾಯವು,** ರಾಗದಿಂದ ಕೂಡಿರುವದು, ಬೀಜದಿಂದೊಡಗೂಡಿರುವದು[4] -ಎಂದು ತಿಳಿಯಬೇಕು. ಆದರಿಂದಲೂ (ತಪ್ಪಿಸಿ) ಪ್ರಯತ್ನದಿಂದ ಸಾಮ್ಯವನ್ನು ಹೊಂದಿಸಬೇಕು. ಆದರೆ ಯಾವಾಗ ಸಮತೆ ಯನ್ನು ಪಡೆದದ್ದಾಗುವದೋ, ಸಮತೆಯನ್ನು ಹೊಂದುವಕಡೆಗೆ ತಿರುಗುವದೋ ಎಂದರ್ಥ. ಆಗ ಅದನ್ನು ಅಲುಗಾಡಿಸಬಾರದು, ವಿಷಯಗಳ ಕಡೆಗೆ ತಿರುಗಿಸಬಾರದು ಎಂದರ್ಥ.

**ನಾಸ್ವಾದಯೇತ್ ಸುಖಂ ತತ್ರ ನಿಸ್ಸಙ್ಗಃ ಪ್ರಜ್ಞಯಾ ಭವೇತ್।**
**ನಿಶ್ಚಲಂ ನಿಶ್ಚರಚ್ಚಿತ್ತಮೇಕೀಕುರ್ಯಾತ್ ಪ್ರಯತ್ನತಃ ॥ ೪೫ ॥**

೪೫. ಅಲ್ಲಿ ಸುಖವನ್ನು ಸವಿಯಬಾರದು. ಪ್ರಜ್ಞೆಯಿಂದ ನಿಸ್ಸಂಗ ನಾಗಿರಬೇಕು. ನಿಶ್ಚಲವಾಗಿದ್ದು ಹೊರಹೊರಡುವ ಚಿತ್ತವನ್ನು ಪ್ರಯತ್ನ ದಿಂದ ಒಂದಾಗಿಸಬೇಕು.

(ಭಾಷ್ಯ)

೨೦೭. ಸಮಾಧಿಸ್ಥಸ್ಯ[5] ಯೋಗಿನಃ ಯತ್ ಸುಖಂ ಜಾಯತೇ ತತ್ ನ ಆಸ್ವಾದಯೇತ್। ತತ್ರ ನ ರಜ್ಯೇತ ಇತ್ಯರ್ಥಃ। ಕಥಂ ತರ್ಹಿ ? ನಿಸ್ಸಙ್ಗಃ ನಿಃಸ್ಪೃಹಃ

---

1. ಎಲ್ಲವೂ ಅಜವೆಂಬದು ಶಾಸ್ತ್ರಾಚಾರ್ಯರಿಂದ ತಿಳಿದದ್ದನ್ನು ಅನುಸ್ಮರಣೆಮಾಡು ವದೇ ಜ್ಞಾನಾಭ್ಯಾಸವು.

2. ಈ ಅರ್ಥದ ಮಾತು ಭಾಷ್ಯದಲ್ಲಿ ಬಿಟ್ಟುಹೋಗಿದೆ ಎಂದು ತೋರುತ್ತದೆ.

3. ಆತ್ಮಾಕಾರವಾಗದಿದ್ದರೆ.

4. ಮತ್ತೆ ವಿಕ್ಷೇಪವನ್ನು ಹೊಂದಬಹುದಾದದ್ದು.

5. ಇಲ್ಲಿ ತತ್ರ ಎಂಬ ಮಾತು ಬಿಟ್ಟುಹೋಗಿರುವಂತೆ ಕಾಣುತ್ತದೆ:

ಪ್ರಜ್ಞಯಾ ವಿವೇಕಬುದ್ಧ್ಯಾ ಯತ್ ಉಪಲಭ್ಯತೇ ಸುಖಂ ತತ್ ಅವಿದ್ಯಾಪರಿಕಲ್ಪಿತಂ ಮೃಷೈವ ಇತಿ ವಿಭಾವಯೇತ್ । ತತೋಽಪಿ ಸುಖರಾಗಾತ್ ನಿಗೃಹ್ಣೀಯಾತ್ ಇತ್ಯರ್ಥಃ । ಯದಾ ಪುನಃ ಸುಖರಾಗಾತ್ ನಿವೃತ್ತಂ ನಿಶ್ಚಲಸ್ವಭಾವಂ ಸತ್ ನಿಶ್ಚರತ್ ಬಹಿರ್ನಿರ್ಗಚ್ಛತ್ ಭವತಿ ಚಿತ್ತಮ್ । ತತಸ್ತತಃ ನಿಯಮ್ಯ ಉಕ್ತೋಪಾಯೇನ ಆತ್ಮನ್ಯೇವ ಏಕೀಕುರ್ಯಾತ್ ಪ್ರಯತ್ನತಃ । ಚಿತ್ಸ್ವರೂಪಸತ್ತಾಮಾತ್ರಮೇವ ಆಪಾದಯೇತ್ ಇತ್ಯರ್ಥಃ ॥

(ಭಾಷ್ಯಾರ್ಥ)

ಸಮಾಧಿಯನ್ನು ಹೊಂದುವದರಲ್ಲಿರುವ[1] ಯೋಗಿಗೆ ಯಾವ ಸುಖವು ಉಂಟಾಗುವದೋ[2] ಅದನ್ನು ಸವಿಯಬಾರದು, ಅದರಲ್ಲಿ ರಕ್ತನಾಗಿರಬಾರದು ಎಂದರ್ಥ, ಹಾಗಾದರೆ ಹೇಗೆ ಇರಬೇಕು ? ಎಂದರೆ ಪ್ರಜ್ಞೆಯಿಂದ ವಿವೇಕಬುದ್ಧಿಯಿಂದ, ನಿಸ್ಸಂಗನಾಗಿ ಯಾವ ಆಸೆಯೂ ಇಲ್ಲದವನಾಗಿ (ಇರಬೇಕು)[3]. ಯಾವ ಸುಖವು ಕಾಣಬರುತ್ತಿದೆಯೋ ಅದು ಅವಿದ್ಯಾಕಲ್ಪಿತವಾದದ್ದು, ಮಿಥ್ಯೆಯೇ[4] – ಎಂದು ಭಾವಿಸುತ್ತಿರಬೇಕು. ಆ ಸುಖದ ಆಸೆಯಿಂದಲೂ (ಮನಸ್ಸನ್ನು) ನಿಗ್ರಹಿಸಿಕೊಳ್ಳಬೇಕು ಎಂದರ್ಥ. ಯಾವಾಗಲಾದರೆ ಸುಖರಾಗದಿಂದ ಹಿಂತಿರುಗಿದ (ಚಿತ್ತವು) ನಿಶ್ಚಲಸ್ವಭಾವವುಳ್ಳದ್ದಾಗಿದ್ದು ಹೊರಹೊರಡುವದೋ ಹೊರಕ್ಕೆ ಬರುವದಾಗುವದೋ ಆಗ ಅದರಿಂದ (ಹಿಮ್ಮೆಟ್ಟಿಸಿ) ತಡೆದು ಹಿಂದೆ ಹೇಳಿದ ಉಪಾಯದಿಂದ ಆತ್ಮನಲ್ಲಿಯೇ ಪ್ರಯತ್ನದಿಂದ ಒಂದುಮಾಡಿಕೊಳ್ಳಬೇಕು ; ಬರಿಯ ಚಿತ್ಸ್ವರೂಪದ ಇರವನ್ನು ಮಾಡಿಕೊಳ್ಳಬೇಕು ಎಂದರ್ಥ[5].

---

1. ಇಷ್ಟರಲ್ಲಿಯೇ ಹೊಂದಲಿರುವ.

2. ಮುಂದೆ ಸಮಾಧಿಯುಂಟಾಗುವದೆಂಬ ನಿರೀಕ್ಷಣೆಯ ಸುಖವಿದು.

3. ಸುಖದಲ್ಲಿ ಅಭಿಮಾನವನ್ನು ಮಾಡಬಾರದು.

4. ಏಕೆಂದರೆ ಈ ಸುಖವೆಂಬುದು ಸತ್ತ್ವಗುಣದಿಂದ ಅಂತಃಕರಣದಲ್ಲಿ ತೋರಿಕೊಳ್ಳುವ ಧರ್ಮವು. ಗೀ. ಭಾ. ೧೪-೬ ರಲ್ಲಿ ' ಸುಖಸಂಗೇನ ' ಎಂಬುದರ ಭಾಷ್ಯವನ್ನು ನೋಡಿ.

5. ಆತ್ಮನಿಗಿಂತ ಬೇರೆಯಾದ ಇರವನ್ನು ಚಿತ್ತಕ್ಕೆ ಕೊಡದೆ ಆತ್ಮಮಾತ್ರವೇ ಅದೆಂದು ಚಿಂತಿಸಬೇಕು–ಎಂದರ್ಥ.

**ಯದಾ ನ ಲೀಯತೇ ಚಿತ್ತಂ ನ ಚ ವಿಕ್ಷಿಪ್ಯತೇ ಪುನಃ ।**
**ಅನಿಙ್ಗನಮನಾಭಾಸಂ ನಿಷ್ಪನ್ನಂ ಬ್ರಹ್ಮ ತತ್ತದಾ　　॥ ೪೬ ॥**

೪೬. ಯಾವಾಗ ಚಿತ್ತವು ಲಯವಾಗುವದಿಲ್ಲವೋ ಮತ್ತೆ ವಿಕ್ಷಿಪ್ತವೂ ಆಗುವದಿಲ್ಲವೋ, ಹೊಯ್ದಾಡದೆ, ತೋರಿಕೊಳ್ಳದೆ (ಇರುವದೋ) ಆಗ ಅದು ಬ್ರಹ್ಮವಾಯಿತು.

(ಭಾಷ್ಯ)

೨೦೮. ಯಥೋಕ್ತೋಪಾಯೇನ ನಿಗೃಹೀತಂ ಚಿತ್ತಂ ಯದಾ ಸುಷುಪ್ತೇ ನ ಲೀಯತೇ ನ ಚ ಪುನಃ ವಿಷಯೇಷು ವಿಕ್ಷಿಪ್ಯತೇ । ಅನಿಙ್ಗನಮ್ ಅಚಲಂ ನಿವಾತ ಪ್ರದೀಪಕಲ್ಪಮ್ । ಅನಾಭಾಸಂ ಚ ನ ಕೇನಚಿತ್ ಕಲ್ಪಿತೇನ ವಿಷಯಭಾವೇನ ಅವಭಾಸತೇ । ಇತಿ ಯದಾ ಏವಂಲಕ್ಷಣಂ ಚಿತ್ತಮ್ ತದಾ ನಿಷ್ಪನ್ನಂ ಬ್ರಹ್ಮ ಸ್ವರೂಪೇಣ ನಿಷ್ಪನ್ನಂ ಚಿತ್ತಂ ಭವತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಮೇಲೆ ಹೇಳಿದ ಉಪಾಯದಿಂದ[1] ನಿಗ್ರಹಮಾಡಿಕೊಂಡ ಚಿತ್ತವು ಯಾವಾಗ ಸುಷುಪ್ತಿಯಲ್ಲಿ ಲಯವಾಗುವದಿಲ್ಲವೋ, ಮತ್ತೆ ವಿಷಯಗಳಲ್ಲಿ ವಿಕ್ಷಿಪ್ತವೂ ಆಗುವದಿಲ್ಲವೋ, ಅನಿಂಗನವಾಗಿರುವದೋ ಗಾಳಿಯಿಲ್ಲದೆಡೆಯಲ್ಲಿರುವ ದೀಪದಂತೆ[2] ಅಲುಗಾಡದೆಯೂ, ಅನಾಭಾಸವಾಗಿಯೂ ಯಾವದೊಂದು ಕಲ್ಪಿತವಾದ ವಿಷಯರೂಪದಿಂದಲೂ ತೋರದೆ ಇರುವದೋ[3], ಯಾವಾಗ ಚಿತ್ತವು ಇಂಥ ಸ್ವರೂಪದ್ದಾಗುವದೋ ಆಗ ಬ್ರಹ್ಮವಾಯಿತು, ಬ್ರಹ್ಮಸ್ವರೂಪದಿಂದ ಚಿತ್ತವು ಏರ್ಪಟ್ಟದ್ದಾಗುವದು ಎಂದರ್ಥ.

---

1. ಲಯ, ವಿಕ್ಷೇಪ, ಕಷಾಯ, ರಸಾಸ್ವಾದ-ಇವುಗಳನ್ನು ಗೆದ್ದು ಚಿತ್ತವನ್ನು ಬ್ರಹ್ಮಾಕಾರವಾಗಿ ಮಾಡುವದರಿಂದ.

2. ಗೀ. ೮-೧೯.

3. ಹೊರಗಿನ ವಿಷಯಗಳ ರೂಪವಾಗಿ ಅಥವಾ ಒಳಗಿನ ಸಬೀಜಚಿತ್ತದ ರೂಪವಾಗಿ ತೋರದೆ ಇರುವದೋ.

## ಮನೋನಿಗ್ರಹದಿಂದ ಸಿದ್ಧವಾಗುವ ಸುಖ

**ಸ್ವಸ್ಥಂ ಶಾನ್ತಂ ಸನಿರ್ವಾಣಮಕಥ್ಯಂ ಸುಖಮುತ್ತಮಮ್ ।**
**ಅಜಮಜೇನ ಜ್ಞೇಯೇನ ಸರ್ವಜ್ಞಂ ಪರಿಚಕ್ಷತೇ ॥ ೪೭ ॥**

೪೭. ಸ್ವಸ್ಥವು, ಶಾಂತವು, ಸನಿರ್ವಾಣವು, ಹೇಳುವದಕ್ಕಾಗದ ಉತ್ತಮ ಸುಖವು, ಅಜವು, ಅಜವಾದ ಜ್ಞೇಯರೂಪದಿಂದ ಸರ್ವಜ್ಞವಾದದ್ದು–ಎಂದು ಹೇಳುವರು.

(ಭಾಷ್ಯ)

೨೦೯. ಯಥೋಕ್ತಂ ಪರಮಾರ್ಥಸುಖಮ್ ಆತ್ಮಸತ್ಯಾನುಬೋಧಲಕ್ಷಣಂ ಸ್ವಸ್ಥಂ ಸ್ವಾತ್ಮನಿ ಸ್ಥಿತಮ್ । ಶಾನ್ತಂ ಸರ್ವಾನರ್ಥೋಪಶಮರೂಪಮ್ । ಸನಿರ್ವಾಣಮ್ । ನಿರ್ವೃತಿಃ ನಿರ್ವಾಣಂ ಕೈವಲ್ಯಮ್ । ಸಹ ನಿರ್ವಾಣೇನ ವರ್ತತೇ । ತಚ್ಚ ಅಕಥ್ಯಮ್ ನ ಶಕ್ಯತೇ ಕಥಯಿತುಮ್ । ಅತ್ಯನ್ತಾಸಾಧಾರಣವಿಷಯತ್ವಾತ್ । ಸುಖಮ್ ಉತ್ತಮಮ್ । ನಿರತಿಶಯಂ ಹಿ ತತ್ ಯೋಗಿಪ್ರತ್ಯಕ್ಷಮೇವ । ನ ಜಾತಮ್ ಇತಿ ಅಜಮ್ । ಯಥಾ ವಿಷಯವಿಷಯಮ್ । ಅಜೇನ ಅನುತ್ಪನ್ನೇನ ಜ್ಞೇಯೇನ ಅವ್ಯತಿರಿಕ್ತಂ ಸತ್ ಸ್ವೇನ ಸರ್ವಜ್ಞರೂಪೇಣ ಸರ್ವಜ್ಞಂ ಬ್ರಹ್ಮೈವ ಸುಖಂ ಪರಿಚಕ್ಷತೇ ಕಥಯನ್ತಿ ಬ್ರಹ್ಮವಿದಃ ॥

(ಭಾಷ್ಯಾರ್ಥ)

ಮೇಲೆ ಹೇಳಿದ ಪರಮಾರ್ಥಸುಖವು[1] ಆತ್ಮಸತ್ಯಾನುಬೋಧದಿಂದ ತಿಳಿಯಬರುವಂಥದ್ದು[2]. (ಅದು) ಸ್ವಸ್ಥವು, ತನ್ನ ಆತ್ಮನಲ್ಲಿಯೇ ಇರತಕ್ಕದ್ದು[3]. ಶಾಂತವು ಎಲ್ಲಾ ಬಗೆಯ ಅನರ್ಥಗಳೂ ನಾಶವಾಗಿರುವದರ ಸ್ವರೂಪದ್ದು[4]. ಸನಿರ್ವಾಣವು; ನಿರ್ವಾಣವೆಂದರೆ ಸುಖವು, ಕೈವಲ್ಯವು, ನಿರ್ವಾಣದೊಡನೆ ಇರತಕ್ಕದ್ದು. ಮತ್ತು ಅದು ಅಕಥ್ಯವು, ಹೇಳುವದಕ್ಕೆ ಶಕ್ಯವಲ್ಲ; ಏಕೆಂದರೆ ಅತ್ಯಂತವಾಗಿ ಅಸಾಧಾರಣ

---

1. ಸಮಾಧಿಯಿಂದ ಉಂಟಾಗುವದೆಂದು ಹೇಳಿದ್ದರಿಂದ ಕೃತಕವೆಂದು ತಿಳಿಯಬಾರದು ಎಂದು ಭಾವ.

2. ಜ್ಞಾನದಿಂದ ತಿಳಿಯುವ ತತ್ತ್ವವೂ ಈ ಸುಖವೂ ಒಂದೇ.

3. ಹೊರಗಿನ ವಿಷಯದಿಂದ ಉಂಟಾಗುವದಲ್ಲ.

4. ದುಃಖಮಿಶ್ರವಲ್ಲದ ಸ್ವರೂಪಸುಖವು.

ವಾದ ವಿಷಯವುಳ್ಳದ್ದು[1]. ಉತ್ತಮವಾದ ಸುಖವು; ಏಕೆಂದರೆ ಅದು ಮಿಗಿಲಿಲ್ಲದೆ ಯೋಗಿಗಳಿಗೆ ಮಾತ್ರ ಗೋಚರವಾಗುವ (ಸುಖವು). ವಿಷಯಗಳ ವಿಷಯವಾದ (ಸುಖದಂತೆ) ಹುಟ್ಟುವದಲ್ಲವಾದ್ದರಿಂದ ಅದು ಅಜವು. ಅಜವಾದ ಹುಟ್ಟದೆ ಇರುವ ಜ್ಞೇಯಕ್ಕಿಂತ ಭಿನ್ನವಾಗಿರುವದಿಲ್ಲವಾಗಿ ತನ್ನ ಸರ್ವಜ್ಞಸ್ವರೂಪದಿಂದ ಸರ್ವಜ್ಞವಾದ ಬ್ರಹ್ಮವೇ[2] (ಆ) ಸುಖವು ಎಂದು ಬ್ರಹ್ಮವನ್ನು ಬಲ್ಲವರು ಹೇಳುತ್ತಾರೆ.

(ಭಾಷ್ಯ)

೨೧೦. ಸರ್ವೋಽಪಿ ಅಯಂ ಮನೋನಿಗ್ರಹಾದಿಃ ಮೃಲ್ಲೋಹಾದಿವತ್ ಸೃಷ್ಟಿಃ ಉಪಾಸನಾ ಚ ಉಕ್ತಾ ಪರಮಾರ್ಥಸ್ವರೂಪಪ್ರತಿಪತ್ತ್ಯುಪಾಯತ್ವೇನ ನ ಪರಮಾರ್ಥಸತ್ಯಾ ಇತಿ[3] । ಪರಮಾರ್ಥಸತ್ಯಂ ತು—

(ಭಾಷ್ಯಾರ್ಥ)

ಈ ಮನೋನಿಗ್ರಹವೇ ಮುಂತಾದದ್ದು ಮಣ್ಣು, ಕಬ್ಬಿಣ—ಮುಂತಾದವುಗಳಂತೆ ಎಂಬ ಸೃಷ್ಟಿ ಮತ್ತು ಉಪಾಸನೆ—ಎಂಬುದೆಲ್ಲವೂ ಪರಮಾರ್ಥಸ್ವರೂಪವನ್ನು ತಿಳಿಯುವದಕ್ಕೆ ಹೇಳಿದ್ದು, ಪರಮಾರ್ಥಸತ್ಯವಲ್ಲ. ಪರಮಾರ್ಥಸತ್ಯವಾದರೋ—

## ಪ್ರಕರಣದ ಉಪಸಂಹಾರ

**ನ ಕಶ್ಚಿಜ್ಜಾಯತೇ ಜೀವಃ ಸಮ್ಭವೋಽಸ್ಯ ನ ವಿದ್ಯತೇ ।**
**ಏತತ್ತದುತ್ತಮಂ ಸತ್ಯಂ ಯತ್ರ ಕಿಂಚಿನ್ನ ಜಾಯತೇ ॥ ೪೮ ॥**

೪೮. ಯಾವ ಜೀವನೂ ಹುಟ್ಟುವದಿಲ್ಲ; ಇವನಿಗೆ ಸಂಭವವು ಇಲ್ಲ. ಎಲ್ಲಿ ಯಾವದೂ ಹುಟ್ಟುವದಿಲ್ಲವೋ ಅಂಥ ಇದೇ ಉತ್ತಮ ಸತ್ಯವು.

(ಭಾಷ್ಯ)

೨೧೧. ನ ಕಶ್ಚಿತ್ ಜಾಯತೇ ಜೀವಃ ಕರ್ತಾ ಭೋಕ್ತಾ ಚ ನ ಉತ್ಪದ್ಯತೇ ಕೇನಚಿದಪಿ ಪ್ರಕಾರೇಣ । ಅತಃ ಸ್ವಭಾವತಃ ಅಜಸ್ಯ ಅಸ್ಯ ಏಕಸ್ಯ ಆತ್ಮನಃ ಸಮ್ಭವಃ

1. ಇಂಥ ಸುಖದಂತೆ ಎಂದು ಬ್ರಹ್ಮಾನಂದಕ್ಕೆ ಹೋಲಿಕೆಯನ್ನು ಕೊಡುವದಕ್ಕೆ ಬರುವದಿಲ್ಲ. ಉಪನಿಷತ್ತಿನಲ್ಲಿ 'ಶಾಂತಂ ಶಿವಮದ್ವೈತಂ ಚತುರ್ಥಂ ಮನ್ಯನ್ತೇ' ಎಂಬ ವಾಕ್ಯದ ಅರ್ಥವೆಲ್ಲ ಇಲ್ಲಿ ಬಂದಿರುತ್ತದೆ.

2. ಬ್ರಹ್ಮಕ್ಕೂ ಬ್ರಹ್ಮಾಕಾರವಾದ ಚಿತ್ತದ ಆನಂದಕ್ಕೂ ಭೇದವಿಲ್ಲ ಎಂದು ಭಾವ.

3. ಇಲ್ಲಿ 'ಇತಿ' ಏಕೆ ಬಂದಿದೆ ಎಂಬುದು ಗೊತ್ತಾಗುವದಿಲ್ಲ.

ಕಾರಣಂ ನ ವಿದ್ಯತೇ ನಾಸ್ತಿ । ಯಸ್ಮಾತ್ ನ ವಿದ್ಯತೇ ಅಸ್ಯ ಕಾರಣಂ ತಸ್ಮಾತ್ ನ ಕಶ್ಚಿತ್ ಜಾಯತೇ ಜೀವಃ ಇತ್ಯೇತತ್ । ಪೂರ್ವೇಷು ಉಪಾಯತ್ವೇನ ಉಕ್ತಾನಾಂ ಸತ್ಯಾನಾಮ್ ಏತತ್ ತತ್[1] ಉತ್ತಮಂ ಸತ್ಯಂ ಯತ್ರ[2] ಯಸ್ಮಿನ್ ಸತ್ಯಸ್ವರೂಪೇ ಬ್ರಹ್ಮಣಿ ಅಣುಮಾತ್ರಮಪಿ ಕಿಂಚಿತ್ ನ ಜಾಯತೇ ಇತಿ ॥

(ಭಾಷ್ಯಾರ್ಥ)

ಯಾವ ಜೀವನೂ ಹುಟ್ಟುವದಿಲ್ಲ, (ಯಾವನೊಬ್ಬ) ಕರ್ತೃಭೋಕ್ತೃವೂ ಯಾವ ಪ್ರಕಾರದಿಂದಲೂ ಉಂಟಾಗುವದಿಲ್ಲ. ಆದ್ದರಿಂದ ಸ್ವಭಾವದಿಂದಲೇ ಅಜನಾಗಿರುವ ಏಕನಾಗಿರುವ ಈ ಆತ್ಮನಿಗೆ ಸಂಭವವು ಕಾರಣವು, ಇರುವದಿಲ್ಲ, ಇಲ್ಲ. ಈತನಿಗೆ (ಮತ್ತೊಂದು) ಕಾರಣವೇ ಇಲ್ಲವಲ್ಲವೆ, ಆದ್ದರಿಂದ ಯಾವ ಜೀವನೂ ಹುಟ್ಟುವದಿಲ್ಲ ಎಂದು ಅಭಿಪ್ರಾಯ. ಹಿಂದಿನ (ಶ್ಲೋಕಗಳಲ್ಲಿ ಜ್ಞಾನಕ್ಕೆ) ಉಪಾಯವೆಂದು ಹೇಳಿದ ಸತ್ಯಗಳಲ್ಲೆಲ್ಲ, ಆ ಇದೇ ಉತ್ತಮ ಸತ್ಯವು. ಇಲ್ಲಿ, ಈ ಸತ್ಯಸ್ವರೂಪವಾದ ಬ್ರಹ್ಮದಲ್ಲಿ ಯಾವದೂ ಅಣುಮಾತ್ರವೂ ಹುಟ್ಟುವದಿಲ್ಲ.



1–2. ಈ ಮಾತು ಬಿಟ್ಟುಹೋಗಿದೆ ಎಂದು ತೋರುತ್ತದೆ.

# ೪. ಅಲಾತಶಾಂತಿಪ್ರಕರಣ

---

## ಈ ಪ್ರಕರಣದ ಸಂಬಂಧ

(ಭಾಷ್ಯ)

೨೧೨. ಓಙ್ಕಾರನಿರ್ಣಯದ್ವಾರೇಣ ಆಗಮತಃ ಪ್ರತಿಜ್ಞಾತಸ್ಯ ಅದ್ವೈತಸ್ಯ, ಬಾಹ್ಯವಿಷಯಭೇದವೈತಥ್ಯಾಚ್ಚ ಸಿದ್ಧಸ್ಯ, ಪುನಃ ಅದ್ವೈತೇ ಶಾಸ್ತ್ರಯುಕ್ತಿಭ್ಯಾಂ ಸಾಕ್ಷಾತ್ ನಿರ್ಧಾರಿತಸ್ಯ "ಏತತ್ ತತ್ ಉತ್ತಮಂ ಸತ್ಯಮ್" (೩-೪೮) ಇತಿ ಉಪಸಂಹಾರಃ ಕೃತಃ ಅನ್ತೇ । ತಸ್ಯೈತಸ್ಯ ಆಗಮಾರ್ಥಸ್ಯ ಅದ್ವೈತದರ್ಶನಸ್ಯ ಪ್ರತಿಪಕ್ಷಭೂತಾಃ ದ್ವೈತಿನಃ ವೈನಾಶಿಕಾಶ್ಚ । ತೇಷಾಂ ಚ ಅನ್ಯೋನ್ಯವಿರೋಧಾತ್ ರಾಗದ್ವೇಷಾದಿಕ್ಲೇಶಾಸ್ಪದಂ ದರ್ಶನಮ್ ಇತಿ ಮಿಥ್ಯಾದರ್ಶನತ್ವಂ ಸೂಚಿತಮ್ । ಕ್ಲೇಶಾನಾಸ್ಪದತ್ವಾತ್ ಸಮ್ಯಗ್ದರ್ಶನಮ್ ಇತಿ ಅದ್ವೈತದರ್ಶನಸ್ತುತಯೇ[1] । ತದಿಹ ವಿಸ್ತರೇಣ ಅನ್ಯೋನ್ಯವಿರುದ್ಧತಯಾ ಅಸಮ್ಯಗ್ದರ್ಶನತ್ವಂ ಪ್ರದರ್ಶ್ಯ ತತ್ಪ್ರತಿಷೇಧೇನ ಅದ್ವೈತದರ್ಶನಸಿದ್ಧಿಃ ಉಪಸಂಹರ್ತವ್ಯಾ ಅವೀತನ್ಯಾಯೇನ ಇತಿ ಅಲಾತಶಾನ್ತಿಪ್ರಕರಣಮ್[2] ಆರಭ್ಯತೇ—

(ಭಾಷ್ಯಾರ್ಥ)

ಓಂಕಾರವನ್ನು ನಿರ್ಣಯ (ಮಾಡುವದರ) ಮೂಲಕ **ಆಗಮದಿಂದ**[3] ಮೊದಲು ತಿಳಿಸಿ, ಹೊರಗಿನ ಬೇರೆಬೇರೆಯ ವಿಷಯಗಳು ವಿತಥವಾಗಿರುವವೆಂಬ (ಕಾರಣ)ದಿಂದಲೂ[4] ಸಿದ್ಧವಾಗಿರುವ ಅದ್ವೈತವನ್ನು ಮತ್ತೆ ಅದ್ವೈತ(ಪ್ರಕರಣ)ದಲ್ಲಿ ಶಾಸ್ತ್ರಯುಕ್ತಿಗಳಿಂದ ಸಾಕ್ಷಾತ್ತಾಗಿ[5] ಗೊತ್ತುಪಡಿಸಿ (ಅದನ್ನು) "ಏತತ್ತದುತ್ತಮಂ

---

1. 'ಸ್ತೂಯತೇ' ಎಂಬ ಆ॥ ಕಾ॥ ಪಾಠಕ್ಕಿಂತ ಈ ವಾ॥ ವ್ಯ॥ ಪಾಠವು ಮೇಲು.

2. 'ಅಲಾತಶಾನ್ತಿರಾರಭ್ಯತೇ' ಆ॥ ವ್ಯ॥

3. ಉಪದೇಶಪ್ರಧಾನವಾದ ಆಗಮಪ್ರಕರಣದಿಂದ.

4. ಯುಕ್ತಿಯಿಂದಲೂ.

5. ದ್ವೈತವು ಮಿಥ್ಯೆಯೆಂದು ತೋರಿಸುವದರ ಮೂಲಕ ಅದ್ವೈತವನ್ನು ಗೊತ್ತುಪಡಿಸುವ ವಕ್ರರೀತಿಯನ್ನು ಬಿಟ್ಟು ನೇರವಾಗಿಯೇ ಅಜಾತಿಯನ್ನು ತಿಳಿಸುವದರಿಂದ **'ಸಾಕ್ಷಾತ್ತಾಗಿ'** ಎಂದಿದೆ.

ಸತ್ಯಮ್" ಅಂಥ ಇದೇ ಉತ್ತಮಸತ್ಯವು (೩-೪೮) ಎಂದು ಕೊನೆಯಲ್ಲಿ ಉಪಸಂಹಾರವನ್ನು ಮಾಡಿದ್ದಾಗಿದೆ. ಆಗಮಾರ್ಥವಾದ[1] ಆ ಈ ಅದ್ವೈತದರ್ಶನಕ್ಕೆ ದ್ವೈತಿಗಳೂ ವೈನಾಶಿಕರೂ[2] ಎದುರಾಳಿಗಳಾಗಿರುವರು[3]. ಮತ್ತು (ಇವರು) ಒಬ್ಬರಿಗೊಬ್ಬರು ವಿರೋಧವಾಗಿ (ವಾದಿಸುತ್ತಿ)ರುವದರಿಂದ ಅವರ ದರ್ಶನವು ರಾಗದ್ವೇಷಾದಿಕ್ಲೇಶಗಳಿಗೆ ಆಶ್ರಯವಾಗಿರುತ್ತದೆಯಾಗಿ ಮಿಥ್ಯಾದರ್ಶನವು ಎಂದು ಸೂಚಿಸಿದ್ದಾಯಿತು[4]. (ಯಾವ) ಕ್ಲೇಶಕ್ಕೂ ಆಶ್ರಯವಲ್ಲದ್ದರಿಂದ (ಇದು) ಸರಿಯಾದ ದರ್ಶನವು ಎಂದು ಅದ್ವೈತದರ್ಶನವನ್ನು ಹೊಗಳುವದಕ್ಕಾಗಿ (ಹೀಗೆ ಸೂಚಿಸಲಾಗಿದೆ.) ಆದ್ದರಿಂದ ಇಲ್ಲಿ (ಅವರ ದರ್ಶನಗಳು) ಒಂದಕ್ಕೊಂದಕ್ಕೆ ವಿರುದ್ಧವಾಗಿರುವದರಿಂದ (ಅವು) ಸರಿಯಾದ ದರ್ಶನಗಳಲ್ಲವೆಂಬುದನ್ನು ವಿಸ್ತಾರವಾಗಿ ತೋರಿಸಿಕೊಟ್ಟು ಅವನ್ನು ಅಲ್ಲಗಳೆಯುವಮೂಲಕವಾಗಿ ಅವೀತನ್ಯಾಯದಿಂದ[5] ಅದ್ವೈತದರ್ಶನವು ಸಿದ್ಧಿಯಾಗುವದೆಂದು[6] ಉಪಸಂಹಾರಮಾಡುವದಕ್ಕಾಗಿ **ಅಲಾತಶಾಂತಿಪ್ರಕರಣ**ವನ್ನು ಆರಂಭಿಸಿರುತ್ತದೆ.

## ಮಂಗಲಾಚರಣೆ

(ಭಾಷ್ಯ)

೨೧೩. ತತ್ರ ಅದ್ವೈತದರ್ಶನಸಮ್ಪ್ರದಾಯಕರ್ತುಃ ಅದ್ವೈತಸ್ವರೂಪೇಣೈವ ನಮಸ್ಕಾರಾರ್ಥಃ ಅಯಂ ಆದ್ಯಶ್ಲೋಕಃ । ಆಚಾರ್ಯಪೂಜಾ ಹಿ ಅಭಿಪ್ರೇತಾರ್ಥಸಿದ್ಧ್ಯರ್ಥಾ ಇಷ್ಯತೇ ಶಾಸ್ತ್ರಾರಮ್ಭೇ ॥

---

1. ಶಾಸ್ತ್ರಪ್ರಮಾಣಸಿದ್ಧವಾದ.

2. ಸಾಂಖ್ಯರು, ವೈಶೇಷಿಕರು, ಜೈನರು-ಮುಂತಾದ ದ್ವೈತಿಗಳೂ ಬೌದ್ಧರೆಂಬ ವೈನಾಶಿಕರೂ.

3. ಎದುರಾಳಿಗಳೆಂದು ತಿಳಿದುಕೊಂಡಿರುತ್ತಾರೆ; ಪರಮಾರ್ಥವಾಗಿ ಅದ್ವೈತಕ್ಕೆ ಎದುರಾಳಿಗಳೇ ಇಲ್ಲ.

4. ೩-೧೭, ೧೮ ರ ಭಾಷ್ಯವನ್ನೂ ೨-೩೩ ರಿಂದ ೩೫ ರ ವರೆಗಿನ ಭಾಷ್ಯವನ್ನೂ ನೋಡಿರಿ.

5. ಅನುಮಾನದಲ್ಲಿ ವೀತ, ಅವೀತ-ಎಂದು ಎರಡು ಬಗೆ. 'ಎಲ್ಲಿ ಹೊಗೆಯಿರುವದೋ ಅಲ್ಲಿ ಬೆಂಕಿಯಿರುವದು' ಎಂದು ಅನ್ವಯರೀತಿಯಿಂದ ಊಹಿಸುವದು ವೀತವು; 'ಎಲ್ಲಿ ಬೆಂಕಿಯಿರುವದಿಲ್ಲವೋ ಅಲ್ಲಿ ಹೊಗೆಯಿರುವದಿಲ್ಲ' ಎಂದು ವ್ಯತಿರೇಕದಿಂದ ಊಹಿಸುವದು ಅವೀತವು. ಅದ್ವೈತವು ಸರಿಯಾದ ದರ್ಶನವೆಂದು ಒಂದೆ ತೋರಿಸಿರುವದು ವೀತ; ದ್ವೈತದರ್ಶನಗಳು ಸರಿಯಲ್ಲ ಎಂದು ಮುಂದೆ ತೋರಿಸಿಕೊಡುವದು ಅವೀತ.

6. ಅದ್ವೈತವೇ ಸಿದ್ಧವಾಗುವದರಿಂದ ಅದ್ವೈತದರ್ಶನವೇ ಸರಿಯೆಂದಾಗುವದು ಎಂದರ್ಥ.

(ಭಾಷ್ಯಾರ್ಥ)

ಇಲ್ಲಿ ಅದ್ವೈತದರ್ಶನಕ್ಕೆ ಸಂಪ್ರದಾಯಪ್ರವರ್ತಕನಾದ (ನಾರಾಯಣನನ್ನು) ಅದ್ವೈತಸ್ವರೂಪದಿಂದಲೇ ನಮಸ್ಕಾರ (ಮಾಡುವ)ದಕ್ಕಾಗಿ ಈ ಮೊದಲನೆಯ ಶ್ಲೋಕವು ಬಂದಿರುತ್ತದೆ. ಏಕೆಂದರೆ ಶಾಸ್ತ್ರದ ಪ್ರಾರಂಭದಲ್ಲಿ ಆಚಾರ್ಯರನ್ನು ಗೌರವಿಸುವದು ಇಷ್ಟಾರ್ಥವು[1] ನೆರವೇರುವದಕ್ಕೆ (ಕಾರಣ)ವೆಂದು ಎಣಿಸಲ್ಪಟ್ಟಿರುತ್ತದೆ.

**ಜ್ಞಾನೇನಾಕಾಶಕಲ್ಪೇನ ಧರ್ಮಾನ್ ಯೋ ಗಗನೋಪಮಾನ್ ।**
**ಜ್ಞೇಯಾಭಿನ್ನೇನ ಸಮ್ಬುದ್ಧಸ್ತಂ ವನ್ದೇ ದ್ವಿಪದಾಂ ವರಮ್ ॥ ೧ ॥**

೧. ಗಗನೋಪಮರಾದ ಧರ್ಮರುಗಳನ್ನು ಆಕಾಶಕಲ್ಪವಾದ ಜ್ಞೇಯಾಭಿನ್ನವಾದ ಜ್ಞಾನದಿಂದ ಯಾವಾತನು ಅರಿತಿರುವನೋ ಆ ಪುರುಷ ಶ್ರೇಷ್ಠನನ್ನು ನಮಸ್ಕರಿಸುತ್ತೇನೆ.

(ಭಾಷ್ಯ)

೨೧೪. ಆಕಾಶೇನ ಈಷತ್ ಅಸಮಾಪ್ತಮ್ ಆಕಾಶಕಲ್ಪಮ್ । ಆಕಾಶತುಲ್ಯಮ್ ಇತ್ಯೇತತ್[2] । ತೇನ ಆಕಾಶಕಲ್ಪೇನ ಜ್ಞಾನೇನ । ಕಿಮ್ ? ಧರ್ಮಾನ್ ಆತ್ಮನಃ । ಕಿಂವಿಶಿಷ್ಟಾನ್ ? ಗಗನೋಪಮಾನ್ ಗಗನಮ್ ಉಪಮಾ ಯೇಷಾಂ ತೇ ಗಗನೋಪಮಾಃ । ತಾನ್ ಆತ್ಮನಃ ಧರ್ಮಾನ್ । ಜ್ಞಾನಸ್ಯೈವ ಪುನರ್ವಿಶೇಷಣಮ್–ಜ್ಞೇಯೈಃ ಧರ್ಮೈಃ ಆತ್ಮಭಿಃ ಅಭಿನ್ನಮ್ ಅಗ್ನ್ಯುಷ್ಣವತ್ ಸವಿತೃಪ್ರಕಾಶವಚ್ಚ ಜ್ಞಾನಮ್ । ತೇನ ಜ್ಞೇಯಾಭಿನ್ನೇನ ಜ್ಞಾನೇನ ಆಕಾಶಕಲ್ಪೇನ ಜ್ಞೇಯಾತ್ಮಸ್ವರೂಪಾವ್ಯತಿರಿಕ್ತೇನ ಗಗನೋಪಮಾನ್ ಧರ್ಮಾನ್ ಯಃ ಸಂಬುದ್ಧಃ ಸಂಬುದ್ಧವಾನ್ ನಿತ್ಯಮೇವ[3] ಈಶ್ವರಃ ಯೋ ನಾರಾಯಣಾಖ್ಯಃ ತಂ ವನ್ದೇ ಅಭಿವಾದಯೇ । ದ್ವಿಪದಾಂ ವರಂ ದ್ವಿಪದೋಪಲಕ್ಷಿತಾನಾಂ ಪುರುಷಾಣಾಂ ವರಂ ಪ್ರಧಾನಮ್ । ಪುರುಷೋತ್ತಮಮ್ ಇತ್ಯಭಿಪ್ರಾಯಃ । ಉಪದೇಷ್ಟೃನಮಸ್ಕಾರಮುಖೇನ ಜ್ಞಾನಜ್ಞೇಯಜ್ಞಾತೃಭೇದರಹಿತಂ ಪರಮಾರ್ಥತತ್ತ್ವದರ್ಶನಮ್ ಇಹ ಪ್ರಕರಣೇ ಪ್ರತಿಪಿಪಾದಯಿಷಿತಂ ಪ್ರತಿಪಕ್ಷಪ್ರತಿಷೇಧದ್ವಾರೇಣ ಪ್ರತಿಜ್ಞಾತಂ ಭವತಿ ॥

---

1. ಗ್ರಂಥವು ನಿರ್ವಿಘ್ನವಾಗಿ ಮುಗಿಯುವದು, ಶಿಷ್ಯರಲ್ಲಿ ಹರಡಿಕೊಳ್ಳುವದು–ಮುಂತಾದದ್ದು. ಇಲ್ಲಿ ಶಾಸ್ತ್ರ ಎಂಬ ಮಾತಿನ ವಿಷಯಕ್ಕೆ ಪೀಠಿಕೆಯನ್ನು ನೋಡಿ.

2. ' ತುಲ್ಯಮೇತತ್ ' ಎಂಬ ಆ॥ ಪಾಠವು ಅಚ್ಚಿನ ಅಥವಾ ಬರೆದವರ ತಪ್ಪು.

3. ' ಸಂಬುದ್ಧವಾನಿತ್ಯಯಮೇವ ' ಎಂಬ ಆ॥ ವ್ಯೆ॥ ಗಳಗಿಂತ ಈ॥ ವಾ॥ ಕಾ॥ ಪಾಠವು ಮೇಲು.

(ಭಾಷ್ಯಾರ್ಥ)

ಆಕಾಶವೇ (ಆಗುವದಕ್ಕೆ) ಸ್ವಲ್ಪ ಕಡಿಮೆಯಾದದ್ದು ಆಕಾಶಕಲ್ಪವು. ಆಕಾಶಕ್ಕೆ ಸಮಾನವಾದದ್ದು, ಅಂಥ ಆಕಾಶಕಲ್ಪವಾದ ಜ್ಞಾನದಿಂದ. ಏನನ್ನು ? ಎಂದರೆ) ಧರ್ಮರುಗಳನ್ನು ಆತ್ಮರುಗಳನ್ನು[1]. ಎಂಥ ಆತ್ಮರುಗಳನ್ನು ? ಎಂದರೆ ಗಗನೋಪಮರಾದ ಆಕಾಶವು ಯಾರಿಗೆ ಹೋಲಿಕೆಯಾಗಿರುವದೋ ಅವರು ಗಗನೋಪಮರು : ಅಂಥ ಆತ್ಮರೆಂಬ ಧರ್ಮರುಗಳನ್ನು. (ಈಗ) ಜ್ಞಾನಕ್ಕೇ ಮತ್ತೊಂದು ವಿಶೇಷಣವನ್ನು ಕೊಡುತ್ತಾರೆ : (ಈ) ಜ್ಞಾನವು ಜ್ಞೇಯರಾದ ಆತ್ಮರುಗಳೆಂಬ ಧರ್ಮರುಗಳಿಗಿಂತ ಆತ್ಮರುಗಳಿಗಿಂತ ಬೇರೆಯಲ್ಲದೆ ಬೆಂಕಿಯ ಬಿಸಿಯಂತೆಯೂ ಸೂರ್ಯನ ಬೆಳಕಿನಂತೆಯೂ (ಅದೇ ರೂಪದಲ್ಲಿ)ರುವದು. ಹೀಗೆ ಅರಿಯಲ್ಪಡತಕ್ಕ (ಆತ್ಮರುಗಳಿಗಿಂತ) ಬೇರೆಯಲ್ಲದೆಯೂ ಆಕಾಶಸಮಾನವಾಗಿಯೂ ಇರುವ ಜ್ಞೇಯರಾದ ಆತ್ಮರುಗಳ ಸ್ವರೂಪಕ್ಕಿಂತ ಬೇರೆಯಾಗಿಲ್ಲದ ಗಗನೋಪಮರಾದ ಧರ್ಮರುಗಳನ್ನು ಯಾವ **ನಾರಾಯಣನೆಂಬ ಹೆಸರಿನ**[2] ಈಶ್ವರನು ಯಾವಾಗಲೂ[3] ಅರಿತಿರುವನೋ ಆತನನ್ನು ನಮಸ್ಕರಿಸುತ್ತೇನೆ. ದ್ವಿಪದಾಂ ವರಂ (ಎರಡು ಕಾಲಿನವರಲ್ಲಿ ಶ್ರೇಷ್ಠನಾದವನನ್ನು ಎಂದು ಮೂಲದಲ್ಲಿದೆಯಷ್ಟೆ, ಇದಕ್ಕೆ) ಎರಡುಕಾಲುಗಳಿರುವದೆಂಬ ಉಪಲಕ್ಷಣವುಳ್ಳ ಪುರುಷರಲ್ಲಿ ವರನಾದ, ಮುಖ್ಯನಾದ (ಎಂಪರ್ಥ) ; ಪುರುಷೋತ್ತಮನನ್ನು[4] (ನಮಸ್ಕರಿಸುತ್ತೇನೆ) ಎಂದು ಅಭಿಪ್ರಾಯ.

ಉಪದೇಶಮಾಡಿದ (ಗುರುವನ್ನು) ನಮಸ್ಕಾರಮಾಡುವವರಮೂಲಕ ಜ್ಞಾನ (ಅರಿವು), ಜ್ಞೇಯ (ಅರಿಯಲ್ಪಡತಕ್ಕದ್ದು), ಜ್ಞಾತೃ (ಅರಿಯುವವನು)–ಎಂಬ ಭೇದ

---

1. ಧರ್ಮ ಎಂಬ ಮಾತನ್ನು ಆತ್ಮರು ಎಂಬರ್ಥದಲ್ಲಿ ಕಠೋಪನಿಷತ್ತಿನಲ್ಲಿ (೨–೧–೧೪) ಉಪಯೋಗಿಸಿದೆ. ಈ ಪ್ರಕರಣದಲ್ಲಿರುವ ಬೌದ್ಧಪ್ರಕ್ರಿಯಾಸಾಮ್ಯವಿಚಾರವಾಗಿ ಪೀಠಿಕೆಯನ್ನೂ ಪರಿಶಿಷ್ಟವನ್ನೂ ನೋಡಿರಿ.

2. ಗೌಡಪಾದರವರು ಬದರಿಕಾಶ್ರಮದಲ್ಲಿ ತಪಸ್ಸುಮಾಡಲು ನಾರಾಯಣಭಗವಂತನು ಪ್ರಸನ್ನನಾಗಿ ಅವರಿಗೆ ಬ್ರಹ್ಮವಿದ್ಯೆಯನ್ನು ಉಪದೇಶಿಸಿದನಾಗಿ ಆ ಪರಮೇಶ್ವರನೇ ಪರಮಗುರು ಎಂದು ಆ|| ಟೀಕೆಯಲ್ಲಿದೆ. ಪೀಠಿಕೆಯನ್ನು ನೋಡಿ.

3. ಜ್ಞಾನ, ಜ್ಞಾತೃ, ಜ್ಞೇಯ-ಇವೆಲ್ಲವೂ ಒಂದೇ ತತ್ತ್ವದ ತೋರಿಕೆಗಳು ಎಂದು ಭಾವ; ೪–೪೭ನ್ನು ನೋಡಿ. ಉಪದೇಶಸಾಹಸ್ರೀ ಗದ್ಯಭಾಗದ ಎರಡನೆಯ ಪ್ರಕರಣದಲ್ಲಿಯೂ ಇದನ್ನು ವಿಸ್ತಾರವಾಗಿ ಚರ್ಚಿಸಿ ತೋರಿಸಿರುತ್ತದೆ. ಆತ್ಮನು ನಿತ್ಯಜ್ಞಾನದಿಂದ ಅರಿಯುವನೆಂಬ ಭಾವವನ್ನು ೧–೧೨, ೨–೧೨ ರಲ್ಲಿಯೂ ಹೊರಪಡಿಸಿದೆ.

4. ಈ ಅದ್ವೈತಜ್ಞಾನವನ್ನು ಪಡೆಯುವದೇ ಪುರುಷೋತ್ತಮತ್ವವು ಎಂಬ ಸೂಚನೆ ಇಲ್ಲಿದೆ.

ವಿಲ್ಲದ ಪರಮಾರ್ಥತತ್ತ್ವದರ್ಶನವನ್ನು ಈ ಪ್ರಕರಣದಲ್ಲಿ ಪ್ರತಿಪಕ್ಷಗಳ **ಖಂಡನೆಯ** ದ್ವಾರದಿಂದ ಪ್ರತಿಪಾದಿಸಬೇಕೆಂದಿರುತ್ತೇವೆ ಎಂದು ಪ್ರತಿಜ್ಞೆಯನ್ನು **ಮಾಡಿ**ದಂತಾಯಿತು.

**(ಭಾಷ್ಯ)**

೨೧೫. ಅಧುನಾ ಅದ್ವೈತದರ್ಶನಯೋಗಸ್ಯ ನಮಸ್ಕಾರಃ ತತ್ಸ್ತುತಯೇ–

**(ಭಾಷ್ಯಾರ್ಥ)**

ಈಗ ಅದ್ವೈತದರ್ಶನವೆಂಬ ಯೋಗವನ್ನು ನಮಸ್ಕಾರ(ಮಾಡುತ್ತಾರೆ. ಹೀಗೆ ನಮಸ್ಕರಿಸು)ವದು ಅದನ್ನು ಹೊಗಳುವದಕ್ಕಾಗಿ.

**ಅಸ್ಪರ್ಶಯೋಗೋ ವೈ ನಾಮ ಸರ್ವಸತ್ತ್ವಸುಖೋ ಹಿತಃ ।**
**ಅವಿವಾದೋಽವಿರುದ್ಧಶ್ಚ ದೇಶಿತಸ್ತಂ ನಮಾಮ್ಯಹಮ್ ॥ ೨ ॥**

೨. ಸರ್ವಸತ್ತ್ವಸುಖವೂ ಹಿತವೂ ಅವಿವಾದವೂ ಅವಿರುದ್ಧವೂ ಆದ ಅಸ್ಪರ್ಶಯೋಗವೆಂದು ಪ್ರಸಿದ್ಧವಾಗಿರುವ (ಯಾವ ಯೋಗವು) ದೇಶಿತವಾಗಿರುವದೋ ಅದನ್ನು ನಾನು ನಮಸ್ಕರಿಸುತ್ತೇನೆ.

**(ಭಾಷ್ಯ)**

೨೧೬. ಸ್ಪರ್ಶನಂ ಸ್ಪರ್ಶಃ ಸಮ್ಬನ್ಧಃ ನ ವಿದ್ಯತೇ ಯಸ್ಯ ಯೋಗಸ್ಯ ಕೇನಚಿತ್ ಕದಾಚಿದಪಿ ಸಃ ಅಸ್ಪರ್ಶಯೋಗಃ ಬ್ರಹ್ಮಸ್ವಭಾವ ಏವ । ವೈ ನಾಮ ಇತಿ ಬ್ರಹ್ಮವಿದಾಮ್ ಅಸ್ಪರ್ಶಯೋಗ ಇತ್ಯೇವಂ ಪ್ರಸಿದ್ಧಃ ಇತ್ಯರ್ಥಃ । ಸ ಚ ಸರ್ವಸತ್ತ್ವಸುಖಃ । ಭವತಿ ಕಶ್ಚಿತ್ ಅತ್ಯನ್ತಸುಖಸಾಧನವಿಶಿಷ್ಟೋಽಪಿ ದುಃಖರೂಪಃ ಯಥಾ ತಪಃ । ಅಯಂ ತು ನ ತಥಾ । ಕಿಂ ತರ್ಹಿ ? ಸರ್ವಸತ್ತ್ವಾನಾಂ ಸುಖಃ । ತಥಾ ಇಹ ಭವತಿ ಕಶ್ಚಿತ್ ವಿಷಯೋಪಭೋಗಃ ಸುಖಃ ನ ಹಿತಃ । ಅಯಂ ತು ಸುಖಃ ಹಿತಶ್ಚ । ನಿತ್ಯಮ್ ಅಪ್ರಚಲಿತಸ್ವಭಾವತ್ವಾತ್ । ಕಿಂ ಚ ಅವಿವಾದಃ । ವಿರುದ್ಧಂ ವದನಂ ವಿವಾದಃ ಪಕ್ಷಪ್ರತಿಪಕ್ಷಪರಿಗ್ರಹೇಣ ಯಸ್ಮಿನ್ ನ ವಿದ್ಯತೇ ಸಃ ಅವಿವಾದಃ । ಕಸ್ಮಾತ್ ? ಯತಃ ಅವಿರುದ್ಧಶ್ಚ । ಯಃ ಈದೃಶಃ ಯೋಗಃ ದೇಶಿತಃ ಉಪದಿಷ್ಟಃ ಶಾಸ್ತ್ರೇಣ ತಂ ನಮಾಮಿ ಅಹಮ್ । ಪ್ರಣಮಾಮಿ ಇತ್ಯರ್ಥಃ ॥

1. 'ವಿರುದ್ಧವದನಂ' ಆ||-

(ಭಾಷ್ಯಾರ್ಥ)

ಸ್ಪರ್ಶವು (ಎಂದರೆ) ಮುಟ್ಟುವದು ಸಂಬಂಧವು ಯಾವ ಯೋಗಕ್ಕೆ ಯಾವದರೊಡನೆಯೂ ಎಂದಿಗೂ ಇಲ್ಲವೋ ಅದು ಅಸ್ಪರ್ಶಯೋಗವು; (ಇದು) ಬ್ರಹ್ಮಸ್ವಭಾವವೇ[1]. (ಮೂಲದಲ್ಲಿರುವ) ವೈ ನಾಮ ಎಂಬ (ನಿಪಾತಗಳಿಗೆ) ಬ್ರಹ್ಮವೇತ್ತರುಗಳಿಗೆ ಅಸ್ಪರ್ಶಯೋಗವೆಂಬೀತೆರನಾಗಿ ಪ್ರಸಿದ್ಧವಾಗಿರುವ ಎಂದರ್ಥ. ಮತ್ತು ಅದು ಸರ್ವಸತ್ತ್ವಸುಖವು; ಒಂದೊಂದು (ಯೋಗವು) ಹೆಚ್ಚಿನ ಸುಖಸಾಧನವುಳ್ಳದ್ದಾದರೂ ದುಃಖರೂಪವಾಗಿರುವದುಂಟು; ಉದಾಹರಣೆಗೆ **ತಪಸ್ಸು**[2] (ಅಂಥದ್ದು). ಆದರೆ ಈ (ಯೋಗವು) ಅಂಥದ್ದಲ್ಲ, ಮತ್ತೇನೆಂದರೆ ಎಲ್ಲಾ ಪ್ರಾಣಿಗಳಿಗೂ ಸುಖವಾಗಿರುತ್ತದೆ. ಇದರಂತೆ ಈ ಲೋಕದಲ್ಲಿ ಒಂದೊಂದು ವಿಷಯೋಪಭೋಗವು[3] ಸುಖವಾಗಿರುತ್ತದೆ, ಹಿತವಾಗಿರುವದಿಲ್ಲ; ಆದರೆ ಈ (ಯೋಗವು ಮಾತ್ರ) ಸುಖವಾಗಿಯೂ (ಇರುತ್ತದೆ), ಹಿತವಾಗಿಯೂ (ಇರುತ್ತದೆ). ಏಕೆಂದರೆ (ಇದು) ಎಂದಿಗೂ ಹೋಗದ ಸ್ವಭಾವವುಳ್ಳದ್ದಾಗಿರುತ್ತದೆ. ಇದೂ ಅಲ್ಲದೆ ಇದು ಅವಿವಾದವೂ (ಆಗಿರುತ್ತದೆ). ವಿರುದ್ಧವಾದ ಪಕ್ಷಪ್ರತಿಪಕ್ಷಗಳನ್ನು ಹಿಡಿದು (ಮಾಡುವ) ವಾದವು ವಿವಾದವು; (ಅದು) ಯಾವದರಲ್ಲಿಲ್ಲವೋ ಅದು ಅವಿವಾದವು; (ಅಂಥದ್ದು ಈ ಯೋಗವು). (ಅದು) ಹೇಗೆ? ಎಂದರೆ ಇದು ಅವಿರುದ್ಧವೂ ಆಗಿರುವದರಿಂದ. ಇಂಥ ಯಾವ ಯೋಗವು ದೇಶಿತವಾಗಿರುವದೋ ಶಾಸ್ತ್ರದಿಂದ ಉಪದಿಷ್ಟವಾಗಿರುವದೋ ಆ (ಯೋಗವನ್ನು) ನಾನು ನಮಿಸುತ್ತೇನೆ; ನಮಸ್ಕರಿಸುತ್ತೇನೆ ಎಂದರ್ಥ[4].

## ದ್ವೈತಿಗಳ ವಿವಾದದಿಂದ ಅಜಾತಿವಾದದ ಸಿದ್ಧಿ

(ಭಾಷ್ಯ)

೨೧೭. ಕಥಂ ದ್ವೈತಿನಃ ಪರಸ್ಪರಂ ವಿರುಧ್ಯನ್ತೇ ಇತಿ? ಉಚ್ಯತೇ—

(ಭಾಷ್ಯಾರ್ಥ)

ದ್ವೈತಿಗಳು ಒಬ್ಬರೊಡನೊಬ್ಬರು ವಿರುದ್ಧವಾಗಿ (ವಾದವಾಡುತ್ತಿ)ರುವರೆಂಬುದು ಹೇಗೆ? ಎಂದರೆ ಹೇಳುತ್ತಾರೆ:—

---

1. ಬ್ರಹ್ಮಸ್ವಭಾವವು ಅದ್ವಿತೀಯತ್ವವು, ಮತ್ತೊಂದನ್ನು ಸೋಕದೆ ಇರುವದು. ಅದನ್ನು ತಿಳಿಸುವದರಿಂದ ಅದ್ವೈತದರ್ಶನವು ಅಸ್ಪರ್ಶಯೋಗವೆನಿಸಿರುತ್ತದೆ.

2. ಕೃಚ್ಛ್ರ, ಚಾಂದ್ರಾಯಣ-ಮುಂತಾದದ್ದು.

3. ನಿಷಿದ್ಧವಾದ ವಿಷಯೋಪಭೋಗವು ಸುಖವಾದರೂ ಹಿತವಲ್ಲ.

4. ಗೀತೆಯ ೯-೨ ರಲ್ಲಿ ಈ ಜ್ಞಾನವನ್ನು ಹೊಗಳಿರುವ ಬಗೆಯನ್ನು ಇದಕ್ಕೆ ಹೋಲಿಸಿರಿ.

**ಭೂತಸ್ಯ ಜಾತಿಮಿಚ್ಛನ್ತಿ ವಾದಿನಃ ಕೇಚಿದೇವ ಹಿ ।**
**ಅಭೂತಸ್ಯಾಪರೇ ಧೀರಾ ವಿವದನ್ತಃ ಪರಸ್ಪರಮ್ ॥ ೩ ॥**

೩. ಕೆಲವರು ವಾದಿಗಳು ಮಾತ್ರವೇ ಭೂತ (ವಸ್ತುವಿಗೆ) ಜಾತಿಯನ್ನು ಒಪ್ಪುತ್ತಾರಷ್ಟೆ. ಮತ್ತೆ ಕೆಲವರು ಧೀರರು ಅಭೂತಕ್ಕೆ (ಜಾತಿಯನ್ನು ಒಪ್ಪುತ್ತಾರೆ. ಹೀಗೆ) ಒಬ್ಬರೊಡನೊಬ್ಬರು ವಿವಾದಮಾಡುತ್ತಿ(ರುವರು).

**(ಭಾಷ್ಯ)**

೨೧೮. ಭೂತಸ್ಯ ವಿದ್ಯಮಾನಸ್ಯ ವಸ್ತುನಃ ಜಾತಿಮ್ ಉತ್ಪತ್ತಿಮ್ ಇಚ್ಛನ್ತಿ ವಾದಿನಃ ಕೇಚಿದೇವ ಹಿ ಸಾಙ್ಖ್ಯಾಃ ನ ಸರ್ವ ಏವ ದ್ವೈತಿನಃ । ಯಸ್ಮಾತ್ ಅಭೂತಸ್ಯ ಅವಿದ್ಯಮಾನಸ್ಯ ಅಪರೇ ವೈಶೇಷಿಕಾಃ ನೈಯಾಯಿಕಾಶ್ಚ । ಧೀರಾ ಧೀಮನ್ತಃ । ಪ್ರಾಜ್ಞಾಭಿಮಾನಿನಃ ಇತ್ಯರ್ಥಃ । ವಿವದನ್ತಃ ವಿರುದ್ಧಂ ವದನ್ತಃ ಹಿ ಅನ್ಯೋನ್ಯಮ್ ಇಚ್ಛನ್ತಿ ಜೇತುಮ್ ಇತ್ಯಭಿಪ್ರಾಯಃ ॥

**(ಭಾಷ್ಯಾರ್ಥ)**

(ಕೆಲವರು) ಭೂತ (ವಸ್ತುವಿಗೆ) ಇರುವ ವಸ್ತುವಿಗೆ ಜಾತಿಯನ್ನು ಉತ್ಪತ್ತಿಯನ್ನು ಒಪ್ಪುತ್ತಾರೆ. ಕೆಲವರೇ ವಾದಿಗಳು **ಸಾಂಖ್ಯರು** (ಮಾತ್ರ) (ಹೀಗೆಂದು ಒಪ್ಪುತ್ತಾರೆ), ಎಲ್ಲಾ ದ್ವೈತಿಗಳೂ ಒಪ್ಪುವದಿಲ್ಲ. ಏಕೆಂದರೆ ಮತ್ತೆಕೆಲವರು **ವೈಶೇಷಿಕರೂ ನೈಯಾಯಿಕರೂ**[1] ಅಭೂತಕ್ಕೆ ಇಲ್ಲದ (ವಸ್ತುವಿಗೆ), ಉತ್ಪತ್ತಿಯನ್ನು ಒಪ್ಪುತ್ತಾರೆ). ಧೀರರು, ಬುದ್ಧಿವಂತರು, ತಾವೇ ತಿಳಿದವರೆಂಬ ಅಭಿಮಾನವುಳ್ಳವರು ಎಂದರ್ಥ. (ಹೀಗೆ) ವಿವಾದಮಾಡುತ್ತಾ, ವಿರುದ್ಧವಾಗಿ ವಾದಿಸುತ್ತಾ ಒಬ್ಬರನ್ನೊಬ್ಬರು ಜಯಿಸಲಿಚ್ಛಿಸುತ್ತಿರುವರು[2] ಎಂದು ಅಭಿಪ್ರಾಯ.

---

1. ಸಾಂಖ್ಯರು ಸತ್ಕಾರ್ಯವಾದಿಗಳು, ವೈಶೇಷಿಕರೂ ನೈಯ್ಯಾಯಿಕರೂ ಅಸತ್ಕಾರ್ಯವಾದಿಗಳು. ಪೀಠಿಕೆಯನ್ನು ನೋಡಿ.

2. ತನ್ನ ಪಕ್ಷವನ್ನು ಹೆಚ್ಚಿನದೆಂದು ಸಾಧಿಸುವದಕ್ಕಾಗಿ ಮತ್ತೊಬ್ಬರ ಪಕ್ಷವನ್ನು ಖಂಡಿಸುವ ಚರ್ಚೆಯನ್ನು ನೈಯ್ಯಾಯಿಕರು 'ಜಲ್ಪಕಥೆ' ಎನ್ನುವರು. ದ್ವೈತಿಗಳು ಜಲ್ಪವನ್ನೇ ಮುಖ್ಯವಾಗಿಟ್ಟುಕೊಂಡು ತರ್ಕವನ್ನು ಉಪಯೋಗಿಸುತ್ತಾರೆ, ಅದ್ವೈತಿಗಳಂತೆ ತತ್ತ್ವಾರ್ಥನಿರ್ಣಯಕ್ಕೆ ಉಪಯೋಗಿಸುವದಿಲ್ಲ- ಎಂದು ಭಾವ.

(ಭಾಷ್ಯ)

೨೯. ತೈಃ ಏವಂ ವಿರುದ್ಧವದನೇನ ಅನ್ಯೋನ್ಯಪಕ್ಷಪ್ರತಿಷೇಧಂ ಕುರ್ವದ್ಭಿಃ ಕಿಂ ಖ್ಯಾಪಿತಂ ಭವತೀತಿ ? ಉಚ್ಯತೇ—

(ಭಾಷ್ಯಾರ್ಥ)

ಹೀಗೆ ವಿರುದ್ಧವಾಗಿ ವಾದಮಾಡುವದರಿಂದ ಒಬ್ಬರ ಪಕ್ಷವನ್ನೊಬ್ಬರು ಅಲ್ಲಗಳೆಯುತ್ತಿರುವ ಅವರು ಏನನ್ನು ತೋರಿಸಿಕೊಟ್ಟಂತೆ ಆಗುತ್ತದೆ ? ಎಂದರೆ ಹೇಳುತ್ತಾರೆ:-

**ಭೂತಂ ನ ಜಾಯತೇ ಕಿಂಚಿದಭೂತಂ ನೈವ ಜಾಯತೇ ।**
**ವಿವದನ್ತೋ ದ್ವಯಾ ಹ್ಯೇವಮಜಾತಿಂ ಖ್ಯಾಪಯನ್ತಿ ತೇ ॥ ೪ ॥**

೪. ಭೂತವಾದದ್ದು ಯಾವದೂ ಹುಟ್ಟುವದಿಲ್ಲ. ಅಭೂತವು ಹುಟ್ಟುವದೇ ಇಲ್ಲ. ಹೀಗೆ ಆ ದ್ವಯ (ವಾದಿಗಳು) ವಿವಾದಮಾಡುತ್ತಾ ಅಜಾತಿಯನ್ನು ಹೊರಪಡಿಸುತ್ತಿರುವರು.

(ಭಾಷ್ಯ)

೨೨೦. ಭೂತಂ ವಿದ್ಯಮಾನಂ ವಸ್ತು ನ ಜಾಯತೇ ಕಿಂಚಿತ್ । ವಿದ್ಯಮಾನತ್ವಾದೇವ, ಆತ್ಮವತ್ । ಇತ್ಯೇವಂ ವದನ್ ಅಸದ್ವಾದೀ ಸಾಙ್ಖ್ಯಪಕ್ಷಂ ಪ್ರತಿಷೇಧತಿ ಸಜ್ಜನ್ಮ । ತಥಾ ಅಭೂತಮ್ ಅವಿದ್ಯಮಾನಮ್ ಅವಿದ್ಯಮಾನತ್ವಾತ್ ನೈವ ಜಾಯತೇ ಶಶವಿಷಾಣವತ್ । ಇತ್ಯೇವಂ ವದನ್ ಸಾಙ್ಖ್ಯೋಽಪಿ ಅಸದ್ವಾದಿಪಕ್ಷಮ್ ಅಸಜ್ಜನ್ಮ ಪ್ರತಿಷೇಧತಿ । ವಿವದನ್ತಃ ವಿರುದ್ಧಂ ವದನ್ತಃ ದ್ವಯಾಃ[1] ದ್ವೈತಿನಃ ಹಿ[2] ಏತೇ ಅನ್ಯೋನ್ಯಸ್ಯ ಪಕ್ಷೌ ಸದಸತೋರ್ಜನ್ಮನೀ ಪ್ರತಿಷೇಧನ್ತಃ ಅಜಾತಿಮ್ ಅನುತ್ಪತ್ತಿಮ್ ಅರ್ಥಾತ್ ಖ್ಯಾಪಯನ್ತಿ ಪ್ರಕಾಶಯನ್ತಿ ತೇ ॥

(ಭಾಷ್ಯಾರ್ಥ)

ಭೂತವು ಇರುವ ವಸ್ತು ಯಾವದೂ ಹುಟ್ಟುವದಿಲ್ಲ. ಏಕೆಂದರೆ (ಅದು ಮೊದಲು) ಇದ್ದುಕೊಂಡೇ ಇರುವದರಿಂದ (ಹುಟ್ಟಬೇಕಾದದ್ದಿಲ್ಲ. ಇದಕ್ಕೆ) ಆತ್ಮನು

---

1. ' ಅದ್ವಯಾಃ ಅದ್ವೈತಿನಃ ' ಎಂಬ ಪಾ॥ ಪಾಠವು ತಪ್ಪು.

2. ' ಅಪಿ ' ಎಂಬ ಆ॥ ಪಾಠವು ಮೂಲಕ್ಕೆ ವಿರುದ್ಧ.

ದೃಷ್ಟಾಂತವು[1]. ಹೀಗೆಂದು **ಅಸದ್ವಾದಿಯು**[2] ಇರುವದೇ ಹುಟ್ಟುವದೆಂಬ **ಸಾಂಖ್ಯ ಪಕ್ಷವನ್ನು** ಅಲ್ಲಗಳೆಯುತ್ತಾನೆ. ಹೀಗೆಯೇ ಅಭೂತವಾದದ್ದು ಇಲ್ಲದೆ ಇರುವ (ವಸ್ತು) ಇಲ್ಲದಿರುವದರಿಂದ ಹುಟ್ಟುವದೇ ಇಲ್ಲ: ಇದಕ್ಕೆ ಮೊಲದ ಕೊಂಬು ದೃಷ್ಟಾಂತವು-ಹೀಗೆಂದು ವಾದಿಸುತ್ತಾ ಸಾಂಖ್ಯನೂ ಅಸದ್ವಾದಿಯ ಪಕ್ಷವಾದ ಇಲ್ಲದ್ದರ ಹುಟ್ಟನ್ನು ಅಲ್ಲಗಳೆಯುತ್ತಾನೆ.

(ಹೀಗೆ) ವಿವಾದವನ್ನಾಡುತ್ತಾ (ಒಬ್ಬರಿಗೊಬ್ಬರು) ವಿರುದ್ಧವಾಗಿ ಹೇಳುತ್ತಾ ದ್ವಯ (ವಾದಿ)ಗಳು ಈ ದ್ವೈತಿಗಳು ಇದ್ದದ್ದು, ಇಲ್ಲದ್ದು-ಇವುಗಳು ಹುಟ್ಟುವವೆಂಬ ಒಬ್ಬರ ಪಕ್ಷವನ್ನೊಬ್ಬರು ಅಲ್ಲಗಳೆಯುತ್ತಿರುವದರಿಂದ ಅಜಾತಿಯನ್ನೇ (ಯಾವದೂ) ಹುಟ್ಟುವದಿಲ್ಲವೆಂಬುದನ್ನೇ ಅರ್ಥವಶದಿಂದ ಹೊರಪಡಿಸುತ್ತಾರೆ. ತೋರಿಸಿಕೊಡುತ್ತಾರೆ.

**ಖ್ಯಾಪ್ಯಮಾನಾಮಜಾತಿಂ ತೈರನುಮೋದಾಮಹೇ ವಯಮ್ ।**
**ವಿವದಾಮೋ ನ ತೈಃ ಸಾರ್ಧಮವಿವಾದಂ ನಿಬೋಧತ ॥ ೫ ॥**

೫. ಅವರು ಹೊರಪಡಿಸುತ್ತಿರುವ ಅಜಾತಿಯನ್ನು ನಾವು ಅನುಮೋದಿಸುತ್ತಿರುವೆವೇ ಹೊರತು ಅವರೊಡನೆ ವಿವಾದಮಾಡುತ್ತಿಲ್ಲ. (ಹೀಗೆ) ಅವಿವಾದವನ್ನು ತಿಳಿದುಕೊಳ್ಳಿರಿ.

(ಭಾಷ್ಯ)

೨೨೧. ತೈಃ ಏವಂ ಖ್ಯಾಪ್ಯಮಾನಾಮ್ ಅಜಾತಿಮ್ 'ಏವಮ್ ಅಸ್ತು' ಇತಿ **ಅನುಮೋದಾಮಹೇ** ಕೇವಲಮ್[3] । ನ ತೈಃ ಸಾರ್ಧಂ ವಿವದಾಮಃ ಪಕ್ಷಪ್ರತಿ

---

1. ಪರ್ವತದಲ್ಲಿ ಬೆಂಕಿಯಿರಬೇಕು; ಏಕೆಂದರೆ ಅಡಿಗೆಯ ಮನೆಯಲ್ಲಿರುವಂತೆ ಅಲ್ಲಿ ಹೊಗೆಯಿದೆ-ಎಂಬುದು ಅನುಮಾನಪ್ರಮಾಣವನ್ನು ತಿಳಿಸುವ ವಾಕ್ಯದ ಆಕಾರವು. ಈ ಪ್ರಕಾರವನ್ನನುಸರಿಸಿ ಇರುವದು ಹುಟ್ಟಲಾರದು, ಏಕೆಂದರೆ ಅದು ಆತ್ಮನಂತೆ ಇರುವ ವಸ್ತುವಾಗಿದೆ-ಎಂಬ ವೈಶೇಷಿಕರ ತರ್ಕವು ಹುಟ್ಟಿದೆ; ಇಲ್ಲದ್ದು ಹುಟ್ಟಲಾರದು, ಏಕೆಂದರೆ ಅದು ಮೊಲದ ಕೊಂಬಿನಂತೆ ಇಲ್ಲದ ವಸ್ತುವಾಗಿದೆ-ಎಂಬ ಸಾಂಖ್ಯರ ತರ್ಕವೂ ಈ ಪ್ರಕಾರದಿಂದಲೇ ಹುಟ್ಟಿದೆ. ಒಬ್ಬರ ಪಕ್ಷವನ್ನೊಬ್ಬರು ಖಂಡಿಸುವ ಈ ತರ್ಕವನ್ನನುಸರಿಸಿದರೂ ಯಾವದೂ ಹುಟ್ಟುವದಿಲ್ಲವೆಂದೇ ಏರ್ಪಡುತ್ತದೆ-ಎಂದು ಭಾವ.

2. ಮೊದಲು ಇಲ್ಲದ ಕಾರ್ಯವು ಹುಟ್ಟುತ್ತದೆ ಎಂಬ ವಾದಿ.

3. ಇಲ್ಲಿ 'ವಯಮ್' ಎಂಬ ಮಾತು ಬಿಟ್ಟುಹೋಗಿದೆ.

ಪಕ್ಷ ಪರಿಗ್ರಹಣೇನ[1] । ಯಥಾ ತೇ ಅನ್ಯೋನ್ಯಮ್ ಇತ್ಯಭಿಪ್ರಾಯಃ । ಅತಃ ತಮ್ ಅವಿವಾದಂ ವಿವಾದರಹಿತಂ ಪರಮಾರ್ಥದರ್ಶನಮ್ ಅನುಜ್ಞಾತಮ್ ಅಸ್ಮಾಭಿಃ ನಿಬೋಧತ ಹೇ ಶಿಷ್ಯಾಃ ॥

(ಭಾಷ್ಯಾರ್ಥ)

ಅವರು ಹೀಗೆ ಹೊರಪಡಿಸುತ್ತಿರುವ **ಅಜಾತಿಯನ್ನು** (ಹಾಗೆಯೇ ಆಗಲಿ) ಎಂದು ನಾವು ಸುಮ್ಮನೆ ಅನುಮೋದಿಸುತ್ತಿರುವೆವೇ ಹೊರತು (ಇದು ನಮ್ಮ) ಪಕ್ಷ, (ಇದು) ಪ್ರತಿಪಕ್ಷ–ಎಂದು ಇಟ್ಟುಕೊಂಡು ಅವರು ಹೇಗೆ ಒಬ್ಬರೊಡನೊಬ್ಬರು (ವಿವಾದಮಾಡುತ್ತಿರುವರೋ ಹಾಗೆ) ಅವರೊಡನೆ ವಿವಾದವನ್ನು ಮಾಡುತ್ತಿರುವದಿಲ್ಲ. ಆದ್ದರಿಂದ ಎಲೈ ಶಿಷ್ಯರೆ[2], ಇಂಥ ಅವಿವಾದವನ್ನು (ಯಾವ) ವಿವಾದವೂ ಇಲ್ಲದ ಈ ಪರಮಾರ್ಥದರ್ಶನವನ್ನು ನಾವು ಒಪ್ಪಿರುತ್ತೇವೆಂಬುದನ್ನು ತಿಳಿದುಕೊಳ್ಳಿರಿ.

## ಜಾತಿವಾದದಲ್ಲಿ ದೋಷ

**ಅಜಾತಸ್ಯೈವ ಧರ್ಮಸ್ಯ ಜಾತಿಮಿಚ್ಛನ್ತಿ ವಾದಿನಃ ।**
**ಅಜಾತೋ ಹ್ಯಮೃತೋ ಧರ್ಮೋ ಮರ್ತ್ಯತಾಂ ಕಥಮೇಷ್ಯತಿ ॥ ೬ ॥**

೬. ಹುಟ್ಟುವ ವಸ್ತುವಿಗೇ ವಾದಿಗಳು ಹುಟ್ಟನ್ನು ಅಂಗೀಕರಿಸಿರುತ್ತಾರೆ. ಹುಟ್ಟದೆಯೂ ನಾಶವಿಲ್ಲದೆಯೂ ಇರುವ ವಸ್ತು ಮರ್ತ್ಯತ್ವವನ್ನು ಹೇಗೆ ಹೊಂದೀತು?

(ಭಾಷ್ಯ)

೨೨೨. ಸದಸದ್ವಾದಿನಃ ಸರ್ವೇಽಪಿ ಇತಿ । ಪುರಸ್ತಾತ್[3] ಕೃತಭಾಷ್ಯಃ ಶ್ಲೋಕಃ ॥

---

1. ‘ ಪರಿಗ್ರಹೇಣ ’ ಮಾ॥, ‘ ಗ್ರಹಣೇನ ’ ಕಾ॥

2. ಇಲ್ಲಿ ಪರಪಕ್ಷದಲ್ಲಿ ದೋಷವನ್ನು ಹೇಳಿರುವದು ಶಿಷ್ಯರು ಆ ಪಕ್ಷಗಳ ಅಸಾರತೆಯನ್ನು ಮನಗಂಡು ಅದ್ವೈತದ ಕಡೆಗೆ ತಿರುಗಲೆಂಬುದಕ್ಕಾಗಿ; ಮತ್ತೊಬ್ಬರ ಪಕ್ಷವನ್ನು ಖಂಡಿಸದೆ ಅದ್ವೈತವು ಸಿದ್ಧವಾಗುವದಿಲ್ಲವೆಂಬುದೇನೂ ಇಲ್ಲ.

3. ‘ ಅಯಂ ತು ಪುರಸ್ತಾತ್ ’ ಮಾ॥

(ಭಾಷ್ಯಾರ್ಥ)

ಸದ್ವಾದಿಗಳು, ಅಸದ್ವಾದಿಗಳು–ಎಲ್ಲರೂ (ಹೀಗೆಂದು ಒಪ್ಪಿರುತ್ತಾರೆ ಎಂದರ್ಥ. ಈ) ಶ್ಲೋಕಕ್ಕೆ ಮೊದಲೇ[1] ಭಾಷ್ಯವನ್ನು ಮಾಡಿರುತ್ತದೆ.

**ನ ಭವತ್ಯಮೃತಂ ಮರ್ತ್ಯಂ ನ ಮರ್ತ್ಯಮಮೃತಂ ತಥಾ ।**
**ಪ್ರಕೃತೇರನ್ಯಥಾಭಾವೋ ನ ಕಥಂಚಿದ್ಭವಿಷ್ಯತಿ ॥ ೭ ॥**

**ಸ್ವಭಾವೇನಾಮೃತೋ ಯಸ್ಯ ಧರ್ಮೋ ಗಚ್ಛತಿ ಮರ್ತ್ಯತಾಮ್ ।**
**ಕೃತಕೇನಾಮೃತಸ್ತಸ್ಯ ಕಥಂ ಸ್ಥಾಸ್ಯತಿ ನಿಶ್ಚಲಃ ॥ ೮ ॥**

೭–೮. ಅಮೃತವು ಮರ್ತ್ಯವಾಗಲಾರದು, ಹಾಗೂ ಮರ್ತ್ಯವಾದದ್ದು ಅಮೃತವೂ ಆಗಲಾರದು. ಪ್ರಕೃತಿಗೆ ಮತ್ತೊಂದು ಸ್ವಭಾವವು ಹೇಗೂ ಆಗಲಾರದು. ಯಾವನ (ಮತದಲ್ಲಿ) ಸ್ವಭಾವದಿಂದ ಅಮೃತವಾದ ವಸ್ತು ಮರ್ತ್ಯತ್ವವನ್ನು ಹೊಂದುತ್ತದೆಯೋ ಆತನ (ಮತದಲ್ಲಿ) ಕೃತಕವಾಗಿ ಅಮೃತವಾದ (ಆ ವಸ್ತು) ಹೇಗೆ ನಿಶ್ಚಲವಾಗಿ ನಿಂತುಕೊಂಡೀತು ?

(ಭಾಷ್ಯ)

೨೨೩. ಉಕ್ತಾರ್ಥಾನಾಂ ಶ್ಲೋಕಾನಾಮ್ ಇಹ ಉಪನ್ಯಾಸಃ ಪರವಾದಿಪಕ್ಷಾಣಾಮ್ ಅನ್ಯೋನ್ಯವಿರೋಧಖ್ಯಾಪಿತಾನುಮೋದನ[2]ಪ್ರದರ್ಶನಾರ್ಥಃ ॥

(ಭಾಷ್ಯಾರ್ಥ)

(ಹಿಂದೆಯೇ[3]) ಅರ್ಥವನ್ನು ಹೇಳಿರುವ (ಈ) ಶ್ಲೋಕಗಳನ್ನು ಇಲ್ಲಿ (ಮತ್ತೆ) ಹೇಳಿರುವದು ಮಿಕ್ಕವಾದಿಗಳ ಪಕ್ಷಗಳು ಒಂದಕ್ಕೊಂದು ವಿರುದ್ಧವಾಗಿರುವದರಿಂದ ಪ್ರಖ್ಯಾತವಾಗುವ (ಅಜಾತಿವಾದವನ್ನು) ಒಪ್ಪುತ್ತೇವೆಂದು ತಿಳಿಸುವದಕ್ಕೆ[4].

---

1. ೩–೨೦ ರಲ್ಲಿ
2. ' ಖ್ಯಾಪಿತಾನುತ್ಪತ್ತ್ಯನುಮೋದನ ' ವಾ॥ ವ್ಯ॥
3. ೩-೬, ೭, ೮ ರ ಭಾಷ್ಯದಲ್ಲಿ.
4. ಆದ್ದರಿಂದ ಪುನರುಕ್ತಿಯಿಲ್ಲ.

(ಭಾಷ್ಯ)

೨೨೪. ಯಸ್ಮಾತ್ ಲೌಕಿಕ್ಯಪಿ ಪ್ರಕೃತಿಃ ನ ವಿಪರ್ಯೇತಿ । ಕಾಸೌ ಇತಿ ? ಆಹ—

(ಭಾಷ್ಯಾರ್ಥ)

ಏಕೆಂದರೆ ಲೌಕಿಕ (ದೃಷ್ಟಿಯ) ಪ್ರಕೃತಿಯುಕೂಡ ವಿರುದ್ಧಸ್ವಭಾವವನ್ನು ಹೊಂದುವದಿಲ್ಲ. ಅದು ಯಾವದು ? ಎಂದರೆ ಹೇಳುತ್ತಾರೆ:—

**ಸಾಂಸಿದ್ಧಿಕೀ ಸ್ವಾಭಾವಿಕೀ ಸಹಜಾ ಅಕೃತಾ ಚ ಯಾ ।**
**ಪ್ರಕೃತಿಃ ಸೇತಿ ವಿಜ್ಞೇಯಾ ಸ್ವಭಾವಂ ನ ಜಹಾತಿ ಯಾ ॥ ೯ ॥**

೯. ಸಾಂಸಿದ್ಧಿಕ, ಸ್ವಾಭಾವಿಕ, ಸಹಜ, ಮತ್ತು ಅಕೃತವಾದದ್ದಿರುವದಲ್ಲ, ಅದು–ಯಾವದು ಸ್ವಭಾವವನ್ನು ಬಿಡದಿರುವದೋ ಅದು–ಪ್ರಕೃತಿಯೆಂದು ತಿಳಿಯಬೇಕು.

(ಭಾಷ್ಯ)

೨೨೫. ಸಮ್ಯಕ್ಸಿದ್ಧಿಃ ಸಂಸಿದ್ಧಿಃ ತತ್ರ ಭವಾ ಸಾಂಸಿದ್ಧಿಕೀ । ಯಥಾ ಯೋಗಿನಾಂ ಸಿದ್ಧಾನಾಮ್ ಅಣಿಮಾದ್ಯೈಶ್ವರ್ಯಪ್ರಾಪ್ತಿಃ ಪ್ರಕೃತಿಃ । ಸಾ ಭೂತಭವಿಷ್ಯತ್ಕಾಲಯೋರಪಿ ಯೋಗಿನಾಂ ನ ವಿಪರ್ಯೇತಿ । ತಥೈವ ಸಾ । ತಥಾ ಸ್ವಾಭಾವಿಕೀ ದ್ರವ್ಯಸ್ವಭಾವತ ಏವ ಸಿದ್ಧಾ[1] । ಯಥಾ ಅಗ್ನ್ಯಾದೀನಾಮ್ ಉಷ್ಣಪ್ರಕಾಶಾದಿಲಕ್ಷಣಾ । ಸಾಪಿ ನ ಕಾಲಾನ್ತರೇ ವ್ಯಭಿಚರತಿ ದೇಶಾನ್ತರೇ ಚ । ತಥಾ ಸಹಜಾ ಆತ್ಮನಾ ಸಹೈವ ಜಾತಾ । ಯಥಾ ಪಕ್ಷ್ಯಾದೀನಾಮ್ ಆಕಾಶಗಮನಾದಿಲಕ್ಷಣಾ ತಥಾ ಅನ್ಯಾಪಿ ಯಾ ಕಾಚಿತ್ ಅಕೃತಾ ಕೇನಚಿತ್ ನ ಕೃತಾ । ಯಥಾ ಅಪಾಂ ನಿಮ್ನದೇಶಗಮನಾದಿಲಕ್ಷಣಾ । ಅನ್ಯಾಪಿ ಯಾ ಕಾಚಿತ್ ಸ್ವಭಾವಂ ನ ಜಹಾತಿ ಸಾ ಸರ್ವಾ ಪ್ರಕೃತಿಃ ಇತಿ ವಿಜ್ಞೇಯಾ ಲೋಕೇ । ಮಿಥ್ಯಾಕಲ್ಪಿತೇಷು ಲೌಕಿಕೇಷ್ವಪಿ ವಸ್ತುಷು ಪ್ರಕೃತಿಃ ನ ಅನ್ಯಥಾ ಭವತಿ । ಕಿಮುತ ಅಜಸ್ವಭಾವೇಷು ಪರಮಾರ್ಥವಸ್ತುಷು ಅಮೃತತ್ತ್ವಲಕ್ಷಣಾ ಪ್ರಕೃತಿಃ ನಾನ್ಯಥಾ ಭವತೀತಿ[2] ॥

---

1. ಆ॥ ದಲ್ಲಿಲ್ಲ; ಇದ್ದರೆ ಒಳ್ಳೆಯದು.

2. 'ಇತ್ಯಭಿಪ್ರಾಯಃ' ಆ॥, 'ಭವೇತ್ ಇತ್ಯಭಿಪ್ರಾಯಃ' ವಾ॥–ಎಂಬ ಪಾಠಗಳಿಗಿಂತ ಇದು ಮೇಲು; ಅಥವಾ 'ಭವತೀತಿ ಇತ್ಯಭಿಪ್ರಾಯಃ' ಎಂದಿರಬೇಕು.

(ಭಾಷ್ಯಾರ್ಥ)

೧. **ಸಾಂಸಿದ್ಧಿಕವಾದದ್ದು**[1] ಸಂಸಿದ್ಧಿಯೆಂದರೆ ಉತ್ತಮವಾದ ಸಿದ್ಧಿ. ಅದರಿಂದ ಆದದ್ದು ಸಾಂಸಿದ್ಧಿಕ. ಉದಾಹರಣೆಗೆ ಸಿದ್ಧರಾದ[2] ಯೋಗಿಗಳಿಗೆ ಅಣಿಮಾ ಮುಂತಾದ ಐಶ್ವರ್ಯಗಳನ್ನು ಪಡೆಯುವದು ಪ್ರಕೃತಿಯು. ಅದು ಹಿಂದಿನ ಮುಂದಿನ ಕಾಲಗಳಲ್ಲಿಯೂ ಯೋಗಿಗಳಿಗೆ ಬೇರೆಯ ಸ್ವಭಾವದ್ದಾಗುವದಿಲ್ಲ[3], ಅದು ಹಾಗೆಯೇ ಇರುತ್ತದೆ. ೨. ಇದರಂತೆ **ಸ್ವಾಭಾವಿಕವಾದದ್ದು** : ವಸ್ತುವಿನ ಸ್ವಭಾವದಿಂದಲೇ ಇದ್ದುಕೊಂಡಿರುವದು. ಉದಾಹರಣೆಗೆ ಬೆಂಕಿ ಮುಂತಾದವುಗಳಿಗೆ ಬಿಸಿ, ಬೆಳಕು– ಮುಂತಾದ[4] ರೂಪದಲ್ಲಿರುವದು (ಸ್ವಾಭಾವಿಕಪ್ರಕೃತಿ). ಅದೂ ಬೇರೊಂದು ಕಾಲದಲ್ಲಾಗಲಿ ಬೇರೊಂದು ದೇಶದಲ್ಲಾಗಲಿ ಬೇರ್ಪಡುವದಿಲ್ಲ. ೩. ಇದರಂತೆ **ಸಹಜವಾದದ್ದು** : ತನ್ನೊಡನೆಯೇ ಹುಟ್ಟಿರುವದು, ಉದಾಹರಣೆಗೆ ಪಕ್ಷಿಗಳು ಮುಂತಾದವಕ್ಕೆ ಆಕಾಶದಲ್ಲಿ ಸಂಚರಿಸುವದೇ ಮುಂತಾದ ರೂಪದ (ಪ್ರಕೃತಿಯು ಸಹಜವಾದದ್ದು.) ೪. (ಇನ್ನು ಬೇರೆ ಯಾವದು[5]) ಅಕೃತವಾದದ್ದು, ಯಾರಿಂದಲೂ ಮಾಡಲ್ಪಡದೆ (ತಾನೇ) ಇರುವದು. ಉದಾಹರಣೆಗೆ ನೀರು ತಗ್ಗಾಗಿರುವ ಕಡೆಗೆ ಹರಿಯುವದು ಮುಂತಾದದ್ದು (ಅಕೃತಪ್ರಕೃತಿಯು). ಇನ್ನೂ ಯಾವಯಾವದು ಸ್ವಭಾವವನ್ನು ಬಿಡುವದಿಲ್ಲವೋ ಅದೆಲ್ಲವೂ ಲೋಕದಲ್ಲಿ ಪ್ರಕೃತಿಯು ಎಂದು ಅರಿಯತಕ್ಕದ್ದಾಗಿರುವದು.

---

1. ಈ ಮಾತು ಭಾಷ್ಯದಲ್ಲಿದ್ದು ಬಿಟ್ಟುಹೋಗಿದೆ ಎಂದು ತೋರುವದು.

2. ಸಾಧಕರಿಗೆ ಐಶ್ವರ್ಯವು ಪೂರ್ಣವಾಗಿ ಬಂದಿರುವದಿಲ್ಲ; ಆದ್ದರಿಂದ ಸಿದ್ಧರಾದ ಎಂದಿದೆ.

3. ಒಂದು ಸಲ ಬಂದ ಬಳಿಕ ಸ್ವಭಾವವಾಗಿ ಬಿಟ್ಟಿರುತ್ತದೆ ಎಂದರ್ಥ. ಇದರ ಮುಂದಿನ ವಾಕ್ಯವು ಇಲ್ಲದಿದ್ದರೂ ಸಾಗುತ್ತದೆ.

4. ಬೇಯಿಸುವದು ಮುಂತಾದ ಎಂದರ್ಥ; ಇದು ವಸ್ತುವಿನ ಸ್ವರೂಪಕ್ಕೇ ಸೇರಿದ್ದು.

5. 'ಅನ್ಯಾಪಿ ಯಾ ಕಾಚಿತ್' ಎಂಬುದರ ಅನುವಾದವಿದು, ಈ ಮಾತುಗಳು ಹೆಚ್ಚಾಗಿ ಬಿದ್ದಿವೆ ಎಂದು ತೋರುತ್ತದೆ.

ಮಿಥ್ಯಾಕಲ್ಪಿತವಾಗಿರುವ ಲೌಕಿಕವಸ್ತುಗಳಲ್ಲಿಕೂಡ ಪ್ರಕೃತಿಯು ಬೇರೆಯಾಗುವದಿಲ್ಲ[1]. ಇನ್ನು ಹುಟ್ಟುವ ಸ್ವಭಾವವೇ ಇಲ್ಲದ ಪರಮಾರ್ಥವಸ್ತುಗಳಲ್ಲಿ[2] ನಾಶವಿಲ್ಲದಿರುವದೆಂಬ ಪ್ರಕೃತಿಯು ಬೇರೆಯಾಗಲಾರದೆಂದು (ಹೇಳುವ)ದೇನು[3] ? (ಎಂದು ಅಭಿಪ್ರಾಯ[4])

## ಅಜಾತಿವಾದದ ಉಪಸಂಹಾರ

(ಭಾಷ್ಯ)

೨೨೬. ಕಿಂವಿಷಯಾ ಪುನಃ ಸಾ ಪ್ರಕೃತಿಃ ಯಸ್ಯಾ ಅನ್ಯಥಾಭಾವಃ ವಾದಿಭಿಃ ಕಲ್ಪ್ಯತೇ ? ಕಲ್ಪನಾಯಾಂ ವಾ ಕೋ ದೋಷ ಇತಿ ? ಆಹ–

(ಭಾಷ್ಯಾರ್ಥ)

ಯಾವ ಪ್ರಕೃತಿಯು ಬೇರ್ಪಡುವದು ಎಂದು ವಾದಿಗಳು ಕಲ್ಪಿಸಿರುವರೋ ಆ ಪ್ರಕೃತಿಯ ವಿಷಯವು ಯಾವದು[5] ? ಹಾಗೆ (ವಾದಿಗಳು) ಕಲ್ಪಿಸಿರುವದರಲ್ಲಿರುವ ದೋಷವಾದರೂ ಯಾವದು ? ಎಂದರೆ ಹೇಳುತ್ತಾರೆ :—

**ಜರಾಮರಣನಿರ್ಮುಕ್ತಾಃ ಸರ್ವೇ ಧರ್ಮಾಃ ಸ್ವಭಾವತಃ ।**
**ಜರಾಮರಣಮಿಚ್ಛಂತಶ್ಚ್ಯವನ್ತೇ ತನ್ಮನೀಷಯಾ ॥ ೧೦ ॥**

೧೦. ಎಲ್ಲಾ ಧರ್ಮರೂ ಸ್ವಭಾವದಿಂದಲೇ, ಜರಾಮರಣನಿರ್ಮುಕ್ತರು. ಜರಾಮರಣಗಳನ್ನು ಬಯಸಿ ಅದೇ ಮನೀಷೆಯಿಂದ ಜಾರಿಬೀಳುತ್ತಿರುವರು.

(ಭಾಷ್ಯ)

೨೨೭. ಜರಾಮರಣನಿರ್ಮುಕ್ತಾಃ ಜರಾಮರಣಾದಿಸರ್ವವಿಕ್ರಿಯಾವರ್ಜಿತಾಃ ಇತ್ಯರ್ಥಃ । ಕೇ ? ಸರ್ವೇ ಧರ್ಮಾಃ ಸರ್ವೇ ಆತ್ಮಾನಃ ಇತ್ಯೇತತ್ । ಸ್ವಭಾವತಃ

1. ವ್ಯವಹಾರದೃಷ್ಟಿಯಿಂದ ನೋಡುವವರಿಗೆ ಹಾಗೆಯೇ ಇರುತ್ತದೆ.

2. ಆತ್ಮರುಗಳಲ್ಲಿ ಎಂದರ್ಥ; ಇದು ಮುಂದಿನ ಕಾರಿಕೆಯಲ್ಲಿ ಸ್ಪಷ್ಟವಾಗಿರುತ್ತದೆ.

3. ಆದರೂ ವಾದಿಗಳು ಈ ಸ್ವಭಾವವೂ ಬೇರ್ಪಡುವದೆಂದು ಕಲ್ಪಿಸಿರುತ್ತಾರೆ; ಇದೇ ಅವರ ಮತದಲ್ಲಿರುವ ದೋಷವು ಎಂದು ಭಾವ.

4. 'ಇತಿ ಇತ್ಯಭಿಪ್ರಾಯಃ' ಎಂಬ ಪಾಠಕ್ಕೆ ಅನುವಾದವಿದು.

5. ಯಾವದರ ಪ್ರಕೃತಿಯನ್ನು ಬೇರ್ಪಡುವದೆಂದು ವಾದಿಗಳು ಕಲ್ಪಿಸಿರುತ್ತಾರೆ? ಎಂದು ಪ್ರಶ್ನೆ.

ಪ್ರಕೃತಿತಃ[1] । ಏವಂಸ್ವಭಾವಾಃ[2] ಸನ್ತಃ ಧರ್ಮಾಃ ಜರಾಮರಣಮ್ ಇಚ್ಛನ್ತಃ ಇಚ್ಛನ್ತ ಇವ ಇಚ್ಛನ್ತಃ ರಜ್ಜ್ವಾಮಿವ ಸರ್ಪಮ್ ಆತ್ಮನಿ ಕಲ್ಪಯನ್ತಃ ಚ್ಯವನ್ತೇ । ಸ್ವಭಾವತಃ ಚಲನ್ತಿ ಇತ್ಯರ್ಥಃ । ತನ್ಮನೀಷಯಾ ಜರಾಮರಣಚಿನ್ತಯಾ । ತದ್ಭಾವಭಾವಿತತ್ವದೋಷೇಣ ಇತ್ಯರ್ಥಃ ॥

(ಭಾಷ್ಯಾರ್ಥ)

ಜರಾಮರಣನಿರ್ಮುಕ್ತರು, ಮುಪ್ಪು, ಸಾವು–ಮುಂತಾದ[3] ಯಾವ ವಿಕಾರವೂ ಇಲ್ಲದವರು ಎಂದರ್ಥ. ಯಾರು? ಎಂದರೆ ಎಲ್ಲಾ ಧರ್ಮರೂ, ಎಲ್ಲಾ ಆತ್ಮರುಗಳೂ ಎಂದು ಅಭಿಪ್ರಾಯ. ಸ್ವಭಾವದಿಂದಲೇ, ಪ್ರಕೃತಿಯಿಂದಲೇ ಇಂಥ ಸ್ವಭಾವವುಳ್ಳವರಾಗಿದ್ದರೂ (ಈ) ಧರ್ಮರುಗಳ ಜರಾಮರಣಗಳನ್ನು ಬಯಸಿ,–ಇಲ್ಲಿ ಬಯಸಿ ಎಂದರೆ ಬಯಸುವವರಂತೆ (ಎಂದರ್ಥ[4])–ಹಗ್ಗದಲ್ಲಿ ಹಾವನ್ನು (ಕಲ್ಪಿಸುವಂತೆ) ಆತ್ಮನಲ್ಲಿ (ಅವನ್ನು) ಕಲ್ಪಿಸಿಕೊಂಡು[5] ಜಾರಿಬೀಳುವರು, ಸ್ವಭಾವವನ್ನು ಬಿಟ್ಟುಹೋಗುವರು ಎಂದರ್ಥ. ಅದೇ ಮನೀಷೆಯಿಂದ ಮುಪ್ಪುಸಾವುಗಳ ಚಿಂತನೆಯಿಂದ, ಅದೇ ಭಾವನೆಯಿಂದ ಭಾವಿತರಾಗಿರುವ ದೋಷದಿಂದ[6] (ಸ್ವಭಾವವನ್ನು ಬಿಟ್ಟು ಚಲಿಸುವರು) ಎಂದರ್ಥ.

## ದ್ವೈತಿಗಳ ವಿವಾದದಿಂದ ಕಾರ್ಯಕಾರಣವಾದದ ನಿರಾಸ

(ಭಾಷ್ಯ)

೨೨೮. ಕಥಂ ಸಜ್ಜಾತಿವಾದಿಭಿಃ ಸಾಙ್ಖ್ಯೈಃ ಅನುಪಪನ್ನಮ್ ಉಚ್ಯತೇ ಇತ್ಯಾಹ ವೈಶೇಷಿಕಃ—

1. 'ಪ್ರಕೃತಿತ ಏವ' ವಾ॥ ಕಾ॥ ವ್ಯ॥

2. 'ಅತ ಏವಂಸ್ವಭಾವಾಃ' ವಾ॥ ಕಾ॥ ವ್ಯ॥

3. ಹುಟ್ಟುವದು, ಬೆಳೆಯುವದು–ಮುಂತಾದ ವಿಕಾರಗಳನ್ನೂ ಅಥವಾ ಹಸಿವು, ನೀರಡಿಕೆ, ಮುಪ್ಪು, ಸಾವು, ಶೋಕ, ಮೋಹ–ಮುಂತಾದ ವಿಕಾರಗಳನ್ನೂ ತಿಳಿಸುವದಕೆ ಉಪಲಕ್ಷಣವಾಗಿ ಜರಾಮರಣಗಳೆಂದಿದೆ ಎಂದು ಭಾವ.

4. ಕಲ್ಪನೆಗೆ ಜರಾಮರಣಪ್ರಾಪ್ತಿಯೇ ಫಲ ಎಂದು ಭಾವ.

5. ಕಲ್ಪನೆಯಿಂದಲೇ ವಿಕಾರಗಳು ಆತ್ಮನಲ್ಲಿ ತೋರುತ್ತವೆ, ನಿಜವಾಗಿ ಇವು ಶರೀರಾದಿ ದೃಶ್ಯಗಳಲ್ಲಿರುವದರಿಂದ ಆತ್ಮನ ಧರ್ಮಗಳಲ್ಲ.

6. ಹಾಗೆಯೇ ಭಾವನೆಯನ್ನು ಮಾಡಿಕೊಂಡಿರುವದರಿಂದ ಅದೇ ನಿಜವಾಗಿ ತೋರುತ್ತಿರುವದು. ಆದ್ದರಿಂದ ಪರಮಾರ್ಥವನ್ನು ಅರಿತುಕೊಂಡು ಈ ಸಂಸಾರದ ಭಾವನೆಯಿಂದ ಪಾರಾಗಬೇಕು ಎಂದು ಭಾವ.

(ಭಾಷ್ಯಾರ್ಥ)

ಸತ್ಕಾರ್ಯವಾದಿಗಳಾದ **ಸಾಂಖ್ಯರು** ಹೇಳುವದು ಹೇಗೆ ಅಯುಕ್ತ ? ಎಂದರೆ **ವೈಶೇಷಿಕನು**[1] ಹೇಳುತ್ತಾನೆ :—

**ಕಾರಣಂ ಯಸ್ಯ ವೈ ಕಾರ್ಯಂ ಕಾರಣಂ ತಸ್ಯ ಜಾಯತೇ ।**
**ಜಾಯಮಾನಂ ಕಥಮಜಂ ಭಿನ್ನಂ ನಿತ್ಯಂ ಕಥಂ ಚ ತತ್ ॥ ೧೧ ॥**

೧೧. ಯಾವನ (ಮತದಲ್ಲಿ) ಕಾರಣವೇ ಕಾರ್ಯವೋ ಅವನ (ಮತದಲ್ಲಿ) ಕಾರಣವು ಹುಟ್ಟುತ್ತದೆ. ಹುಟ್ಟುವಂಥದ್ದು ಅಜವು ಹೇಗೆ? ಮತ್ತು ಅದು ಭಿನ್ನವಾದರೆ ನಿತ್ಯವು ಹೇಗೆ?

(ಭಾಷ್ಯ)

೨೯. ಕಾರಣಂ ಮೃದ್ವತ್ ಉಪಾದಾನಲಕ್ಷಣಂ ಯಸ್ಯ ವಾದಿನಃ ವೈ ಕಾರ್ಯಮ್ । ಕಾರಣಮೇವ ಕಾರ್ಯಾಕಾರೇಣ ಪರಿಣಮತೇ ಯಸ್ಯ ವಾದಿನಃ ಇತ್ಯರ್ಥಃ । ತಸ್ಯ ಅಜಮೇವ ಸತ್ ಪ್ರಧಾನಾದಿ ಕಾರಣಂ ಮಹದಾದಿಕಾರ್ಯರೂಪೇಣ ಜಾಯತೇ ಇತ್ಯರ್ಥಃ । ಮಹದಾದ್ಯಾಕಾರೇಣ ಚೇತ್ ಜಾಯಮಾನಂ ಪ್ರಧಾನಂ ಕಥಮ್ ಅಜಮ್ ಉಚ್ಯತೇ ತೈಃ ? ವಿಪ್ರತಿಷಿದ್ಧಂ ಚ ಇದಂ ಜಾಯತೇ ಅಜಂ ಚ ಇತಿ । ನಿತ್ಯಂ ಚ ತೈರುಚ್ಯತೇ ಪ್ರಧಾನಮ್ । ವಿದೀರ್ಣಂ ಸ್ಫುಟಿತಮ್ ಏಕದೇಶೇನ ಸತ್ ಕಥಂ ನಿತ್ಯಂ ಭವೇತ್ ಇತ್ಯರ್ಥಃ । ನ ಹಿ ಸಾವಯವಂ ಘಟಾದಿ ಏಕದೇಶಸ್ಫುಟನಧರ್ಮಿ ನಿತ್ಯಂ ದೃಷ್ಟಂ ಲೋಕೇ ಇತ್ಯರ್ಥಃ । ವಿದೀರ್ಣಂ ಚ ಸ್ಯಾತ್ ಏಕದೇಶೇನ ಅಜಂ ನಿತ್ಯಂ ಚ ಇತ್ಯೇತತ್ ವಿಪ್ರತಿಷಿದ್ಧಂ ತೈರಭಿಧೀಯತೇ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಕಾರಣವು ಮಣ್ಣಿನಂತೆ ಉಪಾದಾನರೂಪವಾಗಿರುವ[2] (ವಸ್ತುವು) ಯಾವ ವಾದಿಯ(ಮತದಲ್ಲಿ)ಕಾರ್ಯವೋ, ಕಾರಣವೇ ಕಾರ್ಯಾಕಾರವಾಗಿ ಯಾವ ವಾದಿಯು

1. ಅಜಾತಿವಾದವನ್ನು ಸ್ಫುಟಗೊಳಿಸುವದೇ ಸಾಂಖ್ಯವೈಶೇಷಿಕರ ಚರ್ಚೆಗೆ ಪ್ರಯೋಜನವಾದ್ದರಿಂದ ಸಾಂಖ್ಯರೂ ವೈಶೇಷಿಕರ ಆರಂಭವಾದದ ಮೇಲೆ ಹೀಗೆಯೇ ದೋಷವನ್ನು ಹೇಳುತ್ತಾರೆಂದು ಇಲ್ಲಿ ಹೇಳಿದಂತೆ ಇಟ್ಟುಕೊಳ್ಳಬೇಕು.

2. ಯಾವದನ್ನು ಪಡೆಯುವದಕ್ಕೆ ಏನನ್ನು ತೆಗೆದುಕೊಳ್ಳುವರೋ ಅದು ಅದಕ್ಕೆ ಉಪಾದಾನಕಾರಣವು. ಉದಾಹರಣೆಗೆ ಮಡಕೆಯನ್ನು ಮಾಡುವದಕ್ಕೆ ಮಣ್ಣನ್ನು ತೆಗೆದುಕೊಳ್ಳುವರಾದ್ದರಿಂದ ಮಣ್ಣು ಮಡಕೆಗೆ ಉಪಾದಾನಕಾರಣವು.

(ಮತದಲ್ಲಿ) ಪರಿಣಮಿಸುವದೋ ಎಂದರ್ಥ[1]. ಅವನ (ಮತದಲ್ಲಿ) ಅಜವೇ (ಹುಟ್ಟುವದಲ್ಲದ್ದೇ) ಆಗಿರುವ **ಪ್ರಧಾನವೇ** ಮುಂತಾದ ಕಾರಣವು **ಮಹತ್ತು** ಮುಂತಾದ ಕಾರ್ಯರೂಪದಿಂದ ಹುಟ್ಟುತ್ತದೆ[2]–(ಎಂದಾಯಿತು) ಎಂದರ್ಥ. ಮಹತ್ತೇ ಮುಂತಾದದ್ದರ ಆಕಾರದಿಂದ ಹುಟ್ಟುವದಾದರೆ ಪ್ರಧಾನವು ಅಜವೆಂದು ಅವರು ಹೇಗೆ ಹೇಳುತ್ತಾರೆ? ಹುಟ್ಟುತ್ತದೆ (ಆದರೂ ಅದು) ಅಜವೂ ಆಗಿದೆ–ಎನ್ನುವದಿದು (ತನಗೆ ತಾನೇ) ವಿರುದ್ಧವಾದ (ಮಾತು).

ಇದಲ್ಲದೆ ಪ್ರಧಾನವು ನಿತ್ಯವೆಂದೂ ಅವರು ಹೇಳುತ್ತಾರೆ. (ಆದರೆ ಅದು) ಭಿನ್ನವಾಗಿ, ಸೀಳಿಕೊಂಡು, ಒಂದು ಭಾಗದಲ್ಲಿ ಬಿರಿದುಕೊಂಡದ್ದಾಗಿದ್ದು[3] (ಅದು) ಹೇಗೆ (ತಾನೆ) ನಿತ್ಯವಾದೀತು? ಎಂದರ್ಥ. ಏಕೆಂದರೆ ಲೋಕದಲ್ಲಿ ಸಾವಯವವಾಗಿ ಒಂದು ಕಡೆಯಲ್ಲಿ ಬಿರಿದುಕೊಳ್ಳುವ ಸ್ವಭಾವವುಳ್ಳ ಗಡಿಗೆಯೇ ಮುಂತಾದದ್ದು ನಿತ್ಯವಾಗಿರುವದು ಕಂಡುಬಂದಿರುವದೇ ಇಲ್ಲವಲ್ಲ[4]! ಎಂದರ್ಥ. ಒಂದು ಭಾಗದಲ್ಲಿ ಸೀಳಿಕೊಂಡೂ (ಇರುತ್ತದೆ), ಅಜವಾಗಿ ನಿತ್ಯವೂ (ಆಗಿರುತ್ತದೆ) ಎಂಬಿದನ್ನು ವಿರುದ್ಧವಾಗಿ ಅವರು ಹೇಳುತ್ತಿದ್ದಾರೆ–ಎಂದು ಅಭಿಪ್ರಾಯ.

**(ಭಾಷ್ಯ)**

೨೩೦. ಉಕ್ತಸ್ಯೈವ ಅರ್ಥಸ್ಯ ಸ್ಪಷ್ಟೀಕರಣಾರ್ಥಮ್ ಆಹ—

**(ಭಾಷ್ಯಾರ್ಥ)**

(ಹಿಂದೆ) ಹೇಳಿಯೇ ಇರುವ ವಿಷಯವನ್ನು[5] ಸ್ಪಷ್ಟಗೊಳಿಸುವದಕ್ಕಾಗಿ (ಈ ಮಾತನ್ನು) ಹೇಳುತ್ತಾರೆ:—

---

1. ಸಾಂಖ್ಯರ ಮತದಲ್ಲಿ ಕಾರಣವೇ ಕಾರ್ಯರೂಪವನ್ನು ನಿಜವಾಗಿ ಪಡೆಯುತ್ತದೆ.

2. ಪ್ರಧಾನವು ಮೂಲಕಾರಣವು. ಅದರಿಂದ ಮಹತ್ತು, ಮಹತ್ತಿನಿಂದ ಅಹಂಕಾರ, ಅಹಂಕಾರದಿಂದ ತನ್ಮಾತ್ರೆಗಳು, ತನ್ಮಾತ್ರೆಗಳಿಂದ ಮಹಾಭೂತಗಳು–ಹೀಗೆ ಹುಟ್ಟುವವೆಂದು ಸಾಂಖ್ಯರು ಹೇಳುತ್ತಾರೆ.

3. ಹುಟ್ಟುವದೆಂದರೇ ಅವಯವಗಳು ಹೆಚ್ಚುಕಡಿಮೆಯಾಗುವದು. ಹುಟ್ಟಿದರೂ ಹೆಚ್ಚುಕಡಿಮೆಯಾಗುವದಿಲ್ಲವೆಂಬುದು ಯುಕ್ತಿವಿರುದ್ಧ–ಎಂದು ಭಾವ.

4. ಅವಯವವು ಸಿಡಿದುಕೊಳ್ಳುವ, ಮಾರ್ಪಾಡಾಗುವ, ವಸ್ತುವೆಲ್ಲ ಅನಿತ್ಯವಾಗಿರುತ್ತದೆ. ಆದ್ದರಿಂದ ಹುಟ್ಟುವ, ಅವಯವಗಳ ಮಾರ್ಪಾಡುಳ್ಳ, ಪ್ರಧಾನವೂ ಅನಿತ್ಯವಾಗಬೇಕಾಯಿತು–ಎಂದು ಭಾವ. ಸೂ. ಭಾ. ೨–೧–೨೯.

5. ಕಾರಣವೇ ಕಾರ್ಯವಾಗುವದೆಂದೂ ಕಾರಣವು ನಿತ್ಯವೆಂದೂ ಹೇಳುವದು ವಿರುದ್ಧವೆಂಬುದನ್ನು.

**ಕಾರಣಾದ್ಯದ್ಯನನ್ಯತ್ವಮತಃ ಕಾರ್ಯಮಜಂ ಯದಿ ।**
**ಜಾಯಮಾನಾದ್ಧಿ ವೈ ಕಾರ್ಯಾತ್ ಕಾರಣಂ ತೇ ಕಥಂ ಧ್ರುವಮ್ ॥**

೧೨. ಕಾರಣಕ್ಕಿಂತ ಅನನ್ಯವಾದರೆ, ಅದರಿಂದ ಕಾರ್ಯವು ಅಜವಾದರೆ, ಹುಟ್ಟುವ ಕಾರ್ಯಕ್ಕೆ (ಅನನ್ಯವಾದ) ಕಾರಣವು ನಿನ್ನ (ಮತದಲ್ಲಿ) ಧ್ರುವವು ಹೇಗೆ?

(ಭಾಷ್ಯ)

೨೩೧. ಕಾರಣಾತ್ ಅಜಾತ್ ಕಾರ್ಯಸ್ಯ ಯದಿ ಅನನ್ಯತ್ವಮ್ ಇಷ್ಟಂ ತ್ವಯಾ ತತಃ ಕಾರ್ಯಮ್ ಅಜಮ್ ಇತಿ ಪ್ರಾಪ್ತಮ್ । ಇದಂ ಚ ಅನ್ಯತ್ ವಿಪ್ರತಿಷಿದ್ಧಂ ಕಾರ್ಯಮ್ ಅಜಂ ಚ ಇತಿ ತವ । ಕಿಂ ಚ ಅನ್ಯತ್ ಕಾರ್ಯಕಾರಣಯೋಃ ಅನನ್ಯತ್ವೇ ಜಾಯಮಾನಾತ್ ಹಿ ವೈ ಕಾರ್ಯಾತ್ ಕಾರಣಮ್ ಅನನ್ಯತ್ ಧ್ರುವಂ ನಿತ್ಯಂ ಚ[1] ತೇ ಕಥಂ ಭವೇತ್ ? ನ ಹಿ ಕುಕ್ಕುಟ್ಯಾ ಏಕದೇಶಃ ಪಚ್ಯತೇ, ಏಕದೇಶಃ ಪ್ರಸವಾಯ ಕಲ್ಪತೇ ॥

(ಭಾಷ್ಯಾರ್ಥ)

ಹುಟ್ಟದೆ ಇರುವ ಕಾರಣಕ್ಕಿಂತ ಕಾರ್ಯವು ಬೇರೆಯಲ್ಲವೆಂದು ನಿನ್ನ ಅಭಿಮತವಾದರೆ[2], ಆಗ ಕಾರ್ಯವು (ಕೂಡ) ಅಜವೆಂದಾಗುವದು[3]. ಕಾರ್ಯವೂ ಆಗಿದೆ ಅಜವೂ ಆಗಿದೆ ಎನ್ನುವದು ನಿನ್ನ (ಮತದಲ್ಲಿ) ಇದೂ ಒಂದು ಬೇರೆ ವಿರುದ್ಧವಾದ[4] (ಮಾತು).

ಇದಲ್ಲವೆ ಮತ್ತೂ ಒಂದು (ಆಕ್ಷೇಪವುಂಟು): ಕಾರ್ಯಕಾರಣಗಳು (ಒಂದಕ್ಕಿಂತ ಒಂದು) ಬೇರೆಯಲ್ಲವಾದರೆ ಹುಟ್ಟುವ ಕಾರ್ಯಕ್ಕಿಂತ ಬೇರೆಯಲ್ಲದ ಕಾರಣವು

---

1. 'ನಿತ್ಯಂ ಧ್ರುವಂ ಚ' ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

2. ಕಾರ್ಯಕಾರಣಗಳು ಒಂದಕ್ಕಿಂತ ಒಂದು ಬೇರೆಯಲ್ಲ, ಕಾರ್ಯವೂ ಕಾರಣವೂ ಎಂದೇ-ಎಂದಾದರೆ.

3. ಏಕೆಂದರೆ ಕಾರಣವಾದ ಪ್ರಧಾನವು ಅಜ; ಅದೇ ಕಾರ್ಯವೆಂದು ಸಾಂಖ್ಯನು ಒಪ್ಪಿರುತ್ತಾನೆ.

4. ಕಾರ್ಯವಾದ ಮಹತ್ತು ಅಜವಾದ ಪ್ರಧಾನವೇ ಎಂದು ಹೇಳುವಲ್ಲಿ ಅಜವಾದ ಪ್ರಧಾನವೇ ಹುಟ್ಟುತ್ತದೆ ಎಂದಂತೆ ಆಗುತ್ತದೆ ಎಂದು ಭಾವ.

ನ್ನ (ಮತದಲ್ಲಿ) ಧ್ರುವವೂ ನಿತ್ಯವೂ (ಆಗಿರುವದು) ಹೇಗೆ[1] ? ಹೆಣ್ಣು ಕೋಳಿಯಲ್ಲಿ ಂದು ಭಾಗವನ್ನು ಅಡಿಗೆಮಾಡಿಕೊಳ್ಳುತ್ತಾರೆ, ಇನ್ನೊಂದು ಭಾಗವು ಮೊಟ್ಟೆ ಇಡುವದಕ್ಕೆ ಆಗುತ್ತದೆ (ಎನ್ನುವದು) ಆಗಲಾರದಷ್ಟೆ[2] ?

**ಅಜಾದ್ವೈ ಜಾಯತೇ ಯಸ್ಯ ದೃಷ್ಟಾನ್ತಸ್ತಸ್ಯ ನಾಸ್ತಿ ವೈ ।**
**ಜಾತಾಚ್ಚ ಜಾಯಮಾನಸ್ಯ ನ ವ್ಯವಸ್ಥಾ ಪ್ರಸಜ್ಯತೇ ॥ ೧೪ ॥**

೧೪. ಯಾವನ (ಮತದಲ್ಲಿ) ಅಜವಾದ(ವಸ್ತುವಿನಿಂದ ಕಾರ್ಯವು) ಹುಟ್ಟುವದೋ ಅವನಿಗೆ ದೃಷ್ಟಾಂತವು ಇರುವದಿಲ್ಲ. ಮತ್ತು ಹುಟ್ಟಿದ್ದ ರಿಂದಲೇ ಹುಟ್ಟುವ (ಕಾರ್ಯ)ಕ್ಕೆ ವ್ಯವಸ್ಥೆಯಿಲ್ಲವೆಂದು ಆಗುತ್ತದೆ.

(ಭಾಷ್ಯ)

೨೩೨. ಕಿಂ ಚ ಅನ್ಯತ್ ಅಜಾತ್ ಅನುತ್ಪನ್ನಾತ್ ವಸ್ತುನಃ ಜಾಯತೇ ಯಸ್ಯ ವಾದಿನಃ ಕಾರ್ಯಮ್ ದೃಷ್ಟಾನ್ತಃ ತಸ್ಯ ನಾಸ್ತಿ ವೈ । ದೃಷ್ಟಾನ್ತಾಭಾವೇ ಅರ್ಥಾತ್ ಅಜಾತ್ ನ ಕಿಂಚಿತ್ ಜಾಯತೇ ಇತಿ ಸಿದ್ಧಂ ಭವತಿ ಇತ್ಯರ್ಥಃ । ಯದಾ ಪುನಃ ಜಾತಾತ್ ಜಾಯಮಾನಸ್ಯ ವಸ್ತುನಃ ಅಭ್ಯುಪಗಮಃ ತದಪಿ ಅನ್ಯಸ್ಮಾತ್ ಜಾತಾತ್ ತದಪಿ ಅನ್ಯಸ್ಮಾತ್ ಇತಿ ನ ವ್ಯವಸ್ಥಾ ಪ್ರಸಜ್ಯತೇ । ಅನವಸ್ಥಾ ಸ್ಯಾತ್ ಇತ್ಯರ್ಥಃ ॥

(ಭಾಷ್ಯಾರ್ಥ)

ಮತ್ತೊಂದು (ಮಾತು) : ಯಾವ ವಾದಿಯ (ಮತದಲ್ಲಿ) ಅಜವಾದ ಹುಟ್ಟದೆ ಇರುವ ವಸ್ತುವಿನಿಂದ ಕಾರ್ಯವು ಹುಟ್ಟುತ್ತದೆಯೋ ಅವನಿಗೆ ದೃಷ್ಟಾಂತವೇ ಇರುವ ದಿಲ್ಲ. ದೃಷ್ಟಾಂತವಿಲ್ಲದಿದ್ದರೆ[3] ಅಜವಾದ್ದರಿಂದ ಯಾವದೂ (ನಿಜವಾಗಿ) ಹುಟ್ಟ

---

1. ಪ್ರಧಾನವು ಹುಟ್ಟುವ ಮಹತ್ತೇ ಎಂದು ಹೇಳುವಲ್ಲಿ ಮಹತ್ತು ಅನಿತ್ಯವಾದ್ದ ರಿಂದ ಪ್ರಧಾನವೂ ಅನಿತ್ಯವು ಎಂದಂತೆ ಆಗುತ್ತದೆ ಎಂದು ಭಾವ.

2. ಹೆಣ್ಣುಕೋಳಿಯನ್ನು ಎರಡೂ ಕೆಲಸಗಳಿಗೆ ವಿನಿಯೋಗಿಸುವದು ಹೇಗೆ ಅಸಾಧ್ಯವೋ ಹಾಗೆ ಪ್ರಧಾನವು ನಿತ್ಯವೂ ಆಗಿ ಕಾರ್ಯವಾಗಿ ಹುಟ್ಟುವದೂ ಆಗಿರುವದು ಅಸಾಧ್ಯ.

3. ಪೂರ್ವಪಕ್ಷಿಯು ತರ್ಕಪ್ರಧಾನನು; ದೃಷ್ಟಾಂತವಿಲ್ಲದೆ ತರ್ಕವು ಸಿದ್ಧವಾಗುವ ದಿಲ್ಲವೆಂದು ಅವನು ಒಪ್ಪಿರುತ್ತಾನೆ. ಆದ್ದರಿಂದ ಅಜವಾದ ಪ್ರಧಾನದಿಂದ ಮಹತ್ತು ಹುಟ್ಟುತ್ತದೆ ಎಂಬುದಕ್ಕೆ ತರ್ಕದ ಬೆಂಬಲವಿಲ್ಲವೆಂದಾಗುತ್ತದೆ.

ಲಾರದೆಂದು ಅರ್ಥವಶದಿಂದಲೇ ಸಿದ್ಧವಾಗುತ್ತದೆ–ಎಂದರ್ಥ. (ಇನ್ನು) ಯಾವಾಗ ಹುಟ್ಟಿದ್ದರಿಂದಲೇ ವಸ್ತು ಹುಟ್ಟುವದೆಂದು ಒಪ್ಪುತ್ತಾನೋ (ಆಗ) ಅದೂ ಮತ್ತೊಂದು ಹುಟ್ಟಿದ ವಸ್ತುವಿನಿಂದ (ಹುಟ್ಟುತ್ತದೆ), ಅದೂ ಮತ್ತೊಂದರಿಂದ (ಹುಟ್ಟುತ್ತದೆ)–ಎಂದು ವ್ಯವಸ್ಥೆಯೇ ಇಲ್ಲವಾಗುತ್ತದೆ, ಅನವಸ್ಥೆಯಾದೀತು[1] ಎಂದರ್ಥ[2].

## ಧರ್ಮಾಧರ್ಮಗಳಿಗೂ ಶರೀರಕ್ಕೂ ಕಾರ್ಯಕಾರಣಭಾವವಿಲ್ಲ

(ಭಾಷ್ಯ)

"ಆದರೆ ಎಲ್ಲಿ ಇವನಿಗೆ ಎಲ್ಲವೂ ಆತ್ಮನೇ ಆಗಿರುವದೋ (ಅಲ್ಲಿ ಏತರಿಂದ ಯಾರನ್ನು ನೋಡುವನು ?)" (ಬೃ ೪–೫–೧೫) ಎಂದು ಪರಮಾರ್ಥ (ದೃಷ್ಟಿ) ಯಿಂದ ದ್ವೈತವೇ ಇಲ್ಲವೆಂದು ಶ್ರುತಿಯಲ್ಲಿ ಹೇಳಿರುತ್ತದೆ. ಅದನ್ನವಲಂಬಿಸಿ[3] (ಈಗ) ಹೇಳುತ್ತಾರೆ :—

**ಹೇತೋರಾದಿಃ ಫಲಂ ಯೇಷಾಮಾದಿರ್ಹೇತುಃ ಫಲಸ್ಯ ಚ ।**
**ಹೇತೋಃ ಫಲಸ್ಯ ಚಾನಾದಿಃ ಕಥಂ ತೈರುಪವರ್ಣ್ಯತೇ ॥ ೧೪ ॥**

೧೪. ಹೇತುವಿಗೆ ಫಲವು ಆದಿಯೆಂದೂ ಹೇತುವು ಫಲಕ್ಕೆ ಆದಿಯೆಂದೂ ಯಾರ (ಮತವಿರುವದೋ) ಅವರು ಹೇತುವಿಗೂ ಫಲಕ್ಕೂ ಅನಾದಿತ್ವವನ್ನು ಹೇಳುವದು ಹೇಗೆ ?

(ಭಾಷ್ಯ)

೨೩೪. ಹೇತೋಃ ಧರ್ಮಾದೇಃ[4] ಆದಿಃ ಕಾರಣಂ ದೇಹಾದಿಸಙ್ಘಾತಃ ಫಲಂ ಯೇಷಾಂ ವಾದಿನಾಮ್ । ತಥಾ ಆದಿಃ ಕಾರಣಮ್ ಹೇತುಃ ಧರ್ಮಾದಿಃ ಫಲಸ್ಯ

1. ತರ್ಕದಲ್ಲಿ ಅನವಸ್ಥೆ ಎಂಬುದೂ ಒಂದು ದೋಷ. ೩–೨೭ರಲ್ಲಿಯೂ ಈ ದೋಷವನ್ನು ಹೇಳಿದೆ. ಒಂದರಿಂದ ಒಂದು ಹುಟ್ಟುತ್ತಿರುವದೇ ಸ್ವಭಾವವು ಎಂದು ಹೇಳಿದರೆ ಈ ದೋಷವು ಬರುವದೆಂದು ನೆನಪಿಸುವದಕ್ಕಾಗಿ ಹೀಗೆಂದು ಹೇಳಿದೆ.

2. ಇಲ್ಲಿ ವೈಶೇಷಿಕನ ಮೇಲೆ ಸಾಂಖ್ಯನು ಹಾಕಬಹುದಾದ ದೋಷಗಳನ್ನೂ ಕಲ್ಪಿಸಿಕೊಳ್ಳಬೇಕು. ಸೂ. ಭಾ. ೨–೨–೧೨, ೧೩ ಮುಂತಾದವುಗಳನ್ನು ನೋಡಿ.

3. ಸಾಂಖ್ಯವೈಶೇಷಿಕರು ಒಬ್ಬರು ಹೇಳುವ ದ್ವೈತಪ್ರಕ್ರಿಯೆಯನ್ನೊಬ್ಬರು ಖಂಡಿಸುತ್ತಾರಾದ್ದರಿಂದ ಶ್ರುತಿಯಲ್ಲಿ ಹೇಳಿರುವ ಅದ್ವೈತವೇ ಸರಿಯೆಂದು ಏರ್ಪಡುತ್ತದೆ ಎಂದು ಭಾವ.

4. 'ಧರ್ಮಾಧರ್ಮಾದೇಃ' ಎಂಬ ಪಾಠಕ್ಕಿಂತ ಇದೇ ಮೇಲು.

ಚ ದೇಹಾದಿಸಙ್ಘಾತಸ್ಯ । ಏವಂ ಹೇತುಫಲಯೋಃ ಇತರೇತರಕಾರ್ಯಕಾರಣತ್ವೇನ ಆದಿಮತ್ತ್ವಂ ಬ್ರುವದ್ಭಿರೇವ ಹೇತೋಃ ಫಲಸ್ಯ ಚ ಅನಾದಿತ್ವಂ ಕಥಂ ತೈಃ ಉಪ ವರ್ಣ್ಯತೇ ? ವಿಪ್ರತಿಷಿದ್ಧಮ್ ಇತ್ಯರ್ಥಃ । ನ ಹಿ ನಿತ್ಯಸ್ಯ ಕೂಟಸ್ಥಸ್ಯ ಆತ್ಮನಃ ಹೇತುಫಲಾತ್ಮತಾ ಸಮ್ಭವತಿ ॥

(ಭಾಷ್ಯಾರ್ಥ)

**ಹೇತುವಿಗೆ** ಧರ್ಮಮುಂತಾದ್ದಕ್ಕೆ[1] ದೇಹವೇ ಮುಂತಾದವುಗಳ ಸಂಘಾತ ವೆಂಬ **ಫಲವು** ಯಾವ ವಾದಿಗಳ ಮತದಲ್ಲಿ ಆದಿಯೋ ಕಾರಣವೋ; ಮತ್ತು ಧರ್ಮ ಮುಂತಾದದ್ದು ಫಲಕ್ಕೆ ದೇಹಾದಿಗಳ ಸಂಘಾತಕ್ಕೆ ಆದಿಯೋ ಕಾರಣವೋ (ಎಂದರ್ಥ). ಹೀಗೆ ಹೇತುಫಲಗಳಿಗೆ ಒಂದಕ್ಕೊಂದಕ್ಕೆ ಕಾರ್ಯಕಾರಣಭಾವವಿರು ವದರಿಂದ (ಅವೆರಡಕ್ಕೂ) ಆದಿಯುಂಟೆಂದು ಹೇಳುತ್ತಲೇ ಆ ವಾದಿಗಳು ಹೇತುವಿಗೂ ಫಲಕ್ಕೂ ಅನಾದಿತ್ವವನ್ನು ಹೇಳುತ್ತಿರುವರಲ್ಲ[2] ! (ಇದು) ಹೇಗೆ ? (ಇದು ತಮ್ಮ ಮತಕ್ಕೇ) ವಿರುದ್ಧವು ಎಂದರ್ಥ. ನಿತ್ಯನಾಗಿ **ಕೂಟಸ್ಥ**ನಾಗಿರುವ ಆತ್ಮನಿಗೆ ಹೇತು ಫಲಭಾವವು ಹೊಂದುವದೇ ಇಲ್ಲವಲ್ಲ[3] !

(ಭಾಷ್ಯ)

೨೩೫. ಕಥಂ ತೈಃ ವಿರುದ್ಧಮ್ ಅಭ್ಯುಪಗಮ್ಯತೇ ಇತಿ ? ಉಚ್ಯತೇ—

(ಭಾಷ್ಯಾರ್ಥ)

ಅವರು ಅಂಗೀಕರಿಸಿರುವದು ವಿರುದ್ಧವೆಂಬುದು ಹೇಗೆ ? ಎಂದರೆ ಹೇಳುತ್ತಾರೆ[4] :—

---

1. ಧರ್ಮ, ಅಧರ್ಮ-ಇವುಗಳಿಗೆ.

2. ಹೇತುಫಲಾತ್ಮಕವಾದ ಸಂಸಾರವು ಅನಾದಿ ಎಂಬುದು ಪೂರ್ವಪಕ್ಷ. ಇಲ್ಲಿ (೧) ಹೇತು, ಫಲ-ಒಂದೊಂದೂ ಅನಾದಿಯೊ, (೨) ಇವು ಒಂದರಿಂದೊಂದಾಗುತ್ತವೆ ಯಾದರೂ ಹೇತುಫಲಪರಂಪರೆಯು ಅನಾದಿಯೊ, (೩) ಒಂದು ಹೇತುವಿನಿಂದ ಬೇರೆಯು ಫಲ, ಆ ಫಲವಿಂದ ಮತ್ತೊಂದು ಹೇತು-ಹೀಗೆ ಬೀಜಾಂಕುರನ್ಯಾಯದಿಂದ ಒಟ್ಟು ಪರಂ ಪರೆಯು ಅನಾದಿಯೊ?-ಎಂಬ ಮೂರು ವಿಕಲ್ಪಗಳನ್ನು ಒಡ್ಡಿ ಈ ಮೂರನ್ನೂ ಒಂದೊಂದಾಗಿ ಖಂಡಿಸುತ್ತಾರೆ.

3. ಆತ್ಮನಿಗೆ ಧರ್ಮಾಧರ್ಮಗಳ ಅಥವಾ ಶರೀರದ ಸಂಬಂಧವೇ ನಿಜವಾಗಿ ಇಲ್ಲ ವೆಂಬುದನ್ನು ಸೂ. ಭಾ. ೧-೧-೪ ರಲ್ಲಿ ತೋರಿಸಿದೆ.

4. ಧರ್ಮಾಧರ್ಮಗಳು ಶರೀರಾದಿಗಳಿಗೂ ಶರೀರಾದಿಗಳು ಧರ್ಮಾಧರ್ಮಗಳಿಗೂ ಕಾರಣವೆಂದರೆ ಅನ್ಯೋನ್ಯಾಶ್ರಯದೋಷವೆಂದು ಎರಡನೆಯ ವಿಕಲ್ಪವನ್ನು ಖಂಡಿಸುತ್ತಾರೆ ಎಂದು ಭಾವ.

**ಹೇತೋರಾದಿಃ ಫಲಂ ಯೇಷಾಮಾದಿರ್ಹೇತುಃ ಫಲಸ್ಯ ಚ ।**
**ತಥಾ ಜನ್ಮ ಭವೇತ್ತೇಷಾಂ ಪುತ್ರಾಜ್ಜನ್ಮ ಪಿತುರ್ಯಥಾ ॥ ೧೫ ॥**

೧೫. ಯಾರ (ಮತದಲ್ಲಿ) ಹೇತುವಿಗೆ ಫಲವು ಆದಿಯೋ, ಮತ್ತು ಹೇತುವು ಫಲಕ್ಕೆ ಆದಿಯೋ, ಅವರ (ಮತದಲ್ಲಿ) ಮಗನಿಂದ ತಂದೆಗೆ (ಜನ್ಮವೆಂಬುದು) ಹೇಗೋ ಹಾಗೆ ಜನ್ಮ(ವನ್ನು ಹೇಳಿದಂತೆ) ಆಗುವದು.

**(ಭಾಷ್ಯ)**

೨೩೬. ಹೇತುಜನ್ಯಾದೇವ ಫಲಾತ್ ಹೇತೋಃ ಜನ್ಮ ಅಭ್ಯುಪಗಚ್ಛತಾಂ ತೇಷಾಮ್ ಈದೃಶಃ ವಿರೋಧಃ ಉಕ್ತೋ ಭವತಿ ಯಥಾ ಪುತ್ರಾತ್ ಜನ್ಮ ಪಿತುಃ ॥

**(ಭಾಷ್ಯಾರ್ಥ)**

ಹೇತುವಿನಿಂದ ಉಂಟಾಗುವ ಫಲದಿಂದಲೇ ಹೇತುವಿಗೆ ಜನ್ಮವನ್ನು ಒಪ್ಪುವ ಅವರು ಮಗನಿಂದ ತಂದೆಯ ಹುಟ್ಟನ್ನು (ಹೇಳಿದರೆ) ಎಂಥ (ವಿರೋಧವೋ) ಅಂಥ ವಿರೋಧವನ್ನೇ ಹೇಳಿದಂತೆ ಆಗುವದು.

**(ಭಾಷ್ಯ)**

೨೩೭. ಯಥೋಕ್ತೋ ವಿರೋಧಃ ನ ಯುಕ್ತಃ ಅಭ್ಯುಪಗನ್ತುಮ್ ಇತಿ ಚೇತ್ ಮನ್ಯಸೇ–

**(ಭಾಷ್ಯಾರ್ಥ)**

ಮೇಲೆ ಹೇಳಿರುವ ವಿರೋಧವನ್ನು ಒಪ್ಪಿಕೊಳ್ಳುವದು ಸರಿಯಲ್ಲವೆಂದು ನಿನ್ನ ಅಭಿಪ್ರಾಯವಾದರೆ–

**ಸಮ್ಭವೇ ಹೇತುಫಲಯೋರೇಷಿತವ್ಯಃ ಕ್ರಮಸ್ತ್ವಯಾ ।**
**ಯುಗಪತ್ ಸಮ್ಭವೇ ಯಸ್ಮಾದಸಮ್ಬನ್ಧೋ ವಿಷಾಣವತ್ ॥ ೧೬ ॥**

೧೬. ಹೇತುಫಲಗಳ ಸಂಭವದಲ್ಲಿ ನೀನು ಕ್ರಮವನ್ನು ಇಟ್ಟುಕೊಳ್ಳಬೇಕು. ಏಕೆಂದರೆ ಒಟ್ಟಿಗೆ ಸಂಭವವಾದರೆ (ಅವಕ್ಕೆ) ಕೋಡುಗಳಂತೆ (ಒಂದಕ್ಕೊಂದಕ್ಕೆ) ಸಂಬಂಧವಿರುವದಿಲ್ಲ.

**(ಭಾಷ್ಯ)**

೨೩೮. ಸಮ್ಭವೇ ಉತ್ಪತ್ತೌ । ಹೇತುಫಲಯೋಃ ಕ್ರಮಃ ಏಷಿತವ್ಯಃ ಅನ್ವೇಷ್ಟವ್ಯಃ ತ್ವಯಾ[1], ಹೇತುಃ ಪೂರ್ವಂ ಪಶ್ಚಾತ್ ಫಲಂ ಚ ಇತಿ । ಇತಶ್ಚ ಯುಗಪತ್

1. ಆ॥ ಮ್ಯೆ॥ ಗಳಲ್ಲಿಲ್ಲ.

ಸಮ್ಭವೇ ಯಸ್ಮಾತ್ ಹೇತುಫಲಯೋಃ ಕಾರ್ಯಕಾರಣತ್ವೇನ ಅಸಮ್ಬನ್ಧಃ । ಯಥಾ ಯುಗಪತ್ ಸಮ್ಭವತೋಃ ಸವ್ಯೇತರಗೋವಿಷಾಣಯೋಃ ॥

(ಭಾಷ್ಯಾರ್ಥ)

ಹೇತುಫಲಗಳ ಸಂಭವದಲ್ಲಿ ಹುಟ್ಟುವದರಲ್ಲಿ ನೀನು ಕ್ರಮವನ್ನು ('ಏಷಿತವ್ಯಃ'= ಅನ್ವೇಷ್ಟವ್ಯಃ) ಇಟ್ಟುಕೊಳ್ಳಬೇಕು; ಮೊದಲು ಹೇತುವೂ ಬಳಿಕ ಫಲವೂ (ಹುಟ್ಟಿ ದವು) ಎಂದು (ಕ್ರಮವನ್ನು) ಹುಡುಕಿಡಬೇಕಾಗುವದು. ಈ ಕಾರಣದಿಂದಲೂ (ಕ್ರಮವನ್ನು ಒಪ್ಪಬೇಕಾಗುವದು). ಏಕೆಂದರೆ ಹೇತುಫಲಗಳು ಒಟ್ಟಿಗೆ ಹುಟ್ಟಿದರೆ (ಇಂಥದ್ದು ಕಾರ್ಯವು, ಇಂಥದ್ದು ಕಾರಣವು ಎಂದು) ಕಾರ್ಯಕಾರಣಭಾವದಿಂದ (ಅವುಗಳಿಗೆ) ಸಂಬಂಧವಿರುವದಿಲ್ಲ. ಹೇಗೆ ಒಂದೇ ಕಾಲದಲ್ಲಿ ಹುಟ್ಟುವ ಎಡಬಲದ ಎತ್ತಿನ ಕೋಡುಗಳಿಗೆ (ಸಂಬಂಧವಿರುವದಿಲ್ಲವೋ ಹಾಗೆ).

(ಭಾಷ್ಯ)

೨೩೯. ಕಥಮ್ ಅಸಮ್ಬನ್ಧ ಇತಿ ? ಆಹ—

(ಭಾಷ್ಯಾರ್ಥ)

(ಅವುಗಳಿಗೆ) ಸಂಬಂಧವಿರುವದಿಲ್ಲವೆಂಬುದು ಹೇಗೆ ? ಎಂದರೆ ಹೇಳುತ್ತಾರೆ:—

**ಫಲಾದುತ್ಪದ್ಯಮಾನಃ ಸನ್ ನ ತೇ ಹೇತುಃ ಪ್ರಸಿಧ್ಯತಿ ।**
**ಅಪ್ರಸಿದ್ಧಃ ಕಥಂ ಹೇತುಃ ಫಲಮುತ್ಪಾದಯಿಷ್ಯತಿ ॥ ೧೭ ॥**

೧೭ ಫಲದಿಂದ ಹುಟ್ಟುವದಾಗಿರುವದರಿಂದ ನಿನ್ನ (ಮತದಲ್ಲಿ) ಹೇತುವು ಪ್ರಸಿದ್ಧವಾಗಲಾರದು. ಪ್ರಸಿದ್ಧವಾಗದ ಹೇತು ಹೇಗೆ (ತಾನೆ) ಫಲವನ್ನು ಉಂಟುಮಾಡುವದು ?

(ಭಾಷ್ಯ)

೨೪೦. ಜನ್ಮಾತ್ ಸ್ವತಃ ಅಲಬ್ಧಾತ್ಮಕಾತ್ ಫಲಾತ್ ಉತ್ಪದ್ಯಮಾನಃ ಸನ್ ಶಶವಿಷಾಣಾದೇರಿವ ಅಸತಃ ನ (ತೇ[1]) ಹೇತುಃ ಪ್ರಸಿಧ್ಯತಿ ಜನ್ಮ ನ ಲಭತೇ ।

1. ಈ ಮಾತು ಭಾಷ್ಯದಲ್ಲಿ ಬಿಟ್ಟು ಹೋಗಿದೆ, ಆದರೆ ಮುಂದೆ 'ತವ' ಎಂಬ ಮಾತು ಬಂದಿದೆ.

ಅಲಬ್ಧಾತ್ಮಕಃ ಅಪ್ರಸಿದ್ಧಃ ಸನ್ ಶಶವಿಷಾಣಾದಿಕಲ್ಪಃ (ಹೇತುಃ[1]) ತವ ಕಥಂ ಫಲಮ್ ಉತ್ಪಾದಯಿಷ್ಯತಿ? ನ ಹಿ ಇತರೇತರಾಪೇಕ್ಷಸಿದ್ಧ್ಯೋಃ ಶಶವಿಷಾಣ ಕಲ್ಪಯೋಃ ಕಾರ್ಯಕಾರಣಭಾವೇನ ಸಮ್ಬನ್ಧಃ ಕ್ವಚಿತ್ ದೃಷ್ಟಃ ಅನ್ಯಥಾ ವಾ ಇತ್ಯಭಿಪ್ರಾಯಃ ||

(ಭಾಷ್ಯಾರ್ಥ)

(ಮುಂದೆ) ಹುಟ್ಟುವದಾಗಿದ್ದು ತಾನೇ (ಇನ್ನೂ) ಸ್ವರೂಪವನ್ನು ಪಡೆದು ಕೊಳ್ಳದೆ ಇರುವ[2] ಫಲದಿಂದ ಹುಟ್ಟುವದಾಗಿರುವದಾಗಿ, ಮೊಲದಕೊಂಬು ಮುಂತಾದ ದ್ದರಂತೆ ಅಸತ್ತಾಗಿರುವ (ಫಲದಿಂದ) ಹೇತುವು (ನಿನ್ನ ಮತದಲ್ಲಿ) ಪ್ರಸಿದ್ಧವಾಗ ಲಾರದು, ಜನ್ಮವನ್ನು ತಳೆಯಲಾರದು. ಸ್ವರೂಪವನ್ನು ಪಡೆದುಕೊಳ್ಳದೆ ಇರುವದ ರಿಂದ ಅಪ್ರಸಿದ್ಧವಾಗಿರುವ ಮೊಲದಕೊಂಬೇ ಮುಂತಾದದ್ದರಂತಿರುವ (ಹೇತುವು) ನಿನ್ನ (ಮತದಲ್ಲಿ) ಹೇಗೆತಾನೆ ಫಲವನ್ನುಂಟುಮಾಡೀತು? ಒಂದನ್ನು ಬಯಸಿ ಮತ್ತೊಂದು ಸಿದ್ಧವಾಗಬೇಕಾಗಿರುವ (ಎರಡು ವಸ್ತುಗಳಿಗೆ) ಕಾರ್ಯಕಾರಣಭಾವದ ಸಂಬಂಧವಾಗಲಿ ಮತ್ತೆ ಯಾವ ಬೇರೆಯ ಸಂಬಂಧವಾಗಲಿ[3] ಎಲ್ಲಿಯೂ ಕಂಡು ಬಂದಿಲ್ಲವಲ್ಲ!–ಎಂದು ಅಭಿಪ್ರಾಯ.

(ಭಾಷ್ಯ)

೨೪೧. ಅಸಮ್ಬನ್ಧದೋಷೇಣ ಅಪೋದಿತೇಽಪಿ[4] ಹೇತುಫಲಯೋಃ ಕಾರ್ಯ ಕಾರಣಭಾವೇ–

(ಭಾಷ್ಯಾರ್ಥ)

(ಹೀಗೆ) ಸಂಬಂಧವಿಲ್ಲವಾಗುವದೆಂಬ ದೋಷ(ವಿರುವ)ದರಿಂದ ಹೇತುಫಲ ಗಳಿಗೆ ಕಾರ್ಯಕಾರಣಭಾವವನ್ನು ಅಲ್ಲಗಳೆದಮೇಲೂ–

---

1. ಈ ಮಾತು ಇಲ್ಲಿ ಬಿಟ್ಟುಹೋಗಿದೆ.

2. 'ಹುಟ್ಟುವದೆಂದರೆ ಸ್ವರೂಪವನ್ನು ಪಡೆದುಕೊಳ್ಳುವದು.

3. ಅತ್ಯಂತವಾಗಿ ಅಸಿದ್ಧವಾದ ವಸ್ತುಗಳಿಗೆ ಯಾವ ಸಂಬಂಧವೂ ಇರಲಾರದು; ಆದ್ದರಿಂದ ಕಾರ್ಯಕಾರಣಭಾವವಲ್ಲದಿದ್ದರೆ ಮತ್ತೊಂದು ಸಂಬಂಧವಿರಲಿ ಎನ್ನುವದಕೆ ಆಗುವದಿಲ್ಲ.

4. "ಅಪಾಕೃತೇಽಪಿ" ಪಾ||

**ಯದಿ ಹೇತೋಃ ಫಲಾತ್ ಸಿದ್ಧಿಃ ಫಲಸಿದ್ಧಿಶ್ಚ ಹೇತುತಃ ।**
**ಕತರತ್ ಪೂರ್ವನಿಷ್ಪನ್ನಂ ಯಸ್ಯ ಸಿದ್ಧಿರಪೇಕ್ಷಯಾ ॥ ೧೮ ॥**

೧೮. ಹೇತುವಿಗೆ ಫಲದಿಂದ ಸಿದ್ಧಿ, ಮತ್ತು ಫಲಸಿದ್ಧಿಯು ಹೇತುವಿನಿಂದ ಎಂದು (ಹೇಳುವೆ)ಯಾದರೆ, ಇವೆರಡರಲ್ಲಿ ಮೊದಲು ಇರುವದು ಯಾವದು ? ಯಾವದರ ಸಿದ್ಧಿಯು (ಮತ್ತೊಂದರ) ಅಪೇಕ್ಷೆಯಿಂದ (ಆಗುವದೋ ಅದನ್ನು ಹೇಳು[1]).

(ಭಾಷ್ಯ)

**೨೮೨.** ಯದಿ ಹೇತುಫಲಯೋಃ ಅನ್ಯೋನ್ಯಸಿದ್ಧಿಃ ಅಭ್ಯುಪಗಮ್ಯತೇ ಏವ ತ್ವಯಾ, ಕತರತ್ ಪೂರ್ವನಿಷ್ಪನ್ನಂ ಹೇತುಫಲಯೋಃ ಯಸ್ಯ ಪಶ್ಚಾದ್ಭಾವಿನಃ ಸಿದ್ಧಿಃ ಸ್ಯಾತ್ ಪೂರ್ವಸಿದ್ಧ್ಯಪೇಕ್ಷಯಾ[2] ತತ್ ಬ್ರೂಹಿ ಇತ್ಯರ್ಥಃ ॥

(ಭಾಷ್ಯಾರ್ಥ)

ಹೇತುಫಲಗಳಿಗೆ ಒಂದರಿಂದೊಂದರ ಸಿದ್ಧಿಯು (ಆಗುವದೆಂದು) ನೀನು ಅಂಗೀಕರಿಸಿಯೇ ತೀರುವೆಯಾದರೆ, ಹೇತುಫಲ(ಗಳೆಂಬ ಎರಡ)ರಲ್ಲಿ ಯಾವದು ಮೊದಲು ಇರುವದು ? ಆಮೇಲೆ ಉಂಟಾಗುವ ಯಾವದರ ಸಿದ್ಧಿಯು ಮೊದಲು (ಉಂಟಾಗುವದರ) ಸಿದ್ಧಿಯನ್ನು ಅಪೇಕ್ಷಿಸಿ ಆಗುವದೋ ಅದನ್ನು ಹೇಳು ಎಂದರ್ಥ.

(ಭಾಷ್ಯ)

**೨೮೩.** ಅಥ ಏತತ್ ನ ಶಕ್ಯತೇ ವಕ್ತುಮ್ ಇತಿ ಮನ್ಯಸೇ—

(ಭಾಷ್ಯಾರ್ಥ)

ಇನ್ನು ಇವನ್ನು ಹೇಳುವದಕ್ಕೆ ಆಗುವದಿಲ್ಲ ಎಂದು (ನೀನು) ತಿಳಿಯುವೆಯಾದರೆ—

---

1. ಇದು ಭಾಷ್ಯಾನುಸಾರಿಯಾದ ಅರ್ಥ. ಯಸ್ಯ ಅಪೇಕ್ಷಯಾ ಸಿದ್ಧಿಃ ತತ್ ಪೂರ್ವನಿಷ್ಪನ್ನಂ ಕತರತ್ ? ಯಾವದರ ಅಪೇಕ್ಷೆಯಿಂದ ಇನ್ನೊಂದರ ಸಿದ್ಧಿಯಾಗುವದೋ ಅಂಥ ಪೂರ್ವಸಿದ್ಧವಾದದ್ದು ಯಾವದು ?–ಎಂದೂ ಕಾರಿಕೆಯನ್ನು ಅನ್ವಯಿಸಬಹುದು.

2. " ಪೂರ್ವಸಿದ್ಧಾಪೇಕ್ಷಯಾ " ವಾ॥

**ಅಶಕ್ತಿರಪರಿಜ್ಞಾನಂ ಕ್ರಮಕೋಪೋಽಥ ವಾ ಪುನಃ ।**
**ಏವಂ ಹಿ ಸರ್ವಥಾ ಬುದ್ಧೈರಜಾತಿಃ ಪರಿದೀಪಿತಾ ॥ ೧೯ ॥**

೧೯. ಅಶಕ್ತಿಯು ಅಪರಿಜ್ಞಾನವು, ಅಥವಾ ಕ್ರಮಕೋಪ(ವಾಗುವವು). ಹೀಗೆ ಸರ್ವಪ್ರಕಾರದಿಂದಲೂ ಬುದ್ಧರು ಅಜಾತಿಯನ್ನು ಬೆಳಗಿಸಿದಂತಾಗುವದು.

(ಭಾಷ್ಯ)

೨೪೪. ಸೇಯಮ್ ಅಶಕ್ತಿಃ ಅಪರಿಜ್ಞಾನಮ್ । ತತ್ತ್ವಾವಿವೇಕಃ ಮೂಢತಾ ಇತ್ಯರ್ಥಃ । ಅಥ ವಾ ಯೋಽಯಂ ತ್ವಯಾ ಉಕ್ತಃ ಕ್ರಮಃ ಹೇತೋಃ ಫಲಸ್ಯ ಸಿದ್ಧಿಃ ಫಲಾಚ್ಚ ಹೇತೋಃ ಸಿದ್ಧಿಃ ಇತಿ ಇತರೇತರಾನನ್ತರ್ಯಲಕ್ಷಣಃ ತಸ್ಯ ಕೋಪಃ ವಿಪರ್ಯಾಸಃ ಅನ್ಯಥಾಭಾವಃ ಸ್ಯಾತ್ ಇತ್ಯಭಿಪ್ರಾಯಃ । ಏವಂ ಹೇತುಫಲಯೋಃ ಕಾರ್ಯಕಾರಣಭಾವಾನುಪಪತ್ತೇಃ ಅಜಾತಿಃ ಸರ್ವಸ್ಯ ಅನುತ್ಪತ್ತಿಃ ಪರಿದೀಪಿತಾ ಪ್ರಕಾಶಿತಾ ಅನ್ಯೋನ್ಯದೋಷಂ ಬ್ರುವದ್ಭಿಃ ವಾದಿಭಿಃ ಬುದ್ಧೈಃ ಪಂಡಿತೈಃ ಇತ್ಯರ್ಥಃ ॥

(ಭಾಷ್ಯಾರ್ಥ)

ಆ ಈ ಅಶಕ್ತಿಯು ಅಪರಿಜ್ಞಾನವು; ತತ್ತ್ವವನ್ನು ತಿಳಿಯಲಾರದ ಮೂಢತನವು[1] ಎಂದರ್ಥ. ಅಥವಾ ಹೇತುವಿನಿಂದ ಫಲವುಂಟಾಗುತ್ತದೆ, ಫಲದಿಂದ ಹೇತು ಉಂಟಾಗುತ್ತದೆ–ಎಂದು ಒಂದಾದಮೇಲೊಂದು ಸಿದ್ಧಿಸುತ್ತದೆ ಎಂದು ನೀನು ಹೇಳಿರುವ ಈ ಕ್ರಮವಿದೆಯಲ್ಲ, ಅದರ ಕೋಪವು ಎಂದರೆ ವಿಪರ್ಯಾಸವು, ಬೇರೆಯಾಗಿ ಬಿಡುವದು (ಎಂಬ ದೋಷ)ವಾಗುವದು[2] ಎಂದು ಅಭಿಪ್ರಾಯ.

---

1. ವಾದದಲ್ಲಿ ತಪ್ಪಾಗಿ ತಿಳಿದುಕೊಳ್ಳುವದು. ಎದುರಾಳಿಯು ತನ್ನ ಮತದಲ್ಲಿ ಆರೋಪಿಸಿದ ದೋಷವನ್ನು ಪರಿಪರಿಸಿಕೊಳ್ಳದೆ ಅಥವಾ ಆತನ ಪಕ್ಷವನ್ನು ಖಂಡಿಸದೆ ಆಗುವ ಸೋಲಿಗೆ ನಿಗ್ರಹಸ್ಥಾನವೆಂದು ಹೆಸರು. ಇಲ್ಲಿ ಅಪರಿಜ್ಞಾನವೆಂದರೆ ಪ್ರತಿವಾದಿಯು ಹೇಳಿದ್ದನ್ನು ತಿಳಿದುಕೊಳ್ಳದಿರುವದೆಂಬ ಅಜ್ಞಾನವಲ್ಲ; ಪ್ರತಿವಾದಿಗೆ ಉತ್ತರವನ್ನು ಹೇಳುವದಕ್ಕೆ ತೋಚದೆ ಸುಮ್ಮನಿರುವ ಅಪ್ರತಿಭೆ ಎಂಬ ನಿಗ್ರಹಸ್ಥಾನವಿದು.

2. ಮೊದಲು ಮಾಡಿದ ಪ್ರತಿಜ್ಞೆಯನ್ನು ಬಿಡುವದು ಪ್ರತಿಜ್ಞಾಹಾನಿಯು, ಮೊದಲಿನ ಪ್ರತಿಜ್ಞೆಗೆ ವಿರುದ್ಧವಾಗಿಯೇ ಒಪ್ಪಿಕೊಂಡು ವಾದಿಸುವದಕ್ಕೆ ಹೊರಟರೆ ಅಪಸಿದ್ಧಾಂತವು–

ಹೀಗೆ ಹೇತುಫಲಗಳಿಗೆ ಕಾರ್ಯಕಾರಣಭಾವವು ಹೊಂದುವದಿಲ್ಲವಾದ್ದರಿಂದ, ಅಜಾತಿಯನ್ನೇ ಯಾವದೂ ಹುಟ್ಟುವದಿಲ್ಲವೆಂಬುದನ್ನೇ, ಒಬ್ಬರ (ಪಕ್ಷದಲ್ಲಿ) ಮತ್ತೊಬ್ಬರು ದೋಷವನ್ನು ಹೇಳುತ್ತಿರುವ(ಈ) ವಾದಿಗಳಾದ ಬುದ್ಧರು, ಪಂಡಿತರು[1] ಬೆಳಗಿಸಿದಂತೆ ತಿಳಿಸಿಕೊಟ್ಟಂತೆ ಆಗುವದು—ಎಂದರ್ಥ.

(ಭಾಷ್ಯ)

೨೪೫. ನನು ಹೇತುಫಲಯೋಃ ಕಾರ್ಯಕಾರಣಭಾವಃ ಇತಿ ಅಸ್ಮಾಭಿಃ ಉಕ್ತಮ್ । ಶಬ್ದಮಾತ್ರಮ್ ಆಶ್ರಿತ್ಯ ಛಲಮಿದಂ ತ್ವಯಾ ಉಕ್ತಮ್ "ಪುತ್ರಾಜ್ಜನ್ಮ ಪಿತುರ್ಯಥಾ" (೪–೧೫). "ವಿಷಾಣವಚ್ಚ ಅಸಮ್ಬನ್ಧಃ" (೪–೧೬) ಇತ್ಯಾದಿ । ನ ಹಿ ಅಸ್ಮಾಭಿಃ ಅಸಿದ್ಧಾತ್ ಹೇತೋಃ ಫಲಸಿದ್ಧಿಃ, ಅಸಿದ್ಧಾದ್ ವಾ ಫಲಾತ್ ಹೇತುಸಿದ್ಧಿಃ ಅಭ್ಯುಪಗತಾ । ಕಿಂ ತರ್ಹಿ ? ಬೀಜಾಙ್ಕುರವತ್ ಕಾರ್ಯಕಾರಣಭಾವಃ ಅಭ್ಯುಪಗಮ್ಯತೇ ಇತಿ । ಅತ್ರ ಉಚ್ಯತೇ—

(ಭಾಷ್ಯಾರ್ಥ)

(ಆಕ್ಷೇಪ) :—ಹೇತುಫಲಗಳಿಗೆ ಕಾರ್ಯಕಾರಣ(ವಿರುತ್ತದೆ) ಎಂದು ನಾವು ಹೇಳಿದೆವು. ಬರಿಯ ಮಾತನ್ನು ಆಶ್ರಯಿಸಿಕೊಂಡು "ಮಗನಿಂದ ತಂದೆಯ ಜನ್ಮ (ವಾಗುವದು) ಹೇಗೋ (ಹಾಗೆ)" (೪–೧೫), "ಕೋಡುಗಳಂತೆ (ಒಂದಕ್ಕೊಂದಕ್ಕೆ) ಸಂಬಂಧವಿರುವದಿಲ್ಲ" (೪–೧೬) ಎಂದು ಮುಂತಾಗಿ **ಛಲವನ್ನು**[2] ಹೇಳಿರುತ್ತೀಯೆ. ಏಕೆಂದರೆ ತಾನೇ ಸಿದ್ಧವಾಗದೆ ಇರುವ ಹೇತುವಿನಿಂದ ಫಲವು ಸಿದ್ಧವಾಗುತ್ತದೆಂದಾಗಲಿ ತಾನೇ ಸಿದ್ಧವಾಗದೆ ಇರುವ ಫಲದಿಂದ ಹೇತುವು ಸಿದ್ಧಿಯಾಗುವದೆಂದಾಗಲಿ ನಾವು ಒಪ್ಪಿರುವದಿಲ್ಲ: ಮತ್ತೇನೆಂದರೆ **ಬೀಜಾಂಕುರಗಳಂತೆ**[3] (ಒಂದಕ್ಕೊಂದಕ್ಕೆ) ಕಾರ್ಯಕಾರಣಭಾವವನ್ನು ಒಪ್ಪಿರುತ್ತೇವೆ.

(ಪರಿಹಾರ) :—ಇದಕ್ಕೆ (ಉತ್ತರವನ್ನು) ಹೇಳುತ್ತೇವೆ :—

---

1. ಇದು ಹಾಸ್ಯಗರ್ಭಿತವಿಶೇಷಣ. ತಾವೇ ಪಂಡಿತರೆಂದು ತಿಳಿದುಕೊಂಡಿರುವ ವಾದಿಗಳು ಧರ್ಮದಿಂದ ಶರೀರವು ಬರುತ್ತದೆಯೆಂತಲೂ ಶರೀರದಿಂದ ಧರ್ಮವುಂಟಾಗುವದೆಂತಲೂ ಹೇಳುತ್ತಾ ಯಾವದೂ ಹುಟ್ಟುವದೇ ಇಲ್ಲ ಎಂಬ ನಮ್ಮ ಅಜಾತಿವಾದವನ್ನೇ ಸಿದ್ಧಪಡಿಸಿಕೊಡುತ್ತಿದ್ದಾರೆ ಎಂದು ಭಾವ.

2. ಮಾತನ್ನಾಡಿದವನ ಅಭಿಪ್ರಾಯಕ್ಕೆ ವಿರುದ್ಧವಾದ ಮತ್ತೊಂದು ಅಭಿಪ್ರಾಯವನ್ನು ಅವನ ಮಾತಿಗೆ ಕಲ್ಪಿಸುವದು ಛಲವು (ನ್ಯಾ. ಸೂ. ೧ ೨ ೧೨).

3. ಹಿಂದೆ ೨೫೭ ಪುಟದ 3 ಟಿಪ್ಪಣಿಯಲ್ಲಿ ಹೇಳಿದ ವಿಕಲ್ಪಗಳಲ್ಲಿ ಇದು ಮೂರನೆಯದು.

**ಬೀಜಾಙ್ಕುರಾಖ್ಯೋ ದೃಷ್ಟಾನ್ತಃ ಸದಾ ಸಾಧ್ಯಸಮೋ ಹಿ ಸಃ ।**
**ನ ಹಿ ಸಾಧ್ಯಸಮೋ ಹೇತುಃ ಸಿದ್ಧೌ ಸಾಧ್ಯಸ್ಯ ಯುಜ್ಯತೇ ॥ ೨೦ ॥**

೨೦. ಬೀಜಾಂಕುರವೆಂಬ ದೃಷ್ಟಾಂತವು (ಇರುವದಲ್ಲ), ಅದು ಯಾವಾಗಲೂ ಸಾಧ್ಯಸಮವೇ. ಸಾಧ್ಯಕ್ಕೆ ಸಮವಾದ ಹೇತು ಸಾಧ್ಯವನ್ನು ಸಿದ್ಧಿಮಾಡುವದಕ್ಕೆ ಉಪಯುಕ್ತವಾಗುವದಿಲ್ಲವಷ್ಟೆ.

(ಭಾಷ್ಯ)

೨೪೬. ಬೀಜಾಙ್ಕುರಾಖ್ಯಃ ದೃಷ್ಟಾನ್ತಃ ಯಃ ಸ[1] ಸಾಧ್ಯೇನ ಸಮಃ ತುಲ್ಯಃ ಮಮ ಇತ್ಯಭಿಪ್ರಾಯಃ । ನನು ಪ್ರತ್ಯಕ್ಷಃ ಕಾರ್ಯಕಾರಣಭಾವಃ ಬೀಜಾಙ್ಕುರಯೋಃ ಅನಾದಿಃ । ನ । ಪೂರ್ವಸ್ಯ ಪೂರ್ವಸ್ಯ ಅಪರವತ್[2] ಆದಿಮತ್ತ್ವಾಭ್ಯುಪಗಮಾತ್ । ಯಥಾ ಇದಾನೀಮ್ ಉತ್ಪನ್ನಃ ಅಪರಃ ಅಙ್ಕುರಃ ಬೀಜಾತ್ ಆದಿಮಾನ್ ಬೀಜಂ ಚ ಅಪರಮ್ ಅನ್ಯಸ್ಮಾತ್ ಅಙ್ಕುರಾತ್ ಇತಿ ಕ್ರಮೇಣೋತ್ಪನ್ನತ್ವಾತ್ ಆದಿಮತ್। ಏವಂ ಪೂರ್ವಃ ಪೂರ್ವಃ ಅಙ್ಕುರಃ ಬೀಜಂ ಚ ಪೂರ್ವಂ ಪೂರ್ವಮ್ ಆದಿಮದೇವ ಇತಿ ಪ್ರತ್ಯೇಕಂ ಸರ್ವಸ್ಯ ಬೀಜಾಙ್ಕುರಜಾತಸ್ಯ ಆದಿಮತ್ತ್ವಾತ್ ಕಸ್ಯಚಿದಪಿ ಅನಾದಿತ್ವಾನುಪಪತ್ತಿಃ । ಏವಂ ಹೇತುಫಲಾನಾಮ್ ॥

(ಭಾಷ್ಯಾರ್ಥ)

ಬೀಜಾಂಕುರವೆಂಬ ದೃಷ್ಟಾಂತವಿದೆಯಲ್ಲ, ಅದು (ಯಾವಾಗಲೂ ಸಾಧ್ಯಸಮವು[3]), ನನ್ನ (ಮತದಲ್ಲಿ ಅದೂ) ಸಾಧ್ಯಕ್ಕೆ ಸಮವಾಗಿರುತ್ತದೆ, (ಅದನ್ನು) ಹೋಲುವದಾಗಿದೆ ಎಂದು ಅಭಿಪ್ರಾಯ.

(ಆಕ್ಷೇಪ) :—ಬೀಜಾಂಕುರಗಳಿಗೆ ಅನಾದಿಯಾದ ಕಾರ್ಯಕಾರಣಭಾವವಿರುವದು ಪ್ರತ್ಯಕ್ಷವಾಗಿದೆಯಲ್ಲ !

(ಪರಿಹಾರ) :—ಹಾಗಲ್ಲ. ಏಕೆಂದರೆ ಮುಂದಿನದಕ್ಕೆ ಹೇಗೋ ಹಾಗೆ ಹಿಂದು ಹಿಂದಿನದಕ್ಕೆ ಆದಿಯಿರುವದೆಂದು (ನೀವು) ಒಪ್ಪಿರುತ್ತೀರಿ. (ಇದರ ವಿವರ): ಈಗ

1. ಇದರ ಮುಂದೆ ' ಸದಾ ಸಾಧ್ಯಸಮಃ ' ಎಂಬ ಮಾತುಗಳು ಬಿಟ್ಟು ಹೋಗಿರಬೇಕೆಂದು ತೋರುತ್ತದೆ.

2. ' ಅಪರಭಾವಾತ್ ' ಎಂಬ ವಾ॥ ಕಾ॥ ಪಾಠಗಳಿಗಿಂತ ಇದೇ ಮೇಲು.

3. ಸಾಧ್ಯವು ಹೇಗೆ ಇನ್ನೂ ಸಿದ್ಧವಾಗಿಲ್ಲವೋ ಹಾಗೆ ಅದೂ ಸಿದ್ಧವಾಗಿಲ್ಲ—ಎಂದರ್ಥ.

ಬೀಜದಿಂದ ಹುಟ್ಟಿದ (ಅದರ) ಮುಂದಿನ ಮೊಳಕೆಯು ಹೇಗೆ ಆದಿಯುಳ್ಳದ್ದೋ, (ಆ) ಮತ್ತೊಂದು ಮೊಳಕೆಯಿಂದ (ಹುಟ್ಟುವ) (ಅದರ) ಮುಂದಿನ ಬೀಜವೂ ಈ ಕ್ರಮದಿಂದ ಹುಟ್ಟುವದರಿಂದ ಆದಿಯುಳ್ಳದ್ದೋ, ಹಾಗೆಯೇ ಹಿಂದುಹಿಂದಿನ ಮೊಳಕೆಯೂ ಹಿಂದುಹಿಂದಿನ ಬೀಜವೂ ಆದಿಯುಳ್ಳದ್ದೇ (ಆಗಿರುತ್ತದೆ)ಯಾದ್ದರಿಂದ ಬೀಜಾಂಕುರಸಮೂಹವೆಲ್ಲವೂ ಒಂದೊಂದಾಗಿ (ನೋಡಿದರೆ) ಆದಿಯುಳ್ಳದ್ದೇ ಆಗಿರುವದರಿಂದ, ಯಾವದೊಂದೂ ಅನಾದಿಯೆಂಬುದು ಹೊಂದುವಹಾಗಿರುವದಿಲ್ಲ. ಇದರಂತೆಯೇ ಹೇತುಫಲಗಳಿಗೂ (ಅನಾದಿತ್ವವು ಹೊಂದುವಹಾಗಿಲ್ಲ).

(ಭಾಷ್ಯ)

೨೪೭. ಅಥ ಬೀಜಾಙ್ಕುರಸನ್ತತೇಃ ಅನಾದಿಮತ್ತ್ವಮ್ ಇತಿ ಚೇತ್ । ನ । ಏಕತ್ವಾನುಪಪತ್ತೇಃ । ನ ಹಿ ಬೀಜಾಙ್ಕುರವ್ಯತಿರೇಕೇಣ ಬೀಜಾಙ್ಕುರಸನ್ತತಿರ್ನಾಮ ಏಕಾ ಅಭ್ಯುಪಗಮ್ಯತೇ, ಹೇತುಫಲಸನ್ತತಿರ್ವಾ ತದನಾದಿತ್ವವಾದಿಭಿಃ । ತಸ್ಮಾತ್ ಸೂಕ್ತಂ ಹೇತೋಃ ಫಲಸ್ಯ ಚ ಅನಾದಿಃ ಕಥಂ ತೈರುಪವರ್ಣ್ಯತೇ ಇತಿ । ತಥಾ ಚ ಅನ್ಯದಪಿ ಅನುಪಪತ್ತೇಃ ನ ಛಲಮ್ ಇತಿ ಅಭಿಪ್ರಾಯಃ ॥

(ಭಾಷ್ಯಾರ್ಥ)

(ಆಕ್ಷೇಪ) :—ಹಾಗಾದರೆ ಬೀಜಾಂಕುರಗಳ ಪ್ರವಾಹವೇ ಅನಾದಿಯಾಗಿರಬಹುದಲ್ಲ !

(ಪರಿಹಾರ) :—ಹಾಗಲ್ಲ. ಏಕೆಂದರೆ ಅದು ಒಂದೆಂಬುದು ಹೊಂದುವದಿಲ್ಲ.

(ಇದರ ವಿವರ) : ಬೀಜಾಂಕುರಗಳನ್ನು ಬಿಟ್ಟರೆ ಬೀಜಾಂಕುರಪ್ರವಾಹವೆಂಬುದೊಂದು (ಬೇರೆಯಾಗಿ) ಇದೆಯೆಂದಾಗಲಿ, (ಹೇತುಫಲಗಳನ್ನು ಬಿಟ್ಟು) ಹೇತುಫಲಪ್ರವಾಹವೆಂಬುದೊಂದು (ಬೇರೆಯಾಗಿದೆ)ಯೆಂದಾಗಲಿ ಇವು ಅನಾದಿ ಎಂಬವರು ಒಪ್ಪಿರುವದೇ ಇಲ್ಲ. ಆದ್ದರಿಂದ "ಅವರು ಹೇತುವಿಗೂ ಫಲಕ್ಕೂ ಅನಾದಿತ್ವವನ್ನು ಹೇಳುವದು ಹೇಗೆ" ? (೪–೧೪) ಎಂದು (ನಾವು) ಹೇಳಿದ್ದು ಸರಿಯೇ. ಇದರಂತೆ ಮಿಕ್ಕದ್ದೂ[1]–(ನಾವು ಹೇಳಿದ್ದು ಸರಿಯೇ, ವಾದಿಗಳು ಹೇಳಿದ ದೃಷ್ಟಾಂತವು) ಹೊಂದುವದಿಲ್ಲವಾದ್ದರಿಂದ (ನಾವು ಹೇಳಿದ್ದು) ಛಲವಲ್ಲ ಎಂದು ಅಭಿಪ್ರಾಯ.

---

1. ಮಗನಿಂದ ತಂದೆಗೆ ಜನ್ಮವಾಗುವಂತೆ, ಎತ್ತಿನ ಕೋಡುಗಳಿಗೆ ಸಂಬಂಧವಿಲ್ಲದಿರುವಂತೆ–ಎಂದು ಹೇಳಿದ್ದು.

(ಭಾಷ್ಯ)

೨೪೮. ನ ಚ ಲೋಕೇ ಸಾಧ್ಯಸಮಃ ಹೇತುಃ ಸಾಧ್ಯಸ್ಯ[1] ಸಿದ್ಧೌ ಸಿದ್ಧಿ ನಿಮಿತ್ತಂ ಯುಜ್ಯತೇ[2] ಪ್ರಯುಜ್ಯತೇ ಪ್ರಮಾಣಕುಶಲೈಃ ಇತ್ಯರ್ಥಃ । ಹೇತುಃ ಇತಿ ದೃಷ್ಟಾನ್ತೋಽತ್ರ ಅಭಿಪ್ರೇತಃ । ಗಮಕತ್ವಾತ್ । ಪ್ರಕೃತೋ ಹಿ ದೃಷ್ಟಾನ್ತಃ ನ ಹೇತುಃ ಇತಿ ॥

(ಭಾಷ್ಯಾರ್ಥ)

ಲೋಕದಲ್ಲಿ ಸಾಧ್ಯಕ್ಕೆ ಸಮನಾಗಿರುವ[3] ಹೇತುವು[4] ಸಾಧ್ಯಸಿದ್ಧಿಯಲ್ಲಿ (ಸಾಧ್ಯವನ್ನು) ಸಿದ್ಧಿಮಾಡುವ ನಿಮಿತ್ತದಿಂದ ಉಪಯುಕ್ತವಾಗುವದಿಲ್ಲ, ಪ್ರಮಾಣ(ವನ್ನು ಉಪಯೋಗಿಸುವದರಲ್ಲಿ) ಜಾಣರಾದವರು (ಅದನ್ನು) ಪ್ರಯೋಗಿಸುವದಿಲ್ಲವಲ್ಲವೆ ? ಎಂದು ಅರ್ಥ. ಇಲ್ಲಿ ಹೇತು ಎಂಬ (ಮಾತು) ದೃಷ್ಟಾಂತವನ್ನು ಹೇಳುವ ಅಭಿಪ್ರಾಯದಿಂದ (ಪ್ರಯುಕ್ತವಾಗಿದೆ). ಏಕೆಂದರೆ (ಹೀಗೆಂದು ಸಂದರ್ಭದಿಂದ) ಗೊತ್ತಾಗುತ್ತದೆ. ಹೇಗೆಂದರೆ ಇಲ್ಲಿ ದೃಷ್ಟಾಂತವು ಪ್ರಕೃತವಾಗಿದೆಯೇ ಹೊರತು ಹೇತುವು (ಪ್ರಕೃತವಾಗಿರುವ)ದಿಲ್ಲ[5]. ಆದ್ದರಿಂದ (ಹೇತುವೆಂದರೆ ದೃಷ್ಟಾಂತವೇ).

## ಹೇತುಫಲಗಳ ಅಜಾತಿತ್ವಸಿದ್ಧಿ

(ಭಾಷ್ಯ)

೨೪೯. ಕಥಂ ಬುದ್ಧೈಃ ಅಜಾತಿಃ ಪರಿದೀಪಿತಾ ಇತಿ ? ಆಹ—

(ಭಾಷ್ಯಾರ್ಥ)

ಬುದ್ಧರು ಅಜಾತಿಯನ್ನೇ ಬೆಳಗಿದಂತಾಯಿತು (೪–೧೯) (ಎಂದಿರಲ್ಲ, ಅದು) ಹೇಗೆ ? ಎಂದರೆ ಹೇಳುತ್ತಾರೆ:—

---

1. 'ಸಾಧ್ಯಸಿದ್ಧೌ' ಎಂಬ ಆ॥ ಪಾಠಕ್ಕಿಂತ ಇದೇ ಮೇಲು.

2. ಆ॥ ದಲ್ಲಿ ಬಿಟ್ಟುಹೋಗಿದೆ.

3. ದೃಷ್ಟಾಂತದಲ್ಲಿ ಸಾಧ್ಯವು ಸಿದ್ಧವಾಗಿರಬೇಕು. ಆದರೆ ಸಾಧ್ಯವಾದ ಅನಾದಿತ್ವವು ದೃಷ್ಟಾಂತದಲ್ಲಿಯೂ ಇಲ್ಲವಾದ್ದರಿಂದ ಅದು ಸಾಧ್ಯಸಮವು.

4. ಇಲ್ಲಿ ದೃಷ್ಟಾಂತವೆಂದು ಈ ಮಾತಿಗೆ ಅರ್ಥ. ಇದನ್ನು ಮುಂದೆ ಭಾಷ್ಯಕಾರರು ಸ್ಪಷ್ಟಪಡಿಸುವರು.

5. ಪರ್ವತದಲ್ಲಿ ಬೆಂಕಿಯಿದೆ, ಏಕೆಂದರೆ ಅದರಲ್ಲಿ ಅಡಿಗೆಯಮನೆಯಲ್ಲಿರುವಂತೆಯೇ ಹೊಗೆಯಿದೆ-ಎಂಬ ನ್ಯಾಯದಲ್ಲಿ ಹೊಗೆಯೆಂಬುದು ಹೇತು, ಅಡಿಗೆಯ ಮನೆಯು ದೃಷ್ಟಾಂತವು; ಹೀಗೆಯೇ ಹೇತುಫಲಗಳು ಅನಾದಿ ಎಂಬಲ್ಲಿ ಬೀಜಾಂಕುರದಂತೆ ಎಂಬುದೂ ದೃಷ್ಟಾಂತವು, ಹೇತುವಲ್ಲ.

**ಪೂರ್ವಾಪರಾಪರಿಜ್ಞಾನಮಜಾತೇಃ ಪರಿದೀಪಕಮ್ ।**
**ಜಾಯಮಾನಾದ್ಧಿ ವೈ ಧರ್ಮಾತ್ ಕಥಂ ಪೂರ್ವಂ ನ ಗೃಹ್ಯತೇ ॥೨೧॥**

೨೧. ಮೊದಲು, ಆಮೇಲಿನದು-(ಇವನ್ನು) ಅರಿಯದಿರುವದು ಅಜಾತಿಯನ್ನು ಬೆಳಗಿತೋರಿಸುವದು. ಏಕೆಂದರೆ ಹುಟ್ಟುವ ಧರ್ಮಕ್ಕಿಂತ ಮೊದಲು (ಇಂಥದ್ದೆಂದು) ತಿಳಿಯದೆ ಇರುವದು ಹೇಗೆ?

(ಭಾಷ್ಯ)

೨೫೦. ಯದೇತತ್ ಹೇತುಫಲಯೋಃ ಪೂರ್ವಾಪರಾಪರಿಜ್ಞಾನಂ ತಚ್ಚೈತತ್ ಅಜಾತೇಃ ಪರಿದೀಪಕಮ್ ಅವಬೋಧಕಮ್ ಇತ್ಯರ್ಥಃ। ಜಾಯಮಾನೋ ಹಿ ಚೇತ್[1] ಧರ್ಮಃ ಗೃಹ್ಯತೇ ಕಥಂ ತಸ್ಮಾತ್ ಪೂರ್ವಂ ಕಾರಣಂ ನ ಗೃಹ್ಯತೇ? ಅವಶ್ಯಂ ಹಿ ಜಾಯಮಾನಸ್ಯ ಗ್ರಹೀತ್ರಾ ತಜ್ಜನಕಂ ಗ್ರಹೀತವ್ಯಮ್ । ಜನ್ಯಜನಕಯೋಃ ಸಮ್ಬನ್ಧಸ್ಯ ಅನಪೇತತ್ವಾತ್ । ತಸ್ಮಾತ್ ಅಜಾತಿಪರಿದೀಪಕಂ ತತ್ ಇತ್ಯರ್ಥಃ ॥

(ಭಾಷ್ಯಾರ್ಥ)

(ಹೀಗೆ) ಹೇತುಫಲಗಳಲ್ಲಿ (ಯಾವದು) ಮೊದಲು, (ಯಾವದು) ಆಮೇಲೆ ಎಂಬುದನ್ನು ಅರಿಯದಿರುವದುಂಟಲ್ಲ, ಆ ಇದೂ ಅಜಾತಿಯನ್ನು ಬೆಳಗಿ ತೋರಿಸತಕ್ಕದ್ದು, ತಿಳಿಯಪಡಿಸತಕ್ಕದ್ದು[2] ಎಂದರ್ಥ. ಏಕೆಂದರೆ ಹುಟ್ಟುವ ವಸ್ತುವು ತಿಳಿಯಬರುವದಾದರೆ, ಅದಕ್ಕಿಂತ ಮೊದಲು (ಇರುವ) ಕಾರಣವು ಏಕೆ ತಿಳಿಯಬರುವದಿಲ್ಲ? ಹುಟ್ಟುವ (ವಸ್ತುವನ್ನು) ಅರಿಯುವವನು ಅವಶ್ಯವಾಗಿ ಅದನ್ನು ಹುಟ್ಟಿಸುವ (ಕಾರಣವನ್ನು) ಅರಿಯಲೇ ಬೇಕು; ಏಕೆಂದರೆ ಹುಟ್ಟುವ (ಕಾರ್ಯ), ಹುಟ್ಟಿಸುವ (ಕಾರಣ)-ಇವೆರಡಕ್ಕೂ ಇರುವ ಸಂಬಂಧವು ಎಂದಿಗೂ ಹೋಗಲಾರದು[3]. ಆದ್ದರಿಂದ ಇದು ಅಜಾತಿಯನ್ನು ಬೆಳಗಿತೋರಿಸತಕ್ಕದ್ದು ಎಂದರ್ಥ.

1. "ಚ" ಆ॥ "ವೈ" ಪ್ಪೆ॥-ಎಂಬ ಪಾಠಗಳಿಗಿಂತ ಇದೇ ಮೇಲು.

2. ಹುಟ್ಟುವ ಹೇತುಫಲಗಳನ್ನು ಬಲ್ಲನರು ಇಂಥದ್ದರಿಂದ ಅವು ಹುಟ್ಟುವವೆಂಬುದನ್ನು ಬಲ್ಲವರಾಗಿರಬೇಕು; ಆದರೆ ಆದನ್ನರಿಯೆವೆಂಬುದರಿಂದ ಹುಟ್ಟನ್ನೇ ಅರಿಯೆವೆಂದು ಅವರು ಒಪ್ಪಿದಂತೆ ಆಯಿತು.

3 ಕಾರ್ಯಕಾರಣಗಳಿಗೆ ನಿತ್ಯಸಂಬಂಧವಿದೆ ಎನ್ನುವವರು ಕಾರಣವು ಯಾವದು ಎಂಬುದನ್ನು ಗೊತ್ತುಪಡಿಸಬೇಕು. ಆದರೆ ಹೇತುಫಲಗಳಲ್ಲಿ ಯಾವದು ಮೊದಲೆಂಬುದನ್ನು ಗೊತ್ತುಪಡಿಸಲಾರದೆ ಇರುವದರಿಂದ ಅವು ಹುಟ್ಟುವದಿಲ್ಲವೆಂದೇ ಒಪ್ಪಿಕೊಂಡಂತಾಯಿತೆಂದು ಭಾವ.

(ಭಾಷ್ಯ)

೨೫೧. ಇತಶ್ಚ ನ ಜಾಯತೇ ಕಿಂಚಿತ್—

(ಭಾಷ್ಯಾರ್ಥ)

ಈ (ಕಾರಣ)ದಿಂದಲೂ ಯಾವ (ವಸ್ತುವೂ) ಹುಟ್ಟುವದಿಲ್ಲ:—

**ಸ್ವತೋ ವಾ ಪರತೋ ವಾಪಿ ನ ಕಿಂಚಿದ್ವಸ್ತು ಜಾಯತೇ ।**
**ಸದಸತ್ಸದಸದ್ವಾಪಿ ನ ಕಿಂಚಿದ್ವಸ್ತು ಜಾಯತೇ ॥ ೨೨ ॥**

೨೨. ತನ್ನಿಂದಲೇ ಆಗಲಿ ಮತ್ತೊಂದರಿಂದಲಾಗಲಿ, ಯಾವದೊಂದು ವಸ್ತುವೂ ಹುಟ್ಟುವದಿಲ್ಲ. ಇರುವದಾಗಲಿ, ಇಲ್ಲದ್ದಾಗಲಿ, ಇದ್ದೂ ಇಲ್ಲದ್ದಾಗಲಿ ಯಾವ ವಸ್ತುವೂ ಹುಟ್ಟುವದಿಲ್ಲ.

(ಭಾಷ್ಯ)

೨೫೨. ಯತ್ ಜಾಯಮಾನಂ ವಸ್ತು ಸ್ವತಃ ಪರತಃ ಉಭಯತೋ ವಾ; ಸತ್, ಅಸತ್, ಸದಸದ್ ವಾ[1] ಜಾಯತೇ । ನ ತಸ್ಯ ಕೇನಾಪಿ ಪ್ರಕಾರೇಣ ಜನ್ಮ ಸಮ್ಭವತಿ । ನ ತಾವತ್ ಸ್ವಯಮೇವ ಅಪರಿನಿಷ್ಪನ್ನಾತ್ ಸ್ವತಃ ಸ್ವರೂಪಾತ್ ಸ್ವಯಮೇವ ಜಾಯತೇ । ಯಥಾ ಘಟಸ್ತಸ್ಮಾದೇವ ಘಟಾತ್ । ನಾಪಿ ಪರತಃ ಅನ್ಯಸ್ಮಾತ್ ಅನ್ಯಃ । ಯಥಾ ಘಟಾತ್ ಪಟಃ ಪಟಾತ್ ಪಟಾನ್ತರಮ್ । ತಥಾ ನೋಭಯತಃ । ವಿರೋಧಾತ್ । ಯಥಾ ಘಟಪಟಾಭ್ಯಾಂ ಘಟಃ ಪಟೋ ವಾ ನ ಜಾಯತೇ । ನನು ಮೃದೋ ಘಟೋ ಜಾಯತೇ ಪಿತುಶ್ಚ ಪುತ್ರಃ । ಸತ್ಯಮ್ । ಅಸ್ತಿ ಜಾಯತೇ ಇತಿ ಪ್ರತ್ಯಯಃ ಶಬ್ದಶ್ಚ ಮೂಢಾನಾಮ್ । ತಾವೇವ ಶಬ್ದಪ್ರತ್ಯಯೌ ವಿವೇಕಿಭಿಃ ಪರೀಕ್ಷ್ಯೇತೇ ಕಿಂ ಸತ್ಯಮೇವ ತೌ ಉತ ಮೃಷಾ ಇತಿ । ಯಾವತಾ ಪರೀಕ್ಷ್ಯಮಾಣಂ[2] ಶಬ್ದಪ್ರತ್ಯಯವಿಷಯಂ ವಸ್ತು ಘಟಪುತ್ರಾದಿಲಕ್ಷಣಂ ಶಬ್ದಮಾತ್ರಮೇವ ತತ್[3] । “ ವಾಚಾರಮ್ಭಣಮ್ ” (ಛಾಂ. ೬–೪–೪೧) ಇತಿ ಶ್ರುತೇಃ ॥

(ಭಾಷ್ಯಾರ್ಥ)

ಏಕೆಂದರೆ ಹುಟ್ಟುವ ವಸ್ತು ತಾನೇ, ಮತ್ತೊಂದರಿಂದ, ಅಥವಾ ಎರಡರಿಂದಲೂ (ಹುಟ್ಟುತ್ತದೆ); ಇರುವದು, ಇಲ್ಲದ್ದು, ಅಥವಾ ಇದ್ದೂ ಇಲ್ಲದ್ದು ಹುಟ್ಟುತ್ತದೆ

1. ಇಲ್ಲಿ ಅಚ್ಚಿನ ಪುಸ್ತಕಗಳಲ್ಲಿರುವ ‘ ನ ’ ಎಂಬುದನ್ನು ಬಿಟ್ಟುಬಿಟ್ಟದೇವೆ.

2. “ ಪರೀಕ್ಷ್ಯಮಾಣೇ ” ಎಂಬ ಪಾಠಕ್ಕಿಂತ ಇದೇ ಮೇಲು.

3. ಈ ಮಾತು ಇಲ್ಲದಿದ್ದರೂ ಸಾಗುತ್ತದೆ.

(ಎನ್ನಬೇಕು[1]). (ಆದರೆ) ಅದಕ್ಕೆ (ಈ) ಯಾವ ಬಗೆಯಿಂದಲೂ ಹುಟ್ಟುವಿಕೆಯು ಆಗುವಂತಿಲ್ಲ.

(ಹೇಗೆಂದರೆ), ಮೊದಲನೆಯದಾಗಿ ತಾನೇ ಸಿದ್ಧವಾಗದಿರುವ ತನ್ನ ಸ್ವರೂಪದಿಂದ ತಾನೇ ಹುಟ್ಟುವದಿಲ್ಲ; ಉದಾಹರಣೆಗೆ (ಒಂದು) ಗಡಿಗೆಯು ಅದೇ ಗಡಿಗೆಯಿಂದ (ಹುಟ್ಟುವದಿಲ್ಲ). ಮತ್ತೊಂದರಿಂದ, ಇನ್ನೊಂದು ವಸ್ತುವಿನಿಂದ (ಅದಕ್ಕಿಂತ) ಬೇರೆಯಾದ (ಮತ್ತೊಂದು ವಸ್ತು ಹುಟ್ಟುವ)ದಿಲ್ಲ, ಹೇಗೆಂದರೆ ಗಡಿಗೆಯಿಂದ ಬಟ್ಟೆ, ಬಟ್ಟೆಯಿಂದ ಮತ್ತೊಂದು ಬಟ್ಟೆ (ಹುಟ್ಟಲಾರದು). ಇದರಂತೆ (ತನ್ನಿಂದ, ಮತ್ತೊಂದರಿಂದ–ಹೀಗೆ) ಎರಡರಿಂದಲೂ (ಹುಟ್ಟ)ಲಾರದು; ಏಕೆಂದರೆ ಇದು ವಿರುದ್ಧವಾಗಿರುತ್ತದೆ. ಉದಾಹರಣೆಗೆ ಗಡಿಗೆ ಬಟ್ಟೆ–(ಈ ಎರಡ)ರಿಂದ ಗಡಿಗೆಯಾಗಲಿ ಬಟ್ಟೆಯಾಗಲಿ ಹುಟ್ಟಲಾರದು.

(ಆಕ್ಷೇಪ) :—ಮಣ್ಣಿನಿಂದ ಗಡಿಗೆಯು ಹುಟ್ಟುವದಲ್ಲ ! ತಂದೆಯಿಂದ ಮಗನೂ (ಹುಟ್ಟುವನಲ್ಲ[2]) ?

(ಪರಿಹಾರ) :—ನಿಜ. ಹುಟ್ಟುತ್ತದೆ ಎಂಬ ಪ್ರತ್ಯಯವೂ ಮಾತೂ ಮೂಢರಲ್ಲಿರುತ್ತದೆ. (ಆದರೆ) ಈ ಶಬ್ದಪ್ರತ್ಯಯಗಳನ್ನೇ "ಇವೇನು ಸತ್ಯವೊ, ಅಥವಾ ಮಿಥ್ಯೆಯೊ ?" ಎಂದು ವಿವೇಕಿಗಳು ಪರೀಕ್ಷಿಸುತ್ತಾರೆ[3]. ಏಕೆಂದರೆ (ಹಾಗೆ) ಪರೀಕ್ಷೆ ಮಾಡಿದರೆ, (ಈ) ಶಬ್ದಪ್ರತ್ಯಯಗಳಿಗೆ ವಿಷಯವಾಗಿರುವ ಗಡಿಗೆ, ಮಗ–ಮುಂತಾದ ರೂಪದ ವಸ್ತು ಬರಿಯ ಮಾತಾಗಿರುತ್ತದೆ. "(ಕಾರ್ಯವು) ಮಾತಿನಿಂದಾದದ್ದು" (ಛಾಂ. ೬–೪–೧) ಎಂಬ ಶ್ರುತಿಯಿಂದ[4] (ಇದು ಸಿದ್ಧವಾಗುತ್ತದೆ).

---

1. ಈ ಆರು ವಿಕಲ್ಪಗಳನ್ನು ಬಿಟ್ಟರೆ ಹುಟ್ಟುವ ವಸ್ತುವಿಗೆ ಮತ್ತೆ ಯಾವ ಪ್ರಕಾರವೂ ಇರಲಾರದು.

2. ಪ್ರತ್ಯಕ್ಷವಾಗಿ ಸಿದ್ಧವಾಗಿರುವದನ್ನು ಯುಕ್ತಿಯಿಂದ ಅಲ್ಲಗಳೆಯಬಹುದೆ ? ಎಂದು ಪ್ರಶ್ನೆ.

3. ಮೂಢರ ಪ್ರತ್ಯಕ್ಷವು ಪ್ರತ್ಯಕ್ಷಾಭಾಸವು; ಪರೀಕ್ಷಿತಪ್ರತ್ಯಕ್ಷವೇ ಪ್ರಮಾಣವಾಗಿರುವದರಿಂದ ಅದನ್ನು ಪರೀಕ್ಷಿಸುವದಕ್ಕೇ ಇಲ್ಲಿ ವಿಕಲ್ಪವನ್ನು ಮಾಡಿರುತ್ತದೆ ಎಂದು ಸಿದ್ಧಾಂತಿಯ ಆಶಯ.

4. ಕಾರ್ಯವೆಂಬುದು ಬರಿಯ ಮಾತೇ ಹೊರತು ಕಾರಣಕ್ಕಿಂತ ವ್ಯತಿರಿಕ್ತವಾಗಿ ಅದು ಇರುವದೇ ಇಲ್ಲ ಎಂಬ ಅನುಭವವಿದೆ; ಹಾಗೆಂದೇ ಶ್ರುತಿಯು ಹೇಳುತ್ತದೆ. ಶ್ರುತಿಯುಕ್ತ್ಯನುಭವಗಳಿಂದ ಪ್ರತ್ಯಕ್ಷಾಭಾಸವನ್ನು ತಳ್ಳಿಹಾಕುವದು ಯುಕ್ತವೇ ಆಗಿದೆ ಎಂದು ಭಾವ.

(ಭಾಷ್ಯ)

೨೫೩. ಸಚ್ಚೇತ್ ನ ಜಾಯತೇ । ಸತ್ತ್ವಾತ್ । ಮೃತ್ಪಿತ್ರಾದಿವತ್ । ಯದಿ ಅಸತ್, ತಥಾಪಿ ನ ಜಾಯತೇ । ಅಸತ್ತ್ವಾದೇವ, ಶಶವಿಷಾಣಾದಿವತ್ । ಅಥ ಸದಸತ್, ತಥಾಪಿ ನ ಜಾಯತೇ । ವಿರುದ್ಧಸ್ಯ ಏಕಸ್ಯ ಅಸಮ್ಭವಾತ್ । ಅತಃ ನ ಕಿಂಚಿತ್ ವಸ್ತು ಜಾಯತೇ ಇತಿ ಸಿದ್ಧಮ್ । ಯೇಷಾಂ ಪುನಃ ಜನಿರೇವ ಜಾಯತೇ ಇತಿ ಕ್ರಿಯಾಕಾರಕಫಲೈಕತ್ವಮ್ ಅಭ್ಯುಪಗಮ್ಯತೇ, ಕ್ಷಣಿಕತ್ವಂ ಚ ವಸ್ತುನಃ, ತೇ ದೂರತ ಏವ ನ್ಯಾಯಾಪೇತಾಃ । 'ಇದಮ್ ಇತ್ಥಮ್' ಇತಿ ಅವಧಾರಣ ಕ್ಷಣಾನ್ತರಾನವಸ್ಥಾನಾತ್, ಅನನುಭೂತಸ್ಯ ಸ್ಮೃತ್ಯನುಪಪತ್ತೇಶ್ಚ ॥

(ಭಾಷ್ಯಾರ್ಥ)

(ಅದು) ಇರುವದಾದರೆ ಹುಟ್ಟುವದಿಲ್ಲ ; ಏಕೆಂದರೆ ಮಣ್ಣು, ತಂದೆ–ಮೊದಲಾದದ್ದರಂತೆ (ಅದು) ಸತ್ತಾಗಿದೆ[1]. ಅದು ಇಲ್ಲ ಎಂದರೆ, ಹಾಗೂ ಹುಟ್ಟುವದಿಲ್ಲ ; ಏಕೆಂದರೆ ಮೊಲವಕೊಂಬು ಮುಂತಾದದ್ದರಂತೆ ಅಸತ್ತಾಗಿರುತ್ತದೆ[2]. ಹಾಗಿಲ್ಲದೆ ಅದು ಇದ್ದೂ ಇಲ್ಲದ್ದು (ಎನ್ನುವದಾದರೆ) ಹಾಗೂ ಹುಟ್ಟುವದಿಲ್ಲ ; ಏಕೆಂದರೆ (ಹೀಗೆ) ವಿರುದ್ಧವಾಗಿರುವ (ಧರ್ಮಗಳುಳ್ಳ) ಒಂದು (ವಸ್ತು ಇರುವದೆಂಬುದೇ) ಆಗುವ ಹಾಗಿಲ್ಲ[3]. ಆದ್ದರಿಂದ[4] ಯಾವ ವಸ್ತುವೂ ಹುಟ್ಟುವದಿಲ್ಲವೆಂದು ಸಿದ್ಧವಾಯಿತು.

---

1. ಸತ್ತಾಗಿರುವ ಹಗ್ಗವೇ ಮುಂತಾದವುಗಳಿಗೆ ಮಾಯೆಯಿಂದ ಜನ್ಮವುಂಟಾಗಬಹುದೆಂಬುದನ್ನು ೩-೨೭ ರಲ್ಲಿ ಹೇಳಿರುವದಕ್ಕೆ ಇದು ವಿರುದ್ಧವಲ್ಲ; ಏಕೆಂದರೆ ಸದ್ವಸ್ತುವಿಗೆ ನಿಜವಾಗಿ ಜನ್ಮವಿಲ್ಲವೆಂದು ಹೇಳುವದೇ ಪ್ರಕರಣದ ಉದ್ದೇಶವು. ಹುಟ್ಟುವದೆಂದರೆ ಸ್ವರೂಪವನ್ನು ಪಡೆಯುವದು; ಸ್ವರೂಪವು ಮೊದಲೇ ಇದ್ದರೆ, ಇದ್ದದ್ದನ್ನು ಮತ್ತೆ ಪಡೆಯುವದೆಂದರೆ ಅರ್ಥವಿಲ್ಲ ಎಂದು ಭಾವ.

2. ೩-೨೮ನ್ನು ನೋಡಿ.

3. ವಸ್ತುವೇ ಇಲ್ಲದ ಮೇಲೆ ಅದಕ್ಕೆ ಜನ್ಮವಿರಬಹುದೆಂಬ ಶಂಕೆಯುಂಟಾಗಲು ಕಾರಣವೇ ಇರುವದಿಲ್ಲ.

4. ಸತ್ತು, ಅಸತ್ತು, ಅಥವಾ ಸದಸತ್ತು ಆಗಿರುವ ವಸ್ತುವಿಗೆ ತನ್ನಿಂದ, ಮತ್ತೊಂದರಿಂದ ಅಥವಾ ಈ ಎರಡೂ ಸೇರಿದ ವಸ್ತುವಿನಿಂದ ಜನ್ಮವಿಲ್ಲ ಎಂದು ತೋರಿಸಿಕೊಟ್ಟಿರುವದರಿಂದ.

ಇನ್ನು ಯಾರ (ಮತದಲ್ಲಿ) ಹುಟ್ಟುವದೆಂಬ ಕ್ರಿಯೆಯೇ ಹುಟ್ಟುವದೆಂದು ಕ್ರಿಯೆ, ಕಾರಕ, ಫಲ–ಇವುಗಳ ಐಕ್ಯವನ್ನು ಒಪ್ಪಿರುತ್ತದೆಯೋ, ಆ (ಬೌದ್ಧರಂತೂ ನ್ಯಾಯವನ್ನು ಬಿಟ್ಟು ದೂರವಾಗಿಯೇ ಹೋಗಿರುತ್ತಾರೆ. ಏಕೆಂದರೆ 'ಇದು ಹೀಗೆ (ಇದೆ)' ಎಂದು ನಿಶ್ಚಯಿಸುವ ಕ್ಷಣವನ್ನು ಬಿಟ್ಟು (ಮತ್ತೊಂದು) ಕ್ಷಣವೂ ನಿಲ್ಲುವದಿಲ್ಲ[1]. ಅನುಭವಿಸದೆ ಇರುವ ವಸ್ತುವನ್ನು ನೆನಪಿಗೆ ತಂದುಕೊಳ್ಳುವದಕ್ಕೂ ಆಗುವದಿಲ್ಲ[2].

(ಭಾಷ್ಯ)

೨೫೪. ಕಿಂಚ ಹೇತುಫಲಯೋಃ ಅನಾದಿತ್ವಮ್ ಅಭ್ಯುಪಗಚ್ಛತಾ ತ್ವಯಾ ಬಲಾತ್ ಹೇತುಫಲಯೋಃ ಅಜನ್ಮೈವ ಅಭ್ಯುಪಗತಂ ಸ್ಯಾತ್ । ತತ್[3] ಕಥಮ್ ?

(ಭಾಷ್ಯಾರ್ಥ)

ಇದಲ್ಲದೆ ಹೇತುಫಲಗಳು ಅನಾದಿ ಎಂದು ಒಪ್ಪಿರುವ ನೀನು ಹೇತುಫಲಗಳಿಗೆ ಹುಟ್ಟುವಿಕೆಯಿಲ್ಲವೆಂದೇ ಬಲಾತ್ಕಾರದಿಂದ ಒಪ್ಪಿದಂತೆ ಆಗುವದು. ಅದು ಹೇಗೆ ? ಎಂದರೆ—

**ಹೇತುರ್ನ ಜಾಯತೇಽನಾದೇಃ ಫಲಂ ಚಾಪಿ ಸ್ವಭಾವತಃ ।**
**ಆದಿರ್ನ ವಿದ್ಯತೇ ಯಸ್ಯ ತಸ್ಯ ಹ್ಯಾದಿರ್ನ ವಿದ್ಯತೇ　॥ ೨೩ ॥**

೨೩. ಅನಾದಿಯಾದ (ಫಲ)ದಿಂದ ಹೇತು ಹುಟ್ಟುವದಿಲ್ಲ, ಫಲವು ಕೂಡ ಸ್ವಭಾವದಿಂದ (ಹೀಗೆಯೇ ಹುಟ್ಟಲಾರದು). ಏಕೆಂದರೆ ಯಾವದಕ್ಕೆ ಆದಿಯಿರುವದಿಲ್ಲವೋ ಅದಕ್ಕೆ ಆದಿಯಿರುವದೇ ಇಲ್ಲ.

---

1. ಕ್ರಿಯೆ, ಕಾರಕ, ಫಲ-ಮೂರೂ ಒಂದೇ ಕ್ಷಣದಲ್ಲಿರಲಾರವೆಂಬುದು ಅನುಭವ ಸಿದ್ಧ. ಬೇರೆಬೇರೆಯ ಕ್ಷಣದಲ್ಲಿ ಒಂದೇ ವಸ್ತು ಇರುವದಿಲ್ಲ ಎಂಬುದು ಬೌದ್ಧರ ಅಂಗೀಕಾರವಾಗಿರುವದರಿಂದ ಈ ಕ್ರಿಯೆಗೆ ಈ ಫಲ ಎಂದು ಗೊತ್ತುಪಡಿಸುವದಕ್ಕೆ ಆಗುವಂತಿಲ್ಲ–ಎಂದು ಭಾವ.

2. ಎರಡು ಕ್ಷಣಕ್ಕೆ ಸಂಬಂಧಪಟ್ಟ ಒಂದೇ ವಸ್ತುವನ್ನು ಕ್ಷಣಿಕವಾದಿಗಳು ಒಪ್ಪುವದಿಲ್ಲವಾದ್ದರಿಂದ ಸ್ಮೃತಿಯು ಹೇಗೆ ಆಗುವದೆಂಬುದನ್ನು ಆ ವಾದಿಗಳು ತಿಳಿಸಿ ಹೇಳಲಾರರು-ಎಂದು ಭಾವ.

3. ವಾ॥ದಲ್ಲಿಲ್ಲ.

(ಭಾಷ್ಯ)

೨೫೫. ಅನಾದೇಃ ಆದಿರಹಿತಾತ್ ಫಲಾತ್ ಹೇತುಃ ನ ಜಾಯತೇ । ನ ಹಿ ಅನುತ್ಪನ್ನಾತ್ ಅನಾದೇಃ ಫಲಾತ್ ಹೇತೋಃ ಜನ್ಮ ಇಷ್ಯತೇ ತ್ವಯಾ ಫಲಂ ಚಾಪಿ[1] ಆದಿರಹಿತಾತ್ ಅನಾದೇಃ ಹೇತೋಃ ಅಜಾತ್ ಸ್ವಭಾವತ ಏವ ನಿರ್ನಿಮಿತ್ತಂ ಜಾಯತೇ ಇತಿ ನ ಅಭ್ಯುಪಗಮ್ಯತೇ । ತಸ್ಮಾತ್ ಅನಾದಿತ್ವಮ್ ಅಭ್ಯುಪಗಚ್ಛತಾ ತ್ವಯಾ ಹೇತುಫಲಯೋಃ ಅಜನ್ಮೈವ ಅಭ್ಯುಪಗಮ್ಯತೇ । ಯಸ್ಮಾತ್ ಆದಿಃ ಕಾರಣಂ ನ ವಿದ್ಯತೇ ಯಸ್ಯ ಲೋಕೇ ತಸ್ಯ ಹಿ ಆದಿಃ ಪೂರ್ವೋಕ್ತಾ ಜಾತಿಃ ನ ವಿದ್ಯತೇ । ಕಾರಣವತ ಏವ ಹಿ ಆದಿಃ ಅಭ್ಯುಪಗಮ್ಯತೇ ನ ಅಕಾರಣವತಃ ॥

(ಭಾಷ್ಯಾರ್ಥ)

ಅನಾದಿಯಾದ, ಆದಿಯಿಲ್ಲದ ಫಲದಿಂದ ಹೇತುವು ಹುಟ್ಟಲಾರದು. ಏಕೆಂದರೆ (ತಾನು) ಹುಟ್ಟದೆ ಅನಾದಿಯಾಗಿರುವ ಫಲದಿಂದ ಹೇತುವಿಗೆ ಜನ್ಮ (ವಾಗುವದೆಂದು) ನೀನು ಒಪ್ಪುವದಿಲ್ಲ. (ಇದರಂತೆ) ಫಲವುಕೂಡ ಆದಿಯಿಲ್ಲದೆ ಅನಾದಿಯಾಗಿರುವ ಅಜವಾಗಿರುವ ಹೇತುವಿನಿಂದ ಸ್ವಭಾವದಿಂದಲೇ ಯಾವ ನಿಮಿತ್ತವೂ ಇಲ್ಲದೆ ಹುಟ್ಟುತ್ತದೆಯೆಂದೂ (ನೀನು) ಒಪ್ಪುವದಿಲ್ಲ. ಆದ್ದರಿಂದ (ಇವು ಹೀಗೆ) ಅನಾದಿಯೆಂದು ಒಪ್ಪಿರುವ ನೀನು ಹೇತುಫಲಗಳಿಗೆ ಹುಟ್ಟು ಇಲ್ಲವೆಂದೇ ಒಪ್ಪಿದಂತಾಯಿತು[2]. ಏಕೆಂದರೆ ಲೋಕದಲ್ಲಿ ಯಾವದಕ್ಕೆ ಆದಿಯಿಲ್ಲವೋ ಕಾರಣವಿರುವದಿಲ್ಲವೋ, ಅದಕ್ಕೆ ಆದಿಯಿರುವದಿಲ್ಲ, ಹಿಂದೆ ಹೇಳಿದ ಜಾತಿಯು ಇರುವದಿಲ್ಲ. ಕಾರಣವುಳ್ಳದ್ದಕ್ಕೇ, ಹುಟ್ಟುವಿಕೆಯನ್ನು ಒಪ್ಪುತ್ತಾರೆಯೇ ಹೊರತು ಕಾರಣವಿಲ್ಲದ್ದಕ್ಕೆ (ಯಾರೂ ಹುಟ್ಟನ್ನು ಒಪ್ಪುವದಿಲ್ಲ).

## ಚಿತ್ತಕ್ಕಿಂತ ಬೇರೆಯಾದ ವಿಷಯವಿಲ್ಲ

(ಭಾಷ್ಯ)

೨೫೬. ಉಕ್ತಸ್ಯೈವ ಅರ್ಥಸ್ಯ ದೃಢೀಕರಣಚಿಕೀರ್ಷಯಾ ಪುನರಾಕ್ಷಿಪತಿ—

---

1. ಈ. ವಾ॥ ಪಾಠವೇ ಮೂಲಾನುಸಾರಿ.

2. ಹೇತುವೂ ಫಲವೂ ಅನಾದಿಯಾಗಿರುವವು ಎಂದು ಹೇಳುವವನು ಅವು ಹುಟ್ಟುವದಿಲ್ಲವೆಂದು ಹೇಳಿದಂತಾಗುವದು. ಏಕೆಂದರೆ ಶರೀರವೆಂಬ ಫಲವು ಅನಾದಿಯಾಗಿ ಇದ್ದುಕೊಂಡಿದ್ದರೆ ಅದರಿಂದ ಯಾವ ವಿಶೇಷನಿಮಿತ್ತವೂ ಇಲ್ಲದೆ ಧರ್ಮಾಧರ್ಮಗಳು ಹುಟ್ಟುವದಕ್ಕೆ ಕಾರಣವಿಲ್ಲ. ಇದರಂತೆ ಅನಾದಿಯಾದ ಹೇತುವಿನಿಂದ ಶರೀರವು ಹುಟ್ಟುವದಕ್ಕೂ ನಿಮಿತ್ತವಿಲ್ಲ—ಎಂದು ಭಾವ. ಇದು ಭಾಷ್ಯಾನುಸಾರವಾಗಿ ಕಾರಿಕೆಗೆ ಅರ್ಥ. "ಹೇತುಃ ನ ಜಾಯತೇ । ಅನಾದೇಃ=ಅನಾದಿತ್ವಾತ್" ಎಂದು ಅನ್ವಯಿಸಿದರೆ ಹೇತುವು ಅನಾದಿಯಾಗಿರುವದರಿಂದ ಹುಟ್ಟುವದಿಲ್ಲ ಎಂದೂ ಮೂಲಕ್ಕೆ ಅರ್ಥವನ್ನು ಮಾಡಬಹುದಾಗುವದು.

(ಭಾಷ್ಯಾರ್ಥ)

ಹಿಂದೆ ಹೇಳಿದ ವಿಷಯವನ್ನೇ[1] ದೃಢಪಡಿಸಬೇಕೆಂಬ ಇಚ್ಛೆಯಿಂದ ಮತ್ತೆ ಆಕ್ಷೇಪವನ್ನು ಮಾಡುತ್ತಾರೆ[2] :—

**ಪ್ರಜ್ಞಪ್ತೇಃ ಸನಿಮಿತ್ತತ್ವಮನ್ಯಥಾ ದ್ವಯನಾಶತಃ ।**
**ಸಙ್ಕ್ಲೇಶಸ್ಯೋಪಲಬ್ಧೇಶ್ಚ ಪರತನ್ತ್ರಾಸ್ತಿತಾ ಮತಾ ॥ ೨೪ ॥**

೨೪. ಪ್ರಜ್ಞಪ್ತಿಗೆ ಸನಿಮಿತ್ತತ್ವವಿದೆ; ಏಕೆಂದರೆ ಹಾಗಿಲ್ಲದಿದ್ದರೆ ದ್ವಯನಾಶವಾಗುವದು. ಸಂಕ್ಲೇಶವು ಕಂಡುಬರುವದರಿಂದಲೂ ಪರತಂತ್ರವು ಇರಬೇಕೆಂದು (ನಮ್ಮ) ಮತವಾಗಿದೆ.

(ಭಾಷ್ಯ)

೨೫೭. ಪ್ರಜ್ಞಾನಂ ಪ್ರಜ್ಞಪ್ತಿಃ, ಶಬ್ದಾದಿಪ್ರತೀತಿಃ । ತಸ್ಯಾಃ ಸನಿಮಿತ್ತತ್ವಮ್। ನಿಮಿತ್ತಂ ಕಾರಣಮ್ । ವಿಷಯಃ ಇತ್ಯೇತತ್ । ಸನಿಮಿತ್ತತ್ವಂ ಸವಿಷಯತ್ವಂ ಸ್ವಾತ್ಮವ್ಯತಿರಿಕ್ತವಿಷಯತಾ ಇತ್ಯೇತತ್ ಪ್ರತಿಜಾನೀಮಹೇ । ನ ಹಿ ನಿರ್ವಿಷಯಾ ಪ್ರಜ್ಞಪ್ತಿಃ ಶಬ್ದಾದಿಪ್ರತೀತಿಃ ಸ್ಯಾತ್ । ತಸ್ಯಾಃ ಸನಿಮಿತ್ತತ್ವಾತ್ । ಅನ್ಯಥಾ ನಿರ್ವಿಷಯತ್ವೇ ಶಬ್ದಸ್ಪರ್ಶನೀಲಪೀತಲೋಹಿತಾದಿಪ್ರತ್ಯಯವೈಚಿತ್ರ್ಯಸ್ಯ ದ್ವಯಸ್ಯ ನಾಶತಃ । ನಾಶಃ ಅಭಾವಃ ಪ್ರಸಜ್ಯೇತ ಇತ್ಯರ್ಥಃ । ನ ಚ ಪ್ರತ್ಯಯವೈಚಿತ್ರ್ಯಸ್ಯ ದ್ವಯಸ್ಯ ಅಭಾವಃ ಅಸ್ತಿ । ಪ್ರತ್ಯಕ್ಷತ್ವಾತ್ । ಅತಃ ಪ್ರತ್ಯಯವೈಚಿತ್ರ್ಯಸ್ಯ ದ್ವಯಸ್ಯ ದರ್ಶನಾತ್ ಪರೇಷಾಂ ತನ್ತ್ರಂ ಪರತನ್ತ್ರಮ್ ಇತಿ[3] ಅನ್ಯಶಾಸ್ತ್ರಮ್ । ತಸ್ಯ ಪರತನ್ತ್ರಸ್ಯ ಪರತನ್ತ್ರಾಶ್ರಯಸ್ಯ ಬಾಹ್ಯಾರ್ಥಸ್ಯ ಜ್ಞಾನವ್ಯತಿರಿಕ್ತಸ್ಯ ಅಸ್ತಿತಾ ಮತಾ ಅಭಿಪ್ರೇತಾ । ನ ಹಿ ಪ್ರಜ್ಞಪ್ತೇಃ ಪ್ರಕಾಶಮಾತ್ರಸ್ವರೂಪಾಯಾಃ ನೀಲಪೀತಾದಿಬಾಹ್ಯಾಲಮ್ಬನವೈಚಿತ್ರ್ಯಮ್ ಅನ್ತರೇಣ ಸ್ವಭಾವಭೇದೇನೈವ[4] ವೈಚಿತ್ರ್ಯಂ ಸಮ್ಭವತಿ । ಸ್ಫಟಿಕಸ್ಯೇವ ನೀಲಾದ್ಯುಪಾಧ್ಯಾಶ್ರಯೈರ್ವಿನಾ ವೈಚಿತ್ರ್ಯಂ ನ ಘಟತೇ ಇತ್ಯಭಿಪ್ರಾಯಃ ॥

---

1. ಕಾರ್ಯಕಾರಣಭಾವವು ಹೇಗೂ ಹೊಂದುವದಿಲ್ಲವಾಗಿ ಅಜಾದ್ವಯಾತ್ಮತತ್ತ್ವವೊಂದೇ ಪರಮಾರ್ಥವೆಂಬುದನ್ನು.

2. ಬಾಹ್ಯಾರ್ಥವು ಇದೆ ಎಂಬ ವಾದಿಗಳ ಮೂಲಕವಾಗಿ ಆಕ್ಷೇಪವನ್ನು ಒಡ್ಡಿ ಪರಿಹಾರಮಾಡುತ್ತಾರೆ ಎಂದು ಭಾವ.

3. ಈ ಮಾತು ಇಲ್ಲದಿದ್ದರೂ ಸಾಗುತ್ತದೆ.

4. “ಸ್ವಭಾವಭೇದೇನೈತತ್” ವಾ॥ ಕಾ॥

(ಭಾಷ್ಯಾರ್ಥ)

ಪ್ರಜ್ಞಪ್ತಿ ಎಂದರೆ ಪ್ರಜ್ಞಾನವು, ಶಬ್ದವೇ ಮುಂತಾದವುಗಳನ್ನು ಅರಿಯುವದು. ಆ (ಪ್ರಜ್ಞಪ್ತಿಗೆ) ಸನಿಮಿತ್ತತ್ವವಿದೆ. ನಿಮಿತ್ತವೆಂದರೆ ಕಾರಣವು ; ವಿಷಯವು ಎಂದರ್ಥ. ಸನಿಮಿತ್ತತ್ವವು ಎಂದರೆ ವಿಷಯದೊಡನಿರುವದು. ತನ್ನ ಸ್ವರೂಪಕ್ಕಿಂತ ಬೇರೆಯಾದ (ವಸ್ತುವನ್ನು ಅದು) ವಿಷಯವಾಗಿ (ಮಾಡಿ)ಕೊಂಡಿರುತ್ತದೆ[1] ಎಂಬಿದು ನಮ್ಮ ಪ್ರತಿಜ್ಞೆಯು. ವಿಷಯವೇ ಇಲ್ಲದೆ ಪ್ರಜ್ಞಪ್ತಿಯು, ಎಂದರೆ ಶಬ್ದವೇ ಮುಂತಾದವುಗಳ ಅರಿವು ಉಂಟಾಗಲಾರದು. ಏಕೆಂದರೆ ಆ (ಅರಿವಿಗೆ) ನಿಮಿತ್ತವಿರಬೇಕಾಗಿದೆ. ಹಾಗಿಲ್ಲದೆ ವಿಷಯವಿಲ್ಲದೆ (ಅರಿವು ಇರುವ)ದಾದರೆ ಶಬ್ದ, ಸ್ಪರ್ಶ, ಕಪ್ಪು, ಹಳದಿ, ಕೆಂಪು-ಮುಂತಾದ ಬಗೆಬಗೆಯ ಅರಿವುಗಳ (ರೂಪದ) ದ್ವಯವು ನಾಶವಾಗುವದು ; ನಾಶವೆಂದರೆ (ಅದರ) ಅಭಾವವು (ಉಂಟಾಗ)ಬೇಕಾದೀತು ಎಂದರ್ಥ. ಪ್ರತ್ಯಯಗಳು ಬಗೆಬಗೆಯಾಗಿರುವದೆಂಬ ದ್ವಯದ ಅಭಾವವೇ (ಆಗಲಿ ಎನ್ನುವದ) ಕ್ಕಿಲ್ಲ: ಏಕೆಂದರೆ (ಆ ವೈಚಿತ್ರ್ಯವಿರುವದು) ಪ್ರತ್ಯಕ್ಷವಾಗಿರುತ್ತದೆ. ಆದ್ದರಿಂದ ಪ್ರತ್ಯಯಗಳು ಬಗೆಬಗೆಯಾಗಿರುವದೆಂಬ ದ್ವಯವು ಕಂಡುಬರುತ್ತಿರುವದರಿಂದ[2] **ಪರತಂತ್ರವು**-ಮಿಕ್ಕವರ ತಂತ್ರವು ಪರತಂತ್ರವು[3]. ಎಂದರೆ (ವಿಜ್ಞಾನವಾದಿಗಳಲ್ಲದ) ಬೇರೆಯವರ[4] ಶಾಸ್ತ್ರವು, ಆ (ಪರತಂತ್ರವು ಎಂದರೆ) ಪರತಂತ್ರವನ್ನು ಅವಲಂಬಿಸಿರುವ ಹೊರಗಿನ ವಿಷಯವು ಜ್ಞಾನಕ್ಕಿಂತ ಬೇರೆಯಾಗಿ ಇರಬೇಕು ಎಂದು ಮತವು (ನಮ್ಮ) ಅಭಿಪ್ರಾಯವು. ಬರಿಯ ಪ್ರಕಾಶದ ಸ್ವರೂಪವಾಗಿರುವ ಪ್ರಜ್ಞಪ್ತಿಯು ಕಪ್ಪು, ಹಳದಿ-ಮುಂತಾದ ಹೊರಗಿನ ವಿಷಯವು ಬಗೆಬಗೆಯಾಗಿದ್ದ ಹೊರತು (ತನ್ನ) ಸ್ವಭಾವಭೇದದಿಂದಲೇ (ಹೀಗೆ) ಬಗೆಬಗೆಯಾಗಿರುವದೆಂಬುದು ಆಗುವ ಹಾಗಿಲ್ಲವಷ್ಟೆ. ಸ್ಫಟಿಕಕ್ಕೆ ಕಪ್ಪಾಗಿರುವ (ವಸ್ತು) ಮುಂತಾದ ಉಪಾಧಿಗಳ ಆಶ್ರಯ

---

1. ಹೊರಗಿನ ಬೇರೆಬೇರೆಯ ವಸ್ತುಗಳನ್ನು ವಿಷಯೀಕರಿಸುವದರಿಂದ ಬಗೆಬಗೆಯ ಅರಿವುಗಳುಂಟಾಗಬೇಕು ಎಂಬ ವಾದಿಗಳ ಮತವಿದು. ಇದಕ್ಕೆ ವಿಜ್ಞಾನಮಾತ್ರವಾದಿಯು ಮುಂದೆ ಉತ್ತರವನ್ನು ಹೇಳುವನು.

2. ಇದು ಹೇತು. ವಿಷಯಗಳಿರಬೇಕು ಎಂಬುದನ್ನು ಪೂರ್ವಪಕ್ಷಿಯು ಅನುಮಾನದಿಂದಲೇ ಸಾಧಿಸುವದಕ್ಕೆ ಹೊರಟಿರುತ್ತಾನೆ.

3. ಬೌದ್ಧದರ್ಶನದಲ್ಲಿ ಈ ಮಾತಿಗೆ ಬೇರೊಂದು ಅರ್ಥವಿದೆ. ಪರಿಶಿಷ್ಟವನ್ನು ನೋಡಿ.

4. ಬೌದ್ಧರಲ್ಲಿಯೂ ಹೊರಗಿನ ವಸ್ತುಗಳನ್ನು ಒಪ್ಪಿರುವವರು ಇರುತ್ತಾರೆ. ಬೌದ್ಧರಾಗಲಿ ಅಬೌದ್ಧರಾಗಲಿ ಹೊರಗಿನ ವಿಷಯಗಳನ್ನು ಒಪ್ಪಿರುವವರನ್ನೆಲ್ಲ ಇಲ್ಲಿ ಪರರು ಎನ್ನಬಹುದು.

ವಿಲ್ಲದೆ ಹೇಗೆ (ಬಣ್ಣಗಳ) ವೈಚಿತ್ರ್ಯವು ಹೊಂದಲಾರದೋ[1] (ಹಾಗೆಯೇ ಇದು) ಎಂದು ಅಭಿಪ್ರಾಯ.

(ಭಾಷ್ಯ)

೨೫೮ ಇತಶ್ಚ ಪರತನ್ತ್ರಾಶ್ರಯಸ್ಯ ಬಾಹ್ಯಾರ್ಥಸ್ಯ ಜ್ಞಾನವ್ಯತಿರಿಕ್ತಸ್ಯ ಅಸ್ತಿತಾ । ಸಙ್ಕ್ಲೇಶನಂ ಸಙ್ಕ್ಲೇಶಃ ದುಃಖಮ್ ಇತ್ಯರ್ಥಃ । (ತಸ್ಯ ಸಙ್ಕ್ಲೇಶಸ್ಯ ಉಪಲಬ್ಧೇಃ[2]) । ಉಪಲಭ್ಯತೇ ಹಿ ಅಗ್ನಿದಾಹಾದಿನಿಮಿತ್ತಂ ದುಃಖಮ್ । ಯದಿ ಅಗ್ನ್ಯಾದಿಬಾಹ್ಯಂ ದಾಹಾದಿನಿಮಿತ್ತಂ ವಿಜ್ಞಾನವ್ಯತಿರಿಕ್ತಂ ನ ಸ್ಯಾತ್ ತತಃ ದಾಹಾದಿದುಃಖಂ ನ ಉಪಲಭ್ಯೇತ । ಉಪಲಭ್ಯತೇ ತು । ಅತಃ ತೇನ ಮನ್ಯಾಮಹೇ ಅಸ್ತಿ ಬಾಹ್ಯಃ ಅರ್ಥಃ ಇತಿ । ನ ಹಿ ವಿಜ್ಞಾನಮಾತ್ರೇ ಸಙ್ಕ್ಲೇಶಃ ಯುಕ್ತಃ ಅನ್ಯತ್ರ ಅದರ್ಶನಾತ್ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಪರತಂತ್ರವನ್ನು ಆಶ್ರಯಿಸಿರುವ, ಜ್ಞಾನಕ್ಕಿಂತ ಬೇರೆಯಾದ ಹೊರಗಿನ ವಿಷಯವು ಇರುವದೆಂಬುದು, ಈ (ಕಾರಣದಿಂದಲೂ ಸಿದ್ಧವಾಗುತ್ತದೆ) : ಸಂಕ್ಲೇಶವು ಎಂದರೆ ಕ್ಲೇಶಪಡಿಸುವದು; ದುಃಖವು ಎಂದರ್ಥ. (ಆ ಸಂಕ್ಲೇಶವು ಕಂಡು ಬರುವದರಿಂದ). ಬೆಂಕಿಯು ಸುಡುವದೇ ಮುಂತಾದ ನಿಮಿತ್ತದಿಂದ (ಆಗುವ) ದುಃಖವು ಕಂಡುಬರುತ್ತದೆಯಲ್ಲವೆ? ಸುಡುವದೇ ಮುಂತಾದದ್ದಕ್ಕೆ, ವಿಜ್ಞಾನಕ್ಕಿಂತ ಬೇರೆಯಾಗಿ, ಬೆಂಕಿಯೇ ಮುಂತಾದ ಹೊರಗಿನ ನಿಮಿತ್ತವು ಇಲ್ಲದಿದ್ದರೆ ಆಗ ಸುಡುವದೇ ಮುಂತಾದ ದುಃಖವು ಕಂಡುಬರುತ್ತಿರಲಿಲ್ಲ; ಆದರೆ (ಈಗ ಆ ದುಃಖವು) ಕಂಡುಬರುತ್ತದೆ. ಆದ್ದರಿಂದ ಈ (ಕಾರಣ)ದಿಂದ ಹೊರಗಿನ ವಸ್ತು ಇದೆಯೆಂದು ನಾವು ಅಭಿಪ್ರಾಯಪಡುತ್ತೇವೆ. ಬರಿಯ ವಿಜ್ಞಾನವೇ (ಆದರೆ) ಸಂಕ್ಲೇಶವು

---

1. ಇದು ದೃಷ್ಟಾಂತವು. ಸ್ವಚ್ಛವಾದ ವಿಜ್ಞಾನದಲ್ಲಿ ವೈಚಿತ್ರ್ಯವಿರುವದರಿಂದ ಅದಕ್ಕೆ ನಿಮಿತ್ತವಾಗಿರುವ ವಿಷಯಗಳಿರಬೇಕು; ಏಕೆಂದರೆ ಸ್ವಚ್ಛವಾಗಿರುವ ಸ್ಫಟಿಕಾದಿಗಳಲ್ಲಿ ಆಗುವ ವೈಚಿತ್ರ್ಯಗಳು ಹೊರಗಿನ ನಿಮಿತ್ತಗಳಿಂದಲೇ ಆಗುತ್ತವೆ ಎಂದರ್ಥ. ಬೌದ್ಧರಲ್ಲಿ ಸೌತ್ರಾಂತಿಕರು ವಿಷಯಗಳನ್ನು ಅನುಮಾನದಿಂದಲೇ ಸಾಧಿಸುತ್ತಿದ್ದರು.

2. ಈ ವಾಕ್ಯವು ಭಾಷ್ಯದಲ್ಲಿದ್ದು ಬರೆದವರ ಕೈತಪ್ಪಿನಿಂದ ಬಿಟ್ಟುಹೋಗಿದೆ ಎಂದು ತೋರುವದು.

(ತೋರುವದು) ಯುಕ್ತವಾಗುವದಿಲ್ಲ; ಏಕೆಂದರೆ ಮಿಕ್ಕ ಕಡೆಯಲ್ಲಿ[1] (ಅದು) ಕಂಡು ಬರುವದಿಲ್ಲ–ಎಂದು ಅಭಿಪ್ರಾಯ.

(ಭಾಷ್ಯ)

೨೫೯. ಅತ್ರ ಉಚ್ಯತೇ–

(ಭಾಷ್ಯಾರ್ಥ)

ಇದಕ್ಕೆ (ಉತ್ತರವನ್ನು) ಹೇಳುತ್ತೇವೆ :—

**ಪ್ರಜ್ಞಪ್ತೇಃ ಸನಿಮಿತ್ತತ್ವಮಿಷ್ಯತೇ ಯುಕ್ತಿದರ್ಶನಾತ್ ।**
**ನಿಮಿತ್ತಸ್ಯಾನಿಮಿತ್ತತ್ವಮಿಷ್ಯತೇ ಭೂತದರ್ಶನಾತ್ ॥ ೨೫ ॥**

೨೫. ಪ್ರಜ್ಞಪ್ತಿಯು ಸನಿಮಿತ್ತವಾಗಿರಬೇಕೆಂಬ ಯುಕ್ತಿಯನ್ನು ಕಂಡದ್ದರಿಂದ ಒಪ್ಪಿರುತ್ತೀಯೆ. ನಿಮಿತ್ತವು ನಿಮಿತ್ತವಲ್ಲವೆಂದು ಭೂತ ದರ್ಶನದಿಂದ (ನಾವು) ಒಪ್ಪಿರುತ್ತೇವೆ.

(ಭಾಷ್ಯ)

೨೬೦. ಬಾಢಮ್ ಏವಂ ಪ್ರಜ್ಞಪ್ತೇಃ ಸನಿಮಿತ್ತತ್ವಂ ದ್ವಯಸಙ್ಕ್ಲೇಶೋಪಲಬ್ಧಿಯುಕ್ತಿದರ್ಶನಾತ್ ಇಷ್ಯತೇ ತ್ವಯಾ । ಸ್ಥಿರೀಭವ ತಾವತ್ ತ್ವಂ ಯುಕ್ತಿದರ್ಶನಂ ವಸ್ತುನಃ ತಥಾತ್ವಾಭ್ಯುಪಗಮೇ ಕಾರಣಮ್ ಇತ್ಯತ್ರ । ಬ್ರೂಹಿ ಕಿಂ ತತಃ ಇತಿ । ಉಚ್ಯತೇ । ನಿಮಿತ್ತಸ್ಯ ಪ್ರಜ್ಞಪ್ತ್ಯಾಲಮ್ಬನಾಭಿಮತಸ್ಯ[2] ಘಟಾದೇಃ ಅನಿಮಿತ್ತತ್ವಮ್ ಅನಾಲಮ್ಬನತ್ವಂ ವೈಚಿತ್ರ್ಯಾಹೇತುತ್ವಮ್ ಇಷ್ಯತೇ ಅಸ್ಮಾಭಿಃ । ಕಥಮ್ ? ಭೂತದರ್ಶನಾತ್ ಪರಮಾರ್ಥದರ್ಶನಾತ್ ಇತ್ಯೇತತ್ । ನ ಹಿ ಘಟಃ ಯಥಾಭೂತಮೃದ್ರೂಪದರ್ಶನೇ ಸತಿ ತದ್ವ್ಯತಿರೇಕೇಣ ಅಸ್ತಿ । ಯಥಾ ಅಶ್ವಾತ್ ಮಹಿಷಃ ಪಟೋ ವಾ ತನ್ತುವ್ಯತಿರೇಕೇಣ । ತನ್ತವಶ್ಚ ಅಂಶುವ್ಯತಿರೇಕೇಣ ಇತ್ಯೇವಮ್ ಉತ್ತರೋತ್ತರಭೂತದರ್ಶನೇ ಆ ಶಬ್ದಪ್ರತ್ಯಯನಿರೋಧಾತ್ ನೈವ ನಿಮಿತ್ತಮ್ ಉಪಲಭಾಮಹೇ ಇತ್ಯರ್ಥಃ ॥

---

1. ಮೊದಲು ದುಃಖವು ಕಾಣದೆ ಇರುವ ಕಡೆಯಲ್ಲಿ ಬೆಂಕಿಯನ್ನಿಟ್ಟರೆ ಅದರ ಸುಡುವಿಕೆಯಿಂದ ದುಃಖವಾಗುತ್ತದೆ; ಆದರೆ ಗಂಧವನ್ನು ಬಳಿದರೆ ಆಗುವದಿಲ್ಲ. ಈ ವೈಚಿತ್ರ್ಯಕ್ಕೆ ಬೆಂಕಿ, ಗಂಧ ಎಂಬ ವಿಷಯಗಳೇ ಕಾರಣವೆಂದು ಸಿದ್ಧವಾಗುತ್ತದೆ. ಏಕೆಂದರೆ ವಿಜ್ಞಾನವು ಎರಡು ಕಡೆಯಲ್ಲಿಯೂ ಇರುತ್ತದೆ.

2. ಇದರ ಮುಂದೆ 'ತವ' ಎಂದು ಹೆಚ್ಚಾಗಿ ವಾ॥ ಕಾ॥

(ಭಾಷ್ಯಾರ್ಥ)

ಹೀಗೆ ದ್ವಯ, ದುಃಖಾನುಭವ–(ಎಂಬೀ ಎರಡು ಬಗೆಯ ಯುಕ್ತಿಯನ್ನು) ಕಂಡು ನೀನು ಪ್ರಜ್ಞಪ್ತಿಗೆ ನಿಮಿತ್ತವಿರಬೇಂದು ಒಪ್ಪಿರುತ್ತೀಯೆ, ನಿಜ. (ಆದರೆ) ಯುಕ್ತಿಯನ್ನು ಕಂಡಷ್ಟು ವಸ್ತು ಹಾಗೇ ಇರಬೇಕೆನ್ನುವವಕ್ಕೆ (ತರ್ಕಷ್ಟು) ಕಾರಣ (ಎಂದು ಅಂಗೀಕರಿಸಿ) ಅಲ್ಲಿಯೇ ನೀನು ಭದ್ರವಾಗಿ ನಿಂತುಕೊ.

(ಪೂರ್ವಪಕ್ಷಿ) :—(ಹಾಗೆಯೇ ಆಗಲಿ). ಅದರಿಂದೇನಾಗುವದು ? ಹೇಳು.

(ಸಿದ್ಧಾಂತಿ[1]) :—ಹೇಳುತ್ತೇವೆ (ಕೇಳು). ಪ್ರಜ್ಞಪ್ತಿಗೆ ವಿಷಯವೆಂದು (ನಿನಗೆ) ಸಮ್ಮತವಾಗಿರುವ ಗಡಿಗೆಯೇ ಮುಂತಾದ ನಿಮಿತ್ತವು ಅನಿಮಿತ್ತವು, (ಪ್ರಜ್ಞಪ್ತಿಗೆ) ವಿಷಯವಲ್ಲ, (ಅರಿವಿನ) ವೈಚಿತ್ರ್ಯಕ್ಕೆ ಹೇತುವಲ್ಲ–ಎಂದು ನಾವು ಒಪ್ಪುತ್ತೇವೆ. (ಅದು) ಹೇಗೆ ? ಎಂದರೆ ಭೂತದರ್ಶನದಿಂದ, ಪರಮಾರ್ಥವನ್ನು ಕಂಡದ್ದರಿಂದ (ಹಾಗೆ ಹೇಳುತ್ತೇವೆ[2]) ಎಂದಭಿಪ್ರಾಯ. ನಿಜವಾಗಿರುವ ಮಣ್ಣಿನ ಸ್ವರೂಪವನ್ನು ಕಂಡುಕೊಂಡಮೇಲೆ ಗಡಿಗೆ ಎಂಬುದು–ಕುದುರೆಗಿಂತ ಬೇರೆಯಾಗಿ ಕೋಣಸಿರುವಂತೆ[3]–ಆ (ಮಣ್ಣಿ)ಗಿಂತ ಬೇರೆಯಾಗಿ (ಸ್ವತಂತ್ರವಾಗಿ) ಇರುವದಿಲ್ಲ ವಷ್ಟೆ. (ಹೀಗೆಯೇ) ಬಟ್ಟೆಯೆಂಬುದಾದರೂ ನೂಲುಗಳಿಗಿಂತ ಬೇರೆಯಾಗಿ (ಇರುವದಿಲ್ಲ), ನೂಲುಗಳೂ ಹತ್ತಿಯ ಹಿಂಜಿಗಳಿಗಿಂತ (ಬೇರೆಯಾಗಿರುವದಿಲ್ಲ). ಹೀಗೆ ಮುಂದುಮುಂದಕ್ಕೆ ನಿಜವಾಗಿರುವವನ್ನು ನೋಡುತ್ತಾ ಮಾತೂ ಅರಿವೂ ನಾಶವಾಗುವವರೆಗೂ ಸಾಗಿದರೆ[4] (ಆ ಹೊರಗಿನ) ನಿಮಿತ್ತವೆಂಬುದು ನಮಗೆ ತೋರುವದೇ ಇಲ್ಲ ಎಂದು ಅಭಿಪ್ರಾಯ.

---

1. ಇಲ್ಲಿ ವಿಜ್ಞಾನವಾದಿಯೇ ಸಿದ್ಧಾಂತಿ.

2. ಯುಕ್ತಿಯಿಂದ ವಿಷಯವನ್ನು ಸಾಧಿಸುವ ನಿನ್ನ ಪಕ್ಷವು ದುರ್ಬಲವು; ಅನುಭವಾನುಸಾರವಾಗಿ ವಿಚಾರಮಾಡಿ ವಿಷಯವಿಲ್ಲವೆನ್ನುವ ನಮ್ಮ ಪಕ್ಷವು ಪ್ರಬಲವು ಎಂದು ಭಾವ.

3. ಕುದುರೆ, ಕೋಣ-ಇವು ನಿಜವಾಗಿರುವವೆಂದು ಒಪ್ಪಿ ಈ ದೃಷ್ಟಾಂತವನ್ನು ಕೊಟ್ಟಿದೆ; ವಿಜ್ಞಾನವಾದಿಯ ಮತದಲ್ಲಿ ಅವೂ ವಿಜ್ಞಾನಕ್ಕಿಂತ ಬೇರೆಯಾಗಿ ಇರುವದಿಲ್ಲ.

4. ಹತ್ತಿಯೂ ತನ್ನ ಕಾರಣವಾದ ಭೂತಗಳಿಗಿಂತ ಬೇರೆಯಲ್ಲ; ಅವುಗಳೂ ತಮ್ಮ ತಮ್ಮ ಕಾರಣಗಳಿಗಿಂತ ಬೇರೆಯಾಗಿರುವದಿಲ್ಲ. ಕೊನೆಗೆ ಎಲ್ಲವೂ ಆಕಾಶವೇ ಆಗಿ ಬಿಡುತ್ತದೆ.

(ಭಾಷ್ಯ)

೨೬೧. ಅಥವಾ ಅಭೂತದರ್ಶನಾತ್ ಬಾಹ್ಯಾರ್ಥಸ್ಯ ಅನಿಮಿತ್ತತ್ವಮ್ ಇಷ್ಯತೇ । ರಜ್ಜ್ವಾದಾವಿವ ಸರ್ಪಾದೇಃ ಇತ್ಯರ್ಥಃ । ಭ್ರಾನ್ತಿದರ್ಶನವಿಷಯತ್ವಾಚ್ಚ ನಿಮಿತ್ತಸ್ಯ ಅನಿಮಿತ್ತತ್ವಂ ಭವೇತ್ । ತದಭಾವೇ ಅಭಾವಾತ್ । ನ ಹಿ ಸುಷುಪ್ತ ಸಮಾಹಿತಮುಕ್ತಾನಾಂ ಭ್ರಾನ್ತಿದರ್ಶನಾಭಾವೇ ಆತ್ಮವ್ಯತಿರಿಕ್ತಃ ಬಾಹ್ಯೋಽರ್ಥಃ ಉಪಲಭ್ಯತೇ । ನ ಹಿ ಉನ್ಮತ್ತಾವಗತಂ ವಸ್ತು ಅನುನ್ಮತ್ತೈರಪಿ ತಥಾಭೂತಂ ಗಮ್ಯತೇ । ಏತೇನ ದ್ವಯದರ್ಶನಂ ಸಙ್ಕ್ಲೇಶೋಪಲಬ್ಧಿಶ್ಚ ಪ್ರತ್ಯುಕ್ತಾ ॥

(ಭಾಷ್ಯಾರ್ಥ)

ಅಥವಾ ಅಭೂತದರ್ಶನದಿಂದ[1] ಹೊರಗಿನ ಪದಾರ್ಥವು (ಇಲ್ಲವೆಂದು ಕಂಡು ಬರುವದರಿಂದ) ನಿಮಿತ್ತವಲ್ಲವೆಂದು ಒಪ್ಪಿರುತ್ತೇವೆ; ಹಗ್ಗವೇ ಮುಂತಾದದ್ದರಲ್ಲಿ ಹಾವು ಮುಂತಾದದ್ದು ಹೇಗೆ (ಇರುವದಿಲ್ಲವೋ, ಆದ್ದರಿಂದ ಹೇಗೆ ಅದು ನಿಜವಾದ ವಿಷಯವಲ್ಲವೋ ಹಾಗೆ[2]) ಎಂದರ್ಥ. ಭ್ರಾಂತಿಜ್ಞಾನಕ್ಕೆ ವಿಷಯವಾಗಿರುವದರಿಂದಲೂ (ನೀವು ಹೇಳುವ) ನಿಮಿತ್ತವು (ನಿಜವಾಗಿ) ನಿಮಿತ್ತವಾಗಲಾರದು. ಏಕೆಂದರೆ ಆ (ಭ್ರಾಂತಿ)ಯಿಲ್ಲದಾಗ (ಅದೂ) ಇರುವದಿಲ್ಲ[3]. ಸುಷುಪ್ತಿಯನ್ನನುಭವಿಸುವವರು, ಸಮಾಧಿಯಲ್ಲಿರುವವರು, ಮುಕ್ತರು–(ಇವರು)ಗಳಿಗೆ ಭ್ರಾಂತಿಜ್ಞಾನವಿರುವದಿಲ್ಲ; (ಆಗ) ತಮಗಿಂತ ಬೇರೆಯಾಗಿ ಹೊರಗಿನ ವಿಷಯವು ಕಂಡುಬರು

---

1. "ಇಷ್ಯತೇಽಭೂತದರ್ಶನಾತ್" ಎಂದು ಪಾಠವನ್ನು ಇಟ್ಟುಕೊಂಡು ಅಭೂತದರ್ಶನದಿಂದ ಎಂಬ ಅರ್ಥವನ್ನು ತೆಗೆದಿರುತ್ತದೆ. ಸರಿಯಾಗಿ ನೋಡಿದರೆ ವಿಷಯುವೆಂಬುದು ಯಾವದೂ ತನ್ನ ತನ್ನ ಕಾರಣಕ್ಕಿಂತ ಬೇರೆಯಾಗಿ ಇರುವದೇ ಇಲ್ಲ ಎಂದರ್ಥ.

2. ಹಗ್ಗದಲ್ಲಿ ಹಾವು ಇರುವದೂ ಇಲ್ಲ, ಅದು ಜ್ಞಾನಕ್ಕೆ ವಿಷಯುವೂ ಅಲ್ಲ–ಎಂದು ಭಾವ. ಇಲ್ಲದ ವಸ್ತು ಜ್ಞಾನದ ವೈಚಿತ್ರ್ಯಕ್ಕೆ ನಿಮಿತ್ತವೆನ್ನುವದಕ್ಕೆ ಕಾರಣವಿಲ್ಲವೆಂದು ಅರ್ಥ. ಹಗ್ಗದಲ್ಲಿ ಹಾವು ಇಲ್ಲವೆಂದು ಹೇಳಿರುವದರಿಂದ ಅನಿರ್ವಚನೀಯಪದಾರ್ಥದ ಉತ್ಪತ್ತಿಯನ್ನು ಹೇಳುವ ಈಚಿನ ವೇದಾಂತಿಗಳ ಮತವು ಭಾಷ್ಯಾರೂಢವಲ್ಲವೆಂದು ನಿಶ್ಚಯಿಸಬಹುದಾಗಿದೆ. ಕಪ್ಪೆಯ ಚಿಪ್ಪಿನಲ್ಲಿ ಬೆಳ್ಳಿಯಿದೆ ಎಂದು ತಿಳಿಯುತ್ತಾರೆಯೇ ಹೊರತು ಅದರಲ್ಲಿ ನಿಜವಾಗಿ ಬೆಳ್ಳಿಯೇನೂ ಇರುವದಿಲ್ಲ–ಎಂಬ ಸೂ. ಭಾ. ೪–೧–೫ನ್ನು ನೋಡಿ.

3. ಇದೊಂದು ಹೊಸಯುಕ್ತಿಯೆಂದು ಭಾವಿಸಬಾರದು. ಹೊರಗಿನ ವಿಷಯುವು ಅಭೂತ, ಅಪರಮಾರ್ಥ, ಎಂಬುದು ಹೇಗೆ?–ಎಂದರೆ ಅದು ಭ್ರಾಂತರಿಗೆ ಮಾತ್ರ ತೋರುವದರಿಂದ. ಕಣ್ಣುಪರೆಯುವನಿಗೆ ಮಾತ್ರ ಕಂಡು ಇಲ್ಲದಿರುವವನಿಗೆ ಕಾಣದಿರುವದರಿಂದಲೇ ದ್ವಿತೀಯ ಚಂದ್ರನು ಇಲ್ಲವೆನ್ನುವದು ಎಂಬ ತೈ. ಭಾ. ಭಾ. ೨೧೩, ೨೧೫ ನೋಡಿರಿ.

ವದೇ ಇಲ್ಲ[1]. ಹುಚ್ಚರು (ಇರುವದೆಂದು) ತಿಳಿಯುವ ವಸ್ತು ಹುಚ್ಚರಲ್ಲದವರಿಗೂ ಸತ್ಯವಾಗಿ ಕಾಣಿಸಲಾರದಷ್ಟೆ. ಇದರಿಂದ ಸ್ವಪ್ನದರ್ಶನ, ಸಂಕ್ಲೇಶದ ಅನುಭವ- ಇವೆರಡಕ್ಕೂ ಉತ್ತರವನ್ನು ಹೇಳಿದಂತೆ ಆಯಿತು[2].

(ಭಾಷ್ಯ)

೨೬.೧. ಯಸ್ಮಾತ್ ನಾಸ್ತಿ ಬಾಹ್ಯಂ ನಿಮಿತ್ತಮ್, ಅತಃ—

(ಭಾಷ್ಯಾರ್ಥ)

ಹೀಗೆ ಹೊರಗಿನ ನಿಮಿತ್ತವು ಇಲ್ಲವಾಯಿತಷ್ಟೆ, ಆದ್ದರಿಂದ—

**ಚಿತ್ತಂ ನ ಸಂಸ್ಪೃಶತ್ಯರ್ಥಂ ನಾರ್ಥಾಭಾಸಂ ತಥೈವ ಚ ।**
**ಅಭೂತೋ ಹಿ ಯತಶ್ಚಾರ್ಥೋ ನಾರ್ಥಾಭಾಸಸ್ತತಃ ಪೃಥಕ್ ॥೨೬॥**

೨೬. ಚಿತ್ತವು (ಹೊರಗಿನ) ಅರ್ಥವನ್ನು ಮುಟ್ಟುವದಿಲ್ಲ, ಅರ್ಥಾಭಾಸವನ್ನೂ ಹಾಗೆಯೇ (ಮುಟ್ಟುವ)ದಿಲ್ಲ. ಏಕೆಂದರೆ ಅರ್ಥವು ಅಭೂತವಲ್ಲವೆ, (ಆದ್ದರಿಂದ) ಅದಕ್ಕಿಂತ ಬೇರೆಯಾಗಿ ಅರ್ಥಾಭಾಸವಿರುವದಿಲ್ಲ.

(ಭಾಷ್ಯ)

೨೬.೨. ಚಿತ್ತಂ ನ ಸ್ಪೃಶತಿ ಅರ್ಥಂ ಬಾಹ್ಯಾಲಮ್ಬನವಿಷಯಮ್ । ನಾಪಿ ಅರ್ಥಾಭಾಸಮ್ । ಚಿತ್ತತ್ವಾತ್ ಸ್ವಪ್ನಚಿತ್ತವತ್ । ಅಭೂತೋ ಹಿ ಜಾಗರಿತೇಽಪಿ ಸ್ವಪ್ನಾರ್ಥವದೇವ ಬಾಹ್ಯಃ ಶಬ್ದಾದ್ಯರ್ಥೋ ಯತಃ । ಉಕ್ತಹೇತುತ್ವಾಚ್ಚ । ನಾಪಿ ಅರ್ಥಾಭಾಸಃ ಚಿತ್ತಾತ್ ಪೃಥಕ್ ಚಿತ್ತಮೇವ ಹಿ ಘಟಾದ್ಯರ್ಥವತ್ ಅವಭಾಸತೇ ಯಥಾ ಸ್ವಪ್ನೇ ॥

(ಭಾಷ್ಯಾರ್ಥ)

ಚಿತ್ತವು ಅರ್ಥವನ್ನು ಹೊರಗಿನ ಆಲಂಬನವಾದ ವಿಷಯವನ್ನು ಮುಟ್ಟುವದಿಲ್ಲ; ಅರ್ಥಾಭಾಸವನ್ನೂ (ಮುಟ್ಟುವ)ದಿಲ್ಲ ; ಏಕೆಂದರೆ (ಇದು) ಕನಸಿನ ಚಿತ್ತದಂತೆ

---

1. ಈ ಅವಸ್ಥೆಗಳಲ್ಲಿ ವಿಜ್ಞಾನವು ಮಾತ್ರ ಇದೆ ಎಂದು ಬೌದ್ಧನ ಅಭಿಪ್ರಾಯ; ಆತ್ಮನು ಮಾತ್ರ ಇರುತ್ತಾನೆ ಎಂಬುದು ವೇದಾಂತಿಯ ಮತ.

2. ಏಕೆಂದರೆ ಇವು ಭ್ರಾಂತರಿಗೆ ಮಾತ್ರ ತೋರುತ್ತವೆ; ಸುಷುಪ್ತಪುರುಷಾದಿಗಳಿಗೆ ತೋರುವದಿಲ್ಲ.

ಚಿತ್ತವಾಗಿರುತ್ತದೆ[1]. ಎಚ್ಚರದಲ್ಲಿಯೂ ಹೊರಗಿನ ಶಬ್ದವೇ ಮುಂತಾದ ವಿಷಯವು ಕನಸಿನ ವಿಷಯದಂತೆಯೇ ಅಪರಮಾರ್ಥ (ವಾಗಿರುತ್ತದೆ) ಯಲ್ಲವೆ ? ಹಿಂದೆ ಹೇಳಿರುವ ಯುಕ್ತಿಯಿಂದಲೂ[2] (ಹೀಗೆಂದು ತಿಳಿಯಬೇಕು). ಚಿತ್ತಕ್ಕಿಂತ ಬೇರೆಯಾಗಿ ಅರ್ಥಾಭಾಸವೂ ಇರುವದಿಲ್ಲ ; ಏಕೆಂದರೆ ಚಿತ್ತವೇ, ಕನಸಿನಲ್ಲಿ ಹೇಗೋ ಹಾಗೆ, ಗಡಿಗೆಯೇ ಮುಂತಾದ ವಿಷಯದಂತೆ ತೋರುತ್ತಿರುವದು.

(ಭಾಷ್ಯ)

೨೮೪. ನನು ವಿಪರ್ಯಾಸಸ್ತರ್ಹಿ ಅಸತಿ ಘಟಾದೌ ಘಟಾದ್ಯಾಭಾಸತಾ ಚಿತ್ತಸ್ಯ। ತಥಾ ಚ ಸತಿ ಅವಿಪರ್ಯಾಸಃ ಕ್ವಚಿತ್ ವಕ್ತವ್ಯಃ ಇತಿ। ಅತ್ರೋಚ್ಯತೇ—

(ಭಾಷ್ಯಾರ್ಥ)

(ಆಕ್ಷೇಪ) :—ಹಾಗಾದರೆ ಗಡಿಗೆಯೇ ಮುಂತಾದದ್ದು ಇಲ್ಲದಿರುವಾಗ ಚಿತ್ತವು ಗಡಿಗೆಯೇ ಮುಂತಾದದ್ದರಂತೆ ತೋರುವದೆಂಬುದು ಭ್ರಾಂತಿಯಾಯಿತು. ಮತ್ತು ಹಾಗಾದರೆ ಅಭ್ರಾಂತಿಯನ್ನು ಎಲ್ಲಾದರೂ ಹೇಳಬೇಕಾಗುವದಲ್ಲ[3]?

(ಪರಿಹಾರ):—ಇದಕ್ಕೆ (ಉತ್ತರವನ್ನು) ಹೇಳುತ್ತೇವೆ :—

**ನಿಮಿತ್ತಂ ನ ಸದಾ ಚಿತ್ತಂ ಸಂಸ್ಪೃಶತ್ಯಧ್ವಸು ತ್ರಿಷು ।**
**ಅನಿಮಿತ್ತೋ ವಿಪರ್ಯಾಸಃ ಕಥಂ ತಸ್ಯ ಭವಿಷ್ಯತಿ ॥ ೨೭ ॥**

೨೭. ಚಿತ್ತವು ಮೂರು ಹಾದಿಗಳಲ್ಲಿ ಯಾವಾಗಲೂ ನಿಮಿತ್ತವನ್ನು ಮುಟ್ಟುವದೇ ಇಲ್ಲ. ಅದಕ್ಕೆ ನಿಮಿತ್ತವಿಲ್ಲವೆಂಬುದು ವಿಪರ್ಯಾಸವೆಂದು ಹೇಗೆ ಆದೀತು ?

---

1. ಚಿತ್ತವು ವಿಷಯವಿಲ್ಲದೆ ಕನಸಿನಲ್ಲಿರುವದೆಂದು ಒಪ್ಪಿರುತ್ತೀರಿ; ಎಚ್ಚರದಲ್ಲಿ ಮಾತ್ರ ಅದಕ್ಕೇಕೆ ವಿಷಯವಿರಬೇಕು ?-ಎಂದು ಭಾವ.

2. ವಿಷಯವೆಂಬುದು ಸುಷುಪ್ತ್ಯಾದಿಗಳಲ್ಲಿ ಕಾಣದಿರುವದರಿಂದ ಬರಿಯ ಭ್ರಾಂತಿ ಎಂದು ಹೇಳಿದ ಯುಕ್ತಿ.

3. ಹಗ್ಗದ ಹಾವು ಭ್ರಾಂತಿಯಾದರೆ ನಿಜವಾದ ಹಾವು ಒಂದು ಇರಬೇಕು; ಹಾಗೆಯೇ ಚಿತ್ತಕ್ಕೆ ವಿಷಯವು ತೋರುವದು ಇಲ್ಲಿ ಭ್ರಾಂತಿಯಾದರೆ, ಎಲ್ಲಿಯಾದರೂ ನಿಜವಾದ ಗಡಿಗೆ ಇರಬೇಕೆಂದೇ ಆಗುವದಲ್ಲ!-ಎಂದು ಆಕ್ಷೇಪ. ಸರಿಯಾದ ತಿಳಿವಳಿಕೆಯೊಂದೂ ಇಲ್ಲದೆ, ಅದರಂಥ ಭ್ರಾಂತಿಯು ಇರಲಾರದು ಎಂಬ ತಾರ್ಕಿಕರ ಆಕ್ಷೇಪವಿದು.

(ಭಾಷ್ಯ)

೨೬೫. ನಿಮಿತ್ತಂ ವಿಷಯಮ್ ಅತೀತಾನಾಗತವರ್ತಮಾನಾಧ್ವಸು[1] ತ್ರಿಷ್ವಪಿ ಸದಾ ಚಿತ್ತಂ ನ ಸಂಸ್ಪೃಶತ್ಯೇವ[2] । ಯದಿ ಹಿ ಕ್ವಚಿತ್ ಸಂಸ್ಪೃಶೇತ್ ಸಃ ಅವಿಪರ್ಯಾಸಃ ಪರಮಾರ್ಥತಃ ಇತ್ಯತಃ ತದಪೇಕ್ಷಯಾ ಅಸತಿ ಘಟೇ ಘಟಾಭಾಸತಾ[3] ವಿಪರ್ಯಾಸಃ ಸ್ಯಾತ್ । ನ ತು ತದಸ್ತಿ ಕದಾಚಿದಪಿ ಚಿತ್ತಸ್ಯ ಅರ್ಥಸಂಸ್ಪರ್ಶನಮ್। ತಸ್ಮಾತ್ ಅನಿಮಿತ್ತಃ ವಿಪರ್ಯಾಸಃ ಕಥಂ ತಸ್ಯ ಚಿತ್ತಸ್ಯ ಭವಿಷ್ಯತಿ ? ನ ಕಥಂಚಿತ್ ವಿಪರ್ಯಾಸಃ ಅಸ್ತಿ ಇತ್ಯಭಿಪ್ರಾಯಃ । ಅಯಮೇವ ಹಿ ಸ್ವಭಾವಶ್ಚಿತ್ತಸ್ಯ ಯದುತ ಅಸತಿ ನಿಮಿತ್ತೇ ಘಟಾದೌ ತದ್ವದವಭಾಸನಮ್ ॥

(ಭಾಷ್ಯಾರ್ಥ)

ಹಿಂದಿನ, ಮುಂದಿನ, (ಮತ್ತು) ಈಗಿನ (ಕಾಲ) ಎಂಬ ಮೂರು ಕಾಲಗಳಲ್ಲಿ ಯಾವಾಗಲೂ ಚಿತ್ತವು ನಿಮಿತ್ತವನ್ನು ವಿಷಯವನ್ನು ಮುಟ್ಟುವದೇ ಇಲ್ಲ. ಯಾವಾಗಲಾದರೂ (ಅದು) ಮುಟ್ಟುತ್ತಿದ್ದರೆ, (ಆಗ) ಅದು ನಿಜವಾದ ಅಭ್ರಾಂತಿಯು ಎಂದಾಗುವದರಿಂದ ಅದಕ್ಕೆ ಹೋಲಿಸಿದರೆ ಗಡಿಗೆಯಿಲ್ಲದಿರುವಾಗ ಗಡಿಗೆಯಂತೆ ತೋರುವದು ಭ್ರಾಂತಿಯಾದೀತು. ಆದರೆ ಹಾಗೆ ಚಿತ್ತವು ವಿಷಯವನ್ನು ಮುಟ್ಟುವದೆಂಬುದು ಯಾವಾಗಲೂ ಇರುವದಿಲ್ಲ. ಹೀಗಿರುವದರಿಂದ ನಿಮಿತ್ತವಿಲ್ಲವೆಂಬುದು ಆ ಚಿತ್ತಕ್ಕೆ ಭ್ರಾಂತಿ (ಎಂದು) ಹೇಗಾದೀತು ? ಹೇಗೂ ಭ್ರಾಂತಿಯಿಲ್ಲ ಎಂದು ಅಭಿಪ್ರಾಯ. ಏಕೆಂದರೆ ನಿಮಿತ್ತವಾದ ಗಡಿಗೆಯೇ ಮುಂತಾದದ್ದು ಇಲ್ಲದಿರುವಾಗ ಅದರಂತೆ ತೋರುವದಿದೆಯಲ್ಲ, ಇದೇ ಅಲ್ಲವೆ, ಚಿತ್ತದ ಸ್ವಭಾವವು[4] ?

## ಚಿತ್ತವು ಆತ್ಮನಿಗಿಂತ ಬೇರೆ ಇರಲಾರದು

(ಭಾಷ್ಯ)

೨೬೬. "ಪ್ರಜ್ಞಪ್ತೇಃ ಸನಿಮಿತ್ತತ್ವಮ್" (೪–೨೪) ಇತ್ಯಾದಿ ಏತದನ್ತಂ ವಿಜ್ಞಾನವಾದಿನಃ ಬೌದ್ಧಸ್ಯ ವಚನಂ ಬಾಹ್ಯಾರ್ಥವಾದಿಪಕ್ಷಪ್ರತಿಷೇಧಪರಮ್

---

1. "ಅತೀತಾನಾಗತವರ್ತಮಾನೇಷು ಅಧ್ವಸು" ಎಂದಿದ್ದರೆ ಚೆನ್ನಾಗಿತ್ತು.

2. 'ನ ಸ್ಪೃಶೇದೇವ ಹಿ' ಎಂಬುದನ್ನು ಹೀಗೆ ತಿದ್ದಿಕೊಂಡಿದೆ.

3. 'ಘಟಾದ್ಯಾಭಾಸತಾ' ಎಂಬ ಪಾಠಕ್ಕಿಂತ ಇದೇ ಉತ್ತಮ.

4. ನಿಜವಾದ ಗಡಿಗೆಯನ್ನು ಹೇಳುವ ಬುದ್ಧಿಯೊಂದು, ಇಲ್ಲದ ಗಡಿಗೆಯನ್ನು ಗಡಿಗೆಯೆಂದು ಹೇಳುವ ಬುದ್ಧಿಯೊಂದು-ಹೀಗೆ ಎರಡು ಇವೆಯೆಂದು ವಾದಿಗಳು ಭ್ರಾಂತರಾಗಿರುತ್ತಾರೆ. ನಿಜವೇನೆಂದರೆ ಬುದ್ಧಿಗಿಂತ ಬೇರೆಯಾಗಿ ತೋರುವದು ಯಾವದೂ ಇರುವದಿಲ್ಲ, ಬುದ್ಧಿಯೊಂದೇ ಪರಮಾರ್ಥವು-ಎಂಬುದು ಬೌದ್ಧನ ಅಭಿಪ್ರಾಯ.

ಆಚಾರ್ಯೇಣ ಅನುಮೋದಿತಮ್ । ತದೇವ ಹೇತುಂ ಕೃತ್ವಾ ತತ್ಪಕ್ಷಪ್ರತಿಷೇಧಾಯ ತದಿದಮ್ ಉಚ್ಯತೇ 'ತಸ್ಮಾತ್' ಇತ್ಯಾದಿ—

(ಭಾಷ್ಯಾರ್ಥ)

"ಪ್ರಜ್ಞಪ್ತಿಗೆ ನಿಮಿತ್ತವಿರಬೇಕು" (೪–೨೫) ಎಂಬಲ್ಲಿಂದ ಹಿಡಿದು ಈವರೆಗೆ **ವಿಜ್ಞಾನವಾದಿಯಾದ ಬೌದ್ಧನು** ಹೊರಗೆ ವಸ್ತುವಿರುವದೆಂಬ ವಾದಿಗಳ ಪಕ್ಷವನ್ನು ಖಂಡಿಸುವದಕ್ಕಾಗಿ ಹೇಳಿದ್ದನ್ನು **ಆಚಾರ್ಯರು** ಒಪ್ಪಿ (ಹೇಳಿ)ರುತ್ತಾರೆ. **(ಈಗ) ಅದನ್ನೇ[1] ಕಾರಣವಾಗಿಟ್ಟುಕೊಂಡು ಅವನ ಪಕ್ಷವನ್ನು ಅಲ್ಲಗಳೆಯುವದಕ್ಕೆ "ತಸ್ಮಾತ್"** ಮುಂತಾದ ಆ ಈ (ಶ್ಲೋಕವನ್ನು) ಹೇಳುತ್ತಾರೆ:—

**ತಸ್ಮಾನ್ನ ಜಾಯತೇ ಚಿತ್ತಂ ಚಿತ್ತದೃಶ್ಯಂ ನ ಜಾಯತೇ ।**
**ತಸ್ಯ ಪಶ್ಯನ್ತಿ ಯೇ ಜಾತಿಂ ಖೇ ವೈ ಪಶ್ಯನ್ತಿ ತೇ ಪದಮ್ ॥ ೨೮ ॥**

೨೮. ಆದ್ದರಿಂದ ಚಿತ್ತವು ಹುಟ್ಟುವದಿಲ್ಲ, ಚಿತ್ತದೃಶ್ಯವು ಹುಟ್ಟುವದಿಲ್ಲ. ಅದರ ಹುಟ್ಟನ್ನು ಯಾರು ಕಾಣುವರೋ ಅವರು ಆಕಾಶದಲ್ಲಿಯೇ ಹೆಜ್ಜೆಯ ಗುರುತನ್ನು ಕಾಣುವರು.

(ಭಾಷ್ಯ)

೨೬೭. ಯಸ್ಮಾತ್ ಅಸತ್ಯೇವ ಘಟಾದೌ ಘಟಾದ್ಯಾಭಾಸತಾ ಚಿತ್ತಸ್ಯ ವಿಜ್ಞಾನವಾದಿನಾ ಅಭ್ಯುಪಗತಾ ತತ್ ಅನುಮೋದಿತಮ್ ಅಸ್ಮಾಭಿರಪಿ ಭೂತದರ್ಶನಾತ್ । ತಸ್ಮಾತ್ ತಸ್ಯಾಪಿ ಚಿತ್ತಸ್ಯ ಜಾಯಮಾನಾವಭಾಸತಾ ಅಸತ್ಯೇವ ಜನ್ಮನಿ ಯುಕ್ತಾ ಭವಿತುಮ್ ಇತ್ಯತಃ ನ ಜಾಯತೇ ಚಿತ್ತಮ್ । ಯಥಾ ಚಿತ್ತದೃಶ್ಯಂ ನ ಜಾಯತೇ । ಅತಃ ತಸ್ಯ ಚಿತ್ತಸ್ಯ ಯೇ ಜಾತಿಂ ಪಶ್ಯನ್ತಿ ವಿಜ್ಞಾನವಾದಿನಃ ಕ್ಷಣಿಕತ್ವದುಃಖಿತ್ವಶೂನ್ಯತ್ವಾನಾತ್ಮತ್ವಾದಿ ಚ ತೇನೈವ ಚಿತ್ತೇನ ಚಿತ್ತಸ್ವರೂಪಂ ದ್ರಷ್ಟುಮ್ ಅಶಕ್ಯಂ ಪಶ್ಯನ್ತಃ ಖೇ ವೈ ಪಶ್ಯನ್ತಿ ತೇ ಪದಂ ಪಕ್ಷ್ಯಾದೀನಾಮ್ । ಅತಃ ಇತರೇಭ್ಯೋಽಪಿ ದ್ವೈತಿಭ್ಯಃ ಅತ್ಯನ್ತಸಾಹಸಿಕಾಃ ಇತ್ಯರ್ಥಃ । ಯೇಽಪಿ ಶೂನ್ಯವಾದಿನಃ ಪಶ್ಯನ್ತ ಏವ ಸರ್ವಶೂನ್ಯತಾಂ ಸ್ವದರ್ಶನಸ್ಯಾಪಿ ಶೂನ್ಯತಾಂ ಪ್ರತಿಜಾನತೇ ತೇ ತತೋಽಪಿ ಸಾಹಸಿಕತರಾಃ ಖಂ ಮುಷ್ಟಿನಾಪಿ ಜಿಘೃಕ್ಷನ್ತಿ ॥

---

1. ತನ್ನ ರೂಪದಿಂದ ನಿಜವಾಗಿಲ್ಲದ್ದೂ ಹುಟ್ಟಬಹುದೆಂಬುದನ್ನು.

(ಭಾಷ್ಯಾರ್ಥ)

ಗಡಿಗೆ ಮುಂತಾದದ್ದು ಇಲ್ಲದಿದ್ದರೂ ಗಡಿಗೆ ಮುಂತಾದವುಗಳ (ರೂಪ) ದಲ್ಲಿ ತೋರುವದು ಚಿತ್ತದ (ಸ್ವಭಾವವೆಂದು) ವಿಜ್ಞಾನವಾದಿಯು ಒಪ್ಪಿರುತ್ತಾನಷ್ಟೆ, ಇದ್ದದ್ದನ್ನು ಕಂಡು ಹೇಳಿದ್ದಾದ್ದರಿಂದ ಅದನ್ನು ನಾವೂ ಒಪ್ಪಿರುತ್ತೇವೆ. ಆದ್ದರಿಂದ ಆ ಚಿತ್ತವೂ (ತನಗೆ) ಹುಟ್ಟಿಲ್ಲವೇ ಇಲ್ಲವಾದರೂ ಹುಟ್ಟಿದಂತೆ ತೋರುವದೆಂದಾಗುವದು ಯುಕ್ತವಾಗಿರುತ್ತದೆ. ಆದ್ದರಿಂದ ಚಿತ್ತವು ಹುಟ್ಟುವದಿಲ್ಲ. ಹೇಗೆ ಚಿತ್ತಕ್ಕೆ ಕಾಣುವ (ವಸ್ತು) ಹುಟ್ಟುವದಿಲ್ಲವೋ (ಹಾಗೆಯೇ ಇದೂ ಹುಟ್ಟುವದಿಲ್ಲ). ಹೀಗಿರುವದರಿಂದ ಚಿತ್ತದ ಸ್ವರೂಪವನ್ನು ಅದೇ ಚಿತ್ತದಿಂದ ಕಾಣುವದು ಆಗಲಾರದೆಂಬುದನ್ನು ಕಂಡೂ[1] ಆ ಚಿತ್ತಕ್ಕೆ ಹುಟ್ಟನ್ನು ಯಾರು ಕಾಣುವರೋ[2], (ಅದು) ಕ್ಷಣಿಕ[3], ದುಃಖಿ[4], ಶೂನ್ಯ[5], ಆತ್ಮನಿಲ್ಲದ್ದು[6] ಮುಂತಾಗಿಯೂ ಯಾವ ವಿಜ್ಞಾನವಾದಿಗಳು (ತಿಳಿಯುವರೋ) ಅವರು ಆಕಾಶದಲ್ಲಿಯೇ ಹಕ್ಕಿಗಳು ಮುಂತಾದವುಗಳ ಹೆಜ್ಜೆಯ (ಗುರುತ) ನ್ನು ಕಾಣುವರು. ಆದ್ದರಿಂದ (ಇವರು) ಮಿಕ್ಕ ದ್ವೈತಿಗಳಿಗಿಂತಲೂ ಅತ್ಯಂತ ಸಾಹಸಿಕರು ಎಂದರ್ಥ.

ಇನ್ನು ಯಾವ **ಶೂನ್ಯವಾದಿಗಳು** ಎಲ್ಲವೂ ಶೂನ್ಯವೆಂಬುವದನ್ನು (ತಾವೇ) ನೋಡುತ್ತಿದ್ದರೂ ತಮ್ಮ ನೋಟವೂ ಶೂನ್ಯವೆಂದು ಹೇಳುತ್ತಿರುವರೋ[7] ಅವರು ಮತ್ತೂ ಸಾಹಸಿಕರು, (ಅವರು) ಆಕಾಶವನ್ನು ಮುಷ್ಟಿಯಿಂದಲೂ ಹಿಡಿಯುವದಕ್ಕೆಳಸುತ್ತಿರುವರು.

---

1. ಚಿತ್ತವೇ ಕರ್ತೃ, ಚಿತ್ತವೇ ಕರ್ಮ–ಎಂಬುದು ತನಗೆತಾನೇ ವಿರುದ್ಧ.

2. ಚಿತ್ತವನ್ನೇ ಕಾಣದವರು ಅದರ ಹುಟ್ಟು ಮುಂತಾದವನ್ನು ಕಾಣುವದು ಹೇಗೆ ?–ಎಂದರ್ಥ.

3. ಒಂದೊಂದು ಕ್ಷಣಕ್ಕೂ ಒಂದು ಚಿತ್ತವು ನಾಶವಾಗಿ ಮತ್ತೊಂದು ಹುಟ್ಟುತ್ತಿರುವದು ; ಅದು ಒಂದೇ ಎಂಬುದು ಭ್ರಾಂತಿ ಎಂದು ವಿಜ್ಞಾನವಾದಿಗಳ ಮತ.

4. ಚಿತ್ತದ ದುಃಖವನ್ನು ಕಳೆಯುವದಕ್ಕಾಗಿಯೇ ಸಾಧಕರು ಪ್ರಯತ್ನಿಸಬೇಕೆಂಬುದು ಬೌದ್ಧರ ಮತ.

5. ಚಿತ್ತವು ಕ್ಷಣಿಕವಾದ್ದರಿಂದ ಒಂದು ಕ್ಷಣವಾದ ಮೇಲೆ ಅದು ಶೂನ್ಯವಾಗಿ ಬಿಡುವದು ಎಂದು ಬೌದ್ಧನ ಭಾವ.

6. ಚಿತ್ತಕ್ಕೆ ತಿರುಳಾಗಿ ಆತ್ಮನೆಂಬ ವಸ್ತು ಇಲ್ಲ ಎಂದು ಬೌದ್ಧನ ವಾದ.

7. ಎಲ್ಲವೂ ಶೂನ್ಯವೆಂಬವನು ಅದನ್ನು ಕಂಡು ಅನುಭವದಿಂದ ಹೇಳಿದರೆ ಅನುಭವವನ್ನು ಬಿಟ್ಟು ಮಿಕ್ಕದ್ದು ಶೂನ್ಯವಾಗುವದೇ ಹೊರತು ಎಲ್ಲವೂ ಶೂನ್ಯವಾಗಲಾರದು, ಅನುಭವವಿಲ್ಲದೆ ಹೇಳಿದರೆ ಶೂನ್ಯವಾದಕ್ಕೆ ಪ್ರಮಾಣವಿಲ್ಲದೆ ಹೋಗುವದು.

## ಅಜಾತಿವಾದವೇ ಸರಿಯಾದದ್ದು

(ಭಾಷ್ಯ)

೨೭೮. ಉಕ್ತೈಃ ಹೇತುಭಿಃ ಅಜಮೇಕಂ ಬ್ರಹ್ಮ ಇತಿ ಸಿದ್ಧಮ್ । ಯತ್ಪುನರಾದೌ ಪ್ರತಿಜ್ಞಾತಮ್, ತತ್ಫಲೋಪಸಂಹಾರಾರ್ಥೋಽಯಂ ಶ್ಲೋಕಃ—

(ಭಾಷ್ಯಾರ್ಥ)

(ಮೇಲೆ) ಹೇಳಿದ ಹೇತುಗಳಿಂದ ಬ್ರಹ್ಮವು ಹುಟ್ಟುವದಲ್ಲ, ಒಂದೇ ಎಂದು ಸಿದ್ಧವಾಯಿತು. ಇನ್ನು ಮೊದಲು ಪ್ರತಿಜ್ಞೆಮಾಡಿತ್ತಲ್ಲ[1], ಅದರ ಫಲವನ್ನು ಉಪಸಂಹಾರ ಮಾಡುವದಕ್ಕೆ ಈ (ಮುಂದಿನ) ಶ್ಲೋಕವು (ಬಂದಿದೆ) :—

**ಅಜಾತಂ ಜಾಯತೇ ಯಸ್ಮಾದಜಾತಿಃ ಪ್ರಕೃತಿಸ್ತತಃ ।**
**ಪ್ರಕೃತೇರನ್ಯಥಾಭಾವೋ ನ ಕಥಂಚಿದ್ಭವಿಷ್ಯತಿ ॥ ೨೯ ॥**

೨೯. (ಹೀಗೆ) ಹುಟ್ಟದ್ದೇ ಹುಟ್ಟುತ್ತಿರುವದಷ್ಟೆ, ಆದ್ದರಿಂದ ಅಜಾತಿಯು ಪ್ರಕೃತಿಯು, ಪ್ರಕೃತಿಯು ಬೇರ್ಪಡುವದು ಹೇಗೂ ಆಗಲಾರದು.

(ಭಾಷ್ಯ)

೨೭೯. ಅಜಾತಮ್ । ಯತ್ ಚಿತ್ತಂ ಬ್ರಹ್ಮೈವ ಜಾಯತೇ ಇತಿ ವಾದಿಭಿಃ ಪರಿಕಲ್ಪ್ಯತೇ ತತ್ ಅಜಾತಂ ಜಾಯತೇ ಯಸ್ಮಾತ್ ಅಜಾತಿಃ ಪ್ರಕೃತಿಃ ತಸ್ಯ । ತತಃ ತಸ್ಮಾತ್ ಅಜಾತರೂಪಾಯಾಃ ಪ್ರಕೃತೇಃ ಅನ್ಯಥಾಭಾವಃ ಜನ್ಮ ನ ಕಥಂಚಿತ್ ಭವಿಷ್ಯತಿ ॥

(ಭಾಷ್ಯಾರ್ಥ)

ಹುಟ್ಟದ್ದೇ : ಚಿತ್ತವು ಬ್ರಹ್ಮವೇ (ಆಗಿದ್ದು) ಹುಟ್ಟುತ್ತದೆ ಎಂದು ವಾದಿಗಳು ಕಲ್ಪಿಸಿರುವರಲ್ಲವೆ ? ಆದ್ದರಿಂದ ಅಜಾತವು ಹುಟ್ಟುತ್ತದೆಯಷ್ಟೆ[2], (ಆದ್ದರಿಂದ)

---

1. ಯಾವದೂ ಹುಟ್ಟುವದಿಲ್ಲವೆಂಬುದನ್ನು ವಾದಿಗಳು ತಮ್ಮ ವಿವಾದದಿಂದ ಸಿದ್ಧಪಡಿಸುತ್ತಾರೆಂದು ಹಿಂದೆ ೪ನೆಯ ಕಾರಿಕೆಯಲ್ಲಿ ಪ್ರತಿಜ್ಞೆಮಾಡಿತ್ತಲ್ಲ, ಅದನ್ನು.
2. ಅಜಾತವು ಹುಟ್ಟುತ್ತದೆ ಎಂದರೆ ಹುಟ್ಟಿತೆಂದು ಹೇಳುತ್ತಾರೆ ಎಂದರ್ಥ.

ಅದಕ್ಕೆ ಹುಟ್ಟದೆ ಇರುವದೇ ಪ್ರಕೃತಿಯು[1]. ಆದ್ದರಿಂದ ಅದಕಾರಣ ಹುಟ್ಟದೆ ಇರುವ ದೆಂಬ ಪ್ರಕೃತಿಗೆ ಬೇರ್ಪಡುವದು, ಎಂದರೆ ಹುಟ್ಟುವದು ಹೇಗೂ ಆಗಲಾರದು.

## ಸಂಸಾರಮೋಕ್ಷಗಳು ಪರಮಾರ್ಥವೆಂದರೆ ದೋಷ

(ಭಾಷ್ಯ)

೨೭೦. ಅಯಂ ಚ ಅಪರಃ ಆತ್ಮನಃ ಸಂಸಾರಮೋಕ್ಷಯೋಃ ಪರಮಾರ್ಥ ಸದ್ಭಾವವಾದಿನಾಂ ದೋಷಃ ಉಚ್ಯತೇ—

(ಭಾಷ್ಯಾರ್ಥ)

ಆತ್ಮನಿಗೆ ಸಂಸಾರಮೋಕ್ಷಗಳು ಪರಮಾರ್ಥವಾಗಿ ಇರುವವೆಂಬ ವಾದಿಗಳ (ಮತದಲ್ಲಿ) ಈ ಇನ್ನೊಂದು[2] ದೋಷವನ್ನು ಹೇಳುತ್ತಾರೆ:—

**ಅನಾದೇರನ್ತವತ್ತ್ವಂ ಚ ಸಂಸಾರಸ್ಯ ನ ಸೇತ್ಸ್ಯತಿ ।**
**ಅನನ್ತತಾ ಚಾದಿಮತೋ ಮೋಕ್ಷಸ್ಯ ನ ಭವಿಷ್ಯತಿ　॥ ೩೦ ॥**

೩೦. ಅನಾದಿಯಾದ ಸಂಸಾರಕ್ಕೆ ಅಂತವಿರುವದೆಂಬುದು ಸಿದ್ಧಿಸ ಲಾರದು; ಆದಿಯುಳ್ಳ ಮೋಕ್ಷಕ್ಕೆ ಅನಂತತ್ವವೂ ಆಗಲಾರದು.

(ಭಾಷ್ಯ)

೨೭೧. ಅನಾದೇಃ ಅತೀತಕೋಟಿರಹಿತಸ್ಯ ಸಂಸಾರಸ್ಯ ಅನ್ತವತ್ತ್ವಂ ಸಮಾಪ್ತಿಃ ನ ಸೇತ್ಸ್ಯತಿ ಯುಕ್ತಿತಃ ಸಿದ್ಧಿಂ ನೋಪಯಾಸ್ಯತಿ । ನ ಹಿ ಅನಾದಿಃ ಸನ್ ಅನ್ತವಾನ್ ಕಶ್ಚಿತ್ ಪದಾರ್ಥಃ ದೃಷ್ಟಃ ಲೋಕೇ । ಬೀಜಾಙ್ಕುರಸಮ್ಬನ್ಧ ನೈರನ್ತರ್ಯವಿಚ್ಛೇದೋ ದೃಷ್ಟಃ ಇತಿ ಚೇತ್ । ನ । ಏಕವಸ್ತ್ವಭಾವೇನ ಅಪೋದಿ ತತ್ವಾತ್ । ತಥಾ ಅನನ್ತತಾಪಿ ವಿಜ್ಞಾನಪ್ರಾಪ್ತಿಕಾಲಪ್ರಭವಸ್ಯ ಮೋಕ್ಷಸ್ಯ ಆದಿ ಮತಃ ನ ಭವಿಷ್ಯತಿ । ಘಟಾದಿಷು ಅದರ್ಶನಾತ್ । ಘಟಾದಿವಿನಾಶವತ್ ಅವಸ್ತು ತ್ವಾತ್ ಅದೋಷಃ ಇತಿ ಚೇತ್ । ತಥಾ ಚ ಮೋಕ್ಷಸ್ಯ ಪರಮಾರ್ಥಸದ್ಭಾವಪ್ರತಿಜ್ಞಾ ಹಾನಿಃ । ಅಸತ್ತ್ವಾದೇವ ಶಶವಿಷಾಣಸ್ಯೇವ ಆದಿಮತ್ತ್ವಾಭಾವಶ್ಚ ॥

---

1. ಸ್ವಭಾವವು.

2. ಹುಟ್ಟಿಲ್ಲದ ಆತ್ಮನಿಗೆ ಹುಟ್ಟನ್ನು ಹೇಳುವ ದೋಷವಲ್ಲದೆ ಮತ್ತೊಂದು ದೋಷ ವನ್ನೂ ಹೇಳುತ್ತಾರೆ ಎಂದರ್ಥ.

(ಭಾಷ್ಯಾರ್ಥ)

ಅನಾದಿಯಾದ ಹಿಂದೆ (ಇರುವ)ದೆಂಬ ಕೋಟಿಯಿಲ್ಲದ ಸಂಸಾರಕ್ಕೆ (ಇಲ್ಲಿಗೆ) ಮುಗಿಯಿತೆಂಬುದು ಸಿದ್ಧಿಸಲಾರದು, ಯುಕ್ತಿಯಿಂದ ಸಿದ್ಧಿಯನ್ನು ಹೊಂದಲಾರದು[1]. ಏಕೆಂದರೆ ಅನಾದಿಯಾಗಿದ್ದು ಕೊನೆಯುಳ್ಳದ್ದಾಗಿರುವ ಯಾವ ಪದಾರ್ಥವೂ ಲೋಕದಲ್ಲಿ ಕಂಡುಬಂದಿರುವದಿಲ್ಲ. ಬೀಜ, ಅಂಕುರ–ಇವುಗಳ ಸಂಬಂಧ ಪ್ರವಾಹವು ನಾಶವಾದದ್ದು ಕಂಡುಬಂದಿಲ್ಲವೆ? ಎಂದರೆ ಇಲ್ಲ. ಏಕೆಂದರೆ (ಆ ದೃಷ್ಟಾಂತದಲ್ಲಿ ಅನಾದಿಯಾದ) ಯಾವದೊಂದು ವಸ್ತುವೂ ಇಲ್ಲವೆಂದು (ಇದಕ್ಕೆ) ಪರಿಹಾರವನ್ನು (ಆಗಲೆ) ಹೇಳಿರುತ್ತೇವೆ.[2]

ಇದರಂತೆ ಜ್ಞಾನವನ್ನು ಪಡೆಯುವ ಕಾಲದಲ್ಲಿಯೇ ಹುಟ್ಟುವದಾಗಿ ಆದಿಯುಳ್ಳ ಮೋಕ್ಷಕ್ಕೆ ಅಂತವಿಲ್ಲವೆಂಬದೂ ಆಗಲಾರದು[3]. ಏಕೆಂದರೆ (ಆದಿಯುಳ್ಳ) ಗಡಿಗೆಯೇ ಮುಂತಾದವುಗಳಲ್ಲಿ (ಹೀಗೆ ಅಂತವಿಲ್ಲದಿರುವದು) ಕಂಡುಬಂದಿಲ್ಲ. ಗಡಿಗೆಯೇ ಮುಂತಾದವುಗಳ ವಿನಾಶದಂತೆ[4] (ಇದೂ) ಅಭಾವರೂಪವಾಗಿರುವದರಿಂದ (ಹೀಗೆ ಅಂಗೀಕರಿಸುವದರಲ್ಲಿ) ಯಾವ ದೋಷವೂ ಇಲ್ಲವಲ್ಲ! – ಎಂದರೆ ಆಗ ಮೋಕ್ಷವು ನಿಜವಾಗಿಯೂ ಇರುವ ಪದಾರ್ಥವೆಂದು ಮಾಡಿದ ಪ್ರತಿಜ್ಞೆಯನ್ನು ಬಿಟ್ಟಂತೆ ಆಗುವದು. ಅಸತ್ತಾಗಿರುವದರಿಂದಲೇ ಮೊಲದಕೊಂಬಿಗೆ ಹೇಗೆ (ಆದಿಯಿಲ್ಲವೋ ಅದರಂತೆ ಇವಕ್ಕೂ) ಆದಿಯಿಲ್ಲದೆ ಹೋಗುವದು[5].

---

1. ಗೀ. ಭಾ. ೧೩–೨ (ಭಾ. ಭಾ. ೨೨೦) ನೋಡಿ.

2. ೪–೨೦ ರಲ್ಲಿ.

3. ಜ್ಞಾನವು ಇದ್ದ ಮೋಕ್ಷವನ್ನು ತಿಳಿಸದೆ, ಹೊಸದಾಗಿ ಮೋಕ್ಷವನ್ನುಂಟು ಮಾಡುವದೆಂದರೆ ಈ ದೋಷ.

4. ದುಃಖಧ್ವಂಸವೇ ಮೋಕ್ಷವೆಂಬ ತಾರ್ಕಿಕರ ಮತದಲ್ಲಿ ಆದಿಯುಳ್ಳ ಅಂತವಿಲ್ಲದ ಪ್ರಧ್ವಂಸಾಭಾವವನ್ನು ದೃಷ್ಟಾಂತವಾಗಿ ಕೊಟ್ಟರೂ ಕೊಡಬಹುದು ಮೋಕ್ಷವು ಭಾವರೂಪ ವೆಂಬವರಿಗೆ ಈ ದೃಷ್ಟಾಂತವೂ ಇಲ್ಲವೆಂದು.

5. ಪ್ರಧ್ವಂಸಾಭಾವದಂಥ ಪದಾರ್ಥಕ್ಕೆ ಆದಿಯಿದೆ ಎಂಬ ತಾರ್ಕಿಕರ ಮತವು ಸರಿಯಲ್ಲ. ಏನೆಂದರೆ ಅಭಾವವೆಂದರೆ ತಾನೇ ಇಲ್ಲದ್ದು; ಅದಕ್ಕೆ ಆದಿ ಎಲ್ಲಿಂದ ಬರಬೇಕು?... ಎಂದು ಭಾವ. ತೈ. ಭಾ. ಭಾ. ೯; ಗೀ. ಭಾ. ೧೮–೪೮. (ಭಾ. ಭಾ. ೫೪೭) ಇವುಗಳಲ್ಲಿ ಅಭಾವವು ವಿಕಲ್ಪಮಾತ್ರವೆಂದು ತೋರಿಸಿವೆ.

## ಜಾಗ್ರತ್ಪದಾರ್ಥಗಳು ಮಿಥ್ಯೆ, ಆದ್ದರಿಂದಲೂ ಸಂಸಾರಮೋಕ್ಷಗಳಿಲ್ಲ

**ಆದಾವನ್ತೇ ಚ ಯನ್ನಾಸ್ತಿ ವರ್ತಮಾನೇಽಪಿ ತತ್ತಥಾ ।**
**ವಿತಥೈಃ ಸದೃಶಾಃ ಸನ್ತೋಽವಿತಥಾ ಇವ ಲಕ್ಷಿತಾಃ ॥ ೩೧ ॥**

**ಸಪ್ರಯೋಜನತಾ ತೇಷಾಂ ಸ್ವಪ್ನೇ ವಿಪ್ರತಿಪದ್ಯತೇ ।**
**ತಸ್ಮಾದಾದ್ಯನ್ತವತ್ತ್ವೇನ ಮಿಥ್ಯೈವ ಖಲು ತೇ ಸ್ಮೃತಾಃ ॥ ೩೨ ॥**

೩೧-೩೨. ಮೊದಲಿನಲ್ಲಿಯೂ ಕೊನೆಯಲ್ಲಿಯೂ ಯಾವದು ಇಲ್ಲವೋ ಅದು ಈಗಲೂ ಹಾಗೆಯೇ ವಿತಥಗಳಿಗೆ ಸಮಾನವಾಗಿದ್ದುಕೊಂಡು ಅವಿತಥಗಳಂತೆ ಕಾಣುತ್ತಿರುವವು. ಅವುಗಳಿಗೆ (ಇರುವ) ಸಪ್ರಯೋಜನತ್ವವು ಕನಸಿನಲ್ಲಿ ವಿರುದ್ಧವಾದ ಅಭಿಪ್ರಾಯಕ್ಕೀಡಾಗುತ್ತದೆ. ಅದ್ದರಿಂದ ಆದ್ಯಂತಗಳಿರುವದರಿಂದ ಅವು ಮಿಥ್ಯೆಯೇ ಎನಿಸುವವು.

(ಭಾಷ್ಯ)

೨೭೨. ವೈತಥ್ಯೇ ಕೃತವ್ಯಾಖ್ಯಾನೌ ಶ್ಲೋಕೌ ಇಹ ಸಂಸಾರಮೋಕ್ಷಾಭಾವಪ್ರಸಙ್ಗೇನ ಪಠಿತೌ ॥

(ಭಾಷ್ಯಾರ್ಥ)

**ವೈತಥ್ಯ**ದಲ್ಲಿ[1] (ಇವೆರಡು) ಶ್ಲೋಕಗಳಿಗೂ ವ್ಯಾಖ್ಯಾನಮಾಡಿರುತ್ತದೆ. ಸಂಸಾರಮೋಕ್ಷಗಳು (ನಿಜವಾಗಿ) ಇಲ್ಲವೆಂದು (ಹೇಳುವ) ಪ್ರಸಕ್ತಿಯಿಂದ (ಇದನ್ನು ಮತ್ತೆ ಇಲ್ಲಿ) ಹೇಳಿದೆ.

## ಕನಸಿನಂತೆ ಎಚ್ಚರವೂ ಮಿಥ್ಯೆ

(ಭಾಷ್ಯ)

೨೭೩. "ನಿಮಿತ್ತಸ್ಯಾನಿಮಿತ್ತತ್ವಮಿಷ್ಯತೇ ಭೂತದರ್ಶನಾತ್" (೪-೨೫) ಇತ್ಯಯಮ್ ಅರ್ಥಃ ಪ್ರಪಞ್ಚ್ಯತೇ ಏತೈಃ ಶ್ಲೋಕೈಃ—

1. ೨-೬, ೭ ಈ ಕಾರಿಕೆಗಳು. ಸಕಲ ಪದಾರ್ಥಗಳೂ ಮಿಥ್ಯೆಯಾಗಿರುವಲ್ಲಿ ಬಂಧಮೋಕ್ಷಗಳು ಹೇಗೆ ಸತ್ಯವಾಗುವವು ?-ಎಂದು ಭಾವ.

(ಭಾಷ್ಯಾರ್ಥ)

"ನಿಮಿತ್ತವು ನಿಮಿತ್ತವಲ್ಲವೆಂದು ಭೂತದರ್ಶನದಿಂದ ಒಪ್ಪಿರುತ್ತೇವೆ" (೪–೨೫) ಎಂಬೀ ವಿಷಯವನ್ನು ಈ ಶ್ಲೋಕಗಳಿಂದ ವಿವರಿಸುತ್ತಾರೆ:—

**ಸರ್ವೇ ಧರ್ಮಾ ಮೃಷಾ ಸ್ವಪ್ನೇ ಕಾಯಸ್ಯಾನ್ತರ್ನಿದರ್ಶನಾತ್ ।**
**ಸಂವೃತೇಽಸ್ಮಿನ್ ಪ್ರದೇಶೇ ವೈ ಭೂತಾನಾಂ ದರ್ಶನಂ ಕುತಃ ॥ ೩೩ ॥**

೩೩. ಕನಸಿನಲ್ಲಿ (ಕಾಣುವ) ಎಲ್ಲಾ ಧರ್ಮಗಳೂ[1] ಸುಳ್ಳೇ; ಏಕೆಂದರೆ ಅವು ಶರೀರದ ಒಳಗಡೆ ಕಾಣಬರುತ್ತವೆ[2]. ಸಂಕುಚಿತವಾದ ಈ ಸ್ಥಲದಲ್ಲಿ ಭೂತಗಳನ್ನು[3] ನೋಡುವದೆಲ್ಲಿ (ಬಂತು)?

**ನ ಯುಕ್ತಂ ದರ್ಶನಂ ಗತ್ವಾ ಕಾಲಸ್ಯಾನಿಯಮಾದ್ಗತೌ ।**
**ಪ್ರತಿಬುದ್ಧಶ್ಚ ವೈ ಸರ್ವಸ್ತಸ್ಮಿನ್ ದೇಶೇ ನ ವಿದ್ಯತೇ ॥ ೩೪ ॥**

೩೪. ಹೋಗಿ (ಪದಾರ್ಥಗಳನ್ನು) ನೋಡುತ್ತಾನೆಂಬುದು ಯುಕ್ತವಲ್ಲ; ಏಕೆಂದರೆ (ಅಲ್ಲಿ) ಹೋಗುವದಕ್ಕೆ (ಬೇಕಾದ) ಕಾಲ (ವಿಷ್ಟಿರಬೇಕೆಂಬ) ನಿಯಮವಿರುವದಿಲ್ಲ. ಎಚ್ಚತ್ತವನು ಯಾವನೂ ಆ ದೇಶದಲ್ಲಿರುವದಿಲ್ಲ.

(ಭಾಷ್ಯ)

೨೭೪. ಜಾಗರಿತೇ ಗತ್ಯಾಗಮನಕಾಲೋ ನಿಯತೋ[4] ದೇಶ[5]ಪ್ರಮಾಣಂ ಯಃ ತಸ್ಯ ಅನಿಯಮಾತ್ ನಿಯಮಸ್ಯ ಅಭಾವಾತ್ ಸ್ವಪ್ನೇ ನ ದೇಶಾನ್ತರಗಮನಮ್ ಇತ್ಯರ್ಥಃ ॥

---

1. ಜೀವರೂ ಪದಾರ್ಥಗಳೂ.

2. ಎಚ್ಚರದ ಶರೀರದ ಒಳಗೇ ನಾವು ಕನಸನ್ನು ಕಾಣುತ್ತೇವೆಂಬುದು ಎಚ್ಚರದ ದೃಷ್ಟಿಯಿಂದ. ಈ ದೃಷ್ಟಿಯಿಂದ ಕನಸನ್ನು ಸುಳ್ಳೆಂದು ತೋರಿಸಿ ಆ ದೃಷ್ಟಾಂತದ ಬಲದಿಂದ ಎಚ್ಚರವನ್ನೂ ಸುಳ್ಳೆಂದು ೩೬ನೆಯ ಕಾರಿಕೆಯಲ್ಲಿ ಸಾಧಿಸಿರುತ್ತಾರೆ. ವ್ಯಾಖ್ಯಾನಕಾರರು ಕನಸಿನ ಶ್ಲೋಕಗಳನ್ನು ಎಚ್ಚರವು ಸುಳ್ಳೆಂದು ತೋರಿಸುವದಕ್ಕೂ ಉಪಯೋಗಿಸಿರುತ್ತಾರೆ. ಉದಾಹರಣೆಗೆ ಈ ಶ್ಲೋಕದ 'ಕಾಯಸ್ಯಾನ್ತಃ' ಎಂಬುದಕ್ಕೆ ವಿರಾಡ್ದೇಹದಲ್ಲಿರುವದರಿಂದ ಎಚ್ಚರವೂ ಸುಳ್ಳು ಎಂದು ಬರೆದಿದ್ದಾರೆ. ಇದು ಅಷ್ಟು ಒಪ್ಪಾಗಿರುವದಿಲ್ಲ.

3. ಪ್ರಾಣಿಗಳನ್ನು ಮತ್ತು ಇತರ ಪದಾರ್ಥಗಳನ್ನು.

4. "ಗತ್ಯಾಗಮನಕಾಲೌ ನಿಯತೌ" ವಾ॥ ವ್ಯ॥

5. "ದೇಶಃ" ಎಂಬ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

(ಭಾಷ್ಯಾರ್ಥ)

ಎಚ್ಚರದಲ್ಲಿ ದೇಶಪ್ರಮಾಣದಿಂದ[1] ಹೋಗಿ ಬರುವದಕ್ಕೆ ಎಷ್ಟು ಕಾಲವು ಗೊತ್ತಾಗಿರುವದೋ, ಅದರ ಅನಿಯಮವಿರುವದರಿಂದ ನಿಯಮವಿರುವದಿಲ್ಲವಾದ್ದರಿಂದ ಕನಸಿನಲ್ಲಿ ಬೇರೊಂದು ಸ್ಥಲಕ್ಕೆ (ನಿಜವಾಗಿ) ಹೋಗಿರುವದಿಲ್ಲ ಎಂದರ್ಥ[2].

**ಮಿತ್ರಾದ್ಯೈಃ ಸಹ ಸಮ್ಮಂತ್ರ್ಯ ಸಮ್ಬುದ್ಧೋ ನ ಪ್ರಪದ್ಯತೇ ।**
**ಗೃಹೀತಂ ಚಾಪಿ ಯತ್ಕಿಂಚಿತ್ ಪ್ರತಿಬುದ್ಧೋ ನ ಪಶ್ಯತಿ ॥ ೩೫ ॥**

೩೫. ಮಿತ್ರರೇ ಮೊದಲಾದವರೊಡನೆ ಆಲೋಚನೆಮಾಡಿ ಎಚ್ಚತ್ತವನು (ಅದನ್ನು) ನಂಬುವದಿಲ್ಲ. ಮತ್ತು ಯಾವದನ್ನಾದರೂ ತೆಗೆದುಕೊಂಡಿದ್ದರೆ (ಅದನ್ನು) ಎಚ್ಚೆತ್ತವನು ಕಾಣುವದಿಲ್ಲ.

(ಭಾಷ್ಯ)

೩೫. ಮಿತ್ರಾದ್ಯೈಃ ಸಹ ಸಮ್ಮನ್ತ್ರ್ಯ ತದೇವ ಮನ್ತ್ರಣಂ ಪ್ರತಿಬುದ್ಧಃ ನ ಪ್ರಪದ್ಯತೇ । ಗೃಹೀತಂ ಚ ಯತ್ಕಿಂಚಿತ್ ಹಿರಣ್ಯಾದಿ ನ ಪ್ರಾಪ್ನೋತಿ । ತತಶ್ಚ[3] ನ ದೇಶಾನ್ತರಂ ಗಚ್ಛತಿ ಸ್ವಪ್ನೇ ॥

(ಭಾಷ್ಯಾರ್ಥ)

ಮಿತ್ರರೇ ಮೊದಲಾದವರೊಡನೆ (ಕನಸಿನಲ್ಲಿ) ಆಲೋಚನೆಮಾಡಿದ್ದರೂ ಎಚ್ಚೆತ್ತಮೇಲೆ ಅದೇ ಆಲೋಚನೆಯನ್ನು (ನಿಜವೆಂದು) ನಂಬುವದಿಲ್ಲ[4]. ಚಿನ್ನವೇ

1. ಎಚ್ಚರದಲ್ಲಿ ಇಷ್ಟು ದೂರಕ್ಕೆ ಹೋಗಿಬರುವದಕ್ಕೆ ಇಷ್ಟು ಕಾಲವು ಬೇಕೆಂಬ ನಿಯಮವಿರುವದು. ಆದರೂ ರಾಮೇಶ್ವರದಲ್ಲಿ ಮಲಗಿದವನು ಕಾಶಿಗೆ ಹೋದಂತೆ ಒಂದು ಘಳಿಗೆಯೊಳಗಾಗಿ ಕನಸುಕಾಣುತ್ತಾನೆ!

2. ಈ ಕಾರಿಕೆಯ ಉತ್ತರಾರ್ಧವು ೨-೨ ರಲ್ಲಿದೆ; ಆ ಕಾರಿಕೆಯ ಭಾಷ್ಯವನ್ನು ನೋಡಿ.

3. "ಗತಶ್ಚ" ಪಾ॥

4. ಮಿತ್ರರೊಡನೆ ಮಾತನಾಡುತ್ತಿದ್ದಂತೆ ಕನಸಾಗಿ ಎಚ್ಚತ್ತವನಿಗೆ ಅವರೊಡನೆ ತಾನು ನಿಜವಾಗಿ ಮಾತನಾಡಿದೆನೆಂಬ ನಂಬಿಕೆಯಾಗುವದಿಲ್ಲ; ಆ ಗೆಳೆಯರೂ ಕನಸಿನಲ್ಲಿ ನಿನ್ನೊಡನೆ ನಾವು ಮಾತನಾಡಿದೆವೆಂದು ಒಪ್ಪುವದಿಲ್ಲ. ಆ ಮಿತ್ರರಿದ್ದ ಬೇರೊಂದು ಸ್ಥಲಕ್ಕೆ ನಾವು ನಿಜವಾಗಿ ಹೋಗಿರಲಿಲ್ಲವೆಂದು ಇದರಿಂದ ಸಿದ್ಧವಾಯಿತು.

ಮುಂತಾಗಿ (ತಾನು) ತೆಗೆದುಕೊಂಡಿದ್ದ ಯಾವದಾದರೂ (ವಸ್ತುವನ್ನು) ಪಡೆದಿರುವದಿಲ್ಲ. ಆದ್ದರಿಂದಲೂ[1] ಕನಸಿನಲ್ಲಿ ಬೇರೊಂದು ಸ್ಥಲಕ್ಕೆ (ನಿಜವಾಗಿ) ಹೋಗಿರುವದಿಲ್ಲ.

**ಸ್ವಪ್ನೇ ಚಾವಸ್ತುಕಃ ಕಾಯಃ ಪೃಥಗನ್ಯಸ್ಯ ದರ್ಶನಾತ್ ।**
**ಯಥಾ ಕಾಯಸ್ತಥಾ ಸರ್ವಂ ಚಿತ್ತದೃಶ್ಯಮವಸ್ತುಕಮ್ ॥ ೩೬ ॥**

೩೬. ಕನಸಿನಲ್ಲಿರುವ ಶರೀರವು ಅಸತ್ಯ(ವಾಗಿರುತ್ತದೆ); ಏಕೆಂದರೆ (ಅದಕ್ಕಿಂತ) ಬೇರೆಯಾಗಿ ಮತ್ತೊಂದು ಕಾಣಿಸುತ್ತಿರುವದು. ಶರೀರವು ಹೇಗೋ ಹಾಗೆ ಚಿತ್ತದೃಶ್ಯವಾದದ್ದೆಲ್ಲವೂ ಅಸತ್ಯವೇ.

(ಭಾಷ್ಯ)

೨೭೬. ಸ್ವಪ್ನೇ ಚ ಅಟನ್ ದೃಶ್ಯತೇ ಯಃ ಕಾಯಃ ಸಃ ಅವಸ್ತುಕಃ । ತತಃ ಅನ್ಯಸ್ಯ ಸ್ವಾಪದೇಶಸ್ಥಸ್ಯ ಪೃಥಕ್ ಕಾಯಾನ್ತರಸ್ಯ ದರ್ಶನಾತ್ । ಯಥಾ ಸ್ವಪ್ನದೃಶ್ಯಃ ಕಾಯಃ ಅಸನ್ ತಥಾ ಸರ್ವಂ ಚಿತ್ತದೃಶ್ಯಮ್ ಅವಸ್ತುಕಂ ಜಾಗರಿತೇಽಪಿ । ಚಿತ್ತದೃಶ್ಯತ್ವಾತ್ ಇತ್ಯರ್ಥಃ । ಸ್ವಪ್ನಸಮತ್ವಾತ್ ಅಸತ್ ಜಾಗರಿತಮಪಿ ಇತಿ ಪ್ರಕರಣಾರ್ಥಃ ॥

(ಭಾಷ್ಯಾರ್ಥ)

ಮತ್ತು ಕನಸಿನಲ್ಲಿ ತಿರುಗಾಡುತ್ತಿ(ರುವಂತೆ) ಕಾಣುತ್ತಿರುವವಲ್ಲ, ಆ ಶರೀರವು ಅಸತ್ಯವು. ಏಕೆಂದರೆ ಅದಕ್ಕಿಂತ ಬೇರೆಯಾಗಿ ನಿದ್ರೆಮಾಡುತ್ತಿರುವ ಸ್ಥಲದಲ್ಲಿ ಮತ್ತೊಂದು ಶರೀರವು ಕಾಣುತ್ತಿರುವದು[2]. ಹೇಗೆ ಕನಸಿನಲ್ಲಿ ಕಾಣುವ ಶರೀರವು ಅಸತ್ಯವೋ ಹಾಗೆ ಚಿತ್ತದೃಶ್ಯವಾದ ಎಲ್ಲವೂ ಎಚ್ಚರದಲ್ಲಿಯೂ ಅಸತ್ಯವೇ; ಏಕೆಂದರೆ (ಕನಸಿನ ದೃಶ್ಯದಂತೆ ಅದೂ) ಚಿತ್ತದೃಶ್ಯವಾಗಿರುತ್ತದೆ[3]. ಕನಸಿಗೆ ಸಮನಾಗಿರುವವರಿಂದ ಎಚ್ಚರವೂ ಸುಳ್ಳೇ ಎಂಬುದು ಪ್ರಕರಣದ ಅರ್ಥವು.

---

1. ಕನಸಿನ ಯಾವ ವಸ್ತುಗಳೂ ಎಚ್ಚರಕ್ಕೆ ಬರುವಹಾಗಿಲ್ಲ. ಅಂಥ ವಸ್ತುಗಳೇ ನಮಗೆ ಸಿಕ್ಕರೂ ಕನಸಿನ ಮತ್ತು ಎಚ್ಚರದ ವಸ್ತುಗಳು ಅದೇ ವಸ್ತುಗಳು ಎಂದು ನಂಬುವದಕ್ಕೆ ಯಾವ ಪ್ರಮಾಣವೂ ಇರುವದಿಲ್ಲ.

2. ಈ ಶರೀರವು ಕಾಣುವದೆಂಬುದು ಎಚ್ಚರವಾಗಿರುವ ಮತ್ತೊಬ್ಬರ ದೃಷ್ಟಿಯಿಂದ.

3. ಎಚ್ಚರದಲ್ಲಿ ಕಾಣುವದೆಲ್ಲವೂ ಮಿಥ್ಯೆ; ಏಕೆಂದರೆ ಅದು ಕನಸಿನ ಶರೀರಾದಿಗಳಂತೆ ಚಿತ್ತದೃಶ್ಯವಾಗಿರುತ್ತದೆ–ಎಂಬ ಅನುಮಾನವು ಇಲ್ಲಿ ಸೂಚಿತವಾಗಿದೆ ಎಂದು ಭಾವ.

## ಎಚ್ಚರಕನಸುಗಳಿಗೆ ಕಾರ್ಯಕಾರಣಭಾವವಿಲ್ಲ

(ಭಾಷ್ಯ)

೨೭೭. ಇತಶ್ಚ ಅಸತ್ತ್ವಂ ಜಾಗರಿತವಸ್ತುನಃ—

(ಭಾಷ್ಯಾರ್ಥ)

ಈ (ಕಾರಣ)ದಿಂದಲೂ ಎಚ್ಚರದ ವಸ್ತು ಅಸತ್ಯ:—

**ಗ್ರಹಣಾಜ್ಜಾಗರಿತವತ್ ತದ್ಧೇತುಃ ಸ್ವಪ್ನ ಇಷ್ಯತೇ ।**
**ತದ್ಧೇತುತ್ವಾತ್ತು ತಸ್ಯೈವ ಸಜ್ಜಾಗರಿತಮಿಷ್ಯತೇ　॥ ೩೭ ॥**

**೩೭.** ಎಚ್ಚರದಂತೆ ಕಂಡುಬರುವದರಿಂದ ಸ್ವಪ್ನವು ತದ್ಧೇತುವೆನಿಸು ವದು. ಆದರೆ ತದ್ಧೇತುವಾಗಿರುವದರಿಂದ **ಅವನಿಗೇ** ಎಚ್ಚರವು ಇರುವ ದೆನಿಸುವದು.

(ಭಾಷ್ಯ)

೨೭೮. ಜಾಗರಿತವತ್ ಜಾಗರಿತಸ್ಯೇವ ಗ್ರಹಣಾತ್ ಗ್ರಾಹ್ಯಗ್ರಾಹಕರೂಪೇಣ ಸ್ವಪ್ನಸ್ಯ ತತ್ ಜಾಗರಿತಂ ಹೇತುಃ ಅಸ್ಯ ಸ್ವಪ್ನಸ್ಯ ಸ ಸ್ವಪ್ನಃ ತದ್ಧೇತುಃ ಜಾಗರಿತ ಕಾರ್ಯಮ್ ಇಷ್ಯತೇ । ತದ್ಧೇತುತ್ವಾತ್ (ತು) ಜಾಗರಿತಕಾರ್ಯತ್ವಾತ್ ತಸ್ಯೈವ ಸ್ವಪ್ನದೃಶ ಏವ ಸತ್ ಜಾಗರಿತಮ್ ನ ತು ಅನ್ಯೇಷಾಮ್ । ಯಥಾ ಸ್ವಪ್ನಃ ಸ್ವಪ್ನದೃಶ ಏವ ಸನ್ ಸಾಧಾರಣವಿದ್ಯಮಾನವಸ್ತುವತ್ ಅವಭಾಸತೇ, ತಥಾ ತತ್ಕಾರಣತ್ವಾತ್ ಸಾಧಾರಣವಿದ್ಯಮಾನವಸ್ತುವತ್ ಅವಭಾಸಮಾನಮ್ । ನ ತು ಸಾಧಾರಣಂ ವಿದ್ಯಮಾನವಸ್ತು ಸ್ವಪ್ನವದೇವ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಎಚ್ಚರದಂತೆ, ಅರಿಯಲ್ಪಡತಕ್ಕದ್ದು ಅರಿಯುವದು—ಎಂಬ ರೂಪದಿಂದ ಎಚ್ಚರದಂತೆ ಕಾಣಬರುವದರಿಂದ ಸ್ವಪ್ನವು ತದ್ಧೇತು—ಅದು, ಎಚ್ಚರವು ಈ ಕನಸಿಗೆ ಹೇತುವಾಗಿರುವದರಿಂದ ಈ ಸ್ವಪ್ನವು ತದ್ಧೇತು—ಎಚ್ಚರದ ಕಾರ್ಯವು ಎನಿಸುವದು. ಆದರೆ ತದ್ಧೇತುವಾಗಿರುವದರಿಂದ ಎಚ್ಚರದ ಕಾರ್ಯವಾಗಿರುವದರಿಂದ ಅವನಿಗೇ (ಆ) ಕನಸುಕಾಣುವವನಿಗೇ (ಆ) ಎಚ್ಚರವು ಇರುವದೇ ಹೊರತು ಮತ್ತೊಬ್ಬರಿ ಗಿರುವದಿಲ್ಲ. ಕನಸಿನಂತೆಯೇ (ಇದು) ಎಂದು ಅಭಿಪ್ರಾಯ. **ಹೇಗೆ ಕನಸು**

**ಕನಸುಕಾಣುವವನಿಗೇ ಇರುವದಾದರೂ (ಎಲ್ಲರಿಗೂ) ಸಮಾನವಾಗಿರುವ ವಸ್ತುವಿನಂತೆ ತೋರುತ್ತಿರುವದೋ ಅದರಂತೆ ಅದಕ್ಕೆ ಕಾರಣವಾಗಿರುವದರಿಂದ[1] (ಎಚ್ಚರವೂ ಎಲ್ಲರಿಗೂ) ಸಮಾನವಾಗಿರುವ ವಸ್ತುವಿನಂತೆ ತೋರುವದು. ಆದರೆ ಕನಸಿನಂತೆಯೇ (ಅದು ಎಲ್ಲರಿಗೂ) ಸಮಾನವಾಗಿರುವ ವಸ್ತುವಲ್ಲ ಎಂದು ಅಭಿಪ್ರಾಯ[2].**

(ಭಾಷ್ಯ)

೨೭೯. ನನು ಸ್ವಪ್ನಕಾರಣತ್ವೇಽಪಿ ಜಾಗರಿತವಸ್ತುನಃ ನ ಸ್ವಪ್ನವತ್ ಅವಸ್ತುತ್ವಮ್ । ಅತ್ಯನ್ತಚಲೋ ಹಿ ಸ್ವಪ್ನಃ, ಜಾಗರಿತಂ ತು ಸ್ಥಿರಂ ಲಕ್ಷ್ಯತೇ । ಸತ್ಯಮ್ ಏವಮ್ ಅವಿವೇಕಿನಾಂ ಸ್ಯಾತ್ । ವಿವೇಕಿನಾಂ ತು ನ ಕಸ್ಯಚಿತ್ ವಸ್ತುನಃ ಉತ್ಪಾದಃ ಪ್ರಸಿದ್ಧಃ । ಅತಃ—

(ಭಾಷ್ಯಾರ್ಥ)

(ಆಕ್ಷೇಪ) :— ಎಚ್ಚರವೆಂಬ ವಸ್ತು ಕನಸಿಗೆ ಕಾರಣವಾಗಿರುವದಾದರೂ (ಅದು) ಕನಸಿನ (ವಸ್ತುವಿನಂತೆ) ಅಸತ್ಯವಲ್ಲ. ಏಕೆಂದರೆ ಕನಸು ಅತ್ಯಂತ ಚಂಚಲವಾಗಿರುತ್ತದೆ; ಆದರೆ ಎಚ್ಚರವು ಸ್ಥಿರವಾಗಿ ಕಾಣುತ್ತದೆಯಲ್ಲ[3] !

(ಪರಿಹಾರ) :—ನಿಜ. ವಿಂಗಡಿಸಿ ತಿಳಿದುಕೊಳ್ಳಲಾರದವರಿಗೆ ಹಾಗೆಯೇ ಇರಬಹುದು. ಆದರೆ ವಿವೇಕಿಗಳಿಗೆ ಯಾವ ವಸ್ತುವೂ ಹುಟ್ಟುವದೆಂಬುದು ಸಿದ್ಧವಾಗಿರುವದಿಲ್ಲ. ಆದ್ದರಿಂದ–

---

1. ಕನಸು ಎಚ್ಚರದ ವಾಸನೆಯಿಂದಲೇ ಆಗುವದೆಂದು ಜನರು ಸಾಮಾನ್ಯವಾಗಿ ನಂಬುವದನ್ನು ಇಟ್ಟುಕೊಂಡು ಇಲ್ಲಿ ಹೇಳಿದೆ.

2. ಎಚ್ಚರವು ಎಲ್ಲರಿಗೂ ಸೇರಿದ್ದಾದರೆ ಅದರ ಕಾರ್ಯವಾದ ಕನಸೂ ಎಲ್ಲರಿಗೂ ಆಗಬೇಕು; ಹಾಗಿಲ್ಲ. ಆದ್ದರಿಂದ ಎಚ್ಚರವೂ ಎಲ್ಲರಿಗೂ ಸಮಾನವೆಂಬುದು ಭ್ರಾಂತಿಯೇ. ಕನಸೂ ತನ್ನ ಕಾಲದಲ್ಲಿ ಅಲ್ಲಿ ತೋರುತ್ತಿರುವವರಿಗೆಲ್ಲ ಸಮಾನವಾದ ಎಚ್ಚರದಂತೆಯೇ ಕಂಡರೂ ಎಚ್ಚತ್ತ ಬಳಿಕ ಅದು ಕನಸುಕಂಡವನೊಬ್ಬನಿಗೇ ಆಯಿತೆಂದು ನಿಶ್ಚಯವಾಗುವಂತೆಯೇ ಎಚ್ಚರವೆಂಬವಸ್ಥೆಯನ್ನೂ ತಿಳಿಯಬೇಕು.

3. ಕನಸು ಒಂದೊಂದು ವೇಳೆ ಒಂದೊಂದು ಬಗೆಯಾಗಿ ತೋರುತ್ತದೆ; ಕನಸಿನ ವಸ್ತುಗಳೂ ಕ್ಷಣಕ್ಕೊಂದು ರೂಪವನ್ನು ಪಡೆಯುತ್ತವೆ. ಎಚ್ಚರವು ಹೀಗಲ್ಲವಲ್ಲ!–ಎಂದು ಆಕ್ಷೇಪ.

**ಉತ್ಪಾದಸ್ಯಾಪ್ರಸಿದ್ಧತ್ವಾದಜಂ ಸರ್ವಮುದಾಹೃತಮ್ ।**
**ನ ಚ ಭೂತಾದಭೂತಸ್ಯ ಸಂಭವೋಽಸ್ತಿ ಕಥಂಚನ ॥ ೩೮ ॥**

೩೮. ಹುಟ್ಟುವದು ಪ್ರಸಿದ್ಧವಾಗಿಲ್ಲವಾದ್ದರಿಂದ ಎಲ್ಲವೂ **ಅಜವೇ** ಎಂದು ಹೇಳಲ್ಪಟ್ಟಿರುತ್ತದೆ. ಇರುವದರಿಂದ ಇಲ್ಲದ್ದು ಹುಟ್ಟುತ್ತದೆ ಎಂಬದು ಹೇಗೂ ಆಗಲಾರದು.

(ಭಾಷ್ಯ)

೨೮೦. ಅಪ್ರಸಿದ್ಧತ್ವಾತ್ ಉತ್ಪಾದಸ್ಯ ಆತ್ಮೈವ ಸರ್ವಮ್ ಇತಿ ಅಜಂ ಸರ್ವಮ್ ಉದಾಹೃತಂ ವೇದಾನ್ತೇಷು "ಸ ಬಾಹ್ಯಾಭ್ಯನ್ತರೋ ಹ್ಯಜಃ" (ಮುಂ. ೨-೧-೨) ಇತಿ । ಯದಪಿ ಮನ್ಯಸೇ ಜಾಗರಿತಾತ್ ಸತಃ ಅಸನ್ ಸ್ವಪ್ನಃ ಜಾಯತೇ ಇತಿ, ತದಸತ್ । ನ ಭೂತಾತ್ ವಿದ್ಯಮಾನಾತ್ ಅಭೂತಸ್ಯ ಅಸತಃ ಸಮ್ಭವಃ ಅಸ್ತಿ ಲೋಕೇ । ನ ಹಿ ಅಸತಃ ಶಶವಿಷಾಣಾದೇಃ ಸಮ್ಭವಃ ದೃಷ್ಟಃ ಕಥಂಚಿದಪಿ ॥

(ಭಾಷ್ಯಾರ್ಥ)

ಹುಟ್ಟುವದೆಂಬುದು ಅಸಿದ್ಧವಾಗಿರುವದರಿಂದ ಎಲ್ಲವೂ ಆತ್ಮನೇ ಆಗಿರುವದರಿಂದ ಎಲ್ಲವೂ ಅಜವು ಎಂದು "ಹೊರಗೂ ಒಳಗೂ ಅಜನೇ" (ಮುಂ. ೨-೧-೨) ಎಂದು (ಮುಂತಾಗಿ) ವೇದಾಂತಗಳಲ್ಲಿ ಹೇಳಲ್ಪಟ್ಟಿರುತ್ತದೆ[1]. ಇನ್ನು (ನಿಜವಾಗಿ) ಇರುವ ಎಚ್ಚರದಿಂದ ಇಲ್ಲದ ಕನಸು ಉಂಟಾಗುವದು ಎಂದು ತಿಳಿದಿರುವೆಯಲ್ಲ, ಅದು ಸರಿಯಲ್ಲ. (ಏಕೆಂದರೆ) ಭೂತದಿಂದ ಇರುವದರಿಂದ ಅಭೂತವು ಇಲ್ಲದ್ದು ಹುಟ್ಟುವದೆಂಬುದು ಲೋಕದಲ್ಲಿ (ಎಲ್ಲಿಯೂ) ಆಗುವದಾಗಿಲ್ಲ. ಇಲ್ಲದಿರುವ ಮೊಲದಕೊಂಬು ಮುಂತಾದದ್ದು ಹೇಗೂ[2] ಹುಟ್ಟುವದು ಕಂಡಿರುವದಿಲ್ಲವಲ್ಲವೆ ?

1. ಕನಸು ಹುಟ್ಟುವದೆಂದು ಒಪ್ಪಿದರಲ್ಲವೆ, ಅದಕ್ಕೂ ಎಚ್ಚರಕ್ಕೂ ಇರುವ ತಾರತಮ್ಯವು ಹೇಗೆಂಬುದನ್ನು ವಿವರಿಸಬೇಕಾಗುವದು, ವೇದಾಂತಿಗಳ ಮತದಲ್ಲಿ ಯಾವದೊಂದೂ ಹುಟ್ಟುವದೇ ಇಲ್ಲ.

2. ನಿಜವಾಗಿರುವ ಕಾರಣದಿಂದಲಾಗಲಿ, ಅಸತ್ತಿನಿಂದಲಾಗಲಿ ಎಂದರ್ಥ. ಯಾವದೂ ಹುಟ್ಟುವದೇ ಇಲ್ಲವೆಂಬುದನ್ನು ೪-೨೨ರಲ್ಲಿ ತಿಳಿಸಿದ್ದಾಗಿದೆ. ಕನಸು ಚಂಚಲವಾಗಿ ತೋರುವದೆಂಬುದನ್ನು ಒಪ್ಪಿದರೂ ಅತ್ಯಂತವಾಗಿ ಹುಟ್ಟದೆ ಇರುವ ಎಚ್ಚರಕನಸುಗಳಿಗೆ ಕಾರ್ಯಕಾರಣಭಾವವನ್ನು ಒಪ್ಪಬೇಕಾಗಿರುವದಿಲ್ಲವೆಂದು ಭಾವ. ಕನಸಿನ ಚಂಚಲತೆಯಾಗಲಿ ಅದು ಕನಸೆಂಬುದಾಗಲಿ ನಮಗೆ ಕನಸಿನ ಕಾಲದಲ್ಲಿ ಹೊಳೆಯುವದೇ ಇಲ್ಲ, ಅದು ಆಗ ಎಚ್ಚರವೆಂದೇ ತೋರುತ್ತಿರುತ್ತದೆ-ಎಂಬುದನ್ನು ಲಕ್ಷ್ಯಕ್ಕೆ ತಂದರೆ ಆಕ್ಷೇಪಕ್ಕೇ ಕಾರಣವಿರುವದಿಲ್ಲ.

(ಭಾಷ್ಯ)

೩೮೧. ನನು ಉಕ್ತಂ ತ್ವಯೈವ ಸ್ವಪ್ನಃ ಜಾಗರಿತಕಾರ್ಯಮ್ ಇತಿ। ತತ್ ಕಥಮ್ ಉತ್ಪಾದೋಽಪ್ರಸಿದ್ಧಃ ಇತ್ಯುಚ್ಯತೇ ? ಶೃಣು ತತ್ರ ಯಥಾ ಕಾರ್ಯ ಕಾರಣಭಾವಃ ಅಸ್ಮಾಭಿಃ ಅಭಿಪ್ರೇತ ಇತಿ ॥

(ಆಕ್ಷೇಪ) :—ಕನಸು ಎಚ್ಚರದ ಕಾರ್ಯವೆಂದು ನೀನೇ ಹೇಳಿದ್ದೆಯಲ್ಲ ! ಹೀಗಿರುವಲ್ಲಿ ಹುಟ್ಟುವದೆಂಬುದೇ ಅಸಿದ್ಧವೆಂದು (ನೀನು ಈಗ) ಹೇಳುವದು ಹೇಗೆ (ಸರಿ) ?

(ಸಮಾಧಾನ) :—ಅಲ್ಲಿ ಕಾರ್ಯಕಾರಣಭಾವವನ್ನು ಯಾವ ಅಭಿಪ್ರಾಯ ದಿಂದ (ಹೇಳಿದೆವೆಂಬುದನ್ನು ತಿಳಿಸುತ್ತೇವೆ) ಕೇಳು :—

**ಅಸಜ್ಜಾಗರಿತೇ ದೃಷ್ಟ್ವಾ ಸ್ವಪ್ನೇ ಪಶ್ಯತಿ ತನ್ಮಯಃ ।**
**ಅಸತ್ಸ್ವಪ್ನೇಽಪಿ ದೃಷ್ಟ್ವಾ ಚ ಪ್ರತಿಬುದ್ಧೋ ನ ಪಶ್ಯತಿ ॥ ೩೯ ॥**

೩೯. ಎಚ್ಚರದಲ್ಲಿ ಅಸತ್ತನ್ನು ಕಂಡು ತನ್ಮಯನಾಗಿ ಕನಸಿನಲ್ಲಿಯೂ (ಅದನ್ನು) ಕಾಣುತ್ತಾನೆ. ಮತ್ತು ಅಸತ್ತಾದದ್ದನ್ನು ಕನಸಿನಲ್ಲಿಯೂ ಕಂಡು ಎಚ್ಚತ್ತರೆ (ಅದನ್ನು) ಕಾಣುವದಿಲ್ಲ.

(ಭಾಷ್ಯ)

೩೮೨. ಅಸತ್ ಅವಿದ್ಯಮಾನಂ ರಜ್ಜುಸರ್ಪವತ್ ವಿಕಲ್ಪಿತಂ ವಸ್ತು ಜಾಗ ರಿತೇ ದೃಷ್ಟ್ವಾ ತದ್ಭಾವಭಾವಿತಃ ತನ್ಮಯಃ ಸ್ವಪ್ನೇಽಪಿ ಜಾಗರಿತವತ್ ಗ್ರಾಹ್ಯ ಗ್ರಾಹಕರೂಪೇಣ ವಿಕಲ್ಪಯನ್ ಪಶ್ಯತಿ । ತಥಾ ಅಸತ್ ಸ್ವಪ್ನೇಽಪಿ ದೃಷ್ಟ್ವಾ ಚ ಪ್ರತಿಬುದ್ಧಃ ನ ಪಶ್ಯತಿ ಅವಿಕಲ್ಪಯನ್। ಚಶಬ್ದಾತ್ ತಥಾ ಜಾಗರಿತೇಽಪಿ ದೃಷ್ಟ್ವಾ ಸ್ವಪ್ನೇ ನ ಪಶ್ಯತಿ ಕದಾಚಿತ್ ಇತ್ಯರ್ಥಃ। ತಸ್ಮಾತ್ ಜಾಗರಿತಂ ಸ್ವಪ್ನಹೇತುಃ ಇತ್ಯು ಚ್ಯತೇ । ನ ತು ಪರಮಾರ್ಥಸತ್ ಇತಿ ಕೃತ್ವಾ ॥

(ಭಾಷ್ಯಾರ್ಥ)

ಅಸತ್ತಾದದ್ದನ್ನು[1] (ನಿಜವಾ)ಗಿಲ್ಲದ್ದನ್ನು ಹಗ್ಗದ ಹಾವಿನಂತೆ ವಿಕಲ್ಪಿತವಾಗಿ ರುವ ವಸ್ತುವನ್ನು ಎಚ್ಚರದಲ್ಲಿ ಕಂಡು ಅದೇ ಭಾವನೆಯು ಊರಿಕೊಂಡು ತನ್ಮಯ

1. ತೋರಿದ್ದು ನಿಜವಾಗಿರಬೇಕೆಂಬ ನಿಯಮವೇನೂ ಇಲ್ಲ. ಉದಾಹರಣೆಗೆ ಹಗ್ಗದ ಹಾವು ಅಸತ್ತೆಂಬುದು ಎಲ್ಲರಿಗೂ ಸಮ್ಮತ. ಆದ್ದರಿಂದ ತೋರಿಕೆಯಾದ ಎಚ್ಚರಿಕೆಯ ವಸ್ತುವೆಲ್ಲವೂ ಹೀಗೆಯೇ ಅಸತ್ತೆನ್ನಬಹುದು.

ನಾಗಿ ಕನಸಿನಲ್ಲಿಯೂ ಎಚ್ಚರದಂತೆ ಅರಿಯಲ್ಪಡತಕ್ಕದ್ದು, ಅರಿಯುವದು-ಎಂಬ ರೂಪದಿಂದ ವಿಕಲ್ಪಿಸಿ ಕಾಣುತ್ತಾನೆ[1]. ಮತ್ತು ಹಾಗೂ ಕನಸಿನಲ್ಲಿಯೂ ಅಸತ್ತಾದದ್ದನ್ನು ಕಂಡು ಎಚ್ಚತ್ತಮೇಲೆ (ಹಾಗೆ) ವಿಕಲ್ಪಿಸಿಕೊಳ್ಳದ್ದರಿಂದ (ಅದನ್ನು) ಕಾಣುವದಿಲ್ಲ. (ಮೂಲದಲ್ಲಿ) ಚ (ಮತ್ತು) ಎಂಬ ಮಾತಿರುವದರಿಂದ ಹಾಗೆಯೇ ಎಚ್ಚರದಲ್ಲಿಯೂ ಕಂಡು ಕನಸಿನಲ್ಲಿ ಕೆಲವುವೇಳೆ ಕಾಣುವದಿಲ್ಲ ಎಂದರ್ಥ. ಆದ್ದರಿಂದ[2] ಎಚ್ಚರವು ಕನಸಿಗೆ ಕಾರಣವೆಂದು ಹೇಳಿದೆಯೇ ಹೊರತು (ಅದು) ನಿಜವಾಗಿರುವದೆಂದು ಒಪ್ಪಿಕೊಂಡೇನೂ (ಹೇಳಿರುವ)ದಿಲ್ಲ.

(ಭಾಷ್ಯ)

೨೮೩. ಪರಮಾರ್ಥತಸ್ತು ನ ಕಸ್ಯಚಿತ್ ಕೇನಚಿದಪಿ ಪ್ರಕಾರೇಣ ಕಾರ್ಯಕಾರಣಭಾವ ಉಪಪದ್ಯತೇ । ಕಥಮ್ ?

(ಭಾಷ್ಯಾರ್ಥ)

ಆದರೆ ಪರಮಾರ್ಥವಾಗಿ ನೋಡಿದರೆ ಯಾವದಕ್ಕೂ ಯಾವದರೊಡನೆಯೂ ಯಾವಪ್ರಕಾರದಿಂದಲೂ ಕಾರ್ಯಕಾರಣಭಾವವು ಹೊಂದುವದಿಲ್ಲ. ಹೇಗೆಂದರೆ:—

**ನಾಸ್ತ್ಯಸದ್ಧೇತುಕಮಸತ್ ಸದಸದ್ಧೇತುಕಂ ತಥಾ ।**
**ಸಚ್ಚ ಸದ್ಧೇತುಕಂ ನಾಸ್ತಿ ಸದ್ಧೇತುಕಮಸತ್ ಕುತಃ ॥ ೪೦ ॥**

೪೦. ಅಸದ್ಧೇತುಕವಾದ ಅಸತ್ತು ಇರುವದಿಲ್ಲ; ಹಾಗೂ ಅಸದ್ಧೇತುಕವಾದ ಸತ್ತೂ (ಇರುವದಿಲ್ಲ). ಸದ್ಧೇತುಕವಾದ ಸತ್ತು ಇರುವದಿಲ್ಲ. ಸದ್ಧೇತುಕವಾದ ಅಸತ್ತು ಎಲ್ಲಿಯದು?

(ಭಾಷ್ಯ)

೨೮೪. ನಾಸ್ತಿ ಅಸದ್ಧೇತುಕಮ್ । ಅಸತ್ ಶಶವಿಷಾಣಾದಿ ಹೇತುಃ ಕಾರಣಂ ಯಸ್ಯ ಅಸತ ಏವ ಖಕುಸುಮಾದೇಃ[3] ತತ್ ಅಸದ್ಧೇತುಕಮ್ ಅಸತ್ ನ

---

1. ಹಿಂದೆ ಸದ್ವಸ್ತುವನ್ನು ಕಂಡೇ ಈಗ ಭ್ರಾಂತಿಯಾಗುವದೆಂಬ ನಿಯಮವಿಲ್ಲ.

2. ಎಚ್ಚರದ ಅಸದ್ವಸ್ತುವಿನ ಅನುಭವದ ವಾಸನೆಯಿಂದ ಕನಸಿನಲ್ಲಿಯೂ ಅಸದ್ವಸ್ತುವಿನ ದರ್ಶನವಾಗುವದುಂಟೆಂಬ ಕಾರಣದಿಂದ. ಇದೂ ವ್ಯವಹಾರದೃಷ್ಟಿಯಿಂದ ಹೇಳಿದ್ದು.

3. "ಖಪುಷ್ಪಾದೇಃ" ಪಾ॥

ವಿದ್ಯತೇ । ತಥಾ ಸದಪಿ ಘಟಾದಿವಸ್ತು ಅಸದ್ಧೇತುಕಮ್ ಶಶವಿಷಾಣಾದಿ ಕಾರ್ಯಂ ನಾಸ್ತಿ । ತಥಾ ಸಚ್ಚ ವಿದ್ಯಮಾನಂ ಘಟಾದಿ ವಿದ್ಯಮಾನಂ ಘಟಾದಿವಸ್ತ್ವನ್ತರ ಕಾರ್ಯಂ[1] ನಾಸ್ತಿ । ಸತ್ಕಾರ್ಯಮ್ ಅಸತ್ ಕುತ ಏವ ಸಮ್ಭವತಿ ? ನ ಚ ಅನ್ಯಃ ಕಾರ್ಯಕಾರಣಭಾವಃ ಸಮ್ಭವತಿ ಶಕ್ಯೋ ವಾ ಕಲ್ಪಯಿತುಮ್ । ಅತಃ ವಿವೇಕಿನಾಮ್ ಅಸಿದ್ಧ ಏವ ಕಾರ್ಯಕಾರಣಭಾವಃ ಕಸ್ಯಚಿತ್ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಅಸದ್ಧೇತುಕವಾದದ್ದು ಇರುವದಿಲ್ಲ. ಅಸತ್ತಾದ ಮೊಲದ ಕೋಂಬು ಮುಂತಾದದ್ದು ಯಾವದಕ್ಕೆ ಅಸತ್ತಾದ ಆಕಾಶದ ಹೂವೇ ಮುಂತಾದದ್ದಕ್ಕೆ ಹೇತುವೋ ಕಾರಣವೋ (ಅಂಥ) ಅಸದ್ಧೇತುಕವಾದ ಅಸತ್ತು ಇರುವದಿಲ್ಲ. ಇದರಂತೆ ಸತ್ತಾಗಿರುವ ಘಟಾದಿವಸ್ತುವೂ ಅಸದ್ಧೇತುಕವಾಗಿ ಮೊಲದ ಕೋಂಬು ಮುಂತಾದದ್ದರ ಕಾರ್ಯವಾಗಿ, ಇರುವದಿಲ್ಲ. ಹೀಗೆಯೇ ಗಡಿಗೆಯೇ ಮುಂತಾದ ಇರುವ ಮತ್ತೊಂದು ವಸ್ತುವಿನ ಕಾರ್ಯವಾದ ಸತ್ತೂ, ಇರುವ ಗಡಿಗೆ ಮುಂತಾದದ್ದೂ ಇರುವದಿಲ್ಲ. ಸತ್ತಿನ ಕಾರ್ಯವಾದ ಅಸತ್ತು ಹೇಗೆತಾನೆ ಉಂಟಾದೀತು ?

(ಈ ನಾಲ್ಕನ್ನು ಬಿಟ್ಟರೆ) ಬೇರೆ ರೀತಿಯಿಂದ ಕಾರ್ಯಕಾರಣಭಾವವು ಇರುವ ಹಾಗೆಯೇ ಇಲ್ಲ. ಕಲ್ಪಿಸುವದಕ್ಕೂ ಆಗುವದಿಲ್ಲ[2]. ಆದ್ದರಿಂದ ವಿವೇಕಿಗಳಿಗೆ ಯಾವದಕ್ಕೂ ಕಾರ್ಯಕಾರಣಭಾವವು ಸಿದ್ಧವಾಗಿಲ್ಲ ಎಂದು ಅಭಿಪ್ರಾಯ.

(ಭಾಷ್ಯ)

೩೮. ಪುನರಪಿ ಜಾಗ್ರತ್ಸ್ವಪ್ನಯೋಃ ಅಸತೋರಪಿ ಕಾರ್ಯಕಾರಣಭಾವ ಶಙ್ಕಾಮ್ ಅಪನಯನ್ ಆಹ—

---

1. "ಘಟಾದಿವಿದ್ಯಮಾನ" ಎಂಬ ಮಾತುಗಳು ಮಾ॥ ಕಾ॥ ಗಳಲ್ಲಿ ಬಿಟ್ಟುಹೋಗಿದೆ.

2. ಕಾರ್ಯ, ಕಾರಣ–ಇವೆರಡರಲ್ಲಿ (೧) ಕಾರಣವುಅಸತ್ತು. ಕಾರ್ಯವೂ ಅಸತ್ತು; (೨) ಕಾರಣವು ಅಸತ್ತು, ಕಾರ್ಯವು ಸತ್ತು; (೩) ಕಾರಣವು ಸತ್ತು, ಕಾರ್ಯವೂ ಸತ್ತು; (೪) ಕಾರಣವು ಸತ್ತು, ಕಾರ್ಯವು ಅಸತ್ತು–ಹೀಗೆ ನಾಲ್ಕು ವಿಕಲ್ಪಗಳನ್ನು ಬಿಟ್ಟರೆ ಮತ್ತೆ ಯಾವದನ್ನೂ ಕಲ್ಪಿಸುವದಕ್ಕೆ ಬರುವದಿಲ್ಲ. ಈ ನಾಲ್ಕು ವಿಕಲ್ಪಗಳೂ ಅನುಭವಕ್ಕೆ ಹೊಂದುವದಿಲ್ಲವಾದ್ದರಿಂದ ಕಾರ್ಯಕಾರಣಭಾವವೇ ನಿಜವಾಗಿಲ್ಲ ಎಂದು ಭಾವ.

(ಭಾಷ್ಯಾರ್ಥ)

ಎಚ್ಚರಕನಸುಗಳು ಅಸತ್ತಾದರೂ ಕಾರ್ಯಕಾರಣಭಾವ[1](ವು ಇರಬಹುದಲ್ಲ ! ಎಂಬ) ಶಂಕೆಯನ್ನು ಕಳೆಯುವದಕ್ಕಾಗಿ ಮತ್ತೂ (ಹೀಗೆಂದು) ಹೇಳುತ್ತಿದ್ದಾರೆ :—

**ವಿಪರ್ಯಾಸಾದ್ಯಥಾ ಜಾಗ್ರದಚಿನ್ತ್ಯಾನ್ ಭೂತವತ್ ಸ್ಪೃಶೇತ್ ।**
**ತಥಾ ಸ್ವಪ್ನೇ ವಿಪರ್ಯಾಸಾದ್ಧರ್ಮಾಂಸ್ತತ್ರೈವ ಪಶ್ಯತಿ ॥ ೪೧ ॥**

೪೧. ವಿಪರ್ಯಾಸದಿಂದ ಹೇಗೆ ಎಚ್ಚರದಲ್ಲಿ ಅಚಿಂತ್ಯವಾದವುಗಳನ್ನೇ ಭೂತವಾಗಿದ್ದಂತೆ ಮುಟ್ಟುವನೋ ಹಾಗೆ ಕನಸಿನಲ್ಲಿಯೋ ವಿಪರ್ಯಾಸದಿಂದ ಧರ್ಮಗಳನ್ನು ಅಲ್ಲಿಯೇ ಕಾಣುತ್ತಾನೆ.

(ಭಾಷ್ಯ)

೨೮೬. ವಿಪರ್ಯಾಸಾತ್ ಅವಿವೇಕತಃ ಯಥಾ ಜಾಗ್ರತ್ ಜಾಗರಿತೇ ಅಚಿನ್ತ್ಯಾನ್ ಭಾವಾನ್ ಅಶಕ್ಯಚಿನ್ತನೀಯಾನ್[2] ರಜ್ಜುಸರ್ಪಾದೀನ್ ಭೂತವತ್ ಪರಮಾರ್ಥವತ್ ಸ್ಪೃಶೇತ್[3] ಸ್ಪೃಶನ್ನಿವ ವಿಕಲ್ಪಯೇತ್ ಇತ್ಯರ್ಥಃ । ಕಶ್ಚಿತ್ ಯಥಾ, ತಥಾ ಸ್ವಪ್ನೇ ವಿಪರ್ಯಾಸಾತ್ ಹಸ್ತ್ಯಾದೀನ್ ಧರ್ಮಾನ್[4] ಪಶ್ಯನ್ನಿವ ವಿಕಲ್ಪಯತಿ । ತತ್ರೈವ ಪಶ್ಯತಿ ನ ತು ಜಾಗರಿತಾತ್ ಉತ್ಪದ್ಯಮಾನಾನ್ ಇತ್ಯರ್ಥಃ॥

(ಭಾಷ್ಯಾರ್ಥ)

ವಿಪರ್ಯಾಸದಿಂದ ಅವಿವೇಕದಿಂದ ಹೇಗೆ ಎಚ್ಚರದಲ್ಲಿ ಅಚಿಂತ್ಯಗಳಾದ ವಸ್ತುಗಳನ್ನು (ಇಂಥ ಸ್ವರೂಪವೆಂದು) ನಿರ್ಣಯಿಸುವದಕ್ಕೆ ಶಕ್ಯವಲ್ಲದ ಹಗ್ಗದಹಾವೇ

1. ಆತ್ಮನಿಗೆ ವ್ಯತಿರಿಕ್ತವಾದವುಗಳೆಲ್ಲವೂ ಅಸತ್ತಾಗಿರುವದರಿಂದ ಅಸತ್ತಾಗಿರುವ ಎಚ್ಚರಕನಸುಗಳಿಗೆ ಕಾರ್ಯಕಾರಣವೆಂಬುದು ಹೊಂದುವಂತಿಲ್ಲ-ಎಂಬ ಸಿದ್ಧಾಂತವನ್ನು ಕೇಳಿದವನು ಎರಡು ಅಸತ್ತುಗಳಿಗೂ ಕಾರ್ಯಕಾರಣಭಾವವಿರಬಾರದೇಕೆ ? ಎಂದು ಶಂಕಿಸಿದರೆ ಅದಕ್ಕೆ ಉತ್ತರವನ್ನು ಹೇಳುತ್ತಾರೆಂದು ಭಾವ.

2. "ಅಶಕ್ಯಚಿಂತನಾನ್" ವಾ॥ ವ್ಯೈ॥

3. ಆ॥ ದಲ್ಲಿ ಈ ಮಾತು ಬಿಟ್ಟುಹೋಗಿದೆ.

4. ವಾ॥ ದಲ್ಲಿ ಬಿಟ್ಟುಹೋಗಿದೆ.

5. ವಿಂಗಡಿಸಿ ಅರಿಯದೆ ತಪ್ಪಾಗಿ ತಿಳಿದುಕೊಳ್ಳುವದರಿಂದ ಎಂದರ್ಥ.

6. ಅನಿರ್ವಚನೀಯವೆಂಬ ಮಾತೂ ಇದೇ ಅರ್ಥದ್ದು.

ಮುಂತಾದವುಗಳನ್ನು ಭೂತವಾಗಿದ್ದಂತೆ ನಿಜವಾಗಿರುವ (ವಸ್ತುವಿನಂ)ತೆ ಮುಟ್ಟುವನೋ, ಮುಟ್ಟುವಂತೆ ವಿಕಲ್ಪಿಸುವನೋ ಎಂದರ್ಥ. ಯಾವನಾದರೂ (ಇವನ್ನು ಹೀಗೆ ವಿಕಲ್ಪಿಸುವನೋ) ಹಾಗೆ[1] ಕನಸಿನಲ್ಲಿಯೂ ವಿಪರ್ಯಾಸದಿಂದ ಆನೆಯೇ ಮುಂತಾದ ಧರ್ಮಗಳನ್ನು[2] ನೋಡುವಂತೆ ವಿಕಲ್ಪಿಸುತ್ತಾನೆ. **" ಅಲ್ಲಿಯೇ ನೋಡುತ್ತಾನೆ " ಯೇ ಹೊರತು ಎಚ್ಚರದಿಂದ ಹುಟ್ಟುವ (ಧರ್ಮಗಳನ್ನು) ನೋಡುವದಿಲ್ಲ[3] ಎಂದರ್ಥ.**

## ವೇದಾಂತಿಗಳು ಜನ್ಮವುಂಟೆಂದು ಹೇಳುವದರ ಅಭಿಪ್ರಾಯ

**ಉಪಲಮ್ಭಾತ್ ಸಮಾಚಾರಾದಸ್ತಿ ವಸ್ತುತ್ವವಾದಿನಾಮ್ ।**
**ಜಾತಿಸ್ತು ದೇಶಿತಾ ಬುದ್ಧೈರಜಾತೇಸ್ತ್ರಸತಾಂ ಸದಾ ॥ ೪೨ ॥**

೪೨. ಆದರೆ ಉಪಲಂಭದಿಂದಲೂ ಸಮಾಚಾರದಿಂದಲೂ ವಸ್ತುವಿದೆ ಎನ್ನುತ್ತಿರುವ ಅಜಾತಿಗೆ ಯಾವಾಗಲೂ ಹೆದರುತ್ತಿರುವವರಿಗಾಗಿ ಬುದ್ಧರುಗಳಿಂದ ಜಾತಿಯು ಉಪದಿಷ್ಟವಾಗಿರುವದು.

(ಭಾಷ್ಯ)

೪೨. ಯಾಪಿ ಬುದ್ಧೈಃ ಅದ್ವಯವಾದಿಭಿಃ ಜಾತಿಃ ದೇಶಿತಾ ಉಪದಿಷ್ಟಾ, (ಉಪಲಮ್ಭಾತ್[4]) ಉಪಲಮ್ಭನಮ್ ಉಪಲಮ್ಭಃ । ತಸ್ಮಾತ್ । ಉಪಲಬ್ಧೇಃ ಇತ್ಯರ್ಥಃ । ಸಮಾಚಾರಾತ್ ವರ್ಣಾಶ್ರಮಾದಿಧರ್ಮಸಮಾಚಾರಾತ್[5] ತಾಭ್ಯಾಂ

---

1. ಹಗ್ಗದಹಾವು ಹೊರಗಾಗಲಿ ಮನಸ್ಸಿನಲ್ಲಾಗಲಿ ನಿಜವಾಗಿರುವದಿಲ್ಲ, ಹಾವೆಂಬ ಮಾತು, ತಿಳಿವಳಿಕೆ–ಇವನ್ನು ಬಿಟ್ಟರೆ ಯಾವ ವಸ್ತುವೂ ಇರುವದಿಲ್ಲ. (೨–೩೨ರ ಭಾಷ್ಯವನ್ನು ನೋಡಿ). ಆದ್ದರಿಂದ ಹಾವೆಂಬ ವೃತ್ತಿಯು ಇಲ್ಲಿ ವಿಕಲ್ಪವೇ. ಕನಸಿನ ವಸ್ತುಗಳೂ ಹಾಗೆಯೇ ಎಂದರ್ಥ.

2. ಪದಾರ್ಥಗಳನ್ನು.

3. ಎಚ್ಚರದ ಅನಿರ್ವಚನೀಯವಸ್ತುಗಳಾದ ರಜ್ಜುಸರ್ಪಾದಿಗಳು ಭ್ರಾಂತಿಯಿಂದ ಅಲ್ಲಿ ಕಾಣಿಸುವವೇ ಹೊರತು ನಿಜವಾಗಿ ಹುಟ್ಟಿರುವದಿಲ್ಲ. ಕನಸಿನ ದೃಶ್ಯಗಳೂ ಹಾಗೆಯೇ ಕನಸಿನಲ್ಲಿಯೇ ಕಾಣಿಸುತ್ತವೆ ಎಚ್ಚರದ ವಸ್ತುಗಳಿಂದಾಗಿರುವದಿಲ್ಲ.

4. ಈ ಮಾತು ಅಚ್ಚಿನ ಪುಸ್ತಕದಲ್ಲಿ ಬಿಟ್ಟುಹೋಗಿದೆ.

5. ' ಸಮಾಚರಣಾಚ್ಚ ' ವಾ॥

ಹೇತುಭ್ಯಾಂ ಅಸ್ತಿವಸ್ತುತ್ವವಾದಿನಾಂ ಅಸ್ತಿ ವಸ್ತುಭಾವಃ ಇತ್ಯೇವಂ ವದನಶೀಲಾನಾಮ್ ದೃಢಾಗ್ರಹವತಾಂ ಶ್ರದ್ಧಧಾನಾನಾಂ ಮನ್ದವಿವೇಕಿನಾಮ್ ಅರ್ಥೋಪಾಯತ್ವೇನ ಸಾ ದೇಶಿತಾ ಜಾತಿಃ । ತಾಂ ಗೃಹ್ಣನ್ತು ತಾವತ್ । ವೇದಾಭ್ಯಾಸಿನಾಂ ತು ಸ್ವಯಮೇವ ಅಜಾದ್ವಯಾತ್ಮವಿಷಯೋ ವಿವೇಕಃ ಭವಿಷ್ಯತಿ ಇತಿ । ನ ತು ಪರಮಾರ್ಥಬುದ್ಧ್ಯಾ । ತೇ ಹಿ ಶ್ರೋತ್ರಿಯಾಃ ಸ್ಥೂಲಬುದ್ಧಿತ್ವಾತ್ ಅಜಾತೇಃ ಅಜಾತಿವಸ್ತುನಃ ಸದಾ ತ್ರಸ್ಯನ್ತಿ ಆತ್ಮನಾಶಂ ಮನ್ಯಮಾನಾ ಅವಿವೇಕಿನಃ ಇತ್ಯರ್ಥಃ । "ಉಪಾಯಃ ಸೋಽವತಾರಾಯ" (೩–೧೫) ಇತ್ಯುಕ್ತಮ್ ॥

(ಭಾಷ್ಯಾರ್ಥ)

ಬುದ್ಧರಿಂದ ಅದ್ವೈತವಾದಿ(ಗಳಾದ ಜ್ಞಾನಿ)ಗಳಿಂದಲೂ (ವಸ್ತುಗಳ) ಜನ್ಮವು ಉಪದಿಷ್ಟವಾಗಿದೆಯಷ್ಟೆ, (ಆ ಹುಟ್ಟು) ಉಪಲಂಭದಿಂದ–ಉಪಲಂಭವೆಂದರೆ ಉಪಲಂಭನವು, ಅದರಿಂದ–ಅರಿಯುವದರಿಂದ ಎಂದರ್ಥ. ಸಮಾಚಾರದಿಂದ, ವರ್ಣಾಶ್ರಮಧರ್ಮಗಳನ್ನು ಆಚರಿಸುವದರಿಂದ. ಈ (ಎರಡು) ಹೇತುಗಳಿಂದ ವಸ್ತು ಇದೆ ಎನ್ನುತ್ತಿರುವ[1], ವಸ್ತುವಿನ ಇರವು (ನಿಜವಾಗಿ) ಇದೆ ಎಂದು ವಾದಮಾಡುತ್ತಿರುವ ಸ್ವಭಾವವುಳ್ಳ, ಬಲವಾಗಿ ಪಟ್ಟುಹಿಡಿದು ಶ್ರದ್ಧೆಯಿಟ್ಟಿರುವ ಕಡಿಮೆಯ ವಿವೇಕವುಳ್ಳವರಿಗಾಗಿ (ಪರ)ಮಾರ್ಥವನ್ನು (ತಿಳಿಯುವದಕ್ಕೆ) ಸಾಧನವಾಗಿ ಉಪದಿಷ್ಟವಾಗಿರುತ್ತದೆ. **ಇದನ್ನು ಮೊದಲು ಇಟ್ಟುಕೊಳ್ಳಲಿ, ಆದರೆ ವೇದಾಂತವನ್ನು ಮತ್ತೆಮತ್ತೆ ವಿಚಾರಮಾಡಿದಮೇಲೆ ಹುಟ್ಟಿಲ್ಲದವನೂ, ತನಗೆರಡನೆಯದಿಲ್ಲದವನೂ ಆದ ಆತ್ಮನ ವಿಷಯವಾದ ವಿವೇಕವು ತಾನೇ ಉಂಟಾಗುವದು ಎಂದುಕೊಂಡು (ಅದನ್ನು ಹೇಳಿದೆಯೇ ಹೊರತು ಅದು) ಪರಮಾರ್ಥವೆಂಬ ಅಭಿಪ್ರಾಯದಿಂದ (ಹೇಳಿ)ದ್ದಲ್ಲ[2].** ಏಕೆಂದರೆ ಆ ಶ್ರೋತ್ರಿಯರು[3] ಸ್ಥೂಲಬುದ್ಧಿಯುಳ್ಳವರಾದ್ದರಿಂದ ಹುಟ್ಟಿಲ್ಲದ್ದಕ್ಕೆ ಹುಟ್ಟಿಲ್ಲದ ವಸ್ತುವಿಗೆ (ಇವರಿಂದ)

---

1. ನೀರೆಂಬ ವಸ್ತು ಕಣ್ಣಿಗೆ ಗೋಚರವಾಗುತ್ತದೆ, ಶಾಸ್ತ್ರೋಕ್ತವಾದ ಆಚಮನಕ್ಕೂ ಉಪಯುಕ್ತವಾಗಿದೆ. ಹೀಗೆ ಇಂದ್ರಿಯಗೋಚರವಾದದ್ದು ಇದೆ ಎಂದೆಣಿಸುವದೇ ಯುಕ್ತ. ಶಾಸ್ತ್ರದಲ್ಲಿ ಕರ್ಮಕ್ಕೆ ಅಂಗವಾಗಿ ಹೇಳಿರುವ ವಸ್ತು ಇಲ್ಲವೆಂಬುದು ಯುಕ್ತವಲ್ಲ–ಎಂದು ಅವರ ಭಾವ.

2. ಬ್ರಹ್ಮವು ಜಗತ್ಕಾರಣವೆಂದು ಮೊದಲು ಹೇಳಿದ್ದರೂ ಶ್ರುತಿಯು ಮುಂದೆ ಬ್ರಹ್ಮದಲ್ಲಿ ಕಾರಣತ್ವವಿಲ್ಲವೆಂದೂ ಹೇಳುವದರಿಂದ ಅಜಾತಿವಾದವೇ ಅವರಿಗೆ ಕೊನೆಗೆ ನಿಶ್ಚಯವಾಗುತ್ತದೆ–ಎಂದು ಅರ್ಥ. ಹೀಗೆ ಕಾರಣತ್ವವನ್ನು ಇಟ್ಟುಕೊಂಡು ಉಪದೇಶಿಸುವದು ಅಧ್ಯಾರೋಪಾಪವಾದಪ್ರಕ್ರಿಯೆಯಿಂದ.

3. ವೈದಿಕಕರ್ಮದಲ್ಲಿ ಶ್ರದ್ಧೆಯಿರುವ ಆಸ್ತಿಕರು.

ತಮ್ಮ ನಾಶವೇ ಆಗುವದೆಂದೆಣಿಸಿ, ಅವಿವೇಕಿಗಳಾದ್ದರಿಂದ ಯಾವಾಗಲೂ ಅಂಜಿಕೊಳ್ಳುತ್ತಿರುವರು[1] ಎಂದರ್ಥ. "ಅದು (ಐಕ್ಯವನ್ನು) ತಿಳಿಸುವದಕ್ಕೆ ಉಪಾಯವೇ" (೩–೧೫) ಎಂದು (ಹಿಂದೆಯೇ) ಹೇಳಿರುತ್ತದೆ(ಯಷ್ಟೆ).

**ಅಜಾತೇಸ್ತ್ರಸತಾಂ ತೇಷಾಮುಪಲಮ್ಭಾದ್ವಿಯನ್ತಿ ಯೇ ।**
**ಜಾತಿದೋಷಾ ನ ಸೇತ್ಸ್ಯನ್ತಿ ದೋಷೋಽಪ್ಯಲ್ಪೋ ಭವಿಷ್ಯತಿ ॥೪೩॥**

೪೩. (ಯಾರು) ಉಪಲಂಭದ (ಕಾರಣ)ದಿಂದ ಅಜಾತಿಗೆ ಹೆದರಿ ತಪ್ಪಿಹೋಗುತ್ತಿರುವರೋ ಅವರಿಗೆ ಜಾತಿಯ ದೋಷಗಳು ಸಿದ್ಧಿಸುವದಿಲ್ಲ. ದೋಷವೂ ಸ್ವಲ್ಪವಾಗಿ ಆಗುವದು.

(ಭಾಷ್ಯ)

೨೮. ಯೇ ಚ–ಏವಮ್ ಉಪಲಮ್ಭಾತ್ ಸಮಾಚಾರಾಚ್ಚ ಅಜಾತೇಃ ಅಜಾತಿವಸ್ತುನಃ ತ್ರಸನ್ತಃ ಅಸ್ತಿ ವಸ್ತ್ವಿತಿ ಅದ್ವಯಾತ್ ಆತ್ಮನಃ ವಿಯನ್ತಿ ವಿರುದ್ಧಂ ಯನ್ತಿ ದ್ವೈತಂ ಪ್ರತಿಪದ್ಯನ್ತೇ ಇತ್ಯರ್ಥಃ । ತೇಷಾಮ್ ಅಜಾತೇಃ ತ್ರಸತಾಂ ಶ್ರದ್ಧಧಾನಾನಾಂ ಸನ್ಮಾರ್ಗಾವಲಮ್ಬಿನಾಂ ಜಾತಿದೋಷಾಃ ಜಾತ್ಯುಪಲಮ್ಭಕೃತಾ ದೋಷಾಃ ನ ಸೇತ್ಸ್ಯನ್ತಿ ಸಿದ್ಧಿಂ ನ ಉಪಯಾಸ್ಯನ್ತಿ । ವಿವೇಕಮಾರ್ಗಪ್ರವೃತ್ತತ್ವಾತ್ । ಯದ್ಯಪಿ ಕಶ್ಚಿತ್ ದೋಷಃ ಸ್ಯಾತ್, ಸೋಽಪಿ ಅಲ್ಪ ಏವ ಭವಿಷ್ಯತಿ ಸಮ್ಯಗ್ದರ್ಶನಾ ಪ್ರತಿಪತ್ತಿಹೇತುಕಃ ಇತ್ಯರ್ಥಃ ॥

(ಭಾಷ್ಯಾರ್ಥ)

ಹೀಗೆ ಯಾರು (ವಸ್ತುವನ್ನು) ಕಾಣುವದರಿಂದಲೂ, (ವರ್ಣಾಶ್ರಮಧರ್ಮಗಳನ್ನು) ಆಚರಿಸುವದರಿಂದಲೂ ಅಜಾತಿಗೆ ಹುಟ್ಟಿಲ್ಲದ ವಸ್ತುವಿಗೆ ಅಂಜಿಕೊಂಡು (ದ್ವೈತ)ವಸ್ತು ಇದೆ ಎಂದು ಎರಡನೆಯದಿಲ್ಲದ ಆತ್ಮನಿಂದ ತಪ್ಪಿಹೋಗುತ್ತಿರುವರೋ (ಅದಕ್ಕೆ)ವಿರುದ್ಧವಾಗಿ ಹೋಗುತ್ತಿರುವರೋ, ದ್ವೈತವನ್ನು (ನಿಜವೆಂದು) ತಿಳಿಯುತ್ತಿರುವರೋ ಎಂದರ್ಥ. ಹುಟ್ಟಿಲ್ಲದ್ದಕ್ಕೆ ಹೆದರುವ ಶ್ರದ್ಧೆಯುಳ್ಳ ಸನ್ಮಾರ್ಗವನ್ನವಲಂಬಿಸಿರುವ[2] ಅಂಥವರಿಗೆ ಜಾತಿದೋಷಗಳು, ಹುಟ್ಟನ್ನು (ನಿಜವೆಂದು) ಅರಿ

1. ಯಾವದೂ ಹುಟ್ಟಿಲ್ಲವಾದರೆ ಕರ್ಮಗಳಿಗೆ ಫಲವೇ ಇಲ್ಲವೆಂದಾಗುವದಲ್ಲ, ನಮ್ಮ ಗತಿಯೇನು ?-ಎಂದು ಅಂಜುವರು.

2. ಪ್ರಧಾನ, ಪರಮಾಣು-ಮುಂತಾದವನ್ನು ಜಗತ್ಕಾರಣವೆಂದು ನಂಬಿರುವವರು ಕಾರ್ಯಕಾರಣಭಾವವು ಪರಮಾರ್ಥವೆಂದೇ ನಂಬುವದರಿಂದ ಅವರದು ತಪ್ಪುಹಾದಿ. ಬ್ರಹ್ಮಕಾರಣವಾದಿಗಳು ಕಾರ್ಯಕಾರಣಭಾವವನ್ನು ಮೀರಿದ ಬ್ರಹ್ಮವನ್ನು ಕೊನೆಗಾದರೂ ಸೇರುವದರಿಂದ ಅವರದು ಸರಿಯಾದ ಹಾದಿ.

ಯುವದರಿಂದಾದ ದೋಷಗಳು ಸಿದ್ಧಿಸುವದಿಲ್ಲ, ಸಿದ್ಧಿಯನ್ನು ಹೊಂದುವದಿಲ್ಲ; ಏಕೆಂದರೆ (ಅವರು) ವಿವೇಕದ ಮಾರ್ಗದಲ್ಲಿ ಹೊರಟಿರುತ್ತಾರೆ. ಒಂದಿಷ್ಟು ದೋಷ ವೇನೋ ಆಗುವದಾದರೂ ಸರಿಯಾದ ಜ್ಞಾನವನ್ನು ಪಡೆದುಕೊಳ್ಳದಿರುವ ಕಾರಣ ದಿಂದ (ಆಗುವ) ಆ (ದೋಷವೂ) ಸ್ವಲ್ಪವೇ ಆಗುವದು ಎಂದರ್ಥ.

## ವ್ಯವಹಾರಗೋಚರವಾದಮಾತ್ರಕ್ಕೆ ದ್ವೈತವು ಸತ್ಯವಾಗಲಾರದು

(ಭಾಷ್ಯ)

೩೯. ನನು ಉಪಲಮ್ಭಸಮಾಚಾರಯೋಃ ಪ್ರಮಾಣತ್ವಾತ್ ಅಸ್ತ್ಯೇವ ದ್ವೈತಂ ವಸ್ತು ಇತಿ । ನ । ಉಪಲಮ್ಭಸಮಾಚಾರಯೋಃ ವ್ಯಭಿಚಾರಾತ್ । ಕಥಂ ವ್ಯಭಿಚಾರ ಇತಿ ? ಉಚ್ಯತೇ–

(ಭಾಷ್ಯಾರ್ಥ)

(ಆಕ್ಷೇಪ) :— (ವಸ್ತುವನ್ನು) ಕಾಣುವದು, (ಅದನ್ನು) ಕಾರ್ಯಕ್ಕೆ ಉಪ ಯೋಗಿಸಿಕೊಳ್ಳುವದು–ಇವು ಪ್ರಮಾಣವಾಗಿರುವದರಿಂದ ದ್ವೈತವಸ್ತು ಇದ್ದೇ ಇದೆ (ಎನ್ನಬೇ)ಕಲ್ಲವೆ ?

(ಪರಿಹಾರ) : —ಹಾಗಲ್ಲ. ಏಕೆಂದರೆ ಕಾಣುವದು, ಕೆಲಸಕ್ಕೆ ಉಪಯೋಗಿಸು ವದು–ಇವು ಬೇರೆಕಡೆಯಲ್ಲಿಯೂ ಇರುತ್ತವೆ[1]. (ಅವು) ಬೇರೆಕಡೆಯಲ್ಲಿರುವವೆಂಬುದು ಹೇಗೆ ? ಎಂದರೆ ಹೇಳುತ್ತೇನೆ—

**ಉಪಲಮ್ಭಾತ್ ಸಮಾಚಾರಾನ್ಮಾಯಾಹಸ್ತೀ ಯಥೋಚ್ಯತೇ ।**
**ಉಪಲಮ್ಭಾತ್ ಸಮಾಚಾರಾದಸ್ತಿ ವಸ್ತು ತಥೋಚ್ಯತೇ ॥ ೪೪ ॥**

೪೪. ಉಪಲಂಭದಿಂದಲೂ, ಸಮಾಚಾರದಿಂದಲೂ, ಮಾಯೆಯ ಆನೆಯನ್ನು ಹೇಗೆ (ಆನೆ)ಯೆನ್ನುವರೋ, ಹಾಗೆಯೇ ಉಪಲಂಭದಿಂದಲೂ ಸಮಾಚಾರದಿಂದಲೂ ವಸ್ತುವಿದೆ ಎನ್ನುವರು.

---

1. ಅಸದ್ವಸ್ತುಗಳಲ್ಲಿಯೂ ಇವೆ.

(ಭಾಷ್ಯ)

೨೯೦. ಉಪಲಭ್ಯತೇ ಹಿ ಮಾಯಾಹಸ್ತೀ ಹಸ್ತೀವ । ಹಸ್ತಿನಮಿವ ಅತ್ರ ಸಮಾಚರನ್ತಿ ಬನ್ಧನಾರೋಹಣಾದಿ ಹಸ್ತಿಸಮ್ಬನ್ಧಿಭಿಃ ಧರ್ಮೈಃ । ಹಸ್ತೀ ಇತಿ ಚ ಉಚ್ಯತೇ ಅಸನ್ನಪಿ ಯಥಾ ತಥೈವ ಉಪಲಮ್ಭಾತ್ ಸಮಾಚಾರಾತ್ ದ್ವೈತಂ ಬಂಧರೂಪಮ್ ಅಸ್ತಿ ವಸ್ತು ಇತ್ಯುಚ್ಯತೇ । ತಸ್ಮಾತ್ ನ ಉಪಲಮ್ಭಸಮಾಚಾರೌ ದ್ವೈತವಸ್ತುಸದ್ಭಾವೇ ಹೇತೂ ಭವತಃ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಮಾಯೆಯ ಆನೆಯು ಆನೆಯಂತೆ ಕಾಣುತ್ತದೆಯಲ್ಲವೆ? (ಗೂಟಕ್ಕೆ) ಕಟ್ಟೋಣ, ಹತ್ತಿಕೊಳ್ಳೋಣ–ಮುಂತಾದ ಆನೆಗೆ ಸಂಬಂಧಪಟ್ಟ ಧರ್ಮಗಳಿಂದ (ಕೂಡಿರುವಂತೆ) ಅದರ (ವಿಷಯ)ದಲ್ಲಿ ಆನೆಯಂತೆಯೇ ವ್ಯವಹರಿಸುತ್ತಾರೆ. (ನಿಜ ವಾಗಿ) ಇರುವದಲ್ಲವಾದರೂ ಆನೆ ಎಂದೂ ಅದು ಕರೆಯಿಸಿಕೊಳ್ಳುತ್ತದೆ. (ಇದು) ಹೇಗೋ ಹಾಗೆಯೇ. ಉಪಲಂಭದಿಂದಲೂ ಸಮಾಚಾರದಿಂದಲೂ ಭೇದರೂಪವಾದ ದ್ವೈತವಸ್ತುವು ಇದೆ ಎನ್ನುವರು. ಆದ್ದರಿಂದ ಉಪಲಂಭಸಮಾಚಾರಗಳು ದ್ವೈತ ವಸ್ತು (ನಿಜವಾಗಿ) ಇದೆ ಎಂಬುದಕ್ಕೆ ಹೇತುಗಳಾಗುವದಿಲ್ಲ ಎಂದು ಅಭಿಪ್ರಾಯ.

(ಭಾಷ್ಯ)

೨೯೧. ಕಿಂ ಪುನಃ ಪರಮಾರ್ಥಸತ್ ವಸ್ತು ಯದಾಸ್ಪದಾ ಜಾತ್ಯಾದ್ಯಸ ದ್ಬುದ್ಧಯಃ ಇತಿ ? ಆಹ.

(ಭಾಷ್ಯಾರ್ಥ)

ಯಾವವಸ್ತುವನ್ನು ಆಶ್ರಯಿಸಿ ಹುಟ್ಟು ಮುಂತಾದ ತಪ್ಪುತಿಳಿವಳಿಕೆಗಳು ಉಂಟಾಗು ತ್ತಿರುವವೋ, ಆ ಪರಮಾರ್ಥವಾಗಿ ನಿಜವಾಗಿರುವ ವಸ್ತು ಯಾವದು[1] ? ಎಂದರೆ ಹೇಳುತ್ತಾರೆ :—

**ಜಾತ್ಯಾಭಾಸಂ ಚಲಾಭಾಸಂ ವಸ್ತ್ವಾಭಾಸಂ ತಥೈವ ಚ ।**
**ಅಜಾಚಲಮವಸ್ತುತ್ವಂ ವಿಜ್ಞಾನಂ ಶಾನ್ತಮದ್ವಯಮ್ ॥ ೪೫ ॥**

೪೫. ಜಾತ್ಯಾಭಾಸ, ಚಲಾಭಾಸ, ಹಾಗೂ ವಸ್ತ್ವಾಭಾಸವು, (ಆದರೂ) ವಿಜ್ಞಾನವು ಅಜವು, ಅಚಲವು, ಅವಸ್ತು, ಶಾಂತವು, ಅದ್ವಯವು.

---

1. ಹುಟ್ಟುವದು ಮುಂತಾದದ್ದು ತೋರಿಕೆಯಾದರೆ ಯಾವದರ ತೋರಿಕೆ? ಎಂದು ಪ್ರಶ್ನೆ. ಈ ಅಧಿಷ್ಠಾನದ ವಿಷಯದಲ್ಲಿಯೇ ವೇದಾಂತಕ್ಕೂ ವಿಜ್ಞಾನವಾದಕ್ಕೂ ಮತಭೇದ ವಿರುವದು. ಪೀಠಿಕೆಯನ್ನು ನೋಡಿ.

(ಭಾಷ್ಯ)

೨೯೨. ಅಜಾತಿ ಸತ್ ಜಾತಿವತ್ ಅವಭಾಸತೇ ಇತಿ ಜಾತ್ಯಾಭಾಸಮ್, ತದ್ಯಥಾ ದೇವದತ್ತೋ ಜಾಯತೇ ಇತಿ । ಚಲಾಭಾಸಮ್, ಚಲಮಿವ ಆಭಾಸತೇ ಇತಿ । ಯಥಾ ಸ ಏವ ದೇವದತ್ತಃ ಗಚ್ಛತಿ ಇತಿ । ವಸ್ತ್ವಾಭಾಸಮ್ । ವಸ್ತು ದ್ರವ್ಯಂ ಧರ್ಮಿ । ತದ್ವತ್ ಅವಭಾಸತೇ ಇತಿ ವಸ್ತ್ವಾಭಾಸಮ್ । ಯಥಾ ಸ ಏವ ದೇವದತ್ತಃ ಗೌರಃ ದೀರ್ಘಃ ಇತಿ । ಜಾಯತೇ ದೇವದತ್ತಃ ಸ್ಪಂದತೇ ದೀರ್ಘಃ ಗೌರಃ ಇತ್ಯೇವಮ್ ಅವಭಾಸತೇ । ಪರಮಾರ್ಥತಸ್ತು ಅಜಮ್ ಅಚಲಮ್ ಅವಸ್ತುತ್ವಮ್ ಅದ್ರವ್ಯಂ ಚ । ಕಿಂ ತತ್ ಏವಂಪ್ರಕಾರಮ್ ? ವಿಜ್ಞಾನಂ ವಿಜ್ಞಪ್ತಿಃ ಜಾತ್ಯಾದಿರಹಿತತ್ವಾತ್ ಶಾಂತಮ್ ಅತ ಏವ ಅದ್ವಯಂ ಚ ತತ್ ಇತ್ಯರ್ಥಃ ॥

(ಭಾಷ್ಯಾರ್ಥ)

ಹುಟ್ಟಿಲ್ಲದ್ದಾಗಿದ್ದು ಹುಟ್ಟುವಂತೆ ತೋರುವದಾದ್ದರಿಂದ (ಅದು) **ಜಾತ್ಯಾಭಾಸವು.** ಅದು ಹೇಗೆಂದರೆ ದೇವದತ್ತನು ಹುಟ್ಟುತ್ತಾನೆ ಎಂದು (ತೋರುವದು ಜಾತ್ಯಾಭಾಸವು). (ತಾನು ಚಲಿಸಲ್ಲದಿದ್ದರೂ) ಚಲವಾಗಿರುವಂತೆ ತೋರುವದು ಚಲಾಭಾಸವು. ಹೇಗೆಂದರೆ ಅದೇ ದೇವದತ್ತನು ಹೋಗುತ್ತಿದ್ದಾನೆ ಎಂದು (ತೋರುತ್ತಿರುವದು ಚಲಾಭಾಸವು). ವಸ್ತ್ವಾಭಾಸವು ವಸ್ತುವೆಂದರೆ ಧರ್ಮಗಳುಳ್ಳ ದ್ರವ್ಯವು, (ದ್ರವ್ಯವಲ್ಲದೆ ಇದ್ದರೂ) ಅದರಂತೆ ಕಾಣುವದರಿಂದ ವಸ್ತ್ವಾಭಾಸವು. ಹೇಗೆಂದರೆ ಅದೇ ದೇವದತ್ತನು ಬೆಳ್ಳಗಿದ್ದಾನೆ, ಉದ್ದಕ್ಕಿದ್ದಾನೆ ಎಂದು (ತೋರುವದು ವಸ್ತ್ವಾಭಾಸವು). (ಅಂತು) ದೇವದತ್ತನು ಹುಟ್ಟುತ್ತಾನೆ, ಓಡಾಡುತ್ತಾನೆ, ಉದ್ದಕ್ಕಿದ್ದಾನೆ, ಬೆಳ್ಳಗಿದ್ದಾನೆ-ಎಂದು, ಹೀಗೆ ತೋರುತ್ತಿರುವದು. ಆದರೆ ನಿಜವಾಗಿಯೋ ಎಂದರೆ (ಅದು) ಹುಟ್ಟುವದಲ್ಲ, ಅಲುಗಾಡುವದಲ್ಲ, ವಸ್ತುವಲ್ಲ (ಎಂದರೆ) ದ್ರವ್ಯವೂ ಅಲ್ಲ[1]. ಈ ಪ್ರಕಾರವಾಗಿರುವದು ಯಾವುದು ? ಎಂದರೆ **ವಿಜ್ಞಾನವು** ಅರಿವು[2]; ಹುಟ್ಟುವದೇ ಮುಂತಾದದ್ದಿಲ್ಲವಾದ್ದರಿಂದ ಶಾಂತವು, ಆದ್ದರಿಂದಲೇ ಅದು ಅದ್ವಯವೂ[3] ಆಗಿರುವದು ಎಂದರ್ಥ.

1. ದ್ರವ್ಯವು ಗುಣಗಳಿಗೆ ಆಧಾರವಾಗಿರುವದು. ಕ್ರಿಯೆಗಳುಳ್ಳದ್ದು ಹುಟ್ಟಿ ನಾಶವಾಗುವದು-ಎಂದು ತಾರ್ಕಿಕರು ಹೇಳುವದೆಲ್ಲ ಭ್ರಾಂತಿಜ್ಞಾನದ ಫಲವು. ನಿಜವಾಗಿ ನೋಡಿದರೆ ಪರಮಾರ್ಥತತ್ತ್ವವನ್ನೇ ಭ್ರಾಂತಿಯಿಂದ ಅವರು ದ್ರವ್ಯಾದಿಗಳೆಂದು ವಿಕಲ್ಪಿಸುತ್ತಿರುವರು ಎಂದು ನೋಡ ಗೀ. ಭಾ. ೧೮-೪೮, ಛಾ. ಭಾ. ೫೪೯; ಸೂ. ಭಾ. ೨-೨-೧೭.

2. ಅರಿಯುವಿಕೆ ಎಂಬ ಕ್ರಿಯೆಯಲ್ಲ. ಅರಿವಿನ ಸ್ವರೂಪವೇ. ಇದನ್ನೇ ಚೈತನ್ಯವೆಂದು ವೇದಾಂತಿಗಳು ಕರೆಯುತ್ತಿರುವರು.

3. ' ಶಾಂತಂ ಶಿವಮದ್ವೈತಮ್ ' ಎಂಬ ಶ್ರುತಿಯ ಸೂಚನೆ.

**ಏವಂ ನ ಜಾಯತೇ ಚಿತ್ತಮೇವಂ ಧರ್ಮಾ ಅಜಾಃ ಸ್ಮೃತಾಃ ।**
**ಏವಮೇವ ವಿಜಾನನ್ತೋ ನ ಪತನ್ತಿ ವಿಪರ್ಯಯೇ ॥ ೪೬ ॥**

೪೬. ಹೀಗೆ ಚಿತ್ತವು ಹುಟ್ಟುವದಿಲ್ಲ. ಹೀಗೆ ಧರ್ಮರು ಅಜರು, ಎನಿಸುವರು. ಹೀಗೆಯೇ ತಿಳಿವವರು ವಿಪರ್ಯಯದಲ್ಲಿ ಬೀಳುವದಿಲ್ಲ.

(ಭಾಷ್ಯ)

೪೬. ಏವಂ ಯಥೋಕ್ತೇಭ್ಯಃ ಹೇತುಭ್ಯಃ ನ ಜಾಯತೇ ಚಿತ್ತಮ್ । ಏವಂ ಧರ್ಮಾಃ ಆತ್ಮಾನಃ ಅಜಾಃ ಸ್ಮೃತಾಃ ಬ್ರಹ್ಮವಿದ್ಭಿಃ । ಧರ್ಮಾಃ ಇತಿ ಬಹುವಚನಂ ದೇಹಭೇದಾನುವಿಧಾಯಿತ್ವಾತ್ ಅದ್ವಯಸ್ಯೈವ ಉಪಚಾರತಃ । ಏವಮೇವ ಯಥೋಕ್ತಂ ವಿಜ್ಞಾನಂ ಜಾತ್ಯಾದಿರಹಿತಮ್ ಅದ್ವಯಮ್ ಆತ್ಮತತ್ತ್ವಮ್ ವಿಜಾನನ್ತಃ ತ್ಯಕ್ತಬಾಹ್ಯೈಷಣಾಃ ಪುನಃ ನ ಪತನ್ತಿ ಅವಿದ್ಯಾಧ್ವಾನ್ತಸಾಗರೇ ವಿಪರ್ಯಯೇ । "ತತ್ರ ಕೋ ಮೋಹಃ ಕಃ ಶೋಕ ಏಕತ್ವಮನುಪಶ್ಯತಃ" (ಈ. ೭) ಇತ್ಯಾದಿ ಮನ್ತ್ರವರ್ಣಾತ್ ॥

(ಭಾಷ್ಯಾರ್ಥ)

ಹೀಗೆ ಹೇಳಿದ ಹೇತುಗಳಿಂದ[1] ಚಿತ್ತವು ಹುಟ್ಟುವದಿಲ್ಲ. ಹೀಗೆ ಧರ್ಮರು ಆತ್ಮರುಗಳು ಹುಟ್ಟುವವರಲ್ಲವೆಂದು ಬ್ರಹ್ಮಜ್ಞಾನಿಗಳು ಹೇಳುತ್ತಾರೆ. 'ಧರ್ಮರು' ಎಂದು ಬಹುವಚನವನ್ನು, ಬೇರೆಬೇರೆಯ ದೇಹಗಳನ್ನನುಸರಿಸುವದರಿಂದ ಅದ್ವಿತೀಯಾತ್ಮನನ್ನು (ತಿಳಿಸುವದಕ್ಕೇ) ಉಪಚಾರದಿಂದ[2] ಪ್ರಯೋಗಿಸಿರುತ್ತದೆ. ಹೀಗೆಯೇ ಮೇಲೆ ಹೇಳಿದ ವಿಜ್ಞಾನವನ್ನು ಜಾತ್ಯಾದಿಗಳಿಲ್ಲದ ಅದ್ವಿತೀಯವಾದ ಆತ್ಮತತ್ತ್ವವನ್ನು ಅರಿತುಕೊಂಡು ಹೊರಗಿನ ಏಷಣೆಗಳನ್ನು[3] ಬಿಟ್ಟವರು ಮತ್ತೆ ವಿಪರ್ಯಯದಲ್ಲಿ ಅಜ್ಞಾನದ ಕತ್ತಲೆಯ ಸಾಗರದಲ್ಲಿ ಬೀಳುವದಿಲ್ಲ[4]. "ಏಕತ್ವವನ್ನು ಕಂಡುಕೊಂಡವನಿಗೆ ಅಲ್ಲಿ ಎಂಥ ಮೋಹವು, ಎಂಥ ಶೋಕವು?" (ಈ. ೭) ಎಂದು ಮುಂತಾಗಿರುವ ಮಂತ್ರವರ್ಣವು ಇದಕ್ಕೆ ಪ್ರಮಾಣವು.

---

1. ಕಾರ್ಯಕಾರಣಭಾವವನ್ನು ಹೊಂದಿಸಿ ಹೇಳುವದಾಗುವದಿಲ್ಲ ಮುಂತಾದ ಕಾರಣಗಳಿಂದ.

2. ಒಂದೊಂದು ದೇಹಕ್ಕೆ ಒಬ್ಬೊಬ್ಬ ಆತ್ಮನೆಂದು ತೋರುವದನ್ನನುಸರಿಸಿ ಧರ್ಮರು ಎಂದು ಬಹುವಚನವನ್ನು ಪ್ರಯೋಗಿಸಿದೆಯೇ ಹೊರತು ನಿಜವಾಗಿ ಆತ್ಮರು ಅನೇಕರೆಂದು ತಿಳಿಸುವದಕ್ಕಲ್ಲ

3. ಪುತ್ರಪಿತೃಲೋಕಗಳ ಬಯಕೆಗಳನ್ನು,

4. ಆತ್ಮಜ್ಞಾನಿಗೆ ದ್ವೈತಮಿಥ್ಯಾತ್ವವು ನಿಶ್ಚಯವಾಗಿಬಿಡುವದರಿಂದ ಮತ್ತೆ ಅದು ಸತ್ಯವೆಂಬ ಅಜ್ಞಾನವುಂಟಾಗಲಾರದು ಎಂದು ಭಾವ. ಆಚಾರ್ಯರು ಅವಿದ್ಯಾಲೇಶವಾದವನ್ನು, ಜ್ಞಾನಿಗೂ ಒಂದಿಷ್ಟು ಅವಿದ್ಯೆಯುಂಟೆಂಬುದನ್ನು, ಒಪ್ಪುವದಿಲ್ಲ.

## ಅಜಾತವಸ್ತುವಿಗೆ ದೃಷ್ಟಾಂತ

(ಭಾಷ್ಯ)

೩೯೪. ಯಥೋಕ್ತಂ ಪರಮಾರ್ಥದರ್ಶನಂ ಪ್ರಪಞ್ಚಯಿಷ್ಯನ್ ಆಹ—

(ಭಾಷ್ಯಾರ್ಥ)

ಮೇಲೆ ಹೇಳಿರುವ ಪರಮಾರ್ಥದರ್ಶನವನ್ನು ವಿಸ್ತರಿಸಬೇಕೆಂದು (ಈಗ ದೃಷ್ಟಾಂತವನ್ನು) ಹೇಳುತ್ತಾರೆ.

**ಋಜುವಕ್ರಾದಿಕಾಭಾಸಮಲಾತಸ್ಪನ್ದಿತಂ ಯಥಾ ।**
**ಗ್ರಹಣಗ್ರಾಹಕಾಭಾಸಂ ವಿಜ್ಞಾನಸ್ಪನ್ದಿತಂ ತಥಾ ॥ ೪೭ ॥**

೪೭. ಹೇಗೆ ನೆಟ್ಟಗಿರುವದು, ಸೊಟ್ಟಗಿರುವದು—ಮುಂತಾಗಿ ತೋರಿಕೊಳ್ಳುವದು ಅಲಾತಸ್ಪಂದಿತವೋ, ಹಾಗೆ ಅರಿಯುವಿಕೆ, ಅರಿಯುವವನು—ಎಂಬ (ರೂಪದಲ್ಲಿ) ತೋರಿಕೊಳ್ಳುವದು ವಿಜ್ಞಾನಸ್ಪಂದಿತವು.

(ಭಾಷ್ಯ)

೩೯೫. ಯಥಾ ಹಿ ಲೋಕೇ ಋಜುವಕ್ರಾದಿಪ್ರಕಾರಾಭಾಸಮ್ ಅಲಾತಸ್ಪನ್ದಿತಮ್ ಉಲ್ಕಾಚಲನಮ್, ತಥಾ ಗ್ರಹಣಗ್ರಾಹಕಾಭಾಸಂ ವಿಷಯಿವಿಷಯಾಭಾಸಮ್ ಇತ್ಯರ್ಥಃ। ಕಿಂ ತತ್? ವಿಜ್ಞಾನಸ್ಪನ್ದಿತಮ್, ಸ್ಪನ್ದಿತಮಿವ ಸ್ಪನ್ದಿತಮ್ ಅವಿದ್ಯಯಾ। ನ ಹಿ ಅಚಲಸ್ಯ ವಿಜ್ಞಾನಸ್ಯ ಸ್ಪನ್ದನಮ್ ಅಸ್ತಿ। "ಅಜಾಚಲಮ್" (೪-೪೫) ಇತಿ ಹಿ ಉಕ್ತಮ್ ॥

(ಭಾಷ್ಯಾರ್ಥ)

ಹೇಗೆ ಲೋಕದಲ್ಲಿ ನೆಟ್ಟಗಿರುವದು, ಸೊಟ್ಟಗಿರುವದು-ಮುಂತಾದ ಪ್ರಕಾರಗಳಿಂದ ತೋರುವದು ಅಲಾತಸ್ಪಂದಿತವೇ, ಕೊಳ್ಳಿಯ ತಿರುಗಾಟವೇ (ಆಗಿರುವದೋ), ಹಾಗೆ ಅರಿಯುವಿಕೆ, ಅರಿಯುವವನು—ಎಂಬ ರೂಪದಲ್ಲಿ ತೋರಿಕೊಳ್ಳುವದು ವಿಷಯಿವಿಷಯಗಳ (ರೂಪದಲ್ಲಿ) ತೋರಿಕೊಳ್ಳುವದು ಎಂದರ್ಥ. ಅದು ಯಾವದು? ಎಂದರೆ ವಿಜ್ಞಾನಸ್ಪಂದಿತವು. ಅವಿದ್ಯೆಯಿಂದ ಅಲುಗಾಡುವಂತೆ ತೋರುವದನ್ನೇ ಇಲ್ಲಿ ಸ್ಪಂದಿತ(ವೆಂದು ಕರೆದಿದೆ)[1]. ಏಕೆಂದರೆ ಚಲನವಿಲ್ಲದ ವಿಜ್ಞಾನಕ್ಕೆ (ನಿಜವಾದ)

1. ಕೊಳ್ಳಿಯಲ್ಲಿಲ್ಲದ ಆಕಾರಗಳು ಹೇಗೆ ತೋರಿಕೊಳ್ಳುವವೋ ಹಾಗೆಯೇ ಆತ್ಮನಲ್ಲಿಲ್ಲದ ವಿಷಯಿವಿಷಯಭಾವವು ಅವಿದ್ಯೆಯಿಂದ ತೋರುವದು-ಎಂಬುದಿಷ್ಟೇ ದೃಷ್ಟಾಂತದಾರ್ಷ್ಟಾಂತಿಕಗಳಿಗೆ ಹೋಲಿಕೆಯು. ಕೊಳ್ಳಿಯು ನಿಜವಾಗಿ ತಿರುಗುವಂತೆ ಆತ್ಮನು ನಿಜವಾಗಿ ತಿರುಗುವದಿಲ್ಲ. ಅಂತಃಕರಣದ ಚಲನವನ್ನೇ ಆತ್ಮನಲ್ಲಿ ಆರೋಪಿಸುತ್ತೇವೆ. ಅಷ್ಟೆ.

ಅಲುಗಾಟವೇನೂ ಇರಲಾರದು. " ಅಜವೂ ಅಚಲವೂ (ಆಗಿರುವದು) " (೪–೪೫) ಎಂದಲ್ಲವೆ, (ಹಿಂದೆ) ಹೇಳಿದೆ ?

**ಅಸ್ಪನ್ದಮಾನಮಲಾತಮನಾಭಾಸಮಜಂ ಯಥಾ ।**
**ಅಸ್ಪನ್ದಮಾನಂ ವಿಜ್ಞಾನಮನಾಭಾಸಮಜಂ ತಥಾ ॥ ೪೮ ॥**

೪೮. ಅಲುಗಾಡದೆ ಇರುವ ಕೊಳ್ಳಿಯು ಹೇಗೆ (ಬೇರೆಯ ರೂಪದಿಂದ) ತೋರಿಕೊಳ್ಳದೆ ಅಜವಾಗಿರುವದೋ ಹಾಗೆ ಅಲುಗಾಡದೆ ಇರುವ ವಿಜ್ಞಾನವು (ಬೇರೆಯ ರೂಪದಿಂದ) ತೋರಿಕೊಳ್ಳದೆ ಅಜವಾಗಿರುವದು.

(ಭಾಷ್ಯ)

೨೯೬. ಅಸ್ಪನ್ದಮಾನಂ ಸ್ಪನ್ದನವರ್ಜಿತಂ ತದೇವ ಅಲಾತಮ್ ಋಜ್ವಾದ್ಯಾಕಾರೇಣ ಅಜಾಯಮಾನಮ್ ಅನಾಭಾಸಮ್ ಅಜಂ ಯಥಾ । ತಥಾ ಅವಿದ್ಯಯಾ ಸ್ಪನ್ದಮಾನಮ್ ಅವಿದ್ಯೋಪರಮೇ ಅಸ್ಪನ್ದಮಾನಮ್ (ವಿಜ್ಞಾನಂ)[1] ಜಾತ್ಯಾದ್ಯಾಕಾರೇಣ ಅನಾಭಾಸಮ್ ಅಜಮ್ ಅಚಲಂ ಭವಿಷ್ಯತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಅಲುಗಾಡದಿರುವ ಅಲುಗಾಟವಿಲ್ಲದ ಅದೇ ಕೊಳ್ಳಿಯು ನೆಟ್ಟಗಿರುವದು-ಮುಂತಾದ ಆಕಾರದಿಂದ ಹುಟ್ಟದೆ ಇರುವಾಗ (ಬೇರೆಯ ರೂಪದಿಂದ) ತೋರಿಕೊಳ್ಳದೆ ಹೇಗೆ ಅಜ(ವಾಗಿರುವದೋ), ಹಾಗೆಯೇ ತಪ್ಪುತಿಳಿವಳಿಕೆಯಿಂದ ಅಲುಗಾಡುತ್ತಿದ್ದು ತಪ್ಪುತಿಳಿವಳಿಕೆಯು ಹೋಗುತ್ತಲೂ ಅಲುಗಾಡದೆ ಇರುವ ವಿಜ್ಞಾನವು ಜಾತಿಯೇ ಮುಂತಾದ ರೂಪದಿಂದ ತೋರಿಕೊಳ್ಳದೆ ಅಜವೂ ಅಚಲವೂ ಆಗುವದು[2] ಎಂದರ್ಥ.

---

1. ಈ ಮಾತು ಭಾಷ್ಯದಲ್ಲಿರಬೇಕಾದದ್ದು ಬಿಟ್ಟುಹೋಗಿದೆ. ಮೂಲಕ್ಕೆ ತಕ್ಕಂತೆ ಇಲ್ಲಿ ಇದನ್ನು ಸೇರಿಸಿಕೊಂಡಿದ್ದೇವೆ.

2. ಆತ್ಮನು ಯಾವಾಗಲೂ ಅಜನು, ಅಚಲನು. ಸರಿಯಾದ ಜ್ಞಾನವುಂಟಾದರೇ ಈ ವಿಷಯವು ಮನದಟ್ಟಾಗುವದರಿಂದ ತಪ್ಪುತಿಳಿವು ಹೋದರೆ ಹೀಗೆ ಆಗುವನು ಎಂದಿದೆ.

**ಅಲಾತೇ ಸ್ಪನ್ದಮಾನೇ ವೈ ನಾಭಾಸಾ ಅನ್ಯತೋಭುವಃ ।**
**ನ ತತೋಽನ್ಯತ್ರ ನಿಸ್ಪನ್ದಾನ್ನಾಲಾತಂ ಪ್ರವಿಶನ್ತಿ ತೇ ॥ ೪೯ ॥**

೪೯. ಕೊಳ್ಳಿಯು ಅಲುಗಾಡುತ್ತಿರುವಾಗ ತೋರಿಕೆಗಳು ಮತ್ತೊಂದರಿಂದ ಆಗುವದಿಲ್ಲ. ಅಲುಗಾಡದೆ ಇರುವಾಗ ಅದನ್ನು ಬಿಟ್ಟು ಮತ್ತೊಂದು ಕಡೆ ಹೋಗುವದೂ ಇಲ್ಲ, ಕೊಳ್ಳಿಯನ್ನು ಪ್ರವೇಶಿಸುವದೂ ಇಲ್ಲ.

(ಭಾಷ್ಯ)

೫೯೭. ಕಿಂ ಚ ತಸ್ಮಿನ್ನೇವ ಅಲಾತೇ ಸ್ಪನ್ದಮಾನೇ । ವೈ ಋಜು ವಕ್ರಾದ್ಯಾಭಾಸಾ ಅಲಾತಾತ್ ಅನ್ಯತಃ ಕುತಶ್ಚಿತ್ ಆಗತ್ಯ ಅಲಾತೇ ಸೈವ ಭವನ್ತಿ ಇತಿ ನಾನ್ಯತೋಭುವಃ । ನ ಚ ತಸ್ಮಾತ್ ನಿಸ್ಪನ್ದಾತ್ ಅಲಾತಾತ್ ಅನ್ಯತ್ರ ನಿರ್ಗತಾಃ । ನ ಚ ನಿಸ್ಪನ್ದಮ್ ಅಲಾತಮೇವ ಪ್ರವಿಶನ್ತಿ ತೇ ॥

(ಭಾಷ್ಯಾರ್ಥ)

ಮತ್ತು ಅದೇ ಕೊಳ್ಳಿಯು ಅಲುಗಾಡುತ್ತಿರುವಾಗ ನೆಟ್ಟಗೆ ಸೊಟ್ಟಗೆ ಮುಂತಾಗಿ ತೋರುವ (ಆಕಾರಗಳು) ಕೊಳ್ಳಿಗಿಂತ ಬೇರೆಯಾದ ಯಾವದಾದರೊಂದು (ಪದಾರ್ಥ)[1] ದಿಂದ ಬಂದು ಕೊಳ್ಳಿಯಲ್ಲಿ ಇದ್ದುಕೊಂಡಿರುವದೇ ಇಲ್ಲವಾದ್ದರಿಂದ ಮತ್ತೊಂದರಿಂದ ಆಗುವದಿಲ್ಲ. ಆ ಕೊಳ್ಳಿಯು ಅಲುಗಾಡದೆ ಇರುವಾಗ (ಆ) ಕೊಳ್ಳಿಯಿಂದ ಮತ್ತೊಂದು ಕಡೆಗೆ (ಅವು) ಹೋಗುವದಿಲ್ಲ[2]; ಅಲುಗಾಡದೆ ಇರುವ ಆ ಕೊಳ್ಳಿಯನ್ನೂ ಅವು ಪ್ರವೇಶಿಸುವದಿಲ್ಲ[3].

1. ಒಂದು ವಸ್ತುವಿನಲ್ಲಿ ಭ್ರಾಂತಿಯಿಂದ ತೋರುವ ಆಕಾರವು ಮತ್ತೊಂದು ಕಡೆಯಿಂದ ಬಂದು ಅಲ್ಲಿ ತೋರಿಕೊಳ್ಳುವದಿಲ್ಲ; ಉದಾಹರಣೆಗೆ ಹಗ್ಗದಲ್ಲಿ ತೋರುವ ಭ್ರಾಂತಿಸರ್ಪವು ಹುತ್ತದಿಂದ ಹರಿದು ಬಂದು ಅಲ್ಲಿ ತೋರುತ್ತಿರುವದಿಲ್ಲ.

2. ಅಲುಗಾಡುತ್ತಿದ್ದ ಕೊಳ್ಳಿಯಲ್ಲಿ ಆಕಾರಗಳು ನಿಜವಾಗಿ ಅದರಲ್ಲಿದ್ದು ಬಳಿಕ ಅದನ್ನು ಬಿಟ್ಟು ಎಲ್ಲಿಗೋ ಹೋಗುವವೆಂದು ಕಲ್ಪಿಸುವದು ಅನುಭವಾನುಗುಣವಲ್ಲ.

3. ಅಲುಗಾಡುವಂತೆ ತೋರುತ್ತಿದ್ದ ಆಕಾರಗಳು ಅದು ಅಲುಗಾಡುವದು ನಿಲ್ಲುತ್ತಲೂ ಅದರೊಳಕ್ಕೆ ಸೇರಿಕೊಂಡುಬಿಡುವದೆಂದು ಯಾರೂ ನಂಬುವದಿಲ್ಲ.

**ನ ನಿರ್ಗತಾ ಅಲಾತಾತ್ ತೇ ದ್ರವ್ಯತ್ವಾಭಾವಯೋಗತಃ ।**
**ವಿಜ್ಞಾನೇಽಪಿ ತಥೈವಸ್ಯುರಾಭಾಸಸ್ಯಾವಿಶೇಷತಃ ॥ ೫೦ ॥**

೫೦. ಅವು ಕೊಳ್ಳಿಯಿಂದ ಹೊರಟುಬಂದಿರುವದಿಲ್ಲ; ಏಕೆಂದರೆ, ದ್ರವ್ಯತ್ವಾಭಾವಯೋಗದಿಂದ. ವಿಜ್ಞಾನ(ದ ವಿಷಯ)ದಲ್ಲಿಯೂ ಹೀಗೆಯೇ ಇರಬೇಕು. ಏಕೆಂದರೆ ತೋರಿಕೆಯೆಂಬುದು ಸಮಾನವಾಗಿದೆ.

(ಭಾಷ್ಯ)

೨೯೮. ಕಿಂಚ ನ ನಿರ್ಗತಾಃ ಅಲಾತಾತ್ ತೇ ಆಭಾಸಾಃ ಗೃಹಾದಿವ। ದ್ರವ್ಯತ್ವಾಭಾವಯೋಗತಃ। ದ್ರವ್ಯಸ್ಯ ಭಾವಃ ದ್ರವ್ಯತ್ವಮ್। ತದಭಾವಃ ದ್ರವ್ಯತ್ವಾಭಾವಃ। ದ್ರವ್ಯತ್ವಾಭಾವಯೋಗತಃ ದ್ರವ್ಯತ್ವಾಭಾವಯುಕ್ತೇಃ। ವಸ್ತುತ್ವಾಭಾವಾತ್ ಇತ್ಯರ್ಥಃ। ವಸ್ತುನೋ ಹಿ ಪ್ರವೇಶಾದಿ ಸಮ್ಭವತಿ ನ ಅವಸ್ತುನಃ। ವಿಜ್ಞಾನೇಽಪಿ ಜಾತ್ಯಾದ್ಯಾಭಾಸಾಃ ತಥೈವ ಸ್ಯುಃ ಆಭಾಸಸ್ಯ ಅವಿಶೇಷತಃ ತುಲ್ಯತ್ವಾತ್ ॥

(ಭಾಷ್ಯಾರ್ಥ)

ಮತ್ತು ಆ ತೋರಿಕೆಗಳು ಮನೆಯಿಂದ (ಜನರು ಹೊರಕ್ಕೆ ಬರುವಂತೆ) ಕೊಳ್ಳಿಯಿಂದ ಹೊರಟುಬಂದಿರುವದಿಲ್ಲ[1]. (ಏಕೆಂದರೆ) ದ್ರವ್ಯತ್ವಾಭಾವಯೋಗದಿಂದ; ದ್ರವ್ಯತ್ವವೆಂದರೆ ದ್ರವ್ಯದ ಭಾವವು ಅದು ಇಲ್ಲದ್ದು ದ್ರವ್ಯತ್ವಾಭಾವವು : ದ್ರವ್ಯತ್ವಾಭಾವಯೋಗದಿಂದ, ದ್ರವ್ಯತ್ವವು ಅವುಗಳಲ್ಲಿಲ್ಲವೆಂಬ ಯುಕ್ತಿಯಿಂದ.(ಅವು ನಿಜವಾದ) ವಸ್ತುಗಳಲ್ಲವಾದ್ದರಿಂದ ಎಂದರ್ಥ. (ನಿಜವಾದ) ವಸ್ತುವಿಗೇ ಪ್ರವೇಶನೇ ಮುಂತಾದದ್ದು ಹೊಂದುವದೇ ಹೊರತು ಅವಸ್ತುವಿಗೆ (ಹೊಂದುವ)ದಿಲ್ಲ. ವಿಜ್ಞಾನದ ವಿಷಯದಲ್ಲಿಯೂ ಜಾತಿಯೇ ಮುಂತಾದ ತೋರಿಕೆಗಳು ಹಾಗೆಯೆ. ಇರಬೇಕು[2], ಏಕೆಂದರೆ ತೋರಿಕೆಯಾಗಿರುವದೆಂಬುದು, ಅವಿಶೇಷವಾಗಿದೆ, (ಅವಕ್ಕೂ) ಸಮಾನವಾಗಿರುತ್ತದೆ.

(ಭಾಷ್ಯ)

೨೯೯. ಕಥಂ ತುಲ್ಯತ್ವಮ್ ಇತಿ? ಆಹ

---

1. ಕೊಳ್ಳಿಯೊಳಕ್ಕೆ ಆಕಾರಗಳು ಸೇರುವದಿಲ್ಲವೆಂಬುದರಷ್ಟೇ ಅದರಿಂದ ಅವು ಹೊರಕ್ಕೆ ಬಂದಿರುವದಿಲ್ಲವೆಂಬುದೂ ನಿಶ್ಚಯವು.

2. ಕೊಳ್ಳಿಯ ಆಕಾರಾಭಾಸಗಳಂತೆಯೇ ಮಿಥ್ಯೆ.

(ಭಾಷ್ಯಾರ್ಥ)

(ಕೊಳ್ಳಿಕೆಗಳೆರಡೂ) ಸಮಾನವೆಂಬುದು ಹೇಗೆ? ಎಂದರೆ ಹೇಳುತ್ತಾರೆ:

**ವಿಜ್ಞಾನೇ ಸ್ಪನ್ದಮಾನೇ ವೈ ನಾಭಾಸಾ ಅನ್ಯತೋಭುವಃ ।**
**ನ ತತೋಽನ್ಯತ್ರ ನಿಸ್ಪನ್ದಾನ್ನ ವಿಜ್ಞಾನಂ ವಿಶನ್ತಿ ತೇ ॥ ೫೧ ॥**

**ನ ನಿರ್ಗತಾಸ್ತೇ ವಿಜ್ಞಾನಾದ್ದ್ರವ್ಯತ್ವಾಭಾವಯೋಗತಃ ।**
**ಕಾರ್ಯಕಾರಣತಾಭಾವಾದ್ಯತೋಽಚಿನ್ತ್ಯಾಃ ಸದೈವ ತೇ ॥ ೫೨ ॥**

೫೧–೫೨. ವಿಜ್ಞಾನವು ಅಲುಗಾಡುತ್ತಿರುವಾಗ ತೋರಿಕೆಗಳು ಬೇರೊಂದರಿಂದ ಆಗಿರುವದಿಲ್ಲ. ಅಲುಗಾಡದೆ ಇರುವಾಗ ಆ (ವಿಜ್ಞಾನ) ದಿಂದ ಬೇರೆ(ಕಡೆಗೆ ಹೋಗುವದೂ) ಇಲ್ಲ; ಅವು ವಿಜ್ಞಾನವನ್ನು ಸೇರಿಕೊಳ್ಳುವದೂ ಇಲ್ಲ. ಅವು ವಿಜ್ಞಾನದಿಂದ ಹೊರಟುಬಂದಿರುವದಿಲ್ಲ, (ಏಕೆಂದರೆ) ದ್ರವ್ಯತ್ವಾಭಾವಯುಕ್ತಿಯಿರುವದರಿಂದ. ಏಕೆಂದರೆ ಕಾರ್ಯಕಾರಣತ್ವವು ಇಲ್ಲದ್ದರಿಂದ ಅವು ಯಾವಾಗಲೂ ಅಚಿಂತ್ಯಗಳೇ (ಆಗಿರುತ್ತವೆ).

(ಭಾಷ್ಯ)

೨೦೦. ಅಲಾತೇನ ಸಮಾನಂ ಸರ್ವಂ ವಿಜ್ಞಾನಸ್ಯ । ಸದಾ ಅಚಲತ್ವಂ ತು ವಿಜ್ಞಾನಸ್ಯ ವಿಶೇಷಃ । ಜಾತ್ಯಾದ್ಯಾಭಾಸಾ ವಿಜ್ಞಾನೇ ಅಚಲೇ ಕಿಂಕೃತಾಃ ಇತಿ ? ಆಹ— ಕಾರ್ಯಕಾರಣತಾಭಾವಾತ್ ಜನ್ಯಜನಕತ್ವಾನುಪಪತ್ತೇಃ । ಅಭಾವರೂಪತ್ವಾತ್, ಅಚಿನ್ತ್ಯಾಃ ತೇ ಯತಃ ಸದೈವ । ಯಥಾ ಅಸತ್ಸು ಋಜ್ವಾದ್ಯಾಭಾಸೇಷು ಋಜ್ವಾದಿಬುದ್ಧಿಃ ದೃಷ್ಟಾ ಅಲಾತಮಾತ್ರೇ ತಥಾ ಅಸತ್ಸ್ವೇವ ಜಾತ್ಯಾದಿಷು ವಿಜ್ಞಾನಮಾತ್ರೇ ಜಾತ್ಯಾದಿಬುದ್ಧಿಃ ಮೃಷೈವ ಇತಿ ಸಮುದಾಯಾರ್ಥಃ ॥

(ಭಾಷ್ಯಾರ್ಥ)

ವಿಜ್ಞಾನಕ್ಕೂ ಕೊಳ್ಳಿಗೂ ಎಲ್ಲವೂ ಸಮಾನವಾಗಿಯೇ[1] ಇರುವದು. ಆದರೆ ಯಾವಾಗಲೂ ಅಲುಗಾಡದೆ ಇರುವದೆಂಬುದು ವಿಜ್ಞಾನದ ವಿಶೇಷವು.

---

1. ತೋರಿಕೆಗಳು ಹುಟ್ಟಲ್ಲ, ಲಯವಾಗುವದೂ ಇಲ್ಲ-ಎಂಬುದು ಸಮಾನ. ೪–೧೭, ೧–೧೮.— ಇವುಗಳ ಭಾಷ್ಯವನ್ನು ನೋಡಿ.

(ಹಾಗಾದರೆ) ಅಲುಗಾಡದಿರುವ ವಿಜ್ಞಾನದಲ್ಲಿ ಹುಟ್ಟುವದೇ ಮುಂತಾದ ತೋರಿಕೆಗಳು ಏತರಿಂದಾಗುತ್ತವೆ? ಎಂದರೆ ಹೇಳುತ್ತಾರೆ: ಏಕೆಂದರೆ (ಅವು) ಅಭಾವರೂಪವಾಗಿರುವದರಿಂದ[1], (ವಿಜ್ಞಾನಕ್ಕೂ, ಅವಕ್ಕೂ) ಕಾರ್ಯಕಾರಣಭಾವ ವಿಲ್ಲದ್ದರಿಂದ (ಇದೇ ಹುಟ್ಟಿಸಲ್ಪಡತಕ್ಕದ್ದು, ಇದು) ಹುಟ್ಟಿಸತಕ್ಕದ್ದು-ಎಂಬುದಿಲ್ಲದ್ದ ರಿಂದ, ಅಚಿಂತ್ಯವಾಗಿಯೇ ಇರುತ್ತವೆ. **ಹೇಗೆ 'ನೆಟ್ಟಗಿರುವದು' ಎಂದು ಮುಂತಾದ ತೋರಿಕೆಗಳು ಇಲ್ಲದಿದ್ದರೂ ಬರಿಯ ಕೊಳ್ಳಿಯ (ವಿಷಯಕ್ಕೇ) ನೆಟ್ಟಗಿದೆ ಎಂದು ಮುಂತಾದ ಬುದ್ಧಿಯುಂ(ಟಾಗುವದು) ಕಂಡುಬಂದಿ ದೆಯೋ[2] ಹಾಗೆಯೇ ಜಾತ್ಯಾದಿಗಳು ಇಲ್ಲವೇ ಇಲ್ಲವಾದರೂ ಬರಿಯ ವಿಜ್ಞಾನ(ದ ವಿಷಯಕ್ಕೆ ಅದು) 'ಹುಟ್ಟುವದು' ಎಂದು ಮುಂತಾದ ಬುದ್ಧಿಯು ಸುಳ್ಳುಸುಳ್ಳಾಗಿಯೇ (ಉಂಟಾಗಿರುತ್ತದೆ) ಎಂದು ಒಟ್ಟರ್ಥವು.**

## ಆತ್ಮನಲ್ಲಿ ಕಾರ್ಯಕಾರಣಭಾವವಿಲ್ಲವೆಂಬುದಕ್ಕೆ ಯುಕ್ತಿ

**(ಭಾಷ್ಯ)**

೩೦೧. ಅಜಮ್ ಏಕಮ್ ಆತ್ಮತತ್ತ್ವಮ್ ಇತಿ ಸ್ಥಿತಮ್ । ತತ್ರ ಯೈರಪಿ ಕಾರ್ಯಕಾರಣಭಾವಃ ಕಲ್ಪ್ಯತೇ, ತೇಷಾಮ್—

**(ಭಾಷ್ಯಾರ್ಥ)**

ಆತ್ಮತತ್ತ್ವವು ಹುಟ್ಟುವದಲ್ಲ, ಒಂದು—ಎಂದು ನಿರ್ಣಯವಾಯಿತು. ಅದರಲ್ಲಿ ಯಾರು ಕಾರ್ಯಕಾರಣಭಾವವನ್ನು ಕಲ್ಪಿಸುವರೋ ಅವರ (ಮತದಲ್ಲಿಯೂ)—

**ದ್ರವ್ಯಂ ದ್ರವ್ಯಸ್ಯ ಹೇತುಃ ಸ್ಯಾದನ್ಯದನ್ಯಸ್ಯ ಚೈವ ಹಿ ।**
**ದ್ರವ್ಯತ್ವಮನ್ಯಭಾವೋ ವಾ ಧರ್ಮಾಣಾಂ ನೋಪಪದ್ಯತೇ ॥ ೫೩ ॥**

**೫೩.** ದ್ರವ್ಯವು ದ್ರವ್ಯಕ್ಕೆ ಹೇತುವಾದೀತು; ಒಂದು ಮತ್ತೊಂದಕ್ಕೇ ಕಾರಣವಾದೀತು ಅಲ್ಲವೆ? (ಆದರೆ) ಧರ್ಮಗಳು ದ್ರವ್ಯವೆಂಬುದಾಗಲಿ ಬೇರೆಯೆಂಬುದಾಗಲಿ ಹೊಂದುವದಿಲ್ಲ.

---

1. ಯಾವದಾದರೊಂದು ವಸ್ತುವಿನ ಅಭಾವವೆಂದರ್ಥವಲ್ಲ, ಹುಸಿತೋರಿಕೆ ಯೆಂದೇ ಅರ್ಥ. ಹುಸಿತೋರಿಕೆಯೆಂಬುದು ವಸ್ತುವಲ್ಲ. ಆದ್ದರಿಂದ ಅದಕ್ಕೆ ಕಾರಣದ ಅಪೇಕ್ಷೆಯಿಲ್ಲ.

2. ಪ್ರಾತಿಭಾಸಿಕವಸ್ತುಗಳು, ಹುಸಿತೋರಿಕೆಗಳು, ಬುದ್ಧಿಕಲ್ಪಿತವಾಗಿರುವವೇ ಹೊರತು ತಮ್ಮ ರೂಪದಲ್ಲಿ ನಿಜವಾಗಿರುವದೇ ಇಲ್ಲ. ಆದ್ದರಿಂದ ಅವುಗಳ ಹುಟ್ಟು ಬೆಳವಣಿಗೆ, ಲಯ-ಮುಂತಾದವುಗಳೆಲ್ಲ ವಿಕಲ್ಪವೇ ಎಂದು ಭಾವ.

(ಭಾಷ್ಯ)

೩೦೨. ದ್ರವ್ಯಂ ದ್ರವ್ಯಸ್ಯ ಅನ್ಯಸ್ಯ ಅನ್ಯತ್ ಹೇತುಃ ಕಾರಣಂ ಸ್ಯಾತ್ । ನ ತು ತಸ್ಯೈವ ತತ್ । ನಾಽಪಿ ಅದ್ರವ್ಯಂ ಕಸ್ಯಚಿತ್ ಕಾರಣಂ ಸ್ವತನ್ತ್ರಂ ದೃಷ್ಟಂ ಲೋಕೇ । ನ ಚ ದ್ರವ್ಯತ್ವಂ ಧರ್ಮಾಣಾಮ್ ಆತ್ಮನಾಮ್ ಉಪಪದ್ಯತೇ । ಅನ್ಯತ್ವಂ ವಾ ಕುತಶ್ಚಿತ್, ಯೇನ ಅನ್ಯಸ್ಯ ಕಾರಣತ್ವಂ ಕಾರ್ಯತ್ವಂ ವಾ ಪ್ರತಿಪದ್ಯೇತ । ಅತಃ ಅದ್ರವ್ಯತ್ವಾತ್ ಅನನ್ಯತ್ವಾಚ್ಚ ನ ಕಸ್ಯಚಿತ್ ಕಾರ್ಯಂ ಕಾರಣಂ ವಾ ಆತ್ಮಾ ಇತ್ಯರ್ಥಃ ॥

(ಭಾಷ್ಯಾರ್ಥ)

(ಒಂದು) ದ್ರವ್ಯವು (ಮತ್ತೊಂದು) ದ್ರವ್ಯಕ್ಕೆ ಕಾರಣವಾದೀತು[1]. ಒಂದು ಮತ್ತೊಂದಕ್ಕೆ ಕಾರಣವಾದೀತು; ಆದರೆ ತನಗೆ ತಾನೇ (ಕಾರಣ)ವಾಗಲಾರದು. ದ್ರವ್ಯವಲ್ಲದ್ದಾದರೂ ಯಾವದಕ್ಕೂ ಸ್ವತಂತ್ರವಾಗಿ[2] ಕಾರಣ(ವಾಗಿರುವದು) ಲೋಕದಲ್ಲಿ ಕಂಡುಬಂದಿಲ್ಲ. ಆದರೆ ಧರ್ಮರುಗಳು ಆತ್ಮರುಗಳು ದ್ರವ್ಯವೆಂಬುದಾಗಲಿ, ಮತ್ತೊಂದಕ್ಕಿಂತ ಬೇರೆಯೆಂಬುದಾಗಲಿ[3] ಹೊಂದುವದಿಲ್ಲ; ಹಾಗಿದ್ದರೆ (ಆತ್ಮನು) ಮತ್ತೊಂದಕ್ಕೆ ಕಾರಣವೆಂದಾಗಲಿ ಕಾರ್ಯವೆಂದಾಗಲಿ ಆಗಬಹುದಾಗಿತ್ತು. ಆದ್ದರಿಂದ ಆತ್ಮನು ದ್ರವ್ಯವಲ್ಲದ್ದರಿಂದಲೂ (ಮತ್ತೊಂದಕ್ಕಿಂತ) ಬೇರೆಯಲ್ಲದೆ (ಇರುವದ)ರಿಂದಲೂ ಆತ್ಮನು ಯಾವದಕ್ಕೂ ಕಾರ್ಯವೂ ಅಲ್ಲ, ಕಾರಣವೂ ಅಲ್ಲ ಎಂದರ್ಥ.

---

1. ಒಂದು ದ್ರವ್ಯವು ಮತ್ತೊಂದು ದ್ರವ್ಯಕ್ಕೆ ಕಾರಣವಾದೀತು-ಎಂಬ ಅಭಿಪ್ರಾಯವು 'ಅನ್ಯತ್ ದ್ರವ್ಯಂ ಅನ್ಯಸ್ಯ ಹೇತುಃ ಸ್ಯಾತ್' ಎಂದು ಅನ್ವಯಿಸಿದರೆ ಹೊರಡುತ್ತದೆ. ಮೂಲವು ಈಗ ಇರುವಂತೆ ದ್ರವ್ಯವು ದ್ರವ್ಯಕ್ಕೆ ಸಮವಾಯಿಕಾರಣವು. ಅದ್ರವ್ಯವು ಎಂದರೆ ಗುಣವು ಕಾರ್ಯವಾದ ಅವಯವಿಯ ಗುಣಗಳಿಗೆ ಕಾರಣ-ಎಂದು ಅರ್ಥವನ್ನು ಮಾಡಬೇಕಾಗುವದು.

2. ನೂಲಿನ ರೂಪವು ಬಟ್ಟೆಯ ರೂಪಕ್ಕೆ ಕಾರಣವಾಗಿರುವದಾದರೂ ಸ್ವತಂತ್ರವಾಗಿ ಕಾರಣವಲ್ಲ, ನೂಲಿನ ಮೂಲಕವಾಗಿ ಅಸಮವಾಯಿಕಾರಣವಾಗಿರುತ್ತದೆ-ಎಂದು ವೈಶೇಷಿಕರು ಹೇಳುತ್ತಾರೆ.

3. ಆತ್ಮನು ಮತ್ತೊಂದಕ್ಕಿಂತ ಬೇರೆಯಲ್ಲ, ಏಕೆಂದರೆ ಆ ಮತ್ತೊಂದೆಂಬುದು ನಿಜವಾಗಿಲ್ಲ. ಒಂದು, ಇನ್ನೊಂದು-ಎಂದು ಕಲ್ಪನೆಮಾಡುವದಕ್ಕೆ ಎರಡೂ ದೇಶಕಾಲಗಳಲ್ಲಿರಬೇಕು, ಆದರೆ ಆತ್ಮನು ದೇಶಕಾಲಗಳನ್ನು ಮೀರಿರುತ್ತಾನೆ.

**ಏವಂ ನ ಚಿತ್ತಜಾ ಧರ್ಮಾಶ್ಚಿತ್ತಂ ವಾಪಿ ನ ಧರ್ಮಜಮ್ ।**
**ಏವಂ ಹೇತುಫಲಾಜಾತಿಂ ಪ್ರವಿಶನ್ತಿ ಮನೀಷಿಣಃ ॥ ೫೪ ॥**

**೫೪.** ಹೀಗೆ ಚಿತ್ತದಿಂದ ಧರ್ಮಗಳು ಹುಟ್ಟುವದಿಲ್ಲ, ಚಿತ್ತವೂ ಧರ್ಮಗಳಿಂದ ಹುಟ್ಟುವದಿಲ್ಲ. ಹೀಗೆ ಹೇತುಫಲಗಳು ಹುಟ್ಟುವದಿಲ್ಲ(ವೆಂಬ ಮತವನ್ನು) ಪಂಡಿತರು ಪ್ರವೇಶಿಸುವರು.

(ಭಾಷ್ಯ)

**೩೦೩.** ಏವಂ ಯಥೋಕ್ತೇಭ್ಯೋ ಹೇತುಭ್ಯಃ ಆತ್ಮವಿಜ್ಞಾನಸ್ವರೂಪಮೇವ ಚಿತ್ತಮ್ ಇತಿ ನ ಚಿತ್ತಜಾ ಬಾಹ್ಯಧರ್ಮಾಃ, ನಾಽಪಿ ಬಾಹ್ಯಧರ್ಮಜಂ ಚಿತ್ತಮ್ । ವಿಜ್ಞಾನಸ್ವರೂಪಾಭಾಸಮಾತ್ರತ್ವಾತ್ ಸರ್ವಧರ್ಮಾಣಾಮ್ । ಏವಂ ನ ಹೇತೋಃ ಫಲಂ ಜಾಯತೇ, ನಾಪಿ ಫಲಾತ್ ಹೇತುಃ–ಇತಿ ಹೇತುಫಲಯೋಃ ಅಜಾತಿಂ ಹೇತುಫಲಾಜಾತಿಂ ಪ್ರವಿಶನ್ತಿ ಅಧ್ಯವಸ್ಯನ್ತಿ । ಆತ್ಮನಿ ಹೇತುಫಲಯೋಃ ಅಭಾವಮೇವ ಪ್ರತಿಪದ್ಯನ್ತೇ[1] ಬ್ರಹ್ಮವಿದಃ ಇತ್ಯರ್ಥಃ ॥

(ಭಾಷ್ಯಾರ್ಥ)

ಹೀಗೆ ಮೇಲೆ ಹೇಳಿದ ಕಾರಣಗಳಿಂದ[2] ಚಿತ್ತವು ಆತ್ಮನೆಂಬ ವಿಜ್ಞಾನದ ಸ್ವರೂಪವೇ ಆಗಿರುವದರಿಂದ ಹೊರಗಿನ ಧರ್ಮಗಳು[3] ಚಿತ್ತದಿಂದ ಹುಟ್ಟುವದಿಲ್ಲ, ಹೊರಗಿನ ಧರ್ಮಗಳಿಂದ ಚಿತ್ತವೂ ಹುಟ್ಟುವದಿಲ್ಲ. ಏಕೆಂದರೆ ಎಲ್ಲಾ ಧರ್ಮಗಳೂ[4] ವಿಜ್ಞಾನಸ್ವರೂಪದ ಬರಿಯ ತೋರಿಕೆಗಳಾಗಿರುತ್ತವೆ. ಹೀಗಿರುವದರಿಂದ ಹೇತುವಿನಿಂದ ಫಲವೂ ಹುಟ್ಟುವದಿಲ್ಲ, ಫಲದಿಂದ ಹೇತುವೂ ಹುಟ್ಟುವದಿಲ್ಲ–ಎಂದು ಹೇತುಫಲಗಳೆರಡೂ ಹುಟ್ಟುವದಿಲ್ಲ(ವೆಂಬ ಮತವನ್ನು ಪಂಡಿತರು) ಪ್ರವೇಶಿಸುವರು, (ಅವೇ

---

1. ಇಲ್ಲಿ 'ಮನೀಷಿಣಃ' ಎಂಬ ಮಾತು ಬಿಟ್ಟುಹೋಗಿದೆಯೆಂದು ಕಾಣುತ್ತದೆ.

2. ತೋರಿಕೆಗಳಿಗೆ ಹೇಗೂ ಜನ್ಮವಿಲ್ಲ; ಅವುಗಳಿಗೆ ಲಯವೂ ಇಲ್ಲ; ಅವು ಅಚಿಂತ್ಯವಾಗಿವೆ; ಆತ್ಮನು ದ್ರವ್ಯವಲ್ಲದ್ದರಿಂದ ಕಾರ್ಯವಲ್ಲ ಕಾರಣವೂ ಅಲ್ಲ—ಎಂಬ ಕಾರಣಗಳಿಂದ.

3. ಹೊರಗಿನ ವಿಷಯಗಳು.

4. ಚಿತ್ತವೂ ವಿಷಯಗಳೂ.

ಸರಿ ಎಂದು) ನಿಶ್ಚಯಿಸುವರು. ಆತ್ಮನಲ್ಲಿ ಹೇತುಫಲಗಳು ಇಲ್ಲವೇ ಇಲ್ಲವೆಂದು ಮನೀಷಿಗಳು ಬ್ರಹ್ಮಜ್ಞಾನಿಗಳು ಅರಿತಿರುವರು ಎಂದರ್ಥ[1].

## ಹೇತುಫಲಾಭಿಮಾನವು ಹೋದರೆ ಮುಕ್ತಿ

(ಭಾಷ್ಯ)

೩೦೪. ಯೇ ಪುನಃ ಹೇತುಫಲಯೋಃ ಅಭಿನಿವಿಷ್ಟಾಃ ತೇಷಾಂ ಕಿಂ ಸ್ಯಾತ್ ಇತಿ ? ಉಚ್ಯತೇ—

(ಭಾಷ್ಯಾರ್ಥ)

ಆದರೆ ಯಾರು ಹೇತುಫಲಗಳಲ್ಲಿ ಅಭಿಮಾನವುಳ್ಳವರಾಗಿರುವರೋ ಅವರಿಗೆ ಏನಾಗುವದು ? ಎಂದರೆ ಹೇಳುತ್ತಾರೆ:—

**ಯಾವದ್ಧೇತುಫಲಾವೇಶಸ್ತಾವದ್ಧೇತುಫಲೋದ್ಭವಃ ।**
**ಕ್ಷೀಣೇ ಹೇತುಫಲಾವೇಶೇ ನಾಸ್ತಿ ಹೇತುಫಲೋದ್ಭವಃ ॥ ೫೫ ॥**

೫೫. ಎಲ್ಲಿಯವರೆಗೆ ಹೇತುಫಲಾವೇಶವಿರುವದೋ ಅಲ್ಲಿಯವರೆಗೆ ಹೇತುಫಲೋದ್ಭವ(ವಿರುವದು) ; ಹೇತುಫಲಾವೇಶವು ಕ್ಷಯವಾದರೆ ಹೇತುಫಲೋದ್ಭವವಿರುವದಿಲ್ಲ.

(ಭಾಷ್ಯ)

೩೦೫. "ಧರ್ಮಾಧರ್ಮಾಖ್ಯಸ್ಯ ಹೇತೋಃ ಅಹಂ ಕರ್ತಾ ಮಮ ಧರ್ಮಾಧರ್ಮೌ, ತತ್ಫಲಂ ಕಾಲಾನ್ತರೇ ಕ್ವಚಿತ್ ಪ್ರಾಣಿನಿಕಾಯೇ ಜಾತಃ ಭೋಕ್ಷ್ಯೇ" ಇತಿ ಯಾವತ್ ಹೇತುಫಲಯೋಃ ಆವೇಶಃ ಹೇತುಫಲಾಗ್ರಹಃ ಆತ್ಮನಿ ಅಧ್ಯಾರೋಪಣಮ್ ತಚ್ಚಿತ್ತತಾ ಇತ್ಯರ್ಥಃ । ತಾವತ್ ಹೇತುಫಲಯೋಃ ಉದ್ಭವಃ ಧರ್ಮಾಧರ್ಮಯೋಃ ತತ್ಫಲಸ್ಯ ಚ ಅನುಚ್ಛೇದೇನ ಪ್ರವೃತ್ತಿಃ ಇತ್ಯರ್ಥಃ । ಯದಾ ಪುನಃ ಮನ್ತ್ರೌಷಧಿವೀರ್ಯೇಣೇವ ಗ್ರಹಾವೇಶಃ ಯಥೋಕ್ತಾದ್ವೈತದರ್ಶನೇನ ಅವಿದ್ಯೋದ್ಭೂತಹೇತುಫಲಾವೇಶಃ ಅಪನೀತೋ ಭವತಿ । ತದಾ ತಸ್ಮಿನ್ ಕ್ಷೀಣೇ ನಾಸ್ತಿ ಹೇತುಫಲೋದ್ಭವಃ ॥

---

1. ಧರ್ಮಾಧರ್ಮಗಳೆಂಬ ಹೇತು, ಶರೀರವೆಂಬ ಫಲ-ಇವು ಹುಟ್ಟುವವೆಂದರೆ ಅನ್ಯೋನ್ಯಾಶ್ರಯಾದಿದೋಷವುಂಟಾಗುವದು ಎಂದು ಹಿಂದೆ ಹೇಳಿತ್ತು. ಅವು ತೋರಿಕೆಗಳಾಗಿರುವದರಿಂದ ಹುಟ್ಟುವ ಯೋಗ್ಯತೆಯೇ ಅವಕ್ಕಿಲ್ಲವೆಂದು ಈಗ ಹೇಳಿದೆ.

(ಭಾಷ್ಯಾರ್ಥ)

ಧರ್ಮಾಧರ್ಮಗಳೆಂಬ "ಹೇತುವಿಗೆ ನಾನು ಕರ್ತನು, ಈ ಧರ್ಮಾಧರ್ಮಗಳು ನನ್ನವು, ಅವುಗಳ ಫಲವನ್ನು ಮತ್ತೊಂದು ಕಾಲದಲ್ಲಿ ಯಾವದೋ ಒಂದು ಜೀವರಾಶಿಯಲ್ಲಿ ಹುಟ್ಟಿ ಅನುಭವಿಸುವೆನು" ಎಂದು ಎಲ್ಲಿಯವರೆಗೆ ಹೇತುಫಲಗಳಲ್ಲಿ ಆವೇಶ(ವಿರುವದೋ), ಹೇತುಫಲಗಳಲ್ಲಿ ಪಟ್ಟು ಹಿಡಿದಿರುವಿಕೆಯು, ತನ್ನಲ್ಲಿ (ಅವನ್ನು) ಹುಟ್ಟುಗಟ್ಟಿಕೊಂಡಿರುವಿಕೆಯು, ಅದೇ ಚಿತ್ತವಿಟ್ಟುಕೊಂಡಿರುವಿಕೆಯು (ಇರುವದೋ) ಎಂದರ್ಥ. ಅಲ್ಲಿಯವರೆಗೆ ಹೇತುಫಲಗಳ ಉದ್ಭವ(ವಿರುವದು), ಧರ್ಮಾಧರ್ಮಗಳೂ ಅವರ ಫಲವೂ ನಾಶವಾಗದೆ ಮುನ್ನಡೆ(ಯುತ್ತಿರುವವು) ಎಂದರ್ಥ. ಆದರೆ ಯಾವಾಗ **ಮಂತ್ರ, ಔಷಧಿ**—ಇವುಗಳ ಸಾಮರ್ಥ್ಯದಿಂದ ಗ್ರಹದ (ಆವೇಶವು ಬಿಡುಗಡೆಯಾಗು)ವಂತೆ ಮೇಲೆ ಹೇಳಿರುವ ಅದ್ವೈತದರ್ಶನದಿಂದ ಅವಿದ್ಯೆಯಿಂದ ಉಂಟಾಗಿದ್ದ ಹೇತುಫಲಗಳ ಹಿಡಿತವು[1] ಕಳೆದುಹೋಗುವದೋ ಆಗ ಅದು ಕ್ಷಯವಾಗಲು ಹೇತುಫಲಗಳ ಹುಟ್ಟುವಿಕೆಯು ಇರುವದಿಲ್ಲ.

(ಭಾಷ್ಯ)

೨೦೬. ಯದಿ ಹೇತುಫಲೋದ್ಭವಃ, ತದಾ ಕೋ ದೋಷಃ ಇತಿ ? ಉಚ್ಯತೇ—

(ಭಾಷ್ಯಾರ್ಥ)

ಹೇತುಫಲಗಳ ಹುಟ್ಟುವಿಕೆಯು ಇದೆಯಾದರೆ ಆಗ ದೋಷವೇನು ? ಎಂದರೆ ಹೇಳುತ್ತಾರೆ:—

**ಯಾವದ್ಧೇತುಫಲಾವೇಶಃ ಸಂಸಾರಸ್ತಾವದಾಯತಃ ।**
**ಕ್ಷೀಣೇ ಹೇತುಫಲಾವೇಶೇ ಸಂಸಾರಂ ನ ಪ್ರಪದ್ಯತೇ ॥ ೫೬ ॥**

೫೬. ಎಲ್ಲಿಯವರೆಗೆ ಹೇತುಫಲಾವೇಶವಿರುವದೋ ಅಲ್ಲಿಯವರೆಗೆ ಸಂಸಾರವು ಆಯತ(ವಾಗಿರುತ್ತದೆ); ಹೇತುಫಲಾವೇಶವು ಕ್ಷೀಣವಾದರೆ ಸಂಸಾರವನ್ನು ಹೊಂದುವದಿಲ್ಲ.

---

1. ಅವಿದ್ಯೆಯೇ ಹೇತುಫಲಗಳ ಅಭಿಮಾನಕ್ಕೆ ಕಾರಣ, ವಿದ್ಯೆಯಿಂದ ಅವಿದ್ಯೆಯು ಹೋದಕೂಡಲೆ ಗ್ರಹದ ಪಟ್ಟಿನಿಂದ ಬಿಡುಗಡೆಯಾದವನಂತೆ ಮನುಷ್ಯನು ಧರ್ಮಾಧರ್ಮಗಳ ಹಿಡಿತದಿಂದ ಪಾರಾಗುತ್ತಾನೆ.

(ಭಾಷ್ಯ)

೩೦೭. ಯಾವತ್ ಸಮ್ಯಗ್ದರ್ಶನೇನ ಹೇತುಫಲಾವೇಶಃ ನ ನಿವರ್ತತೇ । ಅಕ್ಷೀಣಃ, ಸಂಸಾರಃ ತಾವತ್ ಆಯತಃ ದೀರ್ಘೋ ಭವತಿ ಇತ್ಯರ್ಥಃ । ಕ್ಷೀಣೇ ಪುನಃ ಹೇತುಫಲಾವೇಶೇ ಸಂಸಾರಂ ನ ಪ್ರಪದ್ಯತೇ । ಕಾರಣಾಭಾವಾತ್ ॥

(ಭಾಷ್ಯಾರ್ಥ)

ಎಲ್ಲಿಯವರೆಗೆ ಸರಿಯಾದ ತಿಳಿವಳಿಕೆಯಿಂದ ಹೇತುಫಲಗಳ ಅಭಿಮಾನವು ಹೋಗದೆ ಇರುವದೋ ನಾಶವಾಗದೆ ಇರುವದೋ ಅಲ್ಲಿಯವರೆಗೆ ಸಂಸಾರವು ಆಯತ (ವಾಗಿರುತ್ತದೆ), ಉದ್ದಕ್ಕೆ ಇದ್ದು ಕೊಂಡಿರುತ್ತದೆ ಎಂದರ್ಥ. ಆದರೆ ಹೇತುಫಲಗಳ ಅಭಿಮಾನವು ನಾಶವಾಗಿಬಿಟ್ಟರೆ ಆಗ (ಜೀವನು) ಸಂಸಾರವನ್ನು ಹೊಂದುವದಿಲ್ಲ: ಏಕೆಂದರೆ (ಆಗ ಅದಕ್ಕೆ) ಕಾರಣವಿರುವದಿಲ್ಲ[1].

## ಪರಮಾರ್ಥದೃಷ್ಟಿಯಲ್ಲಿ ನಿತ್ಯಾನಿತ್ಯವಿಭಾಗವಿಲ್ಲ

(ಭಾಷ್ಯ)

೩೦೮. ನನು ಅಜಾತ್ ಆತ್ಮನಃ ಅನ್ಯತ್ ನಾಸ್ತ್ಯೇವ । ತತ್ ಕಥಂ ಹೇತುಫಲಯೋಃ ಸಂಸಾರಸ್ಯ ಚ ಉತ್ಪತ್ತಿವಿನಾಶೌ ಉಚ್ಯೇತೇ ತ್ವಯಾ ? ಶೃಣು.

(ಭಾಷ್ಯಾರ್ಥ)

(ಆಕ್ಷೇಪ) :— ಹುಟ್ಟಿಲ್ಲದ ಆತ್ಮನಿಗಿಂತ ಬೇರೆಯಾದದ್ದು ಇಲ್ಲವೇ ಇಲ್ಲ. ಹೀಗಿರುವಲ್ಲಿ ಹೇತುಫಲಗಳೂ ಸಂಸಾರವೂ ಹುಟ್ಟುತ್ತವೆ ನಾಶವಾಗುತ್ತವೆ ಎಂದು ನೀನು ಹೇಳುತ್ತಿಯಲ್ಲ[2]! ಇದು ಹೇಗೆ (ಸರಿ) ?

(ಪರಿಹಾರ) :—(ಹೇಗೆಂದರೆ) ಕೇಳು :—

---

1. ಹೇತುಫಲಾಭಿಮಾನವೇ ಸಂಸಾರಕ್ಕೆ ಕಾರಣವಾದ್ದರಿಂದ ಅದಿಲ್ಲದಾಗ ಸಂಸಾರವೂ ಇರುವದಿಲ್ಲ ಎಂದರ್ಥ.

2. ಹೇತುಫಲಾಭಿಮಾನವು ಹೋದರೆ ಸಂಸಾರವು ಹೋಗುವದು ಎಂದದ್ದರಿಂದ ಇವೆರಡೂ ನಿಜವಾಗಿ ಇರುವವೆಂದಾಗಲಿಲ್ಲವೆ ? ಇದು ಸಿದ್ಧಾಂತಕ್ಕೆ ವಿರುದ್ಧವಲ್ಲವೆ ? ಎಂದು ಆಕ್ಷೇಪ.

**ಸಂವೃತ್ಯಾ ಜಾಯತೇ ಸರ್ವಂ ಶಾಶ್ವತಂ ನಾಸ್ತಿ ತೇನ ವೈ ।**
**ಸದ್ಭಾವೇನ ಹ್ಯಜಂ ಸರ್ವಮುಚ್ಛೇದಸ್ತೇನ ನಾಸ್ತಿ ವೈ ॥ ೫೭ ॥**

೫೭. ಸಂವೃತಿಯಿಂದ ಎಲ್ಲವೂ ಹುಟ್ಟುತ್ತದೆ; ಆದ್ದರಿಂದ ಶಾಶ್ವತವೆಂಬುದು ಇಲ್ಲವೇ ಇಲ್ಲ. ಸದ್ಭಾವದಿಂದ ಎಲ್ಲವೂ ಅಜವು; ಆದ್ದರಿಂದ ಉಚ್ಛೇದವು ಇಲ್ಲವೇ ಇಲ್ಲ.

(ಭಾಷ್ಯ)

೩೦೯. ಸಂವೃತ್ಯಾ ಸಂವರಣಂ ಸಂವೃತಿಃ ಅವಿದ್ಯಾವಿಷಯಃ ಲೌಕಿಕವ್ಯವಹಾರಃ । ತಯಾ ಸಂವೃತ್ಯಾ ಜಾಯತೇ ಸರ್ವಮ್ । ತೇನ ಅವಿದ್ಯಾವಿಷಯೇ **ಶಾಶ್ವತಂ** ನಿತ್ಯಂ **ನಾಸ್ತಿ ವೈ** । ಅತಃ ಉತ್ಪತ್ತಿವಿನಾಶಲಕ್ಷಣಃ ಸಂಸಾರಃ ಆಯತಃ ಇತಿ ಉಚ್ಯತೇ । ಪರಮಾರ್ಥ**ಸದ್ಭಾವೇನ** ತು[1] **ಅಜಂ ಸರ್ವಮ್** ಆತ್ಮೈವ ಯಸ್ಮಾತ್ ಅತಃ ಜಾತ್ಯಭಾವಾತ್ **ಉಚ್ಛೇದಃ ತೇನ ನಾಸ್ತಿ ವೈ** ಕಸ್ಯಚಿತ್ ಹೇತುಫಲಾದೇಃ ಇತ್ಯರ್ಥಃ ॥

(ಭಾಷ್ಯಾರ್ಥ)

ಸಂವೃತಿಯಿಂದ–**ಸಂವೃತಿ** ಎಂದರೆ ಸಂವರಣವು ಅವಿದ್ಯಾವಿಷಯವಾದ ಲೌಕಿಕವ್ಯವಹಾರವು; ಆ ಸಂವೃತಿ(ಯ ದೃಷ್ಟಿ)ಯಿಂದ–ಎಲ್ಲವೂ ಹುಟ್ಟುತ್ತದೆ. ಆದ್ದರಿಂದ ಅವಿದ್ಯಾ (ದೃಷ್ಟಿಯ) ವಿಷಯದಲ್ಲಿ **ಶಾಶ್ವತವಾದದ್ದು** ನಿತ್ಯವಾದದ್ದು ಇಲ್ಲವೇ ಇಲ್ಲ. ಆದ್ದರಿಂದ (ಈ ದೃಷ್ಟಿಯಲ್ಲಿ) ಹುಟ್ಟುವದು, ಸಾಯುವದು–ಎಂಬ ಸಂಸಾರವು ಆಯತ(ವಾಗಿರುವದು) ಎಂದು ಹೇಳಿರುತ್ತೇವೆ. ಆದರೆ ಪರಮಾರ್ಥವಾದ ಸದ್ಭಾವ(ದ ದೃಷ್ಟಿಯಿಂದ[2]) ಎಲ್ಲವೂ ಅಜವೇ, ಎಲ್ಲವೂ ಆತ್ಮನಾಗಿರುವದಷ್ಟೆ, ಆದ್ದರಿಂದ (ಆ ದೃಷ್ಟಿಯಲ್ಲಿ) ಹುಟ್ಟುವದೆಂಬುದೇ ಇಲ್ಲವಾದ್ದರಿಂದ ಹೇತು, ಫಲ–ಮುಂತಾದ ಯಾವದಕ್ಕೂ **ಉಚ್ಛೇದವು** (ನಾಶವು) ಇಲ್ಲವೇ ಇಲ್ಲ ಎಂದರ್ಥ.

---

1. ಕಾರಿಕೆಯಲ್ಲಿರುವ ಹಿ ಎಂಬುದಕ್ಕೆ ಇದು ಅರ್ಥ. ಅಥವಾ ಭಾಷ್ಯಕಾರರಂತೆ 'ಸದ್ಭಾವೇನ ತು' ಎಂದೇ ಪಾಠವೆಂದೂ ಕಲ್ಪಿಸಬಹುದು.

2. ನಿಜವಾಗಿ ಇರುವದನ್ನೇ ತಿಳಿಸುವ ಪರಮಾರ್ಥದೃಷ್ಟಿಯಿಂದ ಎಲ್ಲವೂ ಅಜನಾದ ಆತ್ಮನೇ; ಆದ್ದರಿಂದ ಆ ದೃಷ್ಟಿಯಲ್ಲಿ ಯಾವದೂ ಹುಟ್ಟುವದೇ ಇಲ್ಲ.

**ಧರ್ಮಾ ಯ ಇತಿ ಜಾಯನ್ತೇ ಜಾಯನ್ತೇ ತೇ ನ ತತ್ತ್ವತಃ ।**
**ಜನ್ಮ ಮಾಯೋಪಮಂ ತೇಷಾಂ ಸಾ ಚ ಮಾಯಾ ನ ವಿದ್ಯತೇ ॥ ೫೮ ॥**

೫೮. ಯಾವ ಧರ್ಮಗಳು ಹೀಗೆ ಹುಟ್ಟುವವೋ ಅವು ತತ್ತ್ವದಿಂದ ಹುಟ್ಟುವದಿಲ್ಲ. ಅವುಗಳ ಜನ್ಮವು ಮಾಯೋಪಮವು, ಆ ಮಾಯೆಯೇ ಇರುವದಿಲ್ಲ.

(ಭಾಷ್ಯ)

೩೧೦. ಯೇಽಪಿ ಆತ್ಮಾನಃ ಅನ್ಯೇ ಚ ಧರ್ಮಾಃ ಜಾಯನ್ತೇ ಇತಿ ಕಲ್ಪ್ಯನ್ತೇ ತೇ ಇತಿ ಏವಂಪ್ರಕಾರಾಃ । ಯಥೋಕ್ತಾ ಸಂವೃತಿಃ ನಿರ್ದಿಶ್ಯತೇ 'ಇತಿ' ಇತಿ[1] । ಸಂವೃತ್ಯೈವ ಧರ್ಮಾ ಜಾಯನ್ತೇ । ನ ತೇ ತತ್ತ್ವತಃ ಪರಮಾರ್ಥತಃ ಜಾಯನ್ತೇ । ಯತ್ ಪುನಃ ಸಂವೃತ್ಯಾ ಜನ್ಮ ತೇಷಾಂ ಧರ್ಮಾಣಾಂ ಯಥೋಕ್ತಾನಾಂ ಯಥಾ ಮಾಯಯಾ ಜನ್ಮ ತಥಾ ತತ್ ಮಾಯೋಪಮಂ ಪ್ರತ್ಯೇತವ್ಯಮ್। ಮಾಯಾ ನಾಮ ವಸ್ತು ತರ್ಹಿ ? ನೈವಮ್ । ಸಾ ಚ ಮಾಯಾ ನ ವಿದ್ಯತೇ । ಮಾಯಾ ಇತಿ ಅವಿದ್ಯಮಾನಸ್ಯ ಆಖ್ಯಾ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಇನ್ನು ಧರ್ಮಗಳು ಎಂದರೆ ಆತ್ಮರು ಮತ್ತು ಮಿಕ್ಕವೂ[2] ಹುಟ್ಟುವವೆಂದು ಕಲ್ಪಿಸುತ್ತಾರಲ್ಲ, ಅವುಗಳು ಹೀಗೆ (ಇತಿ) ಈ ಪ್ರಕಾರವಾಗಿ[3] (ಹುಟ್ಟುತ್ತವೆ). ಮೇಲೆ ಹೇಳಿದ ಸಂವೃತಿಯನ್ನೇ 'ಇತಿ' (ಹೀಗೆ) ಎಂಬ (ಮಾತಿನಿಂದ) ತೋರಿಸಿರುತ್ತದೆ. ಸಂವೃತಿಯಿಂದಲೇ ಧರ್ಮಗಳು ಹುಟ್ಟುವವು, ಅವು ತತ್ತ್ವದಿಂದ ಪರಮಾರ್ಥವಾಗಿ ಹುಟ್ಟುವದಿಲ್ಲ (ಎಂದು ಅಭಿಪ್ರಾಯ). ಇನ್ನು ಮೇಲೆ ಹೇಳಿದ ಆ **ಧರ್ಮಗಳಿಗೆ ಸಂವೃತಿಯಿಂದಾಗುವ ಜನ್ಮವಿದೆಯಲ್ಲ, ಅದು ಮಾಯೋಪಮವು, ಮಾಯೆಯಿಂದಾಗುವ ಜನ್ಮವು ಹೇಗೋ ಹಾಗೆ ಎಂದು ತಿಳಿಯಬೇಕು[4].**

---

1. ಒಂದು 'ಇತಿ'ಯು ಲೇಖಕರ ಕೈತಪ್ಪಿನಿಂದ ಬಿಟ್ಟುಹೋಗಿದೆ ಎಂದು ಕಲ್ಪಿಸಲಾಗಿದೆ.

2. 'ಧರ್ಮಾಃ' ಎಂಬ ಮಾತಿಗೆ ಆತ್ಮರು ಮತ್ತು ಬಾಹ್ಯವಸ್ತುಗಳು ಎಂದು ಎರಡು ಅರ್ಥವೂ ಉಂಟು. ೧, ೬, ೧೦, ೨೧, ೫೪-ಮುಂತಾದ ಕಾರಿಕೆಗಳಲ್ಲಿ ಇದು ಸ್ಪಷ್ಟವಾಗಿದೆ.

3. ಮಾಯೆಯಿಂದಲೇ.

4. ಮಾಯೆಯಿಂದ ಹುಟ್ಟುವ ವಸ್ತು ಹೇಗೆ ನಿಜವಲ್ಲವೋ ಹಾಗೆ ಎಂದು ತಿಳಿಯಬೇಕು.

(ಪ್ರಶ್ನೆ) ಹಾಗಾದರೆ ಮಾಯೆಯೆಂದರೆ (ನಿಜವಾಗಿರುವ) ವಸ್ತುವಷ್ಟೆ?

(ಉತ್ತರ):—ಹಾಗಲ್ಲ, **ಆ ಮಾಯೆಯೂ ಇರುವದಿಲ್ಲ. ಮಾಯೆಯೆಂಬುದು ಇಲ್ಲದ್ದರ ಹೆಸರು ಎಂದರ್ಥ**[1].

(ಭಾಷ್ಯ)

೩೧೧. ಕಥಂ ಮಾಯೋಪಮಂ ತೇಷಾಂ ಧರ್ಮಾಣಾಂ ಜನ್ಮ ಇತಿ? ಆಹ—

(ಭಾಷ್ಯಾರ್ಥ)

ಆ ಧರ್ಮಗಳು ಹುಟ್ಟುವದು ಮಾಯೋಪಮವೆಂಬುದು ಹೇಗೆ? ಎಂದರೆ ಹೇಳುತ್ತಾರೆ:—

**ಯಥಾ ಮಾಯಾಮಯಾದ್ ಬೀಜಾಜ್ಜಾಯತೇ, ತನ್ಮಯೋಽಙ್ಕುರಃ।**
**ನಾಸೌ ನಿತ್ಯೋ ನ ಚೋಚ್ಛೇದೀ ತದ್ವದ್ಧರ್ಮೇಷು ಯೋಜನಾ॥೫೯॥**

೫೯. ಮಾಯಾಮಯವಾದ ಬೀಜದಿಂದ ತನ್ಮಯವಾದ ಅಂಕುರವು ಹೇಗೆ ಹುಟ್ಟುವದೋ, ಹೇಗೆ ಅದು ನಿತ್ಯವೂ ಅಲ್ಲ, ನಾಶವಾಗತಕ್ಕದ್ದೂ ಅಲ್ಲವೋ, ಅದರಂತೆ ಧರ್ಮಗಳಲ್ಲಿಯೂ ಯೋಜನೆ.

(ಭಾಷ್ಯ)

೩೧೨. ಯಥಾ ಮಾಯಾಮಯಾತ್ ಆಮ್ರಾದಿಬೀಜಾತ್ ಜಾಯತೇ ತನ್ಮಯಃ ಮಾಯಾಮಯಃ ಅಙ್ಕುರಃ । ನಾಸೌ ಅಙ್ಕುರಃ ನಿತ್ಯಃ ನ ಚ ಉಚ್ಛೇದೀ ವಿನಾಶೀ ವಾ । ಅಭೂತತ್ವಾತ್ ತದ್ವದೇವ[2] ಧರ್ಮೇಷು ಜನ್ಮನಾಶಾದಿಯೋಜನಾ ಯುಕ್ತಿಃ । ನ ತು ಪರಮಾರ್ಥತಃ ಧರ್ಮಾಣಾಂ ಜನ್ಮ ನಾಶೋ ವಾ ಯುಜ್ಯತೇ ಇತ್ಯರ್ಥಃ ॥

(ಭಾಷ್ಯಾರ್ಥ)

ಹೇಗೆ ಮಾಯಾಮಯವಾದ ಮಾವು ಮುಂತಾದ ಬೀಜದಿಂದ ತನ್ಮಯವಾದ ಮಾಯಾಮಯವಾದ ಮೊಳಕೆಯು ಹುಟ್ಟುವದೋ ಹಾಗೆ ಆ ಮೊಳಕೆಯು (ನಿಜ

1. ಮಾಯೆಯಿಂದ ಹುಟ್ಟುವವೆಂದರೆ ಹುಟ್ಟಿದಂತೆ ತೋರುವವೆಂದು ಅರ್ಥ. ನಿಜವಾದ ಹುಟ್ಟಾಗಲಿ ಅದಕ್ಕೆ ಕಾರಣವಾದ ಮಾಯೆಯಾಗಲಿ ಇರುವದಿಲ್ಲ.
2. 'ಅಭೂತತ್ವಾದೇವ' ಕಾ॥ ವಾ॥

ವಾಗಿ) ಇರುವವಲ್ಲವಾದ್ದರಿಂದ ನಿತ್ಯವೂ ಅಲ್ಲ ನಾಶವಾಗತಕ್ಕದ್ದೂ ಅಲ್ಲವೋ ಅವರಂತೆ[1] ಧರ್ಮಗಳಲ್ಲಿ ಹುಟ್ಟು, ಹೊಂದು–ಮುಂತಾದವುಗಳ ಯೋಜನೆ ಸಂಬಂಧವು (ಇರುವದು)[2]. ಆದರೆ ಪರಮಾರ್ಥವಾಗಿಯೂ ಧರ್ಮಗಳ ಜನ್ಮವಾಗಲಿ ನಾಶವಾಗಲಿ (ಆಗುವದೆಂಬುದು) ಹೊಂದುವದಿಲ್ಲ.

**ನಾಜೇಷು ಸರ್ವಧರ್ಮೇಷು ಶಾಶ್ವತಾಶ್ವತಾಭಿದಾ ।**
**ಯತ್ರ ವರ್ಣಾ ನ ವರ್ತನ್ತೇ ವಿವೇಕಸ್ತತ್ರ ನೋಚ್ಯತೇ ॥ ೬೦ ॥**

೬೦. ಅಜರಾದ ಯಾವ ಧರ್ಮರುಗಳಲ್ಲಿಯೂ ಶಾಶ್ವತ, ಅಶಾಶ್ವತ ಎಂಬ ಮಾತಿಲ್ಲ. ಎಲ್ಲಿ ವರ್ಣಗಳು ಇರುವದಿಲ್ಲವೋ, ಅಲ್ಲಿ ವಿವೇಕ ವನ್ನು ಹೇಳುವದಿಲ್ಲ.

(ಭಾಷ್ಯ)

೬೦. ಪರಮಾರ್ಥತಸ್ತು ಆತ್ಮಸು, ಅಜೇಷು ನಿತ್ಯೈಕರಸವಿಜ್ಞಪ್ತಿಮಾತ್ರಸತ್ತಾಕೇಷು ಸರ್ವಧರ್ಮೇಷು ಶಾಶ್ವತಃ ಅಶಾಶ್ವತಃ ಇತಿ ವಾ ನ ಅಭಿಧಾ ನಾಭಿಧಾನಂ ಪ್ರವರ್ತತೇ ಇತ್ಯರ್ಥಃ । ಯತ್ರ ಯೇಷು ವರ್ಣ್ಯನ್ತೇ ಯೈಃ ಅರ್ಥಾಃ ತೇ ವರ್ಣಾಃ ಶಬ್ದಾಃ ನ ವರ್ತನ್ತೇ, ಅಭಿಧಾತುಂ ಪ್ರಕಾಶಯಿತುಂ ನ ಪ್ರವರ್ತನ್ತೇ ಇತ್ಯರ್ಥಃ । 'ಇದಮ್ ಏವಮ್' ಇತಿ ವಿವೇಕಃ ವಿವಿಕ್ತತಾ ತತ್ರ ನಿತ್ಯಃ ಅನಿತ್ಯಃ ಇತಿ ನ ಉಚ್ಯತೇ । "ಯತೋ ವಾಚೋ ನಿವರ್ತನ್ತೇ" (ತೈ. ೨–೯) ಇತಿ ಶ್ರುತೇಃ ॥

(ಭಾಷ್ಯಾರ್ಥ)

ಆದರೆ ಪರಮಾರ್ಥವಾಗಿ (ನೋಡಿದರೋ)[3] ಅಜರಾದ ಯಾವಾಗಲೂ ಒಂದೇ ರೂಪದಲ್ಲಿರುವ ಬರಿಯ ಚೈತನ್ಯವೆಂಬ ಇರವುಳ್ಳ ಯಾವ ಧರ್ಮಗಳಲ್ಲಿಯೂ

1. ಮಾಯೆಯು ಮಾವು ವ್ಯವಹಾರದ ಮಾವಿನಂತೆ ನಿಜವಲ್ಲ; ಆದ್ದರಿಂದ ಅದನ್ನು ನಿತ್ಯವೆಂದಾಗಲಿ ಅನಿತ್ಯವೆಂದಾಗಲಿ ಕರೆಯುವದಕ್ಕೆ ಬರುವದಿಲ್ಲ. ಇದರಂತೆ ವ್ಯವಹಾರದಲ್ಲಿ ಹುಟ್ಟುವ ವಸ್ತುಗಳೂ ಪರಮಾರ್ಥದೃಷ್ಟಿಯಿಂದ ನೋಡಿದಾಗ ನಿಜವಾಗಿರುವದಿಲ್ಲವಾಗಿ ಅವಕ್ಕೂ ನಿಜವಾದ ಜನ್ಮನಾಶಗಳಿಲ್ಲ–ಎಂದು ಭಾವ.

2. ಈ ಮಾತು ಇಲ್ಲಿರಬೇಕು ಅಚ್ಚಿನ ಪುಸ್ತಕಗಳಲ್ಲಿಲ್ಲ.

3. ಹಿಂದಿನ ಕಾರಿಕೆಯಲ್ಲಿ ವ್ಯವಹಾರದೃಷ್ಟಿಯಿಂದ ಮಾಯಿಕವಾಗಿ ಹುಟ್ಟುವ ದೆಂಬುದು ಮಾಯಿಕವೆಂದು ಹೇಳಿದ್ದಾಗಿದೆ. ಈಗ ಪರಮಾರ್ಥದೃಷ್ಟಿಯಿಂದ ನೋಡಿದರೆ ಎಲ್ಲವೂ ಆತ್ಮನೇ ಆಗಿದೆ ಎಂದು ಹೇಳಿದೆ. ಈ ಎರಡು ಸಂದರ್ಭಗಳಲ್ಲಿಯೂ ನಿತ್ಯಾನಿತ್ಯ ವಿಭಾಗವು ನಿಜವಾಗಿರುವದಿಲ್ಲ.

(ಯಾವ) ಆತ್ಮರುಗಳಲ್ಲಿಯೂ ಶಾಶ್ವತ (ಅಥವಾ) ಅಶಾಶ್ವತ ಎಂಬ ಮಾತು ಇರುವದಿಲ್ಲ, (ಅಲ್ಲಿ ಈ) ಮಾತು(ಹೇಳುವದಕ್ಕೆ) ಹೊರಡುವದಿಲ್ಲ[1] ಎಂದರ್ಥ. ಎಲ್ಲಿ ಯಾವ (ಧರ್ಮರು)ಗಳಲ್ಲಿ ವರ್ಣಗಳು—ಯಾವವುಗಳಿಂದ ಅರ್ಥಗಳು ವರ್ಣಿಸಲ್ಪಡುವವೋ, ಅವು ವರ್ಣಗಳು—ಶಬ್ದಗಳು ; (ಅವು)—ಇರುವದಿಲ್ಲವೋ, ತಿಳಿಸುವದಕ್ಕೆ, ಬೆಳಗುವದಕ್ಕೆ ಹೊರಡುವದಿಲ್ಲವೋ ಎಂದರ್ಥ. 'ಇದು ಹೀಗೆ' ಎಂಬ ವಿವೇಕವು ನಿತ್ಯ (ಅಥವಾ) ಅನಿತ್ಯ ಎಂದು ವಿಂಗಡಿಸುವದು, ಅಲ್ಲಿ ಹೇಳಲ್ಪಡುವದಿಲ್ಲ[2]. "ಯಾವದನ್ನು (ಬಿಟ್ಟು) ವಾಕ್ಕುಗಳು ಹಿಂತಿರುಗುವವೋ" (ತೈ. ೨-೯) ಎಂಬ ಶ್ರುತಿಯು (ಇದಕ್ಕೆ ಪ್ರಮಾಣವು).

## ದ್ವೈತವೆಲ್ಲವೂ ಚಿತ್ತದ ಅಲುಗಾಟ

**ಯಥಾ ಸ್ವಪ್ನೇ ದ್ವಯಾಭಾಸಂ ಚಿತ್ತಂ ಚಲತಿ ಮಾಯಯಾ ।**
**ತಥಾ ಜಾಗ್ರದ್ ದ್ವಯಾಭಾಸಂ ಚಿತ್ತಂ ಚಲತಿ ಮಾಯಯಾ ॥ ೬೧ ॥**
**ಅದ್ವಯಂ ಚ ದ್ವಯಾಭಾಸಂ ಚಿತ್ತಂ ಸ್ವಪ್ನೇ ನ ಸಂಶಯಃ ।**
**ಅದ್ವಯಂ ಚ ದ್ವಯಾಭಾಸಂ ತಥಾ ಜಾಗ್ರನ್ನ ಸಂಶಯಃ ॥ ೬೨ ॥**

೬೧-೬೨. ಹೇಗೆ ಕನಸಿನಲ್ಲಿ ಚಿತ್ತವು ದ್ವೈತದಂತೆ ಮಾಯೆಯಿಂದ ಅಲುಗಾಡುತ್ತಿರುವದೋ, ಅದರಂತೆ ಎಚ್ಚರದಲ್ಲಿ ಚಿತ್ತವು ದ್ವೈತದಂತೆ ಮಾಯೆಯಿಂದ ಅಲುಗಾಡುತ್ತಿರುವದು. ಚಿತ್ತವು ಕನಸಿನಲ್ಲಿ (ತಾನು) ಅದ್ವಯವಾಗಿಯೇ ಇದ್ದು ದ್ವೈತದಂತೆ ತೋರುತ್ತಿರುವದೆಂಬುದಕ್ಕೆ ಸಂಶಯವಿಲ್ಲ ; ಹಾಗೆಯೇ ಎಚ್ಚರದಲ್ಲಿಯೂ ತಾನು ಅದ್ವಯವಾಗಿಯೇ ಇದ್ದು ದ್ವೈತವಾಗಿಯೇ ಇರುವಂತೆ ತೋರುತ್ತಿರುವದೆಂಬುದಕ್ಕೆ ಸಂಶಯವಿಲ್ಲ.

**(ಭಾಷ್ಯ)**

೩೧೪. ಯತ್ ಪುನಃ ವಾಗ್ಗೋಚರತ್ವಂ ಪರಮಾರ್ಥತಃ ಅದ್ವಯಸ್ಯ ವಿಜ್ಞಾನಮಾತ್ರಸ್ಯ ತತ್ ಮನಸಃ ಸ್ಪನ್ದನಮಾತ್ರಮ್ ನ ಪರಮಾರ್ಥತಃ ಇತಿ । ಉಕ್ತಾರ್ಥೌ ಶ್ಲೋಕೌ ॥

---

1. ಜಾತಿ, ಗುಣ, ಕ್ರಿಯೆ ಮುಂತಾದವುಗಳು ಇಲ್ಲದ್ದರಿಂದ ಆತ್ಮರನ್ನು ಶಬ್ದವು ಹೇಳಲಾರದು.

2. ಹೇಳುವದಕ್ಕಾಗುವದಿಲ್ಲ. ಏಕೆಂದರೆ ನಿತ್ಯಾನಿತ್ಯವಿವೇಕವು ಶಬ್ದಗೋಚರ ವಸ್ತುಗಳಲ್ಲಿ ಮಾತ್ರ ಸಾಧ್ಯ.

(ಭಾಷ್ಯಾರ್ಥ)

ಆದರೆ ನಿಜವಾಗಿ ಎರಡನೆಯದಿಲ್ಲದ ಚೈತನ್ಯಮಾತ್ರವಾಗಿರುವ (ಆತ್ಮ ವಸ್ತುವು) ಮಾತಿಗೆ ಗೋಚರವಾಗಿರುವದಿಲ್ಲ, ಅದು ಮನಸ್ಸಿನ ಆಟಲುಗಾಟವೇ ಹೊರತು ನಿಜವಾಗಿಯೂ (ಹಾಗಿರು)ವದಲ್ಲ[1]; ಈ ಎರಡು ಶ್ಲೋಕಗಳಿಗೂ (ಹಿಂದೆ[2]) ಅರ್ಥವನ್ನು ಹೇಳಿರುತ್ತದೆ.

(ಭಾಷ್ಯ)

೩೧೫. ಇತಶ್ಚ ವಾಗ್ಗೋಚರಸ್ಯ ಅಭಾವೋ ದ್ವೈತಸ್ಯ—

(ಭಾಷ್ಯಾರ್ಥ)

ಮಾತಿಗೆ ವಿಷಯವಾಗಿರುವ ದ್ವೈತವು ಈ ಕಾರಣದಿಂದಲೂ (ನಿಜವಾಗಿ) ಇರುವದಿಲ್ಲ ;—

**ಸ್ವಪ್ನದೃಕ್ ಪ್ರಚರನ್ ಸ್ವಪ್ನೇ ದಿಕ್ಷು ವೈ ದಶಸು ಸ್ಥಿತಾನ್ ।**
**ಅಣ್ಡಜಾನ್ ಸ್ವೇದಜಾನ್ ವಾಪಿ ಜೀವಾನ್ ಪಶ್ಯತಿ ಯಾನ್ ಸದಾ ॥**

**ಸ್ವಪ್ನದೃಕ್ಚಿತ್ತದೃಶ್ಯಾಸ್ತೇ ನ ವಿದ್ಯನ್ತೇ ತತಃ ಪೃಥಕ್ ।**
**ತಥಾ ತದ್ದೃಶ್ಯಮೇವೇದಂ ಸ್ವಪ್ನದೃಕ್ಚಿತ್ತಮಿಷ್ಯತೇ ॥ ೬೪ ॥**

೬೩-೬೪. ಸ್ವಪ್ನದರ್ಶಿಯು ಕನಸಿನಲ್ಲಿ ಓಡಾಡುತ್ತಾ ಹತ್ತುದಿಕ್ಕುಗಳಲ್ಲಿಯೂ ಇರುವ ಅಂಡಜಗಳನ್ನಾಗಲಿ ಸ್ವೇದಜಗಳನ್ನಾಗಲಿ ಯಾವ ಜೀವರುಗಳನ್ನು ಯಾವಾಗಲೂ ನೋಡುತ್ತಿರುವನೋ ಅವು ಸ್ವಪ್ನದೃಕ್ಚಿತ್ತ ದೃಶ್ಯಗಳಾಗಿರುತ್ತವೆ. ಅದಕ್ಕಿಂತ ಬೇರೆಯಾಗಿರುವದಿಲ್ಲ. ಹಾಗೆಯೇ ಈ ಸ್ವಪ್ನದೃಕ್ಚಿತ್ತವೂ ತದ್ದೃಶ್ಯವೇ ಎನಿಸುತ್ತದೆ.

(ಭಾಷ್ಯ)

೩೧೬. ಸ್ವಪ್ನಾನ್ ಪಶ್ಯತಿ ಇತಿ ಸ್ವಪ್ನದೃಕ್ ಪ್ರಚರನ್ ಪರ್ಯಟನ್ ಸ್ವಪ್ನೇ ಸ್ವಪ್ನಸ್ಥಾನೇ ದಿಕ್ಷು ವೈ ದಶಸು ಸ್ಥಿತಾನ್ ವರ್ತಮಾನಾನ್ ಜೀವಾನ್

1. ಆತ್ಮನಲ್ಲಿ ಹುಟ್ಟುಗಟ್ಟಿದ ತೋರಿಕೆಯೇ, ನಿಜವಾಗಿರುವದಲ್ಲ-ಎಂದರ್ಥ.

2. ೩-೨೯, ೩೦ನೆಯ ಕಾರಿಕೆಗಳಲ್ಲಿ.

ಪ್ರಾಣಿನಃ ಅಣ್ಡಜಾನ್ ಸ್ವೇದಜಾನ್ ವಾ ಯಾನ್ ಸದಾ ಪಶ್ಯತಿ ಇತಿ ॥ (೬೩) ಯದ್ಯೇವಮ್ ತತಃ ಕಿಮ್ ? ಉಚ್ಯತೇ । ಸ್ವಪ್ನದೃಶಃ ಚಿತ್ತಮ್ ಸ್ವಪ್ನದೃಕ್ಚಿತ್ತಮ್ । ತೇನ ದೃಶ್ಯಾಃ ತೇ ಜೀವಾಃ । ತತಃ ತಸ್ಮಾತ್ ಸ್ವಪ್ನದೃಕ್ಚಿತ್ತಾತ್ ಪೃಥಕ್ ನ ವಿದ್ಯನ್ತೇ ನ ಸನ್ತಿ ಇತ್ಯರ್ಥಃ । ಚಿತ್ತಮೇವ ಹಿ ಅನೇಕಜೀವಾದಿಭೇದಾಕಾರೇಣ ವಿಕಲ್ಪ್ಯತೇ । ತಥಾ ತದಪಿ ಸ್ವಪ್ನದೃಕ್ಚಿತ್ತಮ್ ಇದಂ ತದ್ದೃಶ್ಯಮೇವ ತೇನ ಸ್ವಪ್ನದೃಶಾ ದೃಶ್ಯಂ ತದ್ದೃಶ್ಯಮ್ । ಅತಃ ಸ್ವಪ್ನದೃಗ್ವ್ಯತಿರೇಕೇಣ ಚಿತ್ತಂ ನಾಮ ನಾಸ್ತಿ ಇತ್ಯರ್ಥಃ ॥

(ಭಾಷ್ಯಾರ್ಥ)

ಕನಸುಗಳನ್ನು ಕಾಣುತ್ತಾನಾದ್ದರಿಂದ ಸ್ವಪ್ನದರ್ಶಿ (ಯೆನಿಸುವನು. ಅವನು) ಸ್ವಪ್ನದಲ್ಲಿ ಕನಸೆಂಬ ಅವಸ್ಥೆಯಲ್ಲಿ ಓಡಾಡುತ್ತಾ ತಿರುಗಾಡುತ್ತಾ ಹತ್ತು ದಿಕ್ಕುಗಳಲ್ಲಿಯೂ ಇರುವವಲ್ಲ ಇದ್ದುಕೊಂಡಿರುವವಲ್ಲ, (ಅಂಥ) ಅಂಡಜಗಳನ್ನಾಗಲಿ ಸ್ವೇದಜಗಳನ್ನಾಗಲಿ ಯಾವ ಜೀವರುಗಳನ್ನು ಪ್ರಾಣಿಗಳನ್ನು ಯಾವಾಗಲೂ ನೋಡುತ್ತಿರುವನೋ—(೬೩).

(ಪ್ರಶ್ನೆ) :—ಆಗಲಿ, ಅದರಿಂದೇನು ?

(ಉತ್ತರ) :—ಹೇಳುತ್ತೇವೆ. ಕನಸನ್ನು ಕಾಣುವವನ ಚಿತ್ತವು ಸ್ವಪ್ನದೃಕ್ಚಿತ್ತವು. ಅದಕ್ಕೆ ಆ ಜೀವರುಗಳು ಕಾಣಿಸುವವೇ ಹೊರತು, ಆದ್ದರಿಂದ ಆ ಸ್ವಪ್ನದೃಕ್ಚಿತ್ತಕ್ಕಿಂತ ಬೇರೆಯಾಗಿ ಇರುವದಿಲ್ಲ. (ತಾವೇ) ಇರುವದಿಲ್ಲ ಎಂದರ್ಥ. ಚಿತ್ತವೇ ಅಲ್ಲವೆ, ಅನೇಕ ಜೀವರೇ ಮುಂತಾದ ಭೇದಗಳ ಆಕಾರದಿಂದ (ಅಲ್ಲಿ) ವಿಕಲ್ಪಿತವಾಗಿರುವದು ?[1] ಹಾಗೆಯೇ ಆ ಸ್ವಪ್ನದೃಕ್ಚಿತ್ತವುಕೂಡ ತದ್ದೃಶ್ಯವೇ, ಆ ಕನಸುಕಾಣುವವನಿಗೆ ಕಾಣಿಸುವದರಿಂದ ತದ್ದೃಶ್ಯವೇ. ಆದ್ದರಿಂದ **ಕನಸು ಕಾಣುವವನಿಗಿಂತ ಬೇರೆಯಾಗಿ ಚಿತ್ತವೆಂಬ (ಪದಾರ್ಥವೇ) ಇಲ್ಲ ಎಂದರ್ಥ**[2].

---

1. ಕನಸಿನಲ್ಲಿ ಚಿತ್ತವೊಂದೇ ಬಗೆಬಗೆಯ ಜೀವರುಗಳಾಗಿಯೂ ಮಿಕ್ಕ ವಸ್ತುಗಳಾಗಿಯೂ ಕಾಣುವವೆಂಬುದು ಎಚ್ಚರದ ದೃಷ್ಟಿಯಿಂದ ಸಿದ್ಧವಾಗಿರುತ್ತದೆ.

2. ಇರವಿನ ರಾಶಿಯನ್ನು ದೃಕ್ಕು, ದೃಶ್ಯ–ಎಂದು ಎರಡು ಭಾಗವಾಗಿ ವಿಂಗಡಿಸುವದಾದರೆ ದೃಕ್ಕಿಗಿಂತ (ನೋಡುವವನಿಗಿಂತ) ದೃಶ್ಯವು (ನೋಡಲ್ಪಡತಕ್ಕದ್ದು) ಇರುವದಿಲ್ಲ; ಅದಕ್ಕೆ ಅಧೀನವಾಗಿಯೇ ಇರುತ್ತದೆ. ಚಿತ್ತವು ಆತ್ಮನಿಗೆ ದೃಶ್ಯವಾಗಿರುವದರಿಂದ ಅದು ಆತ್ಮನಿಗಿಂತ ಬೇರೆಯಾಗಿರುವದಿಲ್ಲವೆಂದಾಗುತ್ತದೆ.

**ಚರಞ್ಜಾಗರಿತೇ ಜಾಗ್ರದ್ದಿಕ್ಷು ವೈ ದಶಸು ಸ್ಥಿತಾನ್ ।**
**ಅಣ್ಡಜಾನ್ ಸ್ವೇದಜಾನ್ ವಾಪಿ ಜೀವಾನ್ ಪಶ್ಯತಿ ಯಾನ್ ಸದಾ ॥೬೫॥**

**ಜಾಗ್ರಚ್ಚಿತ್ತೇಕ್ಷಣೀಯಾಸ್ತೇ ನ ವಿದ್ಯನ್ತೇ ತತಃ ಪೃಥಕ್ ।**
**ತಥಾ ತದ್ದೃಶ್ಯಮೇವೇದಂ ಜಾಗ್ರತಶ್ಚಿತ್ತಮಿಷ್ಯತೇ ॥ ೬೬ ॥**

೬೫-೬೬. ಎಚ್ಚರದಲ್ಲಿ ಓಡಾಡುತ್ತಾ ಎಚ್ಚರವಾಗಿರುವವನು ಹತ್ತು ದಿಕ್ಕುಗಳಲ್ಲಿರುವ ಅಂಡಜಗಳನ್ನಾಗಲಿ ಸ್ವೇದಜಗಳನ್ನಾಗಲಿ ಯಾವ ಜೀವರುಗಳನ್ನು ಯಾವಾಗಲೂ ಕಾಣುತ್ತಿರುವನೋ ಅವು ಎಚ್ಚತ್ತಿರುವವನ ಚಿತ್ತಕ್ಕೆ ಕಾಣಿಸುವವಾಗಿರುವವು. ಅವಕ್ಕಿಂತ ಬೇರೆಯಾಗಿರುವದಿಲ್ಲ. ಹಾಗೆಯೇ ಈ ಎಚ್ಚತ್ತವನ ಚಿತ್ತವೂ ಅವನಿಗೆ ಕಾಣಿಸುವದೇ ಎನಿಸುತ್ತದೆ.

(ಭಾಷ್ಯ)

೩೧೭. ಜಾಗ್ರತೋ ದೃಶ್ಯಾ ಜೀವಾಃ ತಚ್ಚಿತ್ತಾವ್ಯತಿರಿಕ್ತಾಃ । ಚಿತ್ತೇಕ್ಷಣೀಯತ್ವಾತ್, ಸ್ವಪ್ನದೃಕ್ಚಿತ್ತೇಕ್ಷಣೀಯಜೀವವತ್ । ತಚ್ಚ ಜೀವೇಕ್ಷಣಾತ್ಮಕಮ್ ಚಿತ್ತಂ ದ್ರಷ್ಟುರವ್ಯತಿರಿಕ್ತಮ್ । ದೃಶ್ಯತ್ವಾತ್ । ಸ್ವಪ್ನಚಿತ್ತವತ್ । ಉಕ್ತಾರ್ಥಮ್ ಅನ್ಯತ್ ॥

(ಭಾಷ್ಯಾರ್ಥ)

**ಎಚ್ಚರವಾಗಿರುವವನಿಗೆ ಕಾಣುವ ಜೀವರು ಅವನ ಚಿತ್ತಕ್ಕಿಂತ ಬೇರೆಯಾಗಿರುವದಿಲ್ಲ ; ಏಕೆಂದರೆ ಅವರು ಕನಸುಕಾಣುವವನ ಚಿತ್ತಕ್ಕೆ ಕಾಣುವ ಜೀವರುಗಳಂತೆಯೇ ಚಿತ್ತಕ್ಕೆ ಕಾಣುವರಾಗಿರುತ್ತಾರೆ[1]. ಮತ್ತು ಜೀವರನ್ನು ನೋಡುವ ಸ್ವರೂಪದಲ್ಲಿರುವ ಚಿತ್ತವು[2] ಕೂಡ ನೋಡುವ ಆತ್ಮನಿಗಿಂತ**

---

1. ಎಷ್ಟು ಕನಸುಗಳಾಗುವವೋ ಅಷ್ಟು ಚಿತ್ತಗಳಿರುವವು, ಆದ್ದರಿಂದ ಚಿತ್ತದೃಶ್ಯವಾದದ್ದು ಚಿತ್ತಕ್ಕಿಂತ ಬೇರೆಯಿರುವದಿಲ್ಲ ಎಂಬ ವ್ಯಾಪ್ತಿಯು ಏರ್ಪಡುತ್ತದೆ. ಇಲ್ಲಿ ಕನಸಿನ ಚಿತ್ತವನ್ನು ದೃಷ್ಟಾಂತವಾಗಿ ತೆಗೆದುಕೊಂಡಿರುವದರಿಂದ ಎರಡವಸ್ಥೆಗಳಿಗೂ ಬೇರೆ ಬೇರೆಯ ಚಿತ್ತಗಳಿರುವವೆಂದು ಸೂಚಿತವಾಗಿದೆ. ಇಲ್ಲಿರುವ ಯುಕ್ತಿಯು ಸೂ. ಭಾ. ೨-೨-೨೮ ಕ್ಕೆ ವಿರುದ್ಧವೆ ?-ಎಂಬ ವಿಷಯಕ್ಕೆ ಪೀಠಿಕೆಯನ್ನು ನೋಡಿ.

2. ಚಿತ್ತವೆಂದರೆ ವಿಷಯಗಳ ಅರಿವು. ಅರಿವು ಆತ್ಮಚೈತನ್ಯವೇ.

**ಬೇರೆಯಾಗಿರುವದಿಲ್ಲ. ಏಕೆಂದರೆ ಅದು ಕನಸಿನ ಚಿತ್ತದಂತೆ[1] ನೋಡುವ (ಆತ್ಮನಿಗೇ) ಕಾಣಿಸುವದಾಗಿರುತ್ತದೆ.** ಉಳಿದವುಗಳ ಅರ್ಥವನ್ನು ಹಿಂದೆಯೇ ಹೇಳಿರುತ್ತದೆ[2].

**ಉಭೇ ಹ್ಯನ್ಯೋನ್ಯದೃಶ್ಯೇ ತೇ ಕಿಂ ತದಸ್ತೀತಿ ನೋಚ್ಯತೇ ।**
**ಲಕ್ಷಣಾಶೂನ್ಯಮುಭಯಂ ತನ್ಮತೇನೈವ ಗೃಹ್ಯತೇ ॥ ೬೭ ॥**

೬೭. ಅವೆರಡೂ ಅನ್ಯೋನ್ಯದೃಶ್ಯಗಳೇ ಆಗಿರುವವು. ಇರುವದು ಯಾವದು?–ಎಂಬುದನ್ನು ಹೇಳುವದಿಲ್ಲ. ಎರಡೂ ಲಕ್ಷಣಾಶೂನ್ಯವು, ತನ್ಮತದಿಂದಲೇ ಅರಿಯಲ್ಪಡುತ್ತದೆ.

(ಭಾಷ್ಯ)

೩೧೮. ಜೀವಚಿತ್ತೇ ಉಭೇ ಚಿತ್ತಚೈತ್ಯೇ ತೇ ಅನ್ಯೋನ್ಯದೃಶ್ಯೇ ಇತರೇತರಗಮ್ಯೇ । ಜೀವಾದಿವಿಷಯಾಪೇಕ್ಷಂ ಹಿ ಚಿತ್ತಂ ನಾಮ ಭವತಿ । ಚಿತ್ತಂ ವಾ ಚಿತ್ತೇಕ್ಷಣೀಯಂ ವಾ ಚಿತ್ತಾಪೇಕ್ಷಂ ಹಿ ಜೀವಾದಿದೃಶ್ಯಮ್ । ಅತಃ ತೇ ಅನ್ಯೋನ್ಯದೃಶ್ಯೇ । ತಸ್ಮಾತ್ ನ ಕಿಂಚಿತ್ ಅಸ್ತೀತಿ ಚೋಚ್ಯತೇ ಕಿಂ ತದಸ್ತೀತಿ ವಿವೇಕಿನಾ ನೋಚ್ಯತೇ[4]। ನ ಹಿ ಸ್ವಪ್ನೇ ಹಸ್ತೀ ಹಸ್ತಿಚಿತ್ತಂ ವಾ ವಿದ್ಯತೇ। ತಥಾ ಇಹಾಪಿ ವಿವೇಕಿನಾಮ್ ಇತ್ಯಭಿಪ್ರಾಯಃ । ಕಥಮ್ ? ಲಕ್ಷಣಾಶೂನ್ಯಮ್ । ಲಕ್ಷ್ಯತೇ ಅನಯಾ ಇತಿ ಲಕ್ಷಣಾ ಪ್ರಮಾಣಮ್ । ಪ್ರಮಾಣಶೂನ್ಯಮ್ ಉಭಯಂ ಚಿತ್ತಂ ಚೈತ್ಯಂ ದ್ವಯಮ್ । ಯತಃ ತನ್ಮತೇನೈವ ತಚ್ಚಿತ್ತತಯೈವ ತತ್ ಗೃಹ್ಯತೇ । ನ ಹಿ ಘಟಮತಿಂ ಪ್ರತ್ಯಾಖ್ಯಾಯ ಘಟೋ ಗೃಹ್ಯತೇ । ನಾಪಿ ಘಟಂ ಪ್ರತ್ಯಾಖ್ಯಾಯ ಘಟಮತಿಃ । ನ ಹಿ ತತ್ರ ಪ್ರಮಾಣಪ್ರಮೇಯಭೇದಃ ಶಕ್ಯತೇ ಕಲ್ಪಯಿತುಮ್ ಇತ್ಯಭಿಪ್ರಾಯಃ ॥

---

1. ಕನಸಿನಲ್ಲಿ ಆತ್ಮಚೈತನ್ಯವೇ ಚಿತ್ತವಾಗಿ ತೋರಿತು–ಎಂಬುದು ಸರ್ವಸಮ್ಮತವಾದವು, ಏಕೆಂದರೆ ಅಲ್ಲಿ ನಿಜವಾದ ಚಿತ್ತವಾಗಲಿ ಚಿತ್ತದೃಶ್ಯವಾಗಲಿ ಇರುವವೆಂದು ನಾವು ಯಾರೂ ಒಪ್ಪುವದಿಲ್ಲ. ಎಚ್ಚರದ ಚಿತ್ತವೇ ಅಲ್ಲಿದ್ದರೆ ಆಗ ಏಕೆ ಅದು ಭ್ರಾಂತವಾಯಿತೆಂಬುವಕ್ಕೆ ಉತ್ತರವನ್ನು ಹೇಳುವದಕ್ಕಾಗುವದೂ ಇಲ್ಲ.

2. ಕಾರಿಕೆಗಳ ಅಕ್ಷರಾರ್ಥವನ್ನು ಹಿಂದಿನ ಎರಡು ಕಾರಿಕೆಗಳ ಭಾಷ್ಯಕ್ಕೆ ಅನುಸಾರವಾಗಿ ಮಾಡಿಕೊಳ್ಳಬೇಕು ಎಂದು ಅರ್ಥ

3. ಇದಾದಮೇಲೆ ಹಿ ಎಂಬ ಮಾತಿರಬೇಕು.

4. ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

(ಭಾಷ್ಯಾರ್ಥ)

ಜೀವಚಿತ್ತಗಳು, ಚಿತ್ತಚೈತ್ಯಗಳು ಎರಡೂ ಒಂದಕ್ಕೊಂದು ಕಾಣುತ್ತಿರುವವು. ಒಂದರಿಂದ ಒಂದು ತಿಳಿಯಬರುವವುಗಳು, ಅಲ್ಲವೆ ? ಹೇಗೆಂದರೆ ಜೀವರೇ ಮುಂತಾದ ವಿಷಯಗಳನ್ನವಲಂಬಿಸಿಯೇ ಚಿತ್ತವೆಂಬುದು ಇರುತ್ತದೆ, ಚಿತ್ತವನ್ನವಲಂಬಿಸಿಯೇ ಜೀವರೇ ಮುಂತಾದ ದೃಶ್ಯವು (ಇರುತ್ತದೆ)[1]. ಆದ್ದರಿಂದ ಅವು (ಎರಡೂ) ಒಂದಕ್ಕೊಂದು ಕಾಣುವವಾಗಿರುತ್ತವೆ. ಆದ್ದರಿಂದ ಯಾವದೂ ಇಲ್ಲ ಎಂದು ಹೇಳುತ್ತೇವೆ[2]. ಚಿತ್ತವಾಗಲಿ ಚಿತ್ತಕ್ಕೆ ತೋರುವ (ವಿಷಯ)ವಾಗಲಿ ಯಾವದು ಇದೆ ಎಂದು ವಿವೇಕಿಯಾದವನು ಹೇಳುವದಿಲ್ಲ[3]. ಕನಸಿನಲ್ಲಿ (ಕಾಣುವ) ಆನೆಯಾಗಲಿ (ಅದನ್ನರಿಯುವ) ಆನೆ ಎಂಬ ಬುದ್ಧಿಯಾಗಲಿ (ನಿಜವಾಗಿ) ಇರುವದಿಲ್ಲವಷ್ಟೆ; ವಿವೇಕಿಗಳ (ಮತದಲ್ಲಿ) ಇಲ್ಲಿಯೂ ಹಾಗೆಯೇ ಎಂಬಭಿಪ್ರಾಯ. (ಇದು) ಹೇಗೆ ? ಎಂದರೆ (ಎರಡೂ) ಲಕ್ಷಣಾಶೂನ್ಯವು. ಇದರಿಂದ ತಿಳಿಯಬರುತ್ತದೆಯಾದ್ದರಿಂದ ಪ್ರಮಾಣವು ಲಕ್ಷಣೆಯು. (ಆದ್ದರಿಂದ ಲಕ್ಷಣಾಶೂನ್ಯವು ಎಂದರೆ) ಎರಡೂ ಚಿತ್ತ, ಚೈತ್ಯವೆಂಬ ಎರಡೂ ಪ್ರಮಾಣವಿಲ್ಲದ್ದು ಎಂದರ್ಥ. ಏಕೆಂದರೆ ಆ ಬುದ್ಧಿಯಿಂದಲೇ ಆ ಚಿತ್ತವಿರುವದರಿಂದಲೇ, ಅದು ಅರಿಯಲ್ಪಡುತ್ತವೆ. **ಗಡಿಗೆಯೆಂಬ ಬುದ್ಧಿಯನ್ನು ಬಿಟ್ಟು ಗಡಿಗೆಯು ಅರಿಯುವದಕ್ಕೆ ಬರುವದೇ ಇಲ್ಲ; ಗಡಿಗೆಯನ್ನು ಬಿಟ್ಟು ಗಡಿಗೆ ಎಂಬ ಬುದ್ಧಿಯೂ (ಅರಿಯುವದಕ್ಕೆ ಬರುವ)ದಿಲ್ಲ. ಇಲ್ಲಿ (ಇದು) ಪ್ರಮಾಣ, (ಇದು) ಪ್ರಮೇಯ-ಎಂಬ ಭೇದವನ್ನು ಕಲ್ಪಿಸುವದಕ್ಕೆ ಆಗುವದೇ ಇಲ್ಲ ಎಂದು ಅಭಿಪ್ರಾಯ[4].**

1. ವಿಷಯದ ಸಂಬಂಧವಿಲ್ಲದೆ ವಿಷಯಬುದ್ಧಿಯುಂಟಾಗುವದಿಲ್ಲ, ವಿಷಯಬುದ್ಧಿಯಿಲ್ಲದೆ ವಿಷಯವು ಸಿದ್ಧವಾಗುವದಿಲ್ಲ.

2. ಆದ್ದರಿಂದ ಚಿತ್ತವಾಗಲಿ ಚೈತ್ಯವಾಗಲಿ ಸ್ವತಂತ್ರವಾಗಿ ಇರುವದೇ ಇಲ್ಲ-ಎಂದು ಅಭಿಪ್ರಾಯ.

3. ಈಗ ಇರುವ ಪಾಠದ ಅನುವಾದವಿದು. "ಯಾವದು ಇದೆ ? ಎಂದು ಕೇಳಿದರೆ ವಿವೇಕಿಯಾದವನು ಯಾವದೂ ಇಲ್ಲ ಎಂದೇ ಉತ್ತರಕೊಡುತ್ತಾನೆ" ಎಂದು ಆ॥ ವ್ಯಾಖ್ಯಾನಕಾರರು ಈ ಭಾಷ್ಯಕ್ಕೆ ಅರ್ಥಮಾಡಿರುತ್ತಾರೆ. ಈ ಭಾಷ್ಯವು "ತಸ್ಮಾತ್ ಕಿಂ ತದಸ್ತೀತಿ ವಿವೇಕಿನಾ ನೋಚ್ಯತೇ। ನ ಕಿಂಚಿದಸ್ತೀತಿ ಚೋಚ್ಯತೇ ಚಿತ್ತಂ ವಾ ಚಿತ್ತೇಕ್ಷಣೀಯಂ ವಾ" ಎಂದಿದ್ದರೆ "ಆದ್ದರಿಂದ ಯಾವದು ಇದೆ ಎಂಬುವನ್ನು ವಿವೇಕಿಯು ಹೇಳುವದಿಲ್ಲ, ಚಿತ್ತವಾಗಲಿ ಚಿತ್ತದೃಶ್ಯವಾಗಲಿ ಯಾವದೊಂದೂ ಇರುವದಿಲ್ಲವೆಂದು ಅವನು ಹೇಳುತ್ತಾನೆ" ಎಂದು ಸರಳವಾಗಿ ಕನ್ನಡಿಸಬಹುದಾಗಿತ್ತು "ನೋಚ್ಯತೇ" ಎಂಬುದಕ್ಕೆ ಬದಲು 'ಚೋಚ್ಯತೇ' ಎಂದು ವಾ॥ ದಲ್ಲಿ ಕಾರಿಕಾಪಾಠ.

4. ಯಾವದರಿಂದ ಅರಿಯುವೆವೋ ಅದು ಪ್ರಮಾಣವು, ಯಾವದನ್ನು ಅದರಿಂದ ಅರಿಯುವೆವೋ ಅದು ಪ್ರಮೇಯವು. ಪ್ರಮೇಯವಾದ ಚಿತ್ತವು ಪರಾಧೀನವಾದರೂ ಪ್ರಮಾಣವಾದ ಚಿತ್ತವು ಸ್ವತಂತ್ರವು ಎಂಬ ಪೂರ್ವಪಕ್ಷಕ್ಕೆ ಉತ್ತರವಿದು.

**ಯಥಾ ಸ್ವಪ್ನಮಯೋ ಜೀವೋ ಜಾಯತೇ ಮ್ರಿಯತೇಽಪಿ ಚ ।**
**ತಥಾ ಜೀವಾ ಅಮೀ ಸರ್ವೇ ಭವನ್ತಿ ನ ಭವನ್ತಿ ಚ ॥ ೬೮ ॥**

**ಯಥಾ ಮಾಯಾಮಯೋ ಜೀವೋ ಜಾಯತೇ ಮ್ರಿಯತೇಽಪಿ ಚ ।**
**ತಥಾ ಜೀವಾ ಅಮೀ ಸರ್ವೇ ಭವನ್ತಿ ನ ಭವನ್ತಿ ಚ ॥ ೬೯ ॥**

**ಯಥಾ ನಿರ್ಮಿತಕೋ ಜೀವೋ ಜಾಯತೇ ಮ್ರಿಯತೇಽಪಿ ಚ[1] ।**
**ತಥಾ ಜೀವಾ ಅಮೀ ಸರ್ವೇ ಭವನ್ತಿ ನ ಭವನ್ತಿ ಚ ॥ ೭೦ ॥**

೬೮–೭೦. ಕನಸಿನಿಂದಾಗಿರುವ ಜೀವನು ಹೇಗೆ ಹುಟ್ಟುವನೋ ಮತ್ತು ಸಾಯುವನೋ ಅದರಂತೆ ಈ ಜೀವರುಗಳೆಲ್ಲರೂ ಉಂಟಾಗುತ್ತಿರುವರು. ಮತ್ತು ಇಲ್ಲವಾಗುತ್ತಿರುವರು. ಮಾಯೆಯಿಂದಾಗಿರುವ ಜೀವನು ಹೇಗೆ ಹುಟ್ಟುವನೋ ಮತ್ತು ಸಾಯುವನೋ ಅದರಂತೆ ಈ ಜೀವರುಗಳೆಲ್ಲರೂ ಉಂಟಾಗುತ್ತಿರುವರು, ಮತ್ತು ಇಲ್ಲವಾಗುತ್ತಿರುವರು. ಹೇಗೆ ನಿರ್ಮಿತಕಜೀವನು ಹುಟ್ಟುವನೋ ಮತ್ತು ಸಾಯುವನೋ, ಅದರಂತೆ ಈ ಜೀವರುಗಳೆಲ್ಲರೂ ಉಂಟಾಗುತ್ತಿರುವರು, ಮತ್ತು ಇಲ್ಲವಾಗುತ್ತಿರುವರು.

(ಭಾಷ್ಯ)

೩೯೯. ಮಾಯಾಮಯಃ ಮಾಯಾವಿನಾ ಯಃ ಕೃತಃ । ನಿರ್ಮಿತಕಃ ಮನ್ತ್ರೌಷಧ್ಯಾದಿಭಿಃ ನಿಷ್ಪಾದಿತಃ । ಸ್ವಪ್ನಮಾಯಾನಿರ್ಮಿತಕಾಃ ಅಣ್ಡಜಾದಯಃ ಜೀವಾಃ ಯಥಾ ಜಾಯನ್ತೇ ಮ್ರಿಯನ್ತೇ ಚ ತಥಾ ಮನುಷ್ಯಾದಿಲಕ್ಷಣಾಃ ಅವಿದ್ಯಮಾನಾ ಏವ ಚಿತ್ತವಿಕಲ್ಪನಾಮಾತ್ರಾಃ ಇತ್ಯರ್ಥಃ ॥

(ಭಾಷ್ಯಾರ್ಥ)

ಮಾಯೆಯಿಂದಾಗಿರುವವನು ಎಂದರೆ ಮಾಯಾವಿಯು ಮಾಡಿರುವನಲ್ಲ, (ಅವನು). ನಿರ್ಮಿತಕನು ಎಂದರೆ ಮಂತ್ರ, ಔಷಧಿ ಮುಂತಾದವುಗಳಿಂದ[2] ಮಾಡಲ್ಪಟ್ಟವನು. ಕನಸಿನ, ಮಾಯೆಯ, ನಿರ್ಮಿತಕರಾದ ಅಂಡಜಾದಿಜೀವರುಗಳು ಹೇಗೆ

---

1. 'ವಾ' ಎಂಬ ಪಾಠಕ್ಕಿಂತ ಈ ವಾ॥ ಪಾಠವೇ ಮೇಲು.

2. ಯೋಗಿಗಳ ನಿರ್ಮಾಣಕಾಯದಲ್ಲಿ ಕಲ್ಪಿತರಾಗುವ ಜೀವರನ್ನೂ ಇಲ್ಲಿ ಸೇರಿಸಿಕೊಳ್ಳಬೇಕು.

ಹುಟ್ಟುವರೋ ಮತ್ತು ಸಾಯುವರೋ[1] ಹಾಗೆಯೇ ಮನುಷ್ಯನೇ ಮೊದಲಾದ ರೂಪದ (ಈ ಜೀವರೂ ಪರಮಾರ್ಥವಾಗಿ) ಇರುವವರಲ್ಲವೇ ಅಲ್ಲ. ಬರಿಯ ಚಿತ್ತದ ವಿಕಲ್ಪನೆ[2]ಯಾಗಿರುತ್ತಾರೆ. ಎಂದರ್ಥ.

**ನ ಕಶ್ಚಿಜ್ಜಾಯತೇ ಜೀವಃ ಸಮ್ಭವೋಽಸ್ಯ ನ ವಿದ್ಯತೇ ।**
**ಏತತ್ತದುತ್ತಮಂ ಸತ್ಯಂ ಯತ್ರ ಕಿಂಚಿನ್ನ ಜಾಯತೇ ॥ ೭೧ ॥**

೭೧. ಯಾವ ಜೀವನೂ ಹುಟ್ಟುವದಿಲ್ಲ. ಇವನಿಗೆ (ಹುಟ್ಟುವದಕ್ಕೆ) ಕಾರಣವೇ ಇಲ್ಲ. ಎಲ್ಲಿ ಯಾವದೊಂದೂ ಹುಟ್ಟುವದೇ ಇಲ್ಲವೋ ಇದೇ ಆ ಉತ್ತಮಸತ್ಯವು.

(ಭಾಷ್ಯ)

೩೨೦. ವ್ಯವಹಾರಸತ್ಯವಿಷಯೇ ಜೀವಾನಾಂ ಜನ್ಮಮರಣಾದಿಃ ಸ್ವಪ್ನಾದಿಜೀವವತ್ ಇತ್ಯುಕ್ತಮ್ । ಉತ್ತಮಂ ತು ಪರಮಾರ್ಥಸತ್ಯಂ ನ ಕಶ್ಚಿಜ್ಜಾಯತೇ ಜೀವಃ ಇತಿ । ಉಕ್ತಾರ್ಥಮ್ ಅನ್ಯತ್ ॥

(ಭಾಷ್ಯಾರ್ಥ)

**ವ್ಯವಹಾರಸತ್ಯದ** ವಿಷಯದಲ್ಲಿ ಜೀವರುಗಳ ಜನ್ಮ, ಮರಣ–ಮುಂತಾದದ್ದು ಕನಸು ಮುಂತಾದವುಗಳ ಜೀವರು(ಗಳ ಹುಟ್ಟು, ಸಾವು–ಮುಂತಾದದ್ದು)ರಂತೆ ಎಂದು ಹೇಳಿದ್ದಾಯಿತು. ಆದರೆ ಉತ್ತಮವಾದ ಪರಮಾರ್ಥಸತ್ಯವು ಯಾವದೆಂದರೆ ಯಾವನೊಬ್ಬ ಜೀವನೂ (ಪರಮಾರ್ಥವಾಗಿ) ಹುಟ್ಟುವದಿಲ್ಲವೆಂಬುದೇ. ಉಳಿದದ್ದಕ್ಕೆ (ಹಿಂದೆಯೇ[3]) ಅರ್ಥವನ್ನು ಹೇಳಿರುತ್ತದೆ.

---

1. ಹುಟ್ಟಿದಂತೆಯೋ ಸತ್ತಂತೆಯೋ ತೋರುವರೋ ಎಂದರ್ಥ.

2. ಚಿತ್ತವಿಕಲ್ಪನೆಂದದ್ದರಿಂದ ಚಿತ್ತವು ಪರಮಾರ್ಥವೆಂದು ತಿಳಿಯಬಾರದು. ಯಾವದೂ ಪರಮಾರ್ಥವಾಗಿ ಹುಟ್ಟುವದಿಲ್ಲವೆಂಬುದೇ ವಿವಕ್ಷಿತ.

3. ೩–೪೮ ರ ಭಾಷ್ಯಗಿಂದ ಈ ಕಾರಿಕೆಯ ಉತ್ತರಾರ್ಧಕ್ಕೆ ಅರ್ಥವನ್ನು ತಿಳಿದುಕೊಳ್ಳಬೇಕು ಎಂದು ಭಾವ.

**ಚಿತ್ತಸ್ಪನ್ದಿತಮೇವೇದಂ ಗ್ರಾಹ್ಯಗ್ರಾಹಕವತ್ ದ್ವಯಮ್ ।**
**ಚಿತ್ತಂ ನಿರ್ವಿಷಯಂ ನಿತ್ಯಮಸಙ್ಗಂ ತೇನ ಕೀರ್ತಿತಮ್ ॥ ೭೨ ॥**

೭೨. ಗ್ರಾಹ್ಯಗ್ರಾಹಕಗಳನ್ನುಳ್ಳ ಈ ದ್ವೈತವು ಚಿತ್ತದ ಅಲುಗಾಟವೇ. ಚಿತ್ತವು ವಿಷಯವಿಲ್ಲದ್ದು, ಆದ್ದರಿಂದ (ಅದು) ಯಾವಾಗಲೂ ಅಸಂಗನೆನ್ನಲ್ಪಡುತ್ತದೆ.

(ಭಾಷ್ಯ)

೩೨೧. ಸರ್ವಂ ಗ್ರಾಹ್ಯಗ್ರಾಹಕವತ್ ಚಿತ್ತಸ್ಪನ್ದಿತಮೇವ ದ್ವಯಮ್ । ಚಿತ್ತಂ ಪರಮಾರ್ಥತಃ ಆತ್ಮೈವ ಇತಿ ನಿರ್ವಿಷಯಮ್ । "ಅಸಙ್ಗೋ ಹ್ಯಯಂ ಪುರುಷಃ" (ಬೃ. ೪-೩-೧೫) ಇತಿ ಶ್ರುತೇಃ । ಸವಿಷಯಸ್ಯ ಹಿ ವಿಷಯೇ ಸಙ್ಗಃ । ನಿರ್ವಿಷಯತ್ವಾತ್ ಚಿತ್ತಮ್ ಅಸಙ್ಗಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಅರಿಯಲ್ಪಡತಕ್ಕದ್ದು ಅರಿಯುವವನು-ಎಂಬ (ಭೇದ)ವುಳ್ಳ ದ್ವೈತವೆಲ್ಲವೂ ಚಿತ್ತದ ಅಲುಗಾಟವೇ[1]. ಚಿತ್ತವು ನಿಜವಾಗಿ ಆತ್ಮನೇ ಆದ್ದರಿಂದ ನಿರ್ವಿಷಯವಾದದ್ದು[2]. ಆದ್ದರಿಂದ (ಹೀಗೆ) ವಿಷಯವಿಲ್ಲದ್ದಾದ್ದರಿಂದ ಯಾವಾಗಲೂ ಅಸಂಗವು ಎನ್ನಲ್ಪಡುತ್ತದೆ. "ಈ ಪುರುಷನು ಅಸಂಗನೇ ಅಲ್ಲವೆ ?" (ಬೃ. ೪-೩-೧೫) ಎಂಬ ಶ್ರುತಿಯು ಇದಕ್ಕೆ ಪ್ರಮಾಣವು. ವಿಷಯವುಳ್ಳದ್ದಕ್ಕೇ ಅಲ್ಲವೆ, ವಿಷಯದಲ್ಲಿ ಸಂಗ(ವಿರುತ್ತದೆ) ? (ಆದರೆ) ಚಿತ್ತವು ನಿರ್ವಿಷಯವಾದ್ದರಿಂದ ಅಸಂಗವು ಎಂದರ್ಥ.

## ಶಾಸ್ತ್ರಾದಿಭೇದವೂ ಅಜತ್ವವೂ ಆವಿದ್ಯಕವೇ

(ಭಾಷ್ಯ)

೩೨೨. ನನು ನಿರ್ವಿಷಯತ್ವೇನ ಚೇತ್ ಅಸಙ್ಗತ್ವಂ ಚಿತ್ತಸ್ಯ ನ ನಿಸ್ಸಙ್ಗತಾ ಭವತಿ । ಯಸ್ಮಾತ್[3] ಶಾಸ್ತಾ ಶಾಸ್ತ್ರಂ ಶಿಷ್ಯಶ್ಚ ಇತ್ಯೇವಮಾದೇಃ ವಿಷಯಸ್ಯ ವಿದ್ಯಮಾನತ್ವಾತ್ । ನೈಷ ದೋಷಃ । ಕಸ್ಮಾತ್ ?

---

1. ಚಿತ್ತವೆಂಬ ಸಕ್ರಿಯಪದಾರ್ಥವನ್ನು ಕಲ್ಪಿಸಿಕೊಂಡಿರುವ ಅವಿದ್ಯೆಯೇ ದ್ವೈತಕ್ಕೆ ಕಾರಣವು ಎಂದರ್ಥ.

2. ತನ್ನ ರೂಪದಿಂದ ವಿಷಯವುಳ್ಳದ್ದಾದರೂ ಆತ್ಮರೂಪದಿಂದ ಅದ್ವಿತೀಯವಾಗಿದೆ.

3. ಇಲ್ಲಿ ಕಸ್ಮಾತ್ ಎಂತ ಇದ್ದರೆ ಒಳ್ಳೆಯದೆಂತ ಕಾಣುತ್ತದೆ.

(ಭಾಷ್ಯಾರ್ಥ)

(ಆಕ್ಷೇಪ) :—ವಿಷಯವಿಲ್ಲದಿರುವದರಿಂದ ಅಸಂಗವೆನ್ನುವದಾದರೆ ಚಿತ್ತವು ಅಸಂಗವಾಗುವದಿಲ್ಲ. ಏಕೆಂದರೆ ಶಾಸ್ತ್ರವನ್ನು ಹೇಳಿಕೊಡುವ (ಗುರು), ಶಾಸ್ತ್ರ, ಮತ್ತು ಶಿಷ್ಯನು-ಎಂಬಿವೇ ಮುಂತಾದ ವಿಷಯವು ಇರುತ್ತದೆ[1].

(ಪರಿಹಾರ) :— ಇದು ತಪ್ಪಲ್ಲ. ಏಕೆಂದರೆ :—

**ಯೋಽಸ್ತಿ ಕಲ್ಪಿತಸಂವೃತ್ಯಾ ಪರಮಾರ್ಥೇನ ನಾಸ್ತ್ಯಸೌ ।**
**ಪರತನ್ತ್ರಾಭಿಸಂವೃತ್ಯಾ ಸ್ಯಾನ್ನಾಸ್ತಿ ಪರಮಾರ್ಥತಃ ॥ ೭೩ ॥**

೭೩. ಯಾವದು ಕಲ್ಪಿತಸಂವೃತಿಯಿಂದ ಇರುವದೋ ಅದು ಪರಮಾರ್ಥದಿಂದ ಇರುವದಿಲ್ಲ. ಪರತಂತ್ರಾಭಿಸಂವೃತಿಯಿಂದ ಇರಬಹುದು, ಪರಮಾರ್ಥವಾಗಿರುವದಿಲ್ಲ.

(ಭಾಷ್ಯ)

೩೨೩. ಯಃ ಪದಾರ್ಥಃ ಶಾಸ್ತ್ರಾದಿಃ ವಿದ್ಯತೇ ಸ ಕಲ್ಪಿತಸಂವೃತ್ಯಾ । ಕಲ್ಪಿತಾ ಚ ಸಾ ಪರಮಾರ್ಥಪ್ರತಿಪತ್ತ್ಯುಪಾಯತ್ವೇನ ಸಂವೃತಿಶ್ಚ ಸಾ । ತಯಾ ಯಃ ಅಸ್ತಿ ಪರಮಾರ್ಥೇನ ನಾಸ್ತಿ ಅಸೌ ನ ವಿದ್ಯತೇ । "ಜ್ಞಾತೇ ದ್ವೈತಂ ನ ವಿದ್ಯತೇ" (೧-೧೮) ಇತಿ (ಹಿ) ಉಕ್ತಮ್ । ಯಶ್ಚ ಪರತನ್ತ್ರಾಭಿಸಂವೃತ್ಯಾ ಪರಶಾಸ್ತ್ರವ್ಯವಹಾರೇಣ ಸ್ಯಾತ್ ಪದಾರ್ಥಃ ಸ ಪರಮಾರ್ಥತೋ ನಿರೂಪ್ಯಮಾಣಃ ನಾಸ್ತ್ಯೇವ । ತೇನ ಯುಕ್ತಮುಕ್ತಮ್ "ಅಸಙ್ಗಂ ತೇನ ಕೀರ್ತಿತಮ್" ೪-೭೨. ಇತಿ ॥

(ಭಾಷ್ಯಾರ್ಥ)

ಶಾಸ್ತ್ರವೇ ಮುಂತಾದ ಪದಾರ್ಥವಿರುವದಲ್ಲ, ಅದು **ಕಲ್ಪಿತಸಂವೃತಿಯಿಂದ.** ಅದು ಪರಮಾರ್ಥವನ್ನು ಅರಿಯುವದಕ್ಕೆ ಉಪಾಯವಾಗಿ ಕಲ್ಪಿತವಾಗಿಯೂ ಇರುತ್ತದೆ. ಅದು ಸಂವೃತಿಯಾಗಿಯೂ[2] ಇರುತ್ತದೆ. ಆ (ಕಲ್ಪಿತಸಂವೃತಿಯಿಂದ) ಯಾವದು ಇರುತ್ತದೆಯೋ ಅದು ಪರಮಾರ್ಥವಾಗಿರುವದಿಲ್ಲ, (ನಿಜವಾಗಿ) ಇರುವ

1. ೧-೧೮ ರಲ್ಲಿ ಹೇಳಿರುವ ಸಮಾಧಾನವನ್ನು ಇಲ್ಲಿ ನೆನಪಿಗೆ ತಂದುಕೊಳ್ಳಬೇಕು.

2. ೪-೫೭ ನೆಯ ಕಾರಿಕೆಯ ಭಾ. ಭಾ. ೩೦೯ ನ್ನು ನೋಡಿ.

ದಿಲ್ಲ. "ಅರಿತುಕೊಂಡರೆ ದ್ವೈತವಿರುವದಿಲ್ಲ" (೧–೧೮) ಎಂಬಲ್ಲವೆ, (ಹಿಂದೆ) ಹೇಳಿರುತ್ತದೆ[1] ?

ಮತ್ತು ಯಾವ ಪದಾರ್ಥವು ಪರತಂತ್ರದ ಸಂವೃತಿಯಿಂದ ಮತ್ತೊಬ್ಬರ ಶಾಸ್ತ್ರದ ವ್ಯವಹಾರದಿಂದ ಇರುತ್ತದೆಯೋ[2], ಅದು ನಿಜವಾಗಿ ಪರೀಕ್ಷಿಸಿ ನೋಡಿದರೆ ಇರುವದೇ ಇಲ್ಲ. ಆದಕಾರಣ "ಆದ್ದರಿಂದ (ಅದು) ಅಸಂಗವೆನಿಸಿರುತ್ತದೆ" (೪–೭೨) ಎಂದು ಹೇಳಿದ್ದು ಸರಿಯೇ.

(ಭಾಷ್ಯ)

೩೭೪. ನನು ಶಾಸ್ತ್ರಾದೀನಾಂ ಸಂವೃತಿತ್ವೇ ಅಜ ಇತಿ ಇಯಮಪಿ ಕಲ್ಪನಾ ಸಂವೃತಿಃ ಸ್ಯಾತ್ । ಸತ್ಯಮೇವಮ್—

(ಭಾಷ್ಯಾರ್ಥ)

(ಆಕ್ಷೇಪ) :—ಶಾಸ್ತ್ರವೇ ಮುಂತಾದವು ಸಂವೃತಿಯಾದರೆ ಈ ಹುಟ್ಟುವದಿಲ್ಲ ಎಂಬ ಕಲ್ಪನೆಯೂ ಸಂವೃತಿಯಾಗುವದಲ್ಲ ?

(ಪರಿಹಾರ) :—ನಿಜ, ಹಾಗೆಯೇ (ಸರಿ).

**ಅಜಃ ಕಲ್ಪಿತಸಂವೃತ್ಯಾ ಪರಮಾರ್ಥೇನ ನಾಪ್ಯಜಃ ।**
**ಪರತನ್ತ್ರಾಭಿನಿಷ್ಪತ್ತ್ಯಾ ಸಂವೃತ್ಯಾ ಜಾಯತೇ ತು ಸಃ ॥ ೭೪ ॥**

೭೪. ಕಲ್ಪಿತಸಂವೃತಿಯಿಂದ ಅಜನು, ಪರಮಾರ್ಥದಿಂದ ಅಜನೂ ಅಲ್ಲ. ಪರತಂತ್ರದ ಅಭಿನಿಷ್ಪತ್ತಿಯಿಂದ, ಅವನು ಸಂವೃತಿಯಿಂದ ಮಾತ್ರ ಹುಟ್ಟುತ್ತಾನೆ.

---

1. "ಶಾಸ್ತ್ರಾದಿಭೇದವು ಹೋಗುವದು ಹೇಗೆ ?" ಎಂಬ ಆಕ್ಷೇಪಕ್ಕೆ ಪರಿಹಾರವನ್ನು ೧–೧೮ ರಲ್ಲಿ ಹೇಳಿತ್ತು ; ಶಾಸ್ತ್ರಾದಿಭೇದವು ಇರುವಾಗ ಚಿತ್ತವು ಅಸಂಗವೆಂಬುದು ಹೇಗೆ ?–ಎಂಬ ಆಕ್ಷೇಪಕ್ಕೆ ಇಲ್ಲಿ ಪರಿಹಾರವನ್ನು ಹೇಳಿದೆ.

2. ಚಿತ್ತವಿಲ್ಲ, ವಿಷಯವಿಲ್ಲ–ಎಂದು ನಾವು ಹೇಳಿರುವದು ನಿಜವಾಗಿರುವ ಚಿತ್ತ ವಿಷಯಗಳ ನಿಷೇಧವಲ್ಲ ; ಮಿಕ್ಕ ದರ್ಶನಕಾರರು ಕಲ್ಪಿಸಿಕೊಂಡಿರುವವುಗಳನ್ನೇ ಇಲ್ಲವೆಂದಿರುತ್ತೇವೆ. ಇದರಂತೆ ಶಾಸ್ತ್ರಾದಿಭೇದವೂ, ಆ ದರ್ಶನಕಾರರು ಅವಿದ್ಯೆಯಿಂದ ಕಲ್ಪಿಸಿರುವದೇ ಹೊರತು ನಿಜವಾಗಿರುವದಲ್ಲ–ಎಂದು ಭಾವ.

(ಭಾಷ್ಯ)

೩೨೫. ಶಾಸ್ತ್ರಾದಿ (ವತ್)[1] ಕಲ್ಪಿತಸಂವೃತ್ಯೈವ ಅಜಃ ಇತ್ಯುಚ್ಯತೇ। ಪರಮಾರ್ಥೇನ ನಾಪಿ ಅಜಃ। ಯಸ್ಮಾತ್ ಪರತನ್ತ್ರಾಭಿನಿಷ್ಪತ್ತ್ಯಾ ಪರಶಾಸ್ತ್ರ ಪ್ರಸಿದ್ಧಿಮ್[2] ಅಪೇಕ್ಷ್ಯ ಯಃ ಅಜಃ ಇತ್ಯುಕ್ತಃ ಸಃ ಸಂವೃತ್ಯಾ ಜಾಯತೇ। ಅತಃ ಅಜಃ ಇತೀಯಮಪಿ ಕಲ್ಪನಾ ಪರಮಾರ್ಥವಿಷಯೇ ನೈವ ಕ್ರಮತೇ ಇತ್ಯರ್ಥಃ॥

(ಭಾಷ್ಯಾರ್ಥ)

ಶಾಸ್ತ್ರವೇ ಮುಂತಾದ (ದ್ವೈತದಂತೆ)[3] ಕಲ್ಪಿತಸಂವೃತಿಯಿಂದಲೇ ಅಜನು ಎನ್ನುತ್ತೇವೆ. ನಿಜವಾಗಿ (ನೋಡಿದರೆ ಅವನು) ಅಜನೂ ಅಲ್ಲ. ಏಕೆಂದರೆ ಪರ ತಂತ್ರಾಭಿನಿಷ್ಪತ್ತಿಯಿಂದ ಮತ್ತೊಬ್ಬರ ಶಾಸ್ತ್ರದ ಪ್ರಸಿದ್ಧಿಯನ್ನಿಟ್ಟುಕೊಂಡು[4] ಅಜನು ಎಂದು ಹೇಳಿದೆವಲ್ಲ, ಆ (ಆತ್ಮನು) ಸಂವೃತಿಯಿಂದಲೇ ಹುಟ್ಟುತ್ತಾನೆ[5]. ಆದ್ದರಿಂದ ಅಜನೆಂಬೀ ಕಲ್ಪನೆಯೂ ಪರಮಾರ್ಥವಿಷಯದಲ್ಲಿ ಬರುವದಿಲ್ಲ[6] ಎಂದರ್ಥ.

## ಮಿಥ್ಯಾಭಿಮಾನದಿಂದ ಸಂಸಾರ, ಜ್ಞಾನದಿಂದ ಮೋಕ್ಷ

(ಭಾಷ್ಯ)

೩೨೬. ಯಸ್ಮಾತ್ ಅಸನ್[1] ವಿಷಯಃ ತಸ್ಮಾತ್—

1. 'ಶಾಸ್ತ್ರಾದಿಕಲ್ಪಿತಸಂವೃತ್ಯೈವ' ಎಂಬ ಅಚ್ಚಿನ ಪಾಠಕ್ಕಿಂತ ಇದು ಉತ್ತಮ.

2. 'ಪರಶಾಸ್ತ್ರಸಿದ್ಧಿಮ್' ಎಂಬ ಅಚ್ಚಿನ ಪಾಠಕ್ಕಿಂತ ಇದು ಉತ್ತಮ.

3. ಶಾಸ್ತ್ರ, ಶಾಸ್ತೃ, ಶಿಷ್ಯ-ಎಂಬಿವುಗಳು ಕಲ್ಪಿತಸಂವೃತಿಯಿಂದ ಇವೆ ಎಂದು ಹಿಂದಿನ ಕಾರಿಕೆಯಲ್ಲಿ ಹೇಳಿರುವಂತೆ ಅಜತ್ವವೂ ಕಲ್ಪಿತಸಂವೃತಿಯಿಂದಲೇ ಎಂದು ತಿಳಿಯಬೇಕು ಎಂದರ್ಥ. ಶಾಸ್ತ್ರಾದಿಕಲ್ಪನೆಯು ಸಂವೃತಿಸಿದ್ಧವಾಗಿರುವದರಿಂದ ಅದಕ್ಕಧೀನವಾಗಿ ಸಿದ್ಧವಾಗುವ ಅಜತ್ವಕಲ್ಪನೆಯೂ ಸಂವೃತಿಸಿದ್ಧವೇ ಎಂಬ ಅರ್ಥವನ್ನು 'ಶಾಸ್ತ್ರಾದಿಕಲ್ಪಿತ ಸಂವೃತ್ಯೈವ' ಎಂಬ ಪಾಠದ ಬಲದಿಂದ ಆ॥ ವ್ಯಾಖ್ಯಾನಕಾರರು ತೆಗೆದಿದ್ದಾರೆ.

4. ತಾರ್ಕಿಕರ ಶಾಸ್ತ್ರದಲ್ಲಿ ಆತ್ಮನು ಜನ್ಮವುಳ್ಳವನೆಂದು ಪ್ರಸಿದ್ಧಿ: ಅದನ್ನು ಅಲ್ಲ ಗಳೆಯುವದಕ್ಕಾಗಿ ಅಜನೆಂದಿದೆ.

5. ಅಜತ್ವವೂ ಸಂವೃತಿಯಿಂದಲೇ ಆಗಿರುತ್ತದೆ ಎಂದರ್ಥ.

6. ಅಜತ್ವವು ಎಂದರೆ ಜನ್ಮಾಭಾವವೆಂಬ ಧರ್ಮವಿರುವದೆಂಬುದು ನಿಜವಾಗಿ ಆತ್ಮನ ವಿಶೇಷಣವಲ್ಲ-ಎಂದು ಅಭಿಪ್ರಾಯ. ನಿಷೇಧವಾಕ್ಯದ ತಾತ್ಪರ್ಯವನ್ನು ೨-೩೨ ರಲ್ಲಿ ಚರ್ಚಿಸಿರುವದನ್ನು ನೋಡಿ.

7. 'ಅಸತ್' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

(ಭಾಷ್ಯಾರ್ಥ)

(ಹೀಗೆ) ವಿಷಯವು (ನಿಜವಾಗಿ) ಇಲ್ಲದೆ ಇರುವದಷ್ಟೆ, ಆದ್ದರಿಂದ—

**ಅಭೂತಾಭಿನಿವೇಶೋಽಸ್ತಿ ದ್ವಯಂ ತತ್ರ ನ ವಿದ್ಯತೇ ।**
**ದ್ವಯಾಭಾವಂ ಸ ಬುದ್ಧ್ವೈವ ನಿರ್ನಿಮಿತ್ತೋ ನ ಜಾಯತೇ ॥ ೭೫ ॥**

೭೫. ಅಭೂತದಲ್ಲಿ ಅಭಿನಿವೇಶವಿರುತ್ತದೆ, ಅಲ್ಲಿ ದ್ವೈತವು ಇರುವದಿಲ್ಲ. ದ್ವಯಾಭಾವವನ್ನು ಅರಿತುಕೊಂಡರೇ ಅವನು ನಿಮಿತ್ತವಿಲ್ಲದವನಾಗಿ ಹುಟ್ಟದೇ ಇರುವನು.

(ಭಾಷ್ಯ)

೩೨೭. ಅಸತಿ ಅಭೂತೇ ದ್ವೈತೇ ಅಭಿನಿವೇಶಃ ಅಸ್ತಿ ಕೇವಲಮ್ । ಅಭಿನಿವೇಶಃ ಆಗ್ರಹಮಾತ್ರಮ್ । ದ್ವಯಂ ತತ್ರ ನ ವಿದ್ಯತೇ । ಮಿಥ್ಯಾಭಿನಿವೇಶಮಾತ್ರಂ ಚ ಜನ್ಮನಃ ಕಾರಣಂ ಯಸ್ಮಾತ್, ತಸ್ಮಾತ್ ದ್ವಯಾಭಾವಂ ಬುದ್ಧ್ವಾ ನಿರ್ನಿಮಿತ್ತಃ ನಿವೃತ್ತಮಿಥ್ಯಾದ್ವಯಾಭಿನಿವೇಶೋ ಯಃ ಸ ನ ಜಾಯತೇ ॥

(ಭಾಷ್ಯಾರ್ಥ)

ಅಭೂತದಲ್ಲಿ (ನಿಜವಾಗಿ) ಇಲ್ಲದಿರುವ ದ್ವೈತದಲ್ಲಿ ಬರಿಯ ಅಭಿನಿವೇಶವಿರುತ್ತದೆ. ಅಭಿನಿವೇಶವೆಂದರೆ (ಇರುವದೆಂಬ) ಬರಿಯ ಹಟವು. (ಆದರೆ) ಅಲ್ಲಿ ದ್ವೈತವು ಇರುವದಿಲ್ಲ. (ಹೀಗೆ) ಮಿಥ್ಯಾ (ವಿಷಯದ) ಅಭಿಮಾನವೇ ಜನ್ಮಕ್ಕೆ ಕಾರಣವಾಗಿರುವದಷ್ಟೆ, ಆದ್ದರಿಂದ ದ್ವೈತವು ಇಲ್ಲವೆಂಬುದನ್ನು ಅರಿತುಕೊಂಡ (ಮಾತ್ರದಿಂದಲೇ) ನಿರ್ನಿಮಿತ್ತನಾದವನು, ಮಿಥ್ಯಾದ್ವೈತದ ಅಭಿನಿವೇಶವು ತೊಲಗಿರುವವನು ಯಾವನೋ ಅವನು ಹುಟ್ಟುವದಿಲ್ಲ[1].

---

1. ಹಗ್ಗವನ್ನು ಹಾವೆಂದು ಭಾವಿಸುವಾಗ ಹಾವೆಂಬ ಭಾವನೆಯಿರುವದೇ ಹೊರತು ನಿಜವಾಗಿಯೂ ಹಾವೇನೂ ಅಲ್ಲಿರುವದಿಲ್ಲ; ಇದರಂತೆ ದ್ವೈತವಿರುವದೆಂಬ ಭಾವನೆಯಿಂದಲೇ ದ್ವೈತವಿರುವದೇ ಹೊರತು ನಿಜವಾಗಿಯೂ ದ್ವೈತವಿರುವದಿಲ್ಲ. ಆದ್ದರಿಂದ ಪರಮಾರ್ಥವನ್ನು ಅರಿತುಕೊಂಡವನಿಗೆ ಮಿಥ್ಯಾಭಿಮಾನವೂ ಇರುವದಿಲ್ಲ, ಅದರಿಂದಾಗುವ ಸಂಸಾರವೂ ಇರುವದಿಲ್ಲ–ಎಂದರ್ಥ. ವ್ಯಾಖ್ಯಾನಕಾರರು ಕಲ್ಪಿತಶಾಸ್ತ್ರವು ಪರಮಾರ್ಥಫಲವನ್ನು ಕೊಡುವ ಜ್ಞಾನವನ್ನು ಹೇಗೆ ಕೊಟ್ಟೀತು ? ಎಂಬ ಶಂಕೆಗೆ ಪರಿಹಾರವಾಗಿ ಈ ಕಾರಿಕೆಯನ್ನು ಒಡ್ಡಿರುತ್ತಾರೆ.

**ಯದಾ ನ ಲಭತೇ ಹೇತೂನುತ್ತಮಾಧಮಮಧ್ಯಮಾನ್ ।**
**ತದಾ ನ ಜಾಯತೇ ಚಿತ್ತಂ ಹೇತ್ವಭಾವೇ ಫಲಂ ಕುತಃ ॥ ೭೬ ॥**

೭೬. ಉತ್ತಮ, ಅಧಮ, ಮಧ್ಯಮ–ಎಂಬ ಹೇತುಗಳನ್ನು ಯಾವಾಗ ಪಡೆಯುವದಿಲ್ಲವೋ ಆಗ ಚಿತ್ತವು ಹುಟ್ಟುವದಿಲ್ಲ. ಹೇತುವಿಲ್ಲದಿರಲು ಫಲವು ಎಲ್ಲಿಯದು?

(ಭಾಷ್ಯ)

೩೭೮. ಜಾತ್ಯಾಶ್ರಮವಿಹಿತಾಃ ಆಶೀರ್ವರ್ಜಿತೈರನುಷ್ಠೀಯಮಾನಾಃ ಧರ್ಮಾಃ ದೇವತ್ವಾದಿಪ್ರಾಪ್ತಿಹೇತವಃ ಉತ್ತಮಾಃ, ಕೇವಲಾಶ್ಚ ಧರ್ಮಾಃ । ಅಧರ್ಮವ್ಯಾಮಿಶ್ರಾಃ ಮನುಷ್ಯತ್ವಾದಿ(?) ಪ್ರಾಪ್ತ್ಯರ್ಥಾಃ ಮಧ್ಯಮಾಃ । ತಿರ್ಯಗಾದಿಪ್ರಾಪ್ತಿನಿಮಿತ್ತಾ ಅಧರ್ಮಲಕ್ಷಣಾಃ ಪ್ರವೃತ್ತಿವಿಶೇಷಾಶ್ಚ ಅಧಮಾಃ । ತಾನ್ ಉತ್ತಮಮಧ್ಯಮಾಧಮಾನ್ (ಹೇತೂನ್[1]) ಅವಿದ್ಯಾಪರಿಕಲ್ಪಿತಾನ್ ಯದಾ ಏಕಮೇವಾದ್ವಿತೀಯಮ್ ಆತ್ಮತತ್ತ್ವಂ ಸರ್ವಕಲ್ಪನಾವರ್ಜಿತಂ ಜಾನನ್ ನ ಲಭತೇ ನ ಪಶ್ಯತಿ–ಯಥಾ ಬಾಲೈರ್ದೃಶ್ಯಮಾನಂ ಗಗನೇ ಮಲಂ ವಿವೇಕೀ ನ ಪಶ್ಯತಿ ತದ್ವತ್–ತದಾ ನ ಜಾಯತೇ ನೋತ್ಪದ್ಯತೇ ಚಿತ್ತಂ ದೇವಾದ್ಯಾಕಾರೈಃ ಉತ್ತಮಾಧಮಮಧ್ಯಮಫಲರೂಪೇಣ । (ಹೇತ್ವಭಾವೇ ಫಲಂ ಕುತಃ[2]?) ನ ಹಿ ಅಸತಿ ಹೇತೌ ಫಲಮ್ ಉತ್ಪದ್ಯತೇ, ಬೀಜಾದ್ಯಭಾವೇ ಇವ ಸಸ್ಯಾದಿ ॥

(ಭಾಷ್ಯಾರ್ಥ)

ಜಾತಿಗಳಿಗೂ ಆಶ್ರಮಗಳಿಗೂ (ಶಾಸ್ತ್ರದಲ್ಲಿ) ವಿಧಿಸಿರುವ, (ಫಲದ) ಆಶೆಯಿಲ್ಲದೆ ಅನುಷ್ಠಾನಮಾಡಿದರೆ ದೇವತ್ವವೇ ಮುಂತಾದದ್ದನ್ನು ಪಡೆಯುವದಕ್ಕೆ ಕಾರಣವಾಗಿರುವ ಬರಿಯ ಧರ್ಮಗಳು[3] ಉತ್ತಮವಾದವು; ಮತ್ತು ಅಧರ್ಮದೊಡನೆ ಬೆರೆತುಕೊಂಡು ಮನುಷ್ಯತ್ವವೇ ಮುಂತಾದದ್ದನ್ನು[4] ಪಡೆಯುವದಕ್ಕೆ ಕಾರಣವಾಗಿರು

1. ಈ ಮಾತು ಬರೆದವರ ತಪ್ಪಿನಿಂದ ಬಿಟ್ಟುಹೋಗಿದೆ.

2. ಈ ವಾಕ್ಯವು ಇಲ್ಲಿದ್ದರೆ ಚೆನ್ನ; ಮೂಲಾನುಸಾರಿಯಾಗುತ್ತದೆ.

3. ಕಾಮ್ಯಕರ್ಮಗಳನ್ನು ಬಿಟ್ಟು; ಉಪಾಸನೆಯೊಡನೆ ಎಂದು ಸೇರಿಸಿಕೊಳ್ಳಬಹುದು.

4. ಇಲ್ಲಿ ಮುಂತಾದದ್ದು ಎಂಬುದರ ಅರ್ಥವೇನೆಂಬುದು ತಿಳಿಯುವಂತಿಲ್ಲ. ಮಧ್ಯಮಜನ್ಮಗಳು ಎಂದು ಆ॥ ವ್ಯಾಖ್ಯಾನ.

ವವು ಮಧ್ಯಮಗಳು ; ಅಧರ್ಮರೂಪವಾದ ತಿರ್ಯಕ್ಪ್ರಾಣಿ(ಗಳ ಜನ್ಮವೇ) ಮುಂತಾದದ್ದನ್ನು ಪಡೆಯುವದಕ್ಕೆ ಕಾರಣವಾಗಿರುವ ಬೇರೆಬೇರೆಯ ಪ್ರವೃತ್ತಿಗಳು ಅಧಮಗಳು. ಆ ಅವಿದ್ಯಾಕಲ್ಪಿತವಾದ ಉತ್ತಮ, ಮಧ್ಯಮ, ಅಧಮ–ಎಂಬ (ಹೇತುಗಳನ್ನು)[1] ಯಾವಾಗ ಯಾವ ಕಲ್ಪನೆಯೂ ಇಲ್ಲದ ಎರಡನೆಯದಿಲ್ಲದ ಒಂದೇ ಒಂದಾದ ಆತ್ಮತತ್ತ್ವವನ್ನು ಅರಿತುಕೊಂಡು ಪಡೆಯದೆ ಇರುವನೋ ಕಾಣದೆ ಇರುವನೋ–ಹೇಗೆ ಅವಿವೇಕಿಗಳು ಆಕಾಶದಲ್ಲಿ ಕಾಣುವ ಕಲ್ಮಷವನ್ನು ವಿವೇಕಿಯು ಕಾಣದೆ ಇರುವನೋ ಹಾಗೆ (ಯಾವಾಗ ಜ್ಞಾನದಿಂದ ಅವನ್ನು ಕಾಣದೆ ಇರುವನೋ)–ಆಗ ಚಿತ್ತವು ದೇವತೆಗಳೇ ಮುಂತಾದ ಆಕಾರಗಳನ್ನು ಪಡೆದು ಉತ್ತಮ, ಮಧ್ಯಮ, ಅಧಮ–ಎಂಬ ಫಲರೂಪದಿಂದ ಹುಟ್ಟದೆ ಇರುವದು. (ಹೇತುವಿಲ್ಲದಿರಲು ಫಲವು ಎಲ್ಲಿಯದು ?) ಬೀಜವೇ ಮುಂತಾದದ್ದೂ ಇಲ್ಲದಿದ್ದರೆ ಪೈರು ಮುಂತಾದದ್ದೂ ಆಗದೆ ಇರುವಂತೆ, ಹೇತುವಿಲ್ಲದಿದ್ದರೆ ಫಲವು ಹುಟ್ಟಲೇ ಆರದು.

(ಭಾಷ್ಯ)

೬೫. ಹೇತ್ವಭಾವೇ ಚಿತ್ತಂ ನೋತ್ಪದ್ಯತೇ ಇತಿ ಹಿ[2] ಉಕ್ತಮ್ । ಸಾ ಪುನರನುತ್ಪತ್ತಿಶ್ಚಿತ್ತಸ್ಯ ಕೀದೃಶೀತಿ ? ಉಚ್ಯತೇ—

(ಭಾಷ್ಯಾರ್ಥ)

ಹೇತುವೇ ಇಲ್ಲದಿದ್ದರೆ ಚಿತ್ತವು ಹುಟ್ಟುವದಿಲ್ಲ ಎಂದು ಹೇಳಲಾಯಿತಷ್ಟೆ. ಚಿತ್ತವು ಹುಟ್ಟುವದಿಲ್ಲ ಎಂಬು(ದಿದೆಯಲ್ಲ), ಅದು ಎಂಥದ್ದು ? ಎಂದರೆ ಹೇಳುತ್ತಾರೆ:–

**ಅನಿಮಿತ್ತಸ್ಯ ಚಿತ್ತಸ್ಯ ಯಾನುತ್ಪತ್ತಿಃ ಸಮಾದ್ವಯಾ ।**
**ಅಜಾತಸ್ಯೈವ ಸರ್ವಸ್ಯ ಚಿತ್ತದೃಶ್ಯಂ ಹಿ ತದ್ಯತಃ ॥ ೭೭ ॥**

೭೭. ಅನಿಮಿತ್ತವಾದ ಚಿತ್ತವು ಹುಟ್ಟುವದಿಲ್ಲವೆಂಬುದಿದೆಯಲ್ಲ, ಅದು ಅಜಾತವಾಗಿಯೇ ಎಲ್ಲವೂ ಆಗಿರುವ (ಚಿತ್ತದ) ಸಮವೂ ಅದ್ವಯವೂ ಆಗಿರುವ (ಅನುತ್ಪತ್ತಿಯು). ಏಕೆಂದರೆ ಅದು ಚಿತ್ತದೃಶ್ಯವೇ.

---

1. ಸಂಸಾರವೆಲ್ಲ ಇಷ್ಟರಲ್ಲಿ ಅಡಕವಾಗಿದೆ. ಸೂ. ಭಾ. ೧-೧-೪.

2. ಈ ಮಾತು ಇಲ್ಲದಿದ್ದರೂ ಸಾಗುತ್ತದೆ.

(ಭಾಷ್ಯ)

೩೩೦. ಪರಮಾರ್ಥದರ್ಶನೇನ ನಿರಸ್ತಧರ್ಮಾಧರ್ಮಾಖ್ಯೋತ್ಪತ್ತಿನಿಮಿತ್ತಸ್ಯ ಅನಿಮಿತ್ತಸ್ಯ ಚಿತ್ತಸ್ಯ ಇತಿ[1] (?) ಯಾ ಮೋಕ್ಷಾಖ್ಯಾ ಅನುತ್ಪತ್ತಿಃ ಸಾ ಸರ್ವದಾ ಸರ್ವಾವಸ್ಥಾಸು ಸಮಾ ನಿರ್ವಿಶೇಷಾ ಅದ್ವಯಾ ಚ । ಪೂರ್ವಮಪಿ ಅಜಾತಸ್ಯೈವ ಅನುತ್ಪನ್ನಸ್ಯ ಚಿತ್ತಸ್ಯ ಸರ್ವಸ್ಯ ಅದ್ವಯಸ್ಯ ಇತ್ಯರ್ಥಃ । ಯಸ್ಮಾತ್ ಪ್ರಾಗಪಿ ವಿಜ್ಞಾನಾತ್ ಚಿತ್ತದೃಶ್ಯಂ ತತ್ ದ್ವಯಂ ಜನ್ಮ ಚ ತಸ್ಮಾತ್ ಅಜಾತಸ್ಯ ಸರ್ವಸ್ಯ ಸರ್ವದಾ ಚಿತ್ತಸ್ಯ ಸಮಾ ಅದ್ವಯೈವ ಅನುತ್ಪತ್ತಿಃ । ನ ಪುನಃ ಕದಾಚಿತ್ ಭವತಿ ಕದಾಚಿತ್ ವಾ ನ ಭವತಿ । ಸರ್ವದಾ ಏಕರೂಪೈವ ಇತ್ಯರ್ಥಃ ॥

(ಭಾಷ್ಯಾರ್ಥ)

ಪರಮಾರ್ಥದರ್ಶನವನ್ನು ಕಂಡುಕೊಂಡು ಧರ್ಮ, ಅಧರ್ಮ–ಎಂಬ ಉತ್ಪತ್ತಿನಿಮಿತ್ತವು[2] ಹೋಗಿಬಿಡುವ ಅನಿಮಿತ್ತವಾದ ಚಿತ್ತಕ್ಕೆ ಮೋಕ್ಷವೆಂಬ ಹುಟ್ಟಿಲ್ಲದಿರುವಿಕೆ (ಯಾಗುವದಲ್ಲ[3]), ಅದು ಯಾವಾಗಲೂ ಎಲ್ಲಾ ಅವಸ್ಥೆಗಳಲ್ಲಿಯೂ ಸಮವಾಗಿ ಯಾವ ವಿಶೇಷವೂ ಇಲ್ಲದ್ದಾಗಿ, ಅದ್ವಯವೂ ಆಗಿರುತ್ತದೆ[4]. (ಅದು) ಮೊದಲೂ ಅಜಾತವಾಗಿಯೇ ಹುಟ್ಟದೆ ಇರುವದಾಗಿ, ಎಲ್ಲವೂ ಆಗಿರುವ ಎಂದರೆ ತನಗೆ ರಡನೆಯದಿಲ್ಲದ ಚಿತ್ತದ್ದೇ ಎಂಬರ್ಥ. ಏಕೆಂದರೆ ವಿಜ್ಞಾನ(ವುಂಟಾಗುವ)ದಕ್ಕೆ ಮೊದಲೂ ಅದು ಎಂದರೆ ದ್ವೈತವೂ ಜನ್ಮವೂ ಚಿತ್ತಕ್ಕೆ ಕಾಣುವದಾಗಿಯೇ[5] ಇರುವದು; ಆದ್ದರಿಂದ ಯಾವಾಗಲೂ ಹುಟ್ಟದೆ ಎಲ್ಲವೂ ಆಗಿರುವ ಚಿತ್ತದ(ಈ)

1. ಈ ಮಾತು ಇಲ್ಲಿ ಅವಶ್ಯವಾಗಿ ಕಾಣುವದಿಲ್ಲ.

2. ಹುಟ್ಟುವದಕ್ಕೆ ಕರ್ಮವೇ ಕಾರಣವು.

3. ಕಾರಣವಾದ ಕರ್ಮವು ಹೋಗಿಬಿಡುವದರಿಂದ ಮೋಕ್ಷವಾಗುವದೆಂಬ ವ್ಯವಹಾರವಿದೆಯಲ್ಲ, ಅದು ಬರಿಯ ವ್ಯವಹಾರವು ಎಂದರ್ಥ. ಇಲ್ಲಿ ಚಿತ್ತ, ಅದರ ಅನುತ್ಪತ್ತಿ, ಮೋಕ್ಷ–ಎಂಬ ಮಾತುಗಳಿಗೆಲ್ಲ ಆತ್ಮನೆಂದೇ ಅರ್ಥ.

4. ಆತ್ಮರೂಪವಾದ ಚಿತ್ತವು ಹುಟ್ಟುವದಿಲ್ಲ ಎಂದು ತಿಳಿದ ಬಳಿಕ ಹುಟ್ಟದೆ ಇರುವ ಸ್ವಭಾವವುಂಟಾಗುತ್ತದೆ ಎಂಬ ವಿಶೇಷವನ್ನು ಕಲ್ಪಿಸಬಾರದು. ಅದು ಯಾವಾಗಲೂ ಅಜವೇ.

5. ಚಿತ್ತಕ್ಕೆ ಕಾಣುವದು ಚಿತ್ತಕ್ಕಿಂತ ಬೇರೆಯಲ್ಲ; ಆದ್ದರಿಂದ ಆತ್ಮನಿಗಿಂತ ಬೇರೆಯಾಗಿ ಯಾವದೊಂದೂ ಹುಟ್ಟಿಯೇ ಇಲ್ಲ.

ಅನುತ್ಪತ್ತಿಯು (ಒಂದೇ) ಸಮವಾಗಿ ತನಗೆರಡನೆಯದಿಲ್ಲದ್ದಾಗಿಯೇ ಇರು ಹೊರತು ಕೆಲವುವೇಳೆ ಇರುತ್ತದೆ, ಕೆಲವುವೇಳೆ ಇರುವದಿಲ್ಲ-ಎಂಬುದಿಲ್ಲ[1]. ಯಾ ಗಲೂ ಒಂದೇ ಬಗೆಯಾಗಿಯೇ (ಇರುತ್ತದೆ) ಎಂದರ್ಥ.

(ಭಾಷ್ಯ)

೩೩೧. ಯಥೋಕ್ತೇನ ನ್ಯಾಯೇನ ಜನ್ಮನಿಮಿತ್ತಸ್ಯ ದ್ವಯಸ್ಯ ಅಭಾವಾ

(ಭಾಷ್ಯಾರ್ಥ)

ಮೇಲೆ ಹೇಳಿದ ಯುಕ್ತಿಯಿಂದ[2] ಜನ್ಮಕ್ಕೆ ಕಾರಣವಾದ ದ್ವೈತವು ಇಲ್ಲ ವದರಿಂದ—

**ಬುದ್ಧ್ವಾನಿಮಿತ್ತತಾಂ ಸತ್ಯಾಂ ಹೇತುಂ ಪೃಥಗನಾಪ್ನುವನ್ ।**
**ವೀತಶೋಕಂ ತಥಾ ಕಾಮಮಭಯಂ ಪದಮಶ್ನುತೇ ॥ ೭೮ ॥**

೭೮. ನಿಮಿತ್ತವಿಲ್ಲವೆಂಬುದನ್ನು ಸತ್ಯವೆಂದು ಅರಿತುಕೊ ಹೇತುವನ್ನು ಬೇರೆಯಾಗಿ ಪಡೆಯದವನು ಶೋಕವಿಲ್ಲದ ಮತ್ತು ಕ ವಿಲ್ಲದ ಭಯವಿಲ್ಲದ ಪದವನ್ನು ಹೊಂದುತ್ತಾನೆ.

(ಭಾಷ್ಯ)

೩೩೨. ಅನಿಮಿತ್ತತಾಂ ಚ ಸತ್ಯಾಂ ಪರಮಾರ್ಥರೂಪಾಂ ಬುದ್ಧ್ವಾ ಹೇ ಧರ್ಮಾದಿಕಾರಣಂ ದೇವಾದಿಯೋನಿಪ್ರಾಪ್ತಯೇ ಪೃಥಗನಾಪ್ನುವನ್ ಅನು ದಾನಃ ತ್ಯಕ್ತಬಾಹ್ಯೈಷಣಃ ಸನ್ ಕಾಮಶೋಕಾದಿವರ್ಜಿತಮ್ ಅವಿದ್ಯಾದಿರಹಿ ಅಭಯಂ ಪದಮ್ ಅಶ್ನುತೇ ಪುನರ್ನ ಜಾಯತೇ ಇತ್ಯರ್ಥಃ ॥

---

1. ಹಗ್ಗವೆಂಬ ನಿಜವನ್ನು ಅರಿತರೆ ಕಲ್ಪಿತವಾದ ಹಾವು ಹೋಗಿಬಿಡುತ್ತದೆ, ಅಲ್ಲಿ ಹುಟ್ಟಿಕೊಳ್ಳುವದಿಲ್ಲ-ಎಂಬ ವ್ಯವಹಾರದಂತೆ ಇದನ್ನು ಅರಿಯಬೇಕು. ಹ ಯಾವಾಗಲೂ ಹಾವು ಇರುವದಿಲ್ಲ; ಇದು ಜ್ಞಾನದಿಂದ ಗೊತ್ತಾಗುತ್ತದೆ. ಇ ಆತ್ಮನು ಯಾವಾಗಲೂ ಅಜನೆಂಬುದು ಜ್ಞಾನದಿಂದ ಗೊತ್ತಾಗುತ್ತದೆ. ಜ್ಞಾನದಿಂದ ಹೊಸದಾಗಿ ಅಜನಾಗುವದಿಲ್ಲ.

2. ಚಿತ್ತದೃಶ್ಯವಾಗಿರುವದರಿಂದ ಯಾವ ದ್ವೈತವೂ ಇಲ್ಲವೆಂಬ ಯುಕ್ತಿಯಿಂ

(ಭಾಷ್ಯಾರ್ಥ)

ನಿಮಿತ್ತವಿಲ್ಲವೆಂಬುದನ್ನೇ ಸತ್ಯವೆಂದು ಪರಮಾರ್ಥವೆಂದು ಅರಿತುಕೊಂಡದ್ದರಿಂದ ದೇವಾದಿಜನ್ಮವನ್ನು ಪಡೆಯುವದಕ್ಕೆ ಕಾರಣವಾಗಿರುವ[1] ಧರ್ಮಾದಿಗಳೆಂಬ ಹೇತುವನ್ನು ಬೇರೆಯಾಗಿ ಪಡೆಯದೆ ಇರುವಾತನು ಸ್ವೀಕರಿಸದೆ ಇರುವಾತನು, ಹೊರಗಿನ **ವಿಷಣೆ**ಗಳನ್ನು ಬಿಟ್ಟು ಕಾಮ, ಶೋಕ-ಮುಂತಾದವುಗಳಿಲ್ಲದ ಅಭಯವಾದ ಅವಿದ್ಯಾದಿಗಳಿಲ್ಲದ[2] ಪದವನ್ನು ಹೊಂದುತ್ತಾನೆ, ಮತ್ತೆ ಹುಟ್ಟುವದಿಲ್ಲ ಎಂದರ್ಥ.

**ಅಭೂತಾಭಿನಿವೇಶಾದ್ಧಿ ಸದೃಶೇ ತತ್ಪ್ರವರ್ತತೇ ।**
**ವಸ್ತ್ವಭಾವಂ ಸ ಬುದ್ಧ್ವೈವ ನಿಸ್ಸಙ್ಗಂ ವಿನಿವರ್ತತೇ ॥ ೭೯ ॥**

೭೯. ಅಭೂತಾಭಿನಿವೇಶದಿಂದಲೇ (ಅದಕ್ಕೆ) ಸದೃಶವಾದದ್ದರಲ್ಲಿ ಅದು ತೊಡಗುತ್ತದೆ. ವಸ್ತುವಿಲ್ಲವೆಂದು ಅವನು ಅರಿತುಕೊಂಡರೇಸಂಗವಿಲ್ಲದೆ ಹಿಂತಿರುಗುವದು.

(ಭಾಷ್ಯ)

೩೩೩. ಯಸ್ಮಾತ್ ಅಭೂತಾಭಿನಿವೇಶಾತ್ । ಅಸತಿ ದ್ವಯೇ ದ್ವಯಾಸ್ತಿತ್ವನಿಶ್ಚಯಃ ಅಭೂತಾಭಿನಿವೇಶಃ, ತಸ್ಮಾತ್ ಅವಿದ್ಯಾವ್ಯಾಮೋಹರೂಪಾತ್ ಹಿ ಸದೃಶೇ ತದನುರೂಪೇ ತತ್ ಚಿತ್ತಂ ಪ್ರವರ್ತತೇ । ತಸ್ಯ ದ್ವಯಸ್ಯ ವಸ್ತುನಃ ಅಭಾವಂ ಯದಾ ಬುದ್ಧವಾನ್ ತದಾ ತಸ್ಮಾತ್ ನಿಸ್ಸಙ್ಗಂ ನಿರಪೇಕ್ಷಂ ಸತ್ ವಿನಿವರ್ತತೇ ಅಭೂತಾಭಿನಿವೇಶವಿಷಯಾತ್ ॥

(ಭಾಷ್ಯಾರ್ಥ)

ಏಕೆಂದರೆ ಅಭೂತಾಭಿನಿವೇಶದಿಂದ—ಇಲ್ಲದೆ ಇರುವ ದ್ವೈತದಲ್ಲಿ (ದ್ವೈತವು) ಇದೆ ಎಂಬ ನಿಶ್ಚಯವೇ ಅಭೂತಾಭಿನಿವೇಶವು. ಅವಿದ್ಯೆಯಿಂದಾದ ವ್ಯಾಮೋಹರೂಪ

---

1. ನಿಮಿತ್ತವು ಪರಮಾರ್ಥವಾಗಿಲ್ಲ. ಧರ್ಮಾಧರ್ಮಗಳೇ ಇಲ್ಲ; ಆದ್ದರಿಂದ ದೇವತೆಯು ಜನ್ಮವೇ ಮುಂತಾದ ಉತ್ತಮಮಧ್ಯಮನೀಚ ಯೋನಿಗಳಿಗೆ ಕಾರಣವಾದ ಸಾಧನವೂ ಆತ್ಮನಿಗಿಂತ ವ್ಯತಿರಿಕ್ತವಾಗಿಲ್ಲ, ಎಲ್ಲವೂ ಆತ್ಮನೇ-ಎಂದು ತಿಳಿದುಕೊಂಡಿರುವಾತನು ಯಾವ ಕರ್ಮಕ್ಕೂ ಕೈಹಾಕುವದಿಲ್ಲ ಎಂದರ್ಥ.

2. ದ್ವೈತವನ್ನು ಸತ್ಯವೆಂದು ಬಗೆಯುವ ಅವಿದ್ಯೆಯೇ ಭಯಕ್ಕೆ ಕಾರಣವಾಗಿರುವದರಿಂದ ಅವಿದ್ಯೆಯನ್ನೇ ಇಲ್ಲಿ ಭಯವೆಂದು ಕರೆದಿದೆ-ಎಂದು ಭಾವ.

ವಾದ (ಅಭಿಮಾನದಿಂದ ಅದಕ್ಕೆ) ಸಸ್ಪೃಶವಾದದ್ದರಲ್ಲಿ ಅದರಂತಿರುವ[1] (ಮತ್ತೊಂದು ವಸ್ತುವಿನಲ್ಲಿ) ಆ ಚಿತ್ತವು ತೊಡಗುತ್ತದೆ. ಆ ದ್ವೈತವೆಂಬ ವಸ್ತು (ನಿಜವಾಗಿ) ಇಲ್ಲ ವೆಂದು ಯಾವಾಗ ಅರಿತುಕೊಳ್ಳುವನೋ ಆಗ (ಅದು) ಸಂಗವಿಲ್ಲದೆ (ಅದರ) ಅಪೇಕ್ಷಯಿಲ್ಲದ್ದಾಗಿ, ಇಲ್ಲದ್ದನ್ನು ಇದೆಯೆಂದು ತಿಳಿಯುವ ಅಭಿಮಾನಕ್ಕೆ ವಿಷಯ ವಾದ ಆ (ಪದಾರ್ಥ)ದಿಂದ ಹಿಂತಿರುಗುವದು[2].

**ನಿವೃತ್ತಸ್ಯಾಪ್ರವೃತ್ತಸ್ಯ ನಿಶ್ಚಲಾ ಹಿ ತದಾ ಸ್ಥಿತಿಃ ।**
**ವಿಷಯಃ ಸ ಹಿ ಬುದ್ಧಾನಾಂ ತತ್ ಸಾಮ್ಯಮಜಮದ್ವಯಮ್ ॥೮೦॥**

೮೦. ಹಿಂತಿರುಗಿ (ಮತ್ತೆ) ಮುಂದುವರಿಯದೆ ಇರುವ (ಚಿತ್ತದ) ಆಗಿನ ಸ್ಥಿತಿಯು ನಿಶ್ಚಲವಾಗಿಯೇ ಇರುವದು. ಅದು ಜ್ಞಾನಿಗಳಿಗೆ ವಿಷಯ ವಾಗಿರುವದು ; ಅದು ಸಾಮ್ಯವು, ಹುಟ್ಟಿಲ್ಲದ್ದು, ಎರಡನೆಯದಿಲ್ಲದ್ದು.

(ಭಾಷ್ಯ)

೩೩೪. ನಿವೃತ್ತಸ್ಯ ದ್ವೈತವಿಷಯಾತ್, ವಿಷಯಾನ್ತರೇ ಚ ಅಪ್ರವೃತ್ತಸ್ಯ ಅಭಾವದರ್ಶನೇನ, ಚಿತ್ತಸ್ಯ ನಿಶ್ಚಲಾ ಚಲನವರ್ಜಿತಾ ಬ್ರಹ್ಮಸ್ವರೂಪೈವ ತದಾ ಸ್ಥಿತಿಃ । ಯೈಷಾ ಬ್ರಹ್ಮಸ್ವರೂಪಾ ಸ್ಥಿತಿಃ ಚಿತ್ತಸ್ಯ ಅದ್ವಯವಿಜ್ಞಾನೈಕರಸಘನ ಲಕ್ಷಣಾ । ಸ ಹಿ ಯಸ್ಮಾತ್ ವಿಷಯಃ ಗೋಚರಃ ಪರಮಾರ್ಥದರ್ಶಿನಾಂ ಬುದ್ಧಾ ನಾಮ್ । ತಸ್ಮಾತ್ ತತ್ ಸಾಮ್ಯಂ ಪರಂ ನಿರ್ವಿಶೇಷಮ್, ಅಜಮ್, ಅದ್ವಯಂ ಚ ॥

(ಭಾಷ್ಯಾರ್ಥ)

ದ್ವೈತವಿಷಯವನ್ನು ಬಿಟ್ಟು ಹಿಂತಿರುಗಿ (ದ್ವೈತ) ವಿಲ್ಲವೆಂದು ಕಂಡು ಕೊಂಡದ್ದರಿಂದ ಮತ್ತೊಂದು ವಿಷಯದಲ್ಲಿಯೂ ಪ್ರವರ್ತಿಸದೆ ಇರುವ ಚಿತ್ತದ ಆಗಿನ ಸ್ಥಿತಿಯು[3] ನಿಶ್ಚಲವಾದ ಅಲುಗಾಟವಿಲ್ಲದ ಬ್ರಹ್ಮದ ಸ್ವರೂಪವೇ ಆಗಿರುವದು.

---

1. ಹಿಂದೆ ತಾನು ಅನುಭವಿಸಿದ ವಸ್ತುವಿನಂತಿರುವ ಮತ್ತೊಂದು ವಸ್ತುವಿನಲ್ಲಿ ಎಂದರ್ಥ. ಹಿಟ್ಟಿನ ಹಾಲಿನಲ್ಲಿ ಹಾಲು ಎಂಬ ಬುದ್ಧಿಯುಂಟಾಗಿದ್ದ ಉಪಮನ್ಯು ಮತ್ತೆ ಹಿಟ್ಟಿನ ರಸವನ್ನೇ ಹಸುವಿನ ಹಾಲೆಂದು ನಂಬಿ ಕುಡಿಯುವದಕ್ಕೆ ಪ್ರವರ್ತಿಸುತ್ತಿದ್ದದ್ದನ್ನು ದೃಷ್ಟಾಂತವಾಗಿ ತೆಗೆದುಕೊಳ್ಳಬಹುದು.

2. ಪ್ರವೃತ್ತಿಗೆ ದ್ವೈತಸತ್ಯತ್ವಬುದ್ಧಿಯೂ ಆ ಬುದ್ಧಿಗೆ ಅವಿದ್ಯೆಯೂ ಕಾರಣವು; ಆದ್ದರಿಂದ ಅವಿದ್ಯೆಯ ನಾಶವುಂಟಾದರೆ ಪ್ರವೃತ್ತಿಯುಂಟಾಗಲಾರದು.

3. ಅದ್ವೈತಪ್ರಕರಣದ ೪೬ನೆಯ ಕಾರಿಕೆಯಲ್ಲಿ ಹೇಳಿದ ಧ್ಯಾನದಿಂದ ಪಡೆಯುವ ಸ್ಥಿತಿಯನ್ನು ಹೇಳಿದೆ; ಇಲ್ಲಿ ಜ್ಞಾನದಿಂದ ಅರಿತುಕೊಳ್ಳುವ ನಿತ್ಯಸ್ವರೂಪವನ್ನೇ ಸ್ಥಿತಿಯೆಂದು ಕರೆದಿದೆ. ಅದ್ವೈತಪ್ರಕರಣದ ೩೫ರಿಂದ ೩೮ರ ವರೆಗಿನ ಕಾರಿಕೆಗಳಲ್ಲಿ ಹೇಳಿರುವ ಸ್ಥಿತಿಯೂ ಇದೇ.

ಚಿತ್ತವು ತನಗೆರಡನೆಯದಿಲ್ಲದ ವಿಜ್ಞಾನವೆಂಬ ಒಂದೇ ರಸದ ಗಟ್ಟಿಯ ರೂಪವಾಗಿರುವ ಈ ಬ್ರಹ್ಮಸ್ವರೂಪವಾಗಿರುವದೆಂಬ ಈ ಸ್ಥಿತಿಯುಂಟಲ್ಲ, ಅದು ಪರಮಾರ್ಥವನ್ನು ಕಂಡುಕೊಂಡಿರುವ ಬುದ್ಧರಿಗೆ (ಮಾತ್ರ) ವಿಷಯವಾಗಿರುವದು, ಗೋಚರವಾಗಿರುವದು., ಅಲ್ಲವೆ ? (ಹಿ=ಯಸ್ಮಾತ್) ಆದ್ದರಿಂದ ಅದು ಹೆಚ್ಚಿನ ಸಾಮ್ಯವು ಯಾವ ವಿಶೇಷವೂ ಇಲ್ಲದ್ದು[1] ; ಹುಟ್ಟಿಲ್ಲದ್ದೂ, ಎರಡನೆಯದಿಲ್ಲದ್ದೂ ಆಗಿರುವದು.

(ಭಾಷ್ಯ)

೩೩೫. ಪುನರಪಿ ಕೀದೃಶಶ್ಚ ಅಸೌ ಬುದ್ಧಾನಾಂ ವಿಷಯಃ ಇತಿ **ಆಹ**—

(ಭಾಷ್ಯಾರ್ಥ)

ಜ್ಞಾನಿಗಳಿಗೆ ಮಾತ್ರ ಗೋಚರವಾಗುವ ಈ (ತತ್ತ್ವವು) ಮತ್ತು ಎಂಥದ್ದು[2] ? ಎಂದರೆ ಹೇಳುತ್ತಾರೆ :—

**ಅಜಮನಿದ್ರಮಸ್ವಪ್ನಂ ಪ್ರಭಾತಂ ಭವತಿ ಸ್ವಯಂ ॥**
**ಸಕೃದ್ವಿಭಾತೋ ಹ್ಯೇವೈಷ ಧರ್ಮೋ ಧಾತುಸ್ವಭಾವತಃ ॥ ೮೧ ॥**

೮೧. ಹುಟ್ಟಿಲ್ಲದ್ದು, ನಿದ್ರೆಯಿಲ್ಲದ್ದು, ಕನಸಿಲ್ಲದ್ದು, ತಾನೇ ಬೆಳಗುವಂಥದ್ದಾಗಿರುತ್ತದೆ. ಈ ಧರ್ಮವು ಧಾತುಸ್ವಭಾವದಿಂದಲೇ ಒಂದೇ ಸಮನೆ ಬೆಳಗುವಂಥದ್ದು.

(ಭಾಷ್ಯ)

೩೩೬. ಸ್ವಯಮೇವ ತತ್ ಪ್ರಭಾತಂ ಭವತಿ, ನಾದಿತ್ಯಾದ್ಯಪೇಕ್ಷಮ್ ಸ್ವಯಂಜ್ಯೋತಿಃಸ್ವಭಾವಮ್ ಇತ್ಯರ್ಥಃ । ಸಕೃದ್ವಿಭಾತಃ ಸದೈವ ವಿಭಾತಃ ಇತ್ಯೇತತ್ । ಏಷ ಏವಂಲಕ್ಷಣಃ ಆತ್ಮಾಖ್ಯಃ ಧರ್ಮಃ ಧಾತುಸ್ವಭಾವತಃ ವಸ್ತುಸ್ವಭಾವತಃ ಇತ್ಯರ್ಥಃ ॥

---

1. ಇಂಥದ್ದು ಅಂಥದ್ದು ಎಂದು ಹೇಳುವದಕ್ಕೆ ಆಗದ್ದು.

2. ಹಿಂದೆ ಹೇಳಿದ "ವಿಷಯಃ ನ ಬುದ್ಧಾನಾಂ" ಎಂಬುದಕ್ಕೇ ಈ ಶ್ಲೋಕದಲ್ಲಿ ಬೇರೆಯ ವಿಶೇಷಣವನ್ನು ಹೇಳಿದೆ. ಎರಡೂ ಸೇರಿ ಒಂದೇ ವಾಕ್ಯ ಎಂದು ಭಾವ.

(ಭಾಷ್ಯಾರ್ಥ)

ಅದು ತಾನೇ ಬೆಳಗುವಂಥದ್ದು ಆಗಿರುತ್ತದೆ[1], ಆದಿತ್ಯನೇ ಮುಂತಾದ (ಬೆಳಕನ್ನು) ಬಯಸುವದಿಲ್ಲ[2]. ಸ್ವಯಂಪ್ರಕಾಶವಾದ ಸ್ವಭಾವವುಳ್ಳದ್ದು ಎಂದರ್ಥ. ಒಂದೇ ಸಮನೆ ಬೆಳಗುವಂಥದ್ದು, ಯಾವಾಗಲೂ ಬೆಳಗುತ್ತಿರುವಂಥದ್ದು ಎಂದರ್ಥ[3]. ಈ (ಮೇಲೆ ಹೇಳಿದ) ರೂಪದ ಆತ್ಮನೆಂಬ ಧರ್ಮವು[4] ಧಾತುಸ್ವಭಾವದಿಂದಲೇ ವಸ್ತುಸ್ವಭಾವದಿಂದಲೇ (ಸ್ವಯಂಪ್ರಕಾಶವಾಗಿ ನಿತ್ಯಪ್ರಕಾಶಸ್ವರೂಪವಾಗಿರುತ್ತದೆ) ಎಂದರ್ಥ.

(ಭಾಷ್ಯ)

೩೩೭. ಏವಂ ಬಹುಶಃ ಉಚ್ಯಮಾನಮಪಿ ಪರಮಾರ್ಥತತ್ತ್ವಂ ಕಸ್ಮಾತ್ ಲೌಕಿಕೈರ್ನ ಗೃಹ್ಯತೇ ? ಇತಿ ಉಚ್ಯತೇ :—

(ಭಾಷ್ಯಾರ್ಥ)

ಹೀಗೆ ಬಹುಪ್ರಕಾರಗಳಿಂದ ಹೇಳಿದರೂ (ಈ) ಪರಮಾರ್ಥತತ್ತ್ವವನ್ನು ಲೋಕದ (ಜನರು) ಏತಕ್ಕೆ ಅರಿತುಕೊಳ್ಳದೆ ಇರುವರು ? ಎಂದರೆ ಹೇಳುತ್ತಾರೆ :—

**ಸುಖಮಾವ್ರಿಯತೇ ನಿತ್ಯಂ ದುಃಖಂ ವಿವ್ರಿಯತೇ ಸದಾ ।**
**ಯಸ್ಯ ಕಸ್ಯ ಚ ಧರ್ಮಸ್ಯ ಗ್ರಹೇಣ ಭಗವಾನಸೌ ॥ ೮೨ ॥**

೮೨. ಯಾವದಾದರೊಂದು ಧರ್ಮವನ್ನು ಗ್ರಹಿಸುವದರಿಂದ ಈ ಭಗವಂತನು ಯಾವಾಗಲೂ ಸುಲಭವಾಗಿ ಮುಚ್ಚಲ್ಪಡುತ್ತಾನೆ. ಯಾವಾಗಲೂ ಕಷ್ಟದಿಂದ ತೋರಿಕೊಳ್ಳುತ್ತಾನೆ.

---

1. "ಅಜಮನಿದ್ರಮಸ್ವಪ್ನಂ" ಎಂಬುದರ ಭಾಷ್ಯವು ಲೇಖಕರ ತಪ್ಪಿನಿಂದ ಕೈಬಿಟ್ಟು ಹೋಗಿದೆಯೋ, ೧–೧೬, ೩–೩೬ ರಲ್ಲಿ ವ್ಯಾಖ್ಯಾನವಾಗಿದೆಯೆಂದು ಭಾಷ್ಯಕಾರರು ಬೇಕೆಂತ ಬಿಟ್ಟಿದಾರೋ ತಿಳಿಯದು.

2. ಕ. ೨–೨–೧೫, ಮುಂ. ೨–೨–೧೦ ಇವುಗಳ ಸೂಚನೆ; ಆತ್ಮನು ಜ್ಞಾನದಿಂದ ತಿಳಿಯಬರುವನು ಎನ್ನುವುದೂ ಉಪಚಾರವೇ, ಏಕೆಂದರೆ ಅವನು ಮತ್ತೊಂದನ್ನು ಬಯಸಿ ಬೆಳಗುವವನಲ್ಲ.

3. ಒಂದು ಕಾಲದಲ್ಲಿ ಬೆಳಗದೆ ಮತ್ತೊಂದು ಕಾಲದಲ್ಲಿ ಬೆಳಗುವಂತಿದ್ದರೆ ಜ್ಞಾನವು ಬಂದಮೇಲೆ ಬೆಳಗುತ್ತಾನೆ ಎನ್ನಬಹುದಾಗಿತ್ತು ಎಂಬು ಭಾವ.

4. ಧರ್ಮವು ಎಂದರೆ ತತ್ತ್ವವು.

5. ಪಾ॥ ದಲ್ಲಿ ಮಾತ್ರ ಈ ಮಾತು ಇದೆ.

(ಭಾಷ್ಯ)

೬೩೮. ಯಸ್ಮಾತ್ ಯಸ್ಯ ಕಸ್ಯಚಿತ್ ದ್ವಯವಸ್ತುನಃ ಧರ್ಮಸ್ಯ ಗ್ರಹೇಣ ಗ್ರಹಣಾವೇಶೇನ ಮಿಥ್ಯಾಭಿನಿವಿಷ್ಟತಯಾ ಸುಖಮ್ ಆವ್ರಿಯತೇ ಅನಾಯಾಸೇನ ಆಚ್ಛಾದ್ಯತೇ ಇತ್ಯರ್ಥಃ । ದ್ವಯೋಪಲಬ್ಧಿನಿಮಿತ್ತಂ ಹಿ ತತ್ರ ಆವರಣಂ ನ ಯತ್ನಾಂತರಮ್ ಅಪೇಕ್ಷತೇ । ದುಃಖಂ ಚ ವಿವ್ರಿಯತೇ ಪ್ರಕಟೀಕ್ರಿಯತೇ । ಪರಮಾರ್ಥಜ್ಞಾನಸ್ಯ ದುರ್ಲಭತ್ವಾತ್ । ಭಗವಾನ್ ಅಸೌ । ಆತ್ಮಾ ಅದ್ವಯೋ ದೇವ ಇತ್ಯರ್ಥಃ । ಅತಃ ವೇದಾನ್ತೈಃ ಆಚಾರ್ಯೈಶ್ಚ ಬಹುಶಃ ಉಚ್ಯಮಾನೋಽಪಿ ನೈವ" ಜ್ಞಾತುಂ ಶಕ್ಯಃ ಇತ್ಯರ್ಥಃ । "ಆಶ್ಚರ್ಯೋ ವಕ್ತಾ ಕುಶಲೋಽಸ್ಯ ಲಬ್ಧಾ" (ಕ ೧-೨-೭) ಇತಿ ಶ್ರುತೇಃ ॥

(ಭಾಷ್ಯಾರ್ಥ)

ಏಕೆಂದರೆ ಯಾವದಾದರೊಂದು ದ್ವೈತವಸ್ತುವೆಂಬ ಧರ್ಮವನ್ನು[1] ಗ್ರಹಿಸುವದರಿಂದ ಅರಿಯುತ್ತೇನೆಂಬ ಭಾವನೆಯಿಂದ ಸುಳ್ಳಾಗಿ ಅಭಿಮಾನವಿದ್ದುಬಿಟ್ಟಿರುವದರಿಂದ[2] ಸುಲಭವಾಗಿ[3] ಮುಚ್ಚಲ್ಪಡುವನು, ಯಾವ ಆಯಾಸವೂ ಇಲ್ಲದೆ ಮುಚ್ಚಿಹೋಗುತ್ತಾನೆ ಎಂದರ್ಥ. ದ್ವೈತವನ್ನು ಕಾಣುವದೆಂಬ ನಿಮಿತ್ತದಿಂದಲೇ ಅಲ್ಲಿ ಮುಸುಕು (ಉಂಟಾಗುವದೇ ಹೊರತು) ಅದಕ್ಕೆ ಮತ್ತೆ ಯಾವ ಬೇರೆಯ ಪ್ರಯತ್ನವೂ ಬೇಕಿರುವದಿಲ್ಲ[4]. ಮತ್ತು ಕಷ್ಟದಿಂದ ತೋರಿಕೊಳ್ಳುತ್ತಾನೆ, ಪ್ರಕಟವಾಗುತ್ತಾನೆ; ಏಕೆಂದರೆ ಪರಮಾರ್ಥದ ಅರಿವು ದುರ್ಲಭವಾಗಿರುತ್ತದೆ.

ಈ ಭಗವಂತನು ಆತ್ಮನು ಅದ್ವಿತೀಯನಾದ ದೇವನು (ಸುಖವಾಗಿ ಮರೆಯಾಗುತ್ತಾನೆ, ಕಷ್ಟದಿಂದ ಪ್ರಕಟವಾಗುತ್ತಾನೆ) ಎಂದರ್ಥ. ಆದ್ದರಿಂದ ಉಪನಿಷತ್ತುಗಳೂ

1. ಪದಾರ್ಥವನ್ನು.

2. ನಾವು ಅನಾತ್ಮವನ್ನು ಕಾಣುತ್ತಿದೇವೆಂದು ನಿಶ್ಚಯಿಸಿರುವಾಗಲೂ ಅದು ತಪ್ಪುತಿಳುವಳಿಕೆಯೇ ಹೊರತು ಆ ಪದಾರ್ಥವು ನಿಜವಾಗಿರುವದಿಲ್ಲ.

3. ಕಾರಿಕೆಯಲ್ಲಿ "ಸುಖಂ" ಎಂಬ ಮಾತು ಕ್ರಿಯಾವಿಶೇಷಣವೇ ಹೊರತು ನಾಮಪದವಲ್ಲ.

4. ದ್ವೈತವಿದೆಯೆಂಬ ಮಿಥ್ಯಾಭಿಮಾನವೇ ಆತ್ಮದರ್ಶನಕ್ಕೆ ಅಡ್ಡಿ; ಆದ್ದರಿಂದ ಅಭಿಮಾನವು ತೊಲಗಿದರೆ ಸಾಕ್ಷಾತ್ಕಾರವಾದಂತೆಯೇ ಎಂದು ಭಾವ. ಮೂಲಾವಿದ್ಯೆಯೆಂಬ ಒಂದು ಆವರಣವು ಆತ್ಮವನ್ನು ಮುಸುಕಿರುವದೆಂದು ಹೇಳುವ ವ್ಯಾಖ್ಯಾನಕಾರರ ಪ್ರಸ್ಥಾನವು ಆಚಾರ್ಯರಿಗೆ ಸಮ್ಮತವಲ್ಲ.

ಆಚಾರ್ಯರೂ ಬಹುವಾಗಿ ಹೇಳಿದರೂ ಅರಿಯುವದಕ್ಕೆ ಆಗುವಂತಿಲ್ಲ ಎಂದರ್ಥ. " ಹೇಳುವಾತನು ಆಶ್ಚರ್ಯರೂಪನು, ಇವನನ್ನು ಪಡೆದುಕೊಳ್ಳುವಾತನು ಜಾಣನು " (ಕ. ೧-೨-೭) ಎಂಬ ಶ್ರುತಿಯು ಇದಕ್ಕೆ ಪ್ರಮಾಣ.

(ಭಾಷ್ಯ)

೩೩೯. ಅಸ್ತಿನಾಸ್ತೀತ್ಯಾದಿಸೂಕ್ಷ್ಮವಿಷಯಾ ಅಪಿ ಪಣ್ಡಿತಾನಾಂ ಗ್ರಹಾಃ ಭಗವತಃ ಪರಮಾತ್ಮನಃ ಆವರಣಾ ಏವ. ಕಿಮುತ ಮೂಢಜನಾನಾಂ ಬುದ್ಧಿಲಕ್ಷಣಾಃ ಇತ್ಯೇವಮರ್ಥಂ ಪ್ರದರ್ಶಯನ್ ಆಹ—

(ಭಾಷ್ಯಾರ್ಥ)

ಇದಾನೆ, ಇಲ್ಲ—ಮುಂತಾದ ಸೂಕ್ಷ್ಮವಿಷಯವಾದ ಪಂಡಿತರ ತಿಳಿವುಗಳು ಕೂಡ ಭಗವಂತನಾದ ಪರಮಾತ್ಮನಿಗೆ ಮುಸುಕೇ ಆಗಿರುವವು[1]. (ಹೀಗಿರುವಲ್ಲಿ) ಮೂಢಜನರ ಬುದ್ಧಿಯೆಂಬಿವು (ಮುಸುಕು ಎಂದು ಹೇಳುವ)ದೇನು ?—ಎಂಬೀ ವಿಷಯವನ್ನು ತಿಳಿಸುವದಕ್ಕಾಗಿ (ಹೀಗೆಂದು) ಹೇಳುತ್ತಾರೆ :—

**ಅಸ್ತಿ ನಾಸ್ತ್ಯಸ್ತಿನಾಸ್ತೀತಿ ನಾಸ್ತಿನಾಸ್ತೀತಿ ವಾ ಪುನಃ ।**
**ಚಲಸ್ಥಿರೋಭಯಾಭಾವೈರಾವೃಣೋತ್ಯೇವ ಬಾಲಿಶಃ ॥ ೮೩ ॥**

೮೩. ಇದಾನೆ, ಇಲ್ಲ, ಇದ್ದೂ ಇಲ್ಲ ಎಂದೋ, ಇಲ್ಲವೇ ಇಲ್ಲ ಎಂದೋ, ಚಲ, ಸ್ಥಿರ, ಉಭಯ, ಅಭಾವ—(ಇವು)ಗಳಿಂದ ಬಾಲಿಶನು ಮುಚ್ಚುತ್ತಲೇ ಇರುವನು.

(ಭಾಷ್ಯ)

೩೪೦. ಅಸ್ತಿ ಆತ್ಮಾ ಇತಿ ವಾದೀ ಕಶ್ಚಿತ್ ಪ್ರತಿಪದ್ಯತೇ । ನಾಸ್ತಿ ಇತಿ ಅಪರಃ ವೈನಾಶಿಕಃ । ಅಸ್ತಿನಾಸ್ತಿ ಇತಿ ಅಪರಃ ಅರ್ಧವೈನಾಶಿಕಃ ಸದಸದ್ವಾದೀ ದಿಗ್ವಾಸಾಃ । ನಾಸ್ತಿನಾಸ್ತಿ ಇತಿ ಅತ್ಯನ್ತಶೂನ್ಯವಾದೀ । ತತ್ರ ಅಸ್ತಿಭಾವಃ ಚಲಃ । ಘಟಾದ್ಯನಿತ್ಯಲಕ್ಷಣ[2]ತ್ವಾತ್ । ನಾಸ್ತಿಭಾವಃ ಸ್ಥಿರಃ । ಸದಾ ಅವಿಶೇಷತ್ವಾತ್ ।

---

1. ಬುದ್ಧಿಗೆ ವಿಷಯವಾಗುವದೆಲ್ಲವೂ ದ್ವೈತವೇ, ಅದ್ವೈತರೂಪವಾದ ಪರಮಾರ್ಥಕ್ಕೆ ಆವರಣವೇ.

2. 'ಘಟಾದ್ಯನಿತ್ಯವಿಲಕ್ಷಣತ್ವಾತ್' ಎಂಬ ಅಚ್ಚಿನ ಪಾಠವನ್ನು ಹೀಗೆ ತಿದ್ದಿಕೊಂಡಿದೆ.

ಉಭಯಂ ಚಲಸ್ಥಿರವಿಷಯತ್ವಾತ್ ಸದಸದ್ಭಾವಃ । ಅಭಾವಃ ಅತ್ಯನ್ತಾಭಾವಃ । ಪ್ರಕಾರಚತುಷ್ಟಯಸ್ಯಾಪಿ (ಭಗವದಾವರಣತ್ವಮ್ ಆಹ–[1]) ತೈಃ ಏತೈಃ ಚಲಸ್ಥಿರೋಭಯಾಭಾವೈಃ ಸದಸದಾದಿವಾದೀ ಸರ್ವೋಽಪಿ ಭಗವನ್ತಮ್ ಆವೃಣೋತ್ಯೇವ, ಬಾಲಿಶಃ ಅವಿವೇಕೀ । ಯದ್ಯಪಿ ಪಣ್ಡಿತಃ ಬಾಲಿಶ ಏವ । ಪರಮಾರ್ಥತತ್ತ್ವಾನವಬೋಧಾತ್ । ಕಿಮು ಸ್ವಭಾವಮೂಢೋ ಜನಃ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಆತ್ಮನು ಇದ್ದಾನೆ ಎಂದು ಒಬ್ಬ ವಾದಿಯು[2] ತಿಳಿದುಕೊಂಡಿದ್ದಾನೆ. ಮತ್ತೊಬ್ಬನು, ವೈನಾಶಿಕನು[3], ಇಲ್ಲ ಎಂದು (ತಿಳಿದುಕೊಂಡಿರುತ್ತಾನೆ). ಇದ್ದೂ ಇಲ್ಲ ಎಂದು ಇನ್ನೊಬ್ಬನು, ಅರ್ಧವೈನಾಶಿಕನಾದ ಸದಸದ್ವಾದಿಯಾದ **ದಿಗಂಬರನು** (ತಿಳಿದುಕೊಂಡಿರುತ್ತಾನೆ). ಇಲ್ಲವೇಇಲ್ಲ ಎಂದು **ಅತ್ಯಂತಶೂನ್ಯವಾದಿಯು** (ತಿಳಿದುಕೊಂಡಿರುತ್ತಾನೆ).

ಇವುಗಳಲ್ಲಿ ಇದೆಯೆಂಬ ಭಾವವು ಚಲವು. ಏಕೆಂದರೆ (ಅದು) ಗಡಿಗೆ ಮುಂತಾದ ಅನಿತ್ಯ (ಪದಾರ್ಥಗಳಿಗೆ) ಲಕ್ಷಣವಾಗಿರುತ್ತದೆ[4]. ಇಲ್ಲವೆಂಬುದು ಸ್ಥಿರ(ವಾಗಿರುತ್ತದೆ.) ; ಏಕೆಂದರೆ ಅದು ಯಾವಾಗಲೂ ಒಂದೇ ರೂಪವಾಗಿರುತ್ತದೆ[5]. ಇದ್ದೂ ಇಲ್ಲವೆಂಬುದು ಚಲ, ಸ್ಥಿರ ಈ ಎರಡರ ವಿಷಯವಾಗಿರುವದರಿಂದ

1. ಕಂಸದಲ್ಲಿರುವ ಗ್ರಂಥವು ಲೇಖಕರ ಕೈತಪ್ಪಿನಿಂದ ಬಿಟ್ಟುಹೋಗಿದೆ ಎಂದು ಕಲ್ಪಿಸಲಾಗಿದೆ.

2. ತಾರ್ಕಿಕರು, ಮೀಮಾಂಸಕರು ಮುಂತಾದವರು.

3. ಬೌದ್ಧನು.

4. ಯಾವದನ್ನು ಇದೆ ಎನ್ನುವೆವೋ ಅದು ಅನಿತ್ಯವು. ಈ ಅರ್ಥದಲ್ಲಿ ಪರಮಾರ್ಥವು ಇದೆ ಎನ್ನಕೂಡದು. ಗೀ. ಭಾ. ೧೩–೧೨, (ಭಾ. ಭಾ. ೨೫೦–೨೫೨), ಕ. ಭಾ. ೨–೩–೧೩, (ಭಾ. ಭಾ. ೧೭೬) ಇವುಗಳನ್ನು ನೋಡಿರಿ. ಆ॥ ವ್ಯಾಖ್ಯಾನಕಾರರು "ಘಟಾದ್ಯನಿತ್ಯವಿಲಕ್ಷಣತ್ವಾತ್" ಎಂಬ ಪಾಠವನ್ನು ಒಪ್ಪಿ ಆತ್ಮನು ಸುಖಾದ್ಯಾಕಾರದಿಂದ ಪರಿಣಾಮವಾಗುವದರಿಂದ ಅನಿತ್ಯವಾದ ಘಟವೇ ಮುಂತಾದವುಗಳಿಗಿಂತ ವಿಲಕ್ಷಣನಾಗಿರುವದರಿಂದ ಚಲನು, ಸವಿಶೇಷನು, ಪರಿಣಾಮಿಯು ಎಂದು ಅರ್ಥಮಾಡಿರುತ್ತಾರೆ.

5. ಆತ್ಮನು ಇಲ್ಲ ಎಂಬುದರಲ್ಲಿ ಯಾವ ವಿಶೇಷವನ್ನೂ ಕಲ್ಪಿಸುವದಕ್ಕೆ ಬರುವದಿಲ್ಲ; ಆದರೆ ಆತ್ಮನು ಸವಿಶೇಷವಾಗಿ ತೋರುವನೆಂಬ ಅನುಭವವು ಈ ಪಕ್ಷಕ್ಕೆ ವಿರುದ್ಧವಾಗಿದೆ ಎಂದು ಭಾವ.

ಉಭಯವು[1]. ಅಭಾವವೆಂದರೆ ಅತ್ಯಂತವಾಗಿ ಇಲ್ಲದೆಯೇ ಇರುವದು[2]–(ಈ) ನಾಲ ಪ್ರಕಾರಗಳೂ (ಭಗವಂತನಿಗೆ ಆವರಣಗಳೇ ಎಂದು ಈಗ ಹೇಳುತ್ತಾರೆ). ಹೀಗೆ ಚ ಸ್ಥಿರ, ಉಭಯ, ಅಭಾವ–ಎಂಬ ಈ (ನಾಲ್ಕು ಪ್ರಕಾರಗಳಿಂದ) ಸದ್ವಾ ಅಸದ್ವಾದಿ ಮೊದಲಾದವರೆಲ್ಲರೂ ಭಗವಂತನನ್ನು ಮುಚ್ಚುತ್ತಲೇ ಇರುವರು. (ಹಿ ಮುಚ್ಚುವವನು) ಬಾಲಿಶನು : (ಅವನು) ಪಂಡಿತನಾದರೂ ಪರಮಾರ್ಥತತ್ತ್ವವ ಅರಿಯದ್ದರಿಂದ ಬಾಲಿಶನೇ (ಆಗಿರುತ್ತಾನೆ). ಇನ್ನು ಸ್ವಭಾವದಿಂದಲೇ ಮೂಢರಾ ಜನರು[3] (ಮುಚ್ಚುತ್ತಾರೆಂದು ಹೇಳುವ)ದೇನು ?–ಎಂದು ಅಭಿಪ್ರಾಯ.

(ಭಾಷ್ಯ)

೩೪೧. ಕೀದೃಕ್ ಪುನಃ ಪರಮಾರ್ಥತತ್ತ್ವಮ್, ಯದವಬೋಧಾ ಅಬಾಲಿಶಃ ಪಣ್ಡಿತೋ ಭವತಿ ಇತಿ ? ಆಹ–

(ಭಾಷ್ಯಾರ್ಥ)

ಹಾಗಾದರೆ ಯಾವ (ಪರಮಾರ್ಥತತ್ತ್ವವನ್ನು) ಅರಿತುಕೊಂಡರೆ ಬಾ ನಾಗದೆ ಪಂಡಿತನಾಗುವನೋ (ಆ) ಪರಮಾರ್ಥತತ್ತ್ವವು ಹೇಗಿರುವದು ? ಎಂ ಹೇಳುತ್ತಾರೆ :—

**ಕೋಟ್ಯಶ್ಚತಸ್ರ ಏತಾಸ್ತು ಗ್ರಹೈರ್ಯಾಸಾಂ ಸದಾವೃತಃ ।**
**ಭಗವಾನಾಭಿರಸ್ಪೃಷ್ಟೋ ಯೇನ ದೃಷ್ಟಃ ಸ ಸರ್ವದೃಕ್ ॥ ೮೪ ॥**

೮೪. ಈ ನಾಲ್ಕುಕೋಟಿಗಳಿವೆಯಲ್ಲ, ಇವುಗಳನ್ನು ಗ್ರಹಿಸು ರಿಂದ (ಆತ್ಮನು) ಯಾವಾಗಲೂ ಮುಚ್ಚಲ್ಪಡುತ್ತಿರುವನಷ್ಟೆ. ಇವು ಸೋಂಕಿಲ್ಲದ ಭಗವಂತನು ಯಾವನಿಂದ ದೃಷ್ಟನಾಗಿರುವನೋ ಆ ಸರ್ವವನ್ನೂ ಕಂಡವನು.

---

1. ಈ ಪಕ್ಷದಲ್ಲಿ ಹಿಂದಿನ ಎರಡು ದೋಷಗಳೂ ಗಂಟುಬೀಳುವವು. ಚ ಸ್ಥಿರವೂ ಆಗಿದೆ ಎಂಬುದು ವ್ಯಾಹತವೂ ಆಗಿದೆ ಎಂದು ಭಾವ.

2. ಅಭಾವವಾದವು ಶೂನ್ಯವಾದಿಯ ಪಕ್ಷವು. ಆತ್ಮನು ಇಲ್ಲವೆಂದು ಕಲ್ಪಿಸುವದ ಕಲ್ಪಿಸುವವನು ಇರಲೇಬೇಕಾಗುವದರಿಂದ ಈ ಪಕ್ಷವೂ ಅನುಭವವಿರುದ್ಧವೆಂದು ಭಾ

3. ಯಾವ ವಿಚಾರವನ್ನೂ ಮಾಡದೆ ಇರುವ ಸಾಮಾನ್ಯರು.

(ಭಾಷ್ಯ)

೩೪೨. ಕೋಟ್ಯಃ ಪ್ರಾವಾದುಕಶಾಸ್ತ್ರನಿರ್ಣಯಾನ್ತಾಃ ಏತಾಃ ಉಕ್ತಾಃ ಅಸ್ತಿ ನಾಸ್ತಿ–ಇತ್ಯಾದ್ಯಾಃ ಚತಸ್ರಃ। ಯಾಸಾಂ ಕೋಟೀನಾಂ ಗ್ರಹೈಃ ಗ್ರಹಣೈಃ ಉಪಲಬ್ಧಿ ನಿಶ್ಚಯೈಃ ಸದಾ ಸರ್ವದಾ ಆವೃತಃ ಆಚ್ಛಾದಿತಃ ತೇಷಾಮೇವ ಪ್ರಾವಾದುಕಾನಾಂ ಯಃ, ಸ ಭಗವಾನ್ ಆಭಿಃ ಅಸ್ತಿ ನಾಸ್ತಿ ಇತ್ಯಾದಿಕೋಟಿಭಿಃ ಚತಸೃಭಿರಪಿ ಅಸ್ಪೃಷ್ಟಃ ಅಸ್ತ್ಯಾದಿವಿಕಲ್ಪನಾವರ್ಜಿತಃ ಇತ್ಯೇತತ್ । ಯೇನ ಮುನಿನಾ ದೃಷ್ಟಃ ಜ್ಞಾತಃ ವೇದಾನ್ತೇಷು ಔಪನಿಷದಃ ಪುರುಷಃ ಸ ಸರ್ವದೃಕ್ ಸರ್ವಜ್ಞಃ ಪರಮಾರ್ಥಪಣ್ಡಿತಃ ಇತ್ಯರ್ಥಃ ॥

(ಭಾಷ್ಯಾರ್ಥ)

(ಮೇಲೆ) ಹೇಳಿದ ಇದಾನೆ, ಇಲ್ಲ–ಮುಂತಾದ ಈ ನಾಲ್ಕು ಕೋಟಿಗಳು ವಾದಿಗಳ ಶಾಸ್ತ್ರದ ಸಿದ್ಧಾಂತಗಳು (ಇವೆಯಲ್ಲ), ಈ ಕೋಟಿಗಳ ಗ್ರಹಗಳಿಂದ ಗ್ರಹಣಗಳಿಂದ, ಅರಿತೆವೆಂಬ ನಿಶ್ಚಯಗಳಿಂದ[1] ಯಾವಾಗಲೂ ಎಂದೆಂದಿಗೂ ಇದೇ ವಾದಿಗಳ (ಪಾಲಿಗೆ[2]) ಮುಚ್ಚಲ್ಪಡುತ್ತಿರುವನಷ್ಟೆ. ಆ ಈ ಭಗವಂತನು ಈ "ಇದಾನೆ" "ಇಲ್ಲ" ಮುಂತಾದ ನಾಲ್ಕು ಕೋಟಿಗಳ ಸೋಂಕಿಲ್ಲದ, ಇದಾನೆ ಎಂಬುದೇ ಮುಂತಾದ ವಿಕಲ್ಪಗಳಿಲ್ಲದ ಎಂದರ್ಥ : (ಇಂಥ) ವೇದಾಂತವಚನಗಳಲ್ಲಿ (ಹೇಳಿರುವ) **ಔಪನಿಷದಪುರುಷನು**[3] ಯಾವ ಮುನಿಯಿಂದ ದೃಷ್ಟನಾಗಿರುವನೋ ಅರಿಯಲ್ಪಟ್ಟಿರುವನೋ[1] ಅವನೇ ಸರ್ವವನ್ನೂ ಕಂಡವನು, ಸರ್ವಜ್ಞನು, ನಿಜವಾಗಿ ಪಂಡಿತನು ಎಂದರ್ಥ.

---

1. ಅಸ್ತಿ ಮುಂತಾದ ರೂಪದಿಂದ ಆತ್ಮನನ್ನು ಅರಿತೆವೆಂದು ವಾದಿಗಳು ತಪ್ಪಾಗಿ ನಿಶ್ಚಯಿಸಿಕೊಂಡಿರುವರು ; ಅವರ ಮಿಥ್ಯಾನಿಶ್ಚಯದಿಂದ ಆತ್ಮನು ಮರೆಯಾಗಿರುವನು.

2. ನಿಜವಾಗಿ ಭಗವಂತನನ್ನು ಯಾವದೂ ಮರೆಮಾಡಿರುವದಿಲ್ಲ. ವಾದಿಗಳ ತಪ್ಪುತಿಳಿವಳಿಕೆಯಿಂದ ಅವರ ಪಾಲಿಗೆ ಮರೆಯಾಗಿರುವಂತೆ ಆಗಿರುತ್ತಾನೆ.

3. ಬೃ. ೩-೯-೨೬ರ ಸೂಚನೆ. ಉಪನಿಷತ್ತುಗಳಲ್ಲಿ ಹೇಳಿರುವ ಸರ್ವಸಾಕ್ಷಿಯಾದ ನಿರ್ವಿಶೇಷಚೈತನ್ಯವನ್ನು ಮತ್ತೆ ಯಾವ ಶಾಸ್ತ್ರದಲ್ಲಿಯೂ ತಿಳಿಸಿರುವದಿಲ್ಲ; ತರ್ಕದಿಂದಲೂ ಅದನ್ನು ಅರಿಯುವದಕ್ಕೆ ಆಗುವದಿಲ್ಲ.

4. ವೇದಾಂತವಾಕ್ಯಗಳಿಂದಲಾದರೂ ಆತ್ಮನನ್ನು ಅರಿತುಕೊಳ್ಳುವದು ಹೇಗೆ? ಅದೂ ಒಂದು ಆವರಣವಲ್ಲವೇ ?–ಎಂದು ಶಂಕಿಸಬಾರದು ; ಏಕೆಂದರೆ ಆತ್ಮನ ಧರ್ಮವಲ್ಲದ ಕಲ್ಪನೆಗಳನ್ನು ತೆಗೆದುಹಾಕುವದರಿಂದಲೇ ನಿತ್ಯಸಿದ್ಧವಾದ ಆತ್ಮತತ್ತ್ವವನ್ನು ವೇದಾಂತವಾಕ್ಯವು ತಿಳಿಸುತ್ತದೆ. ಆ ವಾಕ್ಯಜ್ಞಾನದಿಂದ ಪ್ರಮಾಣಪ್ರಮೇಯವ್ಯವಹಾರವೂ ಬಾಧಿತವಾಗುತ್ತದೆ. ವೈ. ಪ್ರ. ೩೨ನೆಯ ಭಾ. ಭಾ. ೧೧೫ನ್ನು ನೋಡಿ. ಗೀ.ಭಾ. ೨-೧೮, (ಭಾ. ಭಾ. ೨೯), ೨-೬೯, (ಭಾ. ಭಾ. ೧೨೯), ಸೂ. ಭಾ. ೧-೧-೪ ಇವನ್ನೂ ನೋಡಿ.

## ಜ್ಞಾನದ ವ್ಯಾವಹಾರಿಕಪ್ರಯೋಜನ

**ಪ್ರಾಪ್ಯ ಸರ್ವಜ್ಞತಾಂ ಕೃತ್ಸ್ನಾಂ ಬ್ರಾಹ್ಮಣ್ಯಂ ಪದಮದ್ವಯಮ್ ।**
**ಅನಾಪನ್ನಾದಿಮಧ್ಯಾನ್ತಂ ಕಿಮತಃ ಪರಮೀಹತೇ ॥ ೮೫ ॥**

೮೫. ಪೂರ್ಣವಾದ ಸರ್ವಜ್ಞತೆಯನ್ನೂ ಅನಾಪನ್ನಾದಿಮಧ್ಯಾಂತವಾದ ಅದ್ವಯವಾದ ಬ್ರಾಹ್ಮಣ್ಯಪದವನ್ನೂ ಹೊಂದಿದ (ಮೇಲೆ) ಇನ್ನು ಮುಂದೆ ಏತಕ್ಕೆ ಪ್ರಯತ್ನಿಸುವನು?

(ಭಾಷ್ಯ)

೩೪೩. ಪ್ರಾಪ್ಯ ಏತಾಂ ಯಥೋಕ್ತಾಂ ಕೃತ್ಸ್ನಾಂ ಸಮಸ್ತಾಂ ಸರ್ವಜ್ಞತಾಮ್, ಬ್ರಾಹ್ಮಣ್ಯಂ ಪದಮ್ "ಸ ಬ್ರಾಹ್ಮಣಃ" (ಬೃ. ೩-೮-೧೦) "ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ" (ಬೃ. ೪-೪-೨೩) ಇತಿ ಶ್ರುತೇಃ (ಅನಾಪನ್ನಾದಿಮಧ್ಯಾನ್ತಮ್[1]) ಆದಿಮಧ್ಯಾನ್ತಾಃ ಉತ್ಪತ್ತಿಸ್ಥಿತಿಲಯಾಃ ಅನಾಪನ್ನಾಃ ಅಪ್ರಾಪ್ತಾಃ ಯಸ್ಯ ಅದ್ವಯಸ್ಯ ಪದಸ್ಯ ನ ವಿದ್ಯನ್ತೇ ತತ್ ಅನಾಪನ್ನಾದಿಮಧ್ಯಾನ್ತಂ ಬ್ರಾಹ್ಮಣ್ಯಂ ಪದಮ್ । ತದೇವ ಪ್ರಾಪ್ಯ ಲಬ್ಧ್ವಾ ಕಿಮ್ ಅತಃ ಪರಮ್ ಅಸ್ಮಾತ್ ಆತ್ಮಲಾಭಾತ್ ಊರ್ಧ್ವಮ್ ಈಹತೇ ಚೇಷ್ಟತೇ ನಿಷ್ಪ್ರಯೋಜನಮ್ ? ಇತ್ಯರ್ಥಃ । "ನೈವ ತಸ್ಯ ಕೃತೇನಾರ್ಥಃ" (ಗೀ. ೩-೧೮) ಇತ್ಯಾದಿಸ್ಮೃತೇಃ ॥

(ಭಾಷ್ಯಾರ್ಥ)

ಈ ಮೇಲೆ ಹೇಳಿರುವ ಪೂರ್ಣವಾದ ಸಮಸ್ತವಾದ ಸರ್ವಜ್ಞತ್ವವನ್ನೂ[2], ಬ್ರಾಹ್ಮಣ್ಯವೆಂಬ ಪದವನ್ನೂ[3]–"ಅವನೇ ಬ್ರಾಹ್ಮಣನು" (ಬೃ. ೩-೮-೧೦) "ಬ್ರಾಹ್ಮಣನ ಈ ಮಹಿಮೆಯು ನಿತ್ಯವಾದದ್ದು" (ಬೃ. ೪-೪-೨೩) ಎಂಬ ಶ್ರುತಿಯ ಪ್ರಮಾಣದಿಂದ (ಇದೇ ನಿಜವಾದ ಬ್ರಾಹ್ಮಣ್ಯವು). ಅನಾಪನ್ನಾದಿಮಧ್ಯಾಂತವಾದ

---

1. ವಾ॥ ದಲ್ಲಿ ಮಾತ್ರ ಇದೆ.

2. ಕಪಿಲಬುದ್ಧ ಮೊದಲಾದವರನ್ನೂ ಸರ್ವಜ್ಞರೆನ್ನುವದುಂಟು. ಆದರೆ ಅವರದು ಪೂರ್ಣವಾದ ಸರ್ವಜ್ಞತೆಯಲ್ಲ; ಅವರು ಎಲ್ಲಕ್ಕೂ ಆತ್ಮನಾಗಿರುವ ಈ ತತ್ತ್ವವನ್ನು ಅರಿಯರು.

3. ಬ್ರಹ್ಮಜ್ಞಾನವನ್ನು ಪಡೆದಮೇಲೆ ಸಿಕ್ಕುವ ಬ್ರಾಹ್ಮಣ್ಯವೇ ನಿಜವಾದದ್ದು, ನಿತ್ಯವಾದದ್ದು; ಜಾತಿಬ್ರಾಹ್ಮಣ್ಯವು ಕೃತಕವು, ಅನಿತ್ಯವು.

ಆದಿಮಧ್ಯಾಂತಗಳು ಎಂದರೆ ಉತ್ಪತ್ತಿಸ್ಥಿತಿಲಯಗಳು ಯಾವ ಅದ್ವಿತೀಯವಾದ ಪದಕ್ಕೆ ಅನಾಪನ್ನವಾಗಿರುವವೋ, ಅಪ್ರಾಪ್ತವಾಗಿರುವವೋ, ಇರುವದಿಲ್ಲವೋ ಅದು ಅನಾಪನ್ನಾದಿಮಧ್ಯಾಂತವಾದ ಬ್ರಾಹ್ಮಣ್ಯಪದವು. ಅದನ್ನೇ ಹೊಂದಿ ಪಡೆದು ಕೊಂಡು ಆಮೇಲೂ ಈ ಆತ್ಮಲಾಭವಾದ ಮೇಲೂ[1] ಏತಕ್ಕೆ (ಯಾವ) ಪ್ರಯೋಜನವೂ ಇಲ್ಲದೆ ಪ್ರಯತ್ನಿಸುವನು, ಏನಾದರೂ ಕರ್ಮವನ್ನು ಮಾಡು ವನು[2] ? "ಅವರಿಗೆ ಕರ್ಮವನ್ನು ಮಾಡಿದ್ದರಿಂದ (ಆಗಬೇಕಾದ) ಪ್ರಯೋಜನ ವೇನೂ ಇರುವದಿಲ್ಲ." (ಗೀ. ೩-೧೮) ಎಂದು ಮುಂತಾಗಿರುವ ಸ್ಮೃತಿಯು ಇದಕ್ಕೆ ಪ್ರಮಾಣವು.

**ವಿಪ್ರಾಣಾಂ ವಿನಯೋ ಹ್ಯೇಷ ಶಮಃ ಪ್ರಾಕೃತ ಉಚ್ಯತೇ ।**
**ದಮಃ ಪ್ರಕೃತಿದಾನ್ತತ್ವಾದೇವಂ ವಿದ್ವಾಞ್ಛಮಂ ವ್ರಜೇತ್ ॥ ೮೬ ॥**

೮೬. ವಿಪ್ರರಿಗೆ ಇದೇ ವಿನಯವು. (ಇದೇ) ಸ್ವಾಭಾವಿಕವಾದ ಶಮ ವೆನಿಸುತ್ತದೆ. ಸ್ವಭಾವದಿಂದ ದಾಂತವಾಗಿರುವದರಿಂದ (ಇದೇ) ದಮವು. ಹೀಗೆಂದು ತಿಳಿದವನು ಶಮವನ್ನು ಹೊಂದುವನು.

(ಭಾಷ್ಯ)

೩೮೮. ವಿಪ್ರಾಣಾಂ ಬ್ರಾಹ್ಮಣಾನಾಂ ವಿನಯೋ ವಿನೀತತ್ವಮ್ ಸ್ವಾಭಾವಿಕಂ ಯದೇತತ್ ಆತ್ಮಸ್ವರೂಪೇಣ ಅವಸ್ಥಾನಮ್ ಏಷ ವಿನಯಃ । **ಶಮೋಽಪಿ** ಏಷ ಏವ ಪ್ರಾಕೃತಃ ಸ್ವಾಭಾವಿಕಃ ಅಕೃತಕಃ ಉಚ್ಯತೇ । **ದಮೋಽಪಿ ಏಷ ಏವ** । ಪ್ರಕೃತಿದಾನ್ತತ್ವಾತ್ ಸ್ವಭಾವತ ಏವ ಚ ಉಪಶಾನ್ತರೂಪತ್ವಾತ್ ಬ್ರಹ್ಮಣಃ । **ಏಷ** ಯಥೋಕ್ತಂ ಸ್ವಭಾವೋಪಶಾನ್ತಂ ಬ್ರಹ್ಮ **ವಿದ್ವಾನ್ ಶಮಮ್** ಉಪಶಾನ್ತಿಂ ಸ್ವಾಭಾವಿಕೀಂ ಬ್ರಹ್ಮಸ್ವರೂಪಾಂ **ವ್ರಜೇತ್** । ಬ್ರಹ್ಮಸ್ವರೂಪೇಣ ಅವತಿಷ್ಠತೇ ಇತ್ಯರ್ಥಃ ॥

(ಭಾಷ್ಯಾರ್ಥ)

ವಿಪ್ರರಿಗೆ ಬ್ರಾಹ್ಮಣರಿಗೆ (ಇದು) ವಿನಯವು ; ವಿನೀತವಾಗಿರುವದು ಸ್ವಾಭಾವಿಕ ವಾದ ಆತ್ಮಸ್ವರೂಪದಿಂದ ನೆಲೆನಿಲ್ಲುವದೆಂಬ ಇದೇ ವಿನಯವು. ಮತ್ತು ಇದೇ ಸ್ವಾಭಾ

---

1. ಆತ್ಮಲಾಭಕ್ಕಿಂತ ಹೆಚ್ಚಿನ ಲಾಭವಿಲ್ಲ-ಎಂದು ಆಪಸ್ತಂಬ ಸ್ಮೃತಿ.
2. ಬೃ. ೪-೪-೧೨ನೆಯ ಮಂತ್ರಾರ್ಥದ ಸೂಚನೆಯೂ ಇಲ್ಲಿದೆ.

ವಿಕವಾದ ಕೃತಕವಲ್ಲದ[1] ಶಮವೆನಿಸಿಕೊಂಡಿರುತ್ತದೆ. ಏಕೆಂದರೆ ಬ್ರಹ್ಮವು ಪ್ರಕೃತಿ ದಾಂತವಾಗಿರುತ್ತದೆ. ಸ್ವಭಾವದಿಂದಲೇ ಉಪಶಾಂತರೂಪವಾಗಿರುತ್ತದೆ. ಹೀಗೆ ಮೇಲೆ ಹೇಳಿದ ಸ್ವಭಾವದಿಂದ ಉಪಶಾಂತವಾಗಿರುವ ಬ್ರಹ್ಮವನ್ನು ಅರಿತುಕೊಂಡವನು ಶಮವನ್ನು ಸ್ವಾಭಾವಿಕವಾದ ಬ್ರಹ್ಮಸ್ವರೂಪವಾದ ಉಪಶಾಂತಿಯನ್ನು ಹೊಂದುವನು, ಬ್ರಹ್ಮಸ್ವರೂಪದಿಂದ ನೆಲೆನಿಲ್ಲುವನು[2] ಎಂದರ್ಥ.

## ವೇದಾಂತಪ್ರಕ್ರಿಯೆ

(ಭಾಷ್ಯ)

೩೪೫. ಏವಮ್ ಅನ್ಯೋನ್ಯವಿರುದ್ಧತ್ವಾತ್ ಸಂಸಾರಕಾರಣಾನಿ ರಾಗದ್ವೇಷದೋಷಾಸ್ಪದಾನಿ ಪ್ರಾವಾದುಕಾನಾಂ ದರ್ಶನಾನಿ । ಅತಃ ಮಿಥ್ಯಾದರ್ಶನಾನಿ ತಾನಿ ಇತಿ ತದ್ಯುಕ್ತಿಭಿರೇವ ದರ್ಶಯಿತ್ವಾ ಚತುಷ್ಕೋಟಿವರ್ಜಿತತ್ವಾತ್ ರಾಗಾದಿದೋಷಾನಾಸ್ಪದಂ ಸ್ವಭಾವಶಾನ್ತಮ್ ಅದ್ವೈತದರ್ಶನಮೇವ ಸಮ್ಯಗ್ದರ್ಶನಮ್ ಇತ್ಯುಪಸಂಹೃತಮ್ । ಅಥ ಇದಾನೀಂ ಸ್ವಪ್ರಕ್ರಿಯಾಪ್ರದರ್ಶನಾರ್ಥಃ ಆರಮ್ಭಃ—

(ಭಾಷ್ಯಾರ್ಥ)

ಹೀಗೆ ಒಂದಕ್ಕೊಂದು ವಿರುದ್ಧವಾಗಿರುವದರಿಂದ ಮಿಕ್ಕ ವಾದಿಗಳ ದರ್ಶನಗಳು ಸಂಸಾರಕ್ಕೆ ಕಾರಣವಾಗಿರುತ್ತವೆ. ರಾಗದ್ವೇಷಗಳೆಂಬ ದೋಷಗಳಿಗೆ ಎಡೆಯಾಗಿರುತ್ತವೆ. ಆದ್ದರಿಂದ ಅವು ತಪ್ಪು ದರ್ಶನಗಳು ಎಂದು ಅವರ ಯುಕ್ತಿಗಳಿಂದಲೇ ತೋರಿಸಿಕೊಟ್ಟು (ಇದಾನೆ, ಇಲ್ಲ—ಮುಂತಾದ) ನಾಲ್ಕುಕೋಟಿಗಳಿಲ್ಲದ್ದರಿಂದ ರಾಗಾದಿದೋಷಗಳಿಗೆ ಎಡೆಯಿಲ್ಲದ ಸ್ವಭಾವದಿಂದಲೇ ಶಾಂತವಾಗಿರುವ ಅದ್ವೈತದರ್ಶನವೇ ಸರಿಯಾದ ದರ್ಶನವು ಎಂದು ಉಪಸಂಹಾರಮಾಡಲಾಯಿತು. **ಇನ್ನು ಈಗ ತಮ್ಮ ಪ್ರಕ್ರಿಯೆಯನ್ನು[3] ತಿಳಿಸಿಕೊಡುವದಕ್ಕಾಗಿ (ಇದನ್ನು) ಆರಂಭಿಸುತ್ತದೆ:—**

---

1. ಇಂದ್ರಿಯಗಳನ್ನೂ ಮನಸ್ಸನ್ನೂ ಬಿಗಿಹಿಡಿಯುವ ದಮವೂ ಶಮವೂ ಕೃತಕ, ನಿಶ್ಚಲವಾಗಿರುವದಿಲ್ಲ. ಜ್ಞಾನಿಯ ಸ್ವರೂಪವೇ ಆಗಿ ಸ್ವಾಭಾವಿಕವಾಗಿರುವ ಶಮದಮಗಳಿಗೆ ಚ್ಯುತಿಯೇ ಇಲ್ಲ.

2 ಬ್ರಹ್ಮಸ್ವರೂಪವನ್ನೇ ಶಮ ಮುಂತಾದ ಹೆಸರಿನಿಂದ ನಾವು ಕರೆದಿರುವದು ಎಂದರ್ಥ. ಆತ್ಮಸ್ವರೂಪದಿಂದ ನೆಲೆನಿಲ್ಲುವವರೆಗೂ ಶಮಾದಿಗಳು ಯತ್ನಸಾಧ್ಯವಾಗಿರುವವು. ಹಾಗೆ ನೆಲೆಸಿಂತಾಗ ಸ್ವಾಭಾವಿಕವಾಗಿ ಬಿಡುತ್ತವೆ ಎಂದು ಭಾವ.

3. ಅವಸ್ಥಾತ್ರಯವನ್ನು ಪರೀಕ್ಷಿಸಿ ಶುದ್ಧಚೈತನ್ಯರೂಪವನ್ನು ಗೊತ್ತುಪಡಿಸುವದೇ ಸ್ವಪ್ರಕ್ರಿಯೆ. ಇದುವರೆಗೆ ಯುಕ್ತಿಯಿಂದ ಸಿದ್ಧವಾಗಿರುವದನ್ನು ಅವಸ್ಥಾತ್ರಯಪರೀಕ್ಷೆಯಿಂದ ಅನುಭವಾರೂಢವಾಗಿಸುವದೂ ಉಪಕ್ರಮದಂತೆ ಉಪಸಂಹಾರಮಾಡಿ ಪ್ರಕರಣಕ್ಕೆ ಉಪನಿಷತ್ಸಂಬಂಧವನ್ನು ಸ್ಪಷ್ಟಗೊಳಿಸುವದೂ ಇದಕ್ಕೆ ಪ್ರಯೋಜನವು.

**ಸವಸ್ತು ಸೋಪಲಮ್ಭಂ ಚ ದ್ವಯಂ ಲೌಕಿಕಮಿಷ್ಯತೇ ।**
**ಅವಸ್ತು ಸೋಪಲಮ್ಭಂ ಚ ಶುದ್ಧಂ ಲೌಕಿಕಮಿಷ್ಯತೇ ॥ ೮೭ ॥**

೮೭. ಸವಸ್ತುವೂ ಸೋಪಲಂಭವೂ ಆಗಿರುವ ದ್ವೈತವು ಲೌಕಿಕವೆನಿಸುವದು. ಅವಸ್ತುವೂ ಸೋಪಲಂಭವೂ ಆಗಿರುವದು ಶುದ್ಧಲೌಕಿಕವೆನಿಸುವದು.

(ಭಾಷ್ಯ)

೩೪೬. ಸವಸ್ತು ಸಂವೃತಿಸತಾ ವಸ್ತುನಾ ಸಹ ವರ್ತತೇ ಇತಿ ಸವಸ್ತು । ತಥಾ ಚ ಉಪಲಬ್ಧಿಃ ಉಪಲಮ್ಭಃ । ತೇನ ಸಹ ವರ್ತತೇ ಇತಿ ಸೋಪಲಮ್ಭಂ ಚ । ಶಾಸ್ತ್ರಾದಿಸರ್ವವ್ಯವಹಾರಾಸ್ಪದಂ ಗ್ರಾಹ್ಯಗ್ರಹಣಲಕ್ಷಣಂ ದ್ವಯಂ ಲೌಕಿಕಮ್ ಲೋಕಾತ್ ಅನಪೇತಂ ಲೌಕಿಕಮ್, ಜಾಗರಿತಮ್ ಇತ್ಯೇತತ್ । ಏವಂಲಕ್ಷಣಂ ಜಾಗರಿತಮ್ ಇಷ್ಯತೇ ವೇದಾನ್ತೇಷು । ಅವಸ್ತು ಸಂವೃತೇರಪ್ಯಭಾವಾತ್ । ಸೋಪಲಮ್ಭಮ್ । ವಸ್ತುವತ್ ಉಪಲಮ್ಭನಮ್ ಉಪಲಮ್ಭಃ ಅಸತ್ಯಪಿ ವಸ್ತುನಿ । ತೇನ ಸಹ ವರ್ತತೇ ಇತಿ ಸೋಪಲಮ್ಭಂ ಚ ಶುದ್ಧಂ ಕೇವಲಂ ಪ್ರವಿವಿಕ್ತಂ[1] ಜಾಗರಿತಾತ್ ಸ್ಥೂಲಾತ್ ಲೌಕಿಕಂ ಸರ್ವಪ್ರಾಣಿಸಾಧಾರಣತ್ವಾತ್ ಇಷ್ಯತೇ ಸ್ವಪ್ನಃ ಇತ್ಯರ್ಥಃ ॥

(ಭಾಷ್ಯಾರ್ಥ)

ಸವಸ್ತು ಸಂವೃತಿ (ವ್ಯವಹಾರ)ದಿಂದ ಸತ್ತಾಗಿರುವ ವಸ್ತುವಿನಿಂದ ಕೂಡಿರುವದು[2]. ಮತ್ತು ಉಪಲಮ್ಭವೆಂದರೆ ಅರಿಯುವದು ; ಅದರೊಡನೆ ಕೂಡಿರುವದು ಸೋಪಲಂಭವು. ಶಾಸ್ತ್ರವೇ ಮುಂತಾದ ಸರ್ವವ್ಯವಹಾರಕ್ಕೂ ಆಶ್ರಯವಾಗಿ[3] ಗ್ರಾಹ್ಯಗ್ರಾಹಕರೂಪವಾಗಿರುವ[4] ದ್ವೈತವು **ಲೌಕಿಕವು** ಲೋಕವನ್ನು ಬಿಡದಿರುವದು, ಎಚ್ಚರವು (ಎನಿಸುವದು). ಈ ಲಕ್ಷಣವುಳ್ಳದ್ದೇ ಉಪನಿಷತ್ತುಗಳಲ್ಲಿ ಎಚ್ಚರವೆನಿ

---

1. "ಪ್ರವಿಭಕ್ತಂ" ಎಂಬ ಪಾಠಕ್ಕಿಂತ ಇದೇ ಮೇಲು ; ಇದು ೪ನೆಯ ಮಂತ್ರಕ್ಕೂ ೧-೩-ಎನೆಯ ಕಾರಿಕೆಗಳಿಗೂ ಅನುಸಾರವಾಗಿರುತ್ತದೆ.

2. ಅವಿದ್ಯಾಕಲ್ಪಿತವ್ಯವಹಾರದಿಂದಲೇ ವಸ್ತುಗಳು ಎಚ್ಚರದಲ್ಲಿ ಕಾಣುವವು.

3. ಎಚ್ಚರವು ಸಮಸ್ತ ಲೌಕಿಕವೈದಿಕ ವ್ಯವಹಾರಗಳಿಗೂ ಆಶ್ರಯವಾಗಿರುತ್ತದೆ. ಅವೆಲ್ಲವೂ ಅವಿದ್ಯಾವಿಷಯಗಳಾಗಿರುತ್ತವೆ. ೨-೩೨ನೆಯ ಕಾ. ಭಾ. ವನ್ನು ನೋಡಿ.

4. ಇದು ಸೋಪಲಮ್ಭ ಎಂಬುದರ ವಿವರವೇ.

ಸಿರುವದು. ಸಂವೃತಿ(ಯಿಂದ ಇರುವ ವಸ್ತುವೂ) ಇಲ್ಲದ್ದರಿಂದ[1] ವಸ್ತುವಿಲ್ಲದ್ದೂ ಸೋಪಲಂಭವೂ–ವಸ್ತುವಿಲ್ಲದಿದ್ದರೂ ವಸ್ತುವಿನಂತೆ ಕಾಣುವದು ಉಪಲಂಭವು; ಅದರೊಡನೆ ಇರುವದು ಸೋಪಲಂಭವು. (ಹೀಗೆ ವಸ್ತುವಿಲ್ಲದೆ ಸೋಪಲಂಭವಾಗಿರುವ ಅವಸ್ಥೆಯು) **ಶುದ್ಧವಾದ** ಬರಿಯದಾಗಿರುವ ಸ್ಥೂಲವಾದ ಎಚ್ಚರಕ್ಕಿಂತ ಸೂಕ್ಷ್ಮವಾಗಿರುವ **ಲೌಕಿಕವು.** ಎಲ್ಲಾ ಪ್ರಾಣಿಗಳಿಗೂ ಸಾಧಾರಣವಾಗಿರುವದರಿಂದ[2] (ಶುದ್ಧಲೌಕಿಕವೆನಿಸಿರುವದು), ಸ್ವಪ್ನ(ವೆನಿಸುವದು) ಎಂದರ್ಥ.

**ಅವಸ್ತ್ವನುಪಲಮ್ಭಂ ಚ ಲೋಕೋತ್ತರಮಿತಿ ಸ್ಮೃತಮ್ ।**
**ಜ್ಞಾನಂ ಜ್ಞೇಯಂ ಚ ವಿಜ್ಞೇಯಂ ಸದಾ ಬುದ್ಧೈಃ ಪ್ರಕೀರ್ತಿತಮ್ ॥**

೮೮. ವಸ್ತುವಿಲ್ಲದೆ ಉಪಲಂಭವೂ ಇಲ್ಲದೆ ಇರುವದು ಲೋಕೋತ್ತರವೆನಿಸುವದು. (ಹೀಗೆ) ಜ್ಞಾನವೂ ಜ್ಞೇಯವೂ ವಿಜ್ಞೇಯವೂ ಯಾವಾಗಲೂ ಬುದ್ಧರಿಂದ ಹೇಳಲ್ಪಟ್ಟಿರುತ್ತದೆ.

(ಭಾಷ್ಯ)

೩೪೭. ಅವಸ್ತು ಅನುಪಲಮ್ಭಂ ಚ ಗ್ರಾಹ್ಯಗ್ರಹಣವರ್ಜಿತಮ್ ಇತ್ಯೇತತ್ ಲೋಕೋತ್ತರಮ್ ಅತ ಏವ ಲೋಕಾತೀತಮ್ । ಗ್ರಾಹ್ಯಗ್ರಹಣವಿಷಯೋ ಹಿ ಲೋಕಃ । ತದಭಾವಾತ್ । ಸರ್ವಪ್ರವೃತ್ತಿಬೀಜಂ ಸುಷುಪ್ತಮ್ ಇತ್ಯೇತತ್ । ಏವಂ ಸ್ಮೃತಂ ಸೋಪಾಯಂ ಪರಮಾರ್ಥತತ್ತ್ವಮ್ । ಲೌಕಿಕಂ ಶುದ್ಧಲೌಕಿಕಂ

---

1. ಇದೂ ಸೋಪಲಂಭ ಎಂಬುದರ ವಿವರವೇ. ಇಂದ್ರಿಯಗಳಿಂದಾಗಿರುವ ವ್ಯವಹಾರವನ್ನೇ ಇಲ್ಲಿ ಸಂವೃತಿ ಎಂದು ಕರೆದಿದೆ. ಎಚ್ಚರದಲ್ಲಿ ಇಂದ್ರಿಯವಿಷಯವ್ಯವಹಾರವಿರುವದೆಂದೂ ಕನಸಿನಲ್ಲಿ ಬರಿಯ ಮನಸ್ಸು ಮಾತ್ರ ಇರುವದೆಂದೂ ಜನರು ಕಲ್ಪಿಸುವರಷ್ಟೆ. ಅದನ್ನನುಸರಿಸಿ ಇಲ್ಲಿ ಎಚ್ಚರಕನಸುಗಳ ವಿಭಾಗವನ್ನು ಹೇಳಿದೆ. ಆಯಾ ಅವಸ್ಥೆ ಇರುವಾಗ ಎರಡರಲ್ಲಿಯೂ ಒಳಗೆ ಮನಸ್ಸಿನ, ಹೊರಗೆ ಇಂದ್ರಿಯಗಳ, ಅರಿವಿನಿಂದ ವಿಷಯಾನುಭವವಾಗುವಂತೆ ತೋರುತ್ತಿರುವದು ಸಮಾನವೆಂಬುದನ್ನು ವೈತಥ್ಯದ ೯ರಿಂದ ೧೫ರ ವರೆಗಿನ ಕಾರಿಕೆಗಳಲ್ಲಿ ಸ್ಪಷ್ಟಪಡಿಸಿದೆ.

2. ಈ ಪ್ರಕರಣದಲ್ಲಿ ಎಚ್ಚರಕನಸುಗಳ ಸ್ವರೂಪವನ್ನು ನಿರ್ಣಯಿಸುತ್ತದೆಯಾದ್ದರಿಂದ ಕನಸು ಸರ್ವಪ್ರಾಣಿಗಳಿಗೂ ಸಾಧಾರಣವಾಗಿದೆ ಎಂಬುದು ಹೊಂದುವದಿಲ್ಲ. ಆದ್ದರಿಂದ "ಲೋಕಪ್ರಸಿದ್ಧವಾಗಿದೆ" ಎಂದು ಈ ಮಾತಿಗೆ ಅರ್ಥವನ್ನು ವ್ಯಾಖ್ಯಾನಕಾರರು ಕಲ್ಪಿಸಿರುತ್ತಾರೆ. ಇಲ್ಲಿ "ಸರ್ವಪ್ರಾಣಿಸಾಧಾರಣತ್ವಾಭಾವಾತ್" ಎಂದೋ 'ಸರ್ವಪ್ರಾಣಿಸಾಧಾರಣಾತ್' ಎಂದೋ ಪಾಠವಿರಬೇಕೆಂದು ತೋರುತ್ತದೆ. ಮೊದಲನೆಯ ಪಾಠಕ್ಕೆ ಎಲ್ಲಾ ಪ್ರಾಣಿಗಳಿಗೂ ಸಾಧಾರಣವಲ್ಲದಿರುವದರಿಂದ ಇದು ಶುದ್ಧಲೌಕಿಕವು, ಬರಿಯ ತನ್ನ ಮಟ್ಟಿಗೆ ಕಾಣುವ ಗ್ರಾಹ್ಯಗ್ರಾಹಕಲಕ್ಷಣಲೋಕವು ಎಂದು ಅರ್ಥ. ಎರಡನೆಯ ಪಾಠಕ್ಕೆ ಎಲ್ಲಾ ಪ್ರಾಣಿಗಳಿಗೂ ಸಾಧಾರಣವಾಗಿರುವ ಎಚ್ಚರಕ್ಕಿಂತ ಸೂಕ್ಷ್ಮವಾದದ್ದು ಎಂದು ಅರ್ಥ.

ೀಕೋತ್ತರಂ ಚ ಕ್ರಮೇಣ ಯೇನ ಜ್ಞಾನೇನ ಜ್ಞಾಯತೇ ತತ್ ಜ್ಞಾನಮ್ । ೀಯಮ್ ಏತಾನ್ಯೇವ ತ್ರೀಣಿ । ಏತದ್ವ್ಯತಿರೇಕೇಣ ಜ್ಞೇಯಾನುಪಪತ್ತೇಃ । ರ್ವಪ್ರಾವಾದುಕಕಲ್ಪಿತವಸ್ತುನಃ ಅತ್ರೈವ ಅನ್ತರ್ಭಾವಾತ್ । ವಿಜ್ಞೇಯಂ[1] ಪರ ಾರ್ಥಸತ್ಯಂ ತುರ್ಯಾಖ್ಯಮ್ । ಅದ್ವಯಮ್ ಅಜಮ್ ಆತ್ಮತತ್ತ್ವಮ್ ತ್ಯರ್ಥಃ । ಸದಾ ಸರ್ವದಾ ಏತತ್[2] ಲೌಕಿಕಾದಿವಿಜ್ಞೇಯಾನ್ತಂ ಬುದ್ಧ್ಯೈಃ ರಮಾರ್ಥದರ್ಶಿಭಿಃ ಬ್ರಹ್ಮವಿದ್ಭಿಃ ಪ್ರಕೀರ್ತಿತಮ್ ॥

(ಭಾಷ್ಯಾರ್ಥ)

ವಸ್ತುವೂ ಇಲ್ಲದೆ ಉಪಲಂಭವೂ ಇಲ್ಲದೆ ಎಂದರೆ ಗ್ರಾಹ್ಯವಾಗಲಿ ಗ್ರಹಣ ಾಗಲಿ (ಯಾವದೂ) ಇಲ್ಲದ್ದು ಎಂದರ್ಥ. ಆದ್ದರಿಂದಲೇ[3] ಲೋಕವನ್ನು ಮೀರಿದ್ದು ್ರಾಹ್ಯ, ಗ್ರಹಣ–ಇವುಗಳ ವಿಷಯವಾದದ್ದೇ ಅಲ್ಲವೆ, ಲೋಕ(ವೆನ್ನುವದು[4]) ? ವೆರಡೂ ಇಲ್ಲದ್ದರಿಂದ (ಇದು **ಲೋಕೋತ್ತರವು**), ಎಲ್ಲಾ ಪ್ರವೃತ್ತಿಗಳಿಗೂ ರಣವಾದ[5] ಸುಷುಪ್ತಿಯು ಎಂದರ್ಥ. ಹೀಗೆ ಉಪಾಯಸಹಿತವಾದ ಪರಮಾರ್ಥ ತ್ತ್ವವು ಹೇಳಲ್ಪಟ್ಟಿತು[6].

ಲೌಕಿಕವೂ ಶುದ್ಧ ಲೌಕಿಕವೂ **ಲೋಕೋತ್ತರವೂ** ಕ್ರಮವಾಗಿ[7] ಯಾವ ಜ್ಞಾನ ಂದ ಅರಿಯಲ್ಪಡುವವೋ ಅದು **ಜ್ಞಾನವು.** ಈ ಮೂರೇ **ಜ್ಞೇಯವು.** ಏಕೆಂದರೆ

---

1. ಇದಾದಬಳಿಕ ಯತ್ ಎಂದು ಹೆಚ್ಚಾಗಿರುವ ಪಾ॥ ಪಾಠವು ಅನವಶ್ಯ.

2. " ಸರ್ವದೈವ ತತ್ " ಪಾ॥

3. ಗ್ರಾಹ್ಯ (ಅರಿಯಲ್ಪಡುವ ವಸ್ತು) ಗ್ರಹಣ (ಅರಿಯುವದು) ಎಂಬ ವಿಭಾಗ ಲ್ಲದ್ದರಿಂದಲೇ ಎಂದರ್ಥ. ಇಲ್ಲಿ ಗ್ರಹಣವೆಂದರೆ ಬಿಡಿಯರಿವು.

4. ವಿಷಯಗಳನ್ನು ಅರಿಯುವವೇ ಅವುಗಳನ್ನು ಅನುಭವಿಸುವವೆಂಬ ಲೋಕವು.

5. ಎಚ್ಚರಕನಸುಗಳಲ್ಲಿ ಕಾಣುವ ಪ್ರವೃತ್ತಿಗಳಿಗೆ ಕಾರಣವೆಂದು ತೋರುವ ವಸ್ಥೆಯೇ ಸುಷುಪ್ತಿ. " ಪ್ರಾಜ್ಞನು ಕಾರಣಬದ್ಧನು " ಎಂದು ಆಗಮದ ಕಾ. ೧೧ರಲ್ಲಿ ೇಳಿದ ಅಭಿಪ್ರಾಯವಿದು.

6. ಅವಸ್ಥಾತ್ರಯದಲ್ಲಿಯೇ ಉಪಾಯವೂ ಅದರಿಂದ ಅರಿತುಕೊಳ್ಳಬೇಕಾದ ರಮಾರ್ಥತತ್ತ್ವವೂ ಅಡಕವಾಗಿರುತ್ತದೆ ಎಂದು ಭಾವ.

7. ಇಲ್ಲಿ ಅರಿಯುವ ಕ್ರಮವನ್ನು ಹೇಳಿದೆಯೇ ಹೊರತು ಅವಸ್ಥೆಗಳು ಕ್ರಮವಾಗಿ ಂದಾಗುತ್ತಲೊಂದು ಆಗುವವು ಎಂಬ ಅಭಿಪ್ರಾಯವೇನೂ ಇರುವದಿಲ್ಲ. ಎಚ್ಚರ ನಸು-ಎಂಬ ಅವಸ್ಥೆಗಳಲ್ಲಿಯೇ ಕಾಲವು ತೋರುತ್ತಿರುವದು. ಆದ್ದರಿಂದ ಅವಸ್ಥೆಗಳಿಗೆ ಾಲಕೃತವಾದ ಸಂಬಂಧವೇನೂ ಇರುವದಿಲ್ಲ.

ಸರ್ವವಾದಿಗಳು ಕಲ್ಪಿಸಿರುವ ವಸ್ತುಗಳೂ ಇವುಗಳಲ್ಲಿಯೇ ಅಡಕವಾಗಿರುವದರಿಂದ[1] ಇವನ್ನು ಬಿಟ್ಟರೆ ಬೇರೆಯ ಅರಿಯತಕ್ಕ (ಪದಾರ್ಥವೇ ಇರುವದಿಲ್ಲ). **ವಿಜ್ಞೇಯ** ಎಂದರೆ ತುರ್ಯ (ನಾಲ್ಕನೆಯದು) ಎಂಬ ಹೆಸರಿನ **ಪರಮಾರ್ಥಸತ್ಯವು**[2] ತನಗೆರಡನೆಯದಿಲ್ಲದ ಹುಟ್ಟಿಲ್ಲದ ಆತ್ಮತತ್ತ್ವವು ಎಂದರ್ಥ. ಯಾವಾಗಲೂ ನಿತ್ಯವೂ, ಈ ಲೌಕಿಕವೇ ಮುಂತಾದ ವಿಜ್ಞೇಯದವರೆಗೆ (ನಾವು ಹೇಳಿರುವ) ಇದನ್ನು ಬುದ್ಧರು ಪರಮಾರ್ಥವನ್ನು ಕಂಡುಕೊಂಡಿರುವ ಬ್ರಹ್ಮಜ್ಞಾನಿಗಳು ಹೇಳಿರುತ್ತಾರೆ.

## ಆತ್ಮನು ಅವಸ್ಥಾರಹಿತನು

**ಜ್ಞಾನೇ ಚ ತ್ರಿವಿಧೇ ಜ್ಞೇಯೇ ಕ್ರಮೇಣ ವಿದಿತೇ ಸ್ವಯಮ್ ||**
**ಸರ್ವಜ್ಞತಾ ಹಿ ಸರ್ವತ್ರ ಭವತೀಹ ಮಹಾಧಿಯಃ || ೮೯ ||**

೮೯. ಜ್ಞಾನವನ್ನೂ ಮೂರು ವಿಧವಾದ ಜ್ಞೇಯವನ್ನೂ ಕ್ರಮವಾಗಿ ಅರಿತುಕೊಂಡರೆ ತಾನೇ (ಅಂಥ) ಮಹಾಬುದ್ಧಿವಂತನಿಗೆ ಎಲ್ಲೆಲ್ಲಿಯೂ ಸರ್ವಜ್ಞತ್ವವು ಇಲ್ಲಿ ಉಂಟಾಗಿರುವದು.

(ಭಾಷ್ಯ)

೩೮೮. ಜ್ಞಾನೇ ಚ ಲೌಕಿಕಾದಿವಿಷಯೇ ಜ್ಞೇಯೇ ಚ ಲೌಕಿಕಾದೌ ತ್ರಿವಿಧೇ ಪೂರ್ವಂ ಲೌಕಿಕಂ ಸ್ಥೂಲಮ್, ತದಭಾವೇನ ಪಶ್ಚಾತ್ ಶುದ್ಧಂ ಲೌಕಿಕಮ್, ತದಭಾವೇನ ಲೋಕೋತ್ತರಮ್ ಇತಿ ಏವಂ ಕ್ರಮೇಣಸ್ಥಾನತ್ರಯಾಭಾವೇನ ಪರಮಾರ್ಥಸತ್ಯೇ ತುರ್ಯೇ ಅದ್ವಯೇ ಅಜೇ ಅಭಯೇ ವಿದಿತೇ ಸ್ವಯಮೇವ ಆತ್ಮಸ್ವರೂಪಮೇವ । ಸರ್ವಜ್ಞತಾ ಸರ್ವಶ್ಚ ಅಸೌ ಜ್ಞಶ್ಚ ಸರ್ವಜ್ಞಃ । ತದ್ಭಾವಃ ಸರ್ವಜ್ಞತಾ । ಇಹ ಅಸ್ಮಿನ್ ಲೋಕೇ ಭವತಿ ಮಹಾಧಿಯಃ ಮಹಾಬುದ್ಧೇಃ । ಸರ್ವಲೋಕಾತಿಶಯವಸ್ತುವಿಷಯಬುದ್ಧಿತ್ವಾತ್ ಏವಂವಿದಃ । ಸರ್ವತ್ರ ಸರ್ವದಾ ಭವತಿ । ಸಕೃದ್ವಿದಿತೇ ಸ್ವರೂಪೇ ವ್ಯಭಿಚಾರಾಭಾವಾತ್ ಇತ್ಯರ್ಥಃ । ನ ಹಿ ಪರಮಾರ್ಥವಿದಃ[3] ಜ್ಞಾನೋದ್ಭವಾಭಿಭವೌ ಸ್ತಃ, ಯಥಾ ಅನ್ಯೇಷಾಂ ಪ್ರಾವಾದುಕಾನಾಮ್ ||

---

1. ವೈಶೇಷಿಕರು ಕಲ್ಪಿಸಿರುವ ಸಪ್ತಪದಾರ್ಥಗಳು, ಸಾಂಖ್ಯರು ಕಲ್ಪಿಸಿರುವ ಇಪ್ಪತ್ತು ನಾಲ್ಕು ತತ್ತ್ವಗಳು-ಮುಂತಾದವುಗಳೆಲ್ಲವೂ ಅವಸ್ಥಾತ್ರಯದಲ್ಲಿಯೇ ಅಡಕವಾಗಿರುವವೆಂದು ಭಾವ.

2. ಮೂರು ಅವಸ್ಥೆಗಳೂ ವ್ಯಾವಹಾರಿಕಸತ್ಯವೆಂದು ಭಾವ. ೭ನೆಯ ಮಂತ್ರದ ಭಾಷ್ಯವನ್ನು ಅದರಲ್ಲಿಯೂ ಭಾ. ಭಾ. ೩೭ ನ್ನು ನೋಡಿ.

3. ಇದರ ಮುಂದೆ " ಜ್ಞಾನಿನಃ " ಎಂದು ಪಾ|| ಅ||

(ಭಾಷ್ಯಾರ್ಥ)

ಲೌಕಿಕವೇ ಮುಂತಾದವುಗಳ ವಿಷಯವಾದ ಜ್ಞಾನ; ಲೌಕಿಕವೇ ಮುಂತಾದ ಮೂರುಬಗೆಯ ಜ್ಞೇಯ(ಇವನ್ನು) **ಮೊದಲು ಸ್ಥೂಲವಾದ ಲೌಕಿಕವು, ಆಮೇಲೆ ಅದು ಇಲ್ಲದೆ ಇರುವದರಿಂದ**[1] **ಶುದ್ಧಲೌಕಿಕವು ಅದೂ ಇಲ್ಲದ್ದರಿಂದ**[2] **ಲೋಕೋತ್ತರವು–ಈ ಕ್ರಮದಲ್ಲಿ**[3] **ಮೂರು ಅವಸ್ಥೆಗಳೂ ಇಲ್ಲವಾಗಲು**[4] **ಪರಮಾರ್ಥಸತ್ಯವಾದ ತನಗೆರಡನೆಯದಿಲ್ಲದ, ಹುಟ್ಟಿಲ್ಲದ, ಅಂಜಿಕೆಯಿಲ್ಲದ ತುರ್ಯವನ್ನು ಅರಿತುಕೊಂಡರೆ, ತಾನೇ (ಅದಾಗಿರುವನು), ಆತ್ಮಸ್ವರೂಪವೇ (ಆಗಿರುವನು)**[5].

(ಅಂಥ) ಮಹಾಧೀಮಂತನಿಗೆ–ಹೀಗೆ **ಅರಿತುಕೊಂಡವನು ಲೋಕದಲ್ಲಿ ಎಲ್ಲಕ್ಕೂ ಮೇಲೆನಿಸುವ ವಸ್ತುವಿನ ವಿಷಯವಾದ ಬುದ್ಧಿಯುಂಟಾಗಿರುವದರಿಂದ** (ಮಹಾಧೀಮಂತನು)–(ಇಂಥ) ಮಹಾಬುದ್ಧಿವಂತನಿಗೆ, **ಸರ್ವಜ್ಞತೆಯು–ಸರ್ವವೂ (ಆಗಿ) ಅವನು ಜ್ಞನೂ ಆಗಿರುವದರಿಂದ ಸರ್ವಜ್ಞನು; ಅವನ ಭಾವವಾದ ಸರ್ವಜ್ಞತೆಯು–ಇಲ್ಲಿ ಈ ಲೋಕದಲ್ಲಿ ಎಲ್ಲೆಲ್ಲಿಯೂ ಎಂದರೆ ಯಾವಾಗಲೂ ಇದ್ದುಕೊಂಡಿರುತ್ತದೆ.** ಏಕೆಂದರೆ ಒಂದುಸಲ ಸ್ವರೂಪವನ್ನು ಅರಿತುಕೊಂಡರೆ (ಅದು ಮತ್ತೆ) ಬೇರ್ಪಡುವದಿಲ್ಲ ಎಂದರ್ಥ. ಮಿಕ್ಕ ವಾದಿಗಳ ಮತದಲ್ಲಿ (ಜ್ಞಾನವು ಹುಟ್ಟುತ್ತಲೂ ನಾಶವಾಗುತ್ತಲೂ) ಇರುವಂತೆ ಪರಮಾರ್ಥವನ್ನು ಬಲ್ಲವನ(ದೃಷ್ಟಿಯಲ್ಲಿ) ಜ್ಞಾನಕ್ಕೆ ಹುಟ್ಟುಹೊಂದುಗಳು ಇರುವದಿಲ್ಲವಷ್ಟೆ[6].

1. ಕನಸಿನಲ್ಲಿ ಲಯವಾಗುವದರಿಂದ. ಈ ಲಯಕ್ರಮವನ್ನು ವೈತಥ್ಯಪ್ರಕರಣದಲ್ಲಿ ವಿಸ್ತರಿಸಿದೆ.

2. ತನಿನಿದ್ರೆಯಲ್ಲಿ ಎರಡನೆಯ ವಸ್ತುವನ್ನು ನೋಡುವ ಕನಸೂ ಇಲ್ಲದ್ದರಿಂದ.

3. ಇಲ್ಲಿಯೂ ಅರಿಯುವ ಕ್ರಮವನ್ನೇ ಹೇಳಿದೆ; ಅವಸ್ಥೆಗಳ ಅನುಕ್ರಮವನ್ನಲ್ಲ ಎಂದರ್ಥ.

4. ತುರೀಯವನ್ನು 'ಪಾದ' ಎಂದು ಕರೆದಿರುವದು ಹೇಗೆಂಬುದನ್ನು ವಿವರಿಸುವ ಭಾ. ಭಾ. ೯ ನ್ನು ನೋಡಿ.

5. ಅದಕ್ಕಿಂತ ಬೇರೆಯಾಗಿರುವ ಜ್ಞಾತೃವಾಗಿ ಅರಿಯುವದಿಲ್ಲ. ತುರೀಯರೂಪವನ್ನು ಹೊಸದಾಗಿ ಹೊಂದುವದೂ ಇಲ್ಲ. ನಾನು ಯಾವಾಗಲೂ ನಿರ್ವಿಶೇಷನಾದ ತುರೀಯನು ಎಂಬುದೇ ಜ್ಞಾನದ ಸ್ವರೂಪವು–ಎಂದು ಭಾವ.

6. ಏಕೆಂದರೆ ಈ ಜ್ಞಾನವು ಮಿಕ್ಕವಾದಿಗಳು ಹೇಳುವ ವೃತ್ತಿರೂಪಜ್ಞಾನವಲ್ಲ; ಸ್ವರೂಪಜ್ಞಾನವು.

(ಭಾಷ್ಯ)

೩೪೯. ಲೌಕಿಕಾದೀನಾಂ ಕ್ರಮೇಣ ಜ್ಞೇಯತ್ವೇನ ನಿರ್ದೇಶಾತ್ ಅಸ್ತಿತ್ವಶಙ್ಕಾ ಪರಮಾರ್ಥತೋ ಮಾಭೂತ್ ಇತ್ಯಾಹ :—

(ಭಾಷ್ಯಾರ್ಥ)

**ಲೌಕಿಕವೇ ಮುಂತಾದವುಗಳನ್ನು ಕ್ರಮಕ್ರಮವಾಗಿ ತಿಳಿಯಬೇಕೆಂದು ಹೇಳಿರುವದರಿಂದ (ಅವು) ನಿಜವಾಗಿಯೂ ಇರುವವು ಎಂಬ ಶಂಕೆಯು ಉಂಟಾಗದೆ ಇರಲೆಂದು (ಹೀಗೆಂದು) ಹೇಳಿರುತ್ತಾರೆ :—**

**ಹೇಯಜ್ಞೇಯಾಪ್ಯಪಾಕ್ಯಾನಿ ವಿಜ್ಞೇಯಾನ್ಯಗ್ರಯಾಣತಃ ।**
**ತೇಷಾಮನ್ಯತ್ರ ವಿಜ್ಞೇಯಾದುಪಲಮ್ಭಸ್ತ್ರಿಷು ಸ್ಮೃತಃ ॥ ೯೦ ॥**

೯೦. ಹೇಯ, ಜ್ಞೇಯ, ಆಪ್ಯ, ಪಾಕ್ಯ–(ಇವು)ಗಳನ್ನು ಅಗ್ರಯಾಣವಾಗಿ ಚೆನ್ನಾಗಿ ತಿಳಿದುಕೊಳ್ಳಬೇಕು. ಅವುಗಳಲ್ಲಿ ವಿಜ್ಞೇಯವನ್ನು ಬಿಟ್ಟು ಮಿಕ್ಕವುಗಳಲ್ಲಿ ಉಪಲಂಭವು (ಇರುವದೆ)ನ್ನುವರು.

(ಭಾಷ್ಯ)

೩೫೦. ಹೇಯಾನಿ ಚ ಲೌಕಿಕಾದೀನಿ ತ್ರೀಣಿ ಜಾಗರಿತಸ್ವಪ್ನಸುಷುಪ್ತಾನಿ ಆತ್ಮನಿ ಅಸತ್ತ್ವೇನ ರಜ್ಜ್ವಾಂ ಸರ್ಪವತ್ ಹಾತವ್ಯಾನಿ ಇತ್ಯರ್ಥಃ। ಜ್ಞೇಯಮ್ ಇಹ ಚತುಷ್ಕೋಟಿವರ್ಜಿತಂ ಪರಮಾರ್ಥತತ್ತ್ವಮ್ । ಆಪ್ಯಾನಿ ಆಪ್ತವ್ಯಾನಿ ತ್ಯಕ್ತಬಾಹ್ಯೈಷಣಾತ್ರಯೇಣ ಭಿಕ್ಷುಣಾ ಪಾಣ್ಡಿತ್ಯಬಾಲ್ಯಮೌನಾಖ್ಯಾನಿ ಸಾಧನಾನಿ । ಪಾಕ್ಯಾನಿ ರಾಗದ್ವೇಷಮೋಹಾದಯೋ ದೋಷಾಃ ಕಷಾಯಾಖ್ಯಾನಿ ಪಕ್ತವ್ಯಾನಿ । ಸರ್ವಾಣಿ ಏತಾನಿ ಹೇಯಜ್ಞೇಯಾಪ್ಯಪಾಕ್ಯಾನಿ ವಿಜ್ಞೇಯಾನಿ ಭಿಕ್ಷುಣಾ ಉಪಾಯತ್ವೇನ ಇತ್ಯರ್ಥಃ । ಅಗ್ರಯಾಣತಃ ಪ್ರಥಮತಃ । ತೇಷಾಂ ಹೇಯಾದೀನಾಮ್ ಅನ್ಯತ್ರ ವಿಜ್ಞೇಯಾತ್ ಪರಮಾರ್ಥಸತ್ಯಂ ವಿಜ್ಞೇಯಂ ಬ್ರಹ್ಮ ಏಕಂ ವರ್ಜಯಿತ್ವಾ ಉಪಲಮ್ಭನಮ್ ಉಪಲಮ್ಭಃ ಅವಿದ್ಯಾಕಲ್ಪನಾಮಾತ್ರಮ್ । ಹೇಯಾಪ್ಯಪಾಕ್ಯೇಷು ತ್ರಿಷ್ವಪಿ ಸ್ಮೃತಃ ಬ್ರಹ್ಮವಿದ್ಭಿಃ। ನ ಪರಮಾರ್ಥಸತ್ಯತಾ ತ್ರಯಾಣಾಮ್ ಇತ್ಯರ್ಥಃ ॥

(ಭಾಷ್ಯಾರ್ಥ)

**ಹೇಯಗಳು** ಎಂದರೆ ಲೌಕಿಕವೇ ಮುಂತಾದ ಮೂರು, ಎಚ್ಚರಕನಸುನಿದ್ರೆಗಳು; ಹಗ್ಗದಲ್ಲಿ ಹಾವು ಹೇಗೆ ಇಲ್ಲವೋ ಹಾಗೆ (ಇವು) ಆತ್ಮನಲ್ಲಿ ಇಲ್ಲದವು

ಗಳೆಂದು ಬಿಡತಕ್ಕವುಗಳು[1] ಎಂದರ್ಥ. **ಜ್ಞೇಯವು** ಎಂದರೆ ಇಲ್ಲಿ ನಾಲ್ಕುಕೋಟಿಗಳೂ[2] ಇಲ್ಲದ ಪರಮಾರ್ಥತತ್ತ್ವವು. **ಆಪ್ಯಗಳು** ಎಂದರೆ ಹೊರಗಿನ ಏಷಣಾತ್ರಯವನ್ನು[3] ಬಿಟ್ಟಿರುವ ಭಿಕ್ಷುವು ಪಡೆಯಬೇಕಾಗಿರುವ ಪಾಂಡಿತ್ಯ, ಬಾಲ್ಯ, ಮೌನ[4],—ಎಂಬ ಸಾಧನಗಳು. **ಪಾಕ್ಯಗಳು** ಎಂದರೆ ಪಕ್ವಗೊಳಿಸಿಕೊಳ್ಳಬೇಕಾದ ಕಷಾಯವೆಂಬ[5] ಹೆಸರಿನ ರಾಗ, ದ್ವೇಷ, ಮೋಹ—ಮುಂತಾದ ದೋಷಗಳು. ಈ ಹೇಯಜ್ಞೇಯಾಪ್ಯಪಾಕ್ಯಗಳೆಂಬವೆಲ್ಲವನ್ನೂ ಭಿಕ್ಷುವಾದವನು **(ಪರಮಾರ್ಥಕ್ಕೆ)** ಉಪಾಯವೆಂದು ತಿಳಿದುಕೊಳ್ಳಬೇಕು ಎಂದರ್ಥ. ಅಗ್ರ್ಯಯಾಣವಾಗಿ ಎಂದರೆ ಮೊದಲನೆಯ (ದಾರಿಯಾಗಿ[6]) ತಿಳಿದುಕೊಳ್ಳಬೇಕು. ಈ ಹೇಯವೇ ಮುಂತಾದವುಗಳಲ್ಲಿ ವಿಜ್ಞೇಯವನ್ನು ಬಿಟ್ಟು ಎಂದರೆ ಪರಮಾರ್ಥಸತ್ಯವಾದ ಬ್ರಹ್ಮವೊಂದನ್ನು ಬಿಟ್ಟು ಮಿಕ್ಕವುಗಳಲ್ಲಿ, ಹೇಯ, ಆಪ್ಯ, ಪಾಕ್ಯ—ಈ ಮೂರರಲ್ಲಿಯೂ ಉಪಲಂಭವು ಎಂದರೆ ಅರಿವು, ಬರಿಯ ಅವಿದ್ಯಾಕಲ್ಪನೆಯೇ[7] ಎಂದು ಬ್ರಹ್ಮಜ್ಞಾನಿಗಳು ಹೇಳುವರು. (ಇವು) ಮೂರೂ ಪರಮಾರ್ಥಸತ್ಯವಲ್ಲ ಎಂದರ್ಥ.

---

1. ಆತ್ಮನಲ್ಲಿ ತೋರುವವಾದರೂ ಅವಸ್ಥೆಗಳು ತಮ್ಮ ಸ್ವರೂಪದಿಂದ ಪರಮಾರ್ಥವಲ್ಲ.

2. ೪-೮೩ ರಲ್ಲಿ ಹೇಳಿರುವ ಇದಾನೆ, ಇಲ್ಲ-ಮುಂತಾದ ಅವಿದ್ಯಾಕಲ್ಪನೆಗಳು.

3. ಪುತ್ರೈಷಣಾ, ವಿತ್ತೈಷಣಾ, ಲೋಕೈಷಣಾ-ಎಂಬ ಮೂರು ಬಯಕೆಗಳು. ಬೃ. ೩-೫-೧.

4. ಪಾಂಡಿತ್ಯವೆಂದರೆ ಆಚಾರ್ಯರಿಂದಲೂ ಶಾಸ್ತ್ರದಿಂದಲೂ ಆತ್ಮಜ್ಞಾನವನ್ನು ಪಡೆಯುವಿಕೆ; ಬಾಲ್ಯವೆಂದರೆ ವಿಷಯದೃಷ್ಟಿಯನ್ನು ತೊಲಗಿಸುವ ಜ್ಞಾನಬಲವನ್ನುಳ್ಳವನಾಗಿರುವಿಕೆ, ಮೌನವೆಂದರೆ ಅನಾತ್ಮಪ್ರತ್ಯಯವನ್ನು ತೊಲಗಿಸಿಕೊಂಡದ್ದರ ಫಲವಾಗಿ ಉಂಟಾಗುವ ಆತ್ಮಾನುಸಂಧಾನವು ಬೃ. ಭಾ. ೩-೫-೧ ನ್ನು ನೋಡಿ. ಪಾಂಡಿತ್ಯಬಾಲ್ಯಮೌನಗಳು ಜ್ಞಾನಿಯಾದ ಸಂನ್ಯಾಸಿಗೆ ವಿಧಿಸಿರುವ ಸಾಧನಗಳೆಂದು ಸೂ. ಭಾ. ೩-೪-೪೭ ರಲ್ಲಿ ಹೇಳಿದೆ. ಇವು ಶ್ರವಣಮನನನಿದಿಧ್ಯಾಸನಗಳೆಂದು ಆ॥ ಟೀಕೆ.

5. ಕಷಾಯವು ಕರ್ಮದಿಂದ ಪಕ್ವವಾದರೆ ಜ್ಞಾನವುಂಟಾಗುತ್ತದೆ-ಎಂದು ಭಾರತಾದಿ ಸ್ಮೃತಿವಾಕ್ಯಗಳಿವೆ.

6. ಮೊದಲು ಇವನ್ನು ಸಾಧನವಾಗಿ ಸ್ವೀಕರಿಸಿ ಜ್ಞಾನವನ್ನು ಸಂಪಾದಿಸಿಕೊಂಡು ಇವು ಪರಮಾರ್ಥವಲ್ಲವೆಂದು ನಿಶ್ಚಯಿಸಬೇಕು-ಎಂದರ್ಥ.

7. ಉಪೇಯವಾದ ವಿಜ್ಞೇಯದಂತೆ ಇವು ಪರಮಾರ್ಥವಲ್ಲ ಎಂದರ್ಥ ೩-೨೬ನೆಯ ಕಾರಿಕೆಯನ್ನು ನೋಡಿ.

## ಉಪಸಂಹಾರ

**ಪ್ರಕೃತ್ಯಾಕಾಶವಜ್ಜ್ಞೇಯಾಃ ಸರ್ವೇ ಧರ್ಮಾ ಅನಾದಯಃ ।**
**ವಿದ್ಯತೇ ನ ಹಿ ನಾನಾತ್ವಂ ತೇಷಾಂ ಕ್ವಚನ ಕಿಂಚನ ॥ ೯೧ ॥**

೯೧. ಎಲ್ಲಾ ಧರ್ಮರೂ ಪ್ರಕೃತಿಯಿಂದ ಆಕಾಶದಂತೆ (ಇರುವರೆಂದೂ) ಆದಿಯಿಲ್ಲದವರೆಂದೂ ಅರಿಯಬೇಕು. ಅವರುಗಳಿಗೆ ನಾನಾತ್ವವೆಂಬುದು ಎಲ್ಲಿಯೂ ಒಂದಿಷ್ಟೂ ಇರುವದೇ ಇಲ್ಲ.

(ಭಾಷ್ಯ)

೩೫೧. ಪರಮಾರ್ಥತಸ್ತು ಪ್ರಕೃತ್ಯಾ ಸ್ವಭಾವತಃ ಆಕಾಶವತ್ ಆಕಾಶತುಲ್ಯಾಃ ಸೂಕ್ಷ್ಮನಿರಞ್ಜನಸರ್ವಗತತ್ವೈಃ ಸರ್ವೇ ಧರ್ಮಾಃ ಆತ್ಮಾನಃ ಜ್ಞೇಯಾಃ ಮುಮುಕ್ಷುಭಿಃ ಅನಾದಯಃ ನಿತ್ಯಾಃ । ಬಹುವಚನಕೃತಭೇದಾಶಙ್ಕಾಂ ನಿರಾಕುರ್ವನ್ ಆಹ–ಕ್ವಚನ[1] ಕಿಂಚನ ಕಿಂಚಿತ್ ಅಣುಮಾತ್ರಮಪಿ ತೇಷಾಂ ನ ವಿದ್ಯತೇ ನಾನಾತ್ವಮ್ ಇತಿ ॥

(ಭಾಷ್ಯಾರ್ಥ)

ನಿಜವಾಗಿ ನೋಡಿದರೋ ಎಲ್ಲಾ ಧರ್ಮರೂ ಆತ್ಮರೂ ಪ್ರಕೃತಿಯಿಂದ ಸ್ವಭಾವದಿಂದ[2] ಆಕಾಶದಂತೆ ಸೂಕ್ಷ್ಮವಾಗಿರುವದು, (ಮತ್ತೊಂದರ) ಅಂಟಿಲ್ಲದೆ ಇರುವದು, ಎಲ್ಲೆಲ್ಲಿಯೂ ವ್ಯಾಪಿಸಿರುವದು-(ಈ ಸಾಮಾನ್ಯ ಧರ್ಮಗಳಿಂದ) ಆಕಾಶಸಮಾನರಾಗಿರುವರು[3]. ಆದಿಯಿಲ್ಲದವರು, ನಿತ್ಯರು ಎಂದು ಮುಮುಕ್ಷುಗಳು ಅರಿಯಬೇಕು. ('ಧರ್ಮರು') ಎಂದು ಬಹುವಚನವನ್ನು (ಹೇಳಿದ್ದರಿಂದ) ಆಗುವ (ಆತ್ಮನಲ್ಲಿ) ಭೇದವುಂಟೆಂಬ ಶಂಕೆಯನ್ನು ತೊಲಗಿಸುವದಕ್ಕಾಗಿ "ಅವರುಗಳಿಗೆ

---

1. ಇದರ ಮುಂದೆ "ಕ್ವಚಿದಪಿ" ಎಂದು ಹೆಚ್ಚಾಗಿ ವಾ॥ ಅ॥

2. ಉಪಾಧಿನಿಮಿತ್ತದಿಂದ ಸಂಸಾರಿಗಳಾಗಿ ತೋರಿದರೂ ಸ್ವರೂಪದಿಂದ ಬ್ರಹ್ಮವೇ ಆಗಿರುತ್ತಾರೆ.

3. "ಆಕಾಶದಂತೆ ಸರ್ವಗತನೂ ನಿತ್ಯನೂ ಆಗಿರುವನು" ಎಂಬ ಶ್ರುತಿಯ ಸೂಚನೆ. ಆಕಾಶವನ್ನು ಕೂಡ ವ್ಯಾಪಿಸಿರುವ ಆತ್ಮನನ್ನು ಆಕಾಶಕ್ಕೆ ಹೋಲಿಸಿರುವದು. "ಸೂರ್ಯನು ಬಾಣದಂತೆ ವೇಗವಾಗಿ ಹೋಗುತ್ತಾನೆ" ಎಂಬಂತೆ ಲೋಕಸಿದ್ಧ ದೃಷ್ಟಾಂತವನ್ನವಲಂಬಿಸಿ ಎಂದು ತಿಳಿಯಬೇಕು. ಗೀ. ಭಾ. ೨-೧೭ (ಭಾ. ಭಾ. ೨೬).

ಎಲ್ಲಿಯೂ ಒಂದಿಷ್ಟೂ[1] ಅಣುಮಾತ್ರವೂ ನಾನಾತ್ವವೆಂಬುದು ಇರುವದೇ ಇಲ್ಲ" ಎಂದು ಹೇಳಿರುತ್ತಾರೆ.

(ಭಾಷ್ಯ)

೩೫೨. ಜ್ಞೇಯತಾ ಪಿ ಧರ್ಮಾಣಾಂ ಸಂವೃತ್ಯೈವ ನ ಪರಮಾರ್ಥತಃ ಇತ್ಯಾಹ—

(ಭಾಷ್ಯಾರ್ಥ)

ಧರ್ಮಾದಿಗಳನ್ನು ಅರಿಯಬೇಕೆನ್ನುವದೂ ಸಂವೃತಿಯಿಂದಲೇ, ಪರಮಾರ್ಥದಿಂದಲ್ಲ–ಎಂದು (ಈಗ) ಹೇಳುತ್ತಾರೆ :—

**ಆದಿಬುದ್ಧಾಃ ಪ್ರಕೃತ್ಯೈವ ಸರ್ವೇ ಧರ್ಮಾಃ ಸುನಿಶ್ಚಿತಾಃ ।**
**ಯಸ್ಯೈವಂ ಭವತಿ ಕ್ಷಾನ್ತಿಃ ಸೋಽಮೃತತ್ವಾಯ ಕಲ್ಪತೇ ॥ ೯೨ ॥**

೯೨. ಎಲ್ಲಾ ಧರ್ಮರೂ ಪ್ರಕೃತಿಯಿಂದಲೇ ಆದಿಬುದ್ಧರು ಎಂದು ಸುನಿಶ್ಚಿತರಾಗಿರುವರು. ಯಾವನಿಗೆ ಹೀಗೆ ಕ್ಷಾಂತಿಯಿರುವದೋ ಅವನು ಅಮೃತತ್ವಕ್ಕೆ ತಕ್ಕವನಾಗುವನು.

(ಭಾಷ್ಯ)

೩೫೩. ಯಸ್ಮಾತ್ ಆದೌ ಬುದ್ಧಾಃ ಆದಿಬುದ್ಧಾಃ ಪ್ರಕೃತ್ಯೈವ ಸ್ವಭಾವತ ಏವ ಯಥಾ ನಿತ್ಯಪ್ರಕಾಶಸ್ವರೂಪಃ ಸವಿತಾ, ಏವಂ ನಿತ್ಯಬೋಧಸ್ವರೂಪಾಃ ಇತ್ಯರ್ಥಃ ಸರ್ವೇ ಧರ್ಮಾಃ ಸರ್ವೇ ಆತ್ಮಾನಃ (ಸುನಿಶ್ಚಿತಾಃ)[2] । ನ ಚ ತೇಷಾಂ ನಿಶ್ಚಯಃ ಕರ್ತವ್ಯಃ । ನಿತ್ಯನಿಶ್ಚಿತಸ್ವರೂಪಾ ಇತ್ಯರ್ಥಃ । ನ ಸನ್ದಿಹ್ಯಮಾನಸ್ವರೂಪಾ ಏವಂ ನೈವಂ ವಾ[3] ಇತಿ । ಯಸ್ಯ ಮುಮುಕ್ಷೋಃ ಏವಂ ಯಥೋಕ್ತಪ್ರಕಾರೇಣ ಸರ್ವದಾ ಬೋಧನಿಶ್ಚಯನಿರಪೇಕ್ಷತಾ ಆತ್ಮಾರ್ಥಂ ಪರಾರ್ಥಂ ವಾ ಯಥಾ ಸವಿತಾ ನಿತ್ಯಂ ಪ್ರಕಾಶಾನ್ತರನಿರಪೇಕ್ಷಃ ಸ್ವಾರ್ಥಂ ಪರಾರ್ಥಂ ವಾ[4] ಇತ್ಯೇವಂ ಭವತಿ ಕ್ಷಾನ್ತಿಃ ಬೋಧಕರ್ತವ್ಯತಾನಿರಪೇಕ್ಷತಾ ಸರ್ವದಾ ಸ್ವಾತ್ಮನಿ ಸಃ ಅಮೃತತ್ವಾಯ ಅಮೃತಭಾವಾಯ ಕಲ್ಪತೇ ಮೋಕ್ಷಾಯ ಸಮರ್ಥೋ ಭವತಿ ಇತ್ಯರ್ಥಃ ॥

---

1. "ನೇಹ ನಾನಾಸ್ತಿ ಕಿಂಚನ" (ಕ. ೨-೨-೧೧) ಎಂಬ ಶ್ರುತಿಯ ಸೂಚನೆ. ಅವಿದ್ಯಾಕಲ್ಪಿತವಾದ ಉಪಾಧಿಯಿಂದಾದ ನಾನಾತ್ವವು ಸ್ವರೂಪಕ್ಕೆ ಸೇರಿದ್ದಲ್ಲವೆಂದು ಭಾವ.

2. ಈ ಮಾತು ಅಚ್ಚಿನ ಪುಸ್ತಕದಲ್ಲಿ ಬಿಟ್ಟುಹೋಗಿರುತ್ತದೆ.

3. 'ಚ' ಅ॥

4. 'ಚ' ಅ॥

(ಭಾಷ್ಯಾರ್ಥ)

ಏಕೆಂದರೆ ಮೊದಲೇ ಬುದ್ಧರಾಗಿರುವವರು, (ಆದ್ದರಿಂದ) ಆದಿಬುದ್ಧರು. ಪ್ರಕೃತಿಯಿಂದಲೇ ಸ್ವಭಾವದಿಂದಲೇ ; ಸೂರ್ಯನು ಹೇಗೆ ನಿತ್ಯಪ್ರಕಾಶಸ್ವರೂಪನೋ ಹಾಗೆ ಯಾವಾಗಲೂ ಪ್ರಕಾಶದ ಸ್ವರೂಪರಾಗಿಯೇ ಇರುವರು[1] ಎಂದರ್ಥ. ಎಲ್ಲಾ ಧರ್ಮರೂ ಎಲ್ಲಾ ಆತ್ಮರೂ (ಆದಿಬುದ್ಧರು) ಮತ್ತು ಸುನಿಶ್ಚಿತರು[1]. ಅವರನ್ನು ನಿಶ್ಚಯಮಾಡತಕ್ಕದ್ದು (ಏನೂ) ಇರುವದಿಲ್ಲ ; ಯಾವಾಗಲೂ ನಿಶ್ಚಯಮಾಡಲ್ಪಟ್ಟ ಸ್ವರೂಪವುಳ್ಳವರೇ ; ಹೀಗೊ, ಹೀಗಲ್ಲವೊ ?—ಎಂದು ಸಂದೇಹವಾಗುವ ಸ್ವರೂಪದವರಲ್ಲ[2] ಎಂದರ್ಥ. ಯಾವ ಮುಮುಕ್ಷುವಿಗೆ ಹೀಗೆ ಮೇಲೆ ಹೇಳಿದ ರೀತಿಯಿಂದ ಯಾವಾಗಲೂ ಜ್ಞಾನ (ರೂಪವಾದ) ನಿಶ್ಚಯವು ತನಗಾಗಿ ಅಥವಾ ಮತ್ತೊಬ್ಬರಿಗಾಗಿ ಬೇಕಿರುವದಿಲ್ಲವೋ, ಹೇಗೆ ಸೂರ್ಯನು ತನಗಾಗಿ ಅಥವಾ ಪರರಿಗಾಗಿ ಮತ್ತೊಂದು ಬೆಳಕಿನ ಬಯಕೆ ಇಲ್ಲದೆ ಇರುವನೇ ಹಾಗೆ, (ಯಾವನಿಗೆ) ತನ್ನ ಆತ್ಮನಲ್ಲಿ ಕ್ಷಾಂತಿಯು ಜ್ಞಾನವನ್ನು ಮಾಡಿಕೊಳ್ಳಬೇಕೆಂಬ ಅಪೇಕ್ಷೆಯು ಯಾವಾಗಲೂ ಇರುವದಿಲ್ಲವೋ[3] ಅವನು ಅಮೃತತ್ವಕ್ಕೆ ಅಮೃತಭಾವಕ್ಕೆ ತಕ್ಕವನಾಗುವನು, ಮೋಕ್ಷ(ವನ್ನು ಪಡೆಯುವದ)ಕ್ಕೆ ಸಮರ್ಥನಾಗುವನು ಎಂದರ್ಥ.

(ಭಾಷ್ಯ)

೩೫೪. ತಥಾ ನಾಪಿ ಶಾನ್ತಿಃ ಕರ್ತವ್ಯತಾ ಆತ್ಮನಿ ಇತ್ಯಾಹ :—

---

1. ಮೊದಲು ಅಜ್ಞಾತರಾಗಿದ್ದು ಆಮೇಲೆ ಜ್ಞಾತರಾಗುವವರಲ್ಲ ; ಸೂರ್ಯನು ಮೊದಲು ಕಾಣದ ಸ್ವಭಾವದವನಾಗಿದ್ದು ಆಮೇಲೆ ಕಾಣಬರುವ ಸ್ವಭಾವವನ್ನು ಹೇಗೆ ಪಡೆಯುವದಿಲ್ಲವೋ ಹಾಗೆ ಎಂದು ದೃಷ್ಟಾಂತದ ಅಭಿಪ್ರಾಯ.

2. ಆತ್ಮನನ್ನು ಅರಿಯಬೇಕು ಎಂದು ೭ನೆಯ ಮಂತ್ರದಲ್ಲಿ ಹೇಳಿತ್ತಷ್ಟೆ ; ಆತ್ಮನು ನಿತ್ಯಜ್ಞಾತನು ಎಂದು ಅರಿಯುವದನ್ನೇ ಹೀಗೆಂದು ಹೇಳಿದೆ ಎಂದು ಭಾವ.

3. ಸೂರ್ಯನಿಗೆ ತಾನು ಬೆಳಗುವದಕ್ಕಾಗಲಿ ಮತ್ತೊಂದನ್ನು ಬೆಳಗುವದಕ್ಕಾಗಲಿ ತನ್ನ ಸ್ವರೂಪಕ್ಕಿಂತ ಬೇರೆಯಾದ ಬೆಳಕು ಬೇಡದಿರುವಂತೆ ಆತ್ಮನಿಗೆ ತತ್ತ್ವವನ್ನು ಅರಿಯುವದಕ್ಕೆ ಅಥವಾ ಮತ್ತೊಬ್ಬರಿಗೆ ತತ್ತ್ವವನ್ನು ಅರುಹುವದಕ್ಕೆ ಜ್ಞಾನವೇನೂ ಬೇಕಾಗಿರುವದಿಲ್ಲ. ಹೀಗೆಂದು ಅರಿತುಕೊಳ್ಳುವವೇ ಜ್ಞಾನದ ಉತ್ಪತ್ತಿಯು ಎಂದು ಭಾವ. ಜ್ಞಾನವಿಷಯತ್ವದಂತೆ ಜ್ಞಾನಾಶ್ರಯತ್ವವೂ ವ್ಯಾವಹಾರಿಕವೇ. ಆತ್ಮನು ಮೊದಲು ಅಜ್ಞನಾಗಿದ್ದು ಆಮೇಲೆ ತತ್ತ್ವವನ್ನು ಅರಿತುಕೊಳ್ಳುವನೆಂಬುದೂ ಪರಮಾರ್ಥವಲ್ಲ.

(ಭಾಷ್ಯಾರ್ಥ)

ಹೀಗೆಯೇ ಆತ್ಮನಲ್ಲಿ ಶಾಂತಿಯನ್ನುಂಟುಮಾಡಿಕೊಳ್ಳಬೇಕಾದದ್ದೂ ಇರುವದಿಲ್ಲ[1]–ಎಂದು (ಈ ಕಾರಿಕೆಯಲ್ಲಿ) ಹೇಳುತ್ತಾರೆ:—

**ಆದಿಶಾನ್ತಾ ಹ್ಯನುತ್ಪನ್ನಾಃ ಪ್ರಕೃತ್ಯೈವ ಸುನಿರ್ವೃತಾಃ ।**
**ಸರ್ವೇ ಧರ್ಮಾಃ ಸಮಾಭಿನ್ನಾ ಅಜಂ ಸಾಮ್ಯಂ ವಿಶಾರದಮ್ ॥೯೩॥**

೯೩. ಎಲ್ಲಾ ಧರ್ಮರೂ ಆದಿಶಾಂತರು. ಹುಟ್ಟದೆ ಇರುವವರು. ಸ್ವಭಾವದಿಂದಲೇ ಸುನಿರ್ವೃತರಾಗಿರುತ್ತಾರೆ. ಸಮರಾಗಿ ಅಭಿನ್ನರಾಗಿರುವರು ; ಹುಟ್ಟಿಲ್ಲದೆ, ಸಾಮಾನ್ಯವಾಗಿ ವಿಶಾರದವಾಗಿರುವದು.

(ಭಾಷ್ಯ)

೩೫೫. ಯಸ್ಮಾತ್ ಆದಿಶಾನ್ತಾಃ ನಿತ್ಯಮೇವ ಶಾನ್ತಾಃ ಅನುತ್ಪನ್ನಾಃ ಅಜಾಶ್ಚ ಪ್ರಕೃತ್ಯೈವ ಸುನಿರ್ವೃತಾಃ ಸುಷ್ಠು ಉಪರತಸ್ವಭಾವಾಃ ಇತ್ಯರ್ಥಃ । ಸರ್ವೇ ಧರ್ಮಾಃ ಸಮಾಶ್ಚ ಅಭಿನ್ನಾಶ್ಚ ಸಮಾಭಿನ್ನಾಃ । ಅಜಂ ಸಾಮ್ಯಂ ವಿಶಾರದಂ ವಿಶುದ್ಧಮ್ ಆತ್ಮತತ್ತ್ವಮ್ ಯಸ್ಮಾತ್ ತಸ್ಮಾತ್ ಶಾನ್ತಿಃ ಮೋಕ್ಷೋ ವಾ ನಾಸ್ತಿ ಕರ್ತವ್ಯಃ ಇತ್ಯರ್ಥಃ । ನ ಹಿ ನಿತ್ಯೈಕಸ್ವಭಾವಸ್ಯ ಕೃತಂ ಕಿಂಚಿದರ್ಥವತ್ ಸ್ಯಾತ್ ॥

(ಭಾಷ್ಯಾರ್ಥ)

ಏಕೆಂದರೆ ಎಲ್ಲಾ ಧರ್ಮರೂ ಆದಿಶಾಂತರು, ಯಾವಾಗಲೂ ಶಾಂತರಾಗಿಯೇ ಇರುತ್ತಾರೆ; ಹುಟ್ಟದೆ ಇರುವವರು ಎಂದರೆ ಜನ್ಮರಹಿತರಾಗಿಯೇ ಇರುತ್ತಾರೆ; ಸ್ವಭಾವದಿಂದಲೇ ಸುನಿರ್ವೃತರಾಗಿರುತ್ತಾರೆ; ಸಂಪೂರ್ಣವಾಗಿ ಉಪರತಿಯನ್ನು ಹೊಂದಿರುವ ಸ್ವಭಾವದವರಾಗಿರುತ್ತಾರೆ ಎಂದರ್ಥ[2]. ಸಮರಾಗಿಯೂ ಭೇದವಿಲ್ಲದವರೂ[3] ಆಗಿರುವದರಿಂದ ಸಮಾಭಿನ್ನರು.

---

1. ಆತ್ಮನು ಯಾವಾಗಲೂ ಶಾಂತರೂಪನಾಗಿಯೇ ಇರುವನು ಎಂದು ೭ನೆಯ ಮಂತ್ರದಲ್ಲಿರುವ "ಶಾಂತಮ್" ಎಂಬುದರ ಅರ್ಥವನ್ನು ಹೇಳಿದಂತಾಯಿತು.

2. "ಶಾಂತಂ ಶಿವಮ್" ಎಂಬ ವಿಶೇಷಣಗಳ ಅರ್ಥವನ್ನು ವಿವರಿಸಿದಂತೆ ಆಯಿತು. ಆತ್ಮನು ನಿತ್ಯಶಾಂತನು, ನಿತ್ಯಾನಂದನು.

3. ಧರ್ಮಾಃ ಎಂಬ ಬಹುವಚನದಿಂದ ಭಿನ್ನಸ್ವಭಾವವುಳ್ಳ ಅನೇಕಾತ್ಮರಿರುವರೆಂದು ತಿಳಿಯಬಾರದು ಎಂದು ಭಾವ.

ಆತ್ಮತತ್ತ್ವವು[1] ಹುಟ್ಟಿಲ್ಲದೆ, ಒಂದೇ ಸಮವಾಗಿ, ವಿಶಾರದವಾಗಿ ಎಂದರೆ ವಿಶುದ್ಧವಾಗಿರುವದಷ್ಟೆ, ಆದ್ದರಿಂದ ಶಾಂತಿಯಾಗಲಿ ಮೋಕ್ಷವಾಗಲಿ (ಹೊಸದಾಗಿ) ಮಾಡಿಕೊಳ್ಳತಕ್ಕದ್ದು (ಯಾವದೂ) ಇರುವದಿಲ್ಲ ಎಂದರ್ಥ. ಏಕೆಂದರೆ ಯಾವಾಗಲೂ ಒಂದೇ ಸ್ವಭಾವವಾಗಿರುವ (ವಸ್ತುವಿಗೆ) ಏನನ್ನು (ಹೊಸದಾಗಿ) ಮಾಡಿದರೂ (ಅದರಿಂದ) ಸಪ್ರಯೋಜನವಾಗಲಾರದು.

(ಭಾಷ್ಯ)

೩೫೬. ಯೇ ಯಥೋಕ್ತಂ ಪರಮಾರ್ಥತತ್ತ್ವಂ ಪ್ರತಿಪನ್ನಾಃ ತೇ ಏವ ಅಕೃಪಣಾಃ ಲೋಕೇ, ಕೃಪಣಾ ಏವ ಅನ್ಯೇ[2] ಇತ್ಯಾಹ—

(ಭಾಷ್ಯಾರ್ಥ)

ಯಾರು ಮೇಲೆ ಹೇಳಿರುವ ಪರಮಾರ್ಥತತ್ತ್ವವನ್ನು ಅರಿತುಕೊಂಡಿರುವರೋ ಅವರೇ ಈ ಲೋಕದಲ್ಲಿ ಕೃಪಣರಲ್ಲದವರು, ಮಿಕ್ಕವರು ಕೃಪಣರೇ ಎಂದು (ಈಗ) ಹೇಳುತ್ತಾರೆ:—

**ವೈಶಾರದ್ಯಂ ತು ವೈ ನಾಸ್ತಿ ಭೇದೇ ವಿಚರತಾಂ ಸದಾ ।**
**ಭೇದನಿಮ್ನಾಃ ಪೃಥಗ್ವಾದಾಸ್ತಸ್ಮಾತ್ತೇ ಕೃಪಣಾಃ ಸ್ಮೃತಾಃ ॥ ೯೪ ॥**

೯೪. ಆದರೆ ಯಾವಾಗಲೂ ಭೇದದಲ್ಲಿ ಸಂಚರಿಸುತ್ತಿರುವವರಿಗೆ ವೈಶಾರದ್ಯವೆಂಬುದಿರುವದಿಲ್ಲ. ಬೇರೆ ಎಂಬ ವಾದಿಗಳು ಭೇದದ ತಗ್ಗುಳ್ಳವರು; ಆದ್ದರಿಂದ ಅವರು ಕೃಪಣರೆನಿಸುವರು.

---

1. ಆತ್ಮತತ್ತ್ವವು ಉತ್ಪಾದ್ಯ, ವಿಕಾರ್ಯ, ಸಂಸ್ಕಾರ್ಯ, ಆಪ್ಯ-ಎಂಬ ಕರ್ಮಕಾರ್ಯವಲ್ಲ; ಆದ್ದರಿಂದ ಅದರಲ್ಲಿ ಹೊಸದಾಗಿ ಪ್ರಯತ್ನವನ್ನು ಮಾಡಿ ಏನನ್ನೂ ಉಂಟುಮಾಡಿಕೊಳ್ಳುವದಾಗುವದಿಲ್ಲ. ಆದ್ದರಿಂದ ಅದನ್ನು ಇದ್ದಂತೆ ಅರಿತುಕೊಳ್ಳಬೇಕೇ ಹೊರತು ಮತ್ತೇನೂ ಯತ್ನವು ಬೇಕಿಲ್ಲ ಎಂದು ಭಾವ. ಸೂ. ಭಾ. ೧-೧-೪, ಬೃ. ಭಾ ೩-೩-೧, ತೈ. ಭಾ. ೧-೧೨, ಛಾ. ಭಾ. ೭೪ ರಲ್ಲಿ ಈ ಅಭಿಪ್ರಾಯವಿದೆ.

2. "ಕೃಪಣಾಸ್ತು ಅನ್ಯೇ" ಪಾ॥ 'ಕೇ ಅನ್ಯೇ? ಕೃಪಣಾ ಏವ' ಎಂಬ ಪಾಠವೂ ಉಂಟು.

(ಭಾಷ್ಯ)

೩೫೭. ಯಸ್ಮಾತ್ ಭೇದನಿಮ್ನಾಃ ಭೇದಾನುಯಾಯಿನಃ ಸಂಸಾರಾನುಗಾಃ ಇತ್ಯರ್ಥಃ । ಕೇ ? ಪೃಥಗ್ವಾದಾಃ । ಪೃಥಕ್ ನಾನಾ ವಸ್ತು ಇತ್ಯೇವಂ (ವಾದಃ) ವದನಂ ಯೇಷಾಂ ತೇ ಪೃಥಗ್ವಾದಾಃ ದ್ವೈತಿನಃ ಇತ್ಯರ್ಥಃ । ತಸ್ಮಾತ್ ತೇ ಕೃಪಣಾಃ ಕ್ಷುದ್ರಾಃ ಸ್ಮೃತಾಃ ಯಸ್ಮಾತ್ ವೈಶಾರದ್ಯಂ ವಿಶುದ್ಧಿಃ (ತು ವೈ[1]*) ನಾಸ್ತಿ ತೇಷಾಂ ಭೇದೇ ವಿಚಾರತಾಂ (ಸದಾ)* ದ್ವೈತಮಾರ್ಗೇ ಅವಿದ್ಯಾಪರಿಕಲ್ಪಿತೇ ಸರ್ವದಾ ವರ್ತಮಾನಾನಾಮ್ ಇತ್ಯರ್ಥಃ । ಅತಃ ಯುಕ್ತಮೇವ ತೇಷಾಂ ಕಾರ್ಪಣ್ಯಮ್ ಇತ್ಯಭಿಪ್ರಾಯಃ ॥

(ಭಾಷ್ಯಾರ್ಥ)

ಭೇದವೆಂಬ ತಗ್ಗುಳ್ಳವರು ಎಂದರೆ ಭೇದವನ್ನು ಹಿಂಬಾಲಿಸುವವರು, ಸಂಸಾರವನ್ನು ಅನುಸರಿಸುವವರು ಎಂದರ್ಥ. ಯಾರು ? (ಎಂದರೆ) ಪೃಥಗ್ವಾದಿಗಳು. ವಸ್ತು ಪೃಥಕ್ಕಾಗಿರುತ್ತದೆ, ಬೇರೆಬೇರೆಯಾಗಿರುತ್ತದೆ—ಎಂಬ ವಾದವು ಹೇಳುವಿಕೆಯು ಯಾರಿಗೋ ಅವರು ಪೃಥಗ್ವಾದಿಗಳು. ದ್ವೈತಿಗಳು ಎಂದರ್ಥ. (ದ್ವೈತಿಗಳು ಸಂಸಾರವನ್ನು ಅನುಸರಿಸುವರಷ್ಟೆ.) ಆದ್ದರಿಂದ ಅವರು ಕೃಪಣರು, ಅಲ್ಪರು ಎನಿಸಿಕೊಳ್ಳುವರು. ಏಕೆಂದರೆ ಯಾವಾಗಲೂ ಭೇದದಲ್ಲಿ ಓಡಾಡುತ್ತಿರುವ, ಎಂದರೆ ಅವಿದ್ಯಾಕಲ್ಪಿತವಾದ[2] ದ್ವೈತಮಾರ್ಗದಲ್ಲಿಯೇ ಯಾವಾಗಲೂ ಇರುವ (ಆ ವಾದಿಗಳಿಗೆ) ಎಂದರ್ಥ ; (ಅವರಿಗೆ) ವೈಶಾರದ್ಯವು, ವಿಶುದ್ಧಿಯು ಇರುವದಿಲ್ಲ[3]. ಆದ್ದರಿಂದ ಅವರು ಕೃಪಣರು ಎಂಬುದು ಯುಕ್ತವೇ[4] ಎಂದು ಅಭಿಪ್ರಾಯ.

(ಭಾಷ್ಯ)

೩೫೮. ಯದಿದಂ ಪರಮಾರ್ಥತತ್ತ್ವಮ್ (ತತ್) ಅಮಹಾತ್ಮಭಿಃ ಅಪಣ್ಡಿತೈಃ ವೇದಾನ್ತಬಹಿಷ್ಕೃತೈಃ ಕ್ಷುದ್ರೈಃ ಅಲ್ಪಪ್ರಜ್ಞೈಃ ಅನವಗಾಹ್ಯಮ್ ಇತ್ಯಾಹ :—

1. ನಕ್ಷತ್ರ ಚಿಹ್ನೆ ಹಾಕಿರುವ ಮಾತುಗಳು ಅಚ್ಚಿನ ಪಾಠದಲ್ಲಿ ಬಿಟ್ಟುಹೋಗಿವೆ.

2. ದ್ವೈತವೂ ಸಂಸಾರವೂ ಅವಿದ್ಯಾಕಲ್ಪಿತವಾಗಿರುತ್ತದೆ.

3. ನಾವು ಅಶುದ್ಧರು, ಸಂಸಾರಿಗಳು ಎಂದು ಅಜ್ಞರು ತಿಳಿದುಕೊಂಡಿರುತ್ತಾರೆ.

4. ಬೃ. ೩-೮-೧೦ರ ಸೂಚನೆ.

(ಭಾಷ್ಯಾರ್ಥ)

ಈ ಪರಮಾರ್ಥತತ್ತ್ವವಿದೆಯಲ್ಲ, (ಅದನ್ನು) ಮಹಾತ್ಮರಲ್ಲದ, ಪಂಡಿತರಲ್ಲದ ವೇದಾಂತಕ್ಕೆ ಹೊರಚ್ಚಾಗಿರುವ[1] ಕ್ಷುದ್ರರಾದ ಅಲ್ಪಪ್ರಜ್ಞರು[2] ತಿಳಿದುಕೊಳ್ಳಲಾರರು ಎಂದು ಹೇಳುತ್ತಾರೆ:—

**ಅಜೇ ಸಾಮ್ಯೇ ತು ಯೇ ಕೇಚಿದ್ಭವಿಷ್ಯನ್ತಿ ಸುನಿಶ್ಚಿತಾಃ ।**
**ತೇ ಹಿ ಲೋಕೇ ಮಹಾಜ್ಞಾನಾಸ್ತಚ್ಚ ಲೋಕೋ ನ ಗಾಹತೇ ॥೯೫॥**

೯೫. ಅಜವಾಗಿ ಸಾಮ್ಯವಾಗಿರುವ (ತತ್ತ್ವ)ವಲ್ಲಿ ಯಾರೇ ಆಗಲಿ ಸರಿಯಾದ ನಿಶ್ಚಯವನ್ನು ಪಡೆದರೆಂದರೆ ಅವರೇ ಲೋಕದಲ್ಲಿ ಮಹಾಜ್ಞಾನಿಗಳು. ಅದನ್ನು ಲೋಕವು ಅರಿಯದು.

(ಭಾಷ್ಯ)

೩೫೯. ಅಜೇ ಸಾಮ್ಯೇ ಪರಮಾರ್ಥತತ್ತ್ವೇ ಏವಮೇವೇತಿ ಯೇ ಕೇಚಿತ್ ಸ್ತ್ರ್ಯಾದಯೋಽಪಿ ಸುನಿಶ್ಚಿತಾ ಭವಿಷ್ಯನ್ತಿ ಚೇತ್ ತ ಏವ ಹಿ ಲೋಕೇ ಮಹಾಜ್ಞಾನಾಃ ನಿರತಿಶಯತತ್ತ್ವವಿಷಯಜ್ಞಾನಾ ಇತ್ಯರ್ಥಃ । ತಚ್ಚ ತೇಷಾಂ ವರ್ತ್ಮ ತೇಷಾಂ ವಿದಿತಂ ಪರಮಾರ್ಥತತ್ತ್ವಂ ಸಾಮಾನ್ಯಬುದ್ಧಿಃ ಅನ್ಯೋ ಲೋಕಃ ನ ಗಾಹತೇ ನಾವತರತಿ ನ ವಿಷಯೀಕರೋತಿ ಇತ್ಯರ್ಥಃ ॥

ಸರ್ವಭೂತಾತ್ಮಭೂತಸ್ಯ ಸರ್ವಭೂತಹಿತಸ್ಯ ಚ[3] ।
ದೇವಾಪಿ[4] ಮಾರ್ಗೇ ಮುಹ್ಯನ್ತ್ಯಪದಸ್ಯ ಪದೈಷಿಣಃ ॥ (೨೩೯–೨೩)
ಶಕುನೀನಾಮಿವಾಕಾಶೇ ಗತಿರ್ನೈವೋಪಲಭ್ಯತೇ[5] ॥ (?)
ಇತ್ಯಾದಿ ಸ್ಮರಣಾತ್ ॥

---

1. ಉಪನಿಷತ್ತುಗಳಲ್ಲಿ ಹೇಳಿರುವ ಜ್ಞಾನಕ್ಕೆ ಹೊರಚ್ಚಾಗಿರುವ ಎಂದರ್ಥ.

2. ಎಲ್ಲಾ ಅವಸ್ಥೆಗಳ ಅನುಭವವನ್ನೂ ವಿಚಾರಿಸಿ ಪೂರ್ಣವಾದ ಆತ್ಮತತ್ತ್ವವನ್ನು ಮನಗಾಣಲಾರದವರು, ಬರಿಯ ವ್ಯವಹಾರಜ್ಞಾನದಿಂದ ತೃಪ್ತರಾಗಿರುವವರು ಎಂದರ್ಥ.

3. "ಸಮ್ಯೈಕಾರ್ಥಂ ಪ್ರಪಶ್ಯತಃ" (ಸಮವಾದ ಒಂದೇ ವಸ್ತುವನ್ನು ಕಾಣುತ್ತಿರುವ) ವಾ॥

4. "ದೇವಾ ಅಪಿ" ಎಂದು ಅಚ್ಚಿನಪಾಠ; ನಾವು ಬರೆದಿರುವದು ಭಾರತದ ಪಾಠ.

5. ಶಾಂತಿ, ಆಪದ್ಧರ್ಮ ೧೬೦-೨೪, ಮೋ. ಧ. ೧೮೧-೧೯, ೨೩೯-೨೪ ಮುಂತಾದ ಭಾರತಶ್ಲೋಕಗಳಲ್ಲಿ ಈ ಅಭಿಪ್ರಾಯವಿದೆ. ಈ ಅನುಪೂರ್ವಿಯ ಶ್ಲೋಕವು ನಮಗೆ ಸಿಕ್ಕಿಲ್ಲ.

(ಭಾಷ್ಯಾರ್ಥ)

ಹುಟ್ಟಿಲ್ಲದ ಒಂದೇ ಸಮನಾಗಿರುವ ಪರಮಾರ್ಥತತ್ತ್ವದ ವಿಷಯದಲ್ಲಿ ಹೀಗೆಯೇ ಸರಿ ಎಂದು ಯಾರೇ ಆಗಲಿ–**ಹೆಂಗಸರು ಮುಂತಾದವರು ಕೂಡ**–[1] ಸರಿಯಾದ ನಿಶ್ಚಯವನ್ನು ಪಡದರೆಂದರೆ, ಲೋಕದಲ್ಲಿ ಅವರೇ ಮಹಾಜ್ಞಾನಿಗಳು, ತತ್ತ್ವವಿಷಯದಲ್ಲಿ ಇನ್ನಿಲ್ಲವೆಂಬಷ್ಟು ಜ್ಞಾನವನ್ನು ಪಡೆದುಕೊಂಡವರು ಎಂದರ್ಥ. ಅವನ್ನು ಅವರ ಮಾರ್ಗವನ್ನು, ಅವರಿಗೆ ತಿಳಿದಿರುವ ಪರಮಾರ್ಥತತ್ತ್ವವನ್ನು, ಸಾಮಾನ್ಯಬುದ್ಧಿಯುಳ್ಳ ಉಳಿದ ಜನವು ಅರಿಯದು. (ಅಲ್ಲಿಯವರೆಗೆ) ಇಳಿಯ ಲಾರದು (ಅದನ್ನು) ವಿಷಯಮಾಡಿಕೊಳ್ಳಲಾರದು–ಎಂದರ್ಥ.

"ಸರ್ವಪ್ರಾಣಿಗಳಿಗೂ ಆತ್ಮನಾಗಿರುವ ಸರ್ವಪ್ರಾಣಿಗಳಿಗೂ ಹಿತವನ್ನು ಮಾಡುತ್ತಿರುವ ಹೆಜ್ಜೆಯ ಗುರುತಿಲ್ಲದ (ಜ್ಞಾನಿಯು) ಹೆಜ್ಜೆಯ ಗುರುತನ್ನು ಹುಡುಕುತ್ತಿರುವ ದೇವತೆಗಳುಕೂಡ ಹೊಲಬುದಪ್ಪುವರು." (ಮೋ. ಧ. ೩೩೯–೨೩) "ಆಕಾಶದಲ್ಲಿ ಹಕ್ಕಿಗಳ (ಹಾದಿಯ ಗುರುತು ಸಿಕ್ಕದಿರುವಂತೆ) ಅವರ ದಾರಿಯ ಗುರುತು ಕಾಣುವದಿಲ್ಲ" ( ? )–ಎಂಬುದೇ ಮುಂತಾದ ಸ್ಮೃತಿಯು ಇದಕ್ಕೆ ಪ್ರಮಾಣವು.

(ಭಾಷ್ಯ)

೩೬೦. ಕಥಂ ಮಹಾಜ್ಞಾನತ್ವಮ್ ಇತಿ ? ಆಹ :—

(ಭಾಷ್ಯಾರ್ಥ)

ಅವರು ಮಹಾಜ್ಞಾನಿಗಳೆಂಬುದು ಹೇಗೆ ? ಎಂದರೆ ಹೇಳುತ್ತಾರೆ :—

**ಅಜೇಷ್ವಜಮಸಂಕ್ರಾನ್ತಂ ಧರ್ಮೇಷು ಜ್ಞಾನಮಿಷ್ಯತೇ ।**
**ಯತೋ ನ ಕ್ರಮತೇ ಜ್ಞಾನಮಸಙ್ಗಂ ತೇನ ಕೀರ್ತಿತಮ್ ॥ ೯೬ ॥**

೯೬. ಅಜರಾದ ಧರ್ಮರುಗಳಲ್ಲಿ ಜ್ಞಾನವು ಅಜವಾಗಿ ಅಸಂಕ್ರಾಂತವಾಗಿರುವದು ಎನಿಸಿಕೊಂಡಿರುವದು. ಜ್ಞಾನವು ಮತ್ತೊಂದುಕಡೆಗೆ ಹೋಗದೆ ಇರುವದಷ್ಟೆ, ಅದರಿಂದ ಅಸಂಗವು ಎಂದು ಹೇಳಲ್ಪಟ್ಟಿದೆ.

---

1. ವೇದಾಧಿಕಾರವಿಲ್ಲದ ಶೂದ್ರಾದಿಗಳುಕೂಡ ಇಲ್ಲಿ ಹೇಳಿರುವ ಕ್ರಮದಲ್ಲಿ ವಿಚಾರಮಾಡಿದರೆ ತತ್ತ್ವವನ್ನು ಅರಿಯಬಲ್ಲರು. ಅವರೇ ಮಹಾಜ್ಞಾನಿಗಳು.

(ಭಾಷ್ಯ)

೩೬೧. ಅಜೇಷು ಅನುತ್ಪನ್ನೇಷು ಅಚಲೇಷು ಧರ್ಮೇಷು ಆತ್ಮಸು ಅಜಮ್ ಅಚಲಂ ಚ ಜ್ಞಾನಮ್ ಇಷ್ಯತೇ ಸವಿತರೀವ ಔಷ್ಣ್ಯಂ ಪ್ರಕಾಶಶ್ಚ ಯತಃ, ತಸ್ಮಾತ್ ಅಸಙ್ಕ್ರಾನ್ತಮ್ ಅರ್ಥಾನ್ತರೇ ಜ್ಞಾನಮ್ ಅಜಮ್ ಇಷ್ಯತೇ । ಯಸ್ಮಾತ್ ನ ಕ್ರಮತೇ ಅರ್ಥಾನ್ತರೇ ಜ್ಞಾನಮ್, ತೇನ ಕಾರಣೇನ ಅಸಙ್ಗಂ ತತ್ ಕೀರ್ತಿತಮ್ ಆಕಾಶಕಲ್ಪಮ್ ಇತ್ಯುಕ್ತಮ್ ॥

(ಭಾಷ್ಯಾರ್ಥ)

ಅಜರಾದ ಹುಟ್ಟದ ಅಚಲರಾದ ಧರ್ಮರುಗಳಲ್ಲಿ ಆತ್ಮರುಗಳಲ್ಲಿ, ಸೂರ್ಯನಲ್ಲಿ ಬಿಸಿಯೂ ಬೆಳಕೂ (ಇರು)ವಂತೆ, ಅಜವೂ ಅಚಲವೂ ಆದ ಜ್ಞಾನವಿರುವದೆಂದು ಒಪ್ಪಿರುತ್ತದೆಯಲ್ಲವೆ[1] ? ಅದರಿಂದ[2] ಅಜವಾದ ಜ್ಞಾನವು ಮತ್ತೊಂದು ವಿಷಯದಲ್ಲಿ ಹೋಗದೆ ಇರುವದು ಎನಿಸುತ್ತದೆ. ಜ್ಞಾನವು (ಹೀಗೆ) ಮತ್ತೊಂದು ವಿಷಯಕ್ಕೆ ಹೋಗದೆ ಇರುವದರಿಂದ ಅದು ಅಸಂಗವು ಎಂದು ಹೇಳಲ್ಪಟ್ಟಿದೆ, ಆಕಾಶದಂತಿರುವದು ಎಂದು ಹೇಳಲ್ಪಟ್ಟಿದೆ[3].

**ಅಣುಮಾತ್ರೇಽಪಿ ವೈಧರ್ಮ್ಯೇ ಜಾಯಮಾನೇಽವಿಪಶ್ಚಿತಃ ।**
**ಅಸಙ್ಗತಾ ಸದಾ ನಾಸ್ತಿ ಕಿಮುತಾವರಣಚ್ಯುತಿಃ ॥ ೯೭ ॥**

೯೭. ಅಣುಮಾತ್ರವಾಗಿ ವೈಧರ್ಮ್ಯವುಂಟಾದರೂ ಅರಿಯದವನಿಗೆ ಅಸಂಗತ್ವವು ಎಂದಿಗೂ ಇರುವದಿಲ್ಲ. ಇನ್ನು ಆವರಣದ ಚ್ಯುತಿಯು ಇರುವದಿಲ್ಲವೆಂದು (ಹೇಳುವ)ದೇನು ?

---

1. ಆತ್ಮರು ಹುಟ್ಟುವದಿಲ್ಲ, ಮಾರ್ಪಡುವದಿಲ್ಲ; ಜ್ಞಾನವು ಆತ್ಮಸ್ವರೂಪವೇ ಆಗಿರುವದರಿಂದ ಅದೂ ಹುಟ್ಟುವದಿಲ್ಲ, ಮಾರ್ಪಡುವದಿಲ್ಲ.

2. ಯತಃ ಎಂಬ ಮಾತನ್ನು ಭಾಷ್ಯಕಾರರು ಎರಡು ಕಡೆಗೂ ಅನ್ವಯಿಸಿರುತ್ತಾರೆ. "ಯತೋ ಜ್ಞಾನಮ್ ಅಜೇಷು ಧರ್ಮೇಷು ಅಜಮ್ ಇಷ್ಯತೇ । ತತಃ ಅಸಙ್ಗಮ್ ಇಷ್ಯತೇ । ಯತಃ ಜ್ಞಾನಮ್ ನ ಕ್ರಮತೇ ತೇನ ತತ್ ಅಸಙ್ಗಮ್ ಕೀರ್ತಿತಮ್" ಎಂದು ಅನ್ವಯ. ಜ್ಞಾನವು ವಿಷಯದೊಡನೆ ಸಂಬದ್ಧವಾದಾಗ ವಿಷಯಜ್ಞಾನವಾಗುತ್ತದೆ ಎನ್ನುವದು ತಪ್ಪು; ಏಕೆಂದರೆ ಜ್ಞಾನವು ಸ್ವಲ್ಪವೂ ಚಲಿಸದೆ ತಾನು ಇದ್ದಂತೆಯೇ ಇರುತ್ತದೆ. ಎಂದು ಭಾವ.

3. ಜ್ಞಾನರೂಪನಾದ ಆತ್ಮನಿಗಿಂತ ಬೇರೆ ಯಾವ ಜ್ಞಾನವಿಲ್ಲ, ವಿಷಯವೂ ಇಲ್ಲ ಎಂದು ಭಾವ.

(ಭಾಷ್ಯ)

೩೬೨. ಇತಃ ಅನ್ಯೇಷಾಂ ವಾದಿನಾಮ್ ಅಣುಮಾತ್ರೇ ಅಲ್ಪೇಽಪಿ ವೈಧರ್ಮ್ಯೇ ವಸ್ತುನಿ ಬಹಿಃ ಅನ್ತರ್ವಾ ಜಾಯಮಾನೇ ಉತ್ಪಾದ್ಯಮಾನೇ ಅವಿಪಶ್ಚಿತಃ ಅವಿವೇಕಿನಃ ಅಸಙ್ಗತಾ ಅಸಙ್ಗತ್ವಂ ಸದಾ ನಾಸ್ತಿ ಕಿಮುತ ವಕ್ತವ್ಯಮ್ ಆವರಣ ಚ್ಯುತಿಃ ಬನ್ಧನಾಶಃ ನಾಸ್ತಿ ಇತಿ ॥

(ಭಾಷ್ಯಾರ್ಥ)

ಇದಕ್ಕಿಂತ ಬೇರೆಯಾದ[1] ವಾದಿಗಳ (ಮತದಲ್ಲಿಯೋ ಎಂದರೆ), ಅಣುಮಾತ್ರವಾಗಿ ಸ್ವಲ್ಪವಾಗಿ ವೈಧರ್ಮ್ಯವುಂಟಾದರೂ ವಸ್ತುವಿನಲ್ಲಿ ಒಳಗಾಗಲಿ ಹೊರಗಾಗಲಿ (ಒಂದಿಷ್ಟು ವೈಧರ್ಮ್ಯವು) ಹುಟ್ಟಿದರೂ ಉಂಟಾದರೂ ಅರಿಯದವನಿಗೆ ಅವಿವೇಕಿಗೆ[2] ಅಸಂಗತೆಯು ಸಂಗವಿಲ್ಲದಿರುವಿಕೆಯು ಎಂದಿಗೂ ಇರುವದಿಲ್ಲ. ಇನ್ನು ಆವರಣದ ಚ್ಯುತಿಯು ಬಂಧದ ನಾಶವು ಇರುವದಿಲ್ಲವೆಂದು[3] ಹೇಳುವದೇನಿದೆ ?

(ಭಾಷ್ಯ)

೩೬೩. ತೇಷಾಮ್ ಆವರಣಚ್ಯುತಿಃ ನಾಸ್ತಿ ಇತಿ ಬ್ರುವತಾಂ ಸ್ವಸಿದ್ಧಾನ್ತೇ ಅಭ್ಯುಪಗತಂ ತರ್ಹಿ ಧರ್ಮಾಣಾಮ್ ಆವರಣಮ್ । ನೇತ್ಯುಚ್ಯತೇ—

(ಭಾಷ್ಯಾರ್ಥ)

(ಆಕ್ಷೇಪ) :—ಹಾಗಾದರೆ ಅವರಿಗೆ ಆವರಣದ ಚ್ಯುತಿಯಿರುವದಿಲ್ಲ ಎಂದು ಹೇಳುವ ನಿಮ್ಮ ಸಿದ್ಧಾಂತದಲ್ಲಿ ಆತ್ಮರಿಗೆ ಆವರಣವನ್ನು ಒಪ್ಪಿದಂತೆ ಆಯಿತಲ್ಲ ?

(ಪರಿಹಾರ) :—ಹಾಗಲ್ಲವೆನ್ನುತ್ತೇವೆ (ಏಕೆಂದರೆ) :—

**ಅಲಬ್ಧಾವರಣಾಃ ಸರ್ವೇ ಧರ್ಮಾಃ ಪ್ರಕೃತಿನಿರ್ಮಲಾಃ ।**
**ಆದೌ ಬುದ್ಧಾಸ್ತಥಾ ಮುಕ್ತಾ ಬುಧ್ಯನ್ತ ಇತಿ ನಾಯಕಾಃ ॥ ೯೮ ॥**

೯೮. ಎಲ್ಲಾ ಧರ್ಮರೂ ಆವರಣವನ್ನು ಹೊಂದದಿರುವವರು, ಪ್ರಕೃತಿಯಿಂದ ನಿರ್ಮಲರಾಗಿರುವವರು, ಮೊದಲೇ ಬುದ್ಧರಾಗಿರುವವರು ಮತ್ತು ಮುಕ್ತರಾಗಿರುವವರು. ಸಮರ್ಥರಾಗಿರುವದರಿಂದ ತಿಳಿಯುವರು.

---

1. ಆತ್ಮನಿಂದ ಬೇರೆಯಾದ ವಸ್ತುವು ಹುಟ್ಟುವದೆಂದು ಒಪ್ಪುವ ವಾದಿಗಳ ಮತದಲ್ಲಿ ಎಂದರ್ಥ.

2. ಅದ್ವೈತತತ್ತ್ವದಲ್ಲಿ ಭೇದವನ್ನು ಕಲ್ಪಿಸುವವನು ಅವಿವೇಕಿಯು.

3. ಅಜ್ಞಾನದ ಆವರಣವುಳ್ಳವರಿಗೆ ನಾವು ಪರಿಚ್ಛಿನ್ನರೆಂಬ ತಿಳಿವಳಿಕೆಯೂ ಬಂಧವೂ ವಿಷಯಾನುಭವದ ಬಂಧವೂ ಗಂಟುಬಿದ್ದಿರುವದು.

(ಭಾಷ್ಯ)

೩೬೪. ಅಲಬ್ಧಾವರಣಾಃ । ಅಲಬ್ಧಮ್, ಅಪ್ರಾಪ್ತಮ್ ಆವರಣಮ್ ಅವಿದ್ಯಾದಿಬನ್ಧನಂ ಯೇಷಾಂ ತೇ ಸರ್ವೇ[1] ಧರ್ಮಾಃ ಅಲಬ್ಧಾವರಣಾಃ । ಬನ್ಧನರಹಿತಾಃ ಇತ್ಯರ್ಥಃ । ಪ್ರಕೃತಿನಿರ್ಮಲಾಃ ಸ್ವಭಾವಶುದ್ಧಾಃ । ಆದೌ ಬುದ್ಧಾಃ ತಥಾ ಮುಕ್ತಾಃ ಯಸ್ಮಾತ್ ನಿತ್ಯಶುದ್ಧಬುದ್ಧಮುಕ್ತಸ್ವಭಾವಾಃ । ಯದ್ಯೇವಂ ಕಥಂ ತರ್ಹಿ ಬುಧ್ಯನ್ತೇ ಇತಿ ? ಉಚ್ಯತೇ–ನಾಯಕಾಃ ಸ್ವಾಮಿನಃ ಸಮರ್ಥಾಃ ಬೋದ್ಧುಮ್ । ಬೋಧಶಕ್ತಿಮತ್ಸ್ವಭಾವಾಃ ಇತ್ಯರ್ಥಃ । ಯಥಾ ನಿತ್ಯಪ್ರಕಾಶಸ್ವರೂಪೋಽಪಿ ಸವಿತಾ 'ಪ್ರಕಾಶತೇ' । ಇತ್ಯುಚ್ಯತೇ । ಯಥಾ ವಾ ನಿತ್ಯನಿವೃತ್ತಗತಯೋಽಪಿ ನಿತ್ಯಮೇವ ಶೈಲಾಃ "ತಿಷ್ಠನ್ತಿ" ಇತಿ ಉಚ್ಯತೇ ತದ್ವತ್ ॥

(ಭಾಷ್ಯಾರ್ಥ)

ಅಲಬ್ಧಾವರಣರು ಆವರಣವು ಅವಿದ್ಯೆಯೇ ಮುಂತಾದ ಬಂಧವು ಯಾರಿಗೆ ಅಲಬ್ಧವೋ ಹೊಂದಲ್ಪಡದೆ ಇರುವದೋ, ಆ ಎಲ್ಲಾ ಧರ್ಮರೂ ಅಲಬ್ಧಾವರಣರು, ಬಂಧನವಿಲ್ಲದವರು ಎಂದರ್ಥ. ಪ್ರಕೃತಿನಿರ್ಮಲರು, ಸ್ವಭಾವದಿಂದಲೇ ಶುದ್ಧರಾಗಿರುವವರು. (ಅವರು) ಮೊದಲೇ ಬುದ್ಧರು, ಮತ್ತು ಮುಕ್ತರು ; ಏಕೆಂದರೆ ನಿತ್ಯಶುದ್ಧಬುದ್ಧಮುಕ್ತವಾದ ಸ್ವಭಾವವುಳ್ಳವ(ರಾಗಿರುತ್ತಾರೆ).

(ಆಕ್ಷೇಪ) :–ಹಾಗಾದರೆ ಇವರು ಅರಿಯುತ್ತಾರೆಂಬುದು ಹೇಗೆ ?

(ಪರಿಹಾರ) :–ಹೇಳುತ್ತೇವೆ. (ಇವರು) ನಾಯಕರು, ಸ್ವತಂತ್ರರು ಅರಿಯುವ ಸಾಮರ್ಥ್ಯವುಳ್ಳವರು. ಜ್ಞಾನಶಕ್ತಿಯಿಂದೊಡಗೂಡಿದ ಸ್ವಭಾವದವರು ಎಂದರ್ಥ. ಹೇಗೆ ಸೂರ್ಯನು ಯಾವಾಗಲೂ ಪ್ರಕಾಶಸ್ವರೂಪನೇ ಆಗಿದ್ದರೂ "ಬೆಳಗುತ್ತಾನೆ" ಎನ್ನುವರೋ,[2] ಎಂದಿಗೂ ಓಡಾಡುವದಿಲ್ಲದಿದ್ದರೂ ಬೆಟ್ಟಗಳು ಯಾವಾಗಲೂ "ನಿಂತಿರುತ್ತವೆ" ಎಂದು ಹೇಳುವರೋ, ಅದರಂತೆಯೇ (ಇದು).

---

1. ಈ ಮಾತು ಭಾಷ್ಯದಲ್ಲಿ ಬಿಟ್ಟುಹೋಗಿದೆ.

2. ಕ್ರಿಯೆಯನ್ನು ಮಾಡುವದಕ್ಕೂ ಬಿಡುವದಕ್ಕೂ ಸ್ವತಂತ್ರನಾಗಿರುವವನನ್ನಲ್ಲವೆ, ಕರ್ತೃವೆನ್ನಬೇಕು ? ಜ್ಞಾನಿಯು ನಿತ್ಯಜ್ಞಾನಸ್ವರೂಪನೇ ಆದರೆ ಅವನು "ಅರಿಯುತ್ತಾನೆ" ಎಂದು ವ್ಯವಹರಿಸುವದು ಸರಿಯೆ ?—ಎಂದು ಪೂರ್ವಪಕ್ಷಿಯ ಆಕ್ಷೇಪ. ಸೂರ್ಯನು ನಿತ್ಯಪ್ರಕಾಶರೂಪನಾದರೂ ಬೆಳಗುತ್ತಾನೆ ಎಂದು ವ್ಯವಹರಿಸುವಂತೆ ಇದು ಔಪಚಾರಿಕ ಪ್ರಯೋಗವಾಗಿದೆ ಎಂದು ಪರಿಹಾರ.

**ಕ್ರಮತೇ ನ ಹಿ ಬುದ್ಧಸ್ಯ ಜ್ಞಾನಂ ಧರ್ಮೇಷು ತಾಯಿನಃ ।**
**ಸರ್ವೇ ಧರ್ಮಾಸ್ತಥಾ ಜ್ಞಾನಂ ನೈತದ್ ಬುದ್ಧೇನ ಭಾಷಿತಮ್ ॥೯೯॥**

೯೯. ತಾಯಿಯಾದ ಬುದ್ಧನ (ದೃಷ್ಟಿಯಲ್ಲಿ) ಧರ್ಮದಲ್ಲಿರುವ ಜ್ಞಾನವು ಚಲಿಸುವದಿಲ್ಲ. ಸರ್ವಧರ್ಮರೂ ಹಾಗೆಯೇ (ಚಲಿಸುವದಿಲ್ಲ). ಈ ಜ್ಞಾನವು (ಗೌತಮ) ಬುದ್ಧನಿಂದ ಹೇಳಲ್ಪಟ್ಟಿರುವದಿಲ್ಲ.

(ಭಾಷ್ಯ)

೩೬೫. ಯಸ್ಮಾತ್ ನ ಹಿ ಕ್ರಮತೇ ಬುದ್ಧಸ್ಯ ಪರಮಾರ್ಥದರ್ಶಿನಃ ಜ್ಞಾನಂ ವಿಷಯಾನ್ತರೇಷು ಧರ್ಮೇಷು ಧರ್ಮಸಂಸ್ಥಂ[1] ಸವಿತರೀವ ಪ್ರಭಾ । ತಾಯಿನಃ "ತಾಯಃ ಅಸ್ತಿ ಇತಿ ತಾಯೀ।" ಅಸ್ಯ ಅಸ್ತೀತಿ ತಾಯೀ। ಸನ್ತಾನವತೋ ನಿರನ್ತರಸ್ಯ ಆಕಾಶಕಲ್ಪಸ್ಯ ಇತ್ಯರ್ಥಃ ಪೂಜಾವತೋ ವಾ । ಸರ್ವೇ ಧರ್ಮಾಃ ಆತ್ಮಾನೋಽಪಿ ತಥಾ ಜ್ಞಾನವದೇವ ಆಕಾಶಕಲ್ಪತ್ವಾತ್ ನ ಕ್ರಮನ್ತೇ ಕ್ವಚಿದಪಿ ಅರ್ಥಾನ್ತರೇ ಇತ್ಯರ್ಥಃ । ಯತ್ ಆದೌ ಉಪನ್ಯಸ್ತಮ್ "ಜ್ಞಾನೇನ ಆಕಾಶಕಲ್ಪೇನ" (೪-೧) ಇತ್ಯಾದಿ, ತದಿದಮ್ ಆಕಾಶಸ್ಯಕಲ್ಪಸ್ಯ ತಾಯಿನಃ ಬುದ್ಧಸ್ಯ ತದನನ್ಯತ್ವಾತ್ ಆಕಾಶ ಕಲ್ಪಂ ಜ್ಞಾನಂ ನ ಕ್ರಮತೇ ಕ್ವಚಿದಪಿ ಅರ್ಥಾನ್ತರೇ ತಥಾ ಧರ್ಮಾಃ ಇತಿ ॥

(ಭಾಷ್ಯಾರ್ಥ)

ಬುದ್ಧನ ಪರಮಾರ್ಥವನ್ನು ಕಂಡುಕೊಂಡಿರುವಾತನ (ದೃಷ್ಟಿಯಲ್ಲಿ) **ಧರ್ಮರಲ್ಲಿರುವ** ಜ್ಞಾನವು, ಸೂರ್ಯನಲ್ಲಿರುವ ಬೆಳಕು ಹೇಗೆ (ಸೂರ್ಯನನ್ನು ಬಿಟ್ಟು ಮತ್ತೊಂದೆಡೆಗೆ ಹೋಗುವದಿಲ್ಲವೋ ಹಾಗೆ) ಬೇರೆಯ ವಿಷಯಗಳೆಡೆಗೆ ಹೋಗುವದೇ ಇಲ್ಲ. ತಾಯಿಯಾದ–ತಾಯವುಳ್ಳವನು ತಾಯಿಯು, ಸಂತತವಾಗಿರುವ ಎಡೆಬಿಡದೆ ಆಕಾಶದಂತೆ (ವ್ಯಾಪಿಸಿರುವ) ಎಂದರ್ಥ ; ಅಥವಾ ಪೂಜೆಯುಳ್ಳ (ಪೂಜ್ಯನಾದ) ;

1. 'ಧರ್ಮಸಂಸ್ಥಮ್' ಎಂಬುದು ಧರ್ಮೇಷು ಎಂಬುದರ ವ್ಯಾಖ್ಯಾನವೆಂದಿಟ್ಟುಕೊಂಡರೆ ತಾಯಿನಃ ಬುದ್ಧಸ್ಯ (ಮತೇಃ) ಧರ್ಮೇಷು (ಸ್ಥಿತಂ) ಜ್ಞಾನಂ ನ ಹಿ (ಕ್ವಚಿತ್) ಕ್ರಮತೇ। ತಥಾ ಸರ್ವೇ ಧರ್ಮಾ (ಅಪಿ ನ ಕ್ವಚಿತ್ ಕ್ರಮನ್ತೇ)-ಎಂದು ಕಾರಿಕೆಗೆ ಅನ್ವಯ. "ಧರ್ಮಿಸಂಸ್ಥಮ್" ಎಂದು ಪಾಠವಿದ್ದರೆ ತಾಯಿನಃ ಬುದ್ಧಸ್ಯ ಜ್ಞಾನಂ ಧರ್ಮೇಷು (ವಿಷಯಾನ್ತರೇಷು) ನ ಹಿ ಕ್ರಮತೇ। ತಥಾ ಸರ್ವೇ ಧರ್ಮಾಃ ನ (ಕ್ವಚಿತ್) ಕ್ರಮನ್ತೇ" ಎಂದು ಅನ್ವಯ. ಮೊದಲನೆಯ ಅನ್ವಯದಂತೆ ಇಲ್ಲಿ ಅರ್ಥವನ್ನು ಬರೆದಿದೆ. ಎರಡನೆಯ ಅನ್ವಯದಲ್ಲಿ ತಾಯಿಯಾದ ಬುದ್ಧನ ಜ್ಞಾನವು ವಿಷಯಗಳಲ್ಲಿ ಹೋಗಿ ಸೇರುವದಿಲ್ಲ—ಎಂದು ಅರ್ಥವನ್ನು ಮಾಡಬೇಕು. ಅದು ಭಾಷ್ಯದ ಉಳಿದ ಭಾಗಕ್ಕೂ ಹೊಂದಿಕೊಳ್ಳುತ್ತದೆ.

ಅಥವಾ ಪ್ರಕೃಷ್ಟವಾದ ಜ್ಞಾನವುಳ್ಳ-(ಬುದ್ಧನ ಮತದಲ್ಲಿ ಜ್ಞಾನವು) ಬೇರೆಯ ವಿಷಯಗಳಲ್ಲಿ ಹೋಗಿಸೇರುವದಿಲ್ಲ (ಎಂದರ್ಥ). ಮತ್ತು ಎಲ್ಲಾ ಧರ್ಮರೂ (ಎಲ್ಲಾ) ಆತ್ಮರೂ ಜ್ಞಾನದಂತೆಯೇ ಆಕಾಶಸಮರಾಗಿರುವವರಿಂದ ಮತ್ತೊಂದು ಬೇರೆ ಯಾವ ವಿಷಯದಲ್ಲಿಯೂ ಹೋಗಿ ಸೇರುವದಿಲ್ಲ ಎಂದರ್ಥ.

"ಆಕಾಶಕಲ್ಪವಾದ ಜ್ಞಾನದಿಂದ" ಎಂದು ಮುಂತಾಗಿ (೪-೧) ಮೊದಲು ಹೇಳಿತ್ತಷ್ಟೆ; ಅದನ್ನೇ ಇಲ್ಲಿ ಆಕಾಶಕಲ್ಪನಾದ ತಾಯಿಯಾಗಿರುವ ಬುದ್ಧನ ಆಕಾಶಕಲ್ಪವಾದ ಜ್ಞಾನವು ಆತನ ಸ್ವರೂಪಕ್ಕಿಂತ ಬೇರೆಯಲ್ಲವಾದ್ದರಿಂದ ಮತ್ತೆ ಯಾವ ವಿಷಯಕ್ಕೂ ಹೋಗಿಸೇರುವದಿಲ್ಲ, ಧರ್ಮರೂ ಹಾಗೆಯೇ-ಎಂದು (ಉಪಸಂಹಾರ ಮಾಡಿರುತ್ತಾರೆ[1]).

(ಭಾಷ್ಯ)

೩೬೬. (ಜ್ಞಾನಮ್[2]) ಆಕಾಶಮಿವ ಅಚಲಮ್ ಅವಿಕ್ರಿಯಂ ನಿರವಯವಂ ನಿತ್ಯಮ್ ಅದ್ವಿತೀಯಮ್ ಅಸಙ್ಗಮ್ ಅದೃಶ್ಯಮ್ ಅಗ್ರಾಹ್ಯಮ್ ಅಶನಾಯಾದ್ಯತೀತಂ ಬ್ರಹ್ಮಾತ್ಮತತ್ತ್ವಮ್ "ನ ಹಿ ದ್ರಷ್ಟುರ್ದೃಷ್ಟೇರ್ವಿಪರಿಲೋಪೋ ವಿದ್ಯತೇ" (ಬೃ. ೪-೩-೨೩) ಇತಿ ಶ್ರುತೇಃ । ಜ್ಞಾನಜ್ಞೇಯಜ್ಞಾತೃರಹಿತಮ್ ಪರಮಾರ್ಥತತ್ತ್ವಮ್ ಅದ್ವಯಮ್ ಏತತ್ ನ ಬುದ್ಧೇನ ಭಾಷಿತಮ್ । ಯದ್ಯಪಿ ಬಾಹ್ಯಾರ್ಥನಿರಾಕರಣಂ ಜ್ಞಾನಮಾತ್ರಕಲ್ಪನಾ ಚ ಅದ್ವಯವಸ್ತುಸಾಮೀಪ್ಯಮ್ ಉಕ್ತಮ್ । ಇದಂ ತು ಪರಮಾರ್ಥತತ್ತ್ವಮ್ ಅದ್ವೈತಂ ವೇದಾನ್ತೇಷ್ವೇವ ವಿಜ್ಞೇಯಮ್ ಇತ್ಯರ್ಥಃ ॥

(ಭಾಷ್ಯಾರ್ಥ)

ಈ ಜ್ಞಾನವು, ಆಕಾಶದಂತೆ ಅಚಲವಾಗಿಯೂ ವಿಕಾರವಿಲ್ಲದ್ದಾಗಿಯೂ ಅವಯವವಿಲ್ಲದ್ದಾಗಿಯೂ ನಿತ್ಯವಾಗಿಯೂ ತನಗೆರಡನೆಯದಿಲ್ಲದ್ದಾಗಿಯೂ (ಮತ್ತೊಂದರ) ಸೋಂಕಿಲ್ಲದ್ದಾಗಿಯೂ ಕಾಣುವದಕ್ಕಾಗದ್ದಾಗಿಯೂ ಹಿಡಿದು

1. "ಉಪಸಂಹೃತಮ್" ಎಂಬ ಮಾತು ಭಾಷ್ಯದಲ್ಲಿದ್ದದ್ದು ಬಿಟ್ಟುಹೋಗಿದೆ ಎಂದು ತೋರುತ್ತದೆ. "ತದಿದಮಿಹೋಪಸಂಹೃತಮ್ ಇತಿ ಶೇಷಃ" ಎಂದು ವ್ಯಾಖ್ಯಾನದಲ್ಲಿದೆ.

2. ಈ ಮಾತು ಭಾಷ್ಯದಲ್ಲಿ ಇಲ್ಲಿರಬೇಕೆಂದು ಮೂಲಾನುಸಾರವಾಗಿ ಕಲ್ಪಿಸಲಾಗಿದೆ.

ಕೊಳ್ಳುವಪಕ್ಕೆ ಬಾರದ್ದಾಗಿಯೂ, ಹಸಿವು ಮುಂತಾದವುಗಳನ್ನು ದಾಟಿರುವದಾಗಿಯೂ[1] ಇರುವ ಬ್ರಹ್ಮಾತ್ಮತತ್ತ್ವವು. "ನೋಡುವಾತನ ನೋಟಕ್ಕೆ ನಾಶವೆಂಬುದೇ ಇಲ್ಲ" (ಬೃ. ೪-೩-೨೩) ಎಂಬ ಶ್ರುತಿಯು[2] ಇದಕ್ಕೆ ಪ್ರಮಾಣವು. ಜ್ಞಾನ, ಜ್ಞೇಯ, ಜ್ಞಾತೃ-ಎಂಬ ಭೇದಗಳಿಲ್ಲದ ತನಗೆರಡನೆಯದಿಲ್ಲದ ಈ ಪರಮಾರ್ಥತತ್ತ್ವವು **(ಗೌತಮ) ಬುದ್ಧನಿಂದ**[3] ಹೇಳಲ್ಪಡಲಿಲ್ಲ. ಹೊರಗಿನ ವಸ್ತುವನ್ನು ನಿರಾಕರಿಸುವದು, ಜ್ಞಾನವೊಂದೇ (ಇರುವದೆಂದು) ಕಲ್ಪಿಸುವದು-(ಹೀಗೆ) ಅದ್ವಯವಸ್ತುವಿಗೆ ಸಮೀಪವಾಗಿರುವದನ್ನೇ ಅವನು ಹೇಳಿದ್ದರೂ[4] (ಇದನ್ನು ಹೇಳಲಿಲ್ಲ). ಅದ್ವೈತವೆಂಬ ಈ ಪರಮಾರ್ಥತತ್ತ್ವವಾದರೋ **ವೇದಾಂತಗಳಲ್ಲಿಯೇ ತಿಳಿಯಬರತಕ್ಕದ್ದಾಗಿರುತ್ತದೆ**[5] ಎಂದರ್ಥ.

## ಮಂಗಲ

(ಭಾಷ್ಯ)

೩೬೭. ಶಾಸ್ತ್ರಸಮಾಪ್ತೌ ಪರಮಾರ್ಥತತ್ತ್ವಸ್ತುತ್ಯರ್ಥಂ ನಮಸ್ಕಾರ ಉಚ್ಯತೇ :—

**(ಭಾಷ್ಯಾರ್ಥ)**

ಶಾಸ್ತ್ರವನ್ನು ಮುಗಿಸುವ (ಕಾಲ)ದಲ್ಲಿ[6] ಪರಮಾರ್ಥತತ್ತ್ವವನ್ನು ಹೊಗಳುವದಕ್ಕಾಗಿ ನಮಸ್ಕಾರವನ್ನು ಹೇಳುತ್ತಾರೆ :—

---

1. ಇದುವರೆಗೆ ಹೇಳಿರುವ ವಿಶೇಷಣಗಳು ಮಾಂಡೂಕ್ಯೋಪನಿಷತ್ತಿನ ೭ನೆಯ ಮಂತ್ರದಲ್ಲಿ ವರ್ಣಿಸಿರುವ ತುರೀಯಾತ್ಮವನ್ನೇ ಇಲ್ಲಿ ಆಕಾಶಕಲ್ಪವಾದ ಜ್ಞಾನವೆಂದು ವರ್ಣಿಸಿದೆ ಎಂಬುದನ್ನು ಸೂಚಿಸುವವು. ಬೌದ್ಧರು ಒಪ್ಪುವ ಕ್ಷಣಿಕವಿಜ್ಞಾನಕ್ಕೂ ಈ ಸ್ವರೂಪಜ್ಞಾನಕ್ಕೂ ಇರುವ ಹೆಚ್ಚುಕಡಿಮೆಯು ಇವುಗಳಿಂದ ಸ್ಪಷ್ಟವಾಗುತ್ತವೆ.

2. ಆಕಾಶದಂತೆ ನಿತ್ಯವೂ ವ್ಯಾಪಕವೂ ಆದ ವಿಜ್ಞಾನವಿದೆ ಎಂಬುದಕ್ಕೆ ಈ ಶ್ರುತಿಯು ಪ್ರಮಾಣ.

3. ಬುದ್ಧ ಎಂಬ ಶಬ್ದವನ್ನು ಜ್ಞಾನಿ ಎಂಬರ್ಥದಲ್ಲಿಯೇ ಕಾರಿಕೆಯಲ್ಲಿ ಪ್ರಚುರವಾಗಿ ಉಪಯೋಗಿಸಿದೆಯಾದರೂ ಪ್ರಕೃತದಲ್ಲಿ ಬುದ್ಧನೆಂದರೆ ಗೌತಮಬುದ್ಧನೇ ಎಂಬುದು ಸ್ಪಷ್ಟ.

4. ವಿಜ್ಞಾನವಾದಿಗಳಾದ ಬೌದ್ಧರೂ ಅದ್ವೈತಿಗಳಂತೆ ಜ್ಞಾನವೊಂದೇ ಪರಮಾರ್ಥವೆಂದು ಕಲ್ಪಿಸಿರುವದರಿಂದ ಅವರ ವಾದವು ಅದ್ವೈತಕ್ಕೆ ಸಮೀಪವಾಗಿದೆಯೆಂದು ಹೇಳಿದೆ. ಆದರೆ ವಿಜ್ಞಾನವಾದವು ಯುಕ್ತಿಯುಕ್ತವಲ್ಲವೆಂಬುದನ್ನು ಈ ಪ್ರಕರಣದಲ್ಲಿ ಸ್ಪಷ್ಟವಾಗಿ ತೋರಿಸಿರುತ್ತವೆ. ಬೌದ್ಧವಾದದ ವಿಷಯವಾಗಿ ಪೀಠಿಕೆಯನ್ನು ನೋಡಿ.

5. ಬೃ. ೩-೯-೨೬ರ ಸೂಚನೆ.

6. ಈ ಪ್ರಕರಣವನ್ನು ಶಾಸ್ತ್ರವೆಂದು ಕರೆದಿರುವ ವಿಷಯಕ್ಕೆ ಪೀಠಿಕೆಯನ್ನು ನೋಡಿ.

**ದುರ್ದರ್ಶಮತಿಗಮ್ಭೀರಮಜಂ ಸಾಮ್ಯಂ ವಿಶಾರದಮ್ ।**
**ಬುದ್ಧ್ವಾ ಪದಮನಾನಾತ್ವಂ ನಮಸ್ಕುರ್ಮೋ ಯಥಾಬಲಮ್॥೧೦೦॥**

೧೦೦. ದುರ್ದರ್ಶವಾದ, ಅತಿಗಂಭೀರವಾದ, ಅಜವಾದ ಸಾಮ್ಯವಾದ, ವಿಶಾರದವಾದ, ನಾನಾತ್ವವಿಲ್ಲದ ಪದವನ್ನು ಅರಿತುಕೊಂಡು ಬಲವಿದ್ದಷ್ಟು ನಮಸ್ಕರಿಸುತ್ತೇವೆ.

(ಭಾಷ್ಯ)

೩೬೮. ದುರ್ದರ್ಶಂ ದುಃಖೇನ ದರ್ಶನಮ್ ಅಸ್ಯ ಇತಿ ದುರ್ದರ್ಶಮ್ । ಅಸ್ತಿ ನಾಸ್ತೀತ್ಯಾದಿ[1] ಚತುಷ್ಕೋಟಿವರ್ಜಿತತ್ವಾತ್ ದುರ್ವಿಜ್ಞೇಯಮ್ ಇತ್ಯರ್ಥಃ । ಅತ ಏವ ಅತಿಗಮ್ಭೀರಂ ದುಷ್ಪ್ರವೇಶಂ ಮಹಾಸಮುದ್ರವತ್ ಅಕೃತಪ್ರಜ್ಞೈಃ । ಅಜಂ ಸಾಮ್ಯಂ ವಿಶಾರದಮ್ । ಈದೃಕ್ಪದಮ್ ಅನಾನಾತ್ವಂ ನಾನಾತ್ವವರ್ಜಿತಂ ಬುದ್ಧ್ವಾ ಅವಗಮ್ಯ ತದ್ಭೂತಾಃ ಸನ್ತಃ ನಮಸ್ಕುರ್ಮಃ ತಸ್ಮೈ ಪದಾಯ । ಅವ್ಯವಹಾರ್ಯಮಪಿ ವ್ಯವಹಾರಗೋಚರತಾಮ್[2] ಆಪಾದ್ಯ ಯಥಾಬಲಂ ಯಥಾಶಕ್ತಿ ಇತ್ಯರ್ಥಃ ॥

(ಭಾಷ್ಯಾರ್ಥ)

ದುರ್ದರ್ಶವಾದ: ಇದನ್ನು ಕಾಣುವದು ಕಷ್ಟದಿಂದ; ಆದ್ದರಿಂದ (ಇದು) ದುರ್ದರ್ಶವು. ಇದೆ, ಇಲ್ಲ ಮುಂತಾದ ನಾಲ್ಕುಕೋಟಿಗಳೂ ಇಲ್ಲದ್ದಾದ್ದರಿಂದ ಅರಿಯುವದಕ್ಕೆ ಕಷ್ಟವಾದದ್ದು ಎಂದರ್ಥ. ಆದ್ದರಿಂದಲೇ ಅತಿಗಂಭೀರವಾದ: (ಸರಿಯಾದ) ಪ್ರಜ್ಞೆಯನ್ನು ಮಾಡಿಕೊಳ್ಳದೆ ಇರುವವರಿಗೆ ದೊಡ್ಡಕಡಲಿನಂತೆ ಹೋಗುವದಕ್ಕೆ ಆಗದೆ ಇರುವಂಥದ್ದು. ಅಜವೂ ಸಾಮ್ಯವೂ ವಿಶಾರದವೂ ಆದದ್ದು[3]. ಇಂಥ ಅನಾನಾತ್ವವಾದ ನಾನಾತ್ವವಿಲ್ಲದ ಪದವನ್ನು ಅರಿತುಕೊಂಡು ನಿಶ್ಚಯಿಸಿಕೊಂಡು ಅದರ ಸ್ವರೂಪವನ್ನೇ ಹೊಂದಿದವರಾಗಿ[4] ಆ ಪದವನ್ನು ನಮಸ್ಕ

---

1. " ಅಸ್ತಿ ನಾಸ್ತಿ " ಎಂಬ ಅಚ್ಚಿನ ಪಾಠಕ್ಕಿಂತ ಇದು ಉತ್ತಮ.

2. " ವ್ಯವಹಾರಗೋಚರಮ್ " ಅ॥

3. ೪–೯೩ ರಲ್ಲಿಯೂ ಈ ವಿಶೇಷಣಗಳಿವೆ ; ಆದ್ದರಿಂದ ಮತ್ತೆ ವಿವರಿಸಲಿಲ್ಲ.

4. ಅದ್ವೈತತತ್ತ್ವವನ್ನು ಅರಿತಾಗ ಅದೇ ನಾವಾಗಿರುವೆವು.

ರಿಸುತ್ತೇವೆ. ಅವ್ಯವಹಾರ್ಯವಾದರೂ ವ್ಯವಹಾರಕ್ಕೆ ವಿಷಯವಾಗಿ ಮಾಡಿಕೊಂಡು[1] ಬಲವಿದ್ದಷ್ಟುಮಟ್ಟಿಗೆ ಶಕ್ತಿಯಿದ್ದಷ್ಟುಮಟ್ಟಿಗೆ (ನಮಸ್ಕರಿಸುತ್ತೇವೆ) ಎಂದರ್ಥ.

## ಭಾಷ್ಯಕಾರರ ಮಂಗಲ.

ಅಜಮಪಿ ಜನಿಯೋಗಂ ಪ್ರಾಪದೈಶ್ವರ್ಯಯೋಗಾ-
ದಗತಿ ಚ ಗತಿಮತ್ತಾಂ ಪ್ರಾಪದೇಕಂ ಹ್ಯನೇಕಮ್ |
ವಿವಿಧವಿಷಯಧರ್ಮಗ್ರಾಹಿಮುಗ್ಧೇಕ್ಷಣಾನಾಂ
ಪ್ರಣತಭಯವಿಹನ್ತೃ ಬ್ರಹ್ಮ ಯತ್ತನ್ನತೋಽಸ್ಮಿ ॥ ೧ ॥

೧. ಬಗೆಬಗೆಯ ವಿಷಯಗಳ ಧರ್ಮವನ್ನು ಗ್ರಹಿಸುವದರಿಂದ ಮೋಹಗೊಂಡಿರುವ ನೋಟವುಳ್ಳವರಿಗೆ ಯಾವ ಬ್ರಹ್ಮವು (ತಾನು ನಿಜವಾಗಿ) ಅಜವಾಗಿದ್ದರೂ ಐಶ್ವರ್ಯಯೋಗದಿಂದ[2] ಹೆಚ್ಚಿನ ಸಂಬಂಧವನ್ನು ಪಡೆದಿರುವದೋ, (ತನ್ನಲ್ಲಿ) ಗಮನವಿಲ್ಲದ್ದಾದರೂ ಗತಿಯುಳ್ಳದ್ದಾಗಿರುವದೋ, (ತಾನು) ಒಂದೇ (ಆಗಿದ್ದರೂ) ಅನೇಕವಾಗಿರುವದೋ, ನಮಸ್ಕರಿಸಿದವರ ಅಂಜಿಕೆಯನ್ನು[3] ನಾಶಗೊಳಿಸುವದಾಗಿರುವದೋ ಅದನ್ನು ನಮಸ್ಕರಿಸುವೆನು.

ಪ್ರಜ್ಞಾವೈಶಾಖವೇಧಕ್ಷುಭಿತಜಲನಿಧೇರ್ವೇದನಾಮ್ನೋಽನ್ತರಸ್ಥಂ
ಭೂತಾನ್ಯಾಲೋಕ್ಯ ಮಗ್ನಾನ್ಯವಿರತಜನನಗ್ರಾಹಘೋರೇ ಸಮುದ್ರೇ |
ಕಾರುಣ್ಯಾದುದ್ಧಧಾರಾಮೃತಮಿದಮಮರೈರ್ದುರ್ಲಭಂ ಭೂತಹೇತೋ
ರ್ಯಸ್ತಂ ಪೂಜ್ಯಾಭಿಪೂಜ್ಯಂ ಪರಮಗುರುಮಮುಂ ಪಾದಪಾತೈರ್ನತೋಽಸ್ಮಿ ॥ ೨ ॥

೨. ಎಡೆಬಿಡದೆ ಬರುವ ಜನ್ಮಗಳೆಂಬ ಮೊಸಳೆಗಳಿಂದ ಭಯಂಕರವಾಗಿರುವ ಸಮುದ್ರದಲ್ಲಿ ಮುಳುಗಿರುವ ಪ್ರಾಣಿಗಳನ್ನು ನೋಡಿ ಯಾವಾತನು ಕರುಣೆಯಿಂದ, ತನ್ನ ಪ್ರಜ್ಞೆಯೆಂಬ ಕಡೆಗೋಲಿನ ಕಡೆತದಿಂದ[4] ಗರಬಾಡಿದ ವೇದವೆಂಬ ಸಾಗರದ ಒಳಗಡೆಯಲ್ಲಿ ದೇವತೆಗಳಿಗೂ ದುರ್ಲಭವಾಗಿದ್ದ ಈ ಅಮೃತವನ್ನು[5] ಪ್ರಾಣಿಗಳಿಗಾಗಿ

---

1. ನಿಜವಾಗಿ ತತ್ತ್ವವು ನಮಸ್ಕಾರಾದಿವ್ಯವಹಾರಕ್ಕೂ ಹೊರಚಾಗಿರುವದರಿಂದ ವಿಷಯವೆಂದು ಕಲ್ಪಿಸಿಕೊಂಡೇ ನಮಸ್ಕರಿಸುತ್ತೇವೆ ಎಂದರ್ಥ.

2. ಅಚಿಂತ್ಯಶಕ್ತಿಯಿಂದ.

3. ದ್ವೈತರೂಪವಾದ ಸಂಸಾರದ ಅಂಜಿಕೆಯನ್ನು.

4. ವಿಚಾರದಿಂದ

5. ಮೋಕ್ಷಕಾರಣವಾದ ಈ ಅಜಾತಬ್ರಹ್ಮವಾದವನ್ನು.

ಎತ್ತಿಕೊಟ್ಟನೋ, ಪೂಜ್ಯರಿಗೂ ಪೂಜ್ಯನಾಗಿರುವ ಆ ಪರಮಗುರುವನ್ನು[1] ಕಾಲುಗಳ ಮೇಲೆ ಬಾರಿಬಾರಿಗೂ ಬಿದ್ದು ನಮಸ್ಕರಿಸುವೆನು.

ಯತ್ಪ್ರಜ್ಞಾಲೋಕಭಾಸಾ ಪ್ರತಿಹತಿಮಗಮತ್ ಸ್ವಾನ್ತಮೋಹಾನ್ಧಕಾರೋ
ಮಜ್ಜೋನ್ಮಜ್ಜ ಘೋರೇ ಹ್ಯಸಕೃದುಪಜನೋದನ್ವತಿ ತ್ರಾಸನೇ ಮೇ ।
ಯತ್ಪಾದಾವಾಶ್ರಿತಾನಾಂ ಶ್ರುತಿಶಮವಿನಯಪ್ರಾಪ್ತಿರಗ್ರ್ಯಾ ಹ್ಯಮೋಘಾ
ತತ್ಪಾದೌ ಪಾವನೀಯೌ ಭವಭಯವಿನುದೌ ಸರ್ವಭಾವೈರ್ನಮಸ್ಯೇ ॥ ೩ ॥

೩. ಅನೇಕಾವೃತ್ತಿ ಹುಟ್ಟುವದೆಂಬ ಭಯಂಕರವಾದ ಕಷ್ಟದಾಯಕವಾದ ಸಮುದ್ರದಲ್ಲಿ ಮುಳುಗುತ್ತಲೂ ಏಳುತ್ತಲೂ ಇದ್ದ ನನ್ನ ಹೃದಯದ ಮೋಹವೆಂಬ ಕತ್ತಲೆಯು ಯಾವನ ಪ್ರಜ್ಞೆಯೆಂಬ ಬೆಳಕಿನ ಹೊಳಪಿನಿಂದ ನಾಶವನ್ನು ಹೊಂದಿತೋ ಯಾರ ಪಾದಗಳನ್ನು ಆಶ್ರಯಿಸಿರುವವರಿಗೆ ಬಹುಮುಖ್ಯವೂ ಅಮೂಲ್ಯವೂ ಆಗಿರುವ ಶ್ರುತ್ಯುಕ್ತಶಮವೂ ವಿನಯವೂ ದೊರೆಯುವವೋ, ಸಂಸಾರದ ಭಯವನ್ನು ತೊಲಗಿಸುವ ಆ (ಗುರುಗಳ[2]) ಪವಿತ್ರವಾದ ಪಾದಗಳನ್ನು ಸರ್ವಭಾವಗಳಿಂದಲೂ[3] ನಮಸ್ಕರಿಸುವೆನು.

ಇತಿ ಮಾಣ್ಡೂಕ್ಯೋಪನಿಷತ್ಕಾರಿಕಾಭಾಷ್ಯಂ ಸಂಪೂರ್ಣಮ್
ಓಂ ತತ್ ಸತ್



1. ಗುರುಗಳ ಗುರುಗಳಾದ ಶ್ರೀಗೌಡಪಾದರನ್ನು.

2. ಶ್ರೀಗೋವಿಂದಭಗವತ್ಪಾದರ.

3. ವಾಙ್ಮನಃಕಾಯಗಳಿಂದ.

# ಮಾಂಡೂಕ್ಯಕಾರಿಕೆಯ ಸಾರ

## ಆಗಮಪ್ರಕರಣ

**ಕಾ. ೧-೫.** ಎಚ್ಚರದವಸ್ಥೆಯಲ್ಲಿರುವ ಹೊರ ಅರಿವಿನ ಆತ್ಮನಿಗೆ ವಿಶ್ವನೆಂದು ಹೆಸರು; ಕನಸಿನಲ್ಲಿ ಒಳಅರಿವಿನ ಆತ್ಮನಿಗೆ ತೈಜಸನೆಂದು ಹೆಸರು;- ತನಿನಿದ್ರೆಯಲ್ಲಿ ಬರಿಯ ಅರಿವಿನ ಗಟ್ಟಿಯಾಗಿರುವ ಆತ್ಮನಿಗೆ ಪ್ರಾಜ್ಞನೆಂದು ಹೆಸರು. ಒಬ್ಬ ಆತ್ಮನೇ ಹೀಗೆ ಅವಸ್ಥೆಗಳ ಉಪಾಧಿಯಿಂದ ಮೂರು ಬಗೆಯಾಗಿ ತೋರುತ್ತಿರುವನು. ಇಂದ್ರಿಯಗಳ ಮೂಲಕ ಅರಿಯುವ ವಿಶ್ವನು, ಮನಸ್ಸಿನ ಮೂಲಕ ನೆನಪಿಗೆ ತಂದುಕೊಳ್ಳುವ ತೈಜಸನು, ಈ ಎರಡು ಬಗೆಯ ಅನುಭವವೂ ಇಲ್ಲದ ಪ್ರಾಜ್ಞನು- ಎಂದು ಮೂರು ಬಗೆಯಲ್ಲಿಯೂ ಆತ್ಮನು ಎಚ್ಚರದಲ್ಲಿಯೇ ತೋರಿಬರುತ್ತಿರುವನು. ಸ್ಥೂಲವಾದ ವಿಷಯಗಳ ಭೋಗವು ವಿಶ್ವನಿಗೆ, ಸೂಕ್ಷ್ಮವಾದ ವಿಷಯಗಳ ಭೋಗವು ತೈಜಸನಿಗೆ, ವಿಷಯಭೋಗದ ಆಯಾಸವಿಲ್ಲದ ಆನಂದಭೋಗವು ಪ್ರಾಜ್ಞನಿಗೆ-ಹೀಗೆ ಭೋಗಗಳ ಉಪಾಧಿಯಿಂದಲೂ ಆತ್ಮನು ಒಬ್ಬನೇ ಮೂರು ವಿಧವಾಗಿ ತೋರುತ್ತಿರುವನು.

೬-೯. ಸುಷುಪ್ತಿಯ ಆತ್ಮನಾದ ಪ್ರಾಜ್ಞನೇ ಜಗತ್ಸ್ರಷ್ಟೃವಾದ ಪ್ರಾಣನು. ಆ ಪ್ರಾಣನಿಂದಲೇ ಚೇತನಾಚೇತನಾತ್ಮಕವಾದ ಜಗತ್ತೆಲ್ಲವೂ ಹುಟ್ಟುವದು. ಪ್ರಾಣನು ಜಗದ್ರೂಪವಾಗುವ ಸೃಷ್ಟಿಯನ್ನು ವಾದಿಗಳು ಬಗೆಬಗೆಯಾಗಿ ವಿಕಲ್ಪಿಸಿರುತ್ತಾರೆ; ಆದರೆ ಅವಿದ್ಯೆಯೆಂಬ ಸ್ವಭಾವವೊಂದಲ್ಲದೆ ಈ ಸೃಷ್ಟಿಗೆ ಬೇರೆ ಯಾವದೂ ಕಾರಣವಿರುವದಿಲ್ಲ.

೧೦-೧೫. ನಿಜವಾಗಿ ನೋಡಿದರೆ ಆತ್ಮನಲ್ಲಿ ವಿಶ್ವ, ತೈಜಸ, ಪ್ರಾಜ್ಞ-ಎಂಬ ಮೂರು ರೂಪಗಳೂ ಇರುವದಿಲ್ಲ. ಅವನು ಈ ಮೂರು ರೂಪಕ್ಕಿಂತಲೂ ಬೇರೆಯವನಾದ **ತುರೀಯನು,** ನಾಲ್ಕನೆಯವನು, ಅದ್ವಿತೀಯನು. ಪ್ರಾಜ್ಞರೂಪದಲ್ಲಿ ಏನನ್ನೂ ಅರಿಯದ್ದೆಂಬ ಕಾರಣಾಜ್ಞಾನವಿರುತ್ತದೆ; ವಿಶ್ವತೈಜಸರಲ್ಲಿ ಈ ಕಾರಣವೂ ಇದರಿಂದಾಗುವ ತಪ್ಪುತಿಳಿವೆಂಬ ಕಾರ್ಯಾಜ್ಞಾನವೂ ಇರುತ್ತವೆ. ಕಾರಣಾಜ್ಞಾನರೂಪವಾದ ನಿದ್ರೆಯಾಗಲಿ ಕಾರ್ಯಾಜ್ಞಾನರೂಪವಾದ ಕನಸಾಗಲಿ ಇಲ್ಲದೆ ತನ್ನ ಚೈತನ್ಯಸ್ವರೂಪವಾದ ಎಚ್ಚರಿನಲ್ಲಿಯೇ ಇರುವವನು **ತುರೀಯನು.** ಅಜ್ಞಾನವೂ ಅನ್ಯಥಾಜ್ಞಾನವೂ ಆತ್ಮನಿಗೆ ನಿಜವಾಗಿಲ್ಲವೆಂದು ಯಾವನು ಅರಿತುಕೊಳ್ಳುವನೋ ಅವನೇ ನಿಜವಾಗಿ ಆತ್ಮಸ್ವರೂಪವನ್ನು ಅರಿತುಕೊಂಡವನು.

೧೬-೧೮. ಜೀವನಿಗೆ ಅನಾದಿಮಾಯೆಯಿಂದ ಈ ಅಜ್ಞಾನ, ಅನ್ಯಥಾಜ್ಞಾನಗಳೆಂಬ ಕನಸು ಆಗಿರುತ್ತದೆಯೇ ಹೊರತು ಅವನಲ್ಲಿ ಇದು ಪರಮಾರ್ಥವಾಗಿ ಇರುವದಿಲ್ಲ. ಈ ಕನಸಿನಿಂದ ಎಚ್ಚೆತ್ತ ಕೂಡಲೆ ಆತ್ಮತತ್ತ್ವವು ಹುಟ್ಟಿಲ್ಲದ್ದು, ಯಾವ ನಿದ್ರೆಯಾಗಲಿ ಕನಸಾಗಲಿ ಇಲ್ಲದ್ದು, ತನಗೆರಡನೆಯದಿಲ್ಲದ್ದು-ಎಂಬ ಅರಿವು ಆಗುವದು. ಈಗ ಅವಸ್ಥೆಗಳು, ವಿಶ್ವತೈಜಸಾದಿರೂಪಗಳು-ಎಂಬ ಪ್ರಪಂಚವಿದೆಯೆಂದೂ ಜ್ಞಾನದಿಂದ ಅದು ಹೋಗುವ

ದೆಂದೂ ಅಭಿಪ್ರಾಯವಲ್ಲ; ಅದು ಪರಮಾರ್ಥವಾಗಿಲ್ಲವೇ ಇಲ್ಲ, ಆತ್ಮನು ಯಾವಾಗಲೂ ನಿಜವಾಗಿ ಅದ್ವೈತನೇ ಆಗಿರುತ್ತಾನೆ-ಎಂದು ಅರಿತುಕೊಳ್ಳುವದೇ ಅದ್ವೈತಪ್ರಾಪ್ತಿಯು. ಈ ಜ್ಞಾನವನ್ನು ತಿಳಿಸುವ ಗುರು, ಅದನ್ನು ಅರಿಯುವ ಶಿಷ್ಯ-ಎಂಬ ಭೇದವೂ ಪರಮಾರ್ಥವಲ್ಲ. ಅವಿದ್ಯಕವಾದ ಈ ಭೇದವು ಪರಮಾರ್ಥವಾಗಿರುವಂತೆ ಜ್ಞಾನವಾಗುವವರೆಗೆ ತೋರುತ್ತಿರುತ್ತದೆ. ಜ್ಞಾನವುಂಟಾದ ಬಳಿಕ ಈ ಭೇದವೂ ಮಾಯಾಮಾತ್ರವೇ ಎಂಬ ಅರಿವು ಉಂಟಾಗಿಬಿಡುತ್ತದೆ.

೧೯-೨೩. ಆತ್ಮನಲ್ಲಿ ವಾಚ್ಯವಾಚಕರೂಪವಾದ ಭೇದವೂ ಇರುವದಿಲ್ಲ. ವಾಚ್ಯದೃಷ್ಟಿಯಿಂದ ಆತ್ಮನು ಬ್ರಹ್ಮವು; ವಾಚಕದೃಷ್ಟಿಯಿಂದ ನೋಡಿದರೆ ಆತ್ಮನು ಓಂಕಾರವು, ವಾಚ್ಯವಾಚಕವಿಭಾಗರಹಿತನಾದ ತುರೀಯಾತ್ಮನನ್ನು ಓಂಕಾರವೆಂದಾಗಲಿ ಬ್ರಹ್ಮವೆಂದಾಗಲಿ ಕರೆಯುವದಕ್ಕಿಲ್ಲ. ಬ್ರಹ್ಮರೂಪವಾದ ಆತ್ಮನಲ್ಲಿ ವಿಶ್ವ, ತೈಜಸ, ಪ್ರಾಜ್ಞ-ಎಂಬ ಪಾದಗಳು ಕಲ್ಪಿತವಾಗಿರುವಂತೆ ಓಂಕಾರರೂಪನಾದ ಆತ್ಮನಲ್ಲಿ ಅಕಾರ, ಉಕಾರ, ಮಕಾರ-ಎಂಬ ಪಾದಪಾಚಕಗಳಾದ ಮಾತ್ರೆಗಳು ಕಲ್ಪಿತವಾಗಿರುವವು. ಕಲ್ಪಿತಪಾದಗಳಿಗಿಂತ ವಿಲಕ್ಷಣನಾದ ತುರೀಯಾತ್ಮನೇ ಕಲ್ಪಿತಮಾತ್ರೆಗಳಿಗಿಂತ ವಿಲಕ್ಷಣವಾದ ಓಂಕಾರವು. ತುರೀಯತತ್ತ್ವವು ಪಾದವೂ ಅಲ್ಲ, ಮಾತ್ರೆಯೂ ಅಲ್ಲ.

೨೪-೨೯. ಇಂಥ ವಾಚ್ಯವಾಚಕಭಾವವಿಲಕ್ಷಣವಾದ ಓಂಕಾರವೇ ಪ್ರಣವವು. ಇವನ್ನು ಪಾದಗಳು, ಮಾತ್ರೆಗಳು-ಎಂಬ ಕಲ್ಪಿತೋಪಾಯದಿಂದ ತಿಳಿದುಕೊಂಡು ಅದರಲ್ಲಿಯೇ ಚಿತ್ತವನ್ನು ಇಟ್ಟುಕೊಂಡವರಿಗೆ ಅಂಜಿಕೆಯಿಲ್ಲ. ಪರಬ್ರಹ್ಮವೆಂದೂ ಅಪರಬ್ರಹ್ಮವೆಂದೂ ಶ್ರುತಿಹೇಳುವದು ಈ ಪ್ರಣವವನ್ನೇ. ಇದು ಆದಿಮಧ್ಯಾಂತರಹಿತವಾದದ್ದು, ಎಲ್ಲಕ್ಕೂ ಆದಿಮಧ್ಯಾಂತವು ಇದೇ. ಇದೇ ಜೀವರ ಹೃದಯದಲ್ಲಿರುವ ಈಶ್ವರನೆಂಬುದು. ಈ ಅಮಾತ್ರವಾದ ಅಪರಿಚ್ಛಿನ್ನವಾದ ಪ್ರಪಂಚೋಪಶಮವಾದ ಓಂಕಾರವನ್ನು ಯಾವನು ಅರಿತಿರುವನೋ ಅವನೇ ಮುನಿಯು.

# ವೈತಥ್ಯಪ್ರಕರಣ

೧-೩. ಕನಸಿನಲ್ಲಿ ಒಳಗೆ ಕಾಣುವ, ಹೊರಗೆ ಕಾಣುವ, ಭಾವಗಳೆಲ್ಲವೂ ಮಿಥ್ಯೆಯಾಗಿರುವವು. ಏಕೆಂದರೆ ಅವು ಸಂಕುಚಿತವಾದ ದೇಹದೊಳಗಡೆಯಲ್ಲಿ ತೋರುತ್ತಿರುವವು; ಅಲ್ಲಿ ನೋಡುವ ದೂರಪ್ರದೇಶಗಳಿಗೆ ಹೋಗುವಷ್ಟು ಕಾಲವು ಅಲ್ಲಿರುವದಿಲ್ಲ, ಎಚ್ಚತ್ತವನು ಅಲ್ಲಿರುವದೂ ಇಲ್ಲ. ಶ್ರುತಿಯಲ್ಲಿಯೂ ಈ ಅನುಭವಸಿದ್ಧವಾದ ವಿಷಯವನ್ನು ಅನುವಾದ ಮಾಡಿಕೊಂಡು ಕನಸಿನಲ್ಲಿ ಆತ್ಮನೊಬ್ಬನೇ ಸ್ವಯಂಜ್ಯೋತಿಯಾಗಿರುವನೆಂದು ಹೇಳಿರುತ್ತದೆ.

೪-೧೦. ಹೀಗೆಯೇ ಎಚ್ಚರದಲ್ಲಿ ತೋರುವ ಭಾವಗಳೂ ಮಿಥ್ಯೆಯೆಂದು ಹೇಳಬೇಕು; ಏಕೆಂದರೆ ಎಚ್ಚರವೂ ಕನಸಿನಂತೆಯೇ ಇದೆ; ಅದರಲ್ಲಿಯೂ ಭಾವಗಳು ಗ್ರಾಹ್ಯಗ್ರಾಹಕರೂಪವಾಗಿರುತ್ತವೆ. ಎಚ್ಚರಕ್ಕೆ ಮೊದಲೂ ಎಚ್ಚರವು ಮುಗಿದಮೇಲೂ ಇಲ್ಲದಿರುವ ಈ ದೃಶ್ಯಗಳು ಎಚ್ಚರದ ಕಾಲದಲ್ಲಿಯೂ ಇಲ್ಲವೆಂಬುದೇ ಯುಕ್ತ. ಎಚ್ಚರದಲ್ಲಿರುವ ವಸ್ತುಗಳಿಗೆ ಪ್ರಯೋಜನವುಂಟೆಂಬುದು ಕನಸಿನ ವಸ್ತುಗಳಂತೆಯೇ; ಏಕೆಂದರೆ ಈ

ಸಪ್ರಯೋಜನತ್ವವು ಆಯಾ ಅವಸ್ಥೆಯಲ್ಲಿ ಮಾತ್ರ ಇದ್ದು ಮತ್ತೊಂದು ಅವಸ್ಥೆಯಲ್ಲಿ ಇಲ್ಲ ವಾಗುತ್ತದೆ. ಕನಸಿನಲ್ಲಿ ಕೆಲವು ಹೊಸದೃಶ್ಯಗಳೂ ಕಾಣಿಸುತ್ತವೆ ಎಂಬುದು ನಿಜ; ಆದರೆ ಅವೂ ಸ್ಥಾನಿಧರ್ಮಗಳೇ, ಆ ಅವಸ್ಥೆಯಲ್ಲಿರುವವನಿಗೆ ಮಾತ್ರ ಕಾಣತಕ್ಕವೇ ಹೊರತು ಸ್ವತಃ ಸಿದ್ಧವಾಗಿರುವ ಸತ್ಯವಸ್ತುಗಳಲ್ಲ. ಮನಸ್ಸಿನಲ್ಲಿ ಮಾತ್ರ ಕಲ್ಪಿಸಿಕೊಂಡದ್ದು ಅಸತ್ತಾಗಿಯೂ ಹೊರಗೆ ಕಂಡದ್ದು ಸತ್ತಾಗಿಯೂ ತೋರುವದೆಂಬುದು ಎರಡು ಅವಸ್ಥೆಗಳಿಗೂ ಸಮಾನ ವಾಗಿರುತ್ತದೆ. ಆದ್ದರಿಂದ ಕನಸಿನ ತೋರಿಕೆಗಳಂತೆ ಎಚ್ಚರದ ತೋರಿಕೆಗಳೂ ಹುಸಿಯೇ ಎನ್ನುವದಕ್ಕೆ ಯಾವ ಅಡ್ಡಿಯೂ ಇಲ್ಲ.

೧೧–೧೫. ಈ ಎರಡು ಅವಸ್ಥೆಗಳಲ್ಲಿಯೂ ಆತ್ಮನೊಬ್ಬನೇ ಪರಮಾರ್ಥವಾಗಿರು ವನು. ಅವುಗಳನ್ನು ಅದ್ವಿತೀಯನಾದ ಅವನೊಬ್ಬನೇ ತನ್ನಲ್ಲಿ ಕಲ್ಪಿಸಿಕೊಂಡು ಕಾಣುತ್ತಿರು ವನು–ಎಂಬುದು ಉಪನಿಷತ್ಸಿದ್ಧಾಂತವು. ತನ್ನೊಳಗೆ ಕೆಲವು ಭಾವಗಳನ್ನೂ ಹೊರಗೆ ಮತ್ತೆ ಕೆಲವು ಭಾವಗಳನ್ನೂ ವಿಲಕ್ಷಣಪ್ರಕಾರದಿಂದ ಕಲ್ಪಿಸಿರುವದೂ ಈ ಎರಡವಸ್ಥೆಗಳಿಗೆ ಸಮಾನವಾಗಿರುತ್ತದೆ. ಒಳಗಿರುವ ಭಾವಗಳು ಆಯಾ ಪ್ರತ್ಯಯವಿರುವವರೆಗೆ ಇರುವಂತೆ ಯೂ, ಹೊರಗಿನ ಭಾವಗಳು ಸ್ಥಿರವಾಗಿ ಅನ್ಯೋನ್ಯಪರಿಚ್ಛೇದ್ಯಗಳಾಗಿರುವಂತೆಯೂ ಕಾಣಿಸುವದರಲ್ಲಾಗಲಿ, ಒಳಗಿನ ಭಾವಗಳು ಅವ್ಯಕ್ತವಾಗಿಯೂ ಹೊರಗಿನವು ಸ್ಫುಟವಾ ಗಿಯೂ ತೋರುವದರಲ್ಲಾಗಲಿ ಈ ಎರಡು ಅವಸ್ಥೆಗಳ ದೃಶ್ಯಗಳಿಗೆ ಯಾವ ತಾರತಮ್ಯವೂ ಕಾಣಿಸುವದಿಲ್ಲ.

೧೬. ಈ ಕಲ್ಪನೆಗೆ "ನಾನು ಜೀವನು, ಕರ್ತೃಭೋಕ್ತೃಸ್ವರೂಪನು" ಎಂದು ಕಲ್ಪಿಸಿರುವದೇ ಮೂಲವು. ಹಿಂದಿನ ಅನುಭವಕ್ಕೆ ತಕ್ಕಂತೆ ಈಗಿನ ಸ್ಮೃತಿಯೂ ಮತ್ತೆ ಅನುಭವಸ್ಮೃತಿಗಳೂ ಸಂತತವಾಗಿ ಈ ಕಲ್ಪನೆಯಿಂದಲೇ ಆಗಿರುವವು.

೧೭–೧೮. ಕತ್ತಲೆಯಲ್ಲಿ ಇದು ಹಗ್ಗವೆಂದು ಗೊತ್ತುಮಾಡಿಕೊಳ್ಳದೆ ಇರುವಾಗ ಅದು ಹಾವು, ನೀರಿನ ಕೋಡಿ–ಮುಂತಾದ ರೂಪಗಳಿಂದ ತೋರುವಂತೆ ಅಜ್ಞಾತನಾದ ಆತ್ಮನಲ್ಲಿಯೂ ಅನೇಕ ಭಾವಗಳು ಕಲ್ಪಿತವಾಗಿರುತ್ತವೆ. ಇದು ಹಗ್ಗವೇ ಎಂದು ನಿಶ್ಚಯ ವಾಗಲು ಎಲ್ಲಾ ವಿಕಲ್ಪಗಳೂ ತೊಲಗುವಂತೆಯೂ ಹಗ್ಗವೊಂದೇ ಉಳಿಯುವಂತೆಯೂ ಆತ್ಮನನ್ನು ಅರಿತುಕೊಂಡಾಗ ಎಲ್ಲಾ ವಿಕಲ್ಪಗಳೂ ತೊಲಗಿ ಆತ್ಮನೊಬ್ಬನೇ ಪರಮಾರ್ಥ ವಾಗಿ ಉಳಿದುಕೊಳ್ಳುವನು.

೧೯. ಈ ಆತ್ಮನಲ್ಲಿ ಪ್ರಾಣನೇ ಮುಂತಾದ ಅನಂತಭಾವಗಳು ಕಲ್ಪಿತವಾಗಿರುವವು. ಮಾಯೆಯಿಂದ ಕಲ್ಪಿತವಾದ ವಸ್ತುಗಳು ನೋಟಕರನ್ನು ಮರುಳುಗೊಳಿಸುವಂತೆ ಈ ಆತ್ಮ ಮಾಯೆಯು ಆತ್ಮನನ್ನೇ ಮರುಳುಗೊಳಿಸಿದಂತೆ ಆಗಿರುತ್ತದೆ.

೨೦–೩೦. ಪ್ರಾಣನೆಂಬ ಕಾರಣಾತ್ಮನಾದ ಪ್ರಾಜ್ಞನು, ಅವನ ಕಾರ್ಯಗಳಾದ ಭೂತಗಳು, ಗುಣಗಳು, ತತ್ತ್ವಗಳು, ಪಾದಗಳು, ವಿಷಯಗಳು, ಲೋಕಗಳು, ದೇವತೆ ಗಳು–ಮುಂತಾಗಿ ಈ ಕಲ್ಪಿತಭೇದಗಳು ಲೆಕ್ಕವಿಲ್ಲದಷ್ಟಿರುತ್ತವೆ. ಅವೆಲ್ಲವೂ ಈ ಆತ್ಮನಲ್ಲಿಯೇ ಕಲ್ಪಿತವಾಗಿರುತ್ತವೆ. ಆಯಾ ಕಲ್ಪನೆಯೇ ಪರಮಾರ್ಥವೆಂದು ಆಯಾ ವಾದಿಗಳು ಪಟ್ಟು ಹಿಡಿದಿರುವರು; ಆಯಾ ಸಿದ್ಧಾಂತದ ಆಚಾರ್ಯರ ಹೇಳಿಕೆಯನ್ನು ಅವರ ಅನುಯಾಯಿ

ಗಳು ನಂಬಿರುವದರಿಂದ ತತ್ತ್ವವನ್ನು ಸರಿಯಾಗಿ ತಿಳಿಯದಂತೆ ಅಡ್ಡಿಯಾಗಿರುತ್ತದೆ. ಆತ್ಮನು ಈ ಯಾವ ಕಲ್ಪನೆಯೂ ಇಲ್ಲದವನೆಂದೂ ಅವನಲ್ಲಿ ಇವೆಲ್ಲ ತಪ್ಪುತಿಳಿವಳಿಕೆಯಿಂದ ಕಲ್ಪಿತವಾಗಿರುವವೆಂದೂ ಯಾವನು ಅರಿತಿರುವನೋ ಅವನೇ ವೇದವಾಕ್ಯಗಳಿಗೆ ಯಾವ ಶಂಕೆಯೂ ಇಲ್ಲದೆ ಸರಿಯಾದ ತಾತ್ಪರ್ಯವನ್ನು ಗೊತ್ತುಪಡಿಸಬಲ್ಲನು.

೩೧–೩೨. ಈ ಇಡಿಯ ಜಗತ್ತು ಕನಸಿನಂತೆ, ಮಾಯೆಯಂತೆ, ಗಂಧರ್ವನಗರದಂತೆ–ಎಂದು ಉಪನಿಷತ್ತುಗಳಲ್ಲಿ ಹೇಳಿದೆ ಎಂಬುದನ್ನು ಪಂಡಿತರೇ ಬಲ್ಲರು. ಸೃಷ್ಟಿಯಿಲ್ಲ, ಪ್ರಲಯವಿಲ್ಲ, ಬದ್ಧನಿಲ್ಲ, ಸಾಧಕನಿಲ್ಲ, ಮುಮುಕ್ಷುವಿಲ್ಲ, ಮುಕ್ತನಿಲ್ಲ–ಎಂಬಿದೇ ಪರಮಾರ್ಥವು.

೩೩-೩೪. ಈ ಆತ್ಮನು ತಾನು ಇದ್ದಂತೆಯೇ ಇರುತ್ತಿರುವನಾದರೂ ಅತ್ಯಂತವಾಗಿ ಇಲ್ಲದಿರುವ ಈ ಭಾವಗಳ ರೂಪದಿಂದಲೂ ಅದ್ವಯನೆಂಬ ತನ್ನ ರೂಪದಿಂದಲೂ ಕಲ್ಪಿತನಾಗಿರುವನು. ಭಾವಗಳಿಗೂ ಅದ್ವಯರೂಪವೇ ಆಧಾರವಾಗಿರುವದರಿಂದ ಅದ್ವಯಭಾವವೇ ಮಂಗಳಕರವಾದದ್ದು. ರಾಗಾದಿದೋಷಗಳಿಲ್ಲದ ವೇದಪಾರಗರಾದ ಮುನಿಗಳೇ ಈ ಪ್ರಪಂಚೋಪಶಮನಾದ ಅದ್ವಯಾತ್ಮನನ್ನು ಬಲ್ಲರು.

೩೫–೩೮. ಹೀಗೆಂದು ತಿಳಿದ ವಿವೇಕಿಯು ಅದ್ವೈತದಲ್ಲಿಯೇ ಚಿತ್ತವನ್ನಿಡಬೇಕು. ಅದನ್ನರಿತುಕೊಂಡು ಏನೂ ಅರಿಯದವನಂತೆ ವ್ಯವಹಾರವನ್ನು ಮಾಡಿಕೊಂಡಿರಬೇಕು. ಸ್ತುತಿನಮಸ್ಕಾರಗಳಾಗಲಿ ಮತ್ತೆ ಯಾವ ಕರ್ಮಗಳಾಗಲಿ ಇಲ್ಲದ ಪರಮಹಂಸಪಾರಿವ್ರಾಜ್ಯವನ್ನು ಹೊಂದಿ ಅನಿಕೇತನಾಗಿ ಯದೃಚ್ಛಾಲಾಭಸಂತುಷ್ಟನಾಗಿ ಎಲ್ಲೆಲ್ಲಿಯೂ ಅದ್ವೈತಾತ್ಮತತ್ತ್ವವೊಂದನ್ನೇ ಕಾಣುತ್ತಾ ಆ ತತ್ತ್ವವನ್ನು ಬಿಟ್ಟು ಒಂದಿಷ್ಟೂ ಕದಲದೆ ಇರಬೇಕು.

## ಅದ್ವೈತಪ್ರಕರಣ

೧–೨. ಉಪಾಸನೆಯೇ ಪರಮಪುರುಷಾರ್ಥಕ್ಕೆ ಮುಖ್ಯಸಾಧನವೆಂದು ಯಾವನು ನಂಬಿರುವನೋ ಅವನು "ಸೃಷ್ಟಿಗೆ ಪೂರ್ವದಲ್ಲಿ ಅಜಾತಬ್ರಹ್ಮವಿದ್ದಿತು, ಈಗ ನಾನು ಅದರಿಂದ ಹುಟ್ಟಿರುವೆನು, ಮುಂದೆ ಉಪಾಸನೆಯಿಂದ ಅದರ ಸಾಯುಜ್ಯವನ್ನು ಪಡೆಯುವೆನು"–ಎಂದು ಜಾತಬ್ರಹ್ಮದಲ್ಲಿ ನಿಂತಿರುವದರಿಂದ ಕೃಪಣನು ಎಂದು ಬ್ರಹ್ಮಜ್ಞಾನಿಗಳು ಹೇಳುವರು. ಆದ್ದರಿಂದ ಅಜಾತವಾದ ಸಮವಾಗಿರುವ ತತ್ತ್ವವನ್ನು ತಿಳಿಸುವೆನು.

೩–೧೦. ಆಕಾಶವು ಘಟಾಕಾಶಾದಿಗಳ ರೂಪದಿಂದಲೂ ಘಟಾದಿಗಳ ರೂಪದಿಂದಲೂ ಹುಟ್ಟುವಂತೆ ಹೇಗೆ ತೋರುವದೋ ಹಾಗೆ ಆತ್ಮನು ಜೀವರುಗಳ ರೂಪದಿಂದಲೂ ಕಾರ್ಯಕರಣಸಂಘಾತಗಳ ರೂಪದಿಂದಲೂ ಹುಟ್ಟಿರುವ ಹಾಗೆ ತೋರುತ್ತಿರುವನು. ಘಟವೇ ಮುಂತಾದವುಗಳು ನಷ್ಟವಾದರೆ ಘಟಾಕಾಶಾದಿಗಳು ಆಕಾಶದಲ್ಲಿ ಸೇರಿಹೋಗುವಂತೆ ಜೀವರುಗಳೂ ಆತ್ಮನಲ್ಲಿ ಲಯವಾಗುವರು. ಒಂದು ಘಟಾಕಾಶದಲ್ಲಿರುವಂತೆ ತೋರುವ ದೋಷವು ಹೇಗೆ ಮಿಕ್ಕ ಘಟಾಕಾಶಗಳಿಗೆ ಅಂಟದೆ ಇರುವದೋ ಹಾಗೆಯೇ ಒಬ್ಬ ಜೀವನಿಗೆ ಆಗುವ ಸುಖಾದಿಗಳು ಮಿಕ್ಕವರಿಗೆ ಅಂಟದೆ ಇರುವವು. ಘಟಾಕಾಶವೇ ಮುಂತಾದವುಗಳ ನಾಮ, ರೂಪ, ಕರ್ಮ–ಇವುಗಳು ಬೇರೆಬೇರೆಯಾಗಿರುತ್ತಿದ್ದರೂ

ಕಾಶದಲ್ಲಿ ಹೇಗೆ ಯಾವ ಭೇದವೂ ಇರುವದಿಲ್ಲವೋ, ಹಾಗೆಯೇ ಜೀವರುಗಳ ವಿಷಯಕ್ಕೂ ಳಿಯಬೇಕು; ಆತ್ಮನಲ್ಲಿ ಯಾವ ಭೇದವೂ ಪರಮಾರ್ಥವಾಗಿರುವದೇ ಇಲ್ಲ. ಸರಿಯಾಗಿ ೋಡಿದರೆ ಘಟಾಕಾಶವು ಆಕಾಶದ ಕಾರ್ಯವೂ ಅಲ್ಲ, ಅಂಶವೂ ಅಲ್ಲ; ಇದರಂತೆ ಜೀವನು ತ್ಮನ ಕಾರ್ಯವೂ ಅಲ್ಲ, ಅಂಶವೂ ಅಲ್ಲ. ಆಕಾಶಕ್ಕೆ ನಿಜವಾಗಿ ಧೂಳು, ಹೊಗೆ-ುಂತಾದವು ಎಂದಿಗೂ ಮಸಕನ್ನುಂಟುಮಾಡಿರುವದಿಲ್ಲ; ಇದರಂತೆ ಆತ್ಮನಿಗೂ ಸುಖ ುಃಖಾದಿಗಳು ಮಸಕನ್ನುಂಟುಮಾಡಿರುವದಿಲ್ಲ. ಹುಟ್ಟುವದು, ಸಾಯುವದು, ಹೋಗು ದು, ಬರುವದು, ಬೇರೆಬೇರೆಯ ಶರೀರಗಳಲ್ಲಿರುವದು–ಇವೆಲ್ಲವೂ ಆಕಾಶದಲ್ಲಿ ತೋರುವ ುತ್ಪತ್ತ್ಯಾದಿಧರ್ಮಗಳಂತೆ ಹುಸಿತೋರಿಕೆಗಳೇ ಆಗಿರುತ್ತವೆ. ಘಟಾಕಾಶಾದಿಗಳ ಉಪಾಧಿಯಾಗಿ ುವ ಘಟಾದಿಗಳಂತೆ ಇರುವ ಜೀವರ ಉಪಾಧಿಗಳಾದ ದೇಹಾದಿಗಳು ಕೂಡ ನಿಜವಾಗಿ ುಟ್ಟುವದಿಲ್ಲ; ಅವುಗಳಲ್ಲಿ ಯಾವ ಹೆಚ್ಚುಕಡಿಮೆಯೂ ಇರುವದಿಲ್ಲ. ಏಕೆಂದರೆ ಅವು ನಸಿನ, ಮಾಯೆಯ, ದೇಹಗಳಂತೆ ಹುಸಿತೋರಿಕೆಗಳೇ ಆಗಿರುವವು. ಆದ್ದರಿಂದ ುಪಾಧಿಯಿಂದ ಜೀವರುಗಳಲ್ಲಿ ತಾರತಮ್ಯವಿರುವದೆಂಬುದೂ ಉತ್ಪತ್ತ್ಯಾದಿಧರ್ಮಗಳಿರುವ ೆಂಬುದೂ ಭ್ರಾಂತಿಯೇ.

೧೧–೧೬. ಈ ಅರ್ಥವು ವೇದಾಂತಪ್ರಮಾಣದಿಂದ ಸಿದ್ಧವಾಗಿರುತ್ತದೆ. ಹೇಗೆಂದರೆ, ತೈತ್ತಿರೀಯದಲ್ಲಿ ಅನ್ನರಸಮಯವೇ ಮುಂತಾದ ಪಂಚಕೋಶಗಳನ್ನು ಹೇಳಿ, ಕೊನೆಯಲ್ಲಿ ್ರತಿಪಾದಿಸಿರುವ ಅವುಗಳ ಜೀವನಾದ ಪರಮಾತ್ಮನನ್ನೇ ನಾವು ಇಲ್ಲಿ ಆಕಾಶದೃಷ್ಟಾಂತದಿಂದ ಳಿಸಿರುವೆವು. ಬೃಹದಾರಣ್ಯಕೋಪನಿಷತ್ತಿನ ಮಧುಬ್ರಾಹ್ಮಣದಲ್ಲಿ ಅಧಿದೈವ ಾಗಿಯೂ ಅಧಿಭೂತವಾಗಿಯೂ ಇರುವ ಆತ್ಮನು ಒಬ್ಬನೇ ಎಂದು ಪೃಥಿವಿ, ಶರೀರ-ಮುಂತಾದ ಎರಡೆರಡನ್ನು ತೆಗೆದುಕೊಂಡು ಹೇಳಿರುತ್ತದೆಯಷ್ಟೆ; ಆ ಆತ್ಮನನ್ನೇ ನಾವು ಕಾಶದೃಷ್ಟಾಂತದಿಂದ ತಿಳಿಸಿರುತ್ತೇವೆ. ಅದ್ವೈತವು ಶ್ರುತ್ಯರ್ಥವೆನ್ನುವದಕ್ಕೆ ಒಂದು ಗಮಕ ೇನೆಂದರೆ ಜೀವಾತ್ಮರು ಒಂದೇ ಎಂಬುದನ್ನು ಅಲ್ಲಿ ಹೊಗಳಿದೆ, ನಾನಾತ್ವವನ್ನು ನಿಂದಿಸಿರು ್ತದೆ. ಜೀವಾತ್ಮರುಗಳು ಬೇರೆಬೇರೆ ಎಂದು ಕರ್ಮಕಾಂಡದಲ್ಲಿ ಹೇಳಿರುವದು ಗೌಣವು; ಏಕೆಂದರೆ ಮುಖ್ಯವೃತ್ತಿಯಿಂದ ಐಕ್ಯವನ್ನು ಮುಂದೆ ಹೇಳಿರುತ್ತದೆ. ಮಣ್ಣು, ಕಬ್ಬಿಣ, ಿಡಿಗಳು–ಮುಂತಾದ ದೃಷ್ಟಾಂತಗಳಿಂದ ಶ್ರುತಿಯಲ್ಲಿ ಸೃಷ್ಟಿಯನ್ನು ಹೇಳಿರುವದು ಐಕ್ಯವನ್ನು ತಿಳಿಯಪಡಿಸುವದಕ್ಕೆ ಉಪಾಯವೇ ಹೊರತು ನಿಜವಾಗಿ ದ್ವೈತವಿದೆ ಎಂದು ತಿಳಿಸುವದಕ್ಕಲ್ಲ. ಶ್ರುತಿಗಳಲ್ಲಿ ಕರ್ಮವನ್ನೂ ಉಪಾಸನೆಯನ್ನೂ ಹೇಳಿರುವದು ಮಂದ ಮಧ್ಯಮಾಧಿಕಾರಿಗಳು ಕ್ರಮಕ್ರಮವಾಗಿ ಈ ಐಕ್ಯದೃಷ್ಟಿಯನ್ನು ಸಂಪಾದಿಸಿಕೊಳ್ಳುವದಕೆ ಉಪಾಯವಾಗಿದೆಯೇ ಹೊರತು ದ್ವೈತವೇ ಪರಮಾರ್ಥವೆಂದು ತಿಳಿಸುವದಕ್ಕಲ್ಲ.

೧೭–೨೨. ದ್ವೈತಿಗಳು ತಮ್ಮತಮ್ಮ ಸಿದ್ಧಾಂತಗಳನ್ನು ಪರಮಾರ್ಥವೆಂದು ತೋರಿಸಿ ಕೊಡುವದಕ್ಕಾಗಿ ಒಬ್ಬರಿಗೊಬ್ಬರು ವಿರುದ್ಧವಾಗಿ ವಾದಿಸುತ್ತಿರುವರು. ಆದರೆ ಅದ್ವೈತವು ಅದಕ್ಕೆ ವಿರುದ್ಧವಲ್ಲ. ಏಕೆಂದರೆ ದ್ವೈತವು ಅಪರಮಾರ್ಥವಾಗಿರುತ್ತದೆ, ಅದ್ವೈತವು ಅದರ ಪರಮಾರ್ಥಸ್ವರೂಪವಾಗಿರುತ್ತದೆ. ಭ್ರಾಂತಿದೃಷ್ಟಿಯ ದ್ವೈತಕ್ಕೆ ಪರಮಾರ್ಥದೃಷ್ಟಿಯ ಅದ್ವೈತವು ವಿರುದ್ಧವಾಗಿರಲಾರದು. ದ್ವೈತವು ಭ್ರಾಂತಿದೃಷ್ಟವೇ, ಮಾಯಿಕವೇ; ಹಾಗಿಲ್ಲದೆ ಅದು ಸತ್ಯವೇ ಆಗಿದ್ದರೆ ಅಮೃತಸ್ವಭಾವವಾಗಿರುವ ಪರಮಾರ್ಥವು ಮರ್ತ್ಯವಾಯಿತೆಂದು ವ್ಯಾಹತವಾಗಿ ಹೇಳಿದಂತಾಗುವದು. ಕೆಲವರು ವೇದಾಂತಿಗಳು ಅಜವಾಗಿರುವ ತತ್ತ್ವವೇ

ದ್ವೈತವಾಗಿ ಹುಟ್ಟಿರುವದೆನ್ನುವರು; ಅದರೆ ಅಮೃತವು ಮರ್ತ್ಯವಾಗುವದು ಹೇಗೆ? ಮರ್ತ್ಯವಾದದ್ದು ಮತ್ತೆ ಅಮೃತವಾಗುವದು ಹೇಗೆ? ಸ್ವಭಾವವು ಬೇರೆಯಾದೀತೆ? ಹಾಗೆ ಅಮೃತವು ಮರ್ತ್ಯವಾಗುವದೆಂದರೆ ಅಮೃತವೆಂಬುದು ಕೃತಕವಾಗುವದು, ಸ್ವಾಭಾವಿಕವಾಗಲಾರದು.

೨೩–೨೬. ಸೃಷ್ಟಿಶ್ರುತಿಯು ಮಾಯಿಕಸೃಷ್ಟಿಯನ್ನಾದರೂ ಪರಮಾರ್ಥಸೃಷ್ಟಿಯನ್ನಾದರೂ ಹೇಳಬಹುದು. ಆದರೆ ಮಾಯಿಕಸೃಷ್ಟಿಯೇ ಯುಕ್ತಿಯುಕ್ತವಾಗುತ್ತದೆ. "ನೇಹ ನಾನಾಸ್ತಿ ಕಿಂಚನ", "ಇನ್ದ್ರೋ ಮಾಯಾಭಿಃ ಪುರುರೂಪ ಈಯತೇ", "ಅಜಾಯಮಾನೋ ಬಹುಧಾ ವಿಜಾಯತೇ" ಮುಂತಾದ ಶ್ರುತಿಗಳು ಮಾಯಿಕಸೃಷ್ಟಿಯನ್ನೇ ಹೇಳುತ್ತವೆ-ಎಂಬುದು ಸ್ಪಷ್ಟವು. "ಸಂಭೂತಿಯನ್ನು ಉಪಾಸನೆ ಮಾಡುವವರು ಅಂಧಂತಮಸನ್ನು ಹೊಂದುವರು" ಎಂದು ಅವಿದ್ಯಕಸೃಷ್ಟಿಯನ್ನು ಉಪಾಸನೆಮಾಡುವವರಿಗೆ ಕೆಟ್ಟ ಫಲವಾಗುವದೆಂದು ಶ್ರುತಿಯಲ್ಲಿ ನಿಂದಿಸಿದೆ; "ಈತನನ್ನು ಹುಟ್ಟಿಸುವವರು ಯಾರು?" ಎಂದು ಜ್ಞಾನದಿಂದ ಅರಿತ ಆತ್ಮನನ್ನು ಹುಟ್ಟಿಸುವದಕ್ಕೆ ಕಾರಣವಿಲ್ಲವೆಂದೂ ಶ್ರುತಿಯಲ್ಲಿ ಹೇಳಿರುತ್ತದೆ. ಆದ್ದರಿಂದಲೂ ಸೃಷ್ಟಿ ಪರಮಾರ್ಥವೆಂಬುದಕ್ಕೆ ಶ್ರುತ್ಯಾಧಾರವಿಲ್ಲ. "ಸ ಏಷ ನೇತಿ ನೇತಿ" ಎಂಬ ಶ್ರುತಿಯು ಹಿಂದೆ ಹೇಳಿದ ಉಪಾಯವು ಯಾವದೂ ಪರಮಾರ್ಥವಾಗಿಲ್ಲವೆಂದು ತಿಳಿಸುವದಕ್ಕಾಗಿ ಹಿಂದೆ ಹೇಳಿದ ವಿವರವೆಲ್ಲವನ್ನೂ ಅಲ್ಲಗಳೆಯುತ್ತದೆ. ಆದ್ದರಿಂದ ಶ್ರುತಿಯು ಅಜಾತಬ್ರಹ್ಮವನ್ನೇ ತಿಳಿಸುತ್ತದೆ ಎಂದು ಸಿದ್ಧವಾಗುತ್ತದೆ.

೨೭–೩೧. ಇರುವದರಿಂದ ಹುಟ್ಟುವದೆಂಬುದು, ಅಥವಾ ಇರುವದು ಹುಟ್ಟುವದೆಂಬುದು ಮಾಯೆಯಿಂದ ಎಂದರೆ ಹೊಂದುತ್ತದೆ. ಏಕೆಂದರೆ ನಿಜವಾಗಿ ಹುಟ್ಟುತ್ತದೆ ಎನ್ನುವವರ ಪಕ್ಷದಲ್ಲಿ ಮೊದಲು ಹುಟ್ಟಿದ್ದೇ ಹುಟ್ಟಿತು ಎಂದಂತೆ ಆಗುತ್ತದೆ; ಎಂದರೆ ಕಾರಣವು ಹುಟ್ಟಿರುತ್ತದೆ, ಕಾರ್ಯವೂ ಹುಟ್ಟುತ್ತದೆ ಎಂದಾಗಿ ಅನವಸ್ಥೆಯಾಗುವದು. ಅಸತ್ತಾದದ್ದು ಹುಟ್ಟುತ್ತದೆ ಎಂಬುದು ಹೇಗೂ ಹೊಂದುವದೇ ಇಲ್ಲ; ಏಕೆಂದರೆ ಬಂಜೆಯ ಮಗನು ನಿಜವಾಗಿಯೂ ಹುಟ್ಟುವದಿಲ್ಲ, ಮಾಯೆಯಿಂದಲೂ ಹುಟ್ಟುವದಿಲ್ಲ. ಆದ್ದರಿಂದ ಅಸತ್ತು ಜಗತ್ತಾಗಿ ಹುಟ್ಟಿದೆ ಎಂಬ ವಾದವು ಎಂದಿಗೂ ಸರಿಯಲ್ಲ. ಕನಸಿನಲ್ಲಿ ಮನಸ್ಸು ಮಾಯೆಯಿಂದ ದ್ವೈತರೂಪವಾಗಿ ತೋರುವಂತೆ ಎಚ್ಚರದಲ್ಲಿಯೂ ತೋರುತ್ತದೆ ಎಂಬುದೇ ಯುಕ್ತ. ಎರಡವಸ್ಥೆಗಳಲ್ಲಿಯೂ ಮನಸ್ಸು ಅದ್ವಿತೀಯಾತ್ಮನಾಗಿಯೇ ಇರುತ್ತದೆ. ದ್ವೈತವೆಲ್ಲವೂ ಮನಸ್ಸಿನ ಕಲ್ಪನೆಯೇ ಎನ್ನಬೇಕು; ಏಕೆಂದರೆ ಮನಸ್ಸು ಅಮನಸ್ಸಾದರೆ ದ್ವೈತವು ಕಾಣಿಸುವದೇ ಇಲ್ಲ.

೩೨–೩೮. ಆತ್ಮನೊಬ್ಬನೇ ಸತ್ಯವೆಂಬುದನ್ನು ಶಾಸ್ತ್ರಾಚಾರ್ಯರ ಉಪದೇಶವನ್ನು ಅನುಸರಿಸಿ ಅರಿತುಕೊಂಡರೆ ತನಗೆ ವಿಷಯವಿಲ್ಲದೆ ಮನಸ್ಸು ಅಮನಸ್ಸಾಗುವದು. ಆಗ ಅದು ಅಜವೂ ಅದ್ವಯವೂ ಆಗಿರುತ್ತದೆ. ಹೀಗೆ ಆತ್ಮಸತ್ಯಾನುಬೋಧದಿಂದ ಹಿಡಿತಕ್ಕೆ ಬಂದ ಮನಸ್ಸಿನ ವ್ಯಾಪಾರಕ್ಕೂ ಸುಷುಪ್ತಿಯಲ್ಲಿ ಲಯವಾಗಿರುವ ಮನಸ್ಸಿನ ವ್ಯಾಪಾರಕ್ಕೂ ತಾರತಮ್ಯವುಂಟು. ಏಕೆಂದರೆ ಜ್ಞಾನದಿಂದ ನಿರುದ್ಧವಾದ ಮನಸ್ಸು ನಿರ್ಭಯವಾದ ಬ್ರಹ್ಮವೇ ಆಗಿರುತ್ತದೆ. ಅದು ಅಜವೂ ಅನಿದ್ರವೂ ಅಸ್ವಪ್ನವೂ ಅನಾಮರೂಪವೂ ಆಗಿರುವ ಸ್ವಯಂಜ್ಯೋತಿಯಾದ ಚೈತನ್ಯವಾಗಿರುತ್ತದೆ. ಅಜ್ಞಾನವು ಬಂದ ಬಳಿಕ ಮಾಡಬೇಕಾದದ್ದು

ಏನೊಂದೂ ಉಳಿದಿರುವದಿಲ್ಲ. ಆ ಚೈತನ್ಯವು ವಾಕ್ಕಿಗೂ ಮನಸ್ಸಿಗೂ ಮೀರಿದ ನಿತ್ಯ ಪ್ರಕಾಶವಾಗಿರುತ್ತದೆ, ಹಾನೋಪಾದಾನರಹಿತವಾಗಿರುತ್ತದೆ. ಆದ್ದರಿಂದ ಈ ಜ್ಞಾನಕ್ಕೆ **ಅಸ್ಪರ್ಶಯೋಗ** ಎಂದು ಹೆಸರು. ಆತ್ಮಸತ್ತ್ಯಾನುಬೋಧವಿಲ್ಲದ ದ್ವೈತಯೋಗಿಗಳು ಈ ಅಭಯರೂಪವಾದ ಯೋಗವನ್ನೇ ಭಯಕಾರಣವೆಂದಂಜುತ್ತಿರುವರು.

೪೦–೪೭. ಆತ್ಮನಿಗಿಂತ ಬೇರೆಯಾಗಿ ಮನಸ್ಸೂ ಒಂದಿದೆಯೆಂದು ತಿಳಿಯುವ ಸಾಧಕರಿಗೆ ಅಭಯವೂ ದುಃಖಕ್ಷಯವೂ ಆತ್ಮಜ್ಞಾನವೂ ಮುಕ್ತಿಯೂ ಮನೋನಿಗ್ರಹದಿಂದಲೇ ಆಗಬೇಕು. ಅವರು ಬೇಸರವಿಲ್ಲದೆ ಮನಸ್ಸನ್ನು ಗಟ್ಟಿಮಾಡಿಕೊಂಡು ಹೊರಗೆ ವಿಷಯಭೋಗಕ್ಕಾಗಲಿ, ಒಳಗೆ ನಿದ್ರೆಗಾಗಲಿ ಎಡೆಗೊಡದಂತೆ ವೈರಾಗ್ಯವನ್ನೂ ವಿವೇಕವನ್ನೂ ಆಳವಡಿಸಿಕೊಂಡು, ಮನಸ್ಸು ವಾಸನಾಯುಕ್ತವಾಗಿ ನಿಲ್ಲದಂತೆ ಆತ್ಮಾಕಾರವಾಗಿ ಮಾಡಿಕೊಳ್ಳುವದಕ್ಕೆ ಪ್ರಯತ್ನಿಸಬೇಕು. ಆತ್ಮನ ಕಡೆಗೆ ಮನಸ್ಸು ತಿರುಗಿದ ಮಾತ್ರದಿಂದ ಉಂಟಾಗುವ ಸುಖದಲ್ಲಿಯೂ ಆಸಕ್ತರಾಗದೆ ಮನಸ್ಸು ಆತ್ಮಾಕಾರವಾಗಿಯೇ ನಿಲ್ಲುವಂತೆ ಮಾಡಿಕೊಳ್ಳಬೇಕು. ಹೀಗಾದರೆ ಮನಸ್ಸು ಬ್ರಹ್ಮವಾಗಿ ನಿಲ್ಲುವದು. ಇದರಿಂದ ಜ್ಞಾನವೂ ದುಃಖನಾಶವೂ ಶಾಂತಿಯೂ ಉಂಟಾಗುತ್ತವೆ. ಹೀಗೆ ಮಧ್ಯಮಾಧಿಕಾರಿಗಳು ಅರಿಯುವ ವಸ್ತುವೂ ಪರಮಾರ್ಥವಾಗಿ ಜ್ಞಾನವಿಭಾಗಶೂನ್ಯವಾದ ಜನ್ಮರಹಿತವಾದ ಬ್ರಹ್ಮವೇ.

೪೮. ಇದುವರೆಗೆ ಹೇಳಿದ ಮನೋನಿಗ್ರಹವೇ ಮುಂತಾದ ಉಪಾಯವು ಯಾವದೂ ಪರಮಾರ್ಥವಲ್ಲ. ಪರಮಾರ್ಥವು ಯಾವದೆಂದರೆ ಯಾವ ಜೀವನೂ ಹುಟ್ಟುವದಿಲ್ಲ, ಅವನು ಹುಟ್ಟುವದಕ್ಕೆ ಕಾರಣವೂ ಇಲ್ಲ. ಯಾವದೊಂದೂ ಹುಟ್ಟುವದಿಲ್ಲ. ಎಲ್ಲವೂ ಅಜವೂ ಅದ್ವಿತೀಯವೂ ಆದ ಬ್ರಹ್ಮವೇ ಎಂಬುದೇ ಉತ್ತಮಸತ್ಯವು.

## ಅಲಾತಶಾಂತಿಪ್ರಕರಣ

೧–೨. ಜ್ಞಾನ, ಜ್ಞೇಯ, ಜ್ಞಾತೃ- ಇವೆಲ್ಲವೂ ಆಕಾಶದಂತೆ ನಿತ್ಯವಾದ ಸರ್ವಗತವಾದ ಅಸಂಗವಾದ ಒಂದೇ ತತ್ತ್ವದಲ್ಲಿ ಕಲ್ಪಿತವಾಗಿರುವ ತೋರಿಕೆಗಳು. ಅದ್ವೈತದರ್ಶನವು ಇಂಥ ಬ್ರಹ್ಮತತ್ತ್ವವನ್ನು ತಿಳಿಸುವದರಿಂದ **ಅಸ್ಪರ್ಶಯೋಗ**ವೆಂದು ಪ್ರಸಿದ್ಧವಾಗಿರುತ್ತದೆ. ಅದರಲ್ಲಿ ಯಾವ ವಿವಾದವಾಗಲಿ ವಿರೋಧವಾಗಲಿ ಇರುವದಿಲ್ಲ; ಅದು ಎಲ್ಲಾ ಪ್ರಾಣಿಗಳಿಗೂ ಸುಖಕರವಾದದ್ದು, ಹಿತವಾದದ್ದು.

೩–೧೦. 'ಇಲ್ಲದ ವಸ್ತು ಹುಟ್ಟಲಾರದು', 'ಇರುವದು ಹುಟ್ಟುವದು ಹೇಗೆ ?' ಎಂದು ದ್ವೈತವಾದಿಗಳು ಒಬ್ಬರೊಡನೊಬ್ಬರು ವಿವಾದಮಾಡುತ್ತಾರೆ. ಇದರಿಂದ ಹುಟ್ಟೆಂಬುದೇ ಇಲ್ಲವೆಂದು ಸ್ಪಷ್ಟವಾಗುತ್ತದೆ. ಸ್ವಭಾವದಿಂದ ಅಜವಾದ ಅಮೃತವಾದ ಧರ್ಮವು ಹುಟ್ಟಿ ಮರ್ತ್ಯವಾಗಲಾರದು. ಆತ್ಮರುಗಳಿಗೆ ಮುಪ್ಪುಸಾವುಗಳಿಲ್ಲವೆಂಬುದೇ ಸಿದ್ಧಾಂತವು; ಆದರೂ ಜನರು ತಮಗೆ ಮುಪ್ಪುಸಾವುಗಳುಂಟೆಂದು ನಂಬಿ ಅದೇ ಭಾವನೆಯಿಂದ ಅನರ್ಥವನ್ನು ಹೊಂದುತ್ತಾರೆ.

೧೧–೨೩. ಹುಟ್ಟುವದು ನಿಜವೆಂದು ನಂಬಿರುವವರಲ್ಲಿ ಕೆಲವರು **ಸತ್ಕಾರ್ಯವಾದಿಗಳು,** ಮತ್ತೆ ಕೆಲವರು **ಅಸತ್ಕಾರ್ಯವಾದಿಗಳು.** ಇವರಿಬ್ಬರೂ ಒಬ್ಬರ ಮತದಲ್ಲೊಬ್ಬರು ದೋಷವನ್ನು ತೋರಿಸುತ್ತಿರುವರು; ಆದರಿಂದ ಇಬ್ಬರ ಮತದಲ್ಲಿಯೂ ದೋಷವಿದೆಯೆಂದೇ ಸ್ಪಷ್ಟವಾಗುತ್ತದೆ. ಆತ್ಮರು ಹುಟ್ಟುವದಕ್ಕೆ ಧರ್ಮಾಧರ್ಮಗಳು ಕಾರಣ, ಅವುಗಳಿಂದ ಶರೀರವೆಂಬ ಕಾರ್ಯವಾಗುತ್ತದೆ-ಎಂದು ಕರ್ಮವಾದಿಗಳು ಹೇಳುತ್ತಾರೆ; ಆದರೆ ಧರ್ಮಾಧರ್ಮಗಳನ್ನು ಮಾಡುವದಕ್ಕೆ ಮೊದಲೇ ಶರೀರವಿರಬೇಕಾಗುತ್ತದೆ. ಆದ್ದರಿಂದ ಈ ವಾದಿಗಳ ಮತದಲ್ಲಿ ಧರ್ಮಾಧರ್ಮಗಳೆಂಬ ಹೇತು, ಶರೀರವೆಂಬ ಫಲ ಈ ಎರಡಕ್ಕೂ ಅನ್ಯೋನ್ಯಾಶ್ರಯವಿದೆ- ಎಂಬ ದೋಷವುಂಟಾಗುತ್ತದೆ. ಹೇತುಫಲಗಳ ಸಂಬಂಧವನ್ನು ಬಿಡಿಸಿ ಹೇಳುವದಕ್ಕೆ ಬರುವ ಹಾಗೆಯೇ ಇಲ್ಲ. ಇವುಗಳಲ್ಲಿ ಯಾವದು ಮೊದಲು ಇರುತ್ತದೆಯೆಂದೂ ನಿರ್ಧರಿಸುವದಕ್ಕಾಗುವದಿಲ್ಲ; ಇವು ಅನಾದಿಯೆಂದೂ ಸಿದ್ಧವಾಗುವದಿಲ್ಲ. ಆದ್ದರಿಂದ ಹುಟ್ಟುವದೆಂಬುದೇ ಸುಳ್ಳು-ಎಂದು ಸ್ಪಷ್ಟವಾಗುತ್ತದೆ.

೨೪–೨೮. ಘಟಜ್ಞಾನ, ಪಟಜ್ಞಾನ-ಎಂದು ಜ್ಞಾನದಲ್ಲಿ ಭೇದಗಳಿರುವದರಿಂದಲೂ ಬೇರೆಬೇರೆಯ ವಿಷಯಗಳಿಂದ ಬೇರೆಬೇರೆಯಾಗಿ ಸುಖದುಃಖಾದಿಗಳು ಉಂಟಾಗುತ್ತಿರುವದರಿಂದಲೂ ಈ ವೈಚಿತ್ರ್ಯಕ್ಕೆ ಕಾರಣವಾಗಿ ಜ್ಞೇಯವಸ್ತುಗಳು ಹುಟ್ಟಿರಬೇಕು-ಎಂದು ಕೆಲವರು ಹೇಳುತ್ತಾರೆ. ವಿಜ್ಞಾನವಾದಿಗಳಾದ ಬೌದ್ಧರು ಅವರ ಮತವನ್ನು ಖಂಡಿಸಿ "ವಿಷಯುಗಳು ಕಾರ್ಯವಾದರೆ ತಮ್ಮ ಕಾರಣವನ್ನು ಬಿಟ್ಟು ಬೇರೆಯಾಗಿ ಇರಲೇ ಆರವು; ವಿಷಯಗಳೂ ಅವುಗಳಿಂದಾಗುವ ಸುಖದುಃಖಾದಿಗಳೂ ನಿಜವಾಗಿರುವದಾದರೆ ಸುಷುಪ್ತಿ ಸಮಾಧ್ಯಾದಿಗಳಲ್ಲಿ ಅವು ತೋರುವದಿಲ್ಲವೇಕೆ? ಈ ಕಾರಣದಿಂದ ಹೊರಗೆ ವಿಷಯವು ಇರುವದೆಂಬುದು ಸುಳ್ಳು. ಚಿತ್ತವೊಂದೇ ನಿಜವು, ಅದೇ ಬಗೆಬಗೆಯ ವಿಷಯಗಳ ಆಕಾರದಿಂದ ತೋರುತ್ತಿರುವದು" ಎಂದು ವಾದಿಸುತ್ತಾರೆ. ಆದರೆ ಬೌದ್ಧರು ಹೇಳುವ ಯುಕ್ತಿಯಿಂದಲೇ ಚಿತ್ತವೂ ಇಲ್ಲವೆಂದು ಸಿದ್ಧವಾಗುತ್ತದೆ. ಇಲ್ಲದ ಗಡಿಗೆಯು ಗಡಿಗೆಯಂತೆ ತೋರಬಹುದಾದರೆ ಇಲ್ಲದ ಚಿತ್ತವು ಚಿತ್ತದಂತೆ ತೋರಬಹುದೆಂದು ಏಕೆ ಹೇಳಬಾರದು? ಆದ್ದರಿಂದ ಚಿತ್ತದ ವಿಷಯಗಳೂ ಹುಟ್ಟುವದಿಲ್ಲ, ಚಿತ್ತವೂ ಹುಟ್ಟುವದಿಲ್ಲ; ಎಂದೆಂದಿಗೂ ಹುಟ್ಟದೆ ಕೂಟಸವಾಗಿರುವ ಬ್ರಹ್ಮವೊಂದೇ ತತ್ತ್ವವು- ಎಂದು ಸಿದ್ಧವಾಯಿತು.

೩೦-೪೧. ಹುಟ್ಟುವದು ಪರಮಾರ್ಥವೆನ್ನುವವರ ಮತದಲ್ಲಿ ಸಂಸಾರವು ಅನಾದಿ, ಸಾಂತ-ಎಂದಾಗುವದು; ಮೋಕ್ಷವು ಸಾದಿ, ನಿತ್ಯ-ಎಂದಾಗುವದು. ಇದು ಯುಕ್ತಿವಿರುದ್ಧ. ಆದ್ದರಿಂದ ಸಂಸಾರವು ಮೊದಲೂ ಇಲ್ಲ, ಕೊನೆಯಲ್ಲಿಯೂ ಇಲ್ಲ, ನಡುವೆ ಇರುವಂತೆ ತೋರಿದರೂ ನಿಜವಾಗಿ ಇಲ್ಲ-ಎಂಬುದೇ ಸರಿಯಾದದ್ದು. ಕನಸಿನಲ್ಲಿ ಹೇಗೆ ನಿಜವಾಗಿಲ್ಲದ ಶರೀರಾದಿಗಳು ತೋರುವವೋ ಹಾಗೆಯೇ ಎಚ್ಚರದಲ್ಲಿಯೂ ನಿಜವಾಗಿಲ್ಲದ ಶರೀರಾದಿಗಳೇ ತೋರುತ್ತಿರುವವೆಂದು ಕಲ್ಪಿಸುವದು ಯುಕ್ತವಾಗಿರುತ್ತದೆ. ಎಚ್ಚರವು ಕನಸಿನಂತೆ ಕಾರ್ಯವೆಂದು ಹೇಳುವವರು ಕನಸಿನಂತೆ ಎಚ್ಚರವೂ ಕನಸಿನಿಂದೆದ್ದವನೊಬ್ಬನಿಗೇ ಎಂದು ಒಪ್ಪಬೇಕಾಗುತ್ತದೆ. ಆದರೆ ಸರಿಯಾಗಿ ನೋಡಿದರೆ ಎಚ್ಚರಕನಸುಗಳಿಗೆ ಕಾರ್ಯಕಾರಣಭಾವವಿದೆಯೆಂಬುದೂ ಹೊಂದುವದಿಲ್ಲ. ಏಕೆಂದರೆ ಅಸತ್ತಿನಿಂದ ಅಸತ್ತು ಹುಟ್ಟಲಾರದು,

ಅಸತ್ತಿನಿಂದ ಸತ್ತು ಹುಟ್ಟಲಾರದು, ಸತ್ತಿನಿಂದ ಸತ್ತು ಹುಟ್ಟಲಾರದು, ಸತ್ತಿನಿಂದ ಅಸತ್ತೂ ಹುಟ್ಟಲಾರದು. ಹೀಗೆ ಯಾವ ಬಗೆಯಿಂದ ನೋಡಿದರೂ ಹುಟ್ಟುವದೆಂಬುದೇ ಯುಕ್ತಿ ವಿರುದ್ಧವಾಗಿರುವದರಿಂದ ಎಚ್ಚರಕನಸುಗಳಿಗೆ ಕಾರ್ಯಕಾರಣಭಾವವಿಲ್ಲ; ಆಯಾ ಪದಾರ್ಥಗಳನ್ನು ಅಲ್ಲಲ್ಲಿಯೇ ಜನರು ಕಲ್ಪಿಸಿಕೊಳ್ಳುತ್ತಾರೆಂಬುದೇ ಸರಿಯಾದದ್ದು.

೪೨-೪೬. ಬ್ರಹ್ಮದಿಂದ ಪ್ರಪಂಚವು ಹುಟ್ಟುತ್ತದೆ ಎಂದು ಬ್ರಹ್ಮವಾದಿಗಳೂ ಹೇಳುವದುಂಟು. ಹೊರಗೆ ವಸ್ತುಗಳು ಕಾಣುವದರಿಂದಲೂ ಅವುಗಳನ್ನು ನಾವು ವ್ಯವಹಾರದಲ್ಲಿ ಬಳಸುವದರಿಂದಲೂ ಅವು ನಿಜವಾಗಿಯೂ ಇರುವವೆಂದು ನಂಬಿರುವ ಜನರಿಗೆ ಮೊದಲನೆಯ ಮೆಟ್ಟಿಲಾಗಿ ಬ್ರಹ್ಮದಿಂದ ಜಗತ್ತು ಹುಟ್ಟಿರುವದೆಂದು ಅದ್ವೈತಿಗಳು ಉಪದೇಶಿಸುವರೇ ಹೊರತು ನಿಜವಾಗಿಯೂ ಹುಟ್ಟುವಿಕೆಯುಂಟೆಂಬ ಅಭಿಪ್ರಾಯದಿಂದಲ್ಲ. ತತ್ತ್ವವು ಹುಟ್ಟುವಂತೆಯೂ ಚಲಿಸುವಂತೆಯೂ ಸಗುಣವಾಗಿರುವಂತೆಯೂ ತೋರುವದು ನಿಜ; ಆದರೆ ಪರಮಾರ್ಥವಾಗಿ ತಾನು ಇದ್ದಂತೆಯೇ ಇರುತ್ತದೆ. ಈ ದೃಷ್ಟಿಯಿಂದ ನೋಡಿದಾಗ ಚಿತ್ತವೂ ಹುಟ್ಟಿರುವದಿಲ್ಲ, ಚಿತ್ತಕ್ಕೆ ತೋರುತ್ತಿರುವ ವಿಷಯಗಳೂ ಹುಟ್ಟಿರುವದಿಲ್ಲ; ಆತ್ಮರೂ ಹುಟ್ಟಿರುವದಿಲ್ಲ. ಹೀಗೆಂಬುದೇ ಸರಿಯೆಂದು ತಿಳಿದವರು ಅವಿದ್ಯೆಯ ಅಂಧಂತಮಸ್ಸಿಗೆ ಬೀಳದೆ ಇರುವರು.

೪೭-೫೪. ವೇಗವಾಗಿ ತಿರುಗಿಸುವ ಕೊಳ್ಳಿಯಲ್ಲಿ ಅನೇಕ ಆಕಾರಗಳು ತೋರುವವಷ್ಟೆ, ಅವು ಎಲ್ಲಿಂದ ಬರುತ್ತವೆ? ಕೊಳ್ಳಿಯಲ್ಲಿ ತಿರುಗಿಸುವದನ್ನು ನಿಲ್ಲಿಸಿದಾಗ ಅವು ಎಲ್ಲಿಗೆ ಹೋಗುತ್ತವೆ? ಈ ಪ್ರಶ್ನೆಗೆ ತಿಳಿದವರು ಕೊಡಬಹುದಾದ ಉತ್ತರವಿಷ್ಟೇ: ಅವು ಕೊಳ್ಳಿಗಿಂತ ಬೇರೆಯಾಗಿ ಇಲ್ಲವೇ ಇಲ್ಲ; ಅವು ಕೊಳ್ಳಿಯಿಂದಾಗಲಿ ಮತ್ತೆಲ್ಲಿಂದಾಗಲಿ ಬಂದಿರುವದಿಲ್ಲ. ಕೊಳ್ಳಿಯು ತಿರುಗುವದು ನಿಂತಾಗ ಕೊಳ್ಳಿಯೊಳಕ್ಕಾಗಲಿ ಮತ್ತೆಲ್ಲಿಗಾದರೂ ಆಗಲಿ ಹೋಗುವದೂ ಇಲ್ಲ. ಇದರಂತೆಯೇ ಜ್ಞಾನಸ್ವರೂಪನಾದ ಆತ್ಮನಲ್ಲಿ ಅಜ್ಞಾನದಿಂದ ತೋರುವ ಆಕಾರಗಳು ಎಲ್ಲಿಂದಲೂ ಬರುವದಿಲ್ಲ, ಅಜ್ಞಾನವು ನಾಶವಾದರೆ ಅವು ಎಲ್ಲಿಗೂ ಹೋಗುವದೂ ಇಲ್ಲ. ಆತ್ಮನಿಗಿಂತ ಬೇರೆಯಾಗಿ ಅವು ಇರುವದೇ ಇಲ್ಲ. ಕಾರ್ಯಕಾರಣಗಳೆಂಬವು ದ್ರವ್ಯಗಳಾಗಿರಬೇಕು, ಅಥವಾ ದ್ರವ್ಯಕ್ಕೆ ಸಂಬಂಧಪಟ್ಟ ಬೇರೆಯ ಪದಾರ್ಥಗಳಾಗಿರಬೇಕು—ಎಂಬುದು ಕಾರ್ಯಕಾರಣವಾದಿಗಳ ನಂಬಿಕೆ; ಆದರೆ ಆತ್ಮನು ದ್ರವ್ಯವಲ್ಲ, ಆತ್ಮನಿಗಿಂತ ವ್ಯತಿರಿಕ್ತವಾಗಿ ಯಾವದೊಂದೂ ಇರುವದೇ ಇಲ್ಲ. ಹೀಗಿರುವಲ್ಲಿ ಕಾರ್ಯಕಾರಣವನ್ನು ಒಪ್ಪುವದು ಹೇಗೆ ಸರಿಯಾದೀತು? ಆದ್ದರಿಂದ ಆತ್ಮರುಗಳಾಗಲಿ ಚಿತ್ತವಾಗಲಿ ಹುಟ್ಟುವದಿಲ್ಲವೆಂಬುದೇ ಪರಮಾರ್ಥವು.

೫೫-೭೪. ಹೇತುಫಲವೆಂಬ ಸಂಸಾರವು ನಿಜವಾಗಿ ಇಲ್ಲವೇ ಇಲ್ಲ; ಅದು ಇದೆಯೆಂಬ ಅಭಿಮಾನವೇ ಸಂಸಾರವು. ಅಜ್ಞಾನದೃಷ್ಟಿಯಿಂದ ಎಲ್ಲವೂ ಹುಟ್ಟುತ್ತದೆ, ಜ್ಞಾನದೃಷ್ಟಿಯಿಂದ ಯಾವದೂ ಹುಟ್ಟುವದಿಲ್ಲ. ಆತ್ಮರು ಹುಟ್ಟುವಂತೆಯೂ ಸಾಯುವಂತೆಯೂ ತೋರುವದು ಕನಸು, ಮಾಯೆ, ಯೋಗಿಯ ನಿರ್ಮಾಣ- ಇವುಗಳಲ್ಲಿ ತೋರುವ ಜೀವರುಗಳ ಹುಟ್ಟುಸಾವುಗಳಂತೆ ಬರಿಯ ತೋರಿಕೆಯಾಗಿರುತ್ತದೆ. ಆತ್ಮರು ನಿತ್ಯರೊ, ಅನಿತ್ಯರೊ ?—ಎಂಬುದೂ ಪರಮಾರ್ಥಕ್ಕೆ ಸಂಬಂಧಪಟ್ಟ ಪ್ರಶ್ನೆಯಲ್ಲ; ಯಾವದೊಂದೂ ಹುಟ್ಟುವದಿಲ್ಲವೆಂಬುದೇ ಪರಮಾರ್ಥವು. ಚಿತ್ತವೂ ಚಿತ್ತದಿಂದ ಕಲ್ಪಿತವಾದದ್ದೆಲ್ಲವೂ—ಶಾಸ್ತ್ರ, ಶಿಷ್ಯ, ಗುರು ಎಂಬ ಭೇದವುಕೂಡ—ಪರಮಾರ್ಥವಾಗಿರುವದೇ ಇಲ್ಲ. ಆತ್ಮನು

ಹುಟ್ಟುವವನಲ್ಲ ಎಂಬುದೂ ಪರಮಾರ್ಥವಲ್ಲ. ಅವನು ಹುಟ್ಟುತ್ತಾನೆಂದು ಹೇಳುವವರ ಕಲ್ಪನೆಯನ್ನು ಅಲ್ಲಗಳೆಯುವದಕ್ಕಾಗಿ ಆತ್ಮನು ಅಜನು ಎಂದು ಹೇಳುತ್ತೇವೆಯೇ ಹೊರತು ಮತ್ತೇನೂ ಇಲ್ಲ.

೭೫–೮೧. ದ್ವೈತವು ನಿಜವಾಗಿಲ್ಲದಿದ್ದರೂ ಅದು ಇದೆಯೆಂಬ ಅಭಿಮಾನದಿಂದಲೇ ಅದು ಇರುವಂತೆ ತೋರುತ್ತಿರುವದು. ಅದು ಇಲ್ಲವೆಂಬುದನ್ನು ತಿಳಿದುಕೊಂಡರೆ ಮುಕ್ತಿಯಾಗುವದು. ಏಕೆಂದರೆ ಆಗ ಧರ್ಮಾಧರ್ಮಗಳೆಂಬ ನಿಮಿತ್ತವಿಲ್ಲದಿರುವದರಿಂದ ಹುಟ್ಟುವದೆಂಬ ಸಂಸಾರವೂ ಇರುವದಿಲ್ಲ. ಪರಮಾರ್ಥವಾಗಿ ದ್ವೈತವಿಲ್ಲವೇ ಇಲ್ಲ ಎಂಬುದನ್ನು ತಿಳಿದುಕೊಂಡು ನಿಶ್ಚಲವಾಗಿರುವದು ಕೂಟಸ್ಥವಾದ ಬ್ರಹ್ಮವನ್ನು ಬಲ್ಲ ಜ್ಞಾನಿಗಳಿಗೆ ಮಾತ್ರ ಸಾಧ್ಯವಾಗುತ್ತದೆ.

೮೨–೮೬. ಆತ್ಮನ ನಿಜವಾದ ಸ್ವರೂಪವನ್ನು ತಿಳಿದುಕೊಳ್ಳುವದು ಕಷ್ಟ; ಅದನ್ನು ತಪ್ಪಾಗಿ ತಿಳಿದುಕೊಳ್ಳುವದು ಸುಲಭ. ಆತ್ಮನು 'ಇದ್ದಾನೆ', 'ಇಲ್ಲ', 'ಇದ್ದೂ ಇದ್ದಾನೆ, ಇಲ್ಲವೂ ಇಲ್ಲ', 'ಇಲ್ಲವೇ ಇಲ್ಲ'–ಎಂಬ ಬೇರೆಬೇರೆಯ ನಾಲ್ಕುಬಗೆಯನ್ನು ವಾದಿಗಳು ಆತ್ಮನಲ್ಲಿ ಅವಿವೇಕದಿಂದ ಕಲ್ಪಿಸಿರುತ್ತಾರೆ. ಈ ತಪ್ಪುಕಲ್ಪನೆಗಳನ್ನು ಮೀರಿರುವ ಪರಮಾರ್ಥವನ್ನು ಬಲ್ಲವನೇ ಸರ್ವಜ್ಞನು, ಬ್ರಾಹ್ಮಣನು, ಕೃತಕೃತ್ಯನು, ವಿನೀತನು, ಶಾಂತನು, ದಾಂತನು.

೮೭–೯೦. ದ್ವೈತಿಗಳ ಯುಕ್ತಿಯಿಂದಲೇ ಅಜಾತಿವಾದವನ್ನು ಸಾಧಿಸಿದ್ದಾಯಿತು. ವೇದಾಂತಪ್ರಕ್ರಿಯೆಯಾದ ಅವಸ್ಥಾತ್ರಯಪರೀಕ್ಷೆಯ ದೃಷ್ಟಿಯಿಂದ ನೋಡಿದರಂತೂ ಅವಸ್ಥೆಗಳು ಒಂದರಲ್ಲೊಂದು ಲಯವಾಗಿ ಕೊನೆಗೆ ಅವಸ್ಥಾರಹಿತವಾದ ಆತ್ಮತತ್ತ್ವವೇ ಉಳಿಯುತ್ತದೆ. ಅವಸ್ಥೆಗಳು, ಪಾಂಡಿತ್ಯಬಾಲ್ಯಮೌನಗಳೆಂಬ ಸಾಧನಗಳು, ಶಮಾದಿಗಳು–ಇವೆಲ್ಲವೂ ಸಾಧಕನ ದೃಷ್ಟಿಯಿಂದ ಬೇಕಾದವುಗಳಾದರೂ ಇವುಗಳುಕೂಡ ಅವಿದ್ಯಾಕಾರ್ಯವೇ ಆಗಿರುತ್ತವೆ; ಕೂಟಸ್ಥಚೈತನ್ಯವಾದ ಬ್ರಹ್ಮಾತ್ಮನೆಂಬ ತತ್ತ್ವವೊಂದೇ ಪರಮಾರ್ಥವಾಗಿರುತ್ತದೆ.

೯೧–೧೦೦. ಅಜಾದ್ವಿತೀಯವಾದ ಬ್ರಹ್ಮವೊಂದೇ ಸತ್ಯವು, ಅದು ನಿತ್ಯಶುದ್ಧಬುದ್ಧಮುಕ್ತಸ್ವಭಾವವಾಗಿರುತ್ತದೆ; ಅದೇ ನಮ್ಮಗಳೆಲ್ಲರ ಆತ್ಮನು. ಹೀಗೆಂದು ತಿಳಿದವರು ಮಹಾಜ್ಞಾನಿಗಳು; ಮಿಕ್ಕವರು ಕೃಪಣರು. ನಮ್ಮಗಳ ಆತ್ಮನಾಗಿ ನಿತ್ಯವೂ ಕೂಟಸ್ಥವೂ ಆಗಿರುವ ಅದ್ವಿತೀಯಚೈತನ್ಯವನ್ನು ಬೋಧಿಸಿರುವದೇ ವೇದಾಂತದ ವಿಶೇಷವು. ಇದನ್ನು ತಿಳಿದುಕೊಂಡರೆ ಗೌತಮಬುದ್ಧನು ಉಪದೇಶಿಸಿರುವ ವಿಜ್ಞಾನಕ್ಕೂ ವೇದಾಂತಿಗಳು ಹೇಳಿರುವ ಆತ್ಮತತ್ತ್ವಕ್ಕೂ ಇರುವ ತಾರತಮ್ಯವು ಸ್ಫುಟವಾಗಿ ತಿಳಿದಂತಾಗುವದು.

---

# ಪರಿಶಿಷ್ಟ

## ೧. ಬೌದ್ಧಪ್ರಕ್ರಿಯಾಸಾಮ್ಯವಿಚಾರ

ಮಾಂಡೂಕ್ಯಕಾರಿಕೆಯಲ್ಲಿ ಬರುವ ಕೆಲವು ವಾಕ್ಯಭಾಗಗಳೂ ಶಬ್ದಗಳೂ ಬೌದ್ಧಗ್ರಂಥಗಳಲ್ಲಿಯೂ ಕಂಡುಬರುತ್ತವೆಯಾದರೂ ಇವೆರಡಕ್ಕೂ ಅರ್ಥಸಾಮ್ಯವಿಲ್ಲ ಎಂಬುದನ್ನು ಪೀಠಿಕೆಯಲ್ಲಿ ಸ್ಪಷ್ಟಪಡಿಸಿರುತ್ತದೆ. ಇಂಥ ವಾಕ್ಯಗಳಲ್ಲಿ ಕೆಲವನ್ನು ಇಲ್ಲಿ ಕೊಟ್ಟಿದೆ; ಶಬ್ದಗಳನ್ನು ಮುಂದಿನ ಪರಿಶಿಷ್ಟದಲ್ಲಿ ಕೊಟ್ಟಿದೆ.

೧. ಅನಿರೋಧಮನುತ್ಪಾದಮನುಚ್ಛೇದಮಶಾಶ್ವತಮ್ |
ಅನೇಕಾರ್ಥಮನಾನಾರ್ಥಮನಾಗಮಮನಿರ್ಗಮಮ್ ॥
ಯಃ ಪ್ರತೀತ್ಯಸಮುತ್ಪಾದಂ ಪ್ರಪಞ್ಚೋಪಶಮಂ ಶಿವಮ್ |
ದೇಶಯಾಮಾಸ ಸಂಬುದ್ಧಸ್ತಂ ವನ್ದೇ ವದತಾಂ ವರಮ್ ॥

**—ಮಾಧ್ಯಮಿಕವೃತ್ತಿ, ನಾಗಾರ್ಜುನಕಾರಿಕೆ.**

ಸರ್ವೋಪಲಮ್ಭೋಪಶಮಃ ಪ್ರಪಞ್ಚೋಪಶಮಃ ಶಿವಃ |
ನ ಕ್ವಚಿತ್ ಕಸ್ಯಚಿತ್ ಕಶ್ಚಿತ್ ಧರ್ಮೋ ಬುದ್ಧೇನ ದೇಶಿತಃ ॥

**—ನಿರ್ವಾಣಪರೀಕ್ಷಾ.**

ಇಲ್ಲಿ ಕಾರಿಕೆಯ ಬೇರೆಬೇರೆಯ ಕಡೆಗಳಲ್ಲಿರುವ ಶಬ್ದಗಳ ಸಾಮ್ಯವು ಕಾಣುವದು. ಆದರೆ ಅಲ್ಲಿರುವ **ತುರ್ಯಾತ್ಮನ ಮಾತು ಇಲ್ಲಿಲ್ಲ. ಇಲ್ಲಿರುವದು ಪ್ರತೀತ್ಯ ಸಮುತ್ಪಾದದ ವಿಚಾರ.** ಅವಿದ್ಯಾ, ಸಂಸ್ಕಾರ, ವಿಜ್ಞಾನ, ಸಾಮರೂಪ, ಷಡಾಯತನ, ಸ್ಪರ್ಶ, ವೇದನಾ, ತೃಷ್ಣಾ, ಉಪಾದಾನ, ಭವ, ಜಾತಿ, ಜರಾಮರಣ– ಇವು ಒಂದರಿಂದ ಒಂದು ಉಂಟಾಗುವದೇ ಪ್ರತೀತ್ಯಸಮುತ್ಪಾದವು. 'ಪ್ರಪಂಚೋಪಶಮ' ಎಂಬ ಮಾತು ಬೌದ್ಧರ ಸಿರ್ವಾಣವನ್ನು ತಿಳಿಸುತ್ತದೆ; ನಿರ್ವಿಶೇಷನಾದ ಆತ್ಮನನ್ನು ಹೇಳುವದಿಲ್ಲ.

೨. ಕಲ್ಪನಾಮಾತ್ರಮಿತ್ಯಸ್ಮಾತ್ ಸರ್ವಧರ್ಮಾಃ ಪ್ರಕಾಶಿತಾಃ |
ಕಲ್ಪನಾಪ್ಯಸತೀ ಪ್ರೋಕ್ತಾ ಯಯಾ ಶೂನ್ಯಂ ವಿಕಲ್ಪ್ಯತೇ ॥

**—ನಾಗಾರ್ಜುನನ ಅಚಿನ್ತ್ಯಸ್ತವ.**

ಕಲ್ಪನೆಯೂ ಸತ್ಯವಲ್ಲವೆಂಬ ವಿಷಯವು ಗೌಡಪಾದಕಾರಿಕೆಯಲ್ಲಿಯೂ (೧–೧೮) ಇದೆ. ಆದರೆ ಶೂನ್ಯವನ್ನೇ ಬಗೆಬಗೆಯಾಗಿ ವಿಕಲ್ಪಿಸುತ್ತಾರೆಂಬುದು ಕಾರಿಕೆಗೆ ಸಮ್ಮತವಲ್ಲ.: ಆತ್ಮನಲ್ಲಿಯೇ ಎಲ್ಲವೂ ಕಲ್ಪಿತವಾಗಿದೆ ಎಂಬುದೇ ವೇದಾಂತ ಸಿದ್ಧಾಂತವೆಂದು (೨–೧೨) ರಲ್ಲಿ ಸ್ಪಷ್ಟವಾಗಿ ಹೇಳಿರುತ್ತದೆ.

೩. ಯಥಾ ಮಾಯಾ ಯಥಾ ಸ್ವಪ್ನೋ ಗನ್ಧರ್ವನಗರಂ ಯಥಾ ।
ತಥೋತ್ಪಾದಸ್ತಥಾ ಸ್ಥಾನಂ ತಥಾ ಭಙ್ಗ ಉದಾಹೃತಃ ॥
—ಮಾಧ್ಯಮಿಕಸೂತ್ರ.

ಇಲ್ಲಿ ಕಾಣುವ ನಿರಾಸ್ಪದಕಲ್ಪನೆಯು ಬೌದ್ಧರದು; ಕಾರಿಕೆಯಲ್ಲಿ (೨-೩೧) ಮೊದಲು ಹೇಳಿದ ಆತ್ಮಾಧಿಷ್ಠಾನವಾದವನ್ನೇ 'ವೇದಾನ್ತೇಷು' ಎಂಬ ಮಾತಿನಿಂದ ಸೂಚಿಸಿರುತ್ತದೆ.

೪. ಉತ್ಪಾದೇ ಚ ನಿರೋಧೇ ಚ ತಥಾತಾಯಾಂ ಗಭೀರತಾ ।
ಜ್ಞೇಯಜ್ಞಾನೇ ಚ ಚರ್ಯಾಯಾಮದ್ವಯೋಪಾಯಕೌಶಲೇ ।
ಸ್ವಪ್ನೋಪಮತ್ವಾದ್ಧರ್ಮಾಣಾಂ ಭವಶಾನ್ತ್ಯೋರಕಲ್ಪನಾ ॥
—ಅಭಿಸಮಯಾಲಂಕಾರಿಕಾ, ಮೈತ್ರೇಯಕೃತ.

'ನ ನಿರೋಧೋ ನಚೋತ್ಪತ್ತಿಃ' (೨-೩೨) ಎಂಬ ಕಾರಿಕೆಯಲ್ಲಿಯೂ ಇದೇ ಅರ್ಥವಿದ್ದರೂ ಮುಂದಿನ ಕಾರಿಕೆಯಲ್ಲಿ ಅಧಿಷ್ಠಾನರೂಪವಾದ ಪರಮಾರ್ಥತತ್ತ್ವವೊಂದಿದೆಯೆಂದು ಹೇಳಿರುತ್ತದೆ.

೫. ನ ಸಂಭವತಿ ಸ್ವಭಾವಸ್ಯ ಯುಕ್ತಃ ಪ್ರತ್ಯಯಹೇತುಭಿಃ ।
ಸ್ವಭಾವಃ ಕೃತಕೋ ನಾಮ ಭವಿಷ್ಯತಿ ಪುನಃ ಕಥಮ್ ॥
—ಮಾಧ್ಯಮಿಕಸೂತ್ರ.

''ಸ್ವಭಾವೇನಾಮೃತೋ ಯಸ್ಯ'' (೩-೨೨, ೪-೮) ಎಂಬ ಕಾರಿಕೆಯಲ್ಲಿಯೂ ಸ್ವಭಾವವು ಬದಲಾಯಿಸಲಾರದು ಎಂದು ಹೇಳಿದೆ; ಆದರೆ ಮಾಧ್ಯಮಿಕಸೂತ್ರದಲ್ಲಿ ಪ್ರತ್ಯಯಹೇತುಗಳಿಂದ ಆಗುವ ಪ್ರತೀತ್ಯಸಮುತ್ಪಾದವನ್ನು-ಎಂದರೆ ಅವಿದ್ಯೆಯಿಂದಾಗುವ ಪ್ರಪಂಚದುಃಖ, ಮಹಾಭೂತಗಳಿಂದಾಗುವ ಶರೀರಸೃಷ್ಟಿ ಎಂಬವುಗಳ ವಿಚಾರಗಳನ್ನು ಕುರಿತು-ಹೇಳಿರುತ್ತದೆ. ಕಾರಿಕೆಯಲ್ಲಿ ಅಜಾತಬ್ರಹ್ಮವಾದವು ಪ್ರಕೃತವಾಗಿರುವದರಿಂದ ಆತ್ಮನು ದ್ವೈತರೂಪದಲ್ಲಿ ಮಾಯೆಯಿಂದ ತೋರುವನೆಂಬ ಶ್ರುತಿಯನ್ನು ಮುಂದೆ (೩-೨ರಲ್ಲಿ) ಉದಾಹರಿಸಿರುತ್ತದೆ.

೬. ಆಕಾಶೇ ಶಶಶೃಙ್ಗಂ ಚ ವನ್ಧ್ಯಾಯಾಃ ಪುತ್ರ ಏವ ಚ ।
ಅಸನ್ತಶ್ಚಾಭಿವ್ಯಜ್ಯನ್ತೇ ತಥಾ ಭಾವೇನ ಕಲ್ಪನಾ ॥
—ನಾಗಾರ್ಜುನಕಾರಿಕಾ.

ಈ ಕಾರಿಕೆಯಲ್ಲಿ ಅಸತ್ತಿಗೆ ತೋರಿಕೆಯುಂಟೆಂಬುದಕ್ಕೆ ಆಕಾಶಾದಿಗಳನ್ನು ದೃಷ್ಟಾಂತವಾಗಿ ಕೊಟ್ಟಿರುತ್ತದೆ. ಸತ್ತಾಗಿರುವದಕ್ಕೆ ಮಾಯೆಯಿಂದ ಜನ್ಮವುಂಟು, ಅಸತ್ತಿಗೆ ಮಾಯೆಯಿಂದಲೂ ಜನ್ಮವಿಲ್ಲ ಎಂದು (೩-೨೭, ೨೮) ಗೌಡಪಾದಕಾರಿಕೆಯಲ್ಲಿ ಹೇಳಿರುವದು ಇದಕ್ಕೆ ಅತ್ಯಂತ ವಿರುದ್ಧವಾಗಿರುತ್ತದೆ.

೭ ಏತತ್ತು ಪರಮಂ ಸತ್ಯಂ ಯತ್ರ ಲೋಕೋ ನ ಗಾಹತೇ ॥

—ಭವಸಂಕ್ರಾಂತಿಸೂತ್ರ; ಶ್ರೀಯುತ ಅಯ್ಯಾಶಾಸ್ತ್ರಿಗಳು ಟಿಬೆಟ
ಭಾಷೆಯಿಂದ ಸಂಸ್ಕೃತಕ್ಕೆ ಪುನಃಪರಿವರ್ತನೆಮಾಡಿದ್ದು.

ಇಲ್ಲಿ ಗೌಡಪಾದಕಾರಿಕೆಯ (೩–೪೮, ೪–೭೧, ೪–೯೫) ಕೆಲವು ಶಬ್ದಗಳು ಕಂಡುಬರುತ್ತವೆ; ಆದರೆ ಅಲ್ಲಿರುವ ಅಜಾತಬ್ರಹ್ಮವಾದದ ಸುಳಿವೂ ಇಲ್ಲ.

೮. ಭಾವಾನ್ನ ಜಾಯತೇಽಭಾವೋ ನಾಭಾವಾದಪಿ ಜಾಯತೇ ।
ಭಾವ ಉತ್ಪದ್ಯತೇ ನಿತ್ಯಂ ಭಾವೋ ಭ್ರಾನ್ತಿಃ ಖಪುಷ್ಪವತ್ ॥

—ಭವಸಂಕ್ರಾಂತಿಪರಿಕಥಾ, ಅಯ್ಯಾಶಾಸ್ತ್ರಿಗಳ ಪುನಃಪರಿವರ್ತನೆ.

ಇಲ್ಲಿ 'ನಾಸ್ತ್ಯಸದ್ಧೇತುಕಮಸತ್' (೪–೪೦) ಎಂಬ ಗೌಡಪಾದಕಾರಿಕೆಯ ಛಾಯೆ ಇದೆ, ಆದರೆ ಅಲ್ಲಿರುವ ಅಜಾಚಲವಿಜ್ಞಾನದ (೪–೪೫) ಸುದ್ದಿಯು ಈ ಗ್ರಂಥದಲ್ಲಿಲ್ಲ. ಇಲ್ಲಿರುವದು ಆಕಾಶಪುಷ್ಪದೃಷ್ಟಾಂತದ ಶೂನ್ಯವಾದ.

೯. ''ಅನ್ಯೋನ್ಯಲಕ್ಷಣಹೇತುಕೇ''

—ಲಂಕಾವತಾರಸೂತ್ರ.

ಇದು ''ಉಭೇ ಹ್ಯನ್ಯೋನ್ಯದೃಶ್ಯೇ ತೇ" ಎಂಬ (೪–೬೭) ಗೌಡಪಾದಕಾರಿಕೆಯನ್ನು ನೆನಪಿಗೆ ತರುವಂತಿದೆ. ಆದರೆ ಅದರ ಹಿಂದಿನ ಕಾರಿಕೆಗಳಲ್ಲಿರುವ ಸಾಕ್ಷಿಚೈತನ್ಯವಾದವು ಲಂಕಾವತಾರಸೂತ್ರದಲ್ಲಿರುವದಿಲ್ಲ; ಅದಕ್ಕೆ ಬದಲು 'ಆತ್ಮತತ್ತ್ವವನ್ನು ಮೂಢಜನರಿಗಾಗಿ ಒಪ್ಪಿಕೊಂಡು ಬುದ್ಧರು ಉಪದೇಶಮಾಡುತ್ತಾರೆ' ಎಂದು ಸ್ಪಷ್ಟವಾಗಿ ಹೇಳಿಬಿಟ್ಟಿರುತ್ತದೆ.

೧೦. ಅಸ್ತೀತಿ ಶಾಶ್ವತಗ್ರಾಹೋ ನಾಸ್ತೀತ್ಯುಚ್ಛೇದದರ್ಶನಮ್ ।
ತಸ್ಮಾದಸ್ತೀತಿ ನಾಸ್ತೀತಿ ನಾಶ್ರಯೇತ ವಿಚಕ್ಷಣಃ ॥
ಅಸ್ತೀತಿ ನಾಸ್ತೀತಿ ಉಭೇಽಪಿ ಅನ್ತಾಃ
ಶುದ್ಧೀತ್ಯಶುದ್ಧೀತಿ ಇಮೇಽಪಿ ಅನ್ತಾಃ ।
ತಸ್ಮಾದುಭೇ ಅನ್ತ ವಿವರ್ಜಯಿತ್ವಾ
ಮಧ್ಯೇಽಪಿ ಸ್ಥಾನಂ ನ ಕರೋತಿ ಪಣ್ಡಿತಃ ॥

—ಮಾಧ್ಯಮಿಕವೃತ್ತಿ.

ಇಲ್ಲಿ ೪–೫೭, ೪–೮೩–ಈ ಗೌಡಪಾದಕಾರಿಕೆಗಳ ಶಬ್ದಪ್ರಯೋಗಗಳಿವೆ. ಆದರೆ ಎಲ್ಲಾ ವಿಕಲ್ಪಗಳನ್ನೂ ಬಿಡಬೇಕೆಂಬುದು ಇಲ್ಲಿಯ ಉಪದೇಶ; ವಿಕಲ್ಪಗಳಿಗೆ ಆಧಾರವಾದ ಕೂಟಸ್ಥನಿತ್ಯಬ್ರಹ್ಮದಲ್ಲಿ ನಿಲ್ಲಬೇಕೆಂಬುದೇ ಗೌಡಪಾದರ ಉಪದೇಶ.

---

## ೨. ಕಾರಿಕೆಗೂ ಬೌದ್ಧಗ್ರಂಥಗಳಿಗೂ ಸಮಾನವಾದ ಶಬ್ದಗಳು

ಈ ಶಬ್ದಗಳು ಯಾವ ಕಾರಿಕೆಯಲ್ಲಿ ಬಂದಿವೆಯೆಂಬುದನ್ನು ತಿಳಿಸುವದಕ್ಕೆ ಮುಖ್ಯವಾಗಿ ಅಲಾತಶಾಂತಿಪ್ರಕರಣದ ಸಂಖ್ಯೆಯನ್ನು ಕೊಟ್ಟಿರುತ್ತದೆ. ಬೌದ್ಧರ ಗ್ರಂಥಗಳ ಹೆಸರನ್ನು ಬರೆದಿಲ್ಲ; ಅವರು ಶಬ್ದವನ್ನು ಯಾವ ಅರ್ಥದಲ್ಲಿ ಉಪಯೋಗಿಸುತ್ತಾರೆಂಬುದಿಷ್ಟನ್ನೇ ತಿಳಿಸಿರುತ್ತದೆ.

**ಅಗ್ರಯಾಣ (೪–೯೦)—**

ಮೊದಲು, ಸಾಧಕನ ಸ್ಥಿತಿ. ಮಹಾಯಾನ ಎಂಬರ್ಥದಲ್ಲಿ ಬೌದ್ಧರಲ್ಲಿ ಪ್ರಯೋಗ.

**ಅಜಾತಿ (೪–೪೩)—**

ಹುಟ್ಟದೆ ಇರುವ ಬ್ರಹ್ಮ, ಹುಟ್ಟದೆ ಇರುವದು ಎಂಬರ್ಥದಲ್ಲಿ ಅದ್ವೈತಿಗಳೂ (೪–೨೯) ಬೌದ್ಧರೂ ಪ್ರಯೋಗಿಸುವರು; ಆದರೆ ಬ್ರಹ್ಮ, ಹುಟ್ಟಿದ ವಸ್ತು ಎಂಬರ್ಥದಲ್ಲಿ ಬೌದ್ಧರಲ್ಲಿ ಪ್ರಯೋಗವಿಲ್ಲ.

**ಅದ್ವಯ (೪-೪೫), ಅದ್ವೈತ (೩-೧೮)-**

ತನಗೆರಡನೆಯದಿಲ್ಲದ ಆತ್ಮ. ದ್ವೈತರಹಿತವಾದ ಶೂನ್ಯ ಎಂಬರ್ಥದಲ್ಲಿ ಮಾತ್ರ ಬೌದ್ಧರಲ್ಲಿ ಬಳಕೆ.

**ಅನಾನಾತ್ವ (೪–೧೦೦)—**

ನಾನಾತ್ವವಿಲ್ಲದ ಅದ್ವಿತೀಯ ಆತ್ಮ. ಬೌದ್ಧರಲ್ಲಿ ನಾನಾರ್ಥವೆಂಬ ಮಾತನ್ನು ವಿಶೇಷಗಳನ್ನು ಮಾತ್ರ ನೋಡುವದು ಎಂಬರ್ಥದಲ್ಲಿ ಉಪಯೋಗಿಸುತ್ತಾರೆ. ಸಾಮಾನ್ಯವನ್ನು ಮಾತ್ರ ನೋಡುವ ಅರಿವು **ಸಮತೆ** ಅಥವಾ **ಸಾಮ್ಯ** ಎನಿಸುವದು. . ಸಮತೆಯ ದೃಷ್ಟಿಯಿಂದ ನೋಡಿದರೆ ಎಲ್ಲವೂ ಬ್ರಹ್ಮವೆಂಬ ಅರಿವಾಗುವದು; ನಾನಾರ್ಥದೃಷ್ಟಿಯಿಂದ ನಾನಾ ದೇವತೆಗಳ ಅರಿವಾಗುವದು. ಆದ್ದರಿಂದ ಪರಮಾರ್ಥವನ್ನು ತಿಳಿಯಬೇಕಾದರೆ ಈ ಎರಡು ದೃಷ್ಟಿಗಳನ್ನೂ ಉಪಯೋಗಿಸಬೇಕು-ಎಂದು ಕೆಲವು **ಮಾಹಾಯಾನಿಕರ** ಅಭಿಪ್ರಾಯ.

**ಅನಿಮಿತ್ತ (೪–೭೭)—**

ಧರ್ಮಾಧರ್ಮಗಳೆಂಬ ಜನ್ಮಕಾರಣವಿಲ್ಲವಿಲ್ಲದಿರುವದು. ಬೌದ್ಧರಲ್ಲಿ **ಅನಿಮಿತ್ತ**ವೆಂಬುದು ಪದಾರ್ಥಗಳು ನಿತ್ಯವೆಂಬ ಭ್ರಾಂತಿಯನ್ನು ಕಳೆಯುವ ಒಂದು ಬಗೆಯ ಧ್ಯಾನವು.

**ಅಭೂತಾಭಿನಿವೇಶ (೪–೭೫)—**

ಆತ್ಮನೊಬ್ಬನೇ ಇದ್ದರೂ ಇಲ್ಲದಿರುವ ಅನಾತ್ಮವೂ ಉಂಟೆಂಬ ಮಿಥ್ಯಾಭಿಮಾನ. ವಸ್ತುತಃ ಯಾವದೂ ಇಲ್ಲದಿದ್ದರೂ ವಾಸನೆಯಿಂದ ಅದನ್ನು ಇದೆ ಎಂದು ತಿಳಿಯುವದು–ಎಂಬ ಅರ್ಥದಲ್ಲಿ ಬೌದ್ಧರ ಪ್ರಯೋಗ.

**ಅಭಿನಿಷ್ಪತ್ತಿ (೪–೭೪)—**

ಸಿದ್ಧಿ. ಬೌದ್ಧರಲ್ಲಿ ಅಬಾಧಿತವಾದ ಕಟ್ಟಕಡೆಯ ಜ್ಞಾನ ಎಂಬ ಅರ್ಥದಲ್ಲಿ ಉಪಯೋಗವಾಗುವ 'ಪರಿನಿಷ್ಪನ್ನ' ಎಂಬ ಶಬ್ದಕ್ಕೂ ಇದಕ್ಕೂ ಯಾವ ಸಂಬಂಧವೂ ಇಲ್ಲ.

**ಅಲಾತ (೪–೪೭)—**

ಕೊಳ್ಳಿ. ವಸ್ತುಗಳು ತೋರಿದರೂ ನಿಜವಾಗಿರುವದಿಲ್ಲವೆಂಬುದನ್ನು ತಿಳಿಸುವದಕ್ಕೆ

ತಿರುಗಿಸುವ ಕೊಳ್ಳಿಯ ದೃಷ್ಟಾಂತವನ್ನು ಬೌದ್ಧರೂ ವೇದಾಂತಿಗಳೂ ಕೊಡುತ್ತಾರಾದರೂ ತೋರಿಕೆಗಳೆಲ್ಲ ವಿಜ್ಞಾನರೂಪವಾದ ಆತ್ಮನಲ್ಲಿ ಕಲ್ಪಿತವಾಗಿರುವವೆಂದು ತಿಳಿಸುವದು ವೇದಾಂತದಲ್ಲಿ ವಿಶೇಷ.

**ಅಸ್ಪರ್ಶಯೋಗ (೪–೨)—**

ಇತರಸಂಬಂಧವೂ ಇಲ್ಲದ ಆತ್ಮನನ್ನು ತಿಳಿಸುವ ಅದ್ವೈತದರ್ಶನ. ಯಾವ ಅನುಭವವೂ ಇಲ್ಲದ ನಿರ್ವಾಣ ಎಂಬರ್ಥದಲ್ಲಿ ಬೌದ್ಧರ ಬಳಕೆ.

**ಅಸತ್ (೪–೩೯)—**

ನಿಜವಾಗಿಲ್ಲದೆ ಇದ್ದರೂ ತೋರುವ ವಸ್ತು. ಎಚ್ಚರಕನಸುಗಳಲ್ಲಿರುವ ತೋರಿಕೆಗಳು ನಿಜವಾಗಿರುವದಿಲ್ಲವಾದ್ದರಿಂದ ಅಸತ್ತಾಗಿರುವವೆಂಬುದು ಬೌದ್ಧರಿಗೂ ವೇದಾಂತಿಗಳಿಗೂ ಸಮಾನ. ಅವು ಸದ್ರೂಪವಾದ ಬ್ರಹ್ಮಕ್ಕಿಂತ ಬೇರೆಯಾಗಿಲ್ಲವೆಂಬುದು ವೇದಾಂತಿಗಳ ವಿಶೇಷೋಪದೇಶ.

**ಅಸ್ತಿವಸ್ತುತ್ವವಾದಿ (೪–೪೨)—**

ದ್ವೈತವಸ್ತುವಿದೆ ಎನ್ನುವವನು. ವಿಜ್ಞಾನಕ್ಕಿಂತ ಹೊರಗೆ ವಸ್ತುವಿದೆ ಎನ್ನುವ **ಸರ್ವಾಸ್ತಿತ್ವವಾದಿ** ಎಂಬರ್ಥದಲ್ಲಿ ಬೌದ್ಧರಲ್ಲಿ ಬಳಕೆ.

**ಆಕಾಶ (೪–೧)—**

ಸರ್ವಗತ, ಸೂಕ್ಷ್ಮ, ನಿತ್ಯ–ಎಂಬುದನ್ನು ತಿಳಿಸುವದಕ್ಕೆ ಕೊಡುವ ದೃಷ್ಟಾಂತ. ಇಲ್ಲದ್ದು ಎಂಬುದನ್ನು ತಿಳಿಸುವದಕ್ಕೆ **ಮಾಧ್ಯಮಿಕರು** ಉಪಯೋಗಿಸುತ್ತಾರೆ.

**ಆದಿಬುದ್ಧ (೪–೯೨)—**

ಮೊದಲಿನಿಂದಲೂ ಜ್ಞಾನಸ್ವರೂಪವೇ ಆಗಿರುವ. ಬೌದ್ಧರು ಬೇರೆಬೇರೆ ಯುಗಗಳಲ್ಲಿ ಅವತರಿಸಿರುವ ಬುದ್ಧರಿಗೆಲ್ಲ ಮೂಲಸ್ವರೂಪನಾದ ಎಂಬರ್ಥದಲ್ಲಿ ಉಪಯೋಗಿಸುತ್ತಾರೆ.

**ಆದಿಶಾನ್ತ (೪–೯೩)—**

ಯಾವಾಗಲೂ ಶಾಂತಿಯುಳ್ಳ. ಎಲ್ಲವೂ ನಾಶವಾಗುವ ನಿರ್ವಾಣ ಎಂಬರ್ಥದಲ್ಲಿ ಬೌದ್ಧರು ಉಪಯೋಗಿಸುವರು.

**ಉಚ್ಛೇದ (೪–೫೭)—**

ನಾಶ. ಪರಮಾರ್ಥದಿಂದ ಎಲ್ಲವೂ ಜನ್ಮರಹಿತವಾದ ಆತ್ಮನೇ ಆಗಿರುವದರಿಂದ ಉಚ್ಛೇದವೆಂಬುದೇ ಇಲ್ಲ–ಎಂದು ಕಾರಿಕೆಯಲ್ಲಿ ಹೇಳಿದೆ. ಇರತಕ್ಕ ಆತ್ಮನು ಮರಣವಾದ ಮೇಲೆ ನಾಶವಾಗಿಬಿಡುತ್ತಾನೆ–ಎಂಬ ತಪ್ಪುತಿಳಿವಳಿಕೆಯನ್ನು ಬೌದ್ಧರು **ಉಚ್ಛೇದ**ವೆಂಬ ಹೆಸರಿನಿಂದ ಕರೆಯುತ್ತಾರೆ.

**ಉಪಲಮ್ಭ (೪–೯೦)—**

ಬರಿಯ ತೋರಿಕೆ. ಅವಿದ್ಯಾಕಲ್ಪನೆ. ಸಾಧಕನು ಮೊದಲು ಅಂಗೀಕರಿಸಬೇಕಾದ ಹೇಯ, ಆಪ್ಯ, ಪಾಕ್ಯ–ಇವು ಮೂರೂ ಅವಿದ್ಯಕನೆಂದೂ ವಿಜ್ಞೇಯವಾದ ಬ್ರಹ್ಮವೊಂದೇ ಸತ್ಯವೆಂದೂ ವೇದಾಂತಿಗಳು ಹೇಳುವರು. ಎಲ್ಲವೂ ಅವಿದ್ಯಕವೇ ಎಂದು ಬೌದ್ಧರು.

**ಕಲ್ಪಿತ (೪–೭೪)—**

ಕಲ್ಪಿತವಾದ ವ್ಯವಹಾರ. ಹಗ್ಗದಲ್ಲಿ ಹಾವು ಕಲ್ಪಿತವೆಂದು ವೇದಾಂತಿಗಳಂತೆ ಬೌದ್ಧರೂ ಹೇಳುತ್ತಾರೆ; ಆದ್ದರಿಂದ ಅವರು ಹಗ್ಗದ ಹಾವಿನ ಅರಿವನ್ನು **ಪರಿಕಲ್ಪಿತ** ಎಂದು ಕರೆಯುತ್ತಾರೆ. ಎಲ್ಲವೂ ಕಲ್ಪಿತವೇ, ವಿಜ್ಞಾನವೊಂದೇ ಪರಮಾರ್ಥವು–ಎಂಬುದು **ವಿಜ್ಞಾನವಾದಿಗಳಾದ ಬೌದ್ಧರ ಮತವು.** ಆತ್ಮನಲ್ಲಿಯೇ ಎಲ್ಲವೂ ಕಲ್ಪಿತವು. ಆತ್ಮನಲ್ಲಿ ತೋರುವ ಧರ್ಮಗಳೂ ಕಲ್ಪಿತವೇ–ಎಂಬುದು ವೇದಾಂತಿಗಳ ಮತ.

**ಕೋಟಿ (೪–೮೪)—**

ಇದೆ, ಇಲ್ಲ. ಇದ್ದೂ ಇಲ್ಲ, ಇಲ್ಲವೇ ಇಲ್ಲ–ಎಂಬ ನಾಲ್ಕು ವಾದಗಳು. ಆತ್ಮನ ವಿಷಯ

ದಲ್ಲಿರುವ ಈ ವಾದಗಳು ಆತ್ಮನಿಗೆ ಆವರಣಗಳು ಎಂದರೆ ಆತ್ಮನ ಪರಮಾರ್ಥಸ್ವರೂಪವನ್ನು ತಿಳಿಯುವದಕ್ಕೆ ಅಡ್ಡಿಗಳು ಎಂದು ವೇದಾಂತಿಗಳೆನ್ನುವರು. ಶೂನ್ಯವೇ ಪರಮಾರ್ಥವು, ಅದು ಈ ನಾಲ್ಕುಕೋಟಿಗಳಲ್ಲೊಂದಕ್ಕೂ ವಿಷಯವಲ್ಲವೆಂದು ಬೌದ್ಧರ ಮತ.

## ಗಂಧರ್ವನಗರ (೩-೩೧)—

ಆಕಾಶದಲ್ಲಿ ತೋರಿ ಹಾರುವ ದೃಶ್ಯ. ಈ ದೃಷ್ಟಾಂತವನ್ನು ದೃಶ್ಯವೆಲ್ಲವೂ ಆತ್ಮನಲ್ಲಿ ಕಲ್ಪಿತವೆಂದು ತಿಳಿಸುವದಕ್ಕೆ ವೇದಾಂತಿಗಳು ಉಪಯೋಗಿಸುವರು; ದೃಶ್ಯವೆಲ್ಲವೂ ಅಸಾರವೆಂದು ತಿಳಿಸುವದಕ್ಕೆ ಬೌದ್ಧರು ಉಪಯೋಗಿಸುವರು.

## ಗಂಭೀರ (೪-೧೦೦)—

ಆಳವಾದ, ಪ್ರವೇಶಿಸುವದಕ್ಕಾಗದ. ಪರಮಾರ್ಥವು ಸಾಮಾನ್ಯರಿಗೆ ತಿಳಿಯುವದಲ್ಲ ಎಂಬುದನ್ನು ತಿಳಿಸುವದಕ್ಕೆ ವೇದಾಂತಿಗಳಲ್ಲಿ ಬಳಕೆ. ಪ್ರತೀತ್ಯಸಮುತ್ಪಾದವು ಸಾಮಾನ್ಯರಿಗೆ ತಿಳಿಯುವದಲ್ಲ ಎಂಬುದನ್ನು ತಿಳಿಸುವದಕ್ಕೆ ಬೌದ್ಧರಲ್ಲಿ ಬಳಕೆ.

## ಚಿತ್ತ (೪-೭೨)—

ಚಿತ್ತ, ಆತ್ಮ. ಅಂತಃಕರಣಕ್ಕಿಂತ ಬೇರೆಯಾದ ಆತ್ಮನೆಂಬರ್ಥದಲ್ಲಿಯೂ ಗೌಡಪಾದಕಾರಿಕೆಯಲ್ಲಿ ಪ್ರಯುಕ್ತವಾಗಿದೆ; ಬೌದ್ಧರಲ್ಲಿ ಈ ಅರ್ಥದಲ್ಲಿ ಪ್ರಯೋಗವಿಲ್ಲ.

## ತಾಯಿನ್ (೪-೯೯)—

ವ್ಯಾಪಕವಾದ ಜ್ಞಾನವುಳ್ಳ ಆತ್ಮಜ್ಞಾನಿ. ಬೌದ್ಧಮತದ ತತ್ತ್ವವನ್ನು ಮನಗಂಡ ಜ್ಞಾನಿ, ಬುದ್ಧನು–ಎಂಬರ್ಥದಲ್ಲಿ ಬೌದ್ಧರು ಉಪಯೋಗಿಸುತ್ತಾರೆ.

## ದುರ್ದರ್ಶ (೪-೧೦೦)—

ತಿಳಿದುಕೊಳ್ಳುವದಕ್ಕೆ ಕಷ್ಟವಾದ. ಈ ವಿಶೇಷಣವನ್ನು ವೇದಾಂತಿಗಳು ಆತ್ಮವಸ್ತುವಿಗೂ, ಬೌದ್ಧರು ಪ್ರತೀತ್ಯಸಮುತ್ಪಾದಕ್ಕೂ ಉಪಯೋಗಿಸಿರುತ್ತಾರೆ.

## ದೇಶಿತ (೪-೨)—

ಅದ್ವೈತದರ್ಶನದ ಉಪದೇಶ. ಬುದ್ಧನ ಉಪದೇಶವನ್ನು 'ದೇಶನಾ' ಎಂಬ ಹೆಸರಿನಿಂದ ಬೌದ್ಧರು ಕರೆದಿರುತ್ತಾರೆ.

## ದ್ವಯ (೪-೪, ೭೫)—

ದ್ವೈತ, ದ್ವೈತಿ ಎಂಬರ್ಥದಲ್ಲಿ ವೇದಾಂತಿಗಳೂ ಬೌದ್ಧರೂ ಈ ಮಾತನ್ನು ಉಪಯೋಗಿಸುವರು. ದ್ವೈತವು ಶೂನ್ಯವಾದಿಗಳ ಮತದಲ್ಲಿ ನಿಸ್ಸಾರ, ವಿಜ್ಞಾನವಾದಿಗಳ ಮತದಲ್ಲಿ ವಿಜ್ಞಾನಮಾತ್ರ, ವೈಭಾಷಿಕಸೌತ್ರಾಂತಿಕರಲ್ಲಿ ಕ್ಷಣಿಕ. ಆತ್ಮನೇ ಅವಿದ್ಯೆಯಿಂದ ದ್ವೈತವಾಗಿ ತೋರುವನೆಂದು ವೇದಾಂತಿಗಳ ಮತ.

## ದ್ವಿಪದಾಂ ವರ (೪-೧)—

ಪುರುಷೋತ್ತಮ. ಈ ಮಾತನ್ನೂ 'ವದತಾಂ ವರ' ಎಂಬ ಮಾತನ್ನೂ ಬೌದ್ಧರು ಬುದ್ಧನಿಗೆ ವಿಶೇಷಣವಾಗಿ ಉಪಯೋಗಿಸಿರುತ್ತಾರೆ. ಗೌಡಪಾದಕಾರಿಕೆಯಲ್ಲಿ ಅದ್ವೈತಶಾಸ್ತ್ರಕ್ಕೆ ಮೂಲಗುರುವಾದ ನಾರಾಯಣನಿಗೆ ವಿಶೇಷಣವಾಗಿ ಉಪಯೋಗಿಸಿರುತ್ತದೆ.

## ಧರ್ಮ (೩-೧, ೪-೧, ೪-೧೦, ೪-೩೩)—

ಆತ್ಮ, ವಸ್ತು. ದ್ರವ್ಯ, ಗುಣ, ಕಾರಣ, ಇರವಿಲ್ಲದ್ದು, ನಿರಾತ್ಮಕ–ಎಂಬರ್ಥದಲ್ಲಿ ಬೌದ್ಧರು ಉಪಯೋಗಿಸುತ್ತಾರೆ.

## ಧಾತು (೪-೮೧)—

ಆತ್ಮತತ್ತ್ವ. 'ಧರ್ಮಧಾತು' ಎಂಬ ಮಾತನ್ನು ಬೌದ್ಧರು ಮನಸ್ಸಿನ ವಿಷಯ ಎಂಬ ಅರ್ಥದಲ್ಲಿ ಉಪಯೋಗಿಸುವರು.

## ನಿರ್ವಾಣ (೩-೪೭)—

ಆನಂದ, ಆತ್ಮನೊಬ್ಬನೇ ಉಳಿದುಕೊಳ್ಳುವ ಕೈವಲ್ಯ. ದುಃಖವೂ ದ್ವೈತವೂ

ಹೋಗಿರುವ ಸ್ಥಿತಿ ಎಂಬರ್ಥದಲ್ಲಿ ಬೌದ್ಧರು ಉಪಯೋಗಿಸುತ್ತಾರೆ.

**ಪರತಂತ್ರ (೪–೭೪)—**

ಅದ್ವೈತಿಗಳಾದವರ ಶಾಸ್ತ್ರ. ವಿಜ್ಞಾನಕ್ಕೆ ಅಧೀನವಾಗಿರುವ ಬಾಹ್ಯವಸ್ತುಜ್ಞಾನ–ಎಂಬ ಅರ್ಥದಲ್ಲಿ ಬೌದ್ಧರು ಬಳಸುತ್ತಾರೆ. ರಜ್ಜುಸರ್ಪಜ್ಞಾನದಲ್ಲಿ ಸರ್ಪಜ್ಞಾನವು '**ಪರಿಕಲ್ಪಿತ**', ರಜ್ಜುಜ್ಞಾನವು '**ಪರತಂತ್ರ**'–ಎಂದು ಅವರ ವಾದ. ವಿಜ್ಞಾನವು ಪರಮಾರ್ಥವಾದ್ದರಿಂದ ಅದರ ಜ್ಞಾನವು '**ಪರಿನಿಷ್ಪನ್ನ**' ಎಂದು ಅವರು ಹೇಳುವರು.

**ಬುದ್ಧ (೪–೪೨)—**

ಜ್ಞಾನಿ, ಗೌತಮಬುದ್ಧ, ಅದ್ವೈತಾತ್ಮನನ್ನು ಬಲ್ಲವನು ಎಂಬರ್ಥದಲ್ಲಿಯೇ ಗೌಡಪಾದ ಕಾರಿಕೆಯಲ್ಲಿ ಈ ಶಬ್ದವನ್ನು ಹೆಚ್ಚಾಗಿ ಉಪಯೋಗಿಸಿದೆ.

**ಮಾಯಾ (೩–೨೮)—**

ಹುಸಿಯಾದ ತೋರಿಕೆ, ತಪ್ಪುತಿಳಿವಳಿಕೆ. ನಿಸ್ಸಾರವಾದ ತೋರಿಕೆ ಎಂಬರ್ಥದಲ್ಲಿಯೇ ಬೌದ್ಧರಲ್ಲಿ ಇದು ಬಳಕೆಯಲ್ಲಿದೆ; ಮಾಯಾಕಲ್ಪಿತವಸ್ತುವಿಗೂ ಆತ್ಮನು ಆಧಾರವಾಗಿರುತ್ತಾನೆಂದು ವೇದಾಂತಿಗಳ ಅಭಿಪ್ರಾಯ.

**ಲೌಕಿಕ (೪–೮೭)—**

ಲೋಕದ ವ್ಯವಹಾರಕ್ಕೆ ಆಸ್ಪದವಾಗಿರುವ ಜಾಗ್ರದವಸ್ಥೆ. ಸಾಮಾನ್ಯಜನರ ಅಭಿಪ್ರಾಯವನ್ನು ಬೌದ್ಧರು '**ಲೋಕ್ಯ**' ಎಂದು ಕರೆಯುತ್ತಾರೆ.

**ಲೋಕೋತ್ತರ (೪–೮೮)—**

ವ್ಯವಹಾರದ ದೃಶ್ಯವೇ ಇಲ್ಲದ ಸುಷುಪ್ತಿ. ಬೌದ್ಧದರ್ಶನಗಳನ್ನು ಬಲ್ಲ ಜ್ಞಾನಿಗಳ ಅಭಿಪ್ರಾಯ ಎಂಬರ್ಥದಲ್ಲಿ 'ಲೋಕೋತ್ತರ' ಎಂಬ ಶಬ್ದವನ್ನು ಬೌದ್ಧರು ಉಪಯೋಗಿಸುತ್ತಾರೆ. ಅಷ್ಟಾಂಗಮಾರ್ಗದಲ್ಲಿರುವ ಸಮ್ಯಗ್ದೃಷ್ಟಿ, ಮುಂತಾದವುಗಳನ್ನೆಲ್ಲ ಲೋಕ್ಯಸಮ್ಯಗ್ದೃಷ್ಟಿ, ಲೋಕೋತ್ತರಸಮ್ಯಗ್ದೃಷ್ಟಿ–ಹೀಗೆ ಎರಡೆರಡು ಬಗೆಯಾಗಿ ವಿಂಗಡಿಸುವದುಂಟು.

**ಶಾಶ್ವತ (೪–೫೭)—**

ನಿತ್ಯವಾದದ್ದು. ಆತ್ಮನು ನಾಶವಾಗುವದಿಲ್ಲವೆಂಬ ವಾದ ಎಂಬರ್ಥದಲ್ಲಿ ಬೌದ್ಧರಲ್ಲಿ ಬಳಕೆ.

**ಸಂಬುದ್ಧ (೪–೧)—**

ತಿಳಿದವನು. ಗೌತಮಬುದ್ಧನಿಗೆ ಸಮ್ಯಕ್ಸಂಬುದ್ಧನೆಂಬ ವಿಶೇಷಣವು ಬೌದ್ಧರಲ್ಲಿ ಬಳಕೆಯಲ್ಲಿದೆ.

**ಸಂವೃತಿ (೪–೫೭)—**

ಅವಿದ್ಯಾವ್ಯವಹಾರ. ಆರ್ಯಸತ್ಯಚತುಷ್ಟಯವನ್ನು ತಿಳಿಯದಿರುವ ಅವಿದ್ಯೆ ಎಂಬ ಅರ್ಥದಲ್ಲಿ ಬೌದ್ಧರಲ್ಲಿ ಬಳಕೆ. ಆತ್ಮನನ್ನು ತಿಳಿಯದೆ ಇರುವ ಅವಿದ್ಯೆ ಎಂಬರ್ಥದಲ್ಲಿ ಗೌಡಪಾದಕಾರಿಕೆಯಲ್ಲಿ ಇದನ್ನು ಉಪಯೋಗಿಸಿದೆ.

**ಸಾಮ್ಯ (೪–೮೦)—**

ಒಂದೇ ಸಮನಾಗಿರುವ ಕೂಟಸ್ಥಾತ್ಮತತ್ತ್ವ. ಈ ಶಬ್ದವನ್ನು ನಾನಾರ್ಥ ಎಂಬುದಕ್ಕೆ ವಿರುದ್ಧವಾದ ಅರ್ಥದಲ್ಲಿ ಬೌದ್ಧರು ಉಪಯೋಗಿಸಿದ್ದಾರೆ. ಈ ಪರಿಶಿಷ್ಟದಲ್ಲಿರುವ 'ಅನಾನಾತ್ವ' ಎಂಬ ಮಾತನ್ನು ನೋಡಿರಿ.

**ವಿಜ್ಞಾನ (೪–೪೮)—**

ಜ್ಞಾನಸ್ವರೂಪನಾದ ಆತ್ಮ. ಮನಸ್ಸಿನ ಅರಿವು ಎಂಬರ್ಥದಲ್ಲಿ ಕಾರಿಕೆಯಲ್ಲಿಯೂ ಬೌದ್ಧರಲ್ಲಿಯೂ ಈ ಶಬ್ದವು ಪ್ರಯುಕ್ತವಾಗಿದೆ. ಆತ್ಮ ಎಂಬರ್ಥವು ಕಾರಿಕೆಯಲ್ಲಿ ಮಾತ್ರ ಇದೆ.

**ವೈಶಾರದ್ಯ (೪–೯೪)—**

ಶುದ್ಧಿ. ಬುದ್ಧನಲ್ಲಿದ್ದ ನಿರತಿಶಯಗುಣಗಳು ಎಂಬರ್ಥದಲ್ಲಿ ಬೌದ್ಧರು ಪ್ರಯೋಗಿಸಿರುತ್ತಾರೆ.

## ೩. ಶ್ರುತ್ಯುದಾಹರಣಸೂಚಿಕೆ

ಈ ಸೂಚಿಕೆಯಲ್ಲಿ ಮೊದಲು ಕೊಟ್ಟಿರುವದು ಕಾರಿಕೆಯ ಸಂಖ್ಯೆ. ಕಾರಿಕಾಕಾರರು ಯಾವ ಶ್ರುತಿಯನ್ನು ಇಲ್ಲಿ ಸೂಚಿಸಿರುತ್ತಾರೆ ಅಥವಾ ಉದಾಹರಿಸಿರುತ್ತಾರೆ–ಎಂಬುದನ್ನು ತಿಳಿಯುವದರಿಂದ ಅವರು ಬೌದ್ಧಪಕ್ಷದವರೆಂಬ ಮಾತು ನಿರಾಧಾರವಾದದ್ದೆಂದು ಸ್ಪಷ್ಟವಾಗುತ್ತದೆ. ಅವರು ಉಪಯೋಗಿಸಿರುವ ಯುಕ್ತಿಗಳಿಗೂ ಶ್ರುತಿಯ ಆಧಾರವಿದೆ ಎಂಬದೂ ವ್ಯಕ್ತವಾಗುತ್ತದೆ.

೧— ೬. "ಸರ್ವಾಣಿ ಹ ವಾ ಇಮಾನಿ ಭೂತಾನಿ ಪ್ರಾಣಮೇವಾಭಿಸಂವಿಶನ್ತಿ ಪ್ರಾಣಮಭ್ಯುಜ್ಜಿಹತೇ।" (ಛಾಂ. ೧—೧೧—೫).

೧—೨೬. "ಏತದ್ವೈ ಸತ್ಯಕಾಮ ಪರಂ ಚಾಪರಂ ಚ ಬ್ರಹ್ಮ ಯದೋಂಕಾರಃ।" (ಪ್ರಶ್ನ. ೫—೨).

೧—೨೮. "ಅನ್ತರಾತ್ಮಾ ಸದಾ ಜನಾನಾಂ ಹೃದಯೇ ಸಂನಿವಿಷ್ಟಃ।" (ಕಠ. ೨—೩—೧೭).

೨— ೩. "ನ ತತ್ರ ರಥಾ ನ ರಥಯೋಗಾ ನ ಪನ್ಥಾನೋ ಭವನ್ತ್ಯಥ ರಥಾನ್ ರಥಯೋಗಾನ್ ಪಥಃ ಸೃಜತೇ।" (ಬೃ. ೪—೩—೧೦).

೩— ೧. "ಯೋ ವಾ ಏತದಕ್ಷರಂ ಗಾರ್ಗ್ಯವಿದಿತ್ವಾಸ್ಮಾಲ್ಲೋಕಾತ್ ಪ್ರೈತಿ ಸ ಕೃಪಣಃ।" (ಬೃ. ೩—೮—೧೦).

೩—೧೧. "ಸ ಯ ಏವಂವಿತ್। ಅಸ್ಮಾಲ್ಲೋಕಾತ್ ಪ್ರೇತ್ಯ। ಏತಮನ್ನಮಯಮಾತ್ಮಾನಮುಪಸಂಕ್ರಾಮತಿ। ಏತಂ ಪ್ರಾಣಮಯಮಾತ್ಮಾನಮುಪಸಂಕ್ರಾಮತಿ। ಏತಂ ಮನೋಮಯಮಾತ್ಮಾನಮುಪಸಂಕ್ರಾಮತಿ। ಏತಂ ವಿಜ್ಞಾನಮಯಮಾತ್ಮಾನಮುಪಸಂಕ್ರಾಮತಿ। ಏತಮಾನನ್ದಮಯಮಾತ್ಮಾನಮುಪಸಂಕ್ರಮತಿ॥" (ತೈ. ೨—೮).

೩—೧೩. "ಯಶ್ಚಾಯಮಸ್ಯಾಂ ಪೃಥಿವ್ಯಾಂ ತೇಜೋಮಯೋಽಮೃತಮಯಃ ಪುರುಷೋಯಶ್ಚಾಯಮಧ್ಯಾತ್ಮಗ್ಂ ಶಾರೀರಸ್ತೇಜೋಽಮೃತಮಯಃ ಪುರುಷೋಽಯಮೇವ ಸ ಯೋಽಯಮಾತ್ಮೇದಮಮೃತಮಿದಂ ಬ್ರಹ್ಮೇದಗ್ಂ ಸರ್ವಮ್॥"

(ಬೃ ೨—೫—೧ ಇಲ್ಲಿಂದ ೧೪ನೆಯ ಮಂತ್ರದವರೆಗೆ).

೩-೧೫. "ಯಥಾಸೋಮ್ಯೈಕೇನ ಮೃತ್ಪಿಣ್ಡೇನ ಸರ್ವಂ ಮೃಣ್ಮಯಂ ವಿಜ್ಞಾತಗ್‍ಂ ಸ್ಯಾದ್ವಾಚಾರಮ್ಭಣಂ ವಿಕಾರೋ ನಾಮಧೇಯಂ ಮೃತ್ತಿಕೇತ್ಯೇವ ಸತ್ಯಮ್ ।" (ಛಾಂ. ೬-೧-೪).

೩-೧೫. "ಯಥಾ ಕ್ಷುದ್ರಾ ವಿಸ್ಫುಲಿಙ್ಗಾ ವ್ಯುಚ್ಚರನ್ತ್ಯೇವಮೇವಾಸ್ಮಾದಾತ್ಮನಃ ಸರ್ವೇ ಪ್ರಾಣಾಃ ಸರ್ವೇ ಲೋಕಾಃ ಸರ್ವೇ ದೇವಾಃ ಸರ್ವಾಣಿ ಭೂತಾನಿ ವ್ಯುಚ್ಚರನ್ತಿ ।" (ಬೃ. ೨-೧-೨೦).

೩-೨೪. "ನೇಹ ನಾನಾಸ್ತಿ ಕಿಂಚನ ।" (ಬೃ. ೪-೪-೧೯).
"ಇನ್ದ್ರೋ ಮಾಯಾಭಿಃ ಪುರುರೂಪ ಈಯತೇ ।" (ಬೃ. ೩-೫-೧೯).
"ಅಜಾಯಮಾನೋ ಬಹುಧಾ ವಿಜಾಯತೇ ।" (ಪುರುಷಸೂಕ್ತ.)

೩-೨೫. ಅನ್ಧಂ ತಮಃ ಪ್ರವಿಶನ್ತಿ ಯೇ ಸಂಭೂತಿಮುಪಾಸತೇ ।
ತತೋ ಭೂಯ ಇವ ತೇ ತಮೋ ಯ ಉ ಸಮ್ಭೂತ್ಯಾಗ್‍ಂ ರತಾಃ ।" (ಈ. ಮಾ. ೯).

೩-೨೬. "ಸ ಏಷ ನೇತಿ ನೇತ್ಯಾತ್ಮಾ ।" (ಬೃ. ೩-೯-೨೬, ೪-೨-೪, ೪-೪-೫, ೪-೫-೧೫).

೪-೮೪. "ಏಷ ನಿತ್ಯೋ ಮಹಿಮಾ ಬ್ರಾಹ್ಮಣಸ್ಯ ।" (ಬೃ. ೪-೪-೨೩).

೪-೮೬. "ತಸ್ಮಾದೇವಂವಿಚ್ಛಾನ್ತೋ ದಾನ್ತ ಉಪರತಸ್ತಿತಿಕ್ಷುಃ ।" (ಬೃ. ೪-೪-೨೩).

---

# ಕಾರಿಕೆಗಳ ಅನುಕ್ರಮಣಿಕೆ.

ಇಲ್ಲಿ ಮೊದಲು ಕೊಟ್ಟಿರುವದು ಪ್ರಕರಣದ ಸಂಖ್ಯೆ, ಎರಡನೆಯದು ಕಾರಿಕೆಯ ಸಂಖ್ಯೆ. ಉದಾಹರಣೆಗೆ '೩–೩೩' ಎಂದರೆ ಮೂರನೆಯ ಅದ್ವೈತ ಪ್ರಕರಣದ ಮೂವತ್ತು ಮೂರನೆಯ ಕಾರಿಕೆ ಎಂದರ್ಥ.

# ಶಬ್ದಾನುಕ್ರಮಣಿಕೆ

(ಕಾರಿಕೆಯಲ್ಲಿಯೂ ಭಾಷ್ಯದಲ್ಲಿಯೂ ಬಂದಿರುವ ಮುಖ್ಯಶಬ್ದಗಳು)

ಇಲ್ಲಿ ಕೊಟ್ಟಿರುವ ಸಂಖ್ಯೆಗಳು ಸಂಸ್ಕೃತಭಾಷ್ಯಭಾಗದ ಸಂಖ್ಯೆಗಳು. ಬಹಳ ಸಂಖ್ಯೆಗಳಿರುವಲ್ಲಿ ಕೆಲವನ್ನು ಮಾತ್ರ ಕೊಟ್ಟಿದೆ.

**೨೯. ಅವಿದ್ಯಾವಿಜೃಂಭಿತಮ್, ಅವಿದ್ಯಾವಿಷಯಃ—**

ಅವಿದ್ಯೆಯಿಂದ ಹರಡಿಕೊಂಡಿರುವ, (ದ್ವೈತ) ೨೦೫ ; ಅವಿದ್ಯೆಗೆ ಗೋಚರವಾದ, (ವ್ಯವಹಾರ), ೧೧೧.

**೩೦. ಅವ್ಯಾಕೃತಮ್—**

ನಾಮರೂಪಾತ್ಮಕವಾಗಿರುವ ಜಗತ್ತಿನ ಬೀಜ, ೬.

**೩೧. ಅವ್ಯಾಕೃತ—**

(೧) ಬಿಡಿಬಿಡಿಯಾಗಿರುವ ಪ್ರಾಣ, ೨೩ ; (೨) ಕಾರಣರೂಪನಾದ (ಆತ್ಮ), ೧೩, ೨೪; (೩) ಅವ್ಯಕ್ತವಾಗಿರುವ (ಭಾವನೆಗಳು), ೯೬, ೯೯.

**೩೨. ಅಸತ್, ಅಸತ್ಯಮ್—**

ಇಲ್ಲದ, ಹುಸಿತೋರಿಕೆಯಾದ, ೭೬, ೮೧, ೮೫, ೮೬, ೮೭, ೮೮, ೧೧೦, ೧೧೪, ೧೧೭, ೧೨೬, ೧೭೭, ೧೭೯, ೧೮೪, ೧೮೭, ೨೭೧, ೨೭೬.

**೩೩. ಅಸದ್ವಾದೀ—**

ಮೊದಲು ಇಲ್ಲದ ಕಾರ್ಯವು ಹುಟ್ಟುತ್ತದೆ ಎಂಬ (ವೈಶೇಷಿಕ), ೨೨೦, ೨೨೨, ೨೫೨, ೨೫೩, ೨೮೦, ೨೮೨, ೨೮೪, ೨೮೫.

**೩೪. ಅಸ್ಪರ್ಶಯೋಗಃ—**

ಯಾವದರ ಸಂಬಂಧವೂ ಇಲ್ಲದ ಅದ್ವೈತಾತ್ಮದರ್ಶನ, ೧೯೯, ೨೦೬.

**೩೫. ಆಕಾಶಾದಿಕ್ರಮಃ—**

ಆಕಾಶ, ವಾಯು, ಅಗ್ನಿ, ಅಪ್ಪು, ಪೃಥಿವಿ, ಓಷಧಿಗಳು, ಅನ್ನ, ಅನ್ನರಸಮಯಪುರುಷ— ಮುಂತಾದ ಕ್ರಮ, ೧೪೯.

**೩೬. ಆಗಮಃ—**

ಉಪದೇಶ, ಯುಕ್ತಿಯನ್ನು ಕೊಡದೆ ಹೇಳುವದು, ೩, ೭೫, ೧೨೭, ೨೧೨.

**೩೭. ಆಗಮವಿದಾಂ ಸೂತ್ರಮ್—**

ಶಾಸ್ತ್ರವ್ಯಾಪಾರವನ್ನು ಬಲ್ಲ ದ್ರವಿಡಾಚಾರ್ಯರ ಸೂತ್ರವು, ೧೧೫.

**೩೮. ಆತ್ಮತತ್ತ್ವಪ್ರತಿಪತ್ತಿಃ—**

ಆತ್ಮನನ್ನು ಇದ್ದದ್ದು ಇದ್ದಂತೆ ತಿಳಿದುಕೊಳ್ಳುವದು, ೩, ೪.

**೩೯. ಆತ್ಮಪ್ರತ್ಯಯಃ—**

ನಾನೆಂಬ ಅರಿವು, ಆತ್ಮನನ್ನು ತಿಳಿಸುವದಕ್ಕೆ ಮುಖ್ಯಪ್ರಮಾಣ. ೪೨.

**೪೦. ಆತ್ಮಭಾವಃ—**

(೧) ತಾನೇ ಆದಾಗುವದು, ೧೦೭ ; (೨ ಪರಮಾರ್ಥಸ್ವರೂಪ, ೧೧೯.

**೪೧. ಆತ್ಮವಿವೇಕಃ—**

ಆತ್ಮನನ್ನು ವಿಂಗಡಿಸಿಕೊಂಡು ಅರಿಯುವದು, ೨೦೬.

**೪೨. ಆತ್ಮಸಂಸ್ಥಮ್—**

ಆತ್ಮನಲ್ಲಿಯೇ ಅವನ ಸ್ವಭಾವವಾಗಿರುವ (ಜ್ಞಾನ) ೧೯೭.

**೪೩. ಆತ್ಮಾ—**

ನಮ್ಮೆಲ್ಲರ ನಿಜವಾದ ಸ್ವರೂಪ, ೬೮, ೯೪, ೧೦೩, ೧೦೫, ೧೦೮, ೧೧೩, ೧೧೫, ೧೧೭, ೧೨೧, ೧೨೬, ೧೩೩, ೧೩೪, ೧೩೬, ೧೪೯, ೧೫೧, ೧೫೪, ೧೫೯, ೧೮೬, ೨೮೦.

**೪೪. ಆತ್ಮೈಕತ್ವಪ್ರತಿಪತ್ತಿಃ, ಆತ್ಮೈಕತ್ವಬುದ್ಧಿಃ—**

ಪರಮಾರ್ಥವಾಗಿ ಎಲ್ಲಕ್ಕೂ ಆತ್ಮನಾಗಿರುವದು, ಅದ್ವೈತವನ್ನು ಅರಿತುಕೊಳ್ಳುವದು, ೧೫೭, ೧೬೧, ೧೭೨.

**೪೫. ಆಧಿದೈವಿಕ—**

ದೇವತೆಗಳಿಗೆ ಸಂಬಂಧಪಟ್ಟ, ೧೨, ೧೭.

**೪೬. ಆಧ್ಯಾತ್ಮಿಕ—**

ಶರೀರಕ್ಕೆ ಸಂಬಂಧಪಟ್ಟ, ನಮ್ಮೊಳಗಿನ, ೧೨, ೧೦೧, ೧೨೬, ೧೩೨.

**೪೭. ಆನನ್ದಮಯಃ—**
ಅನಾತ್ಯಂತಿಕವಾಗಿರುವ ಆನಂದರೂಪನಾದ ಸುಷುಪ್ತಾತ್ಮ, ೧೬.

**೪೮. ಆಸ್ಪದಮ್—**
ಆರೋಪಿತವಾಗಿರುವ ಹಾವು, ಬೆಳ್ಳಿ-ಮುಂತಾದವಕ್ಕೆ ಆಧಾರವಾಗಿರುವ ಹಗ್ಗ, ಕಪ್ಪೆಯಚಿಪ್ಪು ಮುಂತಾದದ್ದು, ೪, ೩೫, ೧೧೪, ೧೭೭.

**೪೯. ಈಶ್ವರಃ—**
ಜಗತ್ಕಾರಣನಾದ ಪರಮಾತ್ಮ, ೩೧; ಅಂತಃಕರಣಸಾಕ್ಷಿಯಾದ ಪರಮಾತ್ಮ, ೭೩; ನಾರಾಯಣನು, ೨೧೪.

**೫೦. ಉಪಾಧಿಕೃತ—**
ಉಪಾಧಿಗಳಿಂದ ತೋರುವ, ೧೩೪, ೧೪೦.

**೫೧. ಊಷರದೇಶಃ—**
(ನೀರೆಂದು ಕಲ್ಪಿಸುವದಕ್ಕೆ ಆಧಾರವಾದ) ಮರುಭೂಮಿ, ೧೪೪

**೫೨. ಏಕಾತ್ಮಪ್ರತ್ಯಯಸಾರಮ್—**
ಒಬ್ಬನೇ ಆತ್ಮನು ಮೂರು ಅವಸ್ಥೆಗಳಲ್ಲಿಯೂ ಇರುವನೆಂಬ ಪ್ರತ್ಯಯದಿಂದ ಅನುಸರಿಸಿ ತಿಳಿಯಬೇಕಾದ ಆತ್ಮ, ೪೨.

**೫೩. ಏಷಣಾದ್ವಯಮ್—**
ಸಾಧ್ಯ, ಸಾಧನ- ಇವುಗಳ ಬಯಕೆ, ೧೭೩.

**೫೪. ಕರ್ಮಕಾಣ್ಡಮ್—**
ಕರ್ಮಗಳನ್ನು ವಿಧಿಸುವ ವೇದಭಾಗ, ೧೫೨.

**೫೫. ಕಾರಣಬನ್ಧಃ—**
ಅರಿಯದಿರುವದೆಂಬ ಬಂಧ, ೪೮, ೪೯, ೫೦, ೫೨.

**೫೬. ಕಾರ್ಯಕಾರಣಸಙ್ಘಾತಃ—**
ಶರೀರ, ಇಂದ್ರಿಯಗಳು-ಇವುಗಳ ಒಟ್ಟು, ೧೩೨, ೧೪೭.

**೫೭. ಕಾರ್ಯಬನ್ಧಃ—**
ತಪ್ಪುತಿಳಿವಳಿಕೆ ಎಂಬ ಬಂಧ, ೪೫, ೫೦, ೫೨.

**೫೮. ಕಾರ್ಷಾಪಣಮ್—**
ಒಂದು ಕರ್ಷ (ಒಂದು ತೊಲೆ) ಚಿನ್ನದಿಂದ ಮಾಡಿದ ನಾಣ್ಯ, ೯.

**೫೯. ಕುತಾರ್ಕಿಕಾಃ—**
ವೇದವಿರುದ್ಧವಾದ ತರ್ಕವನ್ನೇ ಹಿಡಿದು ವಾದಿಸುವವರು, ೧೫೧.

**೬೦. ಕ್ರಿಯಾಕಾರಕಫಲಭೇದಃ—**
ಕರ್ಮ, ಕರ್ಮದ ಸಾಮಗ್ರಿ, ಕರ್ಮದಿಂದ ಪಡೆದುಕೊಳ್ಳುವ ಫಲ-ಎಂಬ ಭೇದ, ೧೦೧.

**೬೧. ಕ್ರಿಯಾಫಲಸಾಙ್ಕರ್ಯಮ್-**
ಒಬ್ಬರು ಮಾಡಿದ ಕರ್ಮಕ್ಕೆ ಎಲ್ಲಾ ಜೀವರೂ ಫಲವನ್ನನುಭವಿಸುವದು, ೧೩೪.

**೬೨. ಕ್ಲೇಶಕರ್ಮಫಲಮಲಮ್—**
ಅವಿದ್ಯಾದಿಗಳು, ಕರ್ಮವನ್ನು ಮಾಡುವದು, ಫಲವನ್ನು ಅನುಭವಿಸುವದು-ಎಂಬ ಕಲ್ಮಷ, ೧೪೩, ೧೪೪.

**೬೩. ಕ್ಷುದ್ರಬ್ರಹ್ಮವಿತ್—**
ಅಲ್ಪವಾದ ಬ್ರಹ್ಮವನ್ನು, ಅಪರಬ್ರಹ್ಮವನ್ನು ಅರಿತವನು, ೧೨೮.

**೬೪. ಕ್ಷೇತ್ರಜ್ಞಃ—**
ಶರೀರವನ್ನು ಅರಿಯುವ ಜೀವ, ೧೩೨.

**೬೫. ಖಕುಸುಮಮ್—**
ಆಕಾಶದ ಹೂ, ಅತ್ಯಂತವಾಗಿ ಇಲ್ಲದ್ದು, ೨೮೪.

**೬೬. ಗನ್ಧರ್ವನಗರಮ್—**
ಆಕಾಶದಲ್ಲಿ ನಗರದಂತೆ ತಟ್ಟನೆ ತೋರುವ ಹುಸಿತೋರಿಕೆ, ೧೧೦.

**೬೭. ಗ್ರಹಣಾಗ್ರಹಣೇ—**
ಅರಿಯುವದು, ಅರಿಯದಿರುವದು-ಎಂಬ ವಿಕಾರಗಳು, ೧೯೩.

**೧೦೪. ನಿರುದ್ಧ—**
ಜ್ಞಾನದಿಂದ ಬಾಧಿತವಾದ ೧೯೦, ೧೯೨, ೧೯೩.

**೧೦೫. ನಿರುಪಾಧಿಕ—**
ಯಾವ ಉಪಾಧಿಯೂ ಇಲ್ಲದ (ಆತ್ಮ), ೩೫.

**೧೦೬. ನಿರ್ನಿಮಿತ್ತತ್ವಮ್—**
ಕಲ್ಪನೆಗೆ ಯಾವ ಆಸ್ಪದವೂ ಇಲ್ಲದಿರುವಿಕೆ, ೩೫.

**೧೦೭. ನಿರ್ಬೀಜರೂಪಮ್—**
ಕಾರಣತ್ವವಿಲ್ಲದ (ಆತ್ಮನ) ಶುದ್ಧರೂಪ, ೨೪.

**೧೦೮. ನಿರ್ವಾಣಮ್—**
ಕೈವಲ್ಯ, ೨೦೯.

**೧೦೯. ನಿರ್ವಿಕಲ್ಪ—**
ಯಾವ ವಿಕಲ್ಪವೂ ಇಲ್ಲದ (ಆತ್ಮ), ೧೦೮, ೧೨೧, ೧೯೦.

**೧೧೦. ನಿರ್ವಿಶೇಷ—**
ಇಂಥದ್ದು, ಅಂಥದ್ದು—ಎಂದು ಗೊತ್ತು ಮಾಡಿ ಹೇಳುವ ವಿಶೇಷವಿಲ್ಲದ, ೧೩, ೧೧೫.

**೧೧೧. ಪರಮಹಂಸಪಾರಿವ್ರಾಜ್ಯಮ್**
ಮುಮುಕ್ಷುಗಳೂ ಜ್ಞಾನಿಗಳೂ ಮಾಡುವ ಸರ್ವಕರ್ಮಸಂನ್ಯಾಸ, ೧೨೫.

**೧೧೨. ಪರಮಾತ್ಮಾ, ಪರಃ ಆತ್ಮಾ—**
ಎಲ್ಲರಿಗೂ ಆತ್ಮನಾಗಿರುವ ನಿಜವಾದ ಆತ್ಮ, ೧೩೨, ೧೫೬, ೧೫೮, ೧೭೩.

**೧೧೩. ಪರಮಾರ್ಥಃ, ಪರಮಾರ್ಥತತ್ತ್ವಮ್—**
ನಿಜವು, ನಿಜವಾಗಿರುವ ವಸ್ತು, ೩೧, ೫೨, ೧೪೦, ೧೬೧, ೧೬೩, ೧೯೦, ೨೧೪.

**೧೧೪. ಪರಮಾರ್ಥಕೃತ—**
ನಿಜವಾಗಿರುವ, ೧೪೧.

**೧೧೫. ಪರಮಾರ್ಥಚಿನ್ತಕಾಃ—**
ನಿಜವನ್ನು ಕುರಿತು ವಿಚಾರಮಾಡುವವರು, ೩೧.

**೧೧೬. ಪರಮಾರ್ಥದರ್ಶೀ—**
ತತ್ತ್ವವನ್ನೇ ಪರಿಶೀಲಿಸುತ್ತಿರುವವನು, ೬೮.

**೧೧೭. ಪರಮಾರ್ಥಪ್ರತಿಪತ್ತ್ಯುಪಾಯಃ—**
ನಿಜವನ್ನು ಅರಿತುಕೊಳ್ಳುವದಕ್ಕೆ ಸಾಧನ, ೩೨೩.

**೧೧೮. ಪರಮಾರ್ಥಸತ್, ಪರಮಾರ್ಥಸತ್ಯ—**
ನಿಜವಾಗಿರುವ, ಹುಸಿತೋರಿಕೆಯಲ್ಲದ, ೧೧೯, ೧೪೨, ೧೬೫, ೧೭೩, ೧೭೭, ೧೮೨, ೧೮೮, ೨೮೦, ೩೪೮, ೩೫೦.

**೧೧೯. ಪರಮಾರ್ಥಸುಖಮ್—**
ಜ್ಞಾನದಿಂದ ಸಿಕ್ಕುವ ನಿಜವಾದ ಸುಖ, ೨೦೯.

**೧೨೦. ಪರಮಾರ್ಥಾಕಾಶಃ, ಮಹಾಕಾಶಃ—**
ಉಪಾಧಿಯ ಕಟ್ಟಿಲ್ಲದ ಬರಿಯ ಆಕಾಶ, ೧೪೨, ೧೫೩.

**೧೨೧. ಪರಂ ಬ್ರಹ್ಮ—**
ಎಲ್ಲಕ್ಕೂ ಹೆಚ್ಚಿನ ತತ್ತ್ವವಾದ ಬ್ರಹ್ಮ, ೭೧, ೧೫೦.

**೧೨೨. ಪರಿಚ್ಛಿನ್ನಾಭಿಮಾನಃ—**
ಅಳತೆಯು ವಸ್ತುವನ್ನೇ ತಾನೆಂದು ತಿಳಿಯುವದು, ೨೩.

**೧೨೩. ಪಾಣ್ಡಿತ್ಯಬಾಲ್ಯಮೌನಾನಿ—**
ಆತ್ಮಜ್ಞಾನವನ್ನು ಸಂಪಾದಿಸುವದು, ಆತ್ಮಬಲವನ್ನು ಸಂಪಾದಿಸಿಕೊಳ್ಳುವದು, ಆತ್ಮಾನುಸಂಧಾನವು—ಎಂಬ ಸಾಧನಗಳು, ೩೫೦.

# ಅಧ್ಯಾತ್ಮಪ್ರಕಾಶ ಕಾರ್ಯಾಲಯ

## ಹೊಳೆನರಸೀಪುರ.

(ಸ್ಥಾಪಿತವಾದದ್ದು ೧೯೨೦)

ಅಧ್ಯಾತ್ಮವಿದ್ಯೆಯಲ್ಲಿ ಜನರಿಗೆ ಹೆಚ್ಚಿನ
ಆದರವನ್ನುಂಟುಮಾಡಬೇಕೆಂಬ **ಉದ್ದೇಶವುಳ್ಳ** ಈ ಸಂಸ್ಥೆಯು

೧. ಕನ್ನಡ,ಸಂಸ್ಕೃತ,ಇಂಗ್ಲಿಷು ಭಾಷೆಗಳಲ್ಲಿ **ಅನೇಕಗ್ರಂಥಗಳನ್ನು ಪ್ರಕಟಿಸಿರುತ್ತದೆ.** ಇವುಗಳಲ್ಲಿ ಭಾಷ್ಯ, ಟಿಪ್ಪಣಿ, ಪರಿಶಿಷ್ಟ-ಮುಂತಾದವುಗಳೊಡನೆ ಹೊರಕ್ಕೆ ಬಂದಿರುವ ಉಪನಿಷತ್ತುಗಳು,ಭಗವದ್ಗೀತೆ, ಬ್ರಹ್ಮಸೂತ್ರ-ಇವೂ ಸೇರಿವೆ.

**ಈಗ ಶ್ರೀ ಜಯಚಾಮರಾಜೇಂದ್ರಗ್ರಂಥರತ್ನಮಾಲೆಗೆ ಸೇರಿದಂತೆ ಶ್ರೀಶಂಕರಾಚಾರ್ಯರವರ ಎಲ್ಲಾ ಗ್ರಂಥರತ್ನಗಳನ್ನೂ ಸಮೂಲವಾಗಿ ಟಿಪ್ಪಣಿ ಮುಂತಾದ ಸೌಕರ್ಯಗಳೊಡನೆ ಕನ್ನಡಿಸಿ ಒಂದೊಂದಾಗಿ ಬೆಳಕಿಗೆ ಹಿಡಿಯುತ್ತಲಿದೆ.**

೨. ಅಧ್ಯಾತ್ಮಸಂಬಂಧವಾದ **ಗ್ರಂಥಕಾಲಕ್ಷೇಪ, ಉಪನ್ಯಾಸಗಳು, ಪುರಾಣಶ್ರವಣ, ಅನುಷ್ಠಾನ, ಉತ್ಸವಗಳು**-ಇವುಗಳನ್ನು ಏರ್ಪಡಿಸುತ್ತಿದೆ.

**ಪ್ರತಿದಿನವೂ** ಗ್ರಂಥಕಾಲಕ್ಷೇಪವಾಗುತ್ತಿರುತ್ತದೆ, ಪುರಾಣಶ್ರವಣವಾಗುತ್ತಿರುತ್ತದೆ; **ಪ್ರತಿಭಾನುವಾರವೂ** ಉಪನ್ಯಾಸಗಳು ಆಗುತ್ತಿರುವವು; **ಪ್ರತಿವರ್ಷವೂ** ಕೆಲವು ಅನುಷ್ಠಾನಗಳನ್ನು ಏರ್ಪಡಿಸಲಾಗುತ್ತಿದೆ; **ಶಂಕರಸಪ್ತಾಹವೆಂಬ** ತತ್ತ್ವಪ್ರಚಾರಣೆಯ ಉತ್ಸವವು ಈಗ ಹದಿನಾರು ವರ್ಷಗಳಿಂದ **ವರ್ಷಕ್ಕೊಂದು ಸಲ** ಕರ್ಣಾಟಕದ ಬೇರೆ ಬೇರೆಯ ಸ್ಥಳಗಳಲ್ಲಿ ನಡೆಯುತ್ತಿದೆ. ಹಲವು ವಿದ್ವಾಂಸರುಗಳೂ ವೈದಿಕಶಿಖಾಮಣಿಗಳೂ ಈ ಕಾರ್ಯಗಳಲ್ಲಿ ಭಾಗವನ್ನು ವಹಿಸುತ್ತಿರುವರು.

೩. ಜನರ ಉಪಯೋಗಕ್ಕೆ ಒಂದು **ಅಧ್ಯಾತ್ಮಪುಸ್ತಕಭಂಡಾರವನ್ನೂ** ಒಂದು **ವಾಚನಾಲಯವನ್ನೂ** ಇಟ್ಟುಕೊಂಡಿದೆ.

ಪುಸ್ತಕಭಂಡಾರದಲ್ಲಿ ಕನ್ನಡ, ಸಂಸ್ಕೃತ, ಇಂಗ್ಲಿಷು, ಹಿಂದಿ-ಮುಂತಾದ ಭಾಷೆಗಳ ಅಧ್ಯಾತ್ಮಗ್ರಂಥಗಳು ಇರುತ್ತವೆ ಕಾರ್ಯಾಲಯದಲ್ಲಿ ಬಂದು ಇವುಗಳನ್ನು ಓದುವವರಿಗೆ ಸೌಕರ್ಯವನ್ನು ಕಲ್ಪಿಸುವೆವು.

೪ **ಅಧ್ಯಾತ್ಮವಿದ್ಯಾನಿಲಯವೊಂದನ್ನು** ಸ್ಥಾಪಿಸಿದೆ. ಇಲ್ಲಿ ಐದುವರ್ಷಗಳ ಪಾಠಕ್ರಮವನ್ನು ಏರ್ಪಡಿಸಿದೆ. ವೇದಾಂತದ **ಸಿದ್ಧಾಂತತ್ರಯಗಳಲ್ಲಿಯೂ** ಪ್ರಪಂಚದ ಬೇರೆಬೇರೆಯ **ಮತಾಚಾರ್ಯರುಗಳ ಜೀವನಚರಿತ್ರೆ, ಉಪದೇಶಗಳು,** ಮತ್ತು **ಪರಮಾರ್ಥಸಾಧನಕ್ರಮ**- ಇವುಗಳ ವಿಷಯದಲ್ಲಿಯೂ ಶಿಕ್ಷಣವನ್ನು ಕೊಡಿಸಲಾಗುವದು.

ಯೋಗ್ಯರಾದ ವಿದ್ಯಾರ್ಥಿಗಳಿಗೆ ಊಟಕ್ಕೂ ವಸತಿಗೂ ಏರ್ಪಡಿಸಲಾಗುವದು.

೫. **ಕಾರ್ಯಾಲಯದ ಕಟ್ಟಡವು** ಸಿದ್ಧವಾಗಬೇಕಾಗಿದೆ. ಈಗ್ಗೆ ಒಂದು ಕುಟೀರವನ್ನೂ ಅಡಿಗೆಯ ಮನೆ, ಸ್ನಾನದ ಮನೆ-ಇವುಗಳನ್ನೂ ಕಟ್ಟಿಸಿದೆ. ಒಂದು ಭಾವಿಯನ್ನೂ ತೋಡಿಸಿದೆ.

ಸಭಾಂಗಣಕ್ಕೆ ಕಬ್ಬಿಣದ ತೊಲೆಗಳನ್ನು ತರಿಸಿಟ್ಟಿದೆ. ಉದಾರಮಹಾಶಯರುಗಳು ಕೆಲವರು ಸಹಾಯದ ವಾಗ್ದಾನಮಾಡಿರುತ್ತಾರೆ. ಸಂಸ್ಕೃತಪಾಠಶಾಲೆ, ವಿದ್ಯಾರ್ಥಿಗಳಿಗೆ

ನೀತಿಮತಬೋಧೆಯ ತರಗತಿಗಳು-ಮುಂತಾದ ಕಾರ್ಯಗಳಿಗೆ ಕಟ್ಟಡವು ಬೇಗನೆ ನಿರ್ಮಾಣವಾಗುವದು ಅವಶ್ಯಕವಾಗಿರುತ್ತದೆ.

೬. **ಅಧ್ಯಾತ್ಮಪ್ರಕಾಶವೆಂಬ ಮಾಸಪತ್ರಿಕೆಯು** ಹದಿನೈದು ವರ್ಷಗಳಿಂದ ನಡೆದು ಮುದ್ರಣಾಲಯದ ಸೌಕರ್ಯವಿಲ್ಲದೆ ಸದ್ಯಕ್ಕೆ ನಿಂತಿರುತ್ತದೆ. ಇದನ್ನು ಇಷ್ಟರಲ್ಲಿಯೇ ಪುನಃ ಬೆಳಕಿಗೆ ಹಿಡಿಯಲಾಗುವದು.

೭. ಅಧ್ಯಾತ್ಮವಿಚಾರದ ಧರ್ಮಾರ್ಥವಾಙ್ಮಯದ ಕರಪತ್ರಗಳು ಹಲವನ್ನು ಜನರಲ್ಲಿ ಹಂಚಲಾಗಿದೆ.

೮. ಇಲ್ಲಿ ನಡೆಯುವ ಕೆಲಸವು ಧರ್ಮಾರ್ಥವಾಗಿರುತ್ತದೆ. ಬಂದ ಹಣವೆಲ್ಲ ಧಾರ್ಮಿಕಕಾರ್ಯಕ್ಕೇ ವಿನಿಯೋಗವಾಗುತ್ತಿದೆ. ಆಯವ್ಯಯಗಳ ಲೆಕ್ಕವನ್ನು ಬರೆಯಿಸಿ ಇಟ್ಟಿದೆ.

## ಜನರು ಮಾಡಬಹುದಾದ ಸಹಾಯ

(ಅ) **ಪುಸ್ತಕಪ್ರಕಟನೆಗೆ:** ೨೫೦ ರೂ. ಅಥವಾ ಹೆಚ್ಚಾಗಿ ಕೊಟ್ಟವರನ್ನು **ಆಶ್ರಯದಾತರೆಂದೂ** ೧೦೦ ರೂ. ಅಥವಾ ಹೆಚ್ಚಾಗಿ ಕೊಟ್ಟವರನ್ನು **ಮಹಾಪೋಷಕರೆಂದೂ** ೫೦ ರೂ. ಅಥವಾ ಹೆಚ್ಚಿಗೆ ಕೊಟ್ಟವರನ್ನು **ಪೋಷಕರೆಂದೂ** ಕರೆಯುವೆವು. ಪೋಷಕರೂ ಮಹಾಪೋಷಕರೂ ಇಷ್ಟಪಟ್ಟರೆ ತಾವು ಕೊಡುವಷ್ಟು ಹಣದ ಬೆಲೆಯ ಗ್ರಂಥಗಳನ್ನು ಕಾರ್ಯಾಲಯದಿಂದ ಪಡೆದುಕೊಳ್ಳಬಹುದು. ಆಶ್ರಯದಾತರಿಗೆ ನಮ್ಮ ಗ್ರಂಥಗಳನ್ನೆಲ್ಲ ಕಾಣಿಕೆಯಾಗಿ ಸಮರ್ಪಿಸುವೆವು.

(ಆ) **ಕಟ್ಟಡಕ್ಕೆ:** ೫೦೦೦ ರೂ. ಗೆ ಕಡಿಮೆಯಿಲ್ಲದೆ ಕೊಟ್ಟವರನ್ನು **ಮಹಾಶ್ರಯದಾತರೆಂದೂ** ೩೦೦೦ ರೂ ಕೊಟ್ಟವರನ್ನು **ಆಶ್ರಯದಾತರೆಂದೂ** ೧೫೦೦ ರೂ. ಕೊಟ್ಟವರನ್ನು **ಮಹಾಪೋಷಕರೆಂದೂ** ೭೫೦ ರೂ. ಗಳನ್ನು ಕೊಟ್ಟವರನ್ನು **ಪೋಷಕರೆಂದೂ** ೨೫೦ ರೂ. ಗಳನ್ನು ಕೊಟ್ಟವರನ್ನು **ಸಹಾಯಕರೆಂದೂ** ೧೦೦ ರೂ. ಕೊಟ್ಟವರನ್ನು **ಪ್ರೋತ್ಸಾಹಕರೆಂದೂ** ಸಂಭಾವಿಸಲಾಗುವದು. ಸಹಾಯ ದ್ರವ್ಯವನ್ನು ಒಂದು ರಿಜಿಸ್ಟರಿನಲ್ಲಿ ಕ್ರಮವಾಗಿ ಬರೆದಿಟ್ಟಿರುತ್ತದೆ.

## ಕೃತಜ್ಞತಾ ಪ್ರದರ್ಶನ

ಮುಂದೆ ತೋರಿಸಿರುವ ಆಶ್ರಯದಾತರುಗಳು ಮತ್ತು ಪೋಷಕರ ಪಟ್ಟಿಯಲ್ಲಿ ಮುಖ್ಯವಾಗಿ ಕಾರ್ಯಾಲಯದ ಪ್ರಕಟನೆಗಳಿಗೆ ಅಥವಾ ಪತ್ರಿಕೆಗೆ ಪ್ರೋತ್ಸಾಹವನ್ನು ಕೊಟ್ಟವರು, ಪುಸ್ತಕಭಂಡಾರಕ್ಕೆ ಪುಸ್ತಕಗಳನ್ನು ಕೊಟ್ಟವರು, ಕಾರ್ಯಾಲಯಕ್ಕೆ ನೆಲಗಟ್ಟನ್ನು ದಾನಮಾಡಿರುವವರು- ಇವರ ಹೆಸರನ್ನು ಮಟ್ಟಿಗೆ ಸೇರಿಸಿರುತ್ತದೆ.

ಕಟ್ಟಡ, ವಿದ್ಯಾಲಯ, ಪುಸ್ತಕಪ್ರಕಟನೆ, ಪುಸ್ತಕಭಂಡಾರ, ಮಾಸಪತ್ರಿಕೆ, ಧರ್ಮಾರ್ಥವಾಙ್ಮಯ- ಇವುಗಳಲ್ಲಿ ಯಾವದೊಂದಕ್ಕೆ ಕಳುಹಿಸುವ ಸಹಾಯಧನವನ್ನೂ ಅದು ಎಷ್ಟೇ ಅಲ್ಪವಾಗಿದ್ದರೂ ಮಾಸಪತ್ರಿಕೆಯಲ್ಲಿ ಪ್ರಕಟಿಸಿ ಒಂದು ರಿಜಿಸ್ಟರಿನಲ್ಲಿ ಬರೆದಿಟ್ಟಿರುತ್ತದೆ. ಕಾರ್ಯಾಲಯಕ್ಕೆ ಹಣವನ್ನು ಕಳುಹಿಸುವವರು ತಮ್ಮ ಸಹಾಯವನ್ನು ಯಾವ ಭಾಗಕ್ಕೆ ಉಪಯೋಗಿಸಬೇಕೆಂಬುದನ್ನು ದಯವಿಟ್ಟು ತಿಳಿಸಬೇಕಾಗಿ ಕೋರಿದೆ. ಅನಿರ್ದಿಷ್ಟವಾಗಿ ಬರುವ ಹಣವನ್ನು ಕಾರ್ಯಾಲಯದ ಅಧ್ಯಕ್ಷರು ಸೂಕ್ತವೆಂದು ತೋರುವ ನಿಧಿಗೆ ಉಪಯೋಗಿಸುವರು.

## ಕಾರ್ಯಾಲಯದ ಆಶ್ರಯದಾತರುಗಳು*

೧. ರಾಜಧರ್ಮಪ್ರಸಕ್ತ ಏ. ಆರ್. ನಾಗೇಶ್ವರ ಅಯ್ಯರ್‌ರವರು, ಬಿ.ಎ.,ಬಿ.ಎಲ್, ರಿಟೈರ್ಡ್ ಹೈಕೋರ್ಟು ಜಡ್ಜ್, ಬೆಂಗಳೂರು ಸಿಟಿ.
೨ ಶ್ರೀಯುತ ಬಿ. ನಂಜುಂಡಯ್ಯನವರು, ಬಿ.ಎ.,ಬಿ.ಎಲ್., ಅಡ್ವೊಕೇಟ್, ಬೆಂಗಳೂರು ಸಿಟಿ.
೩ ,, ಪಿ. ಎನ್. ನರಸಿಂಹಯ್ಯನವರು, ಪ್ಲೀಡರ್, ಹೊಳೆನರಸೀಪುರ.
೪. ,, ಗಡಿಪಡಿ ರಾಚಪ್ಪನವರು, ಬೆಂಗಳೂರು.
೫. ,, ಅರಕಲಗೂಡು ಶ್ರೀಕಂಠಯ್ಯನವರು, ಪ್ಲೀಡರ್, ಹೊಳೆನರಸೀಪುರ.
೬. ,, ವೈ.ಎಸ್. ಹಿರಿಯಣ್ಣಯ್ಯನವರು, ಗ॥ಕಂಟ್ರಾಕ್ಟರ್, ಬೆಂಗಳೂರು.
೭. ,, ಪಿ.ಎಸ್. ಸೂರ್ಯನಾರಾಣಪ್ಪನವರು, ಸರ್ವೆಯರ್, ಬೆಂಗಳೂರು.
೮. ,, ಎಚ್. ವಿ ರಂಗರಾವ್, ಜಮೀನ್‌ದಾರರು, ಹೊಳಲುಕೆರೆ.
೯. ದಿವಂಗತ ಆರ್. ಎಸ್. ಶ್ರೀನಿವಾಸಯ್ಯನವರು, ಪ್ಲೀಡರ್, ಹೊಳೆನರಸೀಪುರ.

## ಮಹಾಪೋಷಕರುಗಳು

೧. ಶ್ರೀಯುತ ಕೆ. ಶ್ರೀಕಂಠಯ್ಯನವರು, ಮೇಜರ್, ಸ್ಟಾಟಿಸ್ಟಿಕಲ್ ಆಫೀಸರ್, ಬಂಗಾಳನಾಗಪುರ ರೈಲ್ವೆ, ಕಲಕತ್ತ.
೨. ,, ಆರ್. ರಾಮಸ್ವಾಮಯ್ಯನವರು, ಪ್ಲೀಡರ್, ಹೊಳೆನರಸೀಪುರ.
೩. ,, ದಿವಂಗತ ಕೆ. ನಾರಾಯಣಸ್ವಾಮಿ, ಬಿ.ಇ., ಅ॥ ಇಂಜನಿಯರ್.

## ಪೋಷಕರುಗಳು

೧. ಆಸ್ಥಾನಮಹಾವಿದ್ವಾನ್ ವೈ. ಚಂದ್ರಶೇಖರಶಾಸ್ತ್ರಿಗಳವರು, ಮೈಸೂರು.
೨ ಆಸ್ಥಾನವಿದ್ವಾನ್ ಬ್ರ॥ ಶ್ರೀ ಎಸ್ ವಿಠಲಶಾಸ್ತ್ರಿಗಳು, ವೇದಾಂತಶಿರೋಮಣಿ, ವೇದಾಂತವಿಶಾರದ, ವಿದ್ಯಾವಾಚಸ್ಪತಿ, ಮೈಸೂರು.
೩. ವೇ॥ ಡಿ. ನಂಜುಂಡಶಾಸ್ತ್ರಿಗಳು, ದೊಡ್ಡಹೆಜ್ಜಾಜಿ, ದೊಡ್ಡಬಳ್ಳಾಪುರ ತಾ॥
೪. ಶ್ರೀಯುತ ಗುರುಮೂರ್ತಪ್ಪನವರು, ನಾಟಕಮಂಡಲಿ.
೫. ,, ಎಸ್.ವಿ. ವೆಂಕಟಸುಬ್ಬಯ್ಯನವರು, ರಿ॥ ಕನ್ನಡ ಪಂಡಿತರು, ಹರಪನಹಳ್ಳಿ, ಬಳ್ಳಾರಿ.
೬. ,, ಓಂಕಾರಪ್ಪ ವೀರಭದ್ರಪ್ಪ, ಅರಳಿಕಟ್ಟಿ, ಇಲಕಲ್ಲ, ಬಿಜಾಪುರ.
೭. ಶ್ರೀಗುರುಶುಕಾಚಾರ್ಯ ಆಶ್ರಮ, ಮಾಟಲದಿಣ್ಣೆ. ರಾಯಚೂರು ಜಿಲ್ಲಾ, ಹೈದರಾಬಾದ್ ದಖನ್.
೮. ಶ್ರೀಯುತ ಎಸ್. ವಿ ಗಣಪತಿ, ಎ.ಎಮ್.ಐ.ಇ.ಇ., ಕನ್ಸಲ್ಟಿಂಗ್ ಇಂಜನಿಯರ್, ಮದರಾಸ್.
೯. ,, ಧರ್ಮಪಾಲಯ್ಯನವರು, ಮಂಗಳೂರು.
೧೦. ,, ಜಿ. ಹೆಚ್. ಮುನಿಸ್ವಾಮಿರಾವ್, ಬೆಂಗಳೂರು.
೧೧. ,, ಕೃಷ್ಣಗೌಡ ಹನುಮಂತಗೌಡ ಆದಪ್ಪಗೌಡರು, ಹುಲುಕೋಟಿ.
೧೨. ಶ್ರೀಮತಿ ಸರೋಜಮ್ಮನವರು, ಹೊಳೆನರಸೀಪುರ.

---

* ದಾವಣಗೆರೆಯ ಪ್ರಸಿದ್ಧ ಅರಳೆವ್ಯಾಪಾರಿಗಳಾಗಿದ್ದ ಕೈಲಾಸವಾಸಿ ಮಾಗಾನಹಳ್ಳಿ ದೊಡ್ಡಬಸಪ್ಪನವರು ಕಾರ್ಯಾಲಯಕ್ಕೆ ಬೀಜಭೂತವಾಗಿ ನೊಟ್ಟಿಸೊಸಲು ಆಶ್ರಯಧನವನ್ನು ಕೊಟ್ಟರು.

* ಹಿಂದಿನ ಬೆಲೆಪಟ್ಟಿಗಳೆಲ್ಲ ರದ್ದಾಗಿವೆ. — ಜೂಲೈ ೧೯೪೬ *

ಅಧ್ಯಾತ್ಮಪ್ರಕಾಶಕಾರ್ಯಾಲಯದಲ್ಲಿ ದೊರಕುವ

# ಅಗ್ಗವಾದ ಮೇಲ್ತರದ ಗ್ರಂಥಗಳ ಬೆಲೆಪಟ್ಟಿ

## ಅಧ್ಯಾತ್ಮ ಗ್ರಂಥಾವಳಿ

### ಉಪನಿಷತ್ತುಗಳು

(ಸಂಸ್ಕೃತಮೂಲ, ಅರ್ಥ, ಶಂಕರಭಾಷ್ಯಾನುವಾದ, ಟಿಪ್ಪಣಿ, ಸಾರ, ಕ್ಲಿಷ್ಟಪದಗಳ ಅರ್ಥ, ವಿಷಯವಿವೇಚಕಪೀಠಿಕೆ-ಮುಂತಾದ ವಿವರಗಳೊಡನೆ)

| ಪುಸ್ತಕ | ಬೆಲೆ ರೂ. ಆ. ಪೈ. | ಅಂ. ಹಾ. ರೂ. ಆ. ಪೈ. |
|---|---|---|
| ೧. ಈಶಾವಾಸ್ಯೋಪನಿಷತ್ತು (ಸಂಹಿತೋಪನಿಷತ್ತು) | ೦-೬-೦ | ೦-೦-೯ |
| ೨. ಕೇನೋಪನಿಷತ್ತು (ತಲವಕಾರೋಪನಿಷತ್ತು) | ೦-೯-೦ | ೦-೧-೩ |
| ೩. ಕಠೋಪನಿಷತ್ತು (ಕಾಠಕೋಪನಿಷತ್ತು) | ೧-೨-೦ | ೦-೧-೯ |
| ೪. ಮುಂಡಕೋಪನಿಷತ್ತು | ೦-೧೪-೦ | ೦-೧-೩ |
| ೫. ಈಶ ಮತ್ತು ಮುಂಡಕ | ೧-೪-೦ | ೦-೧-೯ |
| ೬. ಪ್ರಶ್ನೋಪನಿಷತ್ತು | ೧-೩-೦ | ೦-೧-೯ |
| ೭. ಮಾಂಡೂಕ್ಯೋಪನಿಷತ್ತು (ಆಗಮಪ್ರಕರಣಸಹಿತ) | (ಪ್ರತಿಗಳು ಮುಗಿದಿವೆ) | |
| ೮. ಅಲಾತಶಾಂತಿಪ್ರಕರಣ (ಸಾದ) | ೧-೨-೦ | ೦-೧-೯ |
| ೯. ,, (ದಪ್ಪರಟ್ಟು) | ೧-೪-೦ | ೦-೨-೩ |

### ಭಗವದ್ಗೀತೆ

| ಪುಸ್ತಕ | ಬೆಲೆ ರೂ. ಆ. ಪೈ. | ಅಂ. ಹಾ. ರೂ. ಆ. ಪೈ. |
|---|---|---|
| ೧೦. ಗೀತೆ ಮೂಲ (ಪಾರಾಯಣಕ್ಕೆ) | (ಪ್ರತಿಗಳು ಮುಗಿದಿವೆ) | |
| ೧೧. ಗೀತೆ ಸಾರ್ಥ (ಕ್ಯಾಲಿಕೊ) | ೦-೮-೦ | ೦-೨-೩ |
| ೧೨. ಗೀತೆ ಸಭಾಷ್ಯ (ಅರ್ಧ ಕ್ಯಾಲಿಕೊ) | (ಪ್ರತಿಗಳು ಮುಗಿದಿವೆ) | |
| ,, ೪ರಿಂದ ೧೨ ಅಧ್ಯಾಯಗಳು | ೨-೧೨-೦ | ೦-೩-೩ |
| ೧೩. ಗೀತೆ ಸಭಾಷ್ಯ (ಪೂರಕ್ಯಾಲಿಕೊ) | (ಪ್ರತಿಗಳು ಮುಗಿದಿವೆ) | |
| ೧೪. ಗೀತೆ ಸಭಾಷ್ಯ (೧೩ನೆಯ ಅಧ್ಯಾಯದಿಂದ ಕೊನೆಯವರೆಗೆ) | ೩-೦-೦ | ೦-೩-೩ |

### ಬ್ರಹ್ಮಸೂತ್ರ

| ಪುಸ್ತಕ | ಬೆಲೆ ರೂ. ಆ. ಪೈ. | ಅಂ. ಹಾ. ರೂ. ಆ. ಪೈ. |
|---|---|---|
| ೧೫. ಬ್ರಹ್ಮಸೂತ್ರ ಸಭಾಷ್ಯ (ಅಧಿಕರಣ ೫ ಪೂರ) ಅರ್ಧಕ್ಯಾಲಿಕೊ | (ಪ್ರತಿಗಳು ಮುಗಿದಿವೆ) | |
| ೧೬. ,, ಪೂರಕ್ಯಾಲಿಕೊ | ೪-೮-೦ | ೦-೬-೦ |
| ೧೭. ,, ಉತ್ತಮಪ್ರತಿ | ೭-೦-೦ | ೦-೧೦-೦ |

ಅಂ. ಹಾ. ಆಯಾ ಪುಸ್ತಕದ ಸುಮಾರು ಅಂಚೆಹಾಸಲು.

ಮ್ಯಾನೇಜರ್, ಅಧ್ಯಾತ್ಮಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ.

## ಪ್ರಸ್ಥಾನತ್ರಯ ವಿವರಣೆ

| ಪುಸ್ತಕ | ಬೆಲೆ ರೂ. ಆ. ಪೈ. | ಅಂ. ಹಾ. ರೂ. ಆ. ಪೈ. |
|---|---|---|
| ೧೮. ಕೇನೋಪನ್ಯಾಸಮಂಜರಿ | ೦-೬-೦ | ೦-೧-೩ |
| ೧೯. ಮುಂಡಕೋಪನ್ಯಾಸಮಂಜರಿ | ೦-೧೦-೦ | ೦-೧-೩ |
| ೨೦. ಕೇನೋಪನ್ಯಾಸ ಮತ್ತು ಮುಂಡಕೋಪನ್ಯಾಸಮಂಜರಿ | ೧-೦-೦ | ೦-೧-೬ |
| ೨೧. ವೇದಾಂತದರ್ಶನ (ಬ್ರಹ್ಮಸೂತ್ರದ ಮೊದಲನೆಯ ಪರಿಚಯ) | ೦-೫-೦ | ೦-೦-೯ |
| **ಪ್ರಕರಣಗಳು** | | |
| ೨೨. ಉಪದೇಶಸಾಹಸ್ರಿ ಗದ್ಯಭಾಗ (ಸಾಧಾರಣ) | ೧-೦-೦ | ೦-೧-೯ |
| ೨೩. ಉಪದೇಶಸಾಹಸ್ರಿ ಗದ್ಯ (ಅರ್ಥಕ್ಯಾಲಿಕೊ) | ೧-೪-೦ | ೦-೨-೩ |
| ೨೪. ಉಪದೇಶಸಾಹಸ್ರಿ ಪದ್ಯ (ಅರ್ಥಕ್ಯಾಲಿಕೊ) | ೧-೮-೦ | ೦-೨-೯ |
| ೨೫. ಉಪದೇಶಸಾಹಸ್ರಿ ಪದ್ಯ (ಪೂರಕ್ಯಾಲಿಕೊ) | ೨-೦-೦ | ೦-೭-೦ |
| ೨೬. ಪರಮಾರ್ಥಚಿಂತಾಮಣಿ (ಅರ್ಥಕ್ಯಾಲಿಕೊ) | (ಪ್ರತಿಗಳು ಮುಗಿದಿವೆ) | |
| ೨೭. ಪರಮಾರ್ಥಚಿಂತಾಮಣಿ (ಪೂರಕ್ಯಾಲಿಕೊ) | ೪-೪-೦ | ೦-೭-೦ |
| ೨೮. ಉಪನಿಷತ್ತುಗಳ ಮೊದಲನೆಯ ಪರಿಚಯ | ೦-೭-೦ | ೦-೧-೩ |
| ೨೯. ಶಂಕರಸಿದ್ಧಾಂತ (ಸಾಧಾರಣ) | ೦-೮-೦ | ೦-೧-೩ |
| ೩೦. ಶಂಕರಸಿದ್ಧಾಂತ (ದಪ್ಪರಟ್ಟು) | ೦-೧೦-೦ | ೦-೧-೯ |
| ೩೧. ವೇದಾಂತಬಾಲಬೋಧೆ (ಪ್ರಾತಃಸ್ಮರಣಸ್ತೋತ್ರವಿವರಣ) | ೦-೫-೦ | ೦-೦-೯ |
| ೩೨. ವೇದಾಂತಪ್ರವೇಶಿಕೆ (ಅದ್ವೈತಪಂಚರತ್ನದ ವಿವರಣ) | ೦-೭-೦ | ೦-೧-೩ |
| ೩೩. ಲಕ್ಷ್ಮೀನರಸಿಂಹಪಂಚರತ್ನ (ಅರ್ಥವಿವರಣಸಹಿತ) | ೦-೪-೦ | ೦-೦-೯ |
| ೩೪. ಮೋಹಮುದ್ಗರ (ಭಜಗೋವಿಂದಸ್ತೋತ್ರ) | ೦-೧-೭ | ೦-೦-೯ |
| ೩೫. ಸವಾರ್ತಿಕಪಂಚೀಕರಣ (ಸಾರ್ಥ) | ೦-೬-೦ | ೦-೦-೯ |
| ೩೬. ಆತ್ಮಬೋಧೆ (ಭಾವಾರ್ಥ, ಟಿಪ್ಪಣಿ, ಪರಿಶಿಷ್ಟ) | ೦-೩-೦ | ೦-೦-೯ |
| ೩೭. ದೃಗ್ದೃಶ್ಯವಿವೇಕ (ಅರ್ಥವಿವರಣೆಗಳೊಡನೆ) | ೦-೩-೦ | ೦-೦-೯ |
| ೩೮. ವಾಕ್ಯವೃತ್ತಿ (ಮೂಲ, ಅರ್ಥ, ಟಿಪ್ಪಣಿ, ಪರಿಶಿಷ್ಟಸಹಿತ) | ೦-೪-೦ | ೦-೦-೯ |
| ೩೯. ಸ್ವಾತ್ಮಪ್ರಕಾಶಿಕೆ ( ,, ,, ) | ೦-೩-೦ | ೦-೦-೯ |
| ೪೦. ಶಂಕರಮಹಾಮನನ | ೦-೨-೭ | ೦-೦-೯ |
| ೪೧. ವೇದಾಂತಡಿಂಡಿಮ (ಭಾವಾರ್ಥಸಹಿತ) | ೦-೪-೦ | ೦-೦-೯ |
| ೪೨. ಅಪರೋಕ್ಷಾನುಭೂತಿ (ಭಾವಾರ್ಥ, ವಿವರಣಸಹಿತ) | ೦-೧೨-೦ | ೦-೧-೯ |
| ೪೩. ಅಪರೋಕ್ಷಾನುಭೂತಿ (ದಪ್ಪರಟ್ಟು) | ೦-೧೫-೦ | ೦-೨-೩ |
| ೪೪. ಆತ್ಮವಿದ್ಯಾವಿಲಾಸ (ಭಾವಾರ್ಥಸಹಿತ) | ೦-೪-೭ | ೦-೦-೯ |
| ೪೫. ಶ್ರೀರಾಮಹೃದಯ (ಅರ್ಥ-ಸಾರಸಹಿತ) | ೦-೧-೬ | ೦-೦-೯ |
| ೪೬. ಅಧ್ಯಾತ್ಮವೆಂದರೇನು ? | ೦-೧-೬ | ೦-೦-೯ |
| ೪೭. ವೇದಾಂತವಿಚಾರದ ಇತಿಹಾಸ | ೧-೧೨-೦ | ೦-೨-೯ |

ಪುಸ್ತಕಕ್ಕೆ ಮೊಬಲಗು ಕಳುಹಿಸುವವರು ಮರೆಯದೆ ಅಂಚೆಯ ಹಾಸಲನ್ನೂ ಸೇರಿಸಿ ಕಳುಹಿಸಬೇಕು.

**ಮ್ಯಾನೇಜರ್, ಅಧ್ಯಾತ್ಮಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ.**

## ಪ್ರಕರಣಗಳು

| ಪುಸ್ತಕ | ಬೆಲೆ ರೂ ಆ ಪೈ | ಅಂ. ಹಾ. ರೂ ಆ ಪೈ |
|---|---|---|
| ೪೮. ಸದ್ಗುರುವಿನ ಅನುಗ್ರಹ | ೦-೨-೦ | ೦-೦-೯ |
| ೪೯. ಸರ್ವೇಷ್ಟಸಿದ್ಧಿ (ತಿದ್ದಿದ ೨ನೆಯ ಸಂಸ್ಕರಣ) | ೦-೬-೦ | ೦-೦-೯ |

## ಸ್ತೋತ್ರ, ಪದ, ಪದ್ಯ.

| | | |
|---|---|---|
| ೫೦. ವಾಗ್ದೇವೀಸ್ತೋತ್ರ (ಭಜನೆಗೆ) | (ಪ್ರತಿಗಳು ಮುಗಿದಿವೆ) | |
| ೫೧. ಗಣೇಶಾಷ್ಟಕ (ಭಾವಾರ್ಥವಿವರಣೆಗಳೊಡನೆ) | ೦-೩-೦ | ೦-೦-೯ |
| ೫೨. ಭಗವಚ್ಛರಣಸ್ತೋತ್ರ (ಭಾವಾರ್ಥವಿವರಣಗಳೊಡನೆ) | ೦-೫-೦ | ೦-೦-೯ |
| ೫೩. ಹರಿಶರಣಾಷ್ಟಕ (ಭಾವಾರ್ಥವಿವರಗಳೊಡನೆ) | ೦-೨-೦ | ೦-೦-೯ |
| ೫೪. ಮುಕುಂದಮಾಲಾಸ್ತೋತ್ರ (ಭಾವಾರ್ಥಸಹಿತ) | ೦-೨-೬ | ೦-೦-೯ |
| ೫೫. ಭೀಷ್ಮಸ್ತವರಾಜ (ಅರ್ಥವಿವರಣೆಗಳ ಸಮೇತ) | ೦-೪-೦ | ೦-೦-೯ |
| ೫೬. ಶ್ರೀರಾಮಗೀತಾ (ಅರ್ಥವಿವರಣೆಗಳ ಸಹಿತ) | ೦-೩-೦ | ೦-೦-೯ |
| ೫೭. ಶಿವನಾಮಷ್ಟೋತ್ತರಶತಕ (ಅರ್ಥವಿವರಣೆಗಳೊಡನೆ) | ೦-೪-೦ | ೦-೦-೯ |
| ೫೮. ಶಿವಕವಚ (ಅರ್ಥವಿವರಣಗಳೊಡನೆ) | ೦-೪-೬ | ೦-೦-೯ |
| ೫೯. ಗುರುಭಕ್ತಿಸಾರ (ಕುಸುಮಷಟ್ಪದಿ, ಟಿಪ್ಪಣಿಸಹಿತ) | ೦-೩-೦ | ೦-೦-೯ |
| ೬೦. ಅಧ್ಯಾತ್ಮಗೀತಾವಳಿ (ಹಾಡು, ಕೀರ್ತನೆ) | ೦-೪-೦ | ೦-೦-೯ |
| ೬೧. ಚಿದಾನಂದರಗಳೆ (ಟಿಪ್ಪಣಿಸಹಿತ) | ೦-೨-೦ | ೦-೦-೯ |
| ೬೨. ಚಿದಾನಂದಸಮಾಯಿ (ಟಿಪ್ಪಣಿಸಹಿತ) | ೦-೪-೦ | ೦-೦-೯ |

## ಕಥೆಗಳು

| | | |
|---|---|---|
| ೬೩. ವೇದಾಂತಕಥಾವಳಿ (ತಿದ್ದಿದ ೨ನೆಯ ಸಂಸ್ಕರಣ) | ೦-೫-೦ | ೦-೦-೯ |
| ೬೪. ವಿಲಕ್ಷಣಮೌನಿ (ಸಂಭಾಷಣೆ) | ೦-೨-೬ | ೦-೦-೯ |
| ೬೫. ಲಕ್ಷ್ಮಣಶಾಸ್ತ್ರಿ ಉರುಫ್ ಹರ್ಸೇ (ತರ್ಕವೇದಾಂತಗಳ ಸಂಬಂಧ) | ೦-೨-೬ | ೦-೦-೯ |
| ೬೬. ಸಮುದ್ರಮಥನ (ರಹಸ್ಯಾರ್ಥದೊಡನೆ) | ೦-೫-೦ | ೦-೦-೯ |

## ಶ್ರೀವಿವೇಕಾನಂದಸ್ವಾಮಿಗಳ ಉಪನ್ಯಾಸಗಳು

| | | |
|---|---|---|
| ೬೭. ವಿಶ್ವಧರ್ಮಸಮ್ಮೇಳನದಲ್ಲಿ (ಚಿಕಾಗೊ) | ೦-೫-೬ | ೦-೧-೩ |
| ೬೮. ವೇದಾಂತೋಪನ್ಯಾಸಗಳು (ನ್ಯೂಯಾರ್ಕ್) | ೦-೮-೦ | ೦-೧-೩ |
| ೬೯. ವೇದಾಂತೋಪನ್ಯಾಸಗಳು (ಅವಶಿಷ್ಟ) | (ಪ್ರತಿಗಳು ಮುಗಿದಿವೆ) | |
| ೭೦. ಜ್ಞಾನಯೋಗ (೧ನೆಯ ಭಾಗ) | ೦-೧೦-೦ | ೦-೧-೩ |
| ೭೧. ಜ್ಞಾನಯೋಗ (೨ನೆಯ ಭಾಗ) | ೦-೧೦-೦ | ೦-೧-೯ |
| ೭೨. ಭಕ್ತಿಯೋಗ (ಮರಿಹಾಳೆ) | ೦-೧೦-೦ | ೦-೧-೯ |
| ೭೩. ಭಕ್ತಿಯೋಗ (ದಪ್ಪರಟ್ಟು) | ೦-೧೪-೦ | ೦-೨-೩ |

ಅಂ ಹಾ= ಸಂಪೂರು ಅಂಚೆಹಾಸಲು. ಗ್ರಂಥಗಳಿಗೆಲ್ಲ ಅಂಚೆಯ ಹಾಸಲು ಪ್ರತ್ಯೇಕ.

---

**ಮ್ಯಾನೇಜರ್, ಅಧ್ಯಾತ್ಮಪ್ರಕಾಶ ಕಾರ್ಯಾಲಯ, ಹೊಳೆನರಸೀಪುರ.**

All Previous Price Lists Cancelled — July 1946

## ಇತರ ಪುಸ್ತಕಗಳು

| | | | |
|---|---|---|---|
| ೭೪. | ಧಮ್ಮಪದ (ಬುದ್ಧಗೀತೆ) | ೦-೧೦-೦ | ೦-೧-೯ |
| ೭೫. | ತತ್ತ್ವಸಮಾಸ (ಸಾಂಖ್ಯಸೂತ್ರಗಳ ವಿವರಣ) | ೦-೪-೬ | ೦-೧-೯ |
| ೭೬. | ಅಧ್ಯಾತ್ಮಸೂಕ್ತಿಮಂಜರಿ ಶ್ರೀಶಿವಾನಂದಸರಸ್ವತೀಕೃತ, ಭಾಗ ೧ | ೦-೭-೦ | ೦-೧-೯ |
| ೭೭. | ಅಧ್ಯಾತ್ಮಸೂಕ್ತಿಮಂಜರಿ (ದಪ್ಪರಟ್ಟು) | ೦-೯-೦ | ೦-೧-೯ |
| ೭೮. | ಅಧ್ಯಾತ್ಮಸೂಕ್ತಿಮಂಜರಿ ಭಾಗ ೨ | ೦-೮-೦ | ೦-೧-೩ |

## संस्कृत

| | | | |
|---|---|---|---|
| ७९. | मूलाविद्यानिरासः (श्रीशंकरहृदयम्) | २-८-० | ०-६-० |
| ८०. | ,, पूर्णकयालिको | ४-४-० | ०-६-० |
| ८१. | ईशावास्योपनिषत् (शांकरभाष्यसहिता) सुब्रह्मण्यशर्मविरचित टिप्पणीसमेता | ०-७-० | ०-०-९ |
| ८२. | वेदान्तडिण्डिमः (भावबोधिनीसहित:) | ०-८-० | ०-१-३ |

## English

| | | | | | | |
|---|---|---|---|---|---|---|
| 83. Words of Wisdom: By Sri Swami Rajeswaranandaji WRAPPER EDN. | 0 | 14 | 0 | 0 | 1 | 6 |
| 84. ,, CALICO EDN. | 1 | 8 | 0 | 0 | 6 | 0 |
| 85. Narada's Aphorisms on Bhakti: With Translation and Notes | 0 | 5 | 0 | 0 | 0 | 9 |
| 86 Avasthatraya or the Unique Method of Vedanta: | 0 | 4 | 0 | 0 | 0 | 9 |
| 87. Minor Works of Sri Sankaracharya: | 0 | 10 | 0 | 0 | 1 | 3 |
| 88. Vedanta or the Science of Reality: By K. A. Krishnaswamy Iyer B A. | 12 | 0 | 0 | 0 | 10 | 0 |

## ಇತರ ಗ್ರಂಥಗಳು

| | | | |
|---|---|---|---|
| ೧. | ಅದ್ವೈತಸಿದ್ಧಾಂತ | ೦-೧-೦ | ೦-೦-೯ |
| ೨. | ಜಿಜ್ಞಾಸುಗಳ ತೊಡಕು | ೦-೪-೦ | ೦-೦-೯ |

ಗ್ರಂಥಗಳಿಗೆ ಅಂಚೆಹಾಸಲನ್ನೂ ರಿಜಿಸ್ಟ್ರೇಷನ್ ಖರ್ಚ ೩ ಆ. ಯನ್ನೂ ಸೇರಿಸಿ ಕಳುಹಿಸಬೇಕು. ನೀವು ಕೇಳುವ ರಟ್ಟಿನ ಪುಸ್ತಕವಿಲ್ಲದಿದ್ದರೆ ಬೇರೆಯ ರಟ್ಟಿನ ಪುಸ್ತಕಗಳನ್ನು ಕಳುಹಿಸಬೇಕೆ, ಬೇಡವೆ ? ತಪ್ಪದೆ ತಿಳಿಸಿರಿ. ವಿಳಾಸವನ್ನು ಹೆಸರು, ಊರು, ಪೋಸ್ಟಾಫೀಸು, ತಾಲ್ಲೂಕು, ಜಿಲ್ಲೆ ಇವುಗಳನ್ನು ಹುಟ್ಟಕ್ಷರದಲ್ಲಿ ಸ್ಪಷ್ಟವಾಗಿ ಬರೆಯಿರಿ.

POSTAGE & REGISTRATION EXTRA

# THE ADHYATMA PRAKASHA OFFICE,

HOLENARSIPUR, Mysore Railway, (*INDIA*).

ಅಧ್ಯಾತ್ಮಪ್ರಕಾಶ ಮುದ್ರಣಾಲಯ, ಹೊಳೆನರಸೀಪುರ.

# ಶ್ರೀ ಜಯಚಾಮರಾಜೇಂದ್ರ ಗ್ರಂಥರತ್ನಮಾಲಾ

ಈ ಗ್ರಂಥರತ್ನಮಾಲೆಯಲ್ಲಿ ಕೆಳಗೆ ಕಂಡ ಅಮೂಲ್ಯವಾದ ಗ್ರಂಥಗಳು ಒಂದೊಂದಾಗಿ ಪ್ರಕಟವಾಗುವವು. ಇವುಗಳಲ್ಲಿ ಪ್ರತಿಯೊಂದರಲ್ಲಿಯೂ **ಸಂಸ್ಕೃತಮೂಲ**, (ಉಪನಿಷತ್ತಿನ, ಗೀತೆಯ, ಮತ್ತು ಶ್ರೀ ಶಂಕರಾಚಾರ್ಯರವರ ಭಾಷ್ಯಾದಿಗಳು ಕನ್ನಡ ಅಕ್ಷರದಲ್ಲಿ) ಕನ್ನಡದ **ಅನುವಾದ, ಟಿಪ್ಪಣಿ, ಗ್ರಂಥದ ಸಾರ, ವಿಮರ್ಶಾತ್ಮಕ ಪೀಠಿಕೆ, ಪಾರಿಭಾಷಿಕ ಶಬ್ದಗಳ** ಅರ್ಥವನ್ನು ತಿಳಿಸುವ **ಶಬ್ದಾನುಕ್ರಮಣಿಕೆ**—ಮುಂತಾದ ಹಲವು ಸೌಕರ್ಯವಿಶೇಷಗಳಿರುವವು.

## ಉಪನಿಷದ್ಭಾಷ್ಯಗಳು

೧. **ಈಶ, ಕೇನ, ಕಠ:** ಈ ಉಪನಿಷತ್ತುಗಳ ಭಾಷ್ಯ ಬೆಲೆ ೫ರೂ ಅಂ.ಹಾ. ೯ಆಣೆ

೨. **ಮುಂಡಕ, ಪ್ರಶ್ನ, ಮತ್ತು ಮಾಂಡೂಕ್ಯ** ಭಾಷ್ಯ ಶ್ರೀ ಗೌಡಪಾದರವರ ಕಾರಿಕೆಯ ನಾಲ್ಕು ಪ್ರಕರಣಗಳ ಸಹಿತ.

೩. **ಐತರೇಯ, ತೈತ್ತಿರೀಯ:** ಇವುಗಳ ಭಾಷ್ಯ ಬೆಲೆ ೫ರೂ. ಅಂ ಹಾ. ೯ಆಣೆ

೪. **ಬೃಹದಾರಣ್ಯಕ:** ಇದರ ಎರಡು ಅಧ್ಯಾಯಗಳ ಭಾಷ್ಯ

೫. **ಬೃಹದಾರಣ್ಯಕ:** ಮೂರರಿಂದ ಆರರವರೆಗಿನ ಅಧ್ಯಾಯಗಳ ಭಾಷ್ಯ

೬. **ಛಾಂದೋಗ್ಯ:** ಇದರ ನಾಲ್ಕು ಅಧ್ಯಾಯಗಳ ಭಾಷ್ಯ

೭. **ಛಾಂದೋಗ್ಯ:** ಐದರಿಂದ ಎಂಟು ಅಧ್ಯಾಯಗಳ ಭಾಷ್ಯ

೮. **ಶ್ವೇತಾಶ್ವತರ, ನೃಸಿಂಹತಾಪನೀಯ:**

## ಭಗವದ್ಗೀತಾ ಭಾಷ್ಯ

೯. **ಭಗವದ್ಗೀತೆ:** ಅಧ್ಯಾಯಗಳು ೧ರಿಂದ ೮ರ ವರೆಗಿನ ಭಾಷ್ಯ. ಬೆಲೆ ೫ರೂ. ಅಂ.ಹಾ. ೯ಆಣೆ.

೧೦. **ಭಗವದ್ಗೀತೆ:** ಅಧ್ಯಾಯಗಳು ೯ರಿಂದ ೧೮ರ ವರೆಗಿನ ಭಾಷ್ಯ

## ಬ್ರಹ್ಮಸೂತ್ರ ಭಾಷ್ಯ

೧೧. **ಬ್ರಹ್ಮಸೂತ್ರ:** ಎರಡನೆಯ ಅಧ್ಯಾಯದ ಎರಡನೆಯ ಪಾದದವರೆಗಿನ ಭಾಷ್ಯ

೧೨. **ಬ್ರಹ್ಮಸೂತ್ರ:** ಎರಡನೆಯ ಅಧ್ಯಾಯ ಎರಡನೆಯ ಪಾದದಿಂದ ಪೂರ್ತಿ ಭಾಷ್ಯ

**ಪ್ರಕರಣಗ್ರಂಥಗಳು:** ಉಪದೇಶಸಾಹಸ್ರಿ, ಅಪರೋಕ್ಷಾನುಭೂತಿ, ಮುಂತಾದವುಗಳು. [ಗ್ರಂಥಗಳ ಸಂಪುಟಗಳು, ಬೆಲೆ, ಪ್ರಕಟನೆಯ ಅನುಕ್ರಮ—ಮುಂತಾದವುಗಳ ವಿವರವನ್ನು ಕಾರ್ಯಾಲಯಕ್ಕೆ ಬರೆದು ತಿಳಿದುಕೊಳ್ಳಿರಿ.]

---

ಹೆಚ್ಚು ತಿಳಿವಳಿಕೆ ಸಿಕ್ಕುವ ವಿಳಾಸ:—

**ಮ್ಯಾನೇಜರ್, ಅಧ್ಯಾತ್ಮಪ್ರಕಾಶ ಕಾರ್ಯಾಲಯ,**

**ಹೊಳೆನರಸೀಪುರ.**